ಶ್ರೀ:

ಶ್ರೀಭಾವಿಸಮೀರವಾದಿರಾಜಭಗವತ್ಪಾದಾಚಾರ್ಯವಿರಚಿತಾ



# ಯುಕ್ತಿಮಲ್ಲಿಕಾ

## ಭೇದಸೌರಭ-೩

ಸಂಪುಟ-೫

॥ ಶ್ರೀಃ ॥

'ಶ್ರೀಶಸ್ತೇ ಸುಶ್ರಿಯಂ ದದ್ಯಾತ್'

ಶ್ರೀಭಾವಿಸಮೀರವಾದಿರಾಜಭಗವತ್ಪಾದಾಚಾರ್ಯವಿರಚಿತಾ

# "ಯುಕ್ತಿಮಲ್ಲಿಕಾ"

## ಭೇದಸೌರಭಮ್ - ೩

### ಸಂಪುಟ - ೫

ಅನುಗ್ರಹ :

**ಪರಮಪೂಜ್ಯ ಶ್ರೀ ಶ್ರೀ ವಿಶ್ವವಲ್ಲಭತೀರ್ಥಶ್ರೀಪಾದರು**

ಪ್ರಥಮಪರ್ಯಾಯ. ಸೋದೆ ಶ್ರೀವಾದಿರಾಜಮಠ, ಉಡುಪಿ

ಸಂಪಾದಕರು :

ಪಿ. ಎಸ್. ಶೇಷಗಿರಿ ಆಚಾರ್ಯ,

ಪ್ರಕಾಶಕರು :

ಶ್ರೀಮದ್‌ವೃಂದಾವನಾಚಾರ್ಯ ಸಂಶೋಧನ ಹಾಗೂ ಪ್ರಕಾಶನಕೇಂದ್ರ

**ಸೋದೆ ಶ್ರೀವಾದಿರಾಜ ಮಠ, ರಥಬೀದಿ, ಉಡುಪಿ.**

ಶ್ರೀಭಾವಿಸಮೀರವಾದಿರಾಜಭಗವತ್ಪಾದಾಚಾರ್ಯವಿರಚಿತ ಯುಕ್ತಿಮಲ್ಲಿಕಾ-
ಶ್ರೀ ಸುರೋತ್ತಮತೀರ್ಥವಿರಚಿತ ಭಾವವಿಲಾಸಿನೀ ವ್ಯಾಖ್ಯಾನ ಮತ್ತು ಕನ್ನಡ ಅನುವಾದ ಸಹಿತ
**ಭೇದಸೌರಭ - ಭಾಗ ೨**




| | | |
|---|---|---|
| ಪುಟಗಳು | - | V + 464 = 469 |
| ಸಂಪುಟ | - | ೫(೧೦) |
| ಮುದ್ರಿತ ಪ್ರತಿಗಳು | - | ೧೦೦೦ |
| ಪ್ರಕಾಶಕರು | - | ಶ್ರೀಮದ್ ವೃಂದಾವನಾಚಾರ್ಯ ಸಂಶೋಧನ ಹಾಗೂ ಪ್ರಕಾಶನ ಕೇಂದ್ರ, ಸೋದೆ ಶ್ರೀವಾದಿರಾಜಮಠ, ರಥಬೀದಿ, ಉಡುಪಿ. |
| ಮುಖಪುಟವಿನ್ಯಾಸ | : | ಗುರುದತ್ ಕಾಮತ್ |
| ಪುಟ ಸಂಯೋಜನೆ | : | ಬದರಿನಾರಾಯಣಾಚಾರ್ಯ ಎಸ್. ಕಡ್ಡಿ |
| ಅಕ್ಷರ ಜೋಡಣೆ | : | ಕೆ. ಗಣಪತಿ ಭಟ್<br>ಶ್ರೀಮತಿ ನಾಗಲತಾ (ಸುಧಾ)<br>ಎಂ. ಶರತ್ ಚಂದ್ರ |
| ಮುದ್ರಕರು | : | ಪವನ್ ಗ್ರಾಫಿಕ್ಸ್ ಮತ್ತು ಪ್ರಿಂಟರ್ಸ್<br>ಮೈಸೂರು. ✆ : 7899779255 |
| ಗ್ರಂಥಪ್ರಾಪ್ತಿ | : | ಸೋದೆ ಶ್ರೀವಾದಿರಾಜಮಠ, ಉಡುಪಿ. |

# ಉತ್ತರಕಲ್ಪಸಮೀರರ ಪರಾಕು



★ ''ಉದ್ದಂಡೋದ್ದಂಡ, ಪರವಾದಿ ಪ್ರಚಂಡ, ಗಂಡಭೇರುಂಡ, ಮಾಯಿಮತ ವಿಧ್ವಂಸಕ. ಮಧ್ವಮತೋದ್ಧಾರಕ, ಸುಧಾರಸ ಆಸ್ವಾದ, ದಿಗ್ವಿಜಯೀಕೃತ ಆಸೇತುಮರ್ಯಾದ, ಭಾವಿಹನುಮಚ್ಚಕ್ರವರ್ತಿನ್, ಗುರುಸಾರ್ವಭೌಮ ಹಂಸಾರೂಢವಾದಿರಾಜ ಭೋ ಪರಾಕ್!''

★ ''ಮಧ್ವಾಗಮ ಸಿದ್ಧಾಗಮ ಈ ಮಧ್ವಮತವೆ ಸಕಲಮತಕೆ ಮೇಲೆನಿಸಿದ ಮತ. ಈ ಮಧ್ವಮತವನು ಪಿಡಿದು ಅಪದ್ಧಮತವನು ತ್ಯಜಿಸಿ ನಡೆದರೆ (ಜಯಿಸಿದರೆ) ಮುಕ್ತಿಗೈವುದಾ ಸುಕೃತವು (ಸುಕೃತಂ) ಒಂದು ಕ್ಷಣದಲ್ಲಿ ವಾದಿರಾಜರ ದ್ವಂದ್ವಪದವನು ಭಜಿಸಿದವರಿಗೆ ಬೆಂದು ಹೋಗ್ವುದು ಪೂರ್ವಜನ್ಮದ ದುರಿತಕಾನನವು; ಈ ಮಂದಮತಿಗಳು ಬಲ್ಲರೇ ಗೋವಿಂದ ಭಕ್ತಮಹಿಮೆಯನು ಪುರಂದರಾದಿಗಳು ಅರಿವರಲ್ಲದೇ ಮಿಕ್ಕವರರಿಯಬಹುದೇ! ಪಾರಮೇಷ್ಠಿ ಪದಾಧಿಕಾರಿ ಋಜುಗಣಸ್ಥ (ಪದಸ್ಥ) ಗುರುರಾಜ ಪಟ್ಟಭದ್ರವ್ಯಾಖ್ಯಾನಸಿಂಹಾಸನಾಧೀಶ್ವರ ಅಜ್ಞಾನತಿಮಿರಮಾರ್ತಾಂಡ ಸುಜ್ಞಾನ ತೇಜೋಮಯ!''

# ರಾಜರ ಸಂದೇಶ



## ಯುಕ್ತಿಸೌಂಗಧ್ಯ

ತುಲಯಾ ಮಲಯಾದ್ರ್ಯುತ್ಥ-
ಚಂದನೇನೇಂಧನಂ ಖಲಃ ।
ಸಮಂ ಸಮಂತಾತ್ಕುರುತಾತ್
ಗ್ರಂಥೌ ಗಂಧಂ ಕರೋತಿ ಕಃ ॥

ಮಲಯಾದ್ರಿಯ ಸುಗಂಧ ತರುವಿನ ತುಂಡಿನೊಡನೆ ಇಂಧನವನ್ನು ಸರಿತೂಗಿದೊಡೆ ಇಂಧನವು ಗಂಧಕ್ಕೆ ಸಾಟಿಯಾಗಬಲ್ಲುದೆ. ಇದರಂತೆ ಯುಕ್ತಿಮಲ್ಲಿಕೆಯ ಸೌಂಗಧ್ಯವು ಇತರ ಗ್ರಂಥಗಳಿಗೆ ಎಂದೂ ಬಾರದು.

## ಸೂಕ್ತಿರತ್ನಗಳು

ಸೂಕ್ತಿರತ್ನಸ್ವಭಾವಾಭಾ ಪೂಜ್ಯಾ-
ತ್ಯಾಜ್ಯಾ ನ ಕೋವಿದೈಃ ।
ಗುಣೇಮಣೇರ್ಹಿ ಮಾತ್ಸರ್ಯಂ-
ನಾರ್ಯೈಃ ಕಾರ್ಯಂ ಕದಾಚನ ॥

ಸಹಜವಾದ ಸೂಕ್ತಿರತ್ನಗಳೆಂಬ ಸೊಬಗಿನ ಗ್ರಂಥ ಯುಕ್ತಿಮಲ್ಲಿಕಾ. ಇದು ಪೂಜ್ಯವೇ ವಿನಾ ತ್ಯಾಜ್ಯವಲ್ಲ. ಗುಣಮಣಿಯ ಸೊಬಗಿನಲ್ಲಿ ಮಾತ್ಸರ್ಯವು ಆರ್ಯರಿಗೆ ಎಂದೂ ಶೋಭಿಸುವುದಿಲ್ಲ.




# ಭೇದಸೌರಭಮ್ - ಸಂಪುಟ - ೫

## ವಿಷಯಾನುಕ್ರಮಣಿಕೆ



—o—

॥ ಶ್ರೀಮದ್‌ಹನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕ-
ಲಕ್ಷ್ಮೀಹಯಗ್ರೀವಾಯನಮಃ ॥

**ಕಿಂ ಚ ಸದ್ಯುಕ್ತಿಪರಶೋರೇಕೀಭಾವೋ ಬಿಭೇತಿ ತೇ ।**
**ದ್ವೈಧೀಭಾವಮತೇ ಸೋಽಪಿ ಸಹಾಯತ್ವಮುಪೇಯಿವಾನ್ ॥ ೪೫೦ ॥**

**ಅರ್ಥ–** ಕಿಂ ಚ= ಮತ್ತು, ಸದ್ಯುಕ್ತಿ ಪರಶೋಃ= ನಿರ್ದುಷ್ಟವಾದ ಯುಕ್ತಿಯೆಂಬ ಕೊಡಲಿಗೆ, ತೇ= ನಿನ್ನ, ಏಕೀಭಾವಃ= ಅಭೇದವು, ಬಿಭೇತಿ= ಹೆದರುತ್ತದೆ, ದ್ವೈಧೀಭಾವಮತೇ= ಭೇದ ಮತದಲ್ಲಿ, ಸೋಽಪಿ= ಆ ಸದ್ಯುಕ್ತಿಯೆಂಬ ಕೊಡಲಿಯೂ, ಸಹಾಯತ್ವಂ= ಸಹಕಾರಿತ್ವವನ್ನೇ, ಉಪೇಯಿವಾನ್= ಹೊಂದಿದೆ.

**ಅನುವಾದ–** ಮತ್ತು ನಿರ್ದುಷ್ಟವಾದ ಯುಕ್ತಿಗಳೆಂಬ ಕೊಡಲಿಗೆ ನಿನ್ನ ಅಭೇದವು ಹೆದರುತ್ತದೆ. ಭೇದ ಮತದಲ್ಲಿ ಮಾತ್ರ ನಿರ್ದುಷ್ಟವಾದ ಯುಕ್ತಿಗಳೆಂಬ ಕೊಡಲಿಯೂ ಸಹ ಸಹಕಾರಿಯೇ ಆಗುತ್ತದೆ.

**ಭಾವವಿಲಾಸಿನೀ–** ಯುಕ್ತಿವಿರುದ್ಧತ್ವಾಚ್ಚ ಜೀವಬ್ರಹ್ಮೈಕ್ಯಂ ನ ಘಟತ ಇತಿ ಸಾಧಯಿತುಂ ಸಾಹಿತ್ಯ-ಮುದ್ರಯಾ ಪ್ರಸ್ತಾವಂ ಕರೋತಿ – **ಕಿಂಚೇತಿ** ॥ ಯಥಾ ದಾರ್ವಾದೌ ದ್ವೈಧೀಭಾವಸಾಧಕಸ್ಯ ಪರಶೋಸ್ತದೇಕೀಭಾವಘಾತಕತ್ವಂ ತಥಾ ಜೀವಬ್ರಹ್ಮಣೋರ್ದ್ವೈಧೀಭಾವಸಾಧಕಾದ್ ಯುಕ್ತಿಪರಶೋಸ್ತೇ ತವಾಭಿಮತಃ ಏಕೀಭಾವೋಽಪಿ ಬಿಭೇತಿ । ಸಃ ಯುಕ್ತಿಪರಶುಃ ಜೀವ-ಬ್ರಹ್ಮಣೋರ್ಭೇದಮತೇ ಸಹಾಯತ್ವಮೇತೀತ್ಯರ್ಥಃ ॥ ೪೫೦ ॥

**ವಿವರಣೆ–** ಯುಕ್ತಿ ವಿರುದ್ಧವಾದುದರಿಂದಲೂ ಜೀವಬ್ರಹ್ಮೈಕ್ಯವು ಕೂಡುವುದಿಲ್ಲ ಎಂಬ ವಿಷಯವನ್ನು ಇಲ್ಲಿ ಸಾಹಿತ್ಯಮುದ್ರೆಯಿಂದ ವಿವರಿಸುತ್ತಾರೆ. ಕೊಡಲಿಯು ಭೇದವನ್ನು ಸಂಪಾದನೆಯನ್ನು ಮಾಡುವಂತಹುದು. ಕೊಡಲಿಯನ್ನು ನೋಡಿ ಏಕೀಭಾವವನ್ನು ಹೊಂದಿದ ಮರವು ಹೆದರುತ್ತದೆ. ಅದರಂತೆ ನಿನ್ನ ಅಭೇದವೂ ಕೂಡ. ಆದರೆ ನಮ್ಮದು ಭೇದವನ್ನೇ ಅಪೇಕ್ಷಿಸುವ ಮತ. ಈ ವಿರುದ್ಧ ಧರ್ಮಾಧಿಕರಣತ್ವ-ರೂಪವಾದ ಸದ್ಯುಕ್ತಿಗಳು ಭೇದವನ್ನೇ ಸಾಧನೆ ಮಾಡಿಕೊಡುತ್ತವೆ. ಆದ್ದರಿಂದ ಈ ಯುಕ್ತಿಗಳು ನಿನಗೆ ಪ್ರತಿಕೂಲವಾಗಿವೆ ಮತ್ತು ನಮಗೆ ಅನುಕೂಲವಾಗಿವೆ ಎಂದು ತಾತ್ಪರ್ಯ.

ಘಟೇನ ಗಗನಸ್ಯೇವ ಯದಿ ದೇಹಾದ್ಯುಪಾಧಿನಾ ।
ಗಚ್ಛತಾ ತತ್ರತತ್ರಸ್ಥಬ್ರಹ್ಮಭಾಗಸ್ಯ ಜೀವತಾ ॥ ೪೫೧ ॥

ಸಂಪದ್ಯತೇ ತತೋಽನ್ಯೇ ತು ನ ಜೀವಾ ಇತಿ ಮನ್ಯಸೇ ।
ಮತಂ ನ ಮಾಯಿನೋಽಪ್ಯೇತಚ್ಚರ್ಚಾರ್ಥಂ ಪರಮುಚ್ಯತೇ ॥ ೪೫೨ ॥

**ಅರ್ಥ–** ಘಟೇನ= ಘಟದಿಂದ, ಗಗನಸ್ಯೇವ= ಗಗನಕ್ಕೆ ಅವಚ್ಛೇದವಾಗುವಂತೆ, ಯದಿ= ಒಂದು ಪಕ್ಷ, ಗಚ್ಛತಾ= ಚಲಿಸುವ, ದೇಹಾದ್ಯುಪಾಧಿನಾ= ದೇಹಾದಿ ಉಪಾದಿಯಿಂದ, ತತ್ರತತ್ರಸ್ಯ ಬ್ರಹ್ಮಭಾಗಸ್ಯ= ಅಲ್ಲಲ್ಲಿ ಇರುವ ಬ್ರಹ್ಮಭಾಗಕ್ಕೆ, ಜೀವತಾ= ಜೀವಭಾವವು, ಸಂಪದ್ಯತೇ= ಉಂಟಾಗುತ್ತದೆ, ತತೋಽನ್ಯೇ= ಅದಕ್ಕಿಂತ ಭಿನ್ನರಾದ, ಜೀವಾಸ್ತು= ಜೀವರಾದರೋ, ನ= ಇಲ್ಲ, ಇತಿ= ಎಂದು, ಮನ್ಯಸೇ= ನೀನು ಅಂಗೀಕರಿಸುವುದಾದರೆ, ಯದ್ಯಪಿ, ಏತತ್= ಇದು, ಮಾಯಿನೋಪಿ ಮತಂ ನ= ಮಾಯಾವಾದಿಗಳ ಮತವೂ ಅಲ್ಲ (ಆದರೂ), ಚರ್ಚಾರ್ಥಂ= ವಿಚಾರ ಮಾಡುವ ಸಲುವಾಗಿ, ಪರಂ= ಕೇವಲ, ಉಚ್ಯತೇ= ದೋಷವು ಹೇಳಲ್ಪಡುತ್ತದೆ.

**ಅನುವಾದ– ಘಟಾದಿ ಉಪಾಧಿಗಳಿಂದ ವ್ಯಾಪ್ತವಾದ ಗಗನವು ಅವಚ್ಛಿನ್ನವಾಗುವಂತೆ, ದೇಹಾದಿ ಉಪಾಧಿಗಳಿಂದ ವ್ಯಾಪ್ತನಾದ ಬ್ರಹ್ಮನು ಅವಚ್ಛಿನ್ನನಾಗಿ ಜೀವಭಾವವನ್ನು ಪಡೆಯುತ್ತಾನೆ. ಅದನ್ನು ಬಿಟ್ಟು ಬೇರೆ ಜೀವರು ಇಲ್ಲ ಎಂದು ನೀನು ಅಂಗೀಕರಿಸುವುದಾದರೆ - ಯದ್ಯಪಿ ಇದು ಮಾಯಾವಾದಿಗಳ ಮತವಲ್ಲ, ಆದರೂ - ವಿಚಾರ ಮಾಡುವ ಸಲುವಾಗಿ ಅದಕ್ಕೆ ದೋಷವನ್ನು ಹೇಳುತ್ತೇವೆ.**

**ಭಾವವಿಲಾಸಿನೀ–** ಯಥಾ ಘಟಾದ್ಯುಪಾಧಿನಾ ವ್ಯಾಪ್ತಗಗನಭಾಗಾನಾಮೇವ ತತ್ರ ತತ್ರ ಘಟಾದ್ಯಾಕಾಶತ್ವಂ ತಥಾ ದೇಹಾದ್ಯುಪಾಧಿನಾ ವ್ಯಾಪ್ತಬ್ರಹ್ಮಭಾಗಾನಾಮೇವ ಯತ್ರ ಯತ್ರ ದೇಹೋ ಗಚ್ಛತಿ ತತ್ರ ತತ್ರ ಜೀವತ್ವಮಿತ್ಯಂಗೀಕ್ರಿಯತೇ ವಾ ಉತ ತಟಾಕೋದ್ಧೃತ-ಘಟಸ್ಥಜಲಸ್ಯೇವ ವ್ಯಾಪ್ತಬ್ರಹ್ಮಚಿದುದ್ಧೃತ ಪರಿಚ್ಛಿನ್ನಚಿದ್ಭಾಗಾನಾಂ ದೇಹಾದ್ಯುಪಾಧಿನಾ ಜೀವತ್ವಮುಚ್ಯತೇ । ಅಥವಾ ತಟಾಕಜಲಾದತ್ಯಂತ ವಿಲಕ್ಷಣನಾಲಿಕೇರಸ್ಥಲಜಲಾನಾಮಿವ ಮಹಾನಲಾದತ್ಯಂತವಿಲಕ್ಷಣಾ ಜ್ಯೋತಿರಿಂಗಣಜ್ಯೋತಿಷಾಮಿವ ವಾ ಬ್ರಹ್ಮಣೋಽತ್ಯಂತ-ವಿಲಕ್ಷಣಾನಾಂ ಸ್ವಭಾವತ ಏವಾಣೂನಾಂ ಚಿದ್ಭಾಗಾನಾಂ ಜೀವತ್ವಮುಚ್ಯತ ಇತಿ ವಿಕಲ್ಪತ್ರಯಂ ಮನಸಿ ನಿಧಾಯಾಽದ್ಯಂ ದೂಷಯಿತುಮನುವದತಿ – **ಘಟೇನೇತಿ** ॥ ತತ್ರ ತತ್ರತ್ಯಬ್ರಹ್ಮಭಾಗಸ್ಯ ತತ್ರ ತತ್ರ ವಿದ್ಯಮಾನವ್ಯಾಪ್ತಬ್ರಹ್ಮಚಿದಂಶಸ್ಯ । ಯತ್ರ ಯದಾ ದೇಹಸ್ತಿಷ್ಠತಿ ತತ್ರ ತದಾ ತದ್ದೇಹಸ್ಥ-ಸ್ತತ್ರತ್ಯಬ್ರಹ್ಮಾಂಶ ಏವ ಜೀವ ಇತ್ಯುಚ್ಯತೇ । ದೇಹಸ್ಯಾನ್ಯತ್ರ ಗಮನೇ ಚಾನ್ಯತ್ರಾನ್ಯತ್ರ ವಿದ್ಯಮಾನಾನಾಂ ಬ್ರಹ್ಮಚಿದಂಶಾನಾಮೇವ ಜೀವಪದವಾಚ್ಯತಾ ಸಂಪದ್ಯತ ಇತಿ ಯಾವತ್ । ತತಃ ವ್ಯಾಪ್ತಬ್ರಹ್ಮಚಿದಂಶೇಭ್ಯಃ । ಅನ್ಯೇ ವ್ಯತಿರಿಕ್ತಾ ಅಣವಶ್ಚೇತನಾ ಇತ್ಯರ್ಥಃ । ಏತತ್ ಇದಂ

ಪ್ರಮೇಯಂ ಮಾಯಿನೋ ಮತಂ ನ । ಚರ್ಚಾರ್ಥಂ ಯುಕ್ತಿಚರ್ಚಾರ್ಥಂ ಪರಂ ಕೇವಲಂ ಮಾಯಾವಾದಿನಾಮನಭಿಮತೋಽಪ್ಯಯಂ ಪಕ್ಷಃ ಯುಕ್ತ್ಯಾಪಿ ದೂಷಯಿತುಂ ಪ್ರಸ್ತಾವಿತ ಇತಿ ಭಾವಃ ॥ ೪೫೧-೪೫೨॥

**ವಿವರಣೆ–** ಹೇಗೆ ವ್ಯಾಪ್ತವಾದ ಗಗನವು ಘಟ ಮೊದಲಾದ ಉಪಾಧಿಗಳಿಂದ ಘಟವು ಹೋದಲ್ಲಿ ಘಟಾಕಾಶತ್ವವನ್ನು ಪಡೆಯುತ್ತದೆಯೋ, ಅದರಂತೆ ದೇಹಾದಿ ಉಪಾಧಿಗಳಿಂದ ವ್ಯಾಪ್ತವಾದ ಬ್ರಹ್ಮಭಾಗಗಳು ದೇಹವು ಹೋದಂತೆ ಎಲ್ಲೆಲ್ಲಿ ಅವಚ್ಛಿನ್ನವಾಗುತ್ತವೆಯೋ ಅದೇ ಜೀವರೆಂದು ಅಂಗೀಕರಿಸುತ್ತೀರೋ ಅಥವಾ ಕೆರೆಯ ನೀರಿನಿಂದ ಎತ್ತಲ್ಪಟ್ಟ ಘಟದ ನೀರಿನಂತೆ ವ್ಯಾಪ್ತವಾದ ಬ್ರಹ್ಮನಿಂದ ಉದ್ಧೃತವಾದ ಪರಿಚ್ಛಿನ್ನವಾದ ಚಿದಂಶಗಳಿಗೆ ದೇಹಾದಿಉಪಾಧಿಗಳಿಂದ ಜೀವಭಾವವನ್ನು ಒಪ್ಪುತ್ತೀರೋ, ಅಥವಾ ತಟಾಕ ಜಲಕ್ಕಿಂತ ಅತ್ಯಂತ ವಿಲಕ್ಷಣವಾದ ತೆಂಗಿನಕಾಯಿ ಒಳಗಿರುವ ಎಳನೀರಿನಂತೆ ಅಥವಾ ಮಹಾಗ್ನಿ ಜ್ವಾಲೆಗಳಿಗಿಂತ ಅದರಿಂದ ಸಿಡಿದ ಭಿನ್ನವಾದ ಅಗ್ನಿ ಕಣಗಳಂತೆ ಬ್ರಹ್ಮನಿಂದ ಅತ್ಯಂತ ವಿಲಕ್ಷಣವಾದ ಸ್ವಭಾವದಿಂದಲೇ ಅಣುವಾದ ಚಿದಂಶಗಳಿಗೆ ಜೀವಭಾವವನ್ನು ಒಪ್ಪುತ್ತೀರೋ ಎಂದು ಮೂರು ವಿಕಲ್ಪಗಳನ್ನು ಮನಸ್ಸಿನಲ್ಲಿಟ್ಟುಕೊಂಡು ಮೊದಲನೆಯ ವಿಕಲ್ಪಕ್ಕೆ ಇಲ್ಲಿ ದೋಷವನ್ನು ಹೇಳುತ್ತಾರೆ. ದೇಹವು ಮೊದಲು ಎಲ್ಲಿರುತ್ತದೆಯೋ ಅಲ್ಲಿ ದೇಹಾವಚ್ಛಿನ್ನ ಬ್ರಹ್ಮಚೈತನ್ಯ ಭಾಗವು ಜೀವವೆಂದು ಕರೆಸಿಕೊಳ್ಳಲ್ಪಡುತ್ತದೆ. ಆ ದೇಹವು ಇನ್ನೊಂದು ಕಡೆಗೆ ಹೋದರೆ ಆಗ ಆ ಹೊಸ ಬ್ರಹ್ಮ ಭಾಗವು ಜೀವವೆಂದು ಕರೆಸಿಕೊಳ್ಳಲ್ಪಡುತ್ತದೆ. ಅದನ್ನು ಬಿಟ್ಟು ಬೇರೆ ಜೀವರು ಎಂದು ಇಲ್ಲವೇ ಇಲ್ಲ ಎಂದು ಅಂಗೀಕರಿಸುವುದಾದರೆ ಆ ಪಕ್ಷಗಳಲ್ಲಿ ದೋಷಗಳನ್ನು ಮುಂದಿನ ಶ್ಲೋಕದಿಂದ ಹೇಳುತ್ತಾರೆ.

ತರ್ಹಿ ದೇಹಾದ್ಯುಪಾಧೀನಾಂ ಗಮನಂ ಕೇನ ಹೇತುನಾ ।
ಬ್ರಹ್ಮಣೋ ನಿಷ್ಕ್ರಿಯತ್ವೋಕ್ತೇಸ್ತದನ್ಯಸ್ಯ ಜಡತ್ವತಃ ॥ ೪೫೩ ॥

**ಅರ್ಥ–** ತರ್ಹಿ= ಹಾಗಾದರೆ, ಬ್ರಹ್ಮಣಃ ನಿಷ್ಕ್ರಿಯತ್ವೋಕ್ತೇಃ= ಬ್ರಹ್ಮನು ನಿಷ್ಕ್ರಿಯನೆಂದು ಹೇಳಿರುವುದರಿಂದ, ತದನ್ಯಸ್ಯ= ಅವನಿಗಿಂತ ಭಿನ್ನವಾದುದು, ಜಡತ್ವತಃ= ಜಡವಾಗಿರುವ ಕಾರಣದಿಂದ, ದೇಹಾದ್ಯುಪಾಧೀನಾಂ= ದೇಹಾದಿ ಉಪಾಧಿಗಳಿಗೆ, ಗಮನಂ= ಚಲನೆಯು, ಕೇನ ಹೇತುನಾ= ಯಾವ ಕಾರಣದಿಂದ ಉಂಟಾಗುತ್ತದೆ.

**ಅನುವಾದ–** ಹಾಗಾದರೆ ಬ್ರಹ್ಮನು ನಿಷ್ಕ್ರಿಯನೆಂದು ನೀವು ಅಂಗೀಕರಿಸುವುದರಿಂದ ಮತ್ತು ಬ್ರಹ್ಮ ಭಿನ್ನವಾದುದೆಲ್ಲವೂ ಜಡವಾಗಿರುವುದರಿಂದ ದೇಹಾದಿ ಉಪಾಧಿಗಳಿಗೆ ಗಮನಾಗಮನಗಳು ಹೇಗೆ ಉಂಟಾಗುತ್ತದೆ ಎಂದು ನಮ್ಮ ಪ್ರಶ್ನೆ.

**ಭಾವವಿಲಾಸಿನೀ– ದೂಷಯತಿ – ತರ್ಹೀತಿ ॥** ಗಮನಂ ಇತಸ್ತತಶ್ಚಲನಮ್ । ತದನ್ಯಸ್ಯ ದೇಹಾದ್ಯುಪಾಧೇಃ ॥ ೪೫೩ ॥

**ಪರಿಸ್ಪಂದಕ್ರಿಯಾ ನೈವ ಪರೇ ಬ್ರಹ್ಮಣಿ ತೇ ಮತೇ ।**
**ತತಸ್ತತ್ಕ್ರಿಯಯಾ ದೇಹಕ್ರಿಯಾ ನೇತ್ಯಕ್ರಿಯಾ ಭವೇತ್ ॥ ೪೫೪ ॥**

**ಅರ್ಥ–** ತೇ ಮತೇ= ನಿನ್ನ ಮತದಲ್ಲಿ, ಪರೇ ಬ್ರಹ್ಮಣಿ= ಪರಬ್ರಹ್ಮನಲ್ಲಿ, ಪರಿಸ್ಪಂದಕ್ರಿಯಾ= ಚಲನಾತ್ಮಕ ಕ್ರಿಯೆಯು, ನೈವ= ಇಲ್ಲವೇ ಇಲ್ಲ, ತತಃ= ಆ ಕಾರಣದಿಂದ, ತತ್ಕ್ರಿಯಯಾ= ಬ್ರಹ್ಮನ ಚಲನೆಯಿಂದ, ದೇಹಕ್ರಿಯಾ= ದೇಹದ ಚಲನೆಯು, ನೇತಿ= ಇಲ್ಲವೆಂದು, ಅಕ್ರಿಯಾ ಭವೇತ್= ದೇಹಕ್ಕೆ ಚಲನೆಯೇ (ಯಾವ ಚಲನೆಯೂ) ಇಲ್ಲವೆಂದಾಗುತ್ತದೆ.

**ಅನುವಾದ–** ನಿನ್ನ ಮತದಲ್ಲಿ ಪರಬ್ರಹ್ಮನಿಗೆ ಚಲನರೂಪವಾದ ಕ್ರಿಯೆಯು ಇಲ್ಲವೇ ಇಲ್ಲ. ಆದ್ದರಿಂದ ಬ್ರಹ್ಮನ ಕ್ರಿಯೆಯಿಂದ ದೇಹದ ಕ್ರಿಯೆಯು ಉಂಟಾಗುತ್ತದೆ ಎಂದು ಹೇಳಲು ಬರುವುದಿಲ್ಲ. ಆದ್ದರಿಂದ ದೇಹಕ್ಕೆ ಗಮನಾದಿ ಕ್ರಿಯೆಯಾಗಲೀ ಅಥವಾ ಬೇರೆ ಯಾವ ಚಲನೆಯಾಗಲೀ ಉಂಟಾಗಲಾರದು.

**ಭಾವವಿಲಾಸಿನೀ–** ಪರಿಸ್ಪಂದಕ್ರಿಯಾ ಪರಿಸ್ಪಂದರೂಪಕ್ರಿಯಾ । ಬ್ರಹ್ಮಣೋ ವ್ಯಾಪ್ತತ್ವಾದಿತಸ್ತತಃ ಪರಿಸ್ಪಂದನಂ ಮಾಯಿಮತೇ ಸರ್ವಥಾ ನಾಸ್ತೀತಿ ಭಾವಃ । ತತ್ಕ್ರಿಯಯಾ ಬ್ರಹ್ಮಪರಿಸ್ಪಂದನೇನ ॥ ೪೫೪ ॥

**ವಿವರಣೆ–** ಬ್ರಹ್ಮನು ವ್ಯಾಪ್ತನಾದ್ದರಿಂದ ನಿಷ್ಕ್ರಿಯ. ಅವನನ್ನು ಬಿಟ್ಟು ಬೇರೆ ಜೀವರಿಲ್ಲ. ಜಡಕ್ಕೆ ಸ್ವತಃ ಕ್ರಿಯೆಯಿಲ್ಲ. ಹೀಗಿರುವಾಗ ದೇಹದ ಚಲನೆಯು ಹೇಗೆ ಉಂಟಾಗುತ್ತದೆ ಎಂದು ಆಕ್ಷೇಪದ ಅಭಿಪ್ರಾಯ.

**ಇತಃ ಕ್ಷಿಪತಿ ಕಿಂ ಕಶ್ಚಿತ್ ತತಃ ಕರ್ಷತಿ ಕಿಂ ಪರಃ ।**
**ಅತಃ ಸ್ಥಿರಾಂಶಜೀವತ್ವೇ ಸ್ಥೈರ್ಯಂ ಸ್ಯಾನ್ನ ಗತಾಗತಂ ॥ ೪೫೫ ॥**

**ಅರ್ಥ–** ಕಶ್ಚಿತ್= ಯಾವನಾದರೂ, ಕಿಂ= ಏನನ್ನು, ಇತಃ= ಇಲ್ಲಿಂದ, ಕ್ಷಿಪತಿ= ಎಸೆಯುತ್ತಾನೆ, ಪರಃ= ಇನ್ನೊಬ್ಬನಾದ ಯಾವನು, ತತಃ= ಅಲ್ಲಿಂದ, ಕಿಂ= ಏನನ್ನು, ಕರ್ಷತಿ= ಎಳೆಯುತ್ತಾನೆ, ಅತಃ= ಆದ್ದರಿಂದ, ಸ್ಥಿರಾಂಶಜೀವತ್ವೇ= ನಿಷ್ಕ್ರಿಯವಾದ ಬ್ರಹ್ಮನಿಗೇ ಜೀವಭಾವವನ್ನು ಒಪ್ಪಿದರೆ, ಸ್ಥೈರ್ಯಂ ಸ್ಯಾತ್= ನಿಷ್ಕ್ರಿಯತ್ವವೇ ಉಂಟಾದೀತು, ಗತಾಗತಂ ನ= ಗಮನಾಗಮನಗಳು ಕೂಡುವುದಿಲ್ಲ.

**ಅನುವಾದ–** ಯಾರು ಏನನ್ನು ಇಲ್ಲಿಂದ ಎಸೆಯುತ್ತಾನೆ ಮತ್ತು ಯಾರು ಏನನ್ನು ಅಲ್ಲಿಂದ ಎಳೆಯುತ್ತಾನೆ? ಆದ್ದರಿಂದ ಬ್ರಹ್ಮನ ನಿಷ್ಕ್ರಿಯಭಾಗವನ್ನೇ ಜೀವವೆಂದು ಒಪ್ಪಿದರೆ, ನಿಷ್ಕ್ರಿಯತ್ವವೇ ಉಂಟಾಗುವುದರಿಂದ ದೇಹಕ್ಕೆ ಗಮನಾಗಮನಗಳು ಉಪಪನ್ನವಾಗುವುದಿಲ್ಲ.

**ಭಾವವಿಲಾಸಿನೀ–** ಘಟಸ್ಯ ಘಟಾಕಾಶಸ್ಯ ಚ ಕ್ರಿಯಾಭಾವೇಽಪಿ ಚೇತನಾಂತರೇಣೇತಃ ಕ್ಷೇಪಣಾತ್ ತತಃ ಆಕರ್ಷಣಾದ್ವಾ ಕದಾಚಿತ್ ಕ್ರಿಯಾ ಸಂಭವತಿ । ದೇಹೇ ತು ಬ್ರಹ್ಮವ್ಯತಿರಿಕ್ತ-ಚೇತನಾಂತರಸ್ಯಾನಂಗೀಕಾರಾನ್ನ ಕದಾಪಿ ಕ್ರಿಯೇತ್ಯಾಹ–ಇತ ಇತಿ ॥ ಕಶ್ಚಿಚ್ಚೇತನಃ । ಪರಃ ಅನ್ಯಃ । ಅತಃ ಪೂರ್ವೋಕ್ತಹೇತೋಃ । ಸ್ಥಿರಾಂಶಜೀವತ್ವೇ ಸ್ಥಿರಬ್ರಹ್ಮಾಂಶಜೀವತ್ವೇ ॥ ೪೫೫ ॥

**ವಿವರಣೆ–** ಘಟಕ್ಕಾಗಲೀ, ಘಟಾಕಾಶಕ್ಕಾಗಲೀ ಸ್ವತಃ ಕ್ರಿಯೆಯಿಲ್ಲದಿದ್ದರೂ ಒಬ್ಬ ಚೇತನನು ಘಟವನ್ನು ಅಲ್ಲಿಂದಿಲ್ಲಿಗೆ ಎಳೆದಾಡುವುದರಿಂದ ಘಟಕ್ಕೆ ಚಲನೆ ಉಂಟಾಗುತ್ತದೆ. ಆದರಿಂದ ಅವಚ್ಛಿನ್ನವಾದ ಆಕಾಶವು ಭಿನ್ನಭಿನ್ನವಾಗುತ್ತದೆ. ಆದರೆ ದೇಹದಲ್ಲಿ ಬ್ರಹ್ಮ ವ್ಯತಿರಿಕ್ತ ಚೇತನವಿಲ್ಲದಿರುವುದರಿಂದ ಮತ್ತು ಬ್ರಹ್ಮನು ನಿಷ್ಕ್ರಿಯನಾದುದರಿಂದ ದೇಹದ ಚಲನೆಯು ಯಾವ ರೀತಿಯೂ ಉಪಪನ್ನವಾಗುವುದಿಲ್ಲ ಎಂದು ಅಭಿಪ್ರಾಯ.

**ಶೂನ್ಯಗೇಹಸ್ಥಘಟವದ್ ದೇಹೋ ದೇಹೀ ಘಟಾಭ್ರವತ್ ।**
**ಅತಿದೂರಸ್ಥಿತಸ್ವರ್ಗಗಮನಂ ತ್ವತಿದೂರತಃ ॥ ೪೫೬ ॥**

**ಅರ್ಥ–** ದೇಹಃ= ದೇಹವು, ಶೂನ್ಯಗೇಹಸ್ಥಘಟವತ್= ಪುರುಷರಿಲ್ಲದ ಮನೆಯಲ್ಲಿರುವ ಘಟದಂತೆ, ದೇಹೀ= ದೇಹವನ್ನು ಧರಿಸಿದವನು, ಘಟಾಭ್ರವತ್= ಘಟಾಕಾಶದಂತೆ, ಅತಿದೂರಸ್ಥಿತಸ್ವರ್ಗಗಮನಂ ತು= ಅತ್ಯಂತ ದೂರವಾದ ಸ್ವರ್ಗದ ಪ್ರಾಪ್ತಿಯಾದರೂ, ಅತಿ ದೂರತಃ= ಅತ್ಯಂತ ದೂರವಾಗಿದೆ (ಅಸಂಭಾವಿತವಾಗಿದೆ).

**ಅನುವಾದ– ದೇಹವು ಪುರುಷಶೂನ್ಯವಾದ ಮನೆಯಲ್ಲಿರುವ ಘಟದಂತೆ, ದೇಹಿಯು ಘಟಾಕಾಶದಂತೆ. ಅತಿ ದೂರದಲ್ಲಿರುವ ಸ್ವರ್ಗದ ಪ್ರಾಪ್ತಿಯು ಅತ್ಯಂತ ಅಸಂಭಾವಿತವಾದುದು.**

**ಭಾವವಿಲಾಸಿನೀ–** ತತ್ರ ದೃಷ್ಟಾಂತಮಾಹ – **ಶೂನ್ಯೇತಿ** ॥ ಚಾಲಕಪುರುಷಾಭಾವ- ಸೂಚನಾಯ ಶೂನ್ಯೇತ್ಯುಕ್ತಮ್ । ದೇಹೀ ಜೀವಃ ಘಟಾಭ್ರವತ್ ಘಟಾಂತಃಸ್ಥಿತಾಕಾಶವತ್ । ಈಷಚ್ಚಲನಸ್ಯಾಪ್ಯಯೋಗೇ ದೂರಚಲನಂ ದೂರಾಪಾಸ್ತಮಿತಿ ಭಾವಃ ॥ ೪೫೬ ॥

**ವಿವರಣೆ–** ಹಿಂದಿನ ಶ್ಲೋಕದಲ್ಲಿ ಹೇಳಿದ ಪ್ರಮೇಯದ ವಿಷಯದಲ್ಲಿ ಇಲ್ಲಿ ಒಂದು ದೃಷ್ಟಾಂತವನ್ನು ಹೇಳುತ್ತಾರೆ. ಮನೆಯಲ್ಲಿ ಯಾರಾದರೂ ಪುರುಷರಿದ್ದರೆ ಘಟಕ್ಕೆ ಚಲನೆಯಾದೀತು. ಆದರೆ ಪುರುಷರಿಲ್ಲದ ಗೃಹದಲ್ಲಿ ಇರುವ ಘಟಕ್ಕೆ ಚಲನೆಯಾಗುವುದಿಲ್ಲ. ದೇಹಿಯಾದವನು ಘಟಾಕಾಶದಂತೆ. ಅವನು ನಿನ್ನ ಮತವನ್ನು ಅನುಸರಿಸಿ ಇಲ್ಲಿಂದ ಸ್ವರ್ಗಕ್ಕೆ ಹೋಗಬೇಕಷ್ಟೇ? ಆದರೆ ಆ ಘಟಕ್ಕೆ ಚಲನೆಯೇ ಅಸಂಭಾವಿತವಾಗಿರುವುದರಿಂದ ನಿನ್ನ ಸ್ವರ್ಗಗಮನವು ಅಷ್ಟೇ ಅಸಂಭಾವಿತವಾಗಿರುತ್ತದೆ.

**ವಾತೋಪಿ ತಿರ್ಯಕ್ ಪವನಃ ಕೋ ವಾ ತಂ ಜಡಮುನ್ನಯೇತ್ ।**
**ಶವಭೂಷಣವತ್ ಸರ್ವಂ ಜೀವಜಾತಮಭೂದಹೋ ॥ ೪೫೭ ॥**

**ಅರ್ಥ–** ವಾತೋಪಿ= ವಾಯುವೂ ಕೂಡ, ತಿರ್ಯಕ್ ಪವನಃ= ಪಕ್ಕ ಪಕ್ಕಕ್ಕೆ ಬೀಸುತ್ತದೆ, ತಂ ಜಡಂ= ಆ ದೇಹರೂಪವಾದ ಜಡವನ್ನು, ಕೋ ವಾ= ಯಾರು ತಾನೇ, ಉನ್ನಯೇತ್= ಮೇಲಕ್ಕೆ ತೆಗೆದುಕೊಂಡು ಹೋಗಲು ಸಾಧ್ಯ, ಸರ್ವಂ ಜೀವಜಾತಂ= ಎಲ್ಲ ಜೀವ ಸಮೂಹವೂ, ಶವಭೂಷಣವತ್= ಶವದ ಅಲಂಕಾರದಂತೆ, ಅಭೂತ್= ಆಯಿತು, ಅಹೋ= ಆಶ್ಚರ್ಯವು!

**ಅನುವಾದ– ವಾಯುವು ಸಹ ಪಕ್ಕ ಪಕ್ಕಕ್ಕೆ ಬೀಸುತ್ತದೆ. ಆ ಜಡವನ್ನು ಮೇಲಕ್ಕೆ ತೆಗೆದುಕೊಂಡು ಹೋಗುವವನು ಯಾವನು? ಆದ್ದರಿಂದ ಶವಭೂಷಣಕ್ಕೆ ಹೇಗೆ ಚಲನೆಯಿಲ್ಲವೋ ಹಾಗೆಯೇ ಎಲ್ಲ ಜೀವಸಮೂಹವು ಚಲನೆ ಇಲ್ಲದ್ದಾಗಿ ಶವಭೂಷಣದಂತೆ ಆಯಿತು. ಇದು ಆಶ್ಚರ್ಯವು.**

**ಭಾವವಿಲಾಸಿನೀ–** ವಾಯುವಶಾತ್ತೃಣಾದೀನಾಮಿವೋರ್ಧ್ವಗಮನಂ ಭವಿಷ್ಯತೀತಿ ಮಂದಾ-ಶಂಕಾಂ ಪರಿಹರತಿ – **ವಾತೋಽಪೀತಿ ॥** ಪಾಂಚಭೌತಿಕಯಾತನಾದೇಹಸ್ಯೈವ ಸ್ವರ್ಗಗಮನ-ಪ್ರಸಿದ್ಧೇರ್ಜಡಮಿತ್ಯುಕ್ತಮ್ । ಪರಿಹಸತಿ – **ಶವಭೂಷಣವದಿತಿ ॥** ಯಥಾ ಶವಭೂಷಣಾನಾಂ ಚಾಲಕಪುರುಷಾಭಾವಾಚ್ಚಲನಾಭಾವಃ । ಬ್ರಹ್ಮಚೈತನ್ಯಸ್ಯ ವ್ಯಾಪ್ತತ್ವೇನ ಚಾಲಕತ್ವಾಯೋಗಾತ್ ತಥಾ ಜೀವಚ್ಛರೀರಾಣಾಮಪಿ ಮೃತಶರೀರಸ್ವಭಾವೋಽಭೂದಿತಿ ಭಾವಃ ॥ ೪೫೭ ॥

**ವಿವರಣೆ–** ಸ್ವರ್ಗಕ್ಕೆ ಹೋಗಬೇಕಾದರೂ ಪಾಂಚಭೌತಿಕವಾದ ಯಾತನಾಮಯ ಶರೀರದಿಂದಲೇ ಸ್ವರ್ಗಕ್ಕೆ ಹೋಗಬೇಕು. ಆ ಶರೀರಕ್ಕೆ ಇಲ್ಲಿಂದ ಸ್ವರ್ಗದವರೆಗೆ ಚಲನೆಯು ಯಾವ ರೀತಿಯಲ್ಲಿಯೂ ಉಂಟಾಗಲು ಸಾಧ್ಯವಿಲ್ಲ. ಆದ್ದರಿಂದ ಸ್ವರ್ಗ ಪ್ರಾಪ್ತಿಯ ಆಸೆಯು ದೂರವಾಯಿತು ಎಂದು ಅಭಿಪ್ರಾಯ.

**ಕಿಂಚೈಕಪದವಿನ್ಯಾಸೇ ಪ್ರಾಗಂಶೇ ದೇಹನಿರ್ಗತೇಃ ।**
**ಮೃತಿಃ ಸ್ಯಾದಪರಾಂಶೇ ತು ಜನಿಃ ಸ್ಯಾದ್ ದೇಹಸಂಗತೇಃ ॥ ೪೫೮ ॥**

**ದೇಹಯೋಗವಿಯೋಗೌ ಹಿ ಜೀವಜನ್ಮಮೃತೀ ಶ್ರುತೇ ।**
**ಪದೇಪದೇ ಪ್ರೇತಕರ್ಮ ಜಾತಕರ್ಮ ಕರೋತಿ ಕಃ ॥ ೪೫೯ ॥**

**ಅರ್ಥ–** ಕಿಂಚ= ಮತ್ತು, ಏಕಪದವಿನ್ಯಾಸೇ= ದೇಹದಿಂದ ಒಂದು ಹೆಜ್ಜೆಯನ್ನು ಮುಂದಿಟ್ಟರೆ, ಪ್ರಾಗಂಶೇ= ಹಿಂದಿನ ಬ್ರಹ್ಮಾಂಶದಲ್ಲಿ, ದೇಹನಿರ್ಗತೇಃ= ದೇಹವು ಹೊರಟು ಹೋಗುವುದರಿಂದ, ಮೃತಿಃ ಸ್ಯಾತ್= ಮರಣವು ಆದೀತು, ಅಪರಾಂಶೇ ತು= ಮುಂದಿನ

ಭಾಗದಲ್ಲಾದರೂ, ದೇಹಸಂಗತೇಃ= ದೇಹದ ಸಂಗವು ಬರುವುದರಿಂದ, ಜನಿಃ ಸ್ಯಾತ್= ಉತ್ಪತ್ತಿಯು ಉಂಟಾದೀತು, ದೇಹಯೋಗವಿಯೋಗೌ ಹಿ= ದೇಹದ ಸಂಯೋಗ ಮತ್ತು ವಿಯೋಗಗಳೇ, ಜೀವಜನ್ಮಮೃತೀ= ಜೀವನ ಜನನ ಮರಣಗಳೆಂದು, ಶ್ರುತೇಃ= ಹೇಳಲ್ಪಟ್ಟಿವೆಯಷ್ಟೇ, ಪದೇಪದೇ= ಹೆಜ್ಜೆ ಹೆಜ್ಜೆಗೂ, ಪ್ರೇತಕರ್ಮ= ಪ್ರೇತಕರ್ಮವನ್ನು, ಜಾತಕರ್ಮ= ಜಾತಕರ್ಮವನ್ನು, ಕಃ ಕರೋತಿ= ಯಾವನು ಮಾಡುತ್ತಾನೆ?

**ಅನುವಾದ–** ಒಂದು ಹೆಜ್ಜೆಯನ್ನು ಮುಂದಿಟ್ಟರೆ ಹಿಂದಿನ ಬ್ರಹ್ಮಭಾಗದಿಂದ ದೇಹವು ನಿರ್ಗಮಿಸುವುದರಿಂದ ಹಿಂದಿನ ಭಾಗದಲ್ಲಿದ್ದ ದೇಹಾವಚ್ಛಿನ್ನವಾದ ಬ್ರಹ್ಮಭಾಗವೇ ಜೀವವಾದುದರಿಂದ ಆ ಜೀವನಿಗೆ ಮೃತಿಯೇ ಉಂಟಾಯಿತು. ಹೆಜ್ಜೆಯನ್ನು ಮುಂದಿಟ್ಟಾಗ ಆ ಹೊಸಭಾಗದಲ್ಲಿ ಇದ್ದ ಬ್ರಹ್ಮಾಂಶಕ್ಕೆ ದೇಹ ಸಂಬಂಧವು ಬಂದುದರಿಂದ ಅಲ್ಲಿ ಜೀವದ ಉತ್ಪತ್ತಿಯಾಯಿತು. ದೇಹದ ಸಂಯೋಗ ವಿಯೋಗಗಳನ್ನೇ ಜೀವನ ಜನನ ಮರಣ ಎಂದು ಕರೆಯುತ್ತಾರಷ್ಟೇ? ಆದ್ದರಿಂದ ಹಿಂದಿನ ಜೀವನ ಮರಣವು ಮುಂದಿನ ಜೀವನ ಉತ್ಪತ್ತಿಯು ಆಗುವುದರಿಂದ ಹೆಜ್ಜೆ ಹೆಜ್ಜೆಗೂ ಪ್ರೇತಕರ್ಮವನ್ನೂ ಮತ್ತು ಜಾತಕರ್ಮವನ್ನೂ ಯಾವನು ಮಾಡುತ್ತಾನೆ?

**ಭಾವವಿಲಾಸಿನೀ– ದೂಷಣಾಂತರಂ ಚಾಹ – ಕಿಂಚೇತಿ ॥ ಅಪಹಸತಿ– ಪದೇಪದ ಇತಿ ॥ ೪೫೮-೫೯ ॥**

**ವಿವರಣೆ–** ದೇಹಯೋಗವಿಯೋಗಗಳೇ ಜನನ ಮರಣಗಳಾದ್ದರಿಂದ ದೇಹವು ಚಲಿಸಿದಂತೆಲ್ಲಾ ಹಿಂದಿನ ಬ್ರಹ್ಮಭಾಗದ ಜೀವನು ನಾಶವಾಗಿ, ಮುಂದಿನ ಬ್ರಹ್ಮಭಾಗದ ಜೀವನು ಉತ್ಪತ್ತಿಯಾಗುವುದರಿಂದ, ಹೆಜ್ಜೆ ಹೆಜ್ಜೆಗೂ ಉತ್ತರಕ್ರಿಯೆಯನ್ನೂ ಮತ್ತು ಜನ್ಮಸಂಸ್ಕಾರವನ್ನು ಮಾಡಬೇಕಾದೀತು ಎಂದು ಪರಿಹಾಸವನ್ನು ಮಾಡುತ್ತಾರೆ.

**ತದಂಶಾಜ್ಞಾನಮೂಲಸ್ಯ ಮನಆದೇರಪಿ ಕ್ಷಯಾತ್ ।**
**ಕಲ್ಪಾಂತಲಯ ಏವಾಯಂ ಕಲ್ಪಾದಿಮಜನಿಶ್ಚ ಸಾ ॥ ೪೬೦ ॥**

**ಅರ್ಥ–** ತದಂಶಾಜ್ಞಾನಮೂಲಸ್ಯ= ಪೂರ್ವಾಂಶ ಅಜ್ಞಾನ-ಉಪಾದಾನಕವಾದ, ಮನ ಆದೇರಪಿ= ಮನಸ್ಸು ಮೊದಲಾದವುಗಳು, ಕ್ಷಯಾತ್= ನಾಶವನ್ನು ಹೊಂದುವುದರಿಂದ, ಅಯಂ= ಈ ಮರಣವು, ಕಲ್ಪಾಂತಲಯಃ ಏವ= ಕಲ್ಪಾಂತ ಕಾಲದ ಮರಣವೇ ಆಗಿದೆ, ಸಾ= ಆ ಮುಂದಿನ ಜನಿಯು, ಕಲ್ಪಾದಿಮಜನಿಶ್ಚ= ಕಲ್ಪದ ಮೊದಲಿನಲ್ಲಿರುವ ಉತ್ಪತ್ತಿಯೇ ಆಗಿದೆ.

**ಅನುವಾದ–** ಪೂರ್ವಾಂಶಾಜ್ಞಾನ ಕಾರ್ಯವಾದ ಮನಸ್ಸು ಮೊದಲಾದ ಸರ್ವವೂ ನಾಶಹೊಂದಿರುವುದರಿಂದ ಈ ಮರಣವು ಕಲ್ಪಾಂತದಲ್ಲಿ ಉಂಟಾಗುವ ಮರಣವೇ ಆಗಿದೆ ಮತ್ತು ಈ ಜನನವು ಕಲ್ಪದ ಆದಿಯಲ್ಲಿ ಉಂಟಾಗುವ ಜನನವೇ ಆಗಿದೆ.

**ಭಾವವಿಲಾಸಿನೀ–** ಪೂರ್ವಾಂಶಾಜ್ಞಾನೋಪಾದಾನಕಲಿಂಗಶರೀರಾದೇರಪಿ ನಾಶಾದುತ್ತ-ರಾಂಶಾಜ್ಞಾನೋಪಾದಾನಕಸ್ಯ ಲಿಂಗಶರೀರಾದೇಃ ಪುನರುತ್ಪತ್ತೇಶ್ಚ ಬಾಹ್ಯದೇಹವಿಯೋಗ-ಯೋಗರೂಪಾವಾಂತರಮರಣಜನನವತ್ ನೇಮೇ ಮೃತಿಜನ್ಮನೀ ಕಿಂತು ಮೋಕ್ಷಕಾಲೀನಮಹಾಮೃತಿವಲ್ಲಿಂಗಶರೀರಸ್ಯೈವೋತ್ಪತ್ತಿ ರೂಪಮಹಾಜನ್ಮವಚ್ಚಾಭೂತಾ-ಮಿತ್ಯಾಹ – **ತದಂಶೇತಿ** ॥ ಆದಿಪದೇನ ಲಿಂಗದೇಹೋ ಗೃಹ್ಯತೇ । ಕಲ್ಪಾಂತಪದೇನ ಮುಕ್ತಿಕಾಲ ಉಚ್ಯತೇ । ಕಲ್ಪಾದಿಮಪದೇನ ಚ ಲಿಂಗದೇಹೋತ್ಪತ್ತಿಕಾಲಃ ॥ ೪೬೦ ॥

**ವಿವರಣೆ–** ದೇಹವು ಚಲಿಸಿದಾಗ ತದವಚ್ಛಿನ್ನ ಬ್ರಹ್ಮಾಂಶದ ಅಜ್ಞಾನ-ಉಪಾದಾನಕವಾದ ಲಿಂಗ ಶರೀರಪರ್ಯಂತವಾದ ಎಲ್ಲವೂ ನಾಶಹೊಂದುವುದರಿಂದ ಇದು ಮೋಕ್ಷಕಾಲೀನ ಮಹಾಮರಣದಂತೆ ಮತ್ತು ದೇಹವು ಮುಂದೆ ಚಲಿಸಿದಾಗ ತದಂಶಾಜ್ಞಾನ ಉಪಾದಾನಕವಾದ ಲಿಂಗಶರೀರವು ಉತ್ಪತ್ತಿಯಾಗುವುದರಿಂದ ಅದು ಸೃಷ್ಟಿಯ ಮೊದಲಿನ ಉತ್ಪತ್ತಿಯಂತೆ. ಆದ್ದರಿಂದ ಹೆಜ್ಜೆ ಹೆಜ್ಜೆಗೂ ಮುಕ್ತಿಕಾಲೀನನಾಶವೂ ಸರ್ಗಾದಿಕಾಲೀನಉತ್ಪತ್ತಿಯೂ ಅಂಗೀಕರಿಸಲ್ಪಡಬೇಕಾಗುತ್ತದೆ ಎಂದು ದೂಷಣವನ್ನು ಹೇಳುತ್ತಾರೆ.

**ಪೂರ್ವಾಂಶೇ ಕರ್ಮ ನಷ್ಟಂ ಹಿ ನಾನ್ಯಾಂಶೇಪಿ ಕ್ವ ದೇಹಿತಾ ।**
**ಕೃತಹಾನ್ಯಕೃತಪ್ರಾಪ್ತ್ಯಾ ಮತಮೇತದ್ ವಿಗರ್ಹಿತಂ ॥ ೪೬೧ ॥**

**ಅರ್ಥ–** ಪೂರ್ವಾಂಶೇ= ಪೂರ್ವಾಂಶದಲ್ಲಿ ಇದ್ದ, ಕರ್ಮ= ಅದೃಷ್ಟರೂಪವಾದ ಕರ್ಮವು, ನಷ್ಟಂ ಹಿ= ನಷ್ಟವಾಗಿದೆಯಷ್ಟೇ, ಅನ್ಯಾಂಶೇಪಿ= ಉತ್ತರಾಂಶದಲ್ಲಿಯೂ, ನ= ಇನ್ನೂ ಉತ್ಪತ್ತಿಯಾಗಿಲ್ಲ, ದೇಹಿತಾ= ದೇಹಿತ್ವವು, ಕ್ವ= ಎಲ್ಲಿಂದ ಬರಬೇಕು, ಕೃತಹಾನ್ಯಕೃತಪ್ರಾಪ್ತ್ಯಾ= ಕೃತಹಾನಿ ಮತ್ತು ಅಕೃತಾಗಮವು ಉಂಟಾಗುವುದರಿಂದ, ಏತತ್ ಮತಂ= ಈ ಮತವು, ವಿಗರ್ಹಿತಂ= ನಿಂದ್ಯವಾದುದು.

**ಅನುವಾದ–** ಪೂರ್ವಾಂಶದಲ್ಲಿ ಪುಣ್ಯಪಾಪರೂಪವಾದ ಕರ್ಮವು ನಷ್ಟವಾಗಿದೆ. ಉತ್ತರಾಂಶದಲ್ಲಿ ಇನ್ನೂ ಉತ್ಪತ್ತಿಯಾಗಿಲ್ಲ. ಆದ್ದರಿಂದ ದೇಹಿತ್ವವು ಹೇಗೆ ಬರಬೇಕು? ಕೃತಹಾನಿಯೂ ಮತ್ತು ಅಕೃತಾಭ್ಯಾಗಮವೂ ಉಂಟಾಗುವುದರಿಂದ ಈ ಮತವು ನಿಂದ್ಯವಾದುದು.

**ಭಾವವಿಲಾಸಿನೀ– ದೂಷಣಾಂತರಂ ಚಾಹ – ಪೂರ್ವಾಂಶ ಇತಿ** ॥ ಪೂರ್ವಾಂಶೇ ವಿದ್ಯಮಾನಂ ಕರ್ಮ ಪೂರ್ವಾಂಶಾಜ್ಞಾನೋಪಾದಾನಕರ್ಮೇತಿ ಯಾವತ್ । ಅನ್ಯಾಂಶೇ ಉತ್ತರಾಂಶೇ ಕರ್ಮ ನ ನ ಜಾತಮ್ । ದೇಹೋತ್ಪತ್ತೇಃ ಪೂರ್ವಂ ತದ್ದೇಹಕಾರ್ಯಕರ್ಮೋತ್ಪತ್ತೇರಯೋಗಾತ್ । ಅತೋ ದೇಹಿತಾ ಕ್ವ । ಕರ್ಮನಿಮಿತ್ತದೇಹದೇಹಿಭಾವಃ ಕ್ವ । ಸ್ವಕರ್ಮನಿಮಿತ್ತದೇಹಸಂಬಂಧೇನ ಹಿ ದೇಹಿತ್ವಮ್ । ಅನ್ಯಥಾ ಮಾತುರುದರಸ್ಥಶಿಶೋರಪಿ ಮಾತೃದೇಹೇನ ದೇಹಿತ್ವಪ್ರಸಂಗಃ ।

ಸ್ವಕರ್ಮಚ ಪ್ರಾಕ್ತನಂ ನಷ್ಟಂ ಪಶ್ಚಾತ್ತನಮನುತ್ಪನ್ನಮ್ । ಅತಸ್ತನ್ನಿಮಿತ್ತದೇಹಿತಾಪಿ ಕಥಂ ಸ್ಯಾದಿತಿ ಭಾವಃ । ಕೃತಹಾನ್ಯಕೃತಪ್ರಾಪ್ತ್ಯಾ ಕೃತಹಾನಿಸಹಿತಾಕೃತಪಾಪ್ತ್ಯಾ । ಸ್ವರ್ಗಾದಿಫಲಜನಕತ್ವೇನ ಶ್ರುತಪುಣ್ಯಪಾಪಾದಿಕರ್ಮಣಾಂ ಫಲೋತ್ಪತ್ತೇಃ ಪೂರ್ವಮೇವ ನಾಶಾಖ್ಯಕೃತಹಾನಿ-ರೂಪದೋಷೇಣ ಕರ್ಮಾನಾರ್ಜಿತದೇಹಾದಿ ಪ್ರಾಪ್ತ್ಯಾಖ್ಯಾಕೃತಾಭ್ಯಾಗಮಾಖ್ಯ ದೋಷೇ ಚೇತ್ಯರ್ಥಃ ॥ ೪೬೧ ॥

**ವಿವರಣೆ**— ಪೂರ್ವಾಂಶದಲ್ಲಿ ವಿದ್ಯಮಾನವಾದ ಕರ್ಮವು, ಪೂರ್ವಾಂಶಾಜ್ಞಾನೋ-ಪಾದಾನಕವಾಗಿರುವುದರಿಂದ ಪೂರ್ವಾಂಶವು ನಾಶವಾದಾಗ ಅಜ್ಞಾನವೂ ನಾಶವಾಗಿರುವುದರಿಂದ ಅಜ್ಞಾನಕಾರ್ಯವಾದ ಕರ್ಮವೂ ನಾಶವಾಗಿದೆ. ಉತ್ತರಾಂಶದಲ್ಲಿ ಇನ್ನೂ ಯಾವ ಕರ್ಮವೂ ಉತ್ಪತ್ತಿಯಾಗಿಲ್ಲ. ದೇಹವು ಬರಬೇಕಾದರೆ ದೇಹಕ್ಕೆ ಕಾರಣವಾದ ಪೂರ್ವಕರ್ಮ ಇರಬೇಕು. ಉತ್ತರದೇಹಕ್ಕೆ ಬರುವಾಗ ಅವನಿಗೆ ಯಾವ ಕರ್ಮವೂ ಇಲ್ಲದಿರುವಾಗ ಅವನಿಗೆ ದೇಹಿತ್ವವು ಹೇಗೆ ಉಂಟಾಗುತ್ತದೆ? ತನ್ನ ಕರ್ಮದಿಂದ ಸಂಪಾದಿಸಿದ ದೇಹದ ಸಂಬಂಧವೇ ದೇಹಿತ್ವವಷ್ಟೇ? ಇಲ್ಲದಿದ್ದರೆ ತಾಯಿಯ ಗರ್ಭದಲ್ಲಿರುವ ಶಿಶುವಿಗೂ ತಾಯಿಯ ದೇಹದಿಂದ ದೇಹಿತ್ವವು ಬರಬೇಕಾದೀತು. ಆದ್ದರಿಂದ ಹಿಂದಿನ ದೇಹದಲ್ಲಿ ಮಾಡಿದ ಪುಣ್ಯಪಾಪಗಳೆಲ್ಲವೂ ನಷ್ಟವಾಗಿವೆ. ಆದ್ದರಿಂದ ಕೃತಹಾನಿಯು ಉಂಟಾಯಿತು. ಹೊಸದೇಹಕ್ಕೆ ಬೇಕಾಗಿರುವ ಯಾವ ಕರ್ಮವೂ ಇಲ್ಲದಿರುವುದರಿಂದ ಅಕೃತ ಕರ್ಮದ ಫಲವಾದ ಈ ದೇಹವು ಅಕೃತಾಭ್ಯಾಗಮರೂಪವಾಯಿತು. ಕೃತಹಾನಿ ಮತ್ತು ಅಕೃತಾಗಮವನ್ನು ಶಾಸ್ತ್ರಕಾರರೆಲ್ಲರೂ ನಿಂದಿಸುತ್ತಾರೆ. ಆದ್ದರಿಂದ ಈ ಮತವು ನಿಂದ್ಯವಾದುದು ಎಂದು ಅಭಿಪ್ರಾಯ.

**ಅಂತೇಮೃತಿಶ್ಚ ಕಾ ವಾಚ್ಯಾ ದೇಹಸ್ಯಾಂಶಾಂತರೇ ಸ್ಥಿತೇಃ ।**
**ಇಂದ್ರಿಯೋಪರತೇಃ ಸಾ ಚೇತ್ ಸುಪ್ತಿಶ್ಚ ಮರಣಂ ಭವೇತ್ ॥ ೪೬೨ ॥**

**ಚಿದ್ರೂಪಸಾಕ್ಷಿಸಾಮರ್ಥ್ಯಾತ್ ತದ್ವತ್ ಸ್ಯಾದ್ಧಿ ಪ್ರಬುದ್ಧತಾ ॥ ೪೬೩ ॥**

**ಅರ್ಥ**— ದೇಹಸ್ಯ= ದೇಹವು, ಅಂಶಾಂತರೇ ಸ್ಥಿತೇಃ= ಬ್ರಹ್ಮನ ಇನ್ನೊಂದು ಅಂಶದಲ್ಲಿರುವುದರಿಂದ, ಅಂತೇ= ಕೊನೆಯಲ್ಲಿ, ಮೃತಿಶ್ಚ= ಮೃತಿಯನ್ನಾದರೂ, ಕಾ ವಾಚ್ಯಾ= ಏನು ಎಂದು ಹೇಳಬೇಕು, ಇಂದ್ರಿಯೋಪರತೇಃ= ಇಂದ್ರಿಯೋಪರತಿ ಕಾರಣದಿಂದ, ಸಾ ಚೇತ್= ಆ ಮೃತಿಯು ಎಂದು ಹೇಳಿದರೆ, ಸುಪ್ತಿಶ್ಚ= ಸುಷುಪ್ತಿಯೂ ಕೂಡ, ಮರಣಂ ಭವೇತ್= ಮರಣವಾಗಬೇಕಾದ ಪ್ರಸಂಗವು ಬರುತ್ತದೆ, ಚಿದ್ರೂಪಸಾಕ್ಷಿಸಾಮರ್ಥ್ಯಾತ್= ಚೈತನ್ಯ ರೂಪವಾದ ಸಾಕ್ಷಿಯ ಸಾಮರ್ಥ್ಯದಿಂದ, ತದ್ವತ್= ಅದರಂತೆಯೇ, ಪ್ರಬುದ್ಧತಾ= ಪ್ರಬೋಧವು, ಸ್ಯಾತ್ ಹಿ= ಉಂಟಾಗುವುದಷ್ಟೇ.

**ಅನುವಾದ–** ದೇಹವು ಬ್ರಹ್ಮನ ಅಂಶಾಂತರದಲ್ಲಿರುವುದರಿಂದ ಕೊನೆಯಲ್ಲಿ ಮೃತಿಯನ್ನಾದರೂ ಏನೆಂದು ಹೇಳಬೇಕು? ಇಂದ್ರಿಯೋಪರತಿಯೇ ಮರಣವೆಂದು ಹೇಳಿದರೆ, ಸುಪ್ತಿಯೂ ಮರಣವಾಗಬೇಕಾದ ಪ್ರಸಂಗವು ಬರುತ್ತದೆ. ಚಿದ್ರೂಪಸಾಕ್ಷಿಯ ಸಂಬಂಧವು ಯಾವಾಗಲೂ ಇರುವುದರಿಂದ ಮೃತನಾದವನಿಗೂ ಪುನರುತ್ಥಾನವೇ ಆಗಬೇಕಾಗುತ್ತದೆ.

**ಭಾವವಿಲಾಸಿನೀ–** ದೂಷಣಾಂತರಂ ಚಾಹ – **ಅಂತ ಇತಿ** ॥ ಅಂಶಾಂತರೇ ಬ್ರಹ್ಮ ಚೈತ-ನ್ಯಾಂಶಾಂತರೇ । ಶಂಕತೇ – **ಇಂದ್ರಿಯೇತಿ** ॥ ಉತ್ತರಮಾಹ – **ಸುಪ್ತಿಶ್ಚೇತಿ** ॥ ದೂಷಣಾಂತರಂ ಚಾಹ– **ಚಿದ್ರೂಪೇತಿ** ॥ ಪ್ರಬುದ್ಧತಾ ಮೃತಸ್ಯ ಪುನರುತ್ಥಾನಮ್ । ಅಂಗೀಕೃತ್ಯೇದಮುದಿತಮ್ । ವಸ್ತುತಸ್ತು ಚಿದಂಶಸಂಬಂಧಸ್ಯ ಸರ್ವತ್ರ ಸತ್ವಾದುಪರತಿರೇವ ನ' ಸ್ಯಾದಿತ್ಯಪಿ ದ್ರಷ್ಟವ್ಯಮ್ ॥ ೪೬೨-೪೬೩॥

**ವಿವರಣೆ–** ಇಂದ್ರಿಯೋಪರತಿಯೇ ಮರಣವೆಂದಾದರೆ ಎಂದು ಹೇಳಿದ ಅತಿಪ್ರಸಂಗವು ಅಭ್ಯುಪಗಮವಾದ. ವಸ್ತುತಃ ಚಿದಂಶಸಂಬಂಧವು ಯಾವಾಗಲೂ ಇರುವುದರಿಂದ ಇಂದ್ರಿಯೋಪರತಿಯೇ ಉಂಟಾಗಲಾರದು.

ಉಪಾದೇಯಮುಪಾದಾನಗತ್ಯೈವಾನ್ಯತ್ರ ಗಚ್ಛತಿ ।
ಪೂರ್ವಾಂಶಾಜ್ಞಾನಜೋ ದೇಹಃ ಕಥಂ ತಸ್ಯ ಹ್ಯಚಾಲನೇ ।
ಚಲೇದನ್ಯತ್ರ ತನ್ಮಾತಾ ಗುರ್ವಿಣೀ ಸರ್ವದಾ ತವ ॥ ೪೬೪ ॥

**ಅರ್ಥ–** ಉಪಾದೇಯಂ= ಉಪಾದೇಯವಾದ ಕಾರ್ಯವು, ಉಪಾದಾನಗತ್ಯೈವ= ಉಪಾದಾನ ಕಾರಣದ ಗಮನದಿಂದಲೇ, ಅನ್ಯತ್ರ= ಬೇರೆಯ ದೇಶಕ್ಕೆ, ಗಚ್ಛತಿ= ಹೋಗುತ್ತದೆ, ಪೂರ್ವಾಂಶಾಜ್ಞಾನಜೋ ದೇಹಃ= ಪೂರ್ವ ಚೈತನ್ಯಾಂಶದ ಅಜ್ಞಾನದಿಂದ ಉಂಟಾದ ದೇಹವು, ತಸ್ಯ ಹ್ಯಚಾಲನೇ= ಆ ಅಜ್ಞಾನವು ಚಲಿಸದಿದ್ದರೆ, ಕಥಂ ಅನ್ಯತ್ರ ಚಲೇತ್= ಹೇಗೆ ಇನ್ನೊಂದು ಕಡೆಗೆ ಹೋಗುತ್ತದೆ, ತತ್= ಆದ್ದರಿಂದ, ತವ ಮಾತಾ= ನಿನ್ನ ತಾಯಿಯು, ಸರ್ವದಾ ಗುರ್ವಿಣೀ= ಯಾವಾಗಲೂ ಗರ್ಭಿಣಿಯಾಗಿಯೇ ಇರುತ್ತಾಳೆ.

**ಅನುವಾದ–** ಉಪಾದಾನವು ಇನ್ನೊಂದು ಕಡೆಗೆ ಹೋದಾಗ ಮಾತ್ರ ಉಪಾದೇಯವು ಇನ್ನೊಂದು ಕಡೆಗೆ ಹೋಗುತ್ತದೆ. ಪೂರ್ವ ಚೈತನ್ಯಾಂಶದ ಅಜ್ಞಾನಕಾರ್ಯವಾದ ದೇಹವು ಆ ಅಜ್ಞಾನದ ಚಲನೆ ಇಲ್ಲದೇ ಇನ್ನೊಂದು ಕಡೆಗೆ ಹೇಗೆ ಹೋದೀತು? ಆದ್ದರಿಂದ ನಿನ್ನ ತಾಯಿಯು ಯಾವಾಗಲೂ ಗರ್ಭಿಣಿಯಾಗಿಯೇ ಇರುತ್ತಾಳೆ.

**ಭಾವವಿಲಾಸಿನೀ–** ಪ್ರಕಾರಾಂತರೇಣ ದೇಹಚಲನಾಯೋಗಮುಪಪಾದಯನ್ ಪರಂ ಪರಿಹಸತಿ – **ಉಪಾದೇಯಮಿತಿ** ॥ ನಹಿ ಮೃತ್ಪಿಂಡಗಮನಂ ವಿನಾ ಘಟೋ ಗಚ್ಛತೀತಿ ಭಾವಃ । ತಸ್ಯ ಪೂರ್ವಾಂಶಾಜ್ಞಾನಸ್ಯ । ತತ್ತಸ್ಮಾತ್ ಗರ್ಭಸ್ಥಶಿಶುಚಲನಾಯೋಗಾತ್ ॥ ೪೬೪ ॥

**ವಿವರಣೆ–** ದೇಹವು ಅಜ್ಞಾನದ ಕಾರ್ಯ. ಅಜ್ಞಾನವು ನಿಷ್ಕ್ರಿಯವಾದುದು. ಆದ್ದರಿಂದ ಅದಕ್ಕೆ ಗಮನಾಗಮನಾದಿರೂಪ ಕ್ರಿಯೆಯಿಲ್ಲ. ಉಪಾದಾನಕ್ಕೆ ಗಮನಾಗಮನ-ರೂಪವಾದ ಕ್ರಿಯೆ ಇಲ್ಲದಿರುವಾಗ ಉಪಾದೇಯವಾದ ಕಾರ್ಯಕ್ಕೆ ಗಮನಾದಿ ರೂಪಕ್ರಿಯೆಯು ಕೂಡುವುದಿಲ್ಲ. ಆದ್ದರಿಂದ ತಾಯಿಯ ಗರ್ಭದಲ್ಲಿರುವ ಶಿಶುವಿಗೆ ಹೊರಗೆ ಬರುವುದಕ್ಕೆ ಯಾವುದೇ ಕಾರಣವು ಇಲ್ಲದಿರುವುದರಿಂದ ಅದು ಒಳಗೇ ಇರಬೇಕಾಗುತ್ತದೆ ಎಂದು ಪರಿಹಾಸ ಮಾಡುತ್ತಾರೆ.

**ಉತ್ಪತ್ತಿಸ್ಥಿತಿನಾಶಾಶ್ಚ ತತ್ರ ತತ್ರೈವ ದೇಹಿನಾಮ್ ।**
**ಭವೇಯುರ್ನಿಷ್ಕ್ರಿಯಾಸಂಗಾದ್ ದೇಹೋಽಪಿ ಸ್ಯಾದ್ಧಿ ನಿಷ್ಕ್ರಿಯಃ ॥ ೪೬೫ ॥**

**ಅರ್ಥ–** ದೇಹಿನಾಂ= ದೇಹಿಗಳಿಗೆ, ಉತ್ಪತ್ತಿಸ್ಥಿತಿನಾಶಾಶ್ಚ= ಉತ್ಪತ್ತಿಸ್ಥಿತಿನಾಶಗಳು, ತತ್ರ ತತ್ರೈವ= ಒಂದೇ ಕಡೆಯಲ್ಲಿಯೇ, ಭವೇಯುಃ= ಆಗಬೇಕಾಗುತ್ತವೆ, ನಿಷ್ಕ್ರಿಯಾಸಂಗಾತ್= ನಿಷ್ಕ್ರಿಯವಾದ ಚೈತನ್ಯದ ಸಂಬಂಧದಿಂದ, ದೇಹೋಽಪಿ= ದೇಹವೂ ಕೂಡ, ನಿಷ್ಕ್ರಿಯಃ ಸ್ಯಾತ್= ನಿಷ್ಕ್ರಿಯವಾಗುತ್ತದೆ.

**ಅನುವಾದ– ದೇಹಿಗಳಿಗೆ ಉತ್ಪತ್ತಿ ಸ್ಥಿತಿನಾಶಗಳು ಒಂದೇ ಕಡೆಯಲ್ಲಿ ಆಗಬೇಕಾಗುತ್ತವೆ. ನಿಷ್ಕ್ರಿಯವಾದ ಚೈತನ್ಯ ಸಂಬಂಧದ ಕಾರಣದಿಂದ ಅಥವಾ ನಿಷ್ಕ್ರಿಯವಾದ ಅಜ್ಞಾನ ಉಪಾದಾನಕವಾದ ಕಾರಣದಿಂದ ದೇಹವೂ ಕೂಡ ನಿಷ್ಕ್ರಿಯವೇ ಆಗುತ್ತದೆ.**

**ಭಾವವಿಲಾಸಿನೀ–** ತತ್ರ ತತ್ರ ಯತ್ರ ಯತ್ರೋತ್ಪತ್ತಿಸ್ತತ್ರ ತತ್ರೈವ ॥ ೪೬೫ ॥

**ವಿವರಣೆ–** ದೇಹದ ಚಲನೆಗೆ ಯಾವುದೇ ಕಾರಣವಿಲ್ಲದಿರುವುದರಿಂದ ಎಲ್ಲಿ ಉತ್ಪತ್ತಿಯೋ ಅಲ್ಲಿಯೇ ಸ್ಥಿತಿ, ಅಲ್ಲಿಯೇ ಮರಣ ಉಂಟಾಗಲಿ ಎಂದು ಈ ಶ್ಲೋಕದಲ್ಲಿ ಆಪಾದನೆ ಮಾಡುತ್ತಾರೆ.

**ವ್ಯಾಪ್ತಾಂಶಸ್ಯೈವ ಜೀವತ್ವೇ ಗಜಾದೌ ಗಜಮಾತ್ರತಾ ।**
**ಅಣಾವಣುಪ್ರಮಾಣಂ ಚೇತ್ಯಾಗತಂ ಹ್ಯತಿನಿಂದಿತಂ ॥ ೪೬೬ ॥**

**ಅರ್ಥ–** ವ್ಯಾಪ್ತಾಂಶಸ್ಯೈವ= ವ್ಯಾಪ್ತವಾದ ಅಂಶಕ್ಕೇ, ಜೀವತ್ವೇ= ಜೀವಭಾವ-ವಿರುವುದಾದರೆ, ಗಜಾದೌ= ಆನೆ ಮೊದಲಾದವುಗಳಲ್ಲಿ, ಗಜಮಾತ್ರತಾ= ಆನೆಯ ಪರಿಮಾಣವಿರುತ್ತದೆ, ಅಣೌ= ಚಿಕ್ಕ ಶರೀರದಲ್ಲಿ, ಅಣುಪ್ರಮಾಣಂ= ಚಿಕ್ಕ ಪರಿಮಾಣ-ವುಳ್ಳದ್ದಾಗಿರುತ್ತದೆ, ಇತಿ= ಎಂದು, ಅತಿ ನಿನಿಂದಿತಂ= ಅತ್ಯಂತ ನಿಂದ್ಯವಾದ ಪ್ರಸಂಗವು, ಆಗತಂ ಹಿ= ಉಂಟಾಯಿತಷ್ಟೇ.

**ಅನುವಾದ– ವ್ಯಾಪ್ತವಾದ ಬ್ರಹ್ಮನ ವ್ಯಾಪ್ತವಾದ ಅಂಶವೇ ಜೀವವೆಂದು ಹೇಳಿದರೆ ಆ ಜೀವನಿಗೆ ಗಜದಲ್ಲಿ ಗಜ ಪರಿಮಾಣವು, ಇರುವೆಯಲ್ಲಿ ಇರುವೆಯ ಪರಿಮಾಣವು**

ಪ್ರಾಪ್ತವಾಗುವುದರಿಂದ ಅತಿ ನಿಂದಿತವಾದ ಜೈನ ಮತದ ಅಂಗೀಕಾರ ಪ್ರಸಂಗವು ಉಂಟಾಗುತ್ತದೆ.

**ಭಾವವಿಲಾಸಿನೀ–** ದೂಷಣಾಂತರಂ ಚಾಹ – **ವ್ಯಾಪ್ತೇತಿ ॥** ಗಜವಮಾತ್ರತಾ ಜೀವಸ್ಯ ಗಜಪ್ರಮಾಣತಾ। ಆಕಾಶಸ್ಯ ಘಟಪ್ರದೇಶ ಇವ ವ್ಯಾಪ್ತಚಿದಂಶಸ್ಯ ಯಾವದ್ಗಜದೇಹಪ್ರದೇಶೇಽಪಿ ವಿದ್ಯಮಾನತ್ವಾದಿತಿ ಭಾವಃ। ಅಣೌ ಪಿಪೀಲಿಕಾದೌ। ಪೂರ್ವೋಕ್ತೈವ ಯುಕ್ತಿಃ। ಅತಿನಿಂದಿತಂ ಜೈನಮತಮಿತ್ಯರ್ಥಃ ॥ ೪೬೬ ॥

**ವಿವರಣೆ–** ಔಪಾಧಿಕವಾದ ಘಟಾಕಾಶವು ಘಟದಲ್ಲಿ ವ್ಯಾಪಿಸಿಕೊಂಡಿರುತ್ತದೆ. ಅದರಂತೆ ದೇಹ ರೂಪ ಉಪಾಧಿಯಿಂದ ಕವಲಿತವಾದ ವ್ಯಾಪ್ತ ಚೈತನ್ಯದ ಅಂಶವು ದೇಹವನ್ನು ವ್ಯಾಪಿಸಿಕೊಂಡಿರುತ್ತದೆ. ಆದ್ದರಿಂದ ಬೇರೆ ಬೇರೆ ದೇಹದಲ್ಲಿ ಬೇರೆ ಬೇರೆ ಪರಿಮಾಣವನ್ನು ಒಪ್ಪಬೇಕಾಗಿರುವುದರಿಂದ ನಿಂದಿತವಾದ ಜೈನ ಮತದ ಪ್ರವೇಶ ಉಂಟಾಗುತ್ತದೆ ಎಂದು ಅಭಿಪ್ರಾಯ.

**ಯೋಂಶೋ ವಿಪ್ರತ್ವಮಾಪೇದೇ ಸ ಏವಾಂಶಃ ಕ್ಷಣಾಂತರೇ ।**
**ಹೀನೋಪಿ ಸ್ಯಾದಿತಿ ಪ್ರಾಪ್ತಾ ನಾನಾಯೋನಿಃ ಪದೇಪದೇ ॥ ೪೬೭ ॥**

**ಅರ್ಥ–** ಯಃ ಅಂಶಃ= ಯಾವ ಅಂಶವು, ವಿಪ್ರತ್ವಮಾಪೇದೇಃ= ಬ್ರಾಹ್ಮಣತ್ವವನ್ನು ಹೊಂದಿತೋ, ಸ ಏವಾಂಶಃ= ಅದೇ ಅಂಶವು, ಕ್ಷಣಾಂತರೇ= ಇನ್ನೊಂದು ಕ್ಷಣದಲ್ಲಿ, ಹೀನೋಪಿ ಸ್ಯಾತ್= ಹೀನವೂ ಆದೀತು, ಇತಿ= ಎಂದು, ಪದೇ ಪದೇ= ಕ್ಷಣಕ್ಷಣಕ್ಕೆ, ನಾನಾಯೋನಿಃ= ಅನೇಕ ಯೋನಿಗಳು, ಪ್ರಾಪ್ತಾ= ಪ್ರಾಪ್ತವಾಗುತ್ತವೆ.

**ಅನುವಾದ–** ಯಾವ ಅಂಶದಲ್ಲಿ ಬ್ರಾಹ್ಮಣ ದೇಹಸಂಬಂಧದಿಂದ ಬ್ರಾಹ್ಮಣತ್ವವು ಉಂಟಾಯಿತೋ ಅದೇ ಅಂಶದಲ್ಲಿ ಇನ್ನೊಂದು ಕ್ಷಣದಲ್ಲಿ ಶೂದ್ರ ದೇಹದ ಸಂಬಂಧ ಉಂಟಾದರೆ ಆ ಅಂಶಕ್ಕೆ ಶೂದ್ರತ್ವವೇ ಪ್ರಾಪ್ತವಾಗುತ್ತವೆ. ಹೀಗೆ ಒಂದೇ ಅಂಶಕ್ಕೆ ಕ್ಷಣಕ್ಷಣಕ್ಕೆ ಬೇರೆ ಬೇರೆ ಯೋನಿಗಳು ಪ್ರಾಪ್ತವಾಗುತ್ತವೆ.

**ಭಾವವಿಲಾಸಿನೀ–** ದೂಷಣಾಂತರಂ ಚಾಹ – **ಯೋಂಽಶ ಇತಿ ॥** ಯಃ ಅಂಶಃ ವ್ಯಾಪ್ತಬ್ರಹ್ಮಣ ಏಕತ್ರ ಸ್ಥಿರೀಭೂತೋಽಂಶಃ। ವಿಪ್ರತ್ವಂ ತತ್ರೈವಾಗತವಿಪ್ರದೇಹಸಂಗೇ ಸತಿ ವಿಪ್ರತ್ವಂ ಪ್ರಾಪ। ಕ್ಷಣಾಂತರೇ ವಿಪ್ರದೇಹಸ್ಯ ತತೋಗಮನಾನಂತರಂ ಚಂಡಲಾದೇಹಾದೇಸ್ತತ್ರಗಮನಕ್ಷಣೇ। ಇತಿ ಹೇತೋಃ ॥ ೪೬೭ ॥

**ವಿವರಣೆ–** ವ್ಯಾಪ್ತವಾದ ಬ್ರಹ್ಮನ ಯಾವ ಅಂಶವು ಬ್ರಾಹ್ಮಣ ದೇಹದ ಸಂಬಂಧದಿಂದ ಬ್ರಾಹ್ಮಣತ್ವವನ್ನು ಪಡೆದಿದ್ದಿತೋ, ಅದೇ ಅಂಶವು ಇನ್ನೊಂದು ಕ್ಷಣದಲ್ಲಿ ಅಲ್ಲಿಗೆ ಶೂದ್ರದೇಹವು ಬಂದಾಗ ಶೂದ್ರತ್ವವನ್ನೇ ಪಡೆಯುತ್ತದೆ. ಅನಂತರ ಇನ್ನೊಂದು

ವೈಶ್ಯದೇಹವು ಬಂದಾಗ ವೈಶ್ಯದೇಹವನ್ನು ಪಡೆಯುತ್ತದೆ. ಹೀಗೆ ಕ್ಷಣ ಕ್ಷಣಕ್ಕೆ ಒಂದೇ ಅಂಶಕ್ಕೆ ನಾನಾ ಯೋನಿಗಳು ಪ್ರಾಪ್ತವಾಗುತ್ತವೆ ಎಂದು ದೂಷಣವನ್ನು ಇಲ್ಲಿ ಹೇಳುತ್ತಾರೆ.

**ಉತ್ಕ್ರಾಂತಿಗತ್ಯಾಗತೀನಾಮಿತ್ಯಾಹ ಬ್ರಹ್ಮಸೂತ್ರಕೃತ್ ।**
**ಅತೋಽಣುಜೀವತಾ ಶ್ಲಾಘ್ಯಾ ಯೋಗ್ಯಾ ವಾಗ್ಮಿಜನಪ್ರಿಯಾ ॥ ೪೬೮ ॥**

**ಅರ್ಥ–** ಬ್ರಹ್ಮಸೂತ್ರಕೃತ್= ಬ್ರಹ್ಮಸೂತ್ರವನ್ನು ರಚನೆ ಮಾಡಿದ ವೇದವ್ಯಾಸರು, ಉತ್ಕ್ರಾಂತಿಗತ್ಯಾಗತೀನಾಂ= ಉತ್ಕ್ರಾಂತಿ, ಗತಿ ಮತ್ತು ಆಗತಿಗಳ ಕಾರಣದಿಂದ, ಜೀವನು ಅಣುವಾಗಿದ್ದಾನೆ, ಇತ್ಯಾಹ= ಎಂದು ಹೇಳಿದ್ದಾರೆ, ಅತಃ= ಆದ್ದರಿಂದ, ಅಣುಜೀವತಾ= ಜೀವನಿಗೆ ಅಣುಪರಿಮಾಣವು, ಶ್ಲಾಘ್ಯಾ= ಶ್ಲಾಘ್ಯವಾದುದು, ಯೋಗ್ಯಾ= ಯೋಗ್ಯವಾದುದು, ಮತ್ತು ವಾಗ್ಮಿಜನಪ್ರಿಯಾ= ವಿದ್ವಾಂಸರಿಗೆ ಪ್ರಿಯವಾದುದು.

**ಅನುವಾದ–** ಬ್ರಹ್ಮಸೂತ್ರಕಾರರಾದ ವೇದವ್ಯಾಸರು ಉತ್ಕ್ರಾಂತಿಗತ್ಯಾಗತೀನಾಂ ಎಂಬ ಸೂತ್ರವನ್ನು ರಚಿಸಿ ಉತ್ಕ್ರಾಂತಿ, ಗಮನ ಮತ್ತು ಆಗಮನಗಳು ಇರುವುದರಿಂದ ಜೀವನು ಅಣು ಎಂದು ಹೇಳಿದ್ದಾರೆ. ಆದ್ದರಿಂದ ವ್ಯಾಪ್ತಾಂಶಕ್ಕೆ ಜೀವತ್ವವು ಅಯುಕ್ತವಾದುದರಿಂದ ಜೀವನ ಅಣುಪರಿಮಾಣವು ಯೋಗ್ಯವಾದುದು, ಶ್ಲಾಘ್ಯವಾದುದು ಮತ್ತು ವಿದ್ವಾಂಸರಿಗೆ ಪ್ರಿಯವಾದುದು.

**ಭಾವವಿಲಾಸಿನೀ– ಅತಃ ಸ್ಥಿರಾಂಶಜೀವಭಾವಸ್ಯಾಯುಕ್ತತ್ವಾತ್ । ಅಣುಜೀವತಾ ಅಣೂನಾಮಿತಸ್ತತೋಗಮನಶೀಲಾನಾಂ ಸೂಕ್ಷ್ಮಾಣಾಂ ಚಿದಂಶಾನಾಂ ಜೀವತಾ, ತ್ವದಭಿಮತದ್ವಿತೀಯಪಕ್ಷಾನುಸಾರೇಣ ವಾ ಅಸ್ಮಾಕಮಪ್ಯನುಮತತೃತೀಯಪಕ್ಷಾನುಸಾರೇಣ ವಾ ಶ್ಲಾಘ್ಯೇತ್ಯಾದಿನಾ ಸಂಬಂಧಃ ॥ ೪೬೮ ॥**

**ವಿವರಣೆ–** ಉತ್ಕ್ರಾಂತಿ ಎಂದರೆ ಮೋಕ್ಷಮಾರ್ಗದಲ್ಲಿ ಗಮನ. ಸ್ವರ್ಗನರಕಾದಿಗಳಲ್ಲಿ ಗಮನಾಗಮನ. ಈ ಕಾರಣದಿಂದ ಜೀವನು ಅಣು. ವ್ಯಾಪ್ತವಾದುದಕ್ಕೆ ಗಮನಾಗಮನಗಳು ಕೂಡುವುದಿಲ್ಲ ಎಂದು ಬ್ರಹ್ಮಸೂತ್ರಕಾರರು ನಿರ್ಧರಿಸಿದ್ದಾರೆ. ಆದ್ದರಿಂದ ಮೊದಲು ನಿನ್ನ ಮತರೀತ್ಯಾ ಶಂಕೆ ಮಾಡಿದ ದ್ವಿತೀಯ ಪಕ್ಷದಿಂದಾಗಲೀ ಅಥವಾ ನಮಗೆ ಅಭಿಮತವಾದ ತೃತೀಯ ಪಕ್ಷದಿಂದಾಗಲೀ ಜೀವನಿಗೆ ಅಣುತ್ವವನ್ನೇ ಒಪ್ಪಬೇಕು ಎಂದು ಅಭಿಪ್ರಾಯ.

**ಚಲದಂಶೋ ಹಿ ಜೀವಃ ಸ್ಯಾನ್ನ ಸ್ಥಿರಾಂಶಃ ಕದಾಚನ ।**
**ಚೈತನ್ಯಾಚಲನೇ ಕಸ್ಯ ಚಲನಂ ಸ್ಯಾಜ್ಜಗತ್ರಯೇ ॥ ೪೬೯ ॥**

**ಚಲಚ್ಚೇತನಹಸ್ತಸ್ಥೋ ಘಟಶ್ಚಲತಿ ನಾಪರಃ ॥ ೪೭೦ ॥**

**ಅರ್ಥ–** ಚಲದಂಶಃ= ಚಲಿಸುವ ಅಂಶವೇ, ಜೀವಃ ಸ್ಯಾತ್ ಹಿ= ಜೀವವಾಗಬೇಕಷ್ಟೇ, ಸ್ಥಿರಾಂಶಃ= ನಿಷ್ಕ್ರಿಯವಾದ ಅಂಶವು, ಕದಾಚನ= ಯಾವಾಗಲೂ, ನ= ಜೀವವಾಗುವುದಿಲ್ಲ, ಚೈತನ್ಯಾಚಲನೇ= ಚೈತನ್ಯವು ಚಲಿಸದಿದ್ದರೆ, ಜಗತ್ತ್ರಯೇ= ಮೂರು ಲೋಕಗಳಲ್ಲಿ, ಕಸ್ಯ= ಯಾವ ಪದಾರ್ಥದ, ಚಲನಂ ಸ್ಯಾತ್= ಚಲನವು ಉಂಟಾಗುತ್ತದೆ? ಚಲಚ್ಚೇತನ ಹಸ್ತಸ್ಥಃ= ಚಲಿಸುವ ಚೇತನನ ಕೈಯಲ್ಲಿರುವ, ಘಟಃ ಚಲತಿ= ಘಟವು ಚಲಿಸುತ್ತದೆ, ಅಪರಃ= ಹಾಗಲ್ಲದ ಘಟವು, ನ= ಚಲಿಸುವುದಿಲ್ಲ.

**ಅನುವಾದ– ಚಲಿಸುವ ಅಂಶವೇ ಜೀವನಾಗಬೇಕು. ನಿಷ್ಕ್ರಿಯವಾದ ಅಂಶವು ಎಂದೂ ಜೀವನಾಗಲು ಸಾಧ್ಯವಿಲ್ಲ. ಚೈತನ್ಯವು ಚಲಿಸದಿದ್ದರೆ ಮೂರು ಲೋಕದಲ್ಲಿ ಯಾವ ವಸ್ತುವು ಚಲಿಸೀತು? ಚಲಿಸುವ ಚೇತನನ ಕೈಯಲ್ಲಿರುವ ಘಟವು ಚಲಿಸುತ್ತದೆ. ಇಲ್ಲದಿದ್ದರೆ ಘಟವು ಚಲಿಸುವುದಿಲ್ಲವಷ್ಟೇ?**

**ಭಾವವಿಲಾಸಿನೀ– ಪೂರ್ವಪಕ್ಷೋಕ್ತದೂಷಣಂ ಸ್ಮಾರಯನ್ನಿಮಮೇವ ಪಕ್ಷಂ ಸ್ಥಿರೀಕರೋತಿ– ಚಲದಂಶ ಇತಿ ॥ ೪೬೯ ॥**

**ಚಲದಂಶಸ್ಯೈವ ಜೀವತ್ವಂ ಸರ್ವಾನುಭವಸಿದ್ಧಂ ಕರೋತಿ – ಚಲದಿತಿ ॥ ಸ್ವಗೃಹಾತ್ತಟಾಕ-ಪರ್ಯಂತಂ ಚಲತಶ್ಚೇತನಸ್ಯ ಹಸ್ತಸ್ಥಿತ ಇತ್ಯರ್ಥಃ ॥ ೪೭೦ ॥**

**ವಿವರಣೆ–** ಪೂರ್ವೋಕ್ತ ದೋಷವನ್ನು ಇನ್ನೊಂದು ಬಾರಿ ಸ್ಮರಣೆಗೆ ತಂದುಕೊಟ್ಟು ಚಲಿಸುವ ಅಂಶವೇ ಜೀವವಾಗಬೇಕೆಂಬ ಪ್ರಮೇಯವನ್ನು ಎಲ್ಲರ ಅನುಭವಾರೂಢ-ವಾಗಿ ಮಾಡುತ್ತಾರೆ. ಮನೆಯಿಂದ ಕೆರೆಯವರೆಗೂ ಹೋಗುವ ಚೇತನನ ಕೈಯಲ್ಲಿರುವ ಘಟವು ಚಲಿಸುತ್ತದೆ. ಮನೆಯಲ್ಲಿ ನೆಲದ ಮೇಲೆ ಇಟ್ಟ ಘಟವು ಚಲಿಸುವುದಿಲ್ಲ. ಆದ್ದರಿಂದ ಚಲಿಸುವ ಅಂಶವೇ ಜೀವನಾಗಬೇಕು ಎಂಬುದು ತಾತ್ಪರ್ಯ.

**ಪರಿಸ್ಪಂದಕ್ರಿಯಾ ನೈವ ಪರೇ ಬ್ರಹ್ಮಣಿ ತೇ ಮತೇ ।**
**ಸಹಸ್ರೋಪಾಧಿಸಂಬಂಧೇಽಪ್ಯಕ್ರಿಯಸ್ಯ ಕ್ರಿಯಾ ನ ಹಿ ॥ ೪೭೧ ॥**

**ಕಿಂ ಕ್ರಿಯಾ ನಿಷ್ಕ್ರಿಯೇ ವ್ಯೋಮ್ನಿ ಸ್ಯಾತ್ ಕಾರಕಶತೈರಪಿ ।**
**ಸ್ಥಿರಾಂಶಜೀವವಾದೋಽತೋ ನ ಸ್ಥಿರಃ ಪ್ರಾಜ್ಞಸಂಸದಿ ॥ ೪೭೨ ॥**

**ಅರ್ಥ–** ತೇ ಮತೇ= ನಿನ್ನ ಮತದಲ್ಲಿ, ಪರೇ ಬ್ರಹ್ಮಣಿ= ಪರಬ್ರಹ್ಮನಲ್ಲಿ, ಪರಿಸ್ಪಂದಕ್ರಿಯಾ= ಪರಿಸ್ಪಂದ ಕ್ರಿಯೆಯು, ನೈವ= ಇರುವುದೇ ಇಲ್ಲ, ಸಹಸ್ರೋಪಾಧಿ ಸಂಬಂಧೇಪಿ= ಸಹಸ್ರೋಪಾಧಿಗಳ ಸಂಬಂಧವಾದರೂ, ಅಕ್ರಿಯಸ್ಯ= ಕ್ರಿಯಾರಹಿತ-ವಾದುದರಲ್ಲಿ, ಕ್ರಿಯಾ ನ ಹಿ= ಕ್ರಿಯೆಯು ಉತ್ಪತ್ತಿಯಾಗುವುದಿಲ್ಲವಷ್ಟೇ, ಕಾರಕಶತೈರಪಿ= ಒಂದು ನೂರು ಕಾರಣಗಳಿಂದಲಾದರೂ, ನಿಷ್ಕ್ರಿಯೇ ವ್ಯೋಮ್ನಿ= ನಿಷ್ಕ್ರಿಯವಾದ

ಆಕಾಶದಲ್ಲಿ, ಕ್ರಿಯಾ= ಕ್ರಿಯೆಯು, ಸ್ಯಾತ್ ಕಿಂ= ಉಂಟಾಗುವುದೇನು? ಅತಃ= ಆ ಕಾರಣದಿಂದ, ಸ್ಥಿರಾಂಶ ಜೀವವಾದಃ= ಸ್ಥಿರನಾದ ಬ್ರಹ್ಮನ ಅಂಶವು ಜೀವ ಎಂಬ ವಾದವು, ಪ್ರಾಜ್ಞ ಸಂಸದಿ= ಪ್ರಾಜ್ಞರ ಸಭೆಯಲ್ಲಿ, ನ ಸ್ಥಿರಃ= ಉಳಿಯುವುದಿಲ್ಲ.

**ಅನುವಾದ–** ನಿನ್ನ ಮತದಲ್ಲಿ ಪರಬ್ರಹ್ಮನಲ್ಲಿ ಪರಿಸ್ಪಂದಕ್ರಿಯೆಯು ಇಲ್ಲವೇ ಇಲ್ಲ. ಸಹಸ್ರೋಪಾಧಿ ಸಂಬಂಧ ಉಂಟಾದರೂ, ಕ್ರಿಯಾಶೂನ್ಯವಾದ ವಸ್ತುವಿನಲ್ಲಿ ಕ್ರಿಯೆಯು ಉಂಟಾಗುವುದಿಲ್ಲವಷ್ಟೇ? ನೂರು ಕಾರಣಗಳಿಂದಾದರೂ ನಿಷ್ಕ್ರಿಯವಾದ ಆಕಾಶದಲ್ಲಿ ಕ್ರಿಯೆಯು ಉಂಟಾಗುವುದೇನು? ಆದ್ದರಿಂದ ಸ್ಥಿರವಾದ ಬ್ರಹ್ಮ ಚೈತನ್ಯದ ಅಂಶಗಳೇ ಜೀವರು ಎಂಬ ವಾದವು ಪ್ರಾಜ್ಞರ ಸಭೆಯಲ್ಲಿ ಶೋಭಿಸುವುದಿಲ್ಲ.

**ಭಾವವಿಲಾಸಿನೀ–** ನನು ಸ್ವಭಾವತೋ ನಿಷ್ಕ್ರಿಯಸ್ಯಾಪಿ ಮಾಯಾಖ್ಯೋಪಾಧಿವಶಾತ್ ಕ್ರಿಯಾ ಭವತೀತ್ಯಾಶಂಕಾಂ ಸಯುಕ್ತಿಕಂ ಪರಿಹೃತ್ಯ ಪುನರಣುತ್ವಮೇವ ದೃಢೀಕರೋತಿ – **ಪರಿಸ್ಪಂದೇತಿ ॥** ಅಕ್ರಿಯಸ್ಯ ಸ್ವಭಾವತಃ ಕ್ರಿಯಾರಹಿತಸ್ಯ ॥ ನಿಷ್ಕ್ರಿಯೇ ಸ್ವಭಾವತಃ ಕ್ರಿಯಾಽಯೋಗ್ಯೇ ॥ ಘಟಾದ್ಯುಪಾಧೀನಾಮಿತಸ್ತತೋಗಮನೇಽಪಿ ತದಂತಃಸ್ಥವ್ಯೋಮ್ನೋ ಗಮನಾದರ್ಶನಾದಿತಿ ಭಾವಃ । ಅತಃ ಪ್ರಯತ್ನಶತೇನಾಪಿ ವ್ಯಾಪ್ತೇ ವ್ಯೋಮ್ನಿ ಕ್ರಿಯಾಽದರ್ಶನಾತ್ ಸ್ಥಿರಾಂಶಜೀವ-ವಾದೋ ನ ಸ್ಥಿರ ಇತಿ ಸಂಬಂಧಃ । ಏತೇನ ಮಾಯಾವಾದ್ಯಭಿಮತದ್ವಿತೀಯ- ಪಕ್ಷೋಽಪಿ ನಿರಸ್ತಃ । ಕ್ರಿಯಾಯೋಗ್ಯತಟಾಕಜಲಾದುದ್ಧೃತಘಟಜಲಸ್ಯ ಕ್ರಿಯಾಸಂಭವೇಽಪಿ ವ್ಯಾಪ್ತತಯಾ ಕ್ರಿಯಾಯಾ ಅಯೋಗ್ಯೇ ಬ್ರಹ್ಮಣಿ ವ್ಯೋಮ್ನೀವೋಪಾಧಿಶತೇನ ಭಿನ್ನಭಿನ್ನಾಂಶೀಕರಣೇಽಪಿ ಸಕ್ರಿಯತ್ವಸಂಪಾದನಸ್ಯಾಶಕ್ಯತಯಾ ಸಕ್ರಿಯಸ್ಯದೇಹಾಂತಸ್ಥಜೀವಚೈತನ್ಯಸ್ಯ ದಹನಶಿಖಾತೋನ್ಯ-ಖದ್ಯೋತಪ್ರಭಾವತ್ ಬ್ರಹ್ಮಚೈತನ್ಯಾದನ್ಯತ್ವಸ್ಯೈವ ವಕ್ತವ್ಯತ್ವಾತ್ ॥ ೪೭೧-೪೭೨ ॥

**ವಿವರಣೆ–** ಸ್ವಾಭಾವಿಕವಾಗಿ ನಿಷ್ಕ್ರಿಯವಾದರೂ ಉಪಾಧಿಸಂಬಂಧದಿಂದ ಕ್ರಿಯೆಯು ಉಂಟಾಗಬಹುದೆಂಬ ಶಂಕೆಯನ್ನು ಯುಕ್ತಿ ಸಹಿತವಾಗಿ ನಿರಾಕರಿಸಿ, ಜೀವರ ಅಣುತ್ವವನ್ನೇ ಇಲ್ಲಿ ಸಾಧಿಸುತ್ತಾರೆ. ಸ್ವಾಭಾವಿಕವಾಗಿ ಕ್ರಿಯಾಯೋಗ್ಯವಾದ ವಸ್ತುವಿನಲ್ಲಿಯೇ ಔಪಾಧಿಕವಾಗಿ ಕ್ರಿಯೆಯು ಉಂಟಾಗುತ್ತದೆ. ಯಾವುದು ಸ್ವಾಭಾವಿಕ ಕ್ರಿಯೆಗೆ ಅಯೋಗ್ಯವೋ ಅದರಲ್ಲಿ ಉಪಾಧಿಗಳಿಂದಲೂ ಕ್ರಿಯೆಯು ಉಂಟಾಗುವುದಿಲ್ಲವೆಂದು ಆಕಾಶದ ದೃಷ್ಟಾಂತದಿಂದ ತಿಳಿಯುತ್ತದೆ. ಈ ಕಾರಣದಿಂದಲೇ ಹಿಂದೆ ವಿಕಲ್ಪ ಮಾಡಿದ ಮೂರು ಪಕ್ಷಗಳಲ್ಲಿ ಎರಡನೆ ಪಕ್ಷವಾದ ಸ್ಥಿರನಾದ ಬ್ರಹ್ಮನಿಂದ ಉದ್ಧೃತವಾದ ಅಂಶರು ಜೀವರು. ತಟಾಕೋದಕದಿಂದ ಘಟದಲ್ಲಿ ನೀರನ್ನು ತುಂಬಿದಂತೆ ಎಂಬ ಪಕ್ಷವು ನಿರಸ್ತವಾಯಿತು. ತಟಕಾ ಜಲದಲ್ಲಿ ಕ್ರಿಯಾಯೋಗ್ಯತ್ವವಿದೆ. ಆದ್ದರಿಂದ ಅದರಿಂದ ಉದ್ಧೃತವಾದ ಜಲದಲ್ಲಿ ಕ್ರಿಯೆಯು ಉಂಟಾಗಬಹುದು. ಆದರೆ ಬ್ರಹ್ಮನಲ್ಲಿ ಕ್ರಿಯಾ ಯೋಗ್ಯತ್ವವಿಲ್ಲದಿರುವುದರಿಂದ ಬ್ರಹ್ಮನಿಂದ ಉದ್ಧೃತವಾದ

ಜೀವಾಂಶಗಳೂ ಸಹ ಕ್ರಿಯಾಶೂನ್ಯವಾಗಿಯೇ ಇರಬೇಕು. ಎಂದರೆ ಎರಡನೇ ಪಕ್ಷವು ತಿರಸ್ಕರಿಸಲ್ಪಟ್ಟು, ಮೂರನೇ ಪಕ್ಷವೇ ಅಂಗೀಕರಿಸಲ್ಪಡಬೇಕು. ಅಗ್ನಿಶಿಖೆಗಿಂತ ಹೇಗೆ ಖದ್ಯೋತ ಪ್ರಕಾಶವು ಭಿನ್ನವಾಗಿದೆಯೋ, ಅದರಂತೆ ಬ್ರಹ್ಮನು ಸೂರ್ಯಪ್ರಕಾಶದಂತೆ. ಜೀವಪ್ರಕಾಶವು ಅಲ್ಪವಾದುದು ಮತ್ತು ಭಿನ್ನವಾದುದು ಎಂದೇ ಹೇಳಬೇಕು.

**ಅತಃ ಶ್ರೌತಾಣುತಾ ಸಿದ್ಧಾ ತವಾಪಿ ಚ ಮಮಾಪಿ ಚ ।**
**ದೇಹಾಂತಃಕರಣಾಂತಃಸ್ಥಃ ಸೋऽಧೋऽಂಚತ್ಯೂರ್ಧ್ವಮಂಚತಿ ॥ ೪೭೩ ॥**

**ಅರ್ಥ–** ಅತಃ= ಆದ್ದರಿಂದ, ಶ್ರೌತಾಣುತಾ= ಶ್ರುತಿಯಲ್ಲಿ ಹೇಳಲ್ಪಟ್ಟ ಅಣುತ್ವವು, ತವಾಪಿ ಚ ಮಮಾಪಿ ಚ= ನಿನಗೂ ಮತ್ತು ನನಗೂ, ಸಿದ್ಧಾ= ಸಿದ್ಧವಾಗುತ್ತವೆ, ದೇಹಾಂತಃ ಕರಣಾಂತಃಸ್ಥಃ= ದೇಹದ ಒಳಗಿರುವ, ಅಂತಃಕರಣದ ಒಳಗಿರುವ, ಸಃ= ಆ ಜೀವನು, ಅಧೋಂಚತಿ= ಕೆಳಮುಖವಾಗಿ ಗಮನವನ್ನು ಹೊಂದುತ್ತಾನೆ, ಊರ್ಧ್ವಮಂಚತಿ= ಮೇಲ್ಮುಖವಾಗಿಯೂ ಗಮನವನ್ನು ಹೊಂದುತ್ತಾನೆ.

**ಅನುವಾದ–** ಆದ್ದರಿಂದ ಶ್ರುತಿಯಲ್ಲಿ ಜೀವನಿಗೆ ಹೇಳಿದ ಅಣುತ್ವವು ನಿನಗೂ ಮತ್ತು ನನಗೂ ಸಿದ್ಧವಾಯಿತು. ದೇಹದ ಒಳಗೆ, ಅಂತಃಕರಣದ ಒಳಗೆ ಇರುವ ಜೀವನು (ಅಣುವಾದ ಕಾರಣದಿಂದ) ಊರ್ಧ್ವಮುಖವಾಗಿಯೂ ಮತ್ತು ಅಧೋಮುಖವಾಗಿಯೂ ಚಲಿಸುತ್ತಾನೆ.

**ಭಾವವಿಲಾಸಿನೀ–** ಅತಸ್ತೃತೀಯಪಕ್ಷ ಏವ ತ್ವಯಾಪ್ಯಾಶ್ರಯಣೀಯ ಇತ್ಯಾಹ – **ಅತ ಇತಿ** ॥ ಅತಃ ಸ್ಥಿರಾಂಶಜೀವಭಾವಸ್ಯಾಯುಕ್ತತ್ವಾತ್ । ಶ್ರೌತಾಣುತಾ ಅಣುರ್ಹ್ಯೇಷ ಆತ್ಮೇತಿ ಶ್ರುತಿಸಿದ್ಧ-ಸ್ವಾಭಾವಿಕಾಣುತಾ । ಉಪಲಕ್ಷಣಂ ಚೈತತ್ । ಬ್ರಹ್ಮಭಿನ್ನತಾ ಚೇತ್ಯಪಿ ದ್ರಷ್ಟವ್ಯಮ್ । ಸಃ ಸ್ವಾಭಾವಿಕಾಣುಜೀವಃ ॥ ೪೭೩ ॥

**ವಿವರಣೆ–** ಆದ್ದರಿಂದ ಮೂರನೆಯ ಪಕ್ಷವನ್ನೇ ಅಂಗೀಕರಿಸಬೇಕು ಎಂದು ಇಲ್ಲಿ ಹೇಳುತ್ತಾರೆ. ಅಣುರ್ಹ್ಯೇಷ ಆತ್ಮಾ ಎಂಬ ಶ್ರುತಿಯು ಜೀವನ ಅಣುತ್ವವನ್ನು ಹೇಳುತ್ತದೆ. ಉತ್ಕ್ರಾಂತಿ ಸೂತ್ರದಲ್ಲಿ ಸೂತ್ರಕಾರರೂ ಸಹ ಜೀವನ ಅಣುತ್ವವನ್ನೇ ಸಮರ್ಥಿಸಿದ್ದಾರೆ. ಆದ್ದರಿಂದ ಜೀವಾಣುತ್ವವನ್ನೇ ಅಂಗೀಕರಿಸಬೇಕು ಎಂದು ತಾತ್ಪರ್ಯ.

**ಏವಂ ಚೋಭಯತಃಪಾಶಾರಜ್ಜುರ್ಬಧ್ನಾತಿ ತೇ ಗಲಂ ॥ ೪೭೪ ॥**

**ಸ್ಥಿರಾಂಶಸ್ಯೈವ ಜೀವತ್ವೇ ಭವದೈಕ್ಯಕಥಾ ವೃಥಾ ।**
**ಚಲದಂಶಸ್ಯ ಜೀವತ್ವೇ ಭವದೈಕ್ಯಕಥಾ ವೃಥಾ ॥ ೪೭೫ ॥**

**ಅರ್ಥ–** ಏವಂ ಚ= ಈ ಎಲ್ಲ ಕಾರಣಗಳಿಂದ, ಉಭಯತಃ ಪಾಶಾರಜ್ಜುಃ= ಉಭಯತಃ ಪಾಶಾರಜ್ಜುವು (ಎರಡು ಕಡೆ ಕುಣಿಕೆ ಇರುವ ಪಾಶವು) ತೇ ಗಲಂ= ನಿನ್ನ ಕಂಠವನ್ನು,

ಬಧ್ನಾತಿ= ಬಂಧಿಸುತ್ತದೆ, ಸ್ಥಿರಾಂಶಸ್ಯೈವ ಜೀವತ್ವೇ= ಸ್ಥಿರಾಂಶವೇ ಜೀವವೆಂದು ಅಂಗೀಕರಿಸಿದರೆ, ಭವದೈಕ್ಯಕಥಾ= ನೀನು ಹೇಳುವ ಐಕ್ಯವಾದವು, ವೃಥಾ= ವ್ಯರ್ಥ-ವಾಗುತ್ತದೆ, ಚಲದಂಶಸ್ಯ ಜೀವತ್ವೇ= ಚಲಿಸುವ ಅಂಶವು ಜೀವನೆಂದು ಹೇಳಿದರೂ, ಭವದೈಕ್ಯಕಥಾ= ನಿನ್ನ ಐಕ್ಯವಾದವು, ವೃಥಾ= ವ್ಯರ್ಥವಾಗುತ್ತದೆ.

**ಅನುವಾದ–** ಆದ್ದರಿಂದ ಉಭಯತಃಪಾಶಾರಜ್ಜುವು ನಿನ್ನ ಕಂಠವನ್ನು ಬಂಧಿಸುತ್ತದೆ. ಸ್ಥಿರಾಂಶವು ಜೀವವೆಂದು ಹೇಳಿದರೂ ಐಕ್ಯಕಥೆಯು ವ್ಯರ್ಥವಾಗುತ್ತದೆ. ಚಲಿಸುವ ಅಂಶವು ಜೀವವೆಂದು ಹೇಳಿದರೂ ಐಕ್ಯಕಥೆಯು ವ್ಯರ್ಥವಾಗುತ್ತದೆ.

**ಭಾವವಿಲಾಸಿನೀ–** ಅತಃ ಪಕ್ಷದ್ವಯೇ ಪರಸ್ಯಾನುಪಪತ್ತಿರೇವೇತ್ಯಾಹ – **ಏವಂ ಚೇತಿ** ॥ ೪೭೪ ॥

ಉಭಯತಃಪಾಶಾರಜ್ಜುಮೇವೋಪಪಾದಯತಿ – **ಸ್ಥಿರೇತಿ** ॥ ಭವದೈಕ್ಯಕಥಾ ಭವತಾ ಕ್ರಿಯಮಾಣೈಕ್ಯಕಥಾ । ಶಿಷ್ಯಜೀವಸ್ಯ ತ್ವತ್ ಸಮೀಪಗಮನೇಽಸಮರ್ಥತ್ವಾತ್ತವ ಚ ತತ್-ಸಮೀಪಗಮನಾಸಮರ್ಥತ್ವೇನ ಭವದೈಕ್ಯಕಥಾ ಅರಣ್ಯೇ ರೋದನಮಾಸೀದಿತಿ ಭಾವಃ । ಚಲದಂಶಸ್ಯ ಜೀವತ್ವೇ ಉಕ್ತದೂಷಣಭಿಯಾ ಚಲದಂಶಜೀವತ್ವೇಽಂಗೀಕೃತೇ ಭವತಃ ಬ್ರಹ್ಮಣಾ ಸಹೈಕ್ಯಕಥಾ ವೃಥಾ । ಬ್ರಹ್ಮಣೋ ವಿಭುತಯಾ ಕ್ರಿಯಾಽಯೋಗ್ಯತ್ವೇನ ಸಕ್ರಿಯಸ್ಯ ಭವತ ಉದ್ಧೃತಾಂಶತಯಾಪ್ಯೈಕ್ಯಾಯೋಗಾದಿತಿ ಭಾವಃ ॥ ೪೭೫ ॥

**ವಿವರಣೆ–** ಉಭಯ ಪಾಶಾರಜ್ಜುವನ್ನೇ ವಿವರಿಸುತ್ತಾರೆ. ಸ್ಥಿರಾಂಶವು ಜೀವನೆಂದು ಹೇಳಿದರೆ ನಿನಗೆ ಶಿಷ್ಯನ ಬಳಿಗೆ ಹೋಗಲು ಸಾಧ್ಯವಿಲ್ಲ. ಶಿಷ್ಯನೂ ನಿನ್ನ ಬಳಿಗೆ ಬರಲು ಸಾಧ್ಯವಿಲ್ಲ. ಆದ್ದರಿಂದ ಐಕ್ಯಕಥೆಯು ಅರಣ್ಯರೋದನವಾಗುವುದರಿಂದ ವ್ಯರ್ಥ ವಾಗುತ್ತದೆ. ಚಲಿಸುವ ಅಂಶವು ಜೀವನೆಂದು ಅಂಗೀಕರಿಸಿದರೆ ಹಿಂದೆ ಹೇಳಿದ ಎಲ್ಲ ದೋಷಗಳಿಂದ ಅದು ಪ್ರಮಾಣವಿರುದ್ಧವಾಗುವುದರಿಂದ ಪ್ರಮಾಣವಿರುದ್ಧವಾದ ಕಥೆಯು ವ್ಯರ್ಥವೇ ಆಗುತ್ತದೆ ಎಂದು ಅಭಿಪ್ರಾಯ.

**ತಸ್ಮಾತ್ ತ್ವದೈಕ್ಯವಾದೋಽಯಂ ತವೈಕ್ಯಾಯೈವ ಕೇವಲಂ ॥ ೪೭೬ ॥**

**ಅರ್ಥ–** ತಸ್ಮಾತ್= ಆದ್ದರಿಂದ, ಅಯಂ= ಈ, ತ್ವದೈಕ್ಯವಾದಃ= ನಿನ್ನ ಐಕ್ಯವಾದವು, ಕೇವಲಂ= ಕೇವಲ, ತವ= ನಿನ್ನ, ಐಕ್ಯಾಯೈವ= ಏಕಾಕಿತ್ವಕ್ಕಾಗಿಯೇ ಇದೆ.

**ಅನುವಾದ–** ಆದ್ದರಿಂದ ಈ ನಿನ್ನ ಐಕ್ಯವಾದವು ನಿನ್ನನ್ನೇ ಏಕಾಂಗಿಯಾಗಿ ಮಾಡುತ್ತದೆ.

**ಭಾವವಿಲಾಸಿನೀ–** ತಸ್ಮಾತ್ ದ್ವಿಧೈಕ್ಯಪಕ್ಷಸ್ಯಾಪ್ಯನುಪಪನ್ನತ್ವಾತ್ । ಅಯಂ ಪ್ರಾಗುಕ್ತಪಕ್ಷದ್ವಯೋಕ್ತಃ ಕೇವಲಂ ತವೈಕ್ಯಾಯ ಏಕಾಕಿತ್ವಾಯ । ಯುಕ್ತಿವಿರುದ್ಧಪಕ್ಷಾಂಗೀಕಾರಿಣಸ್ತವ ಸಮೀಪಂ ಪ್ರತಿ

ಕೋಽಪಿ ಪ್ರೇಕ್ಷಾವಾನ್ನಾಯಾತಿ । ಅತಸ್ತ್ವಮೇಕಾಕೀ ಭೂಯಾ ಇತಿ ಭಾವಃ । ಏಕಾಕಿತ್ವಾಯೇತ್ಯ-ನುಕ್ತ್ವಾ ಐಕ್ಯಾಯೇತಿ ವಚನಮಂತತಃ ಕಸ್ಯಚಿದೈಕ್ಯಸ್ಯಾಸ್ಮಾಭಿರೇವ ದತ್ತತ್ವಾತ್ ವಯಮಪಿ ತವೋಪಕಾರಿಣ ಇತಿ ಪರಪರಿಹಾಸಾರ್ಥಮ್ ॥ ೪೭೬ ॥

**ವಿವರಣೆ–** ಎರಡು ರೀತಿಯಲ್ಲಿಯೂ ನಾವು ದೋಷವನ್ನು ಹೇಳಿರುವುದರಿಂದ ನಿನ್ನ ಐಕ್ಯವಾದವನ್ನು ಯಾರೂ ಸಮರ್ಥಿಸುವುದಿಲ್ಲ. ಆದ್ದರಿಂದ ನಿನಗೆ ಏಕಾಕಿತ್ವವೇ ಉಂಟಾಗುತ್ತದೆ. ನಿನಗೆ ಅಭೀಪ್ಸಿತವಾದ ಐಕ್ಯವನ್ನು ಈ ರೀತಿಯಲ್ಲಿ ನಾವೇ ಕೊಡುತ್ತಿದ್ದೇವೆ ಎಂದು ಇಲ್ಲಿ ಪರಿಹಾಸ ಪೂರ್ವಕವಾಗಿ ತಿಳಿಸುತ್ತಿದ್ದಾರೆ.

ಅಣುರೇವ ಹಿ ಜೀವೋಽಯಂ ಕಂಠೇಽಕ್ಷ್ಣಿ ಹೃದಿ ವಾ ಸ್ಥಿತೇಃ ।
ದೇಹಾದ್ ದೇಹಾಂತರಗತೇರುದ್ಗತೇಶ್ಚಾಪ್ಯವಾಗ್ಗತೇಃ ॥ ೪೭೭ ॥

ಪ್ರವೇಶಾಚ್ಚ ಯವವ್ರೀಹಿತಿಲಮಾಷಾದಿಕಾಂಕುರೇ ।
ಅನ್ನದ್ವಾರಾ ಚ ಪಿತರಿ ಪಿತೃದ್ವಾರಾ ಚ ಮಾತರಿ ॥ ೪೭೮ ॥

**ಅರ್ಥ–** ಕಂಠೇ= ಕಂಠದಲ್ಲಿಯೂ, ಅಕ್ಷ್ಣಿ= ಚಕ್ಷುಸ್ಸಿನಲ್ಲಿಯೂ, ಹೃದಿ ವಾ= ಅಥವಾ ಹೃದಯಲ್ಲಿಯೂ, ಸ್ಥಿತೇಃ= ಇರುವುದರಿಂದಲೂ, ದೇಹಾತ್= ಒಂದು ದೇಹದಿಂದ, ದೇಹಾಂತರಗತೇಃ= ಇನ್ನೊಂದು ದೇಹಕ್ಕೆ ಹೋಗುವುದರಿಂದಲೂ, ಉದ್ಗತೇಶ್ಚ= ಊರ್ಧ್ವ ಮುಖವಾಗಿ ಹೋಗುವುದರಿಂದಲೂ, ಅವಾಗ್ಗತೇ= ಕೆಳಮುಖವಾಗಿ ಹೋಗುವುದರಿಂದಲೂ, ಯವವ್ರೀಹಿತಿಲಮಾಷಾದಿಕಾಂಕುರೇ= ಯವ, ವ್ರೀಹಿ, ತಿಲ, ಮಾಷ ಮೊದಲಾದ ಬೀಜಗಳಲ್ಲಿ, ಅಂಕುರಗಳಲ್ಲಿ, ಪ್ರವೇಶಾಚ್ಚ= ಪ್ರವೇಶ ಮಾಡುವುದರಿಂದಲೂ, ಅನ್ನದ್ವಾರಾ= ಅನ್ನದ ಮೂಲಕವಾಗಿ, ಪಿತರಿ= ತಂದೆಯಲ್ಲಿ, ಪ್ರವೇಶಾಚ್ಚ= ಪ್ರವೇಶ ಮಾಡುವುದರಿಂದಲೂ, ಪಿತೃದ್ವಾರಾ ಚ= ಮತ್ತು ತಂದೆಯ ಮೂಲಕವಾಗಿ, ಮಾತರಿ= ತಾಯಿಯಲ್ಲಿ, ಪ್ರವೇಶಾಚ್ಚ= ಪ್ರವೇಶ ಮಾಡುವುದರಿಂದಲೂ, ಅಯಂ ಜೀವಃ= ಈ ಜೀವನು, ಅಣುರೇವಹಿ= ಅಣುವೇ ಆಗಿದ್ದಾನಷ್ಟೇ.

**ಅನುವಾದ–** ಕಂಠದಲ್ಲಾಗಲೀ, ಚಕ್ಷುಸ್ಸಿನಲ್ಲಾಗಲೀ ಅಥವಾ ಹೃದಯದಲ್ಲಾಗಲೀ ಇರುವುದರಿಂದಲೂ ಒಂದು ದೇಹದಿಂದ ಇನ್ನೊಂದು ದೇಹಕ್ಕೆ ಹೋಗು-ವುದರಿಂದಲೂ, ಊರ್ಧ್ವಗತಿಯಿಂದ ಸ್ವರ್ಗಾದಿಗಳಿಗೆ ಹೋಗುವುದರಿಂದಲೂ, ಅಧೋಗತಿಯಿಂದ ನರಕಾದಿಗಳಿಗೆ ಹೋಗುವುದರಿಂದಲೂ, ವ್ರೀಹಿ, ಯವ, ತಿಲ, ಮಾಷಾದಿ ಬೀಜಗಳಲ್ಲಿ, ಅಂಕುರಗಳಲ್ಲಿ ಪ್ರವೇಶಿಸುವುದರಿಂದಲೂ, ಅನ್ನದ ಮುಖಾಂತರ ತಂದೆಯನ್ನು ಪ್ರವೇಶಿಸುವುದರಿಂದಲೂ, ಮತ್ತು ತಂದೆಯ ಮೂಲಕ ತಾಯಿಯನ್ನು ಪ್ರವೇಶಿಸುವುದರಿಂದಲೂ ಈ ಜೀವನು ಅಣುವೇ ಆಗಿದ್ದಾನೆ.

**ಭಾವವಿಲಾಸಿನೀ–** ಅಧುನಾ ದ್ವಿತೀಯಪಕ್ಷೇ ದೂಷಣಾಂತರಾಣಿ ಚ ವ್ಯುತ್ಪಾದ್ಯದರ್ಶಯನ್ ಸ್ವಮತಾ-ನುಕೂಲತ್ವಾತ್ತೃತೀಯ ಪಕ್ಷಮೇವ ಪ್ರಬಲಯತಿ – ಅಣುರಿತಿ ॥ ಸ್ವಪ್ನೇ ಕಂಠೇ, ಜಾಗ್ರದ-ವಸ್ಥಾಯಾಮಕ್ಷಿಣಿ, ಸುಪ್ತೌ ಹೃದೀತಿ ವಿವೇಕಃ । ಸರ್ವತ್ರಾಣುರಿತಿ ಸಂಬಧ್ಯತೇ॥ ೪೭೭-೪೭೮ ॥

**ವಿವರಣೆ–** ಅದ್ವೈತ ಭಾಷ್ಯದಲ್ಲಿಯೂ ಸಹ ಉತ್ಕ್ರಾಂತಿಗತ್ಯಾಗತೀನಾಂ ಎಂದು ಪ್ರಾರಂಭವಾಗುವ ಹತ್ತು ಸೂತ್ರಗಳಲ್ಲಿ ಜೀವಾಣುತ್ವವನ್ನೇ ಸಮರ್ಥನೆ ಮಾಡಿದ್ದಾರೆ. ಆದ್ದರಿಂದ ಜೀವನ ಅಣುತ್ವವನ್ನೇ ಅಂಗೀಕರಿಸಬೇಕು ಎಂದು ಅಭಿಪ್ರಾಯ.

ಅಣೂನಿ ಜೀವಚೈತನ್ಯಾನ್ಯನ್ಯಾನಿ ಚ ತನೌ ತನೌ ।
ನಾನಾಕರ್ಮಾನುಬಂಧೀನಿ ನಾನಾಯೋನಿಗತಾನಿ ಚ ॥ ೪೭೯ ॥

**ಅರ್ಥ–** ಅಣೂನಿ= ಅಣುಗಳಾದ, ಜೀವಚೈತನ್ಯಾನಿ= ಜೀವಚೈತನ್ಯಗಳು, ತನೌ ತನೌ= ದೇಹ ದೇಹದಲ್ಲಿಯೂ, ಅನ್ಯಾನ್ಯಾನಿ ಚ= ಭಿನ್ನಭಿನ್ನವಾಗಿವೆ, ನಾನಾಕರ್ಮಾನುಬಂಧೀನಿ= ನಾನಾವಿಧ ಕರ್ಮಗಳ ಸಂಬಂಧವನ್ನು ಹೊಂದಿವೆ, ನಾನಾಯೋನಿಗತಾನಿ ಚ= ಮತ್ತು ನಾನಾ ಯೋನಿಗಳಲ್ಲಿ ಪ್ರವಿಷ್ಟವಾಗಿವೆ.

**ಅನುವಾದ–** ಪ್ರತಿ ಶರೀರದಲ್ಲಿಯೂ ಇರುವ ಜೀವಚೈತನ್ಯಗಳು ಅಣುಗಳಾಗಿ ಭಿನ್ನಭಿನ್ನವಾಗಿವೆ. ಅವು ನಾನಾ ಕರ್ಮಗಳ ಸಂಬಂಧವನ್ನು ಹೊಂದಿ ನಾನಾ ಯೋನಿಗಳಲ್ಲಿ ಪ್ರವಿಷ್ಟವಾಗಿವೆ.

**ಭಾವವಿಲಾಸಿನೀ–** ಅಣುತ್ವಮುಪಸಂಹರತಿ– ಅಣೂನೀತಿ ॥ ಅಣೂನಿ ಸ್ವಭಾವತ ಏವಾಣೂನಿ । ದೇಹಾಖ್ಯೋಪಾಧಿಸಂಬಂಧಾತ್ ಪೂರ್ವಮಪ್ಯಣುತ್ವಾತ್ । ಅನ್ಯಾನಿ ಪರಸ್ಪರಂ ಭಿನ್ನಾನಿ । ತತ್ರ ಹೇತುದ್ವಯಮಾಹ – ನಾನೇತಿ ॥ ಕರ್ಮವೈಚಿತ್ರ್ಯಾದ್ಯೋನಿವೈಚಿತ್ರ್ಯಾಚ್ಚ ಪರಸ್ಪರಂ ಭಿನ್ನಾನೀತಿ ಭಾವಃ ॥೪೭೯॥

ಅನ್ಯಚ್ಚ ಬ್ರಹ್ಮಚೈತನ್ಯಂ ಸದಾ ಸರ್ವತ್ರ ತಿಷ್ಠತಿ ।
ಸ್ವಚ್ಛಮುಚ್ಛೇದ್ಯಮಚ್ಛಿದ್ರಂ ಕೂಟಸ್ಥಮಚಲಂ ಧ್ರುವಂ ॥ ೪೮೦ ॥

**ಅರ್ಥ–** ಅನ್ಯಚ್ಚ ಬ್ರಹ್ಮಚೈತನ್ಯಂ= ಮತ್ತು ಅದಕ್ಕಿಂತ ಭಿನ್ನವಾದ ಬ್ರಹ್ಮಚೈತನ್ಯವು, ಸದಾ ಸರ್ವತ್ರ= ಯಾವಾಗಲೂ ಎಲ್ಲ ದೇಶದಲ್ಲಿಯೂ, ತಿಷ್ಠತಿ= ಇರುತ್ತದೆ, ಅದು, ಸ್ವಚ್ಛಂ= ದೋಷರಹಿತವಾದುದು, ಅಚ್ಛೇದ್ಯಂ= ಛೇದನಕ್ಕೆ ಅಯೋಗ್ಯವಾದುದು, ಅಚ್ಛಿದ್ರಂ= ಛಿದ್ರರಹಿತವಾದುದು, ಕೂಟಸ್ಥಂ= ನಿರ್ವಿಕಾರವಾದುದು, ಅಚಲಂ= ನಿಷ್ಕ್ರಿಯವಾದುದು ಮತ್ತು, ಧ್ರುವಂ= ಶಾಶ್ವತವಾದುದು.

**ಅನುವಾದ–** ಮತ್ತು ಅದಕ್ಕಿಂತ ಭಿನ್ನವಾದ ಬ್ರಹ್ಮಚೈತನ್ಯವು ಸರ್ವದೇಶದಲ್ಲಿ, ಸರ್ವಕಾಲಗಳಲ್ಲಿಯೂ ಇದೆ. ಅದು ದೋಷರಹಿತವಾದುದು, ಛೇದನಕ್ಕೆ

ಅಯೋಗ್ಯವಾದುದು, ಛಿದ್ರರಹಿತವಾದುದು, ನಿರ್ವಿಕಾರವಾದುದು, ಅಚಲವಾದುದು ಮತ್ತು ನಿತ್ಯವಾದುದು. (ಪುಣ್ಯಪಾಪಗಳಿಂದಲೂ, ಯೋನಿ ಸಂಬಂಧದಿಂದಲೂ ರಹಿತವಾದುದು).

**ಭಾವವಿಲಾಸಿನೀ–**ಜೀವವಿರುದ್ಧಸ್ವಭಾವತ್ವಾತ್ ಬ್ರಹ್ಮಚೈತನ್ಯಂ ಚಾನ್ಯದೇವೇತ್ಯಾಹ **–ಅನ್ಯಚ್ಚೇತಿ** ॥ ವಿರುದ್ಧಸ್ವಭಾವತ್ವಮೇವ ದರ್ಶಯತಿ – **ಸದಾ ಸರ್ವತ್ರೇತ್ಯಾದಿನಾ** ॥ ಉಪಲಕ್ಷಣಂ ಚೈತತ್ । ಕರ್ಮಯೋನ್ಯಾದಿ ದೂರಂ ಚೇತಿ ಗ್ರಾಹ್ಯಮ್ ॥ ೪೮೦ ॥

ತದಚ್ಛೇದ್ಯಂ ಕಥಂ ಛೇದ್ಯಂ ಭಾಗೇಭಾಗೇ ತ್ವವಿದ್ಯಯಾ ।
ಅಚ್ಛೇದ್ಯೋಽಯಮದಾಹ್ಯೋಽಯಮಿತ್ಯುಕ್ತೇಃ ಕಾ ಗತಿರ್ವದ ॥ ೪೮೧ ॥

**ಅರ್ಥ–** ಅಚ್ಛೇದ್ಯಂ= ಛೇದನೆಗೆ ಅಯೋಗ್ಯವಾದ, ತತ್= ಅದು, ಅವಿದ್ಯಯಾ ತು= ಅವಿದ್ಯೆಯಿಂದ, ಭಾಗೇ ಭಾಗೇ= ಭಾಗಭಾಗಗಳಾಗಿ, ಕಥಂ ಛೇದ್ಯಂ= ಹೇಗೆ ಛೇದ್ಯವಾಗುತ್ತದೆ, ಅಚ್ಛೇದ್ಯೋಽಯಮದಾಹ್ಯೋಽಯಮಿತ್ಯುಕ್ತೇಃ= ಬ್ರಹ್ಮನು ಛೇದಕ್ಕೆ ಅಯೋಗ್ಯನು ಮತ್ತು ದಾಹಕ್ಕೆ ಅಯೋಗ್ಯನು ಎಂಬ ಮಾತಿಗೆ, ಕಾ ಗತಿಃ= ಏನು ಗತಿ ಎಂದು, ವದ= ಹೇಳು.

**ಅನುವಾದ–** ಛೇದನಕ್ಕೆ ಅಯೋಗ್ಯನಾದ ಆ ಬ್ರಹ್ಮನನ್ನು ಆ ಅವಿದ್ಯೆಯಾದರೂ ಹೇಗೆ ಭಾಗ ಭಾಗಗಳಾಗಿ ಕತ್ತರಿಸುತ್ತದೆ? ಬ್ರಹ್ಮ ಚೈತನ್ಯವು ಛೇದನೆಗಾಗಲೀ, ದಾಹಕ್ಕಾಗಲೀ ಯೋಗ್ಯವಲ್ಲ ಎಂಬ ಗೀತಾವಚನಕ್ಕೆ ಏನು ಅರ್ಥವೆಂದು ಹೇಳು.

**ಭಾವವಿಲಾಸಿನೀ–** ಇತೋಽಪಿ ದ್ವಿತೀಯಪಕ್ಷೋ ನ ಘಟತ ಇತ್ಯಾಹ – **ತದಚ್ಛೇದ್ಯಮಿತಿ** ॥ ಅಚ್ಛೇದ್ಯಂ ತದ್ ಬ್ರಹ್ಮೇತಿ ಸಂಬಂಧಃ । ಪಾತಾಲಾದಿಸತ್ಯಲೋಕಾಂತಲೋಕೇಷು ತತ್ರ ತತ್ರ ಜೀವ ಭಾವಾಯಚ್ಛೇತ್ತವ್ಯತ್ವಾದ್ಭಾಗೇ ಭಾಗ ಇತ್ಯುಕ್ತಮ್ । ಅಚ್ಛೇದ್ಯತ್ವಮಸಿದ್ಧಮಿತ್ಯತ ಆಹ – **ಅಚ್ಛೇದ್ಯ ಇತಿ** ॥ ಉಕ್ತೇಃ ಶ್ರುತೇಃ ಸ್ಮೃತೇಶ್ಚ ॥ ೪೮೧ ॥

ನಿಶ್ಛಿದ್ರಸ್ಯ ಕಥಂ ಛಿದ್ರಮಸಾಧ್ಯಂ ಸಾಧ್ಯತೇ ತಯಾ ।
ಅವಿದ್ಯಾಯಾ ನ ವಿದ್ಯಾಸ್ತಿ ಯಯಾಽಸಾಧ್ಯಂ ಚ ಸಾಧ್ಯತೇ ॥ ೪೮೨ ॥

ಯಾ ಸ್ವಾಂಶಗತತತ್ಖಂಡಾನುನ್ನಯೇಚ್ಚಾಪ್ಯಧೋ ನಯೇತ್ ।
ಜನಯೇನ್ಮಾರಯೇನ್ನಾನಾಕ್ಲೇಶೌಘಂ ಭೋಜಯೇತ್ ಕಿಲ ॥ ೪೮೩ ॥

**ಅರ್ಥ–** ನಿಶ್ಛಿದ್ರಸ್ಯ= ಛಿದ್ರರಹಿತವಾದ ವಸ್ತುವಿಗೆ, ಕಥಂ ಛಿದ್ರಂ= ಛಿದ್ರವು ಹೇಗೆ ಉಂಟಾಗುತ್ತದೆ, ತಯಾ= ಆ ಅವಿದ್ಯೆಯಿಂದ, ಅಸಾಧ್ಯಂ= ಸಾಧಿಸಲು ಅಸಾಧ್ಯವಾದುದು, ಕಥಂ ಸಾಧ್ಯತೇ= ಹೇಗೆ ಸಾಧಿಸಲ್ಪಡುತ್ತದೆ? ಯಾ= ಯಾವ ಅವಿದ್ಯೆಯು, ಸ್ವಾಂಶಗತತತ್ಖಂಡಾನ್= ತನ್ನ ಅಂಶದಲ್ಲಿರುವ ಬ್ರಹ್ಮನ ಭಾಗಗಳನ್ನು, ಉನ್ನಯೇತ್=

ಮೇಲಕ್ಕೆ ಕರೆದುಕೊಂಡು ಹೋಗುತ್ತದೆಯೋ, ಅಧೋನಯೇತ್= ಕೆಳಮುಖವಾಗಿ ಕರೆದುಕೊಂಡು ಹೋಗುತ್ತದೆಯೋ, ಜನಯೇತ್= ಜನನವನ್ನು ಹೊಂದಿಸುತ್ತದೆಯೋ, ಮಾರಯೇತ್= ಮರಣವನ್ನು ಹೊಂದಿಸುತ್ತದೆಯೋ, ನಾನಾ ಕ್ಲೇಶೌಘಂ= ಅನೇಕ ಕ್ಲೇಶಗಳ ಸಮೂಹವನ್ನು, ಭೋಜಯೇತ್= ಉಣ್ಣಿಸುತ್ತದೆಯೋ, ಅಂತಹ, ಅವಿದ್ಯಾಯಾಃ= ಅವಿದ್ಯೆಗೆ, ಯಯಾ= ಯಾವ ವಿದ್ಯೆಯಿಂದ, ಅಸಾಧ್ಯಂ ಚ= ಅಸಾಧ್ಯವನ್ನೂ ಸಹ, ಸಾಧ್ಯತೇ= ಸಾಧಿಸಬಹುದೋ, ಅಂತಹ, ವಿದ್ಯಾ= ವಿದ್ಯೆಯು, ನಾಸ್ತಿ ಕಿಲ= ಇಲ್ಲವಷ್ಟೇ?

**ಅನುವಾದ–** ನಿಶ್ಛಿದ್ರವಾದ ವಸ್ತುವಿನಲ್ಲಿ ಹೇಗೆ ಛಿದ್ರವುಂಟಾಗುತ್ತದೆ. ನಿನ್ನ ಅವಿದ್ಯೆಯು ಅಸಾಧ್ಯವನ್ನೂ ಸಾಧಿಸುವುದೇನು? ಯಾವ ಅವಿದ್ಯೆಯು ತನ್ನ ಅಂಶದಲ್ಲಿರುವ ಬ್ರಹ್ಮನ ಅಂಶವನ್ನು ಮೇಲ್ಮುಖವಾಗಿಯೂ, ಕೆಳಮುಖವಾಗಿಯೂ ಕರೆದುಕೊಂಡು ಹೋಗುತ್ತದೆಯೋ ಜನನವನ್ನು ಮತ್ತು ಮರಣವನ್ನು ಹೊಂದಿಸುತ್ತದೆಯೋ, ಅನೇಕ ಕ್ಲೇಶಸಮೂಹವನ್ನು ಉಣ್ಣಿಸುತ್ತದೆಯೋ, ಅಂತಹ ಅವಿದ್ಯೆಗೆ ಅಸಾಧ್ಯವಾದುದನ್ನೂ ಸಾಧಿಸುವ ಯಾವ ವಿದ್ಯೆಯೂ ಇಲ್ಲವಷ್ಟೇ?

**ಭಾವವಿಲಾಸಿನೀ–** ನಿಶ್ಛಿದ್ರಸ್ಯ ಸರ್ವತ್ರ ವ್ಯಾಪ್ತತಯಾ ಛಿದ್ರರಹಿತಸ್ಯ । ಅಸಾಧ್ಯಂ ಅಚ್ಛೇದ್ಯತ್ವ ಶ್ರುತಿಬಲಾತ್ ಸಾಧಯಿತುಮಶಕ್ಯಮ್ । ತಯಾऽವಿದ್ಯಯಾ । ಭಗವತ ಇವ ಅಘಟಿತ-ಘಟಕಾವಿದ್ಯಾಸಾಮರ್ಥ್ಯಾದ್ಘಟಿತ ಇತ್ಯಾಶಂಕಾಂ ಪರಿಹರತಿ – **ಅವಿದ್ಯಾಯಾ ಇತಿ** ॥ ವಿದ್ಯಾ ಅಸಾಧ್ಯಸಾಧಿಕಾ ವಿದ್ಯಾ । ಯಯಾ ವಿದ್ಯಯಾ । ಅವಿದ್ಯಾವಿದ್ಯಯೋಃ ಪರಸ್ಪರವಿರುದ್ಧತ್ವಾದ್ ವಿದ್ಯಾಮಾತ್ರಮಪ್ಯವಿದ್ಯಾಯಾಂ ವಕ್ತುಂ ನ ಶಕ್ಯತೇ । ಅಸಾಧ್ಯಸಾಧಕವಿದ್ಯಾತು ದೂರಾಪಾಸ್ತಾ । ಭಗವತಸ್ತು ಸರ್ವಜ್ಞತಯಾ ವಿಚಿತ್ರವಿದ್ಯಾವತಃ ಅಸಾಧ್ಯಸಾಧಕವಿದ್ಯಾಪಿ ಸಂಭಾವಿತೇತಿ ಭಾವಃ ॥ ೪೮೨ ॥

ಯಾऽವಿದ್ಯಾ । ತತ್ ಖಂಡಾನ್ ಅಚ್ಛೇದ್ಯವ್ಯಾಪ್ತಬ್ರಹ್ಮಖಂಡಾನ್ । ಉನ್ನಯೇತ್ ಸ್ವರ್ಗಂ ನಯೇತ್ । ಅಧೋ ನಯೇನ್ನರಕಂ ನಯೇತ್ । ಅಚ್ಛೇದ್ಯಸ್ಯ ಛಿದೇವ ವ್ಯಾಪ್ತತಯಾ ನಿಷ್ಕ್ರಿಯಸ್ಯ ಕ್ರಿಯಾಪ್ಯಸಂಭಾವಿತೇತಿ ಸ್ಮಾರಯಿತುಂ ಪೂರ್ವೋಕ್ತಮಹಿಮಪರಾಮರ್ಶಿತತದಿತಿ ಪದಮುಕ್ತಮ್ । ನಿತ್ಯಸ್ಯ ಕರ್ಮಾಬದ್ಧಸ್ಯ ಚ ಜನನಾದಿಕಮಪ್ಯಸಂಭಾವಿತಮಿತಿ ಸೂಚಯಿತುಂ ಜನಯೇದಿತ್ಯಾದಿಕಮುಕ್ತಮ್ । ಏಕಮಪ್ಯಘಟಿತಂ ಕರ್ತುಮಶಕ್ತಾ ಬಹೂನ್ಯೇತಾನ್ಯಘಟಿತಾನಿ ಕಥಂ ಕುರ್ಯಾದಿತಿ ಭಾವಃ ॥ ೪೮೩ ॥

**ವಿವರಣೆ–** ಬ್ರಹ್ಮನು ನಿಶ್ಛಿದ್ರನಾದರೂ ಅವಿದ್ಯೆಯ ಸಾಮರ್ಥ್ಯದಿಂದ ಅವನ ಭಾಗಗಳು ಜೀವಭಾವವನ್ನು ಹೊಂದುತ್ತದೆ ಎಂಬ ಶಂಕೆಗೆ ಇಲ್ಲಿ ಉತ್ತರವನ್ನು ನೀಡುತ್ತಾರೆ. ಅವಿದ್ಯೆಯು ಜಡವಾದುದರಿಂದ ಸ್ವತಃ ಪ್ರವೃತ್ತಿಶೂನ್ಯವಾದುದು. ತನಗೇ ಪ್ರವೃತ್ತಿ ಇಲ್ಲದಿರುವ ಅವಿದ್ಯೆಯು ಜೀವನನ್ನು ಈ ಶ್ಲೋಕಗಳಲ್ಲಿ ಹೇಳಿದ ನಾನಾ ಪ್ರವೃತ್ತಿಗಳಲ್ಲಿ ತೊಡಗಿಸಬೇಕಾದರೆ ಅದಕ್ಕೇನಾದರೂ ಸಾಮರ್ಥ್ಯ ವಿಶೇಷವು ಬೇಕು.

ಆ ಸಾಮರ್ಥ್ಯ ವಿಶೇಷವನ್ನು ವಿದ್ಯೆಯಿಂದಲೇ ಸಂಪಾದಿಸಬೇಕಷ್ಟೇ? ಅವಿದ್ಯೆಯಲ್ಲಿ ಯಾವ ವಿದ್ಯೆಯೂ ಉಂಟಾಗುವುದಿಲ್ಲ. ಏಕೆಂದರೆ ಅವಿದ್ಯೆಯು ಸ್ವಾಭಾವಿಕವಾಗಿಯೇ ವಿದ್ಯೆಯ ವಿರೋಧಿ. ಆದ್ದರಿಂದ ಅಘಟಿತವಾದುದನ್ನು ಘಟನೆ ಮಾಡುವ ಯಾವ ವಿದ್ಯೆಯೂ ಸಿದ್ಧಿಯೂ ಇಲ್ಲದಿರುವುದರಿಂದ ಭೇದಾಯೋಗ್ಯನಾದ ಬ್ರಹ್ಮನಲ್ಲಿ ಅವಿದ್ಯೆಯು ಭೇದವನ್ನು ಮಾಡಿ ಜೀವಭಾವವನ್ನು ಉಂಟುಮಾಡಲು ಸಾಧ್ಯವಿಲ್ಲ ಎಂದು ಅಭಿಪ್ರಾಯ.

**ನ ಹಿ ಜೀರ್ಣಪಟೋ ಬ್ರಹ್ಮ ಮಾಯಾಮೂಷಿಕವೇಷಧೃಕ್ ॥ ೪೮೪ ॥**

**ಅರ್ಥ–** ಬ್ರಹ್ಮ= ಬ್ರಹ್ಮನು, ಜೀರ್ಣಪಟಃ ನ ಹಿ= ಹಳೆಯ ವಸ್ತ್ರವೂ ಅಲ್ಲ, ಮಾಯಾ= ಮಾಯೆಯು (ಅವಿದ್ಯೆಯು), ಮೂಷಿಕವೇಷಧೃಕ್ ನ ಹಿ= ಮೂಷಿಕರೂಪವನ್ನು ಧರಿಸಿರುವುದೂ ಅಲ್ಲ.

**ಅನುವಾದ–** ಬ್ರಹ್ಮನು ಹಳೆಯ ವಸ್ತ್ರವೂ ಅಲ್ಲ, ಅವಿದ್ಯೆಯು ಮೂಷಿಕವೂ ಅಲ್ಲ.

**ಭಾವವಿಲಾಸಿನೀ–** ಅಪಹಸತಿ – ನ ಹೀತಿ ॥ ಹಿ ಯಸ್ಮಾತ್ ಉಕ್ತದ್ವಿರೂಪತಾ ದ್ವಯೋರಪಿ ನ । ತಸ್ಮಾಜ್ಜೀರ್ಣಪಟೇ ಮೂಷಿಕ ಇವ ಕಥಂ ಛಿದ್ರಂ ಕುರ್ಯಾದಿತ್ಯರ್ಥಃ ॥ ೪೮೪ ॥

**ವಿವರಣೆ–** ಸ್ವತಃ ಪ್ರವೃತ್ತಿಶೂನ್ಯವಾದ ಅವಿದ್ಯೆಯು ಬ್ರಹ್ಮನಿಗೆ ಜೀವಭಾವವನ್ನು ಉಂಟು ಮಾಡುತ್ತದೆ ಎಂದು ಅಂಗೀಕರಿಸಿದರೆ ಅದನ್ನು ಇಲ್ಲಿ ಅಪಹಾಸ ಮಾಡುತ್ತಾರೆ. ಹಳೆಯ ವಸ್ತ್ರದಲ್ಲಿ ಇಲಿಯು ರಂಧ್ರಮಾಡಿದಂತೆ ಬ್ರಹ್ಮನಲ್ಲಿ ಅವಿದ್ಯೆಯು ರಂಧ್ರವನ್ನು ಮಾಡಲು ಸಾಧ್ಯವಿಲ್ಲ ಎಂದು ಅಭಿಪ್ರಾಯ.

**ನಿಷ್ಕ್ರಿಯಂ ಶಕ್ತಿಶೂನ್ಯಂ ಚ ಕೃಷ್ಯಮಾಣಮವಿದ್ಯಯಾ ।**
**ತೇ ಬ್ರಹ್ಮ ತದ್ವ್ರಣಂ ಸರ್ವಂ ಕೇನೋಪಾಯೇನ ಪೂರಯೇತ್॥ ೪೮೫ ॥**

**ಅರ್ಥ–** ನಿಷ್ಕ್ರಿಯಂ= ನಿಷ್ಕ್ರಿಯವಾದ, ಶಕ್ತಿಶೂನ್ಯಂ ಚ= ಮತ್ತು ಸಾಮರ್ಥ್ಯರಹಿತವಾದ, ತೇ ಬ್ರಹ್ಮ= ನಿನ್ನ ಬ್ರಹ್ಮನು, ಅವಿದ್ಯಯಾ= ಅವಿದ್ಯೆಯಿಂದ, ಕೃಷ್ಯಮಾಣಂ= ಎಳೆದಾಡಲ್ಪಟ್ಟಿದ್ದಾಗಿ, ತತ್ ಸರ್ವಂ ವ್ರಣಂ= ಆ ಎಲ್ಲ ಗಾಯಗಳನ್ನು (ಛಿದ್ರಗಳನ್ನು), ಕೇನೋಪಾಯೇನ= ಯಾವ ಉಪಾಯದಿಂದ, ಪೂರಯೇತ್= ತುಂಬಿಕೊಳ್ಳಬೇಕು.

**ಅನುವಾದ–** ನಿಷ್ಕ್ರಿಯನೂ, ಶಕ್ತಿಶೂನ್ಯನೂ ಆದ ನಿನ್ನ ಬ್ರಹ್ಮನು ಅವಿದ್ಯೆಯಿಂದ ಎಳೆದಾಡಲ್ಪಟ್ಟವನಾಗಿ ವ್ರಣವನ್ನು ಹೊಂದಿದರೆ, ಆ ವ್ರಣಗಳನ್ನು ಯಾವ ಉಪಾಯದಿಂದ ಮುಚ್ಚಿಕೊಳ್ಳಬೇಕು?

**ಭಾವವಿಲಾಸಿನೀ–** ದೋಷಾಂತರಂ ಚಾಹ – ನಿಷ್ಕ್ರಿಯಮಿತಿ ॥ ಅಸ್ಮದ್‌ಬ್ರಹ್ಮಣಃ ಸಕ್ರಿಯತ್ವಾದ್ ವಿಚಿತ್ರಶಕ್ತಿಮತ್ತ್ವಾಚ್ಚ ತೇ ಬ್ರಹ್ಮೇತ್ಯುಕ್ತಮ್ । ತತ್ ಸಂಸಾರದಶಾಯಾಂ ವಿದ್ಯಮಾನಮ್ । ತತ್ರ ತತ್ರೈವ ಸ್ಥಿರೈಸ್ಸೈಸ್ಸೈರಂಶೈರಾಕಾಶೇ ಘಟಾದ್ಯೈರಿವ ತನ್ಮಾತ್ರನಿಷ್ಠದೇಹಾದ್ಯುಪಾಧಿಭಿಸ್ತತ್ತೈವ

ಕೃತಚ್ಛಿದ್ರಸ್ಯ ಕಥಂಚಿತ್ ಪೂರಣಸಂಭವೇऽಪಿ ಸಂಸಾರದಶಾಯಾಂ ಸ್ವರ್ಗನರಕಾದಿಷು ಪರ್ಯಟನಶೀಲಾನಾಂ ನಾನೋಪಾಧಿಭಿನ್ನಾನಾಂ ಚ ಜೀವಾನಾಂ ಛಿದ್ರಪೂರಕತ್ವಾಯೋಗಾತ್ । ಕ್ರಿಯಾವೃದ್ಧಿಸಾಮರ್ಥ್ಯವಿಶೇಷ ರಹಿತಬ್ರಹ್ಮಭಾಗಸ್ಯಾಪಿ ಸಕ್ರಿಯಜೀವಭಾವಂ ಪ್ರಾಪ್ಯ ಪುನಸ್ತತ್ರ ತತ್ರೈವಾಗತ್ಯ ಪೂರಕತ್ವಾಯೋಗಾದಿತಿ ಭಾವಃ ॥ ಯದಿ ಚ ಛಿದ್ರಪೂರಣಾಯ ಬ್ರಹ್ಮಣಿ ಶಕ್ತಿವಿಶೇಷೋऽಂಗೀಕ್ರಿಯತೇ ತದಾऽಪಸಿದ್ಧಾಂತಃ ಸ್ಯಾತ್ ॥ ೪೮೫ ॥

**ವಿವರಣೆ–** ಅವಿದ್ಯೆಯು ವ್ಯಾಪ್ತನಾದ ಬ್ರಹ್ಮನ ಯಾವ ಯಾವ ಭಾಗವನ್ನು ಕಬಳಿಸಿ ಅಲ್ಲಿ ಜೀವಭಾವವನ್ನು ತಂದುಕೊಡುತ್ತದೆಯೋ, ಆ ಭಾಗದಲ್ಲಿ ವ್ಯಾಪ್ತನಾದ ಬ್ರಹ್ಮನಿಗೆ ಛಿದ್ರ ಉಂಟಾಯಿತು. ಆ ಛಿದ್ರವನ್ನು ಬ್ರಹ್ಮನು ಹೇಗೆ ಪರಿಹರಿಸಿಕೊಳ್ಳುತ್ತಾನೆ? ಛಿದ್ರದ ಬಳಿಗೆ ಹೋಗಲು ಅವನಿಗೆ ಕ್ರಿಯೆಯಿಲ್ಲ. ಅವನು ಸರ್ವ ಸಾಮರ್ಥ್ಯವಿಧುರನಾದ್ದರಿಂದ ಛಿದ್ರದ ಬಳಿಗೆ ಹೋದರೂ ಛಿದ್ರವನ್ನು ಮುಚ್ಚಿಕೊಳ್ಳುವ ಸಾಮರ್ಥ್ಯವೂ ಇಲ್ಲ. ಆದ್ದರಿಂದ ಆ ಛಿದ್ರವನ್ನು ಮುಚ್ಚುವ ಬಗೆ ಹೇಗೆ? ನನ್ನ ಬ್ರಹ್ಮನಿಗಾದರೆ ಈ ಪರಿಸ್ಥಿತಿ ಇಲ್ಲ. ಅವನು ಎಲ್ಲಾ ಕ್ರಿಯೆಗಳನ್ನೂ ಮಾಡುವವನು ಮತ್ತು ಮಹಾಸಾಮರ್ಥ್ಯವನ್ನು ಹೊಂದಿದವನು ಎಂದು ಅಭಿಪ್ರಾಯ.

**ಕಾರಾಗೃಹಂ ನಯಂತೀಂ ತಾಂ ಶಕ್ತಂ ಚೇತ್ ಕಿಂ ನ ವಾರಯೇತ್ ॥೪೮೬॥**

**ಅರ್ಥ–** ಕಾರಾಗೃಹಂ= ಬಂಧನ ಗೃಹಕ್ಕೆ, ನಯಂತೀಂ= ಕರೆದುಕೊಂಡು ಹೋಗುವ, ತಾಂ= ಆ ಅವಿದ್ಯೆಯನ್ನು, ಶಕ್ತಂ ಚೇತ್= ಆ ಬ್ರಹ್ಮನು ಶಕ್ತನಾಗಿದ್ದರೆ, ಕಿಂ ನ ವಾರಯೇತ್= ಏತಕ್ಕೆ ಪರಿಹರಿಸಿಕೊಳ್ಳುವುದಿಲ್ಲ?

**ಅನುವಾದ–** ಬ್ರಹ್ಮನಿಗೆ ಸಾಮರ್ಥ್ಯವಿದ್ದರೆ ತನ್ನನ್ನು ನಾನಾ ದೇಹಗಳಿಗೆ ಕರೆದುಕೊಂಡು ಹೋಗುವ ಅವಿದ್ಯೆಯನ್ನು ಅವನು ಏಕೆ ಪರಿಹರಿಸಿಕೊಳ್ಳುವುದಿಲ್ಲ?

**ಭಾವವಿಲಾಸಿನೀ–** ದೋಷಾಂತರಂ ಚಾಹ – ಕಾರಾಗೃಹಮಿತಿ ॥ ಕಾರಾಗೃಹಂ ನಾನಾಕ್ಲೇಶಾನುಭಾವಕಮಾನುಷದೇಹಾಖ್ಯಕಾರಾಗೃಹಮ್ । ತಾಮವಿದ್ಯಾಮ್ । ಶಕ್ತಿವಿಶೇಷತ್ವೇ ಸ್ವಪ್ರಣಕಾರಕಮಾಯಾಮೇವ ನಿವಾರಯೇತ್ । ಮುಕ್ತಜೀವೇಷ್ವಪಿ ಸಂಭಾವಿತಮಾಯಾನಿವಾರಣಾಯಾಸಮರ್ಥಂ ಚೇತ್ ಸ್ವಚಿದಂಶೇಕೃತಚ್ಛಿದ್ರಂ ಕಥಂ ಪೂರಯೇದಿತಿ ಭಾವಃ ॥ ೪೮೬ ॥

**ವಿವರಣೆ–** ತನ್ನನ್ನು ಪರಿಹರಿಸಿಕೊಳ್ಳುವ ಶಕ್ತಿಯನ್ನು ಏನಾದರೂ ಒಪ್ಪಿದರೆ, ಮಾಯಾವಾದಿಗಳಿಗೆ ಅಪಸಿದ್ಧಾಂತವು ಬರುತ್ತದೆ. ಆದ್ದರಿಂದ ಅಂತಹ ಶಕ್ತಿಯನ್ನು ಒಪ್ಪುವಂತಿಲ್ಲ. ಮುಕ್ತ ಜೀವರೂ ತಮ್ಮ ಮಾಯೆಯನ್ನು ನಿವಾರಣೆ ಮಾಡಿಕೊಂಡಿರುತ್ತಾರೆ. ಆದರೆ ನಿನ್ನ ಬ್ರಹ್ಮನಿಗೆ ಮಾತ್ರ ಮಾಯೆಯನ್ನು ನಿವಾರಿಸುವ ಸಾಮರ್ಥ್ಯವೇ ಇಲ್ಲ ಎಂದು ಇಲ್ಲಿ ದೋಷವನ್ನು ಹೇಳುತ್ತಾರೆ.

**ಅತಸ್ತತ್ಕ್ರಿಯಾಂ ಬ್ರಹ್ಮ ಮತ್ವಾ ಸ್ವಾಂಗಸ್ಯ ವಿಕ್ರಿಯಾಂ ।**
**ತದ್ವಕ್ತ್ರವ್ರಣಶಾಂತ್ಯರ್ಥಂ ಭೇದಾಖ್ಯಾರಣ್ಯಕೌಷಧಂ ॥ ೪೮೭ ॥**

**ಚಿಚ್ಛಕ್ತಿರೂಪಕವಚಮಸ್ಪರ್ಶಾಯ ಪದೇ ಪದೇ ।**
**ಸ್ವಯಂ ದೃಢೀಕೃತ್ಯ ಜೀವಾನ್ ಕ್ಷುಧಿತಾಯೈ ಸಮಾದಿಶತ್ ॥ ೪೮೮ ॥**

**ಅರ್ಥ–** ಅತಃ= ಆದ್ದರಿಂದ, ಬ್ರಹ್ಮ= ಬ್ರಹ್ಮನು, ತತ್ಕ್ರಿಯಾಂ= ಆ ಅವಿದ್ಯೆಯ ಪ್ರಕ್ರಿಯೆ ಎಲ್ಲವನ್ನೂ, ಸ್ವಾಂಗಸ್ಯ= ತನ್ನ ಸ್ವರೂಪದ, ವಿಕ್ರಿಯಾಂ= ವಿಕಾರವೆಂದು, ಮತ್ವಾ= ತಿಳಿದು, ತದ್ವಕ್ತ್ರವ್ರಣಶಾಂತ್ಯರ್ಥಂ= ಅವಿದ್ಯೆಯೆಂಬ ಮೂಷಿಕದ ಬಾಯಿಯಿಂದ ಉಂಟಾಗ ಬಹುದಾದ ವ್ರಣದ ಪರಿಹಾರಕ್ಕಾಗಿ, ಭೇದಾಖ್ಯಂ= ಭೇದವೆಂಬ, ಆರಣ್ಯಕೌಷಧಂ= ಅರಣ್ಯದಲ್ಲಿ ಸಿಗುವ ಎಂದರೆ ಆರಣ್ಯಕ ಮತ್ತು ಉಪನಿಷತ್ತುಗಳಲ್ಲಿ ಪ್ರತಿಪಾದ್ಯವಾದ, ಔಷಧಂ= ಔಷಧಿಯನ್ನು, ಅಸ್ಪರ್ಶಾಯ= ಅವಿದ್ಯೆಯು ತನ್ನನ್ನು ಮುಟ್ಟದೇ ಇರುವುದಕ್ಕಾಗಿ, ಚಿಚ್ಛಕ್ತಿರೂಪಕವಚಂ=ಚೈತನ್ಯ ಶಕ್ತಿರೂಪವಾದ ಕವಚವನ್ನು, ಪದೇ ಪದೇ= ಪ್ರತಿಯೊಂದು ಪದದಲ್ಲಿಯೂ (ಹೆಜ್ಜೆಹೆಜ್ಜೆಗೂ), ಸ್ವಯಂ ದೃಢೀಕೃತ್ಯ= ತಾನೇ ದೃಢವಾಗಿ ಧರಿಸಿ, ಕ್ಷುಧಿತಾಯೈ= ಹಸಿದ ಆ ಮಾಯೆಗೆ, ಜೀವಾನ್= ಜೀವರನ್ನೇ, ಸಮಾದಿಶತ್= ಆಹಾರವಾಗಿ ನೀಡಿದನು.

**ಅನುವಾದ–** ಆದ್ದರಿಂದ ಬ್ರಹ್ಮನು ಆ ಅವಿದ್ಯೆಯ ಪ್ರಕ್ರಿಯೆಯೆಲ್ಲವನ್ನೂ ತನ್ನ ಸ್ವರೂಪಕ್ಕೆ ಉಂಟಾಗುವ ವಿಕ್ರಿಯೆಯೆಂದು ತಿಳಿದು ಅವಿದ್ಯೆಯೆಂಬ ಮೂಷಿಕದ ಬಾಯಿಯಿಂದ ಉಂಟಾಗಬಹುದಾದ ವ್ರಣದ ಪರಿಹಾರಕ್ಕಾಗಿ ಭೇದವೆಂಬ ಉಪನಿಷತ್ಪ್ರತಿಪಾದ್ಯವಾದ ಔಷಧವನ್ನೂ ಅವಿದ್ಯೆಯು ತನ್ನನ್ನು ಮುಟ್ಟದಿರುವಂತೆ ಚೈತನ್ಯ ಶಕ್ತಿರೂಪವಾದ ಕವಚವನ್ನೂ ಹೆಜ್ಜೆ ಹೆಜ್ಜೆಗೂ ತಾನೇ ಭದ್ರವಾಗಿ ಧರಿಸಿ ಹಸಿದಿರುವ ಮಾಯೆಗೆ ಜೀವರನ್ನು ಆಹಾರವಾಗಿ ನೀಡಿದನು.

**ಭಾವವಿಲಾಸಿನೀ–** ಅತಃ ಛಿದ್ರಪೂರಣಾಸಂಭಾವತ್ । ವಿಕ್ರಿಯಾಂ ವಿರುದ್ಧಾ ವ್ರಣರೂಪಾ ಕ್ರಿಯಾ ಯಸ್ಯಾಃ ಸಕಾಶಾತ್ಸಾ ತಾಮ್ । ತಸ್ಯಾ ಅವಿದ್ಯಾಯಾ ವಕ್ತ್ರವ್ರಣಂ ವಕ್ತ್ರಾತ್ ಸ್ವಾಂಗೇ ಕರಿಷ್ಯಮಾಣ ಸ್ವಾಂಗಚ್ಛಿದ್ರಾಖ್ಯವ್ರಣಮ್ । ತಸ್ಯ ಶಾಂತಯೇ ಅನುತ್ಪಾದಾಯ । ಭೇದಾಖ್ಯಮಾರಣ್ಯಕಮ್ । ಉಪನಿಷತ್ ಪ್ರತಿಪಾದ್ಯತಯಾ ತನ್ನಿಷ್ಠಮೌಷಧಮ್ । ಅರಣ್ಯೇ ವಿದ್ಯಮಾನಮಿತಿ ಧ್ವನಿಃ । ಯಥಾ ಮಸೂರಿಕಾದಿವ್ಯಾಧ್ಯನುತ್ಪಾದಾಯ ಪೂರ್ವಮೇವ ಹಸ್ತಾದಾವೌಷಧಂ ಬಧ್ನಂತಿ ತಥಾ ಜೀವೈಕ್ಯೇ ಸತಿ ಹಿ ಮಾಯಾ ಮದಂಗಾತ್ ಜ್ಜೀವಭಾವಾಯ ವ್ರಣಂ ಕುರ್ಯಾತ್ । ಜೀವಾದತ್ಯಂತಭೇದೇ ತು ಜೀವಾಂಶಾನಾಂ ಪೃಥಗೇವ ವಿದ್ಯಮಾನತ್ವಾತ್ತಾನೇವ ದೇಹಾದಿದಾನೇನ ಸಂಸಾರಯೇತ್ । ಮಾಂತು ಕಾರಣಾಭಾವೇನ ನ ಸ್ಪೃಶೇದಿತಿ ಮನ್ವಾನಂ ಅತ್ಯಂತ-

ಭೇದಮೇವ ಸಾಂಗರಕ್ಷಕಮಕರೋದಿತಿ ಭಾವಃ । ಪಕ್ಷಾಂತರಮಾಹ–ಚಿಚ್ಛಕ್ತಿರೂಪಕವಚಮಿತಿ ॥ ಚಿತಃ ಶಕ್ತಿಃ ಅವಿದ್ಯಾನಿರ್ಹರಣಸಾಮರ್ಥ್ಯಮ್ । ಅಸ್ಪರ್ಶಾಯ ಸರ್ವಥಾಽವಿದ್ಯಾ- ಸ್ಪರ್ಶಾ-ಭಾವಾಯ । ಔಷಧಂ ಸರ್ಪಮುಖಬಂಧನವತ್ ವ್ರಣಾನುತ್ಪಾದಕಾರಣಮ್ । ಕವಚಂ ತು ವ್ರಣಕಾರಕಸ್ಪರ್ಶಸ್ಯೈವ ವಿಘಟನಹೇತುರಿತಿ ವಿಶೇಷಃ । ತರ್ಹ್ಯವಿದ್ಯಾಯಾ ಗ್ರಾಸಾ ಭಾವಾದ್ ವೈಯರ್ಥ್ಯಾಖ್ಯಮರಣಂ ಸ್ಯಾದಿತ್ಯತ ಆಹ – ಜೀವಾನಿತಿ ॥ ಕ್ಷುಧಿತಾಯೈ ॥ ಗ್ರಾಸಾಭಾವೇನ ಕ್ಷುಧಿತಾಯೈ ಅವಿದ್ಯಾಯೈ । ಅಣುತಯಾಽಸಮರ್ಥತಯಾ ಅತ ಏವ ಮತ್ತೋಽತ್ಯಂತಭಿನ್ನತಯಾ ಚ ಗ್ರಾಸಯೋಗ್ಯಾನ್ ಜೀವಾನೇವ ಗ್ರಸಿತ್ವಾ ಸ್ವೋದರ ಇವ ಸ್ವನಿರ್ಮಿತದೇಹಾದ್ಯುದರೇ ಪ್ರವೇಶ್ಯ ವೈಯರ್ಥ್ಯಾಖ್ಯಮರಣಂ ಪರಿಹೃತ್ಯಾಽಽಮೋಕ್ಷಂ ಜೀವೇತ್ಯಾಜ್ಞಾಮಕರೋದಿತಿ ಭಾವಃ ॥ ೪೮೭-೪೮೮ ॥

**ವಿವರಣೆ–** ಹೇಗೆ ವ್ರಣಗಳನ್ನು ತಡೆಗಟ್ಟುವವರು, ವ್ರಣವಾಗುವುದಕ್ಕೂ ಮುಂಚೆಯೇ ಔಷಧಿಗಳನ್ನು ಲೇಪಿಸಿಕೊಳ್ಳುತ್ತಾರೆಯೋ, ಹಾಗೆಯೇ ಬ್ರಹ್ಮನು ವ್ರಣವನ್ನು ಹೊಂದದೆಯೇ, ವ್ರಣವು ಎಂದೂ ಉಂಟಾಗದಂತೆ ಜೀವರಿಂದ ಅತ್ಯಂತ-ಭೇದದಿಂದಲೇ ತನ್ನನ್ನು ರಕ್ಷಿಸಿಕೊಂಡಿದ್ದಾನೆ ಮತ್ತು ಅವಿದ್ಯೆಯು ತನ್ನನ್ನು ಸ್ಪರ್ಶಮಾಡಿದ ಮೇಲಷ್ಟೇ ಅದು ತನ್ನನ್ನು ವ್ರಣ ಮಾಡಲು ಅವಕಾಶ? ಅವಿದ್ಯೆಯು ತನ್ನನ್ನು ಸ್ಪರ್ಶ ಮಾಡದಂತೆ ಚೈತನ್ಯ ಶಕ್ತಿ ಎಂಬ ಕವಚನವನ್ನು ಧರಿಸಿದ್ದಾನೆ. ಆದ್ದರಿಂದ ಅವಿದ್ಯಗೆ ಬ್ರಹ್ಮನ ಸ್ಪರ್ಶವೇ ಇಲ್ಲ. ಇನ್ನು ವ್ರಣ ಉಂಟಾಗುವುದು ಹೇಗೆ? ಜೀವೈಕ್ಯವಿದ್ದರೆ ಮಾತ್ರ ಜೀವರನ್ನು ಅವಿದ್ಯೆಯು ಸ್ಪರ್ಶಿಸುವುದರಿಂದ ವ್ರಣ ಉಂಟಾಗುತ್ತದೆ. ಆದರೆ ಜೀವನಿಂದ ಅತ್ಯಂತ ಭೇದವೇ ಇರುವುದರಿಂದ ಬ್ರಹ್ಮನಲ್ಲಿ ವ್ರಣ ಉಂಟಾಗುವ ಸಾಧ್ಯತೆಯೇ ಇಲ್ಲ. ಹೀಗಾಗಿ ಹಸಿದ ಮಾಯೆಗೆ ತನಗಿಂತ ಅತ್ಯಂತ ಭಿನ್ನರಾದ ಜೀವರನ್ನು ಆಹಾರವಾಗಿ ಕೊಟ್ಟನು ಎಂದು ಸಾಹಿತ್ಯಮುದ್ರೆಯಿಂದ ಈ ಶ್ಲೋಕದಲ್ಲಿ ತಿಳಿಸುತ್ತಾರೆ.

ಬ್ರಹ್ಮಖಂಡಾ ನ ಜೀವಾಸ್ತದ್ ಬ್ರಹ್ಮಣಿ ಕ್ವಾಪ್ಯಖಂಡನಾತ್ ।
ಅಖಂಡಿತಂ ಚ ತದ್ಬ್ರಹ್ಮ ನಿಶ್ಛಿದ್ರತ್ವಾದ್ವಿನಿಶ್ಚಿತಂ ॥ ೪೮೯ ॥

**ಅರ್ಥ–** ತತ್= ಆದ್ದರಿಂದ, ಬ್ರಹ್ಮಣಿ= ಬ್ರಹ್ಮನಲ್ಲಿ, ಕ್ವಾಪಿ= ಎಂದೂ, ಅಖಂಡನಾತ್= ಖಂಡನವು ಇಲ್ಲದಿರುವುದರಿಂದ, ಜೀವಾಃ= ಜೀವರು, ನ ಬ್ರಹ್ಮಖಂಡಾಃ= ಬ್ರಹ್ಮನ ಅಂಶರಲ್ಲ ನಿಶ್ಛಿದ್ರತ್ವಾತ್= ಭೇದರಹಿತವಾದುದರಿಂದ, ತದ್ಬ್ರಹ್ಮ= ಆ ಬ್ರಹ್ಮನು, ಅಖಂಡಿತಂ ಚ= ಖಂಡರಹಿತನಾದವನೆಂದು, ವಿನಿಶ್ಚಿತಂ= ನಿಶ್ಚಯಿಸಲ್ಪಡುತ್ತಾನೆ.

**ಅನುವಾದ–** ಬ್ರಹ್ಮನಲ್ಲಿ ಎಂದೂ ಭೇದ ಉಂಟಾಗದಿರುವ ಕಾರಣದಿಂದ ಜೀವರು ಬ್ರಹ್ಮನ ಅಂಶರಲ್ಲ. ನಿಶ್ಛಿದ್ರನಾದುದರಿಂದ ಆ ಬ್ರಹ್ಮನು ಅಖಂಡಿತನಾದವನೆಂದು ನಿಶ್ಚಯಿಸಲ್ಪಡುತ್ತದೆ.

**ಭಾವವಿಲಾಸಿನೀ–** ಪ್ರಾಗುಪಪಾದಿತಪ್ರಮೇಯಂ ಸಂಕಲಯ್ಯೋಪಸಂಹರನ್ನುಕ್ತ್ಯಂತರಂ ಚ ದರ್ಶಯತಿ – **ಬ್ರಹ್ಮಖಂಡ ಇತಿ** ॥ ಬ್ರಹ್ಮಖಂಡಾಃ ಬ್ರಹ್ಮಾಂಶಾಃ । ತತ್ತಸ್ಮಾತ್ ಪೂರ್ವೋಕ್ತ-ಹೇತೋಃ । ತಮೇವ ವಿಶದಯತಿ – **ಬ್ರಹ್ಮಣೀತಿ** ॥ ೪೮೯ ॥

**ಧರ್ಮಖಂಡೋಽಪಿ ತೇ ನಾಸ್ತಿ ಕಾ ಕಥಾ ಧರ್ಮಿಖಂಡನೇ ।**
**ಅಖಂಡವಾದೀ ಕಿಂ ನ ತ್ವಂ ಸಖಂಡತ್ವಂ ಹಿ ಮನ್ಮತಂ ॥ ೪೯೦ ॥**

**ಅರ್ಥ–** ತೇ= ನಿನಗೆ, ಧರ್ಮಖಂಡೋಽಪಿ= ಧರ್ಮಗಳ ಭೇದವು ಸಹ, ನಾಸ್ತಿ= ಇಲ್ಲವಷ್ಟೇ, ಧರ್ಮಿ ಖಂಡನೇ= ಧರ್ಮಿಯಲ್ಲಿ ಭಾಗವನ್ನು ತರುವ ವಿಷಯದಲ್ಲಿ, ಕಾ ಕಥಾ= ಯಾವ ಕಥೆಯು ಉಂಟಾದೀತು, ತ್ವಂ= ನೀನು, ಅಖಂಡವಾದೀ ಕಿಂ ನ= ಅಖಂಡವಾದಿಯಲ್ಲವೇ? ಸಖಂಡತ್ವಂ= ಸಖಂಡತ್ವವು, ಮನ್ಮತಂ ಹಿ= ನನ್ನ ಮತವಷ್ಟೇ.

**ಅನುವಾದ–** ಧರ್ಮಗಳಲ್ಲಿಯೂ ಭೇದವನ್ನು ಒಪ್ಪದಿದ್ದ ನೀನು ಧರ್ಮಿಯಾದ ಬ್ರಹ್ಮನಲ್ಲಿಯೇ ಹೇಗೆ ಭಾಗಗಳನ್ನು ಒಪ್ಪಿ ಭೇದವನ್ನು ಒಪ್ಪುತ್ತಿದ್ದೀಯೇ? ನೀನು ಅಖಂಡವಾದಿಯಷ್ಟೇ? ಸಖಂಡತ್ವವು ನನ್ನ ಮತ.

**ಭಾವವಿಲಾಸಿನೀ–** ಧರ್ಮಖಂಡಃ ಧರ್ಮನಾನಾತ್ವಮ್ । ಧರ್ಮಿಖಂಡನೇ ಧರ್ಮಿನಾನಾತ್ವೇ ॥ ೪೯೦ ॥

**ವಿವರಣೆ–** ಅಖಂಡವಾದಿಯಾದ ನೀನು ಅವಿದ್ಯೆಯ ಸಾಮರ್ಥ್ಯದಿಂದಲಾದರೂ ಬ್ರಹ್ಮನಲ್ಲಿ ಖಂಡಗಳನ್ನು ಅಂಗೀಕರಿಸಿ ಜೀವಭಾವವನ್ನು ಉಪಪಾದನೆಯನ್ನು ಮಾಡಬಾರದು ಎಂದು ಅಭಿಪ್ರಾಯ.

**ಚಿತ್ರಶಕ್ತಿವಿಶೇಷಶ್ಚ ಯದ್ಯಸ್ತಿ ಪರಮಾತ್ಮನಿ ।**
**ಕಥಂ ದುಃಖಾರ್ಣವೇ ಮಂಕ್ತುಮುತ್ಸಹೇತ ಸ ಬುದ್ಧಿಮಾನ್ ॥ ೪೯೧ ॥**

**ಅರ್ಥ–** ಯದಿ= ಒಂದು ಪಕ್ಷ, ಪರಮಾತ್ಮನಿ= ಪರಮಾತ್ಮನಲ್ಲಿ, ಚಿತ್ರಶಕ್ತಿವಿಶೇಷಶ್ಚ= ವಿಚಿತ್ರವಾದ ಶಕ್ತಿವಿಶೇಷವು, ಅಸ್ತಿ= ಇರುವುದಾದರೆ, ಬುದ್ಧಿಮಾನ್ ಸಃ= ವಿವೇಕಿಯಾದ ಅವನು, ದುಃಖಾರ್ಣವೇ= ದುಃಖಸಮುದ್ರದಲ್ಲಿ, ಮಂಕ್ತುಂ= ಮುಳುಗಲು, ಕಥ ಮುತ್ಸಹೇತ= ಹೇಗೆ ಪ್ರವೃತ್ತನಾಗುತ್ತಾನೆ?

**ಅನುವಾದ–** ಪರಮಾತ್ಮನಿಗೆ ಒಂದು ಪಕ್ಷ ವಿಚಿತ್ರವಾದ ಶಕ್ತಿವಿಶೇಷವು ಇದ್ದರೆ, ವಿವೇಕಿಯಾದ ಅವನು ತನ್ನನ್ನು ಹೇಗೆ ದುಃಖಸಮುದ್ರದಲ್ಲಿ ಮುಳುಗಿಸಿ ಕೊಳ್ಳುತ್ತಾನೆ?

**ಭಾವವಿಲಾಸಿನೀ–** ಸಃ ಪರಮಾತ್ಮಾ । ಜೀವೈಕ್ಯಮತೇ ಬ್ರಹ್ಮಣಿ ಚಿತ್ರಶಕ್ತಿರಂಗೀಕರ್ತುಂ ನ ಶಕ್ಯತ ಇತಿ ಭಾವಃ ॥ ೪೯೧ ॥

**ವಿವರಣೆ**– ಜೀವೈಕ್ಯವನ್ನು ಅಂಗೀಕಾರ ಮಾಡಿದರೆ ಪರಮಾತ್ಮನಿಗೆ ವಿಚಿತ್ರ ಶಕ್ತಿಯನ್ನು ಅಂಗೀಕರಿಸಲು ಸಾಧ್ಯವಿಲ್ಲವೆಂದು ಇಲ್ಲಿ ನಿರೂಪಿಸುತ್ತಾರೆ.

**ಈಶಶಕ್ತ್ಯೈವ ಸರ್ವತ್ರ ಶಕ್ತಿರ್ನೋಚೇನ್ನ ಕುತ್ರಚಿತ್ ।**
**ನರ್ತೇ ತ್ವತ್ ಕ್ರಿಯತೇ ಕಿಂ ಚನೇತ್ಯಾದ್ಯಾ ಗರ್ಜತಿ ಶ್ರುತಿಃ ॥ ೪೯೨ ॥**

**ಅರ್ಥ**– ಸರ್ವತ್ರ= ಎಲ್ಲ ಸ್ಥಳಗಳಲ್ಲಿಯೂ, ಈಶಶಕ್ತ್ಯೈವ= ಪರಮಾತ್ಮನ ಶಕ್ತಿಯಿಂದಲೇ, ಶಕ್ತಿಃ= ಶಕ್ತಿಯಿದೆ, ನೋಚೇತ್= ಇಲ್ಲದಿದ್ದರೆ, ಕುತ್ರಚಿತ್ ನ= ಎಲ್ಲಿಯೂ ಶಕ್ತಿ ಇಲ್ಲ, ನರ್ತೇ ತ್ವತ್ಕ್ರಿಯತೇ ಕಿಂ ಚ ನ= ನಋತೇ ತ್ವತ್ಕ್ರಿಯತೇ ಕಿಂಚನಾರೇ, ಇತ್ಯಾದ್ಯಾಃ= ಇವೇ ಮೊದಲಾದ, ಶ್ರುತಿಃ= ಶ್ರುತಿಯು, ಗರ್ಜತಿ= ಗರ್ಜಿಸುತ್ತದೆ.

**ಅನುವಾದ**– ಎಲ್ಲ ವಸ್ತುಗಳಲ್ಲಿಯೂ ಇರುವ ಶಕ್ತಿಯು ಈಶ್ವರನ ಶಕ್ತಿಯಿಂದಲೇ ಉಂಟಾಗುತ್ತದೆ. ಈಶ್ವರನಿಗೆ ಶಕ್ತಿ ಇಲ್ಲದಿದ್ದರೆ ಎಲ್ಲಿಯೂ ಶಕ್ತಿಯು ಇಲ್ಲವೆಂದಾಗುತ್ತದೆ. 'ನಿನ್ನನ್ನು ಬಿಟ್ಟು ಹತ್ತಿರದಲ್ಲಾಗಲೀ, ದೂರದಲ್ಲಾಗಲೀ ಯಾವ ವಸ್ತುವೂ ಚಲಿಸುವುದಿಲ್ಲ' ಎಂದು ಶ್ರುತಿಯು ಗರ್ಜಿಸುತ್ತಿದೆಯಷ್ಟೇ?

**ಭಾವವಿಲಾಸಿನೀ**– ತರ್ಹ್ಯವಿದ್ಯಾಸಾಮರ್ಥ್ಯಾತ್ ಭವಿಷ್ಯತೀತ್ಯತ ಆಹ – **ಈಶಶಕ್ತ್ಯೇತಿ** ॥ ನೋ ಚೇತ್ ಈಶಶಕ್ತಿರ್ನ ಚೇತ್ । ಉಕ್ತಾರ್ಥೇ ಪ್ರಮಾಣಂ ಸೂಚಯತಿ– **ನರ್ತ ಇತಿ** ॥ ೪೯೨ ॥

**ವಿವರಣೆ**– ಬ್ರಹ್ಮನಿಗೆ ಶಕ್ತಿಯಿಲ್ಲದಿದ್ದರೂ ಅವಿದ್ಯೆಯ ಶಕ್ತಿಯಿಂದ ಬ್ರಹ್ಮನು ಸಂಸಾರದಲ್ಲಿ ಮುಳುಗುತ್ತಾನೆ ಎಂದು ಹೇಳಿದರೆ ಅದಕ್ಕೆ ಇಲ್ಲಿ ಉತ್ತರವನ್ನು ಹೇಳುತ್ತಿದ್ದಾರೆ. ಎಲ್ಲ ಶಕ್ತಿಗಳಿಗೂ ಬ್ರಹ್ಮನ ಶಕ್ತಿಯೇ ಮೂಲ. ಬ್ರಹ್ಮನಿಗೆ ಶಕ್ತಿ ಇಲ್ಲದಿದ್ದರೆ ಅವಿದ್ಯೆಗೂ ಶಕ್ತಿ ಇಲ್ಲವೇ ಇಲ್ಲ. ನಋತೇ ತ್ವತ್ಕ್ರಿಯತೇ ಎಂಬ ಶ್ರುತಿಯು ಬ್ರಹ್ಮನ ಶಕ್ತಿಯ ಪ್ರಯೋಗವಿಲ್ಲದೇ ಯಾವ ಪದಾರ್ಥವೂ ಎಲ್ಲಿಯೂ ಚಲಿಸುವುದಿಲ್ಲ ಎಂದು ಸ್ಪಷ್ಟವಾಗಿ ಹೇಳುತ್ತಿದೆ.

**ಸ ಕಿಲಾಂಬಾಂಕಗೋಪಾಲಃ ಕುಕ್ಷೌ ಮಹದಿದಂ ಜಗತ್ ॥ ೪೯೩ ॥**

**ಅರ್ಥ**– ಸಃ= ಕೃಷ್ಣನು, ಅಂಬಾಂಕಗೋಪಾಲಃ= ತಾಯಿಯ ತೊಡೆಯಲ್ಲಿ ಮಲಗಿದ ಗೋಪಾಲನಾದ ಶಿಶುವಷ್ಟೇ, ಇದಂ ಮಹದ್ ಜಗತ್= ಈ ದೊಡ್ಡ ಜಗತ್ತು, ಕುಕ್ಷೌ ಕಿಲ= ಅವನ ಉದರದಲ್ಲಿದೆಯಷ್ಟೇ?

**ಅನುವಾದ**– ಅವನು ತಾಯಿಯ ತೊಡೆಯಲ್ಲಿ ಮಲಗಿದ ಗೋಪಾಲ ಶಿಶು. ಅವನ ಕುಕ್ಷಿಯಲ್ಲಿ ಈ ದೊಡ್ಡದಾದ ಜಗತ್ತು.

**ಭಾವವಿಲಾಸಿನೀ**– ಅಸ್ಮಾಕಂ ಮತೇ ತು ಸರ್ವೇಶ್ವರಸ್ಯ ಭಗವತೋ ವಿಚಿತ್ರಶಕ್ತಿಮತ್ತ್ವಾದಣಿಮಾದ್ಯಷ್ಟೈಶ್ವರ್ಯಸಂಪನ್ನತ್ವಾಚ್ಚ ವ್ಯಾಪ್ತಿರ್ಗಮನಾಗಮನಾದಿಕಂ ಚ ಘಟತ ಇತ್ಯಾಹ– **ಸ ಕಿಲೇತಿ** ॥

ಸಃ ಕೃಷ್ಣರೂಪೀ ನಾರಾಯಣಃ । ಏಕದಾಽರ್ಭಕಮಾದಾಯ ಸ್ವಾಂಕಮಾರೋಪ್ಯ ಭಾಮಿನೀ । ಪ್ರಸ್ತು(ಸು)ತಂ ಪಾಯಯಾಮಾಸ ಸ್ತನಂ ಸ್ನೇಹಪರಿಪ್ಲುತಾ । ಪೀತಪ್ರಾಯಸ್ಯ ಜನನೀ ಸುತಸ್ಯ ರುಚಿರಸ್ಮಿತಮ್ । ಮುಖಂ ಲಾಲಯತೀ ರಾಜನ್‌ಜೃಂಭತೋ ದದೃಶೇ ಇದಮ್ । ಖಂ ರೋದಸೀ ಜ್ಯೋತಿರನೀಕಮಾಸ್ಯೇ ಸೂರ್ಯೇಂದುವಹ್ನಿಶ್ವಸನಾಂಬುಪಾಂಶ । ದ್ವೀಪಾನ್ನಗಾಂಸ್ತ-ದ್ದುಹಿತೃರ್ವನಾನಿ ಭೂತಾನಿ ಯಾನಿ ಸ್ಥಿರಜಂಗಮಾನಿ ॥ ಇತಿ ಭಾಗವತೀಂ ಕಥಾಂ ಕಿಲೇತ್ಯನೇನ ಸ್ಮಾರಯತಿ ॥ ೪೯೩॥

**ವಿವರಣೆ–** ನಮ್ಮ ಮತದಲ್ಲಾದರೆ ಸರ್ವೇಶ್ವರನಾದ ಭಗವಂತನಿಗೆ ವಿಚಿತ್ರ ಶಕ್ತಿಗಳಿರುವುದರಿಂದ ಅಣಿಮಾದ್ಯೈಶ್ವರ್ಯಬಲದಿಂದ ಅವನಿಗೆ ವ್ಯಾಪ್ತಿಯೂ, ಗಮನಾಗಮನಗಳೂ ಎಲ್ಲವೂ ಕೂಡುತ್ತವೆ ಎಂದು ಹೇಳುತ್ತಾರೆ. ಭಾಗವತದಲ್ಲಿ ಯಶೋದೆಯ ತೊಡೆಯ ಮೇಲೆ ಮಲಗಿದ ಶಿಶುವಾದ ಕೃಷ್ಣನು ತನ್ನ ಬಾಯಿಯಲ್ಲಿ ತಾಯಿಗೆ ಇಡೀ ಜಗತ್ತನ್ನೇ ತೋರಿಸಿದ ಕಥೆಯನ್ನು ಪ್ರಸ್ತಾವಿಸಿ ದೇವರ ಅಚಿಂತ್ಯಶಕ್ತಿಯನ್ನು ಇಲ್ಲಿ ಉಪಪಾದನೆ ಮಾಡುತ್ತಾರೆ. ಕೃಷ್ಣನ ಬಾಯಲ್ಲಿ ಅವರು ನೋಡಿದ ವಸ್ತುಗಳನ್ನು ಭಾಗವತವು 'ಖಂ ರೋದಸೀ ಜ್ಯೋತಿರನೀಕ ಮಾಸ್ಯೇ ಸೂರ್ಯೇಂದು ವಹ್ನಿಶ್ವಸನಾಂಬುಧೀಂಶ್ಚ । ದ್ವೀಪಾನ್ ನಗಾನ್ ತದ್ದುಹಿತೄಃ ವನಾನಿ ಭೂತಾನಿ ಯಾನಿ ಸ್ಥಿರಜಂಗಮಾನಿ ॥' ಎಂದು ಹೇಳುತ್ತದೆ. ಭೂಮಿ, ಅಂತರಿಕ್ಷ, ಜ್ಯೋತಿರ್ಮಂಡಲ, ಸೂರ್ಯ ಚಂದ್ರ, ವಹ್ನಿ, ವಾಯುಗಳು, ಮೋಡಗಳು, ದ್ವೀಪಗಳು, ನದಿಗಳು, ಕಾಡುಗಳು, ಸ್ಥಾವರಜಂಗಮವಾದ ಎಲ್ಲ ಪ್ರಾಣಿಗಳು ಎಲ್ಲವೂ ಒಂದು ಪುಟ್ಟ ಬಾಯಲ್ಲಿಯೇ ಅಡಗಿರುವಾಗ ಅದರಿಂದ ಕೃಷ್ಣನ ಅಚಿಂತ್ಯಶಕ್ತಿಯು ತಿಳಿದುಬರುತ್ತವೆ.

ವಿಚಿತ್ರಶಕ್ತಿಯುಕ್ತೋಽಸೌ ಸರ್ವಜ್ಞಃ ಸಕಲೇಶ್ವರಃ ।
ಸ್ವತಂತ್ರೋಽಖಿಲಕರ್ತಾ ಚ ಸದಾಽಣೀಯಾನ್ ಮಹಾನ್ ಕಿಲ ॥ ೪೯೪ ॥

**ಅರ್ಥ–** ಅಸೌ= ಈ ಪರಮಾತ್ಮನು, ವಿಚಿತ್ರಶಕ್ತಿಯುಕ್ತಃ= ವಿಚಿತ್ರ ಶಕ್ತಿಯಿಂದ ಸಂಪನ್ನನಾಗಿದ್ದಾನೆ, ಅವನು, ಸರ್ವಜ್ಞಃ= ಸರ್ವಜ್ಞನು, ಸಕಲೇಶ್ವರಃ= ಸರ್ವಪ್ರಭುವು, ಸ್ವತಂತ್ರಃ= ಸ್ವತಂತ್ರನಾದವನು, ಅಖಿಲಕರ್ತಾ= ಸಕಲ ಕಾರ್ಯಗಳಿಗೂ ಕರ್ತೃವಾದವನು, ಚ= ಮತ್ತು, ಸದಾಽಣೀಯಾನ್= ಯಾವಾಗಲೂ ಅಣುವಿಗಿಂತ ಚಿಕ್ಕವನಾದವನು, ಮಹಾನ್ ಕಿಲ= ಮತ್ತು ಯಾವಾಗಲೂ ಮಹತ್ ಪರಿಮಾಣವುಳ್ಳವನು ಆಗಿರುವನಷ್ಟೇ?

**ಅನುವಾದ–** ಈ ಪರಮಾತ್ಮನು ವಿಚಿತ್ರಶಕ್ತಿ ಸಂಪನ್ನನಾದವನು. ಆದ್ದರಿಂದ ಅವನು ಸರ್ವಜ್ಞನು, ಸಕಲ ಪ್ರಭುವು, ಸ್ವತಂತ್ರನು, ಅಖಿಲ ಕರ್ತೃವು, ಯಾವಾಗಲೂ ಅಣುವಿಗಿಂತ ಅಣುವು, ಮತ್ತು ಮಹತ್ ಪರಿಮಾಣ ಉಳ್ಳವನೂ ಆಗಿದ್ದಾನಷ್ಟೇ?

**ಭಾವವಿಲಾಸಿನೀ–** ಅನೇನ ಭಗವತೋ ವಿಚಿತ್ರಶಕ್ತಿಮತ್ತ್ವಾಣುತ್ವಮಹತ್ತ್ವ ಸರ್ವೇಶ್ವರತ್ವಾದಿಕಂ ಸರ್ವಮಪಿ ಸಿದ್ಧಮಿತ್ಯಾಹ – **ವಿಚಿತ್ರಶಕ್ತಿಯುಕ್ತ ಇತ್ಯಾದಿನಾ** ॥ ೪೯೪ ॥

**ವಿವರಣೆ–** ವಿಚಿತ್ರ ಶಕ್ತಿ ಇರುವುದರಿಂದ ಪರಮಾತ್ಮನಿಗೆ ಅಣುತ್ವ, ಮಹತ್ವ, ಸರ್ವೇಶ್ವರತ್ವಾದಿ ಸಕಲ ಧರ್ಮಗಳೂ ಉಪಪನ್ನವಾಗುತ್ತದೆ ಎಂದು ಇಲ್ಲಿ ಹೇಳುತ್ತಾರೆ. ಆತ್ಮನಿ ಚೈವಂ ವಿಚಿತ್ರಾಶ್ಚ ಹಿ ಎಂಬ ಬ್ರಹ್ಮಸೂತ್ರದಲ್ಲಿ ಈ ಅರ್ಥವನ್ನು ಪ್ರತಿಪಾದನೆ ಮಾಡಿರುವುದನ್ನು ಮನಸ್ಸಿನಲ್ಲಿಟ್ಟುಕೊಂಡು ವಿಚಿತ್ರಶಕ್ತಿಯುಕ್ತೋಸೌ ಎಂದು ಪ್ರಯೋಗ ಮಾಡಿದ್ದಾರೆ.

**ತಚ್ಛಕ್ತ್ಯಾ ಕಿಂ ನ ಘಟತೇ ಸೋಽಪಿ ನ ಸ್ವಾತ್ಮಘಾತಕಃ ।**
**ಸ್ವರೋಮಾಪಿ ಕ್ವಚಿಚ್ಚಕ್ರೀ ಚಕ್ರೇಣ ನಿಚಕರ್ತ ಕಿಂ ॥ ೪೫ ॥**

**ಅರ್ಥ–** ತಚ್ಛಕ್ತ್ಯಾ= ಅವನ ಶಕ್ತಿಯಿಂದ, ಕಿಂ ನ ಘಟತೇ= ಯಾವುದು ಉಪಪನ್ನವಾಗುವುದಿಲ್ಲ? ಸೋಽಪಿ= ಅವನಾದರೂ, ಸ್ವಾತ್ಮಘಾತಕಃ ನ= ತನ್ನನ್ನೇ ತಾನು ಹಿಂಸೆ ಮಾಡಿಕೊಳ್ಳುವುದಿಲ್ಲ, ಚಕ್ರೀ= ಚಕ್ರಾಯುಧವನ್ನು ಧರಿಸಿದ ಅವನು, ಕ್ವಚಿತ್= ಎಲ್ಲಿಯಾದರೂ, ಸ್ವರೋಮಾಪಿ= ತನ್ನ ರೋಮವನ್ನಾದರೂ ಕೂಡ, ಚಕ್ರೇಣ= ಚಕ್ರದಿಂದ, ನಿಚಕರ್ತ ಕಿಂ= ಕತ್ತರಿಸಿದನೇನು?

**ಅನುವಾದ–** ಅವನ ವಿಚಿತ್ರಶಕ್ತಿಯಿಂದ ಎಲ್ಲವೂ ಉಪಪನ್ನವಾಗುತ್ತದೆ. ಆದರೂ ಅವನು ತನಗೆ ತಾನು ಹಿಂಸೆಯನ್ನು ಮಾಡಿಕೊಳ್ಳುವುದಿಲ್ಲ. ಚಕ್ರಾಯುಧವನ್ನು ಧರಿಸಿದ ಅವನು ಎಲ್ಲಿಯಾದರೂ ತನ್ನ ಚಕ್ರದಿಂದ ತನ್ನ ರೋಮವನ್ನಾದರೂ ಕತ್ತರಿಸಿದನೇನು?

**ಭಾವವಿಲಾಸಿನೀ–** ಸೋಽಪಿ ವಿಚಿತ್ರಶಕ್ತಿಯುಕ್ತೋಽಪಿ । ಸ್ವಾತ್ಮಘಾತಕಃ । ನಾನಾಜೀವಾಕೃತ್ಯಾ ನರಕಯಾತನಾದ್ಯನರ್ಥಸಾರ್ಥೇನ ಸ್ವಾತ್ಮನೋ ಘಾತಕಃ। ನಹಿ ಕೋಽಪಿ ಪ್ರೇಕ್ಷಾವಾನ್ ಸ್ವಸತ್ತ್ವಂ ಸ್ವಶಿರಶ್ಛೇದಾಯ ಪ್ರಯುಂಕ್ತ ಇತಿ ಭಾವಃ । ತದೇವ ವಿಶದಯತಿ – **ಸ್ವರೋಮಾಪೀತಿ** ॥ ಅತಃ ಸ್ವಚಿತ್ರಶಕ್ತ್ಯಾಽಣಿಮಾದ್ಯೈಶ್ವರ್ಯಮೇವ ಸ್ವಾತ್ಮನಿ ಘಟಯೇತ್ । ಜನನಮರಣನರಕಾದ್ಯನೇಕ-ದುಃಖಸಂಪಾದಕಜೀವಭಾವಂ ಕದಾಪಿ ನ ಘಟಯೇತ್ । ಕಿಂತು ದೂರಾಪಾಸ್ತಮೇವ ಕುರ್ಯಾತ್ ॥ ೪೫ ॥

**ವಿವರಣೆ–** ಪರಮಾತ್ಮನಿಗೆ ವಿಚಿತ್ರ ಶಕ್ತಿ ಇದ್ದರೂ, ಅದರಿಂದ ತನ್ನ ಐಶ್ವರ್ಯ ದ್ಯೋತಕವಾದ ಅಣುತ್ವ, ಮಹತ್ವ, ಪ್ರಯುಕ್ತ ಕಾರ್ಯಗಳನ್ನೇ ತೋರಿಸುತ್ತಾನೆಯೇ ಹೊರತು ವಿಚಿತ್ರ ಶಕ್ತಿಯಿಂದ ಆತ್ಮಘಾತವನ್ನು ಮಾಡಿಕೊಳ್ಳುವುದಿಲ್ಲ. ಸಮರ್ಥನಾದ ಅವನು ಜೀವಭಾವವನ್ನು ತಾನೇ ತಂದುಕೊಂಡರೆ ಅದು ನಾನಾ ಯೋನಿಗಳಲ್ಲಿ ಜನನಮರಣದುಃಖಾದಿಅನುಭವ ರೂಪವಾದುದರಿಂದ ಆತ್ಮಘಾತಕ್ಕೆ ಸಮಾನ ವಾಗುತ್ತದೆ. ವಿವೇಕಿಯಾದ ಪರಮಾತ್ಮನು ಆದ್ದರಿಂದ ಅದನ್ನು ದೂರದಲ್ಲಿಯೇ ಇರಿಸಿ ಜೀವರಿಗೆ ಸಂಬಂಧವನ್ನು ಉಂಟುಮಾಡುತ್ತಾನೆ ಎಂದು ಅಭಿಪ್ರಾಯ.

**ಸತ್ಯಸಂಕಲ್ಪತ್ತೋ ವಿಷ್ಣುಃ ಕುರುತೇ ಕ್ವಚಿದದ್ಭುತಂ ।**
**ಕ್ವಚಿಚ್ಚ ನ ಕರೋತೀಶೋ ನಾಸಾಧ್ಯಂ ತಸ್ಯ ವಿದ್ಯತೇ ॥ ೪೯೬ ॥**

**ಅರ್ಥ–** ಸತ್ಯಸಂಕಲ್ಪತಃ= ಸತ್ಯಸಂಕಲ್ಪನಾಗಿರುವ ಕಾರಣ, ವಿಷ್ಣುಃ= ವಿಷ್ಣುವು, ಕ್ವಚಿತ್= ಕೆಲವು ಸ್ಥಳದಲ್ಲಿ, ಅದ್ಭುತಂ ಕುರುತೇ= ಅದ್ಭುತವನ್ನು ಮಾಡುತ್ತಾನೆ, ಈಶಃ= ಸಮರ್ಥನಾದ ಅವನು, ಕ್ವಚಿತ್= ಇನ್ನು ಕೆಲವು ಕಡೆ, ನ ಕರೋತಿ= ಮಾಡುವುದಿಲ್ಲ, ತಸ್ಯ= ಅವನಿಗೆ, ಅಸಾಧ್ಯಂ= ಸಾಧ್ಯವಲ್ಲದುದು, ನ ವಿದ್ಯತೇ= ಯಾವುದೂ ಇಲ್ಲ.

**ಅನುವಾದ–** ವಿಷ್ಣುವು ಸತ್ಯಸಂಕಲ್ಪನಾದುದರಿಂದ ಕೆಲವು ಕಡೆ ಅದ್ಭುತವಾದ ಅಚಿಂತ್ಯವಾದ ಕಾರ್ಯವನ್ನು ಮಾಡುತ್ತಾನೆ. ಇನ್ನು ಕೆಲವು ಕಡೆ ಮಾಡುವುದಿಲ್ಲ. ಪ್ರಭುವಾದ ಅವನಿಗೆ ಅಸಾಧ್ಯವಾದುದು ಯಾವುದೂ ಇಲ್ಲ.

**ಭಾವವಿಲಾಸಿನೀ–** ತರ್ಹಿ ಸ್ವಾತ್ಮನೀವ ಗಗನಾದೇರಪಿ ಗತಾಗತಂ ಕುತೋ ನ ದದಾತೀತ್ಯತ ಆಹ – **ಸತ್ಯಸಂಕಲ್ಪತ ಇತಿ ॥** ಸ್ವತಂತ್ರಚೇತನತ್ವಾತ್ ಸ್ವಸಂಕಲ್ಪಾನುಸಾರೇಣೈವ ಕುರ್ಯಾತ್ । ಗಗನಗಮನಾದಿಕಂ ಚ ಸಮರ್ಥೋऽಪಿ ಸ್ವಸಂಕಲ್ಪವಿರುದ್ಧತ್ವಾನ್ನ ಕರೋತೀತಿ ಭಾವಃ ॥ ೪೯೬ ॥

**ವಿವರಣೆ–** ತನಗೆ ಗಮನಾಗಮನಗಳನ್ನು ಸಂಘಟಿಸುವಂತೆ ಪರಮಾತ್ಮನು ವಿಚಿತ್ರ ಶಕ್ತಿಯಿಂದ ಆಕಾಶಕ್ಕೂ ಗಮನಾಗಮನಗಳನ್ನು ಉಂಟು ಮಾಡಲಿ ಎಂಬ ಆಕ್ಷೇಪಕ್ಕೆ ಇಲ್ಲಿ ಪರಿಹಾರವನ್ನು ಹೇಳುತ್ತಾರೆ. ಅವನು ಸತ್ಯಸಂಕಲ್ಪನು ಮತ್ತು ಸಮರ್ಥನಾದವನು. ಅವನ ಸಂಕಲ್ಪಕ್ಕೆ ಬಂದಂತೆ ಮಾಡುತ್ತಾನೆ. ಆ ಸಂಕಲ್ಪವನ್ನು ಯಾರೂ ನಿಯಂತ್ರಿಸಲು ಸಾಧ್ಯವಿಲ್ಲ. ಆಕಾಶಕ್ಕೂ ಗಮನಾಗಮನವನ್ನು ಉಂಟುಮಾಡುವ ಸಾಮರ್ಥ್ಯವು ಅವನಿಗಿದೆ. ಆದರೆ ಅವನು ಮಾಡುವುದಿಲ್ಲ. ಆಕಾಶದ ಗಮನಾಗಮನದ ಅಭಾವವನ್ನು ನೋಡಿ ಅವನ ಸಂಕಲ್ಪವನ್ನು ನಾವು ಊಹಿಸಬೇಕಷ್ಟೇ ಎಂದು ಅಭಿಪ್ರಾಯ.

**ಯದಿ ಬ್ರೂಷೇ ಜಡಂ ಶಕ್ತಂ ಜಿತಂ ಸಾಂಖ್ಯಕುಮಾರಕೈಃ ।**
**ಜಡಪ್ರಕೃತಿಕರ್ತೃತ್ವವಾದಸ್ಯಾಪ್ಯನುಪದ್ರವಾತ್ ॥ ೪೯೭ ॥**

**ಅರ್ಥ–** ಯದಿ= ಒಂದು ಪಕ್ಷ, ಜಡಂ= ಜಡವು, ಶಕ್ತಂ= ಶಕ್ತಿಯನ್ನು ಹೊಂದಿದೆ ಎಂದು, ಬ್ರೂಷೇ= ನೀನು ಹೇಳುವುದಾದರೆ, ಸಾಂಖ್ಯಕುಮಾರಕೈಃ= ಸಾಂಖ್ಯ ಬಾಲಕರಿಂದಲೇ, ಜಿತಂ= ಗೆಲ್ಲಲ್ಪಡುತ್ತದೆ, ಏಕೆಂದರೆ, ಜಡಪ್ರಕೃತಿಕರ್ತೃತ್ವವಾದಸ್ಯಾಪಿ= ಜಡಪ್ರಕೃತಿಕರ್ತೃತ್ವ-ವಾದಕ್ಕೂ ಕೂಡ, ಅನುಪದ್ರವಾತ್= ಇದರಿಂದ ಬಾಧಕವಿಲ್ಲ.

**ಅನುವಾದ–** ಜಡವಾದ ಅಜ್ಞಾನಕ್ಕೆ ವಿಚಿತ್ರ ಶಕ್ತಿಯಿದೆ ಎಂದು ನೀನು ಹೇಳುವುದಾದರೆ ಜಡವಾದ ಪ್ರಕೃತಿಯೇ ಜಗತ್ತಿಗೆ ಕರ್ತೃ ಎಂದು ಹೇಳುವ ಸಾಂಖ್ಯಮತಕ್ಕೆ ಯಾವ ಬಾಧಕವೂ ಇಲ್ಲವಾದ್ದರಿಂದ ಸಾಂಖ್ಯಬಾಲಕರೇ ನಿನ್ನನ್ನು ಜಯಿಸುತ್ತಾರೆ.

**ಭಾವವಿಲಾಸಿನೀ–** ನನ್ವೇತಾದೃಶೀಶಕ್ತಿರವಿದ್ಯಾಯಾ ಏವ ಭವತು । ಸಾ ಚ ಶಕ್ತಿರಹಿತಂ ಬ್ರಹ್ಮ ಜೀವಭಾವಂ ಪ್ರಾಪಯತ್ವಿತಿ ಶಂಕಾಂ ಪ್ರಮಾಣಾಭಾವೇನ ಯಶೋದಾಪ್ರತ್ಯಕ್ಷವಿರೋಧೇನ ಚ ನಿರಾಕೃತಾಮಪಿ ಯುಕ್ತ್ಯಂತರೈರ್ನಿರಾಕರೋತಿ – **ಯದೀತಿ** ॥ ಈಶ್ವರಮನಂಗೀಕೃತ್ಯ ಜಡಪ್ರಧಾನಸ್ಯೈವ ಸರ್ವಸಮರ್ಥತ್ವಂ ವದಂತಸ್ಸಾಂಖ್ಯಾಃ ಖಲು ತವ ಪೂರ್ವಪಕ್ಷಿಣಃ । ತ್ವಯಾಪೀಶ್ವರಂ ವಿಹಾಯ ಜಡಸ್ಯೈವ ಸಾಮರ್ಥ್ಯಾಂಗೀಕಾರೇ ನುಮ್ನುಟೋಃ ಕೋ ವಿಶೇಷ ಇತಿ ವದಂತಸ್ತ ಏವ ಜಿಗ್ಯುರಿತಿ ಭಾವಃ । ಪಂಡಿತಾಃ ಕಿಮು । ಯದ್ಬಾಲಕೋಽಪಿ ಜೀಯಾದಿತಿ ಸೂಚನಾಯ ಕುಮಾರಪದಮ್ । ತದೇವೋಪಪಾದಯತಿ – **ಜಡೇತಿ** ॥ ಅನುಪದ್ರವಾತ್ ಬಾಧಕಾಭಾವಾದಿತ್ಯರ್ಥಃ ॥ ೪೯೭ ॥

**ವಿವರಣೆ–** ಪರಮಾತ್ಮನಿಗೆ ಒಪ್ಪುವ ಅಚಿಂತ್ಯಶಕ್ತಿ ವಿಶೇಷವನ್ನು ನಾವು ಅಜ್ಞಾನಕ್ಕೇ ಒಪ್ಪುತ್ತೇವೆ ಎಂದು ಹೇಳಿದರೆ ಅದಕ್ಕೆ ಇಲ್ಲಿ ದೋಷವನ್ನು ಹೇಳುತ್ತಾರೆ. ಸಾಂಖ್ಯರು ಈಶ್ವರನನ್ನು ಅಂಗೀಕರಿಸದೇ ಜಡವಾದ ಪ್ರಕೃತಿಯೇ ಜಗತ್ತಿನ ಸಮಸ್ತ ಕಾರ್ಯಗಳನ್ನು ಮಾಡುತ್ತದೆ ಎಂದು ಹೇಳುತ್ತಾರೆ. ನೀನು ಬ್ರಹ್ಮನನ್ನು ಸರ್ವಸಾಮರ್ಥ್ಯ ವಿಧುರ ಎಂದು ಹೇಳಿ, ಅವಿದ್ಯೆಗೆ ವಿಚಿತ್ರಶಕ್ತಿವಿಶೇಷವನ್ನು ಒಪ್ಪಿದರೆ ಸಾಂಖ್ಯಮತಕ್ಕೆ ಏನೂ ಬಾಧಕವಿಲ್ಲವಾದ್ದರಿಂದ ಸಾಂಖ್ಯರ ಮಕ್ಕಳೂ ನಿನ್ನನ್ನು ಜಯಿಸುತ್ತಾರೆ. ಇನ್ನು ವಿದ್ವಾಂಸರು ನಿನ್ನನ್ನು ಜಯಿಸುವುದು ಯಾವ ದೊಡ್ಡ ವಿಷಯ ಎಂದು ಅಭಿಪ್ರಾಯ.

ಜಡಸ್ಯ ನ ವಿವೇಕೋಽಸ್ತಿ ಛಿಂದ್ಯಾತ್ ತರ್ಹಿ ನಭೋಽಪಿ ತತ್ ॥ ೪೯೮ ॥

ಚಿತ್ಖಂಡನೇ ಸಮರ್ಥಸ್ಯ ಸುಕರಂ ಜಡಖಂಡನಂ ।
ವೃಕ್ಷಚ್ಛೇದಿಕುಠಾರಸ್ಯ ಪತ್ರಚ್ಛೇದೇ ನ ಕಿಂ ಬಲಂ ॥ ೪೯೯ ॥

**ಅರ್ಥ–** ಜಡಸ್ಯ= ಜಡಕ್ಕೆ, ವಿವೇಕಃ ನಾಸ್ತಿ= ವಿವೇಕವು ಇಲ್ಲ, ತರ್ಹಿ= ಆದ್ದರಿಂದ, ತತ್= ಆ ಜಡವು, ನಭೋಽಪಿ= ಆಕಾಶವನ್ನೂ ಕೂಡ, ಛಿಂದ್ಯಾತ್= ಛೇದಿಸಲಿ, ಚಿತ್ಖಂಡನೇ= ಚೈತನ್ಯವನ್ನು ಛೇದಿಸುವುದಕ್ಕೇ, ಸಮರ್ಥಸ್ಯ= ಸಮರ್ಥವಾದ, ಆ ಜಡಕ್ಕೆ, ಜಡಖಂಡನಂ= ಜಡವನ್ನು ಛೇದಿಸುವುದು, ಸುಕರಂ= ಇನ್ನೂ ಸುಲಭವಾದುದು, ವೃಕ್ಷಚ್ಛೇದಿಕುಠಾರಸ್ಯ= ಮರವನ್ನು ಕತ್ತರಿಸುವ ಕೊಡಲಿಗೆ, ಪತ್ರಚ್ಛೇದೇ= ಎಲೆಯನ್ನು ಕತ್ತರಿಸುವ ವಿಷಯದಲ್ಲಿ, ಬಲಂ ಕಿಂ ನ= ಶಕ್ತಿ ಇಲ್ಲವೇನು?

**ಅನುವಾದ–** ಜಡಕ್ಕೆ ವಿವೇಕವಿಲ್ಲ. ಆದ್ದರಿಂದ ಅದು ಆಕಾಶವನ್ನೂ ಛೇದಿಸಲಿ. ಚೈತನ್ಯವನ್ನೇ ಛೇದಿಸುವ ಸಾಮರ್ಥ್ಯವನ್ನು ಹೊಂದಿರುವ ಜಡವಾದ ಅವಿದ್ಯೆಗೆ ಜಡವನ್ನು ಛೇದಿಸುವುದು ಇನ್ನೂ ಸುಲಭವಾದುದು. ಮರವನ್ನು ಕತ್ತರಿಸುವ ಕೊಡಲಿಗೆ ಎಲೆಯನ್ನು ಕತ್ತರಿಸುವ ಶಕ್ತಿ ಇಲ್ಲವೇನು?

**ಭಾವವಿಲಾಸಿನೀ–** ದೂಷಣಾಂತರಂ ಚಾಹ – **ಜಡಸ್ಯೇತಿ** ॥ ತತ್ ಜಡಮ್ । ಈಶ್ವರಸ್ತು ಸರ್ವಜ್ಞಚೇತನತಯಾ ವಿವೇಕಿತ್ವಾತ್ ಪ್ರಮಾಣಾನಾಮನುಕೂಲಮೇವ ಕುರ್ಯಾತ್ । ಅನನುಕೂಲಂ ತ್ಯಜೇತ್ । ಜಡಂ ತ್ವವಿವೇಕಿತ್ವಾತ್ ಅಘಟಿತಘಟಕಶಕ್ತಿದಾನೇ ಸರ್ವಮಪ್ಯ-ಘಟಿತಂ ಕುರ್ಯಾದೇವ । ನ ಹ್ಯಸಿಧಾರಾ ವೈರಿಣಮೇವ ನಿಕೃಂತತೀತಿ ನಿಯಮೋಽಸ್ತೀತಿ ಭಾವಃ ॥ ೪೯೮ ॥

ಅವಿದ್ಯಾಯಾ ಗಗನಖಂಡನೇ ಕೈಮುತ್ಯಮಾಹ – **ಚಿತ್‌ಖಂಡನ ಇತಿ** ॥ ತತ್ರ ದೃಷ್ಟಾಂತಮಾಹ – **ವೃಕ್ಷಚ್ಛೇದೀತಿ** ॥ ೪೯೯ ॥

**ವಿವರಣೆ–** ಈಶ್ವರನು ವಿವೇಕಿಯಾಚೇತನನಾದ್ದರಿಂದ ತನ್ನ ಸಂಕಲ್ಪಕ್ಕೆ ಅನುಸಾರವಾಗಿ ಪ್ರಮಾಣಕ್ಕೆ ಅನುಕೂಲವಾದ ಕಾರ್ಯವನ್ನೇ ಮಾಡುತ್ತಾನೆ. ಜಡವಾದ ಅಜ್ಞಾನಕ್ಕೆ ವಿವೇಕವಿಲ್ಲದಿರುವುದರಿಂದ ಅದರ ಸಾಮರ್ಥ್ಯಕ್ಕೆ ಅನುಗುಣವಾಗಿ ಕಾರ್ಯವನ್ನು ಮಾಡುವುದಾದರೆ ಚೇತನನನ್ನು ಕತ್ತರಿಸಿದಂತೆ ಆಕಾಶವನ್ನು ಕತ್ತರಿಸಲಿ ಎಂದು ಅಭಿಪ್ರಾಯ.

**ಉಕ್ತಶ್ರುತಿಪ್ರಮಾಣಾಚ್ಚ ಪಯೋಂಬುವದಿತಿ ಸ್ಮೃತೇಃ ।**
**ಮಣಿಮಂತ್ರೌಷಧಾದೀನಾಂ ಪ್ರಭಾವೋಪಿ ಪ್ರಭೋರ್ವಶೇ ॥ ೫೦೦ ॥**

**ಅರ್ಥ–** ಮಣಿಮಂತ್ರೌಷಧಾದೀನಾಂ = ಮಣಿ, ಮಂತ್ರ, ಔಷಧಾದಿಗಳ ಪ್ರಭಾವಃ ಅಪಿ = ಸಾಮರ್ಥ್ಯವೂ ಕೂಡ ಉಕ್ತಿಶ್ರುತಿಪ್ರಮಾಣಾತ್ = ಹಿಂದೆ ಹೇಳಿದ (ನ ಋತೇ ತ್ವತ್ ಕ್ರಿಯತೇ.. ಇತ್ಯಾದಿ) ಶ್ರುತಿಪ್ರಮಾಣದಿಂದಲೂ ಪಯೋಂಬುವದಿತಿ ಸ್ಮೃತೇಶ್ಚ = ಪಯೋಂಬುವಚ್ಚೇತ್ತತ್ರಾಪಿ ಎಂಬ ಬ್ರಹ್ಮಸೂತ್ರದಿಂದಲೂ ಕೂಡ ಪ್ರಭೋಃ = ಸ್ವಾಮಿಯಾದ ಭಗವಂತನ ವಶೇ = ಅಧೀನದಲ್ಲಿ (ಅಸ್ತಿ = ಇದೆ.)

**ಅನುವಾದ–** ಭಗವಂತನ ಪ್ರೇರಣೆಯಿಲ್ಲದೆ ಒಂದು ಹುಲ್ಲುಕಡ್ಡಿಯೂ ಅಲುಗಾಡಲಾರದು, ಜೀವಜಡಾದಿಗಳಲ್ಲಿರುವ ಸಕಲ ಕ್ರಿಯೆಗಳೂ ಭಗವಂತನ ಪ್ರೇರಣೆಯಿಂದಲೇ ಆಗುವುದು ಎಂದು ಪ್ರತಿಪಾದಿಸುವ ನ ಋತೇ ತ್ವತ್ಕ್ರಿಯತೇ ಕಿಂಚನಾರೇ ಇತ್ಯಾದಿ ಶ್ರುತಿಗಳಿಂದಲೂ, ಹಾಗಯೇ ಹಾಲು ಮೊಸರಾಗಬೇಕಾದರೂ, ನೀರು ಹರಿಯಬೇಕಾದರೂ ಭಗವಂತನ ಪ್ರೇರಣೆ ಬೇಕೆಂದು ಪ್ರತಿಪಾದಿಸುವ ಪಯೋಂಬುವಚ್ಚೇತ್ತತ್ರಾಪಿ ಎಂಬ ಬ್ರಹ್ಮಸೂತ್ರ-ದಿಂದಲೂ ಜೀವಜಡಾದಿಗಳಲ್ಲಿರುವ ಎಲ್ಲ ಸಾಮರ್ಥ್ಯವೂ ಭಗವಂತನ ಅಧೀನವೇ ಹೊರತು ಸ್ವಾತಂತ್ರ್ಯೇಣ ಇಲ್ಲ ಎಂದು ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ಕಥಂ ತರ್ಹಿ ಮಣಿಮಂತ್ರೌಷಧಾದೀನಾಂ ಜಡಾನಾಮಪಿ ಸಾಮರ್ಥ್ಯ-ದರ್ಶನಮಿತಿ ತಟಸ್ಥಾಶಂಕಾಂ ಪರಿಹರತಿ – **ಉಕ್ತೇತಿ** ॥ ಉಕ್ತಾಶ್ರುತಿಃ, ನ ಋತೇತ್ವತ್ ಕ್ರಿಯತ

ಇತಿ ಶ್ರುತಿಃ । ಪಯೋಽಂಬುವದಿತ್ಯನೇನ ಪಯೋಂಬುವಚ್ಚೇತ್ತತ್ರಾಪೀತಿ ಸೂತ್ರಂ ಸಂಗೃಹ್ಣಾತಿ । ಪಯಃ ಕ್ಷೀರಂ ತತ್ ಸ್ವಯಮೇವ ದಧೀಭವತಿ, ಅಂಬು ಸ್ವಯಮೇವ ಚಲತೀತಿ ಚೇನ್ನ ತತ್ರಾಪಿ ಹರಿರೇವ ಪ್ರೇರಕ ಇತಿ ಸೂತ್ರಾರ್ಥಃ ॥ ೫೦೦ ॥

**ವಿವರಣೆ–** ಅವಿದ್ಯೆ ಎಂಬುದು ಜಡವಾದ್ದರಿಂದ ಅದಕ್ಕೆ ಸ್ವಯಂ ಸಾಮರ್ಥ್ಯವಿಲ್ಲ. ಹೀಗಾಗಿ ಅದರಿಂದ ಜಗತ್ಸೃಷ್ಟ್ಯಾದಿಗಳು ಹೇಗೆ ಆಗಲು ಸಾಧ್ಯ? ಎಂದು ಪ್ರಶ್ನಿಸಿದಾಗ ಜಡವಾದರೂ ಮಣಿ, ಮಂತ್ರ ಔಷಧಾದಿಗಳಲ್ಲಿ ಸಾಮರ್ಥ್ಯವಿರುವಂತೆ ಅವಿದ್ಯೆಯಲ್ಲಿಯೂ ಏಕಿರಬಾರದು ಎಂದು ಮಾಯಾವಾದಿಗಳು ಶಂಕಿಸಿದಾಗ ಉತ್ತರಿಸುತ್ತಾರೆ. ಹಿಂದೆ ಹೇಳಿದ ವ್ಯಾಸರ ಮತವು ಮಾಯಾವಾದಿಗೆ ಪ್ರತಿಕೂಲವೆಂದು ತಿಳಿಸುತ್ತಾರೆ.

ಇತಿ ವ್ಯಾಸಮತಂ ತಿಕ್ತೋ ಗುಡಸ್ತೇ ಪಿತ್ತದೇಹಿನಃ ॥ ೫೦೧ ॥

**ಅರ್ಥ–** ವ್ಯಾಸಮತಂ = ವೇದವ್ಯಾಸರ ಸಿದ್ಧಾಂತವು, ಇತಿ= ಹೀಗಿದೆ, ಪಿತ್ತದೇಹಿನಃ ತೇ= ಪಿತ್ತಪ್ರಕೃತಿಯ ಶರೀರವುಳ್ಳ ನಿನಗೆ, ಗುಡಃ = ಬೆಲ್ಲವು (ಯಥಾ = ಯಾವ ರೀತಿ) ತಿಕ್ತಃ = ಕಹಿಯಾಗಿ (ಭವತಿ = ಆಗುತ್ತದೋ) (ತಥಾ = ಹಾಗಯೇ) ತಿಕ್ತಃ = ಕಹಿಯಾಗಿ (ಭವತಿ = ಆಗುತ್ತದೆ.)

**ಅನುವಾದ–** ವೇದವ್ಯಾಸರ ಮತವು ಈ ರೀತಿ ಇದೆ. ಪಿತ್ತ ಪ್ರಕೃತಿಯವನಾದ ನಿನಗೆ ಬೆಲ್ಲವೂ ಕಹಿಯಾಗಿ ಕಾಣಿಸುತ್ತದೆ.

**ಭಾವವಿಲಾಸಿನೀ–** ವ್ಯಾಸಮತಮಿತ್ಯನೇನ ತತ್ಕೃತಸೂತ್ರಭಾಷ್ಯಕಾರಿಣಾ ಪರೇಣಾಪೀದಮೇವ ಶ್ಲಾಘ್ಯಮಿತಿ ಸೂಚಯತಿ । ತಥಾಪಿ ತನ್ಮತತ್ಯಾಗಿನಂ ಪರಮನ್ಯಾಪದೇಶೇನ ಪರಿಹಸತಿ – **ತಿಕ್ತ** ಇತಿ ॥ ಪಿತ್ತದೇಹಿನಸ್ತ ಇತಿ ಸಂಬಂಧಃ । ಯಥಾ ಪಿತ್ತಗ್ರಸ್ತಜಿಹ್ವಾಯಾಃ ಸ್ವಾದುರ್ಗುಡ ಏವ ತಿಕ್ತತಯಾಽವಭಾತಿ । ತಥಾ ದುರಾಗ್ರಹಗ್ರಸ್ತಸ್ತ್ವಮಪಿ ಶ್ರುತಿಯುಕ್ತ್ಯುಪೇತಂ ಸ್ವಮೂಲಶಾಸ್ತ್ರಮೇವ ವ್ಯರ್ಥೀಕರೋಷೀತಿ ಭಾವಃ ॥ ೫೦೧ ॥

**ವಿವರಣೆ–** ಜೀವಜಡಾದಿಗಳ ಸಕಲಸಾಮರ್ಥ್ಯವೂ ಭಗವಂತನ ಅಧೀನವಾಗಿದೆ ಎಂಬುದು ವ್ಯಾಸರ ಸಿದ್ಧಾಂತ. ಇದು ನೀನು ಹೇಳಿದ ವಿಷಯಕ್ಕೆ ವಿರುದ್ಧವಾದ್ದರಿಂದ ನಿನಗೆ ಕಹಿಯಾಗುತ್ತದೆಯಲ್ಲವೇ? ಪಿತ್ತಪ್ರಕೃತಿಯ ಮನುಷ್ಯನಿಗೆ, ಎಲ್ಲರಿಗೂ ಸಿಹಿಯಾದ ಬೆಲ್ಲವೂ ಕಹಿಯಾದಂತೆ ಎಲ್ಲರಿಗೂ ಅನುಕೂಲವಾದ ವ್ಯಾಸರ ಸಿದ್ಧಾಂತವು ನಿನಗೆ ಮಾತ್ರ ಪ್ರತಿಕೂಲವಾಗಿದೆ.

ನಿರ್ವಿಶೇಷಂ ಹಿ ತೇ ಬ್ರಹ್ಮ ನ ಶಕ್ತಂ ಕ್ವಾಸ್ಯ ಶಕ್ತತಾ ।
ಯನ್ನಾರಕಾಸುಖಾಂಬೋಧಾವುನ್ಮಜ್ಜತಿ ನಿಮಜ್ಜತಿ ॥ ೫೦೨ ॥

**ಅರ್ಥ–** ತೇ (ಮತೇ) =ನಿನ್ನ ಸಿದ್ಧಾಂತದಲ್ಲಿ ಬ್ರಹ್ಮ = ಬ್ರಹ್ಮನು, ನಿರ್ವಿಶೇಷಂ = ಸಕಲವಿಶೇಷರಹಿತನು. ಹಿ = ಇದು ಪ್ರಸಿದ್ಧವು. (ಅತ ಏವ = ಆದ್ದರಿಂದಲೇ) ನಶಕ್ತಂ = ಶಕ್ತಿರಹಿತನು. ಯತ್ = ಯಾವ ಕಾರಣದಿಂದ, ತೇ ಬ್ರಹ್ಮ = ನಿನ್ನ ಬ್ರಹ್ಮನು (ಜೀವಭಾವವನ್ನು ಹೊಂದಿ) ನಾರಕಾಸುಖಾಂಭೋಧೌ = ನರಕದ ದುಃಖಸಾಗರದಲ್ಲಿ ನಿಮಜ್ಜತಿ = ಮುಳುಗುತ್ತಾನೆ, ಉನ್ಮಜ್ಜತಿ = ಮೇಲೇಳುತ್ತಾನೆ ಕೂಡ. ತತ್ = ಆ ಕಾರಣದಿಂದ, ಅಸ್ಯ = ಈ ಬ್ರಹ್ಮನಿಗೆ, ಶಕ್ತತಾ = ಶಕ್ತಿಯು ಕ್ವ = ಯಾವ ವಿಷಯದಲ್ಲಿ (ಅಸ್ತಿ = ಇದೆ?)

**ಅನುವಾದ–** ನಿನ್ನ ಬ್ರಹ್ಮ ನಿರ್ವಿಶೇಷವಾದುದು. ಶಕ್ತಿಯೂ ಇಲ್ಲ, ಸಂಸಾರರೂಪವಾದ ನರಕದುಃಖದಲ್ಲಿ ಮುಳುಗಿ ಏಳುವ ನಿನ್ನ ಬ್ರಹ್ಮನಿಗೆ ಶಕ್ತಿಯು ಎಲ್ಲಿಂದ ಬರಬೇಕು?

**ಭಾವವಿಲಾಸಿನೀ–** ನನು ಮಯಾಪ್ಯವಿದ್ಯಾಯಾ ಈಶ್ವರಶಕ್ತ್ಯಧೀನಶಕ್ತ್ಯಂಗೀಕಾರಾತ್ಕಥಂ ವ್ಯಾಸಮತಪರಿತ್ಯಾಗ ಇತ್ಯತ ಆಹ – **ನಿರ್ವಿಶೇಷಮಿತಿ** ॥ ನಿರ್ವಿಶೇಷಂ ನಿರ್ಗತಸಕಲವಿಶೇಷಮ್ । ತೇ ಮತೇ । ಅತ ಏವ ನ ಶಕ್ತಂ ಶಕ್ತಿವಿದೂರಮ್ । ಅಶೇಷವಿಶೇಷರಹಿತಂ ಬ್ರಹ್ಮೇತಿ ವದತಾ ಶಕ್ತಿರೂಪವಿಶೇಷಸ್ಯಾಪಿ ತ್ಯಕ್ತತ್ವಾದಿತಿ ಭಾವಃ । ಪ್ರಕಾರಾಂತರೇಣಾಪಿ ಶಕ್ತಿತ್ಯಾಗಮುಪಪಾದಯತಿ **–ಕ್ವಾಸ್ಯೇತಿ** ॥ ಅಸ್ಯ ಬ್ರಹ್ಮಣಃ । ಶಕ್ತತಾ ಶಕ್ತಿಯುಕ್ತತಾ । ತತ್ರ ಹೇತುಮಾಹ – **ಯನ್ನಾರಕೇತಿ** ॥ ಯದ್ಬ್ರಹ್ಮ । ಅಸುಖಂ ದುಃಖಮ್ । ಜೀವೈಕ್ಯವಾದಿನಾ ತ್ವಯಾ ಬ್ರಹ್ಮಣಃ ಸಕಲದುಃಖಾನುಭವಿತೃತ್ವಕಥನಾತ್ ಪುನಸ್ತಸ್ಯ ಶಕ್ತತ್ವಕಥಾ ನ ಶೋಭಾಂ ಬಿಭರ್ತೀತಿ ಭಾವಃ ॥ ೫೦೨ ॥

**ವಿವರಣೆ–** ಅವಿದ್ಯೆಯಲ್ಲಿ ಬ್ರಹ್ಮನಶಕ್ತ್ಯಧೀನವಾದಶಕ್ತಿಯನ್ನೇ ಒಪ್ಪಿದ್ದೇನೆ ಎಂದು ಹೇಳಿದ್ದು ಸರಿಯಲ್ಲ. ನಿನ್ನ ಮತದಂತೆ ಬ್ರಹ್ಮನಲ್ಲಿ ಯಾವ ಧರ್ಮಗಳಾಗಲೀ, ಗುಣಗಳಾಗಲೀ, ಕ್ರಿಯೆಗಳಾಗಲೀ ಯಾವ ವಿಶೇಷಗಳೂ ಇರುವುದಿಲ್ಲ. ಹೀಗಾಗಿ ಯಾವ ಶಕ್ತಿಯೂ ಇರಲಾರದು. ನೀನು ಹೇಳಿದಂತೆ ಬ್ರಹ್ಮನಲ್ಲಿ ಶಕ್ತಿಯಿದ್ದರೆ ಅವನು ಜೀವ ಭಾವವನ್ನು ಹೊಂದಿ ನರಕದಲ್ಲಿರುವ ದುಃಖಸಾಗರದಲ್ಲಿ ಮುಳುಗೇಳುತ್ತಿರುತ್ತಿದ್ದನೇ? ಹೀಗೆ ನರಕವು ಆಗದಿರುವಂತೆ ಮಾಡುವ ಶಕ್ತಿಯೂ ಅವನಲ್ಲಿ ಇಲ್ಲದಿದ್ದ ಮೇಲೆ ಬೇರಾವ ವಿಷಯದಲ್ಲಿ ಶಕ್ತಿ ಇದ್ದೀತು? ಅವನಲ್ಲೇ ಶಕ್ತಿಯಿಲ್ಲದಿದ್ದ ಮೇಲೆ ಅದರ ಅಧೀನವಾದ ಶಕ್ತಿಯು ಅವಿದ್ಯೆಯಲ್ಲಿ ಹೇಗೆ ಬರಲು ಸಾಧ್ಯ?

**ಚಿನ್ಮಾತ್ರಬ್ರಹ್ಮಶಕ್ತಿಸ್ತೇ ಸಿದ್ಧಾಂತಂ ಹಂತ ಕೃಂತತಿ ।**
**ಜಡಾವಿದ್ಯಾಶಕ್ತಿಪಕ್ಷಃ ಪೂರ್ವಪಕ್ಷಂ ವಿವಿಕ್ಷತಿ ॥ ೫೦೩ ॥**

**ಅರ್ಥ–** ಚಿನ್ಮಾತ್ರಬ್ರಹ್ಮಶಕ್ತಿಃ (ಇತಿ ಪಕ್ಷಃ) = ಕೇವಲ ಚಿದ್ರೂಪನಾದ ಬ್ರಹ್ಮನಲ್ಲಿ ಶಕ್ತಿಯಿದೆ (ಎಂಬ ಪಕ್ಷವು), ತೇ = ನಿನ್ನ ಸಿದ್ಧಾಂತಂ = ಮತವನ್ನು ನಿಕೃಂತತಿ = ನಾಶಗೊಳಿಸುತ್ತದೆ. ಜಡಾವಿದ್ಯಾಶಕ್ತಿಪಕ್ಷಃ = ಜಡವಾದ ಅವಿದ್ಯೆಯಲ್ಲೇ ಶಕ್ತಿಯಿದೆ ಎಂಬ ಪಕ್ಷವು, ಪೂರ್ವಪಕ್ಷಂ = (ನಿನಗೆ) ಪೂರ್ವಪಕ್ಷಿಯಾದ ಸಾಂಖ್ಯರ ಮತವನ್ನೇ, ವಿವಿಕ್ಷತಿ = ಸೇರಲು ಬಯಸುತ್ತದೆ.

**ಅನುವಾದ–** ಚಿದ್ರೂಪನಾದ ಬ್ರಹ್ಮನಿಗೆ ಶಕ್ತಿಯನ್ನು ಒಪ್ಪಿದರೂ ನಿನ್ನ ಸಿದ್ಧಾಂತವು ನಾಶ ಹೊಂದುತ್ತದೆ. ಜಡವಾದ ಅವಿದ್ಯೆಗೆ ಶಕ್ತಿಯನ್ನು ಒಪ್ಪಿದರೆ ಅದು ಪೂರ್ವ ಪಕ್ಷದಲ್ಲಿಯೇ ಸೇರುತ್ತದೆ.

**ಭಾವವಿಲಾಸಿನೀ–** ಚಿನ್ಮಾತ್ರಬ್ರಹ್ಮಶಕ್ತಿಃ ಚಿನ್ಮಾತ್ರತಯಾಽಂಗೀಕೃತಬ್ರಹ್ಮಶಕ್ತಿಃ। ಚಿನ್ಮಾತ್ರತ್ವಂ ಶಕ್ತಿಯುಕ್ತತ್ವಂ ಚ ವಿರುದ್ಧಮ್। ಅತಸ್ತ್ವನ್ಮತಸ್ಯ ವ್ಯಾಸಮತಸ್ಯ ಚ ಮಹದಂತರಮಿತಿ ಭಾವಃ। ಜಡಾವಿದ್ಯಾಶಕ್ತಿಪಕ್ಷಃ ಜಡಾವಿದ್ಯಾಯಾ ಏವ ಶಕ್ತಿಪಕ್ಷಃ। ಪೂರ್ವಪಕ್ಷಂ ಸಾಂಖ್ಯಮತಮ್ ॥ ೫೦೩ ॥

**ವಿವರಣೆ–** ಚಿನ್ಮಾತ್ರಬ್ರಹ್ಮನಲ್ಲಿಯಾಗಲೀ, ಜಡವಾದ ಅವಿದ್ಯೆಯಲ್ಲಾಗಲೀ ಶಕ್ತಿಯನ್ನು ಒಪ್ಪಿದರೆ ಬಾಧಕವನ್ನು ವರ್ಣಿಸುತ್ತಾರೆ. ಮಾಯಾವಾದಿಗಳ ಸಿದ್ಧಾಂತದಲ್ಲಿ ಬ್ರಹ್ಮನು ನಿರಾಕಾರ, ನಿರ್ವಿಶೇಷ, ನಿರ್ಧರ್ಮಕನು. ಇಂತಹ ಚಿನ್ಮಾತ್ರಸ್ವರೂಪನಾದ ಬ್ರಹ್ಮನಲ್ಲಿ ಶಕ್ತಿ ಎಂಬ ಧರ್ಮವನ್ನು ಒಪ್ಪಿದರೆ ನಿರ್ಧರ್ಮಕತ್ವಕ್ಕೆ ಹಾನಿ ಬಂದು ಸಿದ್ಧಾಂತ ಹೊರಟುಹೋಗುತ್ತದೆ. ಹೀಗಾಗಿ ಅವನಲ್ಲಿ ಶಕ್ತಿಯನ್ನು ಒಪ್ಪಲು ಬರುವುದಿಲ್ಲ. ಕೇವಲ ಜಡಭೂತವಾದ ಅವಿದ್ಯೆಯಲ್ಲಿ ಶಕ್ತಿಯನ್ನು ಅಂಗೀಕರಿಸಿದರೆ, ಮಾಯಾವಾದಿಗಳು ಪೂರ್ವಪಕ್ಷವಾದ ಸಾಂಖ್ಯಮತವನ್ನೇ ಹೇಳದಂತಾಗುವುದು. ಏಕೆಂದರೆ ಅವನೂ ಕೇವಲ ಜಡವಾದ ಪ್ರಕೃತಿಯಲ್ಲಿಯೇ ಸೃಷ್ಟ್ಯಾದಿಶಕ್ತಿಯನ್ನು ಒಪ್ಪಿರುತ್ತಾನೆ. ಹೀಗಾಗಿ ಚಿನ್ಮಾತ್ರಸ್ವರೂಪನಾದ ಬ್ರಹ್ಮನಲ್ಲಾಗಲೀ, ಜಡವಾದ ಅವಿದ್ಯೆಯಲ್ಲಾಗಲೀ ಶಕ್ತಿಯನ್ನು ಒಪ್ಪಲು ಆಗುವುದಿಲ್ಲ.

ಯದ್ಯಜ್ಞಾನವಿಶಿಷ್ಟಸ್ಯ ಶಕ್ತತ್ವಂ ತರ್ಹಿ ತತ್ ಕ್ಷಿಪೇತ್ ।
ಉತ್ಕ್ಷಿಪೇಚ್ಚ ತತೋ ದುಃಖಾಮಯದಾತ್ ತತ್ತ್ವಮಾತ್ಮನಃ ॥ ೫೦೪ ॥

**ಅರ್ಥ–** ಯದಿ = ಒಂದು ಪಕ್ಷ, ಅಜ್ಞಾನವಿಶಿಷ್ಟಸ್ಯ = ಅಜ್ಞಾನದಿಂದ ಕೂಡಿದವನಿಗೇ, ಶಕ್ತತ್ವಂ = ಶಕ್ತಿಯನ್ನು (ಅಂಗೀಕ್ರಿಯತೇ ಚೇತ್ = ಅಂಗೀಕರಿಸಲ್ಪಡುತ್ತದೆಯಾದರೆ) ತರ್ಹಿ = ಆ ಪಕ್ಷದಲ್ಲಿ, ತತ್ = ಆ ಅಜ್ಞಾನವನ್ನು (ಸ್ವಸ್ವರೂಪಾತ್ = ತನ್ನ ಸ್ವರೂಪದಿಂದ), ಕ್ಷಿಪೇತ್ = ಹೊರಗಟ್ಟಲಿ. ದುಃಖಾಮಯದಾತ್ = ದುಃಖರೋಗಾದಿಗಳನ್ನು ಕೊಡುವ, ತತ್ = ಆ ಅಜ್ಞಾನದಿಂದ, ಆತ್ಮನಃ = ತನ್ನ, ತತ್ತ್ವಂ = ಸ್ವರೂಪವನ್ನು, ಉತ್ಕ್ಷಿಪೇತ್ ಚ = ಉದ್ಧರಿಸಲಿ ಕೂಡ.

**ಅನುವಾದ–** ಅಜ್ಞಾನವಿಶಿಷ್ಟನಾದ ಬ್ರಹ್ಮನಿಗೆ ಸಾಮರ್ಥ್ಯವಿರುವುದಾದರೆ ಅವನು ಅಜ್ಞಾನವನ್ನು ತನ್ನಿಂದ ಹೊರಗೆ ಅಟ್ಟಿ ದುಃಖ ಮತ್ತು ಶೋಕಗಳನ್ನು ಕೊಡುವ ಅಜ್ಞಾನದಿಂದ ತನ್ನನ್ನು ತಾನು ಉದ್ಧರಿಸಿಕೊಳ್ಳಬೇಕಷ್ಟೇ?

**ಭಾವವಿಲಾಸಿನೀ–** ನನು ನಿರ್ವಿಶೇಷಚಿನ್ಮಾತ್ರೇ ಶಕ್ತ್ಯನಂಗೀಕಾರೇಽಪ್ಯವಿದ್ಯಾವಿಶಿಷ್ಟೇ ತಸ್ಮಿನ್ ಶಕ್ತಿರಂಗೀಕ್ರಿಯತೇ। ಅತೋ ನ ಕೋಽಪಿ ದೋಷ ಇತ್ಯತ ಆಹ – ಯದೀತಿ ॥ ಶಕ್ತತ್ವಂ ಅಘಟಿತ-

ಘಟಕಶಕ್ತಿಯುಕ್ತತ್ವಮ್ । ತತ್ ಅಜ್ಞಾನಮ್ । ಕ್ಷಿಪೇತ್ ಸ್ವಸ್ವರೂಪಾದ್ಬಹಿರ್ನಿಷ್ಕಾಸಯೇತ್ । ಉತ್ಕ್ಷಿಪೇತ್ ಊರ್ಧ್ವಂ ಯಾಪಯೇತ್ । ತತಃ ಅಜ್ಞಾನಾತ್ । ದುಃಖಾಮಯದಾದಿತ್ಯುತ್-ಕ್ಷೇಪಣಹೇತುಸೂಚನಾರ್ಥಮುದಿತಮ್ । ಆತ್ಮನಃ ಸ್ವಸ್ಯ । ತತ್ತ್ವಂ ಸ್ವರೂಪಮ್ । ಸ್ವತಃ ಶಕ್ತಿಶೂನ್ಯಂ ಬ್ರಹ್ಮ ಅಜ್ಞಾನಸಂಬಂಧಾದಘಟಿತಘಟಕಶಕ್ತಿಸಹಿತಂ ಭವತಿ ಚೇತ್ತರ್ಹಿ ಅಜ್ಞಾನಸಂಬಂಧ-ಪರ್ಯಂತಂ ಸುಪ್ತಪುರುಷವತ್ತೂಷ್ಣೀಂ ಸ್ಥಿತಂ ಬ್ರಹ್ಮ ಅಜ್ಞಾನಸಂಬಂಧಾನಂತರಂ ಪ್ರಬುದ್ಧ ಸಮರ್ಥಪುರುಷವಜ್ಜೀವಭಾವಸಂಪಾದನೇನ ಸ್ವಸ್ಯ ಮಹಾದುಃಖಕರಂ ತತ್ ಅಜ್ಞಾನಮೇವ ಸ್ವಸ್ವರೂಪಾದ್ಬಹಿರ್ನಿಃಸಾರಯೇತ್ । ಸ್ವಯಂ ವಾ ತಾಮಧಃ ಕೃತ್ವೋರ್ಧ್ವಂಗಚ್ಛೇತ್ । ಸಮರ್ಥ-ಪುರುಷಸ್ಯ ಸ್ವದುಃಖೋಪೇಕ್ಷಕತ್ವಾದರ್ಶನಾತ್ । ತದನಂತರಂ ಚ ಪುನಃ ಸುಪ್ತವತ್ತೂಷ್ಣೀ ನ ತಿಷ್ಠೇತ್ । ಮಾಯಾವಚ್ಛೇದಾಧೀನೋ ಜೀವಭಾವಸ್ತಸ್ಯ ಕದಾಪಿ ನ ಭವೇದಿತಿ ಭಾವಃ ॥೫೦೪॥

**ವಿವರಣೆ–** ಕೇವಲ ಬ್ರಹ್ಮನಲ್ಲೂ ಹಾಗೆಯೇ ಕೇವಲ ಅವಿದ್ಯೆಯಲ್ಲೂ ಶಕ್ತಿಯನ್ನು ಅಂಗೀಕರಿಸಲು ಬರದೆ ಹೋದರೂ ಅವಿದ್ಯಾವಿಶಿಷ್ಟನಾದ ಬ್ರಹ್ಮನಲ್ಲಿ ಶಕ್ತಿಯನ್ನು ಒಪ್ಪಿದರೆ ಯಾವ ದೋಷವೂ ಇಲ್ಲವೆಂದರೆ ಅದನ್ನೂ ದೂಷಿಸುತ್ತಾರೆ. ಅಜ್ಞಾನವಿಶಿಷ್ಟನಾದ ಬ್ರಹ್ಮನಿಗೇ ಅಘಟಿತಘಟನಾಶಕ್ತಿಯಿರುವುದಾದರೆ, ಆ ಶಕ್ತಿಯಿಂದಲೇ ತನ್ನ ಸ್ವರೂಪದಿಂದ ಅದನ್ನು ಹೊರಗಟ್ಟಲಿ. ಏಕೆಂದರೆ ಆ ಅಜ್ಞಾನವು ತನಗೆ ದುಃಖರೋಗಾದಿಗಳನ್ನುಂಟು ಮಾಡುತ್ತದೆ. ಇಂತಹ ಉಪದ್ರವ ಕೊಡುವ ಅವಿದ್ಯೆಯಿಂದ ತನ್ನನ್ನು ಉದ್ಧರಿಸಿಕೊಳ್ಳಲಿ. ಯಾರಿಗೂ ದುಃಖಸಾಗರದಲ್ಲಿರಬೇಕೆಂದು ಇಷ್ಟವಿಲ್ಲವಷ್ಟೆ?

ಉದ್ಧರಿಸಿಕೊಳ್ಳಲಿಲ್ಲವೆಂದಾದರೆ ಅವನಲ್ಲೂ ಖಂಡಿತವಾಗಿಯೂ ಯಾವ ಶಕ್ತಿಯೂ ಇಲ್ಲವೆಂದಾಗುವುದು. ಹೀಗಾಗಿ ವಿಶಿಷ್ಟನಲ್ಲೂ ನೀವು ಹೇಳುವಂತೆ ಅಘಟಿತ ಘಟನಾಶಕ್ತಿಯನ್ನು ಒಪ್ಪಲು ಬರುವುದಿಲ್ಲ.

**ಅತಃ ಶಕ್ತ್ಯಾ ಪರೀಹಾರಃ ಪ್ರಹಾರೋಭೂತ್ ತ್ರಿಧಾಪಿ ತೇ ।**
**ಪ್ರಾಗುಕ್ತಾನುಪಪತ್ತಿಸ್ತದ್ ವಿಪತ್ತಿರಭವದ್ ಧ್ರುವಂ ॥ ೫೦೫ ॥**

**ಅರ್ಥ–** ಅತಃ = ಆ ಕಾರಣದಿಂದ, ಶಕ್ತ್ಯಾ = ಯಾವುದೇ ಶಕ್ತಿಯಿಂದಲೂ, (ಉಕ್ತದೋಷಸ್ಯ = ಹಿಂದೆ ಹೇಳಿದ ದೋಷಗಳ) ಪರೀಹಾರಃ = ಪರಿಹಾರವು, ತ್ರಿಧಾಪಿ = ಮೂರುವಿಧದಿಂದಲೂ, ತೇ = ನಿನಗೆ, ಪ್ರಹಾರಃ = ಶಸ್ತ್ರಪ್ರಹಾರದಂತೆ ಅನಿಷ್ಟಕರವಾಗಿ, ಅಭೂತ್ = ಆಯಿತು. ತತ್ = ಆದ್ದರಿಂದ, ಪ್ರಾಗುಕ್ತಾನುಪಪತ್ತಿಃ = ಹಿಂದೆ ಹೇಳಿದ ಎರಡು ಪಕ್ಷಗಳ ದೋಷವೂ, ಧ್ರುವಂ = ನಿಶ್ಚಯವಾಗಿಯೂ, ವಿಪತ್ತಿಃ = ಆಪತ್ತಾಗಿ, ಅಭವತ್ = ಆಯಿತು.

**ಅನುವಾದ–** ಆದ್ದರಿಂದ ಮೂರು ರೀತಿಯಲ್ಲಿ ಶಕ್ತಿಯನ್ನು ಅಂಗೀಕರಿಸಿ ದೋಷವನ್ನು ಪರಿಹಾರ ಮಾಡುವ ಪ್ರಯತ್ನವು ನಿನಗೆ ಪ್ರಹಾರವೇ ಆಯಿತು. ಹಿಂದೆ ಹೇಳಿದ ಅನುಪಪತ್ತಿಯು ಖಂಡಿತವಾಗಿ ನಿನಗೆ ವಿಪತ್ತಿಯೇ ಆಯಿತು.

**ಭಾವವಿಲಾಸಿನೀ–** ಪರೀಹಾರಃ ಬ್ರಹ್ಮಣೋ ಜೀವಭಾವೋಕ್ತೌ ಪ್ರಾಪ್ತದೋಷಪರಿಹಾರಃ। ತ್ರಿಧಾ ಚಿನ್ಮಾತ್ರಶಕ್ತಿಪಕ್ಷೇ ಮಾಯಾವಿಶಿಷ್ಟಶಕ್ತಿಪಕ್ಷೇ, ಕೇವಲಮಾಯಾಶಕ್ತಿಪಕ್ಷೇ ಚೇತ್ಯರ್ಥಃ। ತೇ ತವ ಪ್ರಹಾರೋಽಭೂತ್। ಶಸ್ತ್ರಪ್ರಹಾರ ಇವಾನಿಷ್ಟಹೇತುರಭೂದಿತಿ ಭಾವಃ। ತತ್ತಸ್ಮಾತ್। ಪ್ರಾಗುಕ್ತಾನುಪಪತ್ತಿಃ ಪ್ರಾಗುಕ್ತಪಕ್ಷದ್ವಯದೂಷಣಮ್। ವಿಪತ್ತಿಃ ವಿರುದ್ಧತಯಾ ಪದ್ಯತೇಽನಯಾ ಪುರುಷ ಇತಿ ವಿಪತ್ಕರೀತ್ಯರ್ಥಃ। ಅನಿಷ್ಟರೂಪಂ ವಾ ॥ ೫೦೫ ॥

**ವಿವರಣೆ–** ಬ್ರಹ್ಮನಿಗೆ ಜೀವಭಾವವನ್ನು ಹೇಳಿದಾಗ ಈ ಹಿಂದೆ ಹೇಳಿದ ದೋಷದ ಪರಿಹಾರ ಯಾವ ಶಕ್ತಿಯಿದಂಲೂ ಆಗುವುದಿಲ್ಲವೆನ್ನುತ್ತಾರೆ. ಶುದ್ಧಚಿದ್ರೂಪನಾದ ಬ್ರಹ್ಮನಿಗೆ ಶಕ್ತಿಯನ್ನು ಒಪ್ಪಿದರೂ, ಕೇವಲಜಡವಾದ ಅಜ್ಞಾನಕ್ಕೆ ಶಕ್ತಿ ಒಪ್ಪಿದರೂ, ಅಥವಾ ಅಜ್ಞಾನವಿಶಿಷ್ಟನಿಗೆ ಶಕ್ತಿ ಒಪ್ಪಿದರೂ ಅನೇಕ ದೋಷಗಳು ಬರುವುದರಿಂದ ಈ ಮೂರುವಿಧವಾದ ಶಕ್ತಿಯಿಂದಲೂ, ಬ್ರಹ್ಮನಿಗೆ ಜೀವಭಾವವನ್ನು ಹೇಳಿದಾಗ ಪ್ರಾಪ್ತವಾದ ದೋಷಗಳ ಪರಿಹಾರವು ಆಗುವುದಿಲ್ಲ, ಅಷ್ಟೇ ಅಲ್ಲ ಹಾಗೆ ಶಕ್ತಿಯನ್ನು ಹೇಳುವುದು ನಿನ್ನ ಸಿದ್ಧಾಂತಕ್ಕೆ ವಿರುದ್ಧವೂ ಆಗುವುದು. ಹಾಗೆಯೇ ಹಿಂದೆ ಹೇಳಿದ ಸ್ಥಿರಾಂಶ ಚಲದಂಶಗಳೆಂಬ ಎರಡು ಪಕ್ಷಗಳೂ ನಿನ್ನ ಸಿದ್ಧಾಂತಕ್ಕೆ ನಿಶ್ಚಯವಾಗಿಯೂ ಆಪತ್ತಾಗಿ ಪರಿಣಮಿಸಿದೆಯಷ್ಟೆ?

**ಅಖಂಡಿತೇ ಚ ಯಸ್ಮಿನ್ ಯೇ ಸಂಚರಂತಿ ತತಸ್ತತಃ ।**
**ನ ತೇ ಖಂಡಾಃ ಪೃಥಕ್ ದ್ರವ್ಯಂ ತದ್ಭಾಗಾಃ ಸುತರಾಂ ನ ಹಿ ॥ ೫೦೬ ॥**

**ಅರ್ಥ–** ಅಖಂಡಿತೇ = ಅಚ್ಛಿದ್ರನಾದ, ಯಸ್ಮಿನ್ = ಯಾವ ಬ್ರಹ್ಮನಲ್ಲಿ, ತತಃ ತತಃ = ಅಲ್ಲಲ್ಲಿ, ಯೇ = ಯಾವ(ಜೀವಾಃ = ಜೀವರು) ಸಂಚರಂತಿ = ಸಂಚರಿಸುತ್ತಾರೋ, ತೇ(ಜೀವಾಃ) = ಅಂತಹ ಜೀವರು (ಬ್ರಹ್ಮಣಃ = ಬ್ರಹ್ಮನ) ಖಂಡಾಃ = ಏಕದೇಶರು, ನ = ಅಲ್ಲ. (ಕಿಂತು = ಆದರೆ) ಪೃಥಗ್ ದ್ರವ್ಯಂ = ಭಿನ್ನರಾದ ದ್ರವ್ಯರು. (ಅತಃ = ಏಕದೇಶರೇ ಅಲ್ಲದ ಮೇಲೆ) ತದ್ಭಾಗಾಃ = ಬ್ರಹ್ಮನ ಸ್ವರೂಪಾಂಶರು ಸುತರಾಂ = ಖಂಡಿತವಾಗಿಯೂ ನಭವಂತಿ ಹಿ = ಆಗುವುದಿಲ್ಲವಷ್ಟೆ

**ಅನುವಾದ–** ಅಪರಿಚ್ಛಿನ್ನವಾದ ಯಾವ ವಸ್ತುವಿನಲ್ಲಿ ಯಾರು ಇಲ್ಲಿಂದಲ್ಲಿಗೆ ಸಂಚಾರ ಮಾಡುತ್ತಾರೆಯೋ, ಅವರು ಭಾಗಗಳಲ್ಲ. ಭಿನ್ನವಾದ ದ್ರವ್ಯಗಳು. ಅಪರಿಚ್ಛಿನ್ನ ವಸ್ತುವಿನ ಭಾಗಗಳಂತಲೂ ಸುತರಾಂ ಅಲ್ಲ.

**ಭಾವವಿಲಾಸಿನೀ–** ತಸ್ಮಾತ್ ತೃತೀಯಪಕ್ಷ ಏವ ಯುಕ್ತಿಯುಕ್ತ ಇತ್ಯಾಹ – **ಅಖಂಡಿತೇ ಚೇತಿ ॥** ಅಖಂಡಿತೇ ಅಚ್ಛಿದ್ರಿತೇ। ಯಸ್ಮಿನ್ ಬ್ರಹ್ಮಣಿ। ಯೇ ಜೀವಾಃ ತೇ ಖಂಡಾ ಏಕದೇಶಾಃ। ಪೃಥಕ್ ದ್ರವ್ಯಂ ಪರಮಾಣುವತ್ ಪ್ರತ್ಯೇಕಮೇವ ದ್ರವ್ಯಮ್। ಕ್ವಚಿತ್ ಪುರಾಣಾದೌ ಬ್ರಹ್ಮಾಂಶತ್ವಕಥನಂ ತದಧೀನತ್ವಾದೇವ ನತು ಮತ್ಸ್ಯಾದಿವತ್ತದೇಕದೇಶತ್ವಾತ್। ತಥಾ ಸತಿ ಸಾರ್ವಜ್ಞಾದಿ ಗುಣ-

ಪೂರ್ಣತ್ವಪ್ರಸಂಗಾದಿತಿ ಭಾವಃ । ತದ್ಭಾಗಾಃ ಬ್ರಹ್ಮಭಾಗಾಃ । ಖಂಡತ್ವಸ್ಯೈವಾಭಾವೇ ಬ್ರಹ್ಮ-ಖಂಡತ್ವಂ ದೂರಾಪಾಸ್ತಮಿತಿ ಭಾವೇನೋಕ್ತಂ ಸುತರಾಮಿತಿ ॥ ೫೦೬ ॥

**ವಿವರಣೆ–** ಜೀವರು ಬ್ರಹ್ಮನ ಸ್ಥಿರಾಂಶರೇ, ಭಿನ್ನಾಂಶರೇ ಎಂದು ಹಿಂದೆ ಹೇಳಿದ ಮೂರು ಪಕ್ಷಗಳಲ್ಲಿ ಮೊದಲ ಎರಡು ಪಕ್ಷಗಳನ್ನು ಖಂಡಿಸಿದ್ದರಿಂದ ಮೂರನೆಯ ಪಕ್ಷವಾದ ಭಿನ್ನಾಂಶರೆಂದು ಅಂಗೀಕರಿಸುವುದೇ ಸರಿ ಎನ್ನುತ್ತಾರೆ. ಅಚ್ಛಿದ್ರನಾಗಿ ಸರ್ವತ್ರ ವ್ಯಾಪಿಸಿಕೊಂಡಿರುವವನು ಪರಬ್ರಹ್ಮ. ಅವನಲ್ಲೇ ಎಲ್ಲಾ ಲೋಕಗಳೂ ಆಶ್ರಯಿಸಿಕೊಂಡಿವೆ. ಆ ಲೋಕಗಳಲ್ಲಿ ಅಲ್ಲಲ್ಲಿ ಸಂಚರಿಸುತ್ತಿದ್ದಾರೆ ಜೀವರು. ಹೀಗೆ ಪರಮಾತ್ಮನನ್ನು ಆಶ್ರಯಿಸಿಕೊಂಡು ಅವನ ಅಧೀನರಾಗಿ ದುಃಖಾದಿಗಳನ್ನು ಅನುಭವಿಸುತ್ತಿರುವ ಜೀವರು, ಮತ್ಸ್ಯಾದಿ ಭಗವದ್ರೂಪಗಳಂತೆ ಬ್ರಹ್ಮನ ಏಕದೇಶರು ಅಲ್ಲ. ಏಕದೇಶರಾಗಿದ್ದರೆ ಮತ್ಸ್ಯಾದಿಗಳಂತೆ ಸಾರ್ವಜ್ಞ್ಯವೇ ಮೊದಲಾದ ಗುಣ ಪೂರ್ಣತ್ವವು ಬರಬೇಕಾದೀತು. ಹಾಗಾಗಿ ಅವರು ಬ್ರಹ್ಮನಿಗಿಂತ ಬೇರೆ ದ್ರವ್ಯವೇ ಸರಿ. ಪರಬ್ರಹ್ಮನ ಏಕದೇಶವೇ ಅಲ್ಲದಿದ್ದರೆ ಅವನ ಸ್ವರೂಪಾಂಶರು ಖಂಡಿತ ವಾಗಿಯೂ ಆಗಲು ಸಾಧ್ಯವಿಲ್ಲ. ಪ್ರಮಾಣಗಳಲ್ಲಿ ಎಲ್ಲಾದರೂ ಅಂಶತ್ವವನ್ನು ಜೀವರಿಗೆ ಹೇಳಿದ ಪಕ್ಷದಲ್ಲಿ ಅದಕ್ಕೆ ಭಿನ್ನಾಂಶವೆಂದು (ಭಗವಂತನಿಗಿಂತ ಭಿನ್ನರಾಗಿ ಅವನ ಅಧೀನವಾದ ಅತ್ಯಲ್ಪ ಬಲವುಳ್ಳವರೆಂದು) ಅರ್ಥೈಸಬೇಕು.

**ಬ್ರಹ್ಮಣೋ ಜೀವಭಾವೋಕ್ತಿರತೋಽಯುಕ್ತತರಾ ವಿದಾಮ್ ।**
**ಯತಃ ಪ್ರಾಗಕ್ರಿಯಾ ವ್ಯಾಪ್ತಾ ಚಿದೇಕಾ ಸಕ್ರಿಯಾಸ್ತ್ವಮೀ ॥ ೫೦೭ ॥**

**ಅರ್ಥ–** ಅತಃ = ಆ ಕಾರಣದಿಂದ, ಬ್ರಹ್ಮಣಃ = ಬ್ರಹ್ಮನಿಗೆ, ಜೀವಭಾವೋಕ್ತಿಃ = ಜೀವಭಾವವನ್ನು ಹೇಳಿದ್ದು, ವಿದಾಮ್ = ಜ್ಞಾನಿಗಳಿಗೆ, ಅಯುಕ್ತತರಾ = ಅತ್ಯಂತ ಅಯೋಗ್ಯವಾಗಿ, ಭವತಿ = ಆಗುತ್ತದೆ. ಯತಃ = ಯಾವ ಕಾರಣದಿಂದ, ಚಿತ್ = ಬ್ರಹ್ಮಸ್ವರೂಪಚೇತನವು, ಪ್ರಾಕ್ (ಕಾಲಾದಪಿ) = ಅನಾದಿಕಾಲದಿಂದಲೂ ಕೂಡ, ಅಕ್ರಿಯಾ = ಕ್ರಿಯಾರಹಿತವಾಗಿ, ವ್ಯಾಪ್ತಾ = ಎಲ್ಲ ಕಡೆ ವ್ಯಾಪಿಸಿಕೊಂಡು ಏಕಾ (ಚ) = ಒಬ್ಬಂಟಿಯಾಗಿಯೂ ಕೂಡ, ಆಸೀತ್ = ಆಗಿದ್ದಿತೋ. ಅಮೀ (ಚ) = ಈ ಜೀವರಾದರೂ ಕೂಡ ಪ್ರಾಕ್ (ಕಾಲಾದಪಿ) = ಅನಾದಿಕಾಲದಿಂದಲೂ ಕೂಡ ಸಕ್ರಿಯಾಃ = ಕ್ರಿಯಾಸಹಿತರಾಗಿಯೇ, ಆಸನ್ = ಆಗಿರುವರೋ, (ಆಕಾರಣದಿಂದ).

**ಅನುವಾದ–** ಬ್ರಹ್ಮನಿಗೆ ಜೀವಭಾವವನ್ನು ಹೇಳುವುದು ಜ್ಞಾನಿಗಳ ದೃಷ್ಟಿಯಲ್ಲಿ ಅತ್ಯಂತ ಅಯುಕ್ತವಾದುದು. ಏಕೆಂದರೆ ಅನಾದಿ ಕಾಲದಿಂದಲೂ ಕ್ರಿಯಾಶೂನ್ಯವಾದ ವ್ಯಾಪ್ತವಾದ ಚೈತನ್ಯವು ಒಂದು. ಕ್ರಿಯಾ ಸಹಿತವಾದ ಅನೇಕ ಚೇತನಗಳು ಈ ಜೀವರು.

**ಭಾವವಿಲಾಸಿನೀ–** ಅತಃ ಕಾರಣಾತ್ । ಅಯುಕ್ತತರೇತಿ ಪದಚ್ಛೇದಃ । ಪ್ರಾಕ್‌ಪರಾಭಿಲಷಿತ-ಜೀವಭಾವಾತ್ ಪ್ರಾಕ್ । ಚಿತ್ ಬ್ರಹ್ಮಚಿತ್ । ತೇ ಪ್ರಸಿದ್ಧಾಃ । ಅಮೀ ಜೀವಾಃ । ಅನಾದಿತೋಽಪಿ ಸಕ್ರಿಯಾಃ ಅತ ಏವ ಸಂಚರಂತಿ । ತತ್ತಸ್ಮಾತ್ಕಾರಣಾತ್ । ಪೃಥಕ್ ಬ್ರಹ್ಮಣಃ ಪೃಥಕ್ । ಬ್ರಹ್ಮಣೋ-ಽನಾದಿತೋಽಪಿ ನಿಷ್ಕ್ರಿಯತ್ವಾತ್ ವ್ಯಾಪ್ತತ್ವಾದೇಕತ್ವಾಚ್ಚ ಜೀವಾನಾಂ ಚಾನಾದಿತೋಽಪಿ ಸಕ್ರಿಯತ್ವಾದಣುತ್ವಾದನಂತತ್ವಾಚ್ಚಾತ್ಯಂತಭೇದ ಏವೇತಿ ಭಾವಃ ॥ ೫೦೭ ॥

**ವಿವರಣೆ–** ಬ್ರಹ್ಮನಿಗೆ ಜೀವೈಕ್ಯ ಹೇಳುವುದನ್ನು ಯುಕ್ತಿಯುಕ್ತವಾಗಿ ನಿರಾಕರಿಸುತ್ತಾರೆ. ಜೀವರು ಮತ್ತು ಬ್ರಹ್ಮನು ಅನಾದಿಕಾಲದಿಂದಲೂ ಕೂಡ ವಿರುದ್ಧಧರ್ಮ-ವುಳ್ಳವರಾಗಿರುವುದರಿಂದ ಬ್ರಹ್ಮನಿಗೆ ಜೀವೈಕ್ಯವನ್ನು ಹೇಳಿದ್ದು ತಿಳುವಳಿಕೆವುಳ್ಳವರಿಗೆ ಖಂಡಿತವಾಗಿಯೂ ಯುಕ್ತವಾಗಿ ಕಾಣಲಾರದು. ಏಕೆಂದರೆ ನಿಮ್ಮ ಬ್ರಹ್ಮನು ಅನಾದಿಕಾಲದಿಂದಲೂ ನಿಷ್ಕ್ರಿಯನಾಗಿ ವ್ಯಾಪಿಸಿಕೊಂಡು ಒಬ್ಬಂಟಿಗನಾಗಿಯೇ ಇರುವನು. ಜೀವರು ಮಾತ್ರ ಬಹುಸಂಖ್ಯಾಕರಾಗಿ ಕ್ರಿಯಾಶಾಲಿಗಳಾಗಿ ದುಃಖಾದಿಗಳನ್ನು ಅನುಭವಿಸುತ್ತಾ ಸಂಸಾರದಲ್ಲಿರುವವರಾಗಿರುತ್ತಾರೆ. ಹಾಗಾಗಿ ಬ್ರಹ್ಮನಿಗೆ ಜೀವೈಕ್ಯವು ಸಲ್ಲದು. ಕಿಂತು ಭಿನ್ನರೇ ಆಗಿರುವರು.

**ಅನಾದಿತೋಽಪಿ ಜೀವಾಸ್ತೇ ಸಂಚರಂತಿ ಪೃಥಕ್ ಚ ತತ್ ।**
**ಅತೋ ಮೋಕ್ಷೇಽಪಿ ನೈವೈಕ್ಯಂ ನ ಹಿ ಕಂಥಾ ಪರಃ ಪುಮಾನ್ ॥ ೫೦೮ ॥**

**ಅರ್ಥ–** ತೇ = ಆ ಯಾವ, ಜೀವಾಃ = ಜೀವಚೇತನರು, ಅನಾದಿತಃ ಅಪಿ = ಅನಾದಿಕಾಲದಿಂದಲೂ ಕೂಡ, (ಸಕ್ರಿಯಾಃ = ಕ್ರಿಯೆವುಳ್ಳವರಾಗಿ ಲೋಕೇಷು = ತ್ರಿಲೋಕಗಳಲ್ಲಿ) ಸಂಚರಂತಿ = ಸಂಚರಿಸುತ್ತಿರುವರು. ತತ್ = ಆ ಕಾರಣದಿಂದ (ಬ್ರಹ್ಮಣಃ = ಬ್ರಹ್ಮನಿಗಿಂತ) ಪೃಥಕ್ ಚ = ಬೇರೆಯಾಗಿಯೂ ಕೂಡ (ಇರುವರು.) ಅತಃ = ಆದ್ದರಿಂದ, ಮೋಕ್ಷೇಽಪಿ = ಮುಕ್ತಿಯಲ್ಲೂ ಕೂಡ, ಐಕ್ಯಂ = ಅಭೇದವು, ನ(ಸಂಭವತಿ) = ಕೂಡುವುದಿಲ್ಲ (ಯಾಕೆಂದರೆ) ಪರಃ = ಸರ್ವೋತ್ತಮನಾದ, ಪುಮಾನ್ = ಬ್ರಹ್ಮನು, ಕಂಥಾ = ತುಂಡು ಬಟ್ಟೆಗಳನ್ನು ಸೇರಿಸಿ ಹೊಲಿದ ಚಿತ್ರಬಟ್ಟೆಯು, ನ ಹಿ (ಆಸೀತ್) = ಆಗಿಲ್ಲವಷ್ಟೇ?

**ಅನುವಾದ–** ಅನಾದಿಕಾಲದಿಂದಲೂ ಆ ಜೀವರು ಬ್ರಹ್ಮನಿಗಿಂತ ಭಿನ್ನರಾಗಿ ಸಂಚರಿಸುತ್ತಲೇ ಇದ್ದಾರೆ. ಆದ್ದರಿಂದ ಮೋಕ್ಷದಲ್ಲಿಯೂ ಐಕ್ಯವು ಉಂಟಾಗುವುದಿಲ್ಲ. ಬ್ರಹ್ಮನೆಂದರೆ ಅವನು ತುಂಡು ಬಟ್ಟೆಗಳನ್ನು ಸೇರಿಸಿ ಹೊಲಿದ ಒಂದು ದುಬಟಿ (ಕಂತೆ)ಯಲ್ಲ.

**ಭಾವವಿಲಾಸಿನೀ–** ಅತಃ ಉಕ್ತವಿಧಯಾ ಪರಾಂಗೀಕಾರೇಣ ಚಾನಾದಿತೋಽಪಿ ಬ್ರಹ್ಮಭಿನ್ನತ್ವಾತ್ ಭಿನ್ನಯೋರ್ಘಟಪಟಯೋಸ್ತಮಃ ಪ್ರಕಾಶಯೋಶ್ಚ ಕದಾಪ್ಯೈಕ್ಯಾದರ್ಶನಾದಿತಿ ಭಾವಃ । ಯುಕ್ತ್ಯಂತರಂ ಚಾಹ – **ನಹೀತಿ** ॥ ಕಂಥಾ ಬಹುಗುಣಿತ ಪಟಖಂಡಮಯೀ । ಯಥಾ ಪಟೇ

ಪಟಖಂಡಾಂತರಯೋಗೇ ಸತಿ ಕಂಥಾತ್ವಮ್ । ತಥಾ ವ್ಯಾಪ್ತಬ್ರಹ್ಮಚೈತನ್ಯೇ ಚೈತನ್ಯಾಂತರಯೋಗೇ ಸತಿ ಘನೀಭಾವಪ್ರಸಂಗ ಇತಿ ಭಾವ ॥ ೫೦೮ ॥

**ವಿವರಣೆ–** ಮೋಕ್ಷದಲ್ಲಿ ಜೀವರಿಗೆ ಬ್ರಹ್ಮೈಕ್ಯ ಸಲ್ಲದು ಎಂದು ತಿಳಿಸುತ್ತಾರೆ. ಅನಾದಿಕಾಲದಿಂದಲೂ ಜೀವರು ಸಕ್ರಿಯರಾಗಿ ಸ್ವರ್ಗ, ನರಕ, ಭೂಲೋಕಗಳಲ್ಲಿ ಸಂಚರಿಸುತ್ತಾ ದುಃಖಭಾಗಿಗಳಾಗಿದ್ದು ಬ್ರಹ್ಮನಿಗಿಂತ ಬೇರೆಯಾಗಿಯೇ ಇರುವರು. ಹೀಗಿರುವ ಜೀವರಿಗೆ ಮೋಕ್ಷದಲ್ಲೂ ನಿಶ್ಛಿದ್ರವಾದ ವ್ಯಾಪ್ತನಾದ ಬ್ರಹ್ಮನಲ್ಲಿ ಐಕ್ಯಹೊಂದಲು ಸಾಧ್ಯವಿಲ್ಲ. ಹಾಗೆ ಜೀವರು ಬ್ರಹ್ಮನ ಜೊತೆ ಸೇರಲು ಬ್ರಹ್ಮನೇನು ತುಂಡುಬಟ್ಟೆಗಳನ್ನು ಸೇರಿಸಿ ಹೊಲಿದ ಚಿತ್ರಬಟ್ಟೆರೂಪನಾಗಿರುವನೇ?

**ಜೀವಾಣುತ್ವಂ ಶ್ರುತಿಪ್ರೋಕ್ತಮಾವಯೋರ್ಮತಮೇವ ಹಿ ।**
**ಪರಂ ಬ್ರಹ್ಮ ಪರಿಸ್ಪಂದಕ್ರಿಯಾದೂರತರಂ ಚ ತೇ ॥ ೫೦೯ ॥**

**ಅರ್ಥ–** ಶ್ರುತಿಪ್ರೋಕ್ತಂ = ವೇದದಲ್ಲಿ ಹೇಳಿದ, ಜೀವಾಣುತ್ವಂ = ಜೀವರ ಅಣುಸ್ವರೂಪವು, ಆವಯೋಃ = ನಮ್ಮಿಬ್ಬರಿಗೂ, ಮತಮೇವ ಹಿ = ಸಮ್ಮತವಾಗಿದೆಯಷ್ಟೇ. ತೇ (ಮತೇ) = ನಿನ್ನ ಮತದಲ್ಲಿ, ಪರಂ ಬ್ರಹ್ಮ = ಪರಬ್ರಹ್ಮನು, ಪರಿಸ್ಪಂದಕ್ರಿಯಾದೂರತರಂ ಚ = ಚಲನರೂಪಕ್ರಿಯೆಯಿಂದ ಅತ್ಯಂತ ರಹಿತನಾಗಿರುವವನೂ ಕೂಡ, (ಅಸ್ತಿ = ಆಗಿರುವನು.)

**ಅನುವಾದ–** ನಮ್ಮಿಬ್ಬರ ಮತದಲ್ಲಿ ಶ್ರುತಿಯು ಹೇಳಿದ ಜೀವನ ಅಣುತ್ವವು ಸಮ್ಮತವಾಗಿದೆಯಷ್ಟೇ? ನಿನ್ನ ಬ್ರಹ್ಮನಾದರೋ ಪರಿಸ್ಪಂದ ರೂಪವಾದ ಕ್ರಿಯೆಯಿಂದ ಅತ್ಯಂತ ದೂರನಾದವನು (ಪರಿಸ್ಪಂದಕ್ರಿಯಾರಹಿತನಾದವನು).

**ಭಾವವಿಲಾಸಿನೀ–** ಸಕ್ರಿಯಾಣಾಂ ಜೀವಾನಾಂ ದೇಹಾದ್ಯುಪಾದ್ಯುಗಮರೂಪಮುಕ್ತಾವಪಿ ನೈಕ್ಯಂ ವಕ್ತುಂ ಯುಕ್ತಮ್ । ಘಟೋಪಾಧ್ಯಪಗಮೇಽಪಿ ನಿಷ್ಕ್ರಿಯಘಟಾಕಾಶಸ್ಯೈವ ಕ್ರಿಯಾಽಯೋಗ್ಯ-ಗಗನೈಕ್ಯದರ್ಶನಾತ್ । ಸಕ್ರಿಯಸ್ಯ ಘಟಸ್ಥಜಲಸ್ಯ ತದದರ್ಶನಾಚ್ಚೇತಿ ಭಾವೇನ ಪರಮತೇ ಜೀವಾನಾಂ ಸಕ್ರಿಯತ್ವಂ ಬ್ರಹ್ಮಣೋ ನಿಷ್ಕ್ರಿಯತ್ವನಿಯಮಂ ಚ ದೃಢೀಕರೋತಿ–ಜೀವಾಣುತ್ವಮಿತಿ॥ ತೇ ಮತೇ ॥ ೫೦೯ ॥

**ವಿವರಣೆ–** ಮುಕ್ತಿಯಲ್ಲೂ ಜೀವನಿಗೂ ಬ್ರಹ್ಮೈಕ್ಯ ಸಲ್ಲದು ಎಂದು ತಿಳಿಸುತ್ತಾರೆ. ಶರೀರಾದಿ ಉಪಾಧಿಗಳಿರುವಾಗ ಜೀವರಿಗೆ ಬ್ರಹ್ಮೈಕ್ಯವು ಕೂಡದೇ ಹೋದರೂ ಉಪಾಧಿಗಳು ಹೋದನಂತರ ಮುಕ್ತಿಯಲ್ಲಿ ಬ್ರಹ್ಮೈಕ್ಯವು ಬರಬಹುದಲ್ಲವೇ ಎಂಬ ಆಕ್ಷೇಪವೂ ಸರಿಯಲ್ಲ. ಘಟವು ನಷ್ಟವಾದಾಗ ಕ್ರಿಯಾರಹಿತವಾದ ಘಟಾಕಾಶಕ್ಕೂ ಕ್ರಿಯಾರಹಿತವಾದ ಮಹಾಕಾಶಕ್ಕೂ ಐಕ್ಯ ಎಂಬುದು ಬರಬಹುದು. ಆದರೆ ಕ್ರಿಯೆಯುಳ್ಳ

ಘಟದ ನೀರಿಗೂ ಕ್ರಿಯೆ ಇಲ್ಲದ ಮಹಾಕಾಶಕ್ಕೂ ಐಕ್ಯವು ಬರುವುದಿಲ್ಲ. ಅದರಂತೆ ಜೀವರೂ ಅನಾದಿ ಅನಂತ ಕಾಲದವರೆಗೆ ಅಣುಸ್ವರೂಪರು ಎಂದು ಶ್ರುತಿಯಲ್ಲಿ ಹೇಳಿರುವುದು ನಮ್ಮಿಬ್ಬರಿಗೂ ಸಮ್ಮತವಾಗಿದೆ.ಆದ್ದರಿಂದ ಶರೀರಾದಿ ಉಪಾಧಿ ಹೋಗುವಾಗಲೂ ಜೀವರು ಅಣುಸ್ವರೂಪರಾಗಿ ಸಕ್ರಿಯರೇ ಆಗಿರುತ್ತಾರೆ. ನೀವು ಹೇಳುವ ಬ್ರಹ್ಮನಿಗಾದರೂ ಪರಿಸ್ಪಂದಾದಿಕ್ರಿಯೆಗಳಿರುವುದಿಲ್ಲ. ಸಕ್ರಿಯಜೀವರಿಗೆ ನಿಷ್ಕ್ರಿಯಬ್ರಹ್ಮನ ಜೊತೆ ಐಕ್ಯವು ಬರಲು ಹೇಗೆ ಸಾಧ್ಯ? ಆದ್ದರಿಂದ ಮುಕ್ತಿಯಲ್ಲೂ ಜೀವರಿಗೆ ಬ್ರಹ್ಮೈಕ್ಯವು ಕೂಡುವುದಿಲ್ಲ.

**ಕಿಮು ವ್ಯೋಮ ಕುಠಾರೇಣ ಛಿತ್ವಾ ತತ್ಖಂಡಮನ್ಯತಃ ।**
**ನಯೇನ್ಮಯೋಗ್ರಾ ಮಾಯಾ ವಾ ತ್ವನ್ಮಾಯಾ ವಾ ಕದಾಚನ ॥ ೫೦೦ ॥**

**ಅರ್ಥ–** ಮಯೋಗ್ರಾ = ಮಯಾಸುರನ ಉಗ್ರವಾದ, ಮಾಯಾ ವಾ = ಮಾಯೆಯಾಗಲೀ, ತ್ವನ್ಮಾಯಾ ವಾ = ನಿನ್ನ (ಅವಿದ್ಯಾರೂಪವಾದ) ಮಾಯೆಯಾಗಲೀ, ಕದಾಚನ = ಯಾವಾಗಲಾದರೂ, ವ್ಯೋಮ = ಆಕಾಶವನ್ನು ಕುಠಾರೇಣ = ಕೊಡಲಿಯಿಂದ, ಛಿತ್ವಾ = ಕಡಿದು, ತತ್ಖಂಡಂ = ಆಕಾಶದ ತುಂಡನ್ನು ಅನ್ಯತಃ = ಬೇರೆಕಡೆಗೆ, ನಯೇತ್ ಕಿಮ್= ಕೊಂಡು ಹೋದೀತೇನು?

**ಅನುವಾದ– ಮಯನ ಉಗ್ರವಾದ ಮಾಯೆಯಾಗಲೀ ಅಥವಾ ನಿನ್ನ ಸದಸದ್ವಿಲಕ್ಷಣವಾದ ಮಾಯೆಯಾಗಲೀ ಯಾವಾಗಲಾದರೂ ಆಕಾಶವನ್ನು ಕೊಡಲಿಯಿಂದ ಕಡಿದು ಅದರ ಭಾಗವನ್ನು ಇನ್ನೊಂದು ಕಡೆಗೆ ಕೊಂಡೊಯ್ಯುವುದೇನು?**

**ಭಾವವಿಲಾಸಿನೀ–** ನಿಷ್ಕ್ರಿಯಬ್ರಹ್ಮಭಾಗತ್ವೇ ಜೀವಾನಾಂ ಚ ನಿಷ್ಕ್ರಿಯತ್ವಮೇವೋಚಿತಮಿತ್ಯತ್ರ ದೃಷ್ಟಾಂತಮುಪಪಾದಯತಿ – **ಕಿಮಿತಿ** ॥ ತತ್ ಖಂಡಂ ವ್ಯೋಮಖಂಡಮ್ । ತ್ವನ್ಮಾಯಾ ಅನಿರ್ವಚನೀಯಾವಿದ್ಯಾ ಮಾಯಾಶಕ್ತ್ಯಾ ಘಟತ ಇತ್ಯೇತದಪ್ಯನೇನೈವ ದೂಷಿತಮ್ ॥೫೦೦॥

**ವಿವರಣೆ–** ಜೀವರು ಬ್ರಹ್ಮನ ಒಂದು ಭಾಗವಾಗಿದ್ದರೆ ಜೀವರಿಗೂ ನಿಷ್ಕ್ರಿಯತ್ವ ಬಂದೀತು ಎಂದು ದೃಷ್ಟಾಂತದಿಂದ ತಿಳಿಸುತ್ತಾರೆ. ಲೋಕದಲ್ಲಿ ಯಾವುದೇ ಶಕ್ತಿಶಾಲಿಯಾದ ಮಾಯಾದಿಗಳಿಂದಲೂ ಆಕಾಶವನ್ನು ತುಂಡರಿಸಿ ಒಂದು ಭಾಗವನ್ನು ಬೇರೆ ಕಡೆ ಒಯ್ಯಲು ಸಾಧ್ಯವಿಲ್ಲ. ಎಂದರೆ ನಿಷ್ಕ್ರಿಯವಾದ ಆಕಾಶದ ಭಾಗವನ್ನು ಸಕ್ರಿಯವನ್ನಾಗಿ ಮಾಡಲು ಸಾಧ್ಯವಿಲ್ಲ. ಹೇಗೋ ಹಾಗೆಯೇ ಅವಿದ್ಯಾದಿ ಯಾವುದೇ ಮಾಯೆಯಿಂದಲೂ ಕೂಡ ನಿಷ್ಕ್ರಿಯನಾದ ಬ್ರಹ್ಮನ ಭಾಗವನ್ನು ಸಕ್ರಿಯವನ್ನಾಗಿ ಮಾಡಲು ಬರುವುದಿಲ್ಲ. ಆದ್ದರಿಂದ ನೀವು (ಮಾಯಾವಾದಿಗಳು) ಹೇಳುವಂತೆ ಜೀವರು ಬ್ರಹ್ಮನ ಒಂದು ಭಾಗವಾಗಿದ್ದರೆ ಅವರೂ ಬ್ರಹ್ಮನಂತೆ ನಿಷ್ಕ್ರಿಯರೇ ಆಗುತ್ತಿದ್ದರು.

ಹಾಗಾಗಿಲ್ಲವಾದ್ದರಿಂದ ಜೀವರು ಎಂದೂ ಬ್ರಹ್ಮನ ಭಾಗಗಳಲ್ಲ, ಕಿಂತು ಬ್ರಹ್ಮನಿಗಿಂತ ಸ್ವಾಭಾವಿಕವಾಗಿ ಭಿನ್ನರೇ ಸರಿ.

**ಹರೇರನೇಕತಾಽಣುತ್ವಂ ಮಹತ್ವಂ ಚೇತಿ ಮನ್ಮತಮ್ ।**
**ಅತೋ ಗತಾಗತಾದ್ಯಂ ಚ ಯುಕ್ತಂ ಶಕ್ತ್ಯಾ ಮಮ ಪ್ರಭೋಃ ॥ ೫೧೧ ॥**

**ಅರ್ಥ–** ಹರೇಃ = ಹರಿಗೆ, ಅನೇಕತಾ = ಬಹುರೂಪವೂ, ಅಣುತ್ವಂ = ಅತ್ಯಂತಸೂಕ್ಷ್ಮರೂಪವೂ, ಮಹತ್ವಂ ಚ = ಪರಮಮಹದ್ರೂಪವೂ ಕೂಡ, (ಅಸ್ತೀತಿ = ಇದೆ ಎಂದು), ಮನ್ಮತಮ್ = ನಮ್ಮ ಸಿದ್ಧಾಂತವು. ಅತಃ = ಆದ್ದರಿಂದ, ಮಮ = ನನ್ನ ಪ್ರಭೋಃ = ಸ್ವಾಮಿಯಾದ ಹರಿಗೆ, ಶಕ್ತ್ಯಾ = (ಅಘಟಿತಘಟನಾ) ಶಕ್ತಿಯಿಂದ, ಗತಾಗತಾದ್ಯಂ ಚ = ಗಮನಾಗಮನಾದಿಗಳೂ ಕೂಡ, ಯುಕ್ತಮ್ = ಯೋಗ್ಯವೇ (ಭವತಿ = ಆಗುತ್ತದೆ.)

**ಅನುವಾದ–** ಹರಿಗೆ ಅನೇಕತ್ವವು, ಅಣುತ್ವವು ಮತ್ತು ಮಹತ್ವವು ಇದೆ ಎನ್ನುವುದು ನನ್ನ ಮತ. ಅಣುತ್ವವಿರುವುದರಿಂದ ಮತ್ತು ಶಕ್ತಿಯು ಇರುವುದರಿಂದ ನನ್ನ ಪ್ರಭುವಿಗೆ ಗಮನಾಗಮನಗಳು ಕೂಡುತ್ತದೆ.

**ಭಾವವಿಲಾಸಿನೀ– ಅಸ್ಮಾಕಂ ಮತೇ ವಿಶೇಷೋಽಸ್ತೀತ್ಯಾಹ – ಹರೇರಿತಿ ॥ ಚಶಬ್ದೇನೈಕತ್ವಂ ಚ ಸಮುಚ್ಚಿನೋತಿ । ಅತೋ ದ್ವಿಸ್ವಭಾವತ್ವಾತ್ । ಗತಾಗತಾದ್ಯಂ, ಅವತಾರೇಷು ಗಮನಾ-ಗಮನಾದಿಕ್ರಿಯಾಸಹಿತತ್ವಮ್ । ಆದ್ಯಪದೇನಾನೇಕತ್ವಂ ಚ ಗೃಹ್ಯತೇ । ಶಕ್ತ್ಯಾ ಅಘಟಿತ ಘಟಕಶಕ್ತ್ಯಾ । ಕೃಷ್ಣಾದ್ಯವತಾರೇಷ್ವಪ್ಯಣುತ್ವಮಹತ್ತ್ವದರ್ಶನೇನ ಮೂಲರೂಪಾವತಾರ-ರೂಪಯೋರಪ್ಯಘಟಿತಘಟಕಶಕ್ತ್ಯಾ ದ್ವಿಸ್ವಭಾವತ್ವದ್ವೈಕ್ಯಂ ಚ ಘಟತೇ। ಜೀವಾನಾಂ ಚಾಣುತ್ವೈಕ-ಸ್ವಭಾವತ್ವೇನ ಕೇವಲಂ ಸಕ್ರಿಯತ್ವೇನ ಚ ಭಗವತೋಽತ್ಯಂತವಿಲಕ್ಷಣತ್ವಾದತ್ಯಂತಭೇದಶ್ಚೇತಿ ಸರ್ವಮವದಾತಮ್ ॥ ೫೧೧ ॥**

**ವಿವರಣೆ–** ದ್ವೈತಮತದಲ್ಲಿಯೂ ಬ್ರಹ್ಮನಿಗೆ ವ್ಯಾಪ್ತತ್ವವನ್ನು ಒಪ್ಪಿದ್ದರಿಂದ ಅವನಲ್ಲಿಯೂ ಗಮನಾದಿಕ್ರಿಯೆಯು ಹೇಗೆ ಸಾಧ್ಯ ಎಂದು ಆಕ್ಷೇಪ ಬಂದರೆ ಅದಕ್ಕೆ ಉತ್ತರಿಸುತ್ತಾರೆ. ದ್ವೈತಸಿದ್ಧಾಂತದಲ್ಲಿಯೂ ಪರಬ್ರಹ್ಮನಿಗೆ ಆಕಾಶದಂತೆ ಸರ್ವತ್ರವ್ಯಾಪ್ತಿಯು ಇರುವುದರಿಂದ ಗಮನಾಗಮನಾದಿ ಕ್ರಿಯೆಗಳು ಹೇಗೆ ಬರಲು ಸಾಧ ಎಂಬ ಸಂಶಯ ಸಹಜವಾಗಿ ಬರಬಹುದು. ಆದರೆ ನಮ್ಮ ಮತದಲ್ಲಿ ಈ ಸಂಶಯಕ್ಕೂ ಅವಕಾಶವಿಲ್ಲ. ಏಕೆಂದರೆ ಅಣೋರಣೀಯಾನ್ ಮಹತೋ ಮಹೀಯಾನ್ ಇತ್ಯಾದಿ ಪ್ರಮಾಣಗಳಿಂದ ನಾವು ಪರಮಾತ್ಮನಿಗೆ ಅನೇಕ ರೂಪಗಳನ್ನು ಎಂದರೆ, ಅತಿಸೂಕ್ಷ್ಮವಾದ ರೂಪಗಳನ್ನೂ ಹಾಗೂ ಪರಮಮಹದ್ರೂಪಗಳನ್ನೂ ಒಪ್ಪಿರುತ್ತೇವೆ. ಹಾಗೆಯೇ ಸಾರ್ವಜ್ಞ್ಯ, ಸರ್ವಶಕ್ತಿ ಇತ್ಯಾದಿ ಗುಣಗಳನ್ನೂ ಒಪ್ಪಿರುತ್ತೇವೆ. ಹೀಗಾಗಿ ಪರಮಾತ್ಮನಲ್ಲಿ ಅವನ ಅಚಿಂತ್ಯಾದ್ಭುತ-ಶಕ್ತಿಯಿಂದ ಗಮನಾಗಮನಾದಿಕ್ರಿಯೆಗಳು ಕೂಡುತ್ತವೆ. ನಿಮ್ಮ ಮತದಲ್ಲಿ ಅಣುತ್ವ ಶಕ್ತ್ಯಾದಿಧರ್ಮಗಳಿಲ್ಲದಿರುವುದರಿಂದ ಕ್ರಿಯೆಯು ಕೂಡುವುದಿಲ್ಲ.

**ತವ ತ್ವನೇಕತಾಣುತ್ವೇ ನೈವ ಸ್ತೋ ಮಹದೇವ ತತ್ ।**
**ಶಕ್ತಿಶ್ಚ ನಾಸ್ತಿ ತೇನೋಕ್ತಂ ಸಮಸ್ತಂ ಕಸ್ತದುತ್ತರೇತ್ ॥ ೫೧೨ ॥**

**ಅರ್ಥ–** ತವ = ನಿನ್ನ (ಮತೇ) ತು = ಸಿದ್ಧಾಂತದಲ್ಲಿಯಾದರೂ, ತಸ್ಯ = ಆ ಪರಬ್ರಹ್ಮನಿಗೆ, ಅನೇಕತಾಣುತ್ವೇ = ಅನೇಕರೂಪಗಳಲಾಗಲೀ, ಸೂಕ್ಷ್ಮರೂಪಗಳಾಗಲೀ, ನೈವ ಸ್ತಃ = ಇಲ್ಲವೇ ಇಲ್ಲ. ತತ್ = ಆ ಪರಬ್ರಹ್ಮನು, ಮಹದೇವ = ವ್ಯಾಪ್ತನೇ ಆಗಿರುವನು. (ತಸ್ಯ) = ಆವನಿಗೆ, ಶಕ್ತಿಶ್ಚ = (ಅಘಟಿತಘಟನಾ) ಶಕ್ತಿಯೂ ಕೂಡ, ನಾಸ್ತಿ = ಇಲ್ಲ. ತೇನ = ಆ ಕಾರಣದಿಂದ, ಉಕ್ತಂ = ಹಿಂದೆ ಹೇಳಿದ, ಸಮಸ್ತಂ = ಎಲ್ಲ ತತ್ =ಆಕ್ಷೇಪವನ್ನು, ಕಃ = ಯಾರು, ಉತ್ತರೇತ್ = ಉತ್ತರಿಸಿಯಾನು?

**ಅನುವಾದ–** ಅದ್ವೈತಸಿದ್ಧಾಂತದಲ್ಲಿ ಪರಬ್ರಹ್ಮನು ವ್ಯಾಪ್ತನಾಗಿ ಪರಮಹತ್ತೇ ಆಗಿರುವನು. ದ್ವೈತಸಿದ್ಧಾಂತದಂತೆ ಅನೇಕರೂಪಗಳಾಗಲೀ, ಅಣುರೂಪಗಳಾಗಲೀ ಇರುವುದಿಲ್ಲ. ಅವನು ನಿರ್ಗುಣನಾದ್ದರಿಂದ ಅವನಲ್ಲಿ ಶಕ್ತ್ಯಾದಿಗಳು ಯಾವುದೂ ಇರುವುದಿಲ್ಲ. ಆದ್ದರಿಂದ ಅವನ ಸಿದ್ಧಾಂತದ ವಿಷಯದಲ್ಲಿ ನಾವು ಹಿಂದೆ ಹೇಳಿದ ಎಲ್ಲಾ ಆಕ್ಷೇಪಗಳಿಗೆ ಯಾರು ತಾನೇ ಉತ್ತರಿಸಲು ಸಾಧ್ಯ?

**ಭಾವವಿಲಾಸಿನೀ–** ಪರಸ್ಯ ತು ನೇಯಂ ಪ್ರಕ್ರಿಯೇತ್ಯಾಹ – **ತವ ತ್ವಿತಿ** ॥ ತತ್ ಬ್ರಹ್ಮ । ಶಕ್ತಿಃ ಅಘಟಿತಘಟಕಶಕ್ತಿಃ । ತತ್ ದೂಷಣಮ್ ॥ ೫೧೨ ॥

**ಮಾಯಾವಚ್ಛಿನ್ನರೂಪೇಷು ತೇಷ್ವೇವಂ ಸಂಚರತ್ಸ್ವಪಿ ।**
**ಚೈತನ್ಯಮಪರಿಚ್ಛಿನ್ನಂ ಯದನ್ಯದ್ ಬ್ರಹ್ಮ ತದ್ಧಿ ನಃ ॥ ೫೧೩ ॥**

**ಅರ್ಥ–** ಮಾಯಾವಚ್ಛಿನ್ನರೂಪೇಷು = ಮೋಹವೇ ಮೊದಲಾದ ಅಜ್ಞಾನದಿಂದ ಆವರಿಸಲ್ಪಟ್ಟ ಸ್ವರೂಪವುಳ್ಳ, ತೇಷು= ಆ ಜೀವರು, ಏವಂ = ಈಗ ಅನುಭವಿಸುವ ರೂಪದಲ್ಲಿ, (ಸಂಸಾರೇ= ಸಾಂಸಾರಿಕಲೋಕಗಳಲ್ಲಿ) ಸಂಚರತ್ಸ್ವಪಿ= ಸಂಚರಿಸುತ್ತಿರುವಾಗಲೂ ಕೂಡ, ಅಪರಿಚ್ಛಿನ್ನಂ = ದೇಶಕಾಲಾದಿ ಅಳತೆರಹಿತನಾದ, ಅನ್ಯತ್= ಜೀವಚೇತನರಿಗಿಂತ ಭಿನ್ನನಾದ, ಯತ್ = ಯಾವುದೊಂದು, ಚೈತನ್ಯಂ = ಚೇತನವು, ಅಸ್ತಿ = ಇದೆಯೋ, ತತ್ ಹಿ = ಆ ಚೇತನವೇ, ನಃ = ನಮ್ಮ ಸಿದ್ಧಾಂತದ, ಬ್ರಹ್ಮ = ಪರಬ್ರಹ್ಮನು.

**ಅನುವಾದ–** ಹೀಗೆ ಮಾಯೆಯಿಂದ ಆವರಿಸಲ್ಪಟ್ಟ ರೂಪವುಳ್ಳ ಅಂತಹ ಜೀವರು ಸಂಸಾರದಲ್ಲಿ ಸಂಚರಿಸುತ್ತಿದ್ದರೂ ಅವುಗಳಿಗಿಂತ ಭಿನ್ನವಾದ ಅಪರಿಚ್ಛಿನ್ನವಾದ ಯಾವ ಚೈತನ್ಯವಿದೆಯೋ ಅದೇ ನಮ್ಮ ಬ್ರಹ್ಮ.

**ಭಾವವಿಲಾಸಿನೀ–** ತೇಷು ಜೀವೇಷು । ಅನ್ಯತ್ಸಂಚರಜ್ಜೀವಚೈತನ್ಯಾತ್ ವ್ಯತಿರಿಕ್ತಮ್ । ಅಪರಿಚ್ಛಿನ್ನಂ ಯಚ್ಚೈತನ್ಯಂ ಮಯಾಕ್ಲೇಶಾದಿದೋಷರಹಿತಮ್ । ತತ್ ನಃ ಮತೇ ॥ ೫೧೩ ॥

**ವಿವರಣೆ–** ದ್ವೈತಮತದಲ್ಲಿ ಪರಬ್ರಹ್ಮ ಯಾರೆಂಬುದನ್ನು ವಿವರಿಸುತ್ತಾರೆ. ಲೋಕದಲ್ಲಿ ಸಂಪತ್ತು ಪತ್ನಿ ಪುತ್ರರು, ಬಂಧುಗಳು ಇವೇ ಮೊದಲಾದ ಸಾಂಸಾರಿಕವಸ್ತುಗಳಲ್ಲಿ ತಾನು ತನ್ನದೆಂಬ ಅಭಿಮಾನದಿಂದ ಕೂಡಿ ಸುಖದುಃಖಾದಿಗಳನ್ನು ಅನುಭವಿಸುತ್ತಾ ಭೂ, ಸ್ವರ್ಗ, ನರಕಾದಿ ಲೋಕಗಳಲ್ಲಿ ಸಂಚರಿಸುತ್ತಿರುವವರು ಜೀವಚೇತನರು. ಈ ರೀತಿ ಜೀವರು ಅನುಭವಿಸುತ್ತಿರುವಾಗಲೂ ಕೂಡ ಯಾವ ಮೋಹಾದಿದೋಷಗಳಿಗೂ ಒಳಗಾಗದ ಜ್ಞಾನಾನಂದಾದಿಗಳುಳ್ಳ ಸರ್ವತ್ರ ವ್ಯಾಪ್ತನಾದ, ಅನಾದಿ ಅನಂತಕಾಲದಲ್ಲೂ ಒಂದೇ ರೀತಿಯಾಗಿರುವ ಸರ್ವೋತ್ತಮವಾದ, ಶ್ರುತಿಸ್ಮೃತ್ಯಾದಿಗಳಲ್ಲಿ ಪ್ರತಿಪಾದಿಸಲ್ಪಡುವ ಯಾವುದೊಂದು ಚೈತನ್ಯವಿದೆಯೋ ಅದೇ ನಮ್ಮ ದ್ವೈತಸಿದ್ಧಾಂತದಲ್ಲಿ ಹೇಳುವ ಬ್ರಹ್ಮನು.

**ಯತ್ ತದ್ ಬ್ರಹ್ಮ ಪರಂ ವ್ಯಾಪ್ತಂ ಶ್ರುತ್ಯಾ ಸ್ಮೃತ್ಯಾ ಚ ಕೀರ್ತ್ಯತೇ।**
**ಸ ಏವ ಭಗವಾನ್ ವಿಷ್ಣುರ್ವೈಷ್ಣವಾ ಯಮುಪಾಸತೇ ॥ ೫೧೪ ॥**

**ಅರ್ಥ–** ಯತ್ = ಯಾವ ಪರಬ್ರಹ್ಮನು, ಪರಂ = ಸರ್ವೋತ್ತಮನು, ವ್ಯಾಪ್ತಂ = ದೇಶಕಾಲವ್ಯಾಪ್ತನು, (ಇತಿ = ಹೀಗೆಂದು) ಶ್ರುತ್ಯಾ = ಶ್ರುತಿಯಿಂದಲೂ, ಸ್ಮೃತ್ಯಾ ಚ = ಸ್ಮೃತಿಯಿಂದಲೂ, ಕೀರ್ತ್ಯತೇ = ಹೇಳಲ್ಪಡುತ್ತಾನೋ, ತತ್ = ಅಂತಹ, ಬ್ರಹ್ಮ = ಪರಬ್ರಹ್ಮನು, ವೈಷ್ಣವಾಃ = ವಿಷ್ಣುಭಕ್ತರು, ಯಂ = ಯಾರನ್ನು ಉಪಾಸತೇ = ಉಪಾಸನೆ ಮಾಡುತ್ತಾರೋ, ಸಃ ಅಪಿ = ಅವನೂ ಕೂಡ, ಭಗವಾನ್ = ಷಡ್ಗುಣೈಶ್ವರ್ಯಸಂಪನ್ನನಾದ, ವಿಷ್ಣುಃ ಏವ = ವಿಷ್ಣುವೇ (ಆಗಿದ್ದಾನೆ.)

**ಅನುವಾದ–** ಶ್ರುತಿಸ್ಮೃತಿಗಳಲ್ಲಿ ಸರ್ವಗುಣಪೂರ್ಣನಾಗಿ ಹೇಳುವ ನಾರಾಯಣನೂ ದ್ವೈತಸಿದ್ಧಾಂತದ ಬ್ರಹ್ಮನೂ ಬೇರೆಯಲ್ಲ, ಒಬ್ಬನೇ ಎಂದು ತಿಳಿಸುತ್ತಾರೆ. ಶ್ರುತಿಸ್ಮೃತಿಗಳು ಯಾವ ಬ್ರಹ್ಮನನ್ನು ಸರ್ವೋತ್ತಮ, ದೇಶಕಾಲಗಳಲ್ಲಿ ವ್ಯಾಪ್ತನೆಂದು ಸಾರುತ್ತವೋ ಆ ಬ್ರಹ್ಮನು ಬೇರೆಯಲ್ಲ, ವೈಷ್ಣವರು ಯಾರನ್ನು ಸರ್ವೋತ್ತಮ, ವ್ಯಾಪ್ತನೆಂದು ಉಪಾಸನೆ ಮಾಡುತ್ತಾರೋ ಆ ವಿಷ್ಣುವೂ ಬೇರೆಯಲ್ಲ, ಕಿಂತು ಒಬ್ಬನೇ ಆಗಿರುತ್ತಾನೆ.

**ಭಾವವಿಲಾಸಿನೀ–** ಬ್ರಹ್ಮ ಶ್ರುತ್ಯಾ, ಬ್ರಹ್ಮೈವಾಧಸ್ತಾತ್ ಬ್ರಹ್ಮೈವೋಪರಿಷ್ಟಾದಿತ್ಯಾದಿಶ್ರುತ್ಯಾ । ಸಃ ವ್ಯಾಪ್ತಬ್ರಹ್ಮತಯೋಚ್ಯಮಾನಃ ಭಗವಾನ್ ವಿಷ್ಣುರೇವ । ನತು ವಿಷ್ಣೋರನ್ಯದ್‌ಬ್ರಹ್ಮ-ಚೈತನ್ಯಮಂಗೀಕರ್ತುಮುಚಿತಮಿತ್ಯೇವಶಬ್ದಾರ್ಥಃ ॥ ೫೧೪ ॥

**ಅಂತರ್ಬಹಿಶ್ಚ ತತ್ ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ ।**
**ಇತಿ ಶ್ರುತೇರ್ನ ಚೇದ್ ವ್ಯಾಪ್ತಚೈತನ್ಯದ್ವಯಮಾಪತೇತ್ ॥ ೫೧೫ ॥**

**ಅರ್ಥ–** ನಾರಾಯಣಃ = ನಾರಾಯಣನು, ತತ್ = (ಕಾಣಲ್ಪಡುವ ಹಾಗೂ ಕೇಳಲ್ಪಡುವ) ಈ ಜಗತ್ತನ್ನು ಸರ್ವಂ = ಎಲ್ಲವನ್ನೂ, ವ್ಯಾಪ್ಯ = ವ್ಯಾಪಿಸಿಕೊಂಡು, ಸ್ಥಿತಃ =

ಇರುವವನಾಗಿ, (ಭವತಿ = ಆಗಿದ್ದಾನೆ.) ಇತಿ = ಹೀಗೆಂಬ, ಶ್ರುತೇಃ = ವೇದವಾಕ್ಯದಿಂದ (ಬ್ರಹ್ಮ ವಿಷ್ಣುಶ್ಚ ಏಕ ಏವ ಭವೇತ್ = ಬ್ರಹ್ಮ ಮತ್ತು ವಿಷ್ಣುವು ಒಬ್ಬನೇ ಆಗಬೇಕು.) ನ ಚೇತ್ = ಹಾಗಲ್ಲದಿದ್ದರೆ, ವ್ಯಾಪ್ತಚೈತನ್ಯದ್ವಯಂ (ಇತಿ) = ವ್ಯಾಪ್ತವಾದ ಚೇತನಗಳು ಎರಡು (ಎಂದು), ಆಪತೇತ್ = ಆಪತ್ತಿಯು ಬಂದೀತು.

**ಅನುವಾದ–** **ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ (ಎಲ್ಲ ವಸ್ತುಗಳಲ್ಲಿಯೂ ನಾರಾಯಣನು ಒಳಗೂ ಮತ್ತು ಹೊರಗೂ ವ್ಯಾಪಿಸಿಕೊಂಡು ನೆಲೆಸಿದ್ದಾನೆ) ಎಂಬ ಶ್ರುತಿ ಇರುವುದರಿಂದ ಅವನೇ ವಿಷ್ಣು. ಹಾಗಿಲ್ಲದಿದ್ದರೆ ವ್ಯಾಪ್ತವಾದ ಎರಡು ಚೈತನ್ಯಗಳನ್ನು ಒಪ್ಪಬೇಕಾಗುತ್ತದೆ.**

**ಭಾವವಿಲಾಸಿನೀ–** ನಾರಾಯಣಸ್ಯ ವ್ಯಾಪ್ತತ್ವೇ ಪ್ರಮಾಣಮಾಹ – **ಅಂತರ್ಬಹಿಶ್ಚೇತಿ** ॥ ನಚೇತ್ ವಿಷ್ಣುರೇವ ವ್ಯಾಪ್ತಬ್ರಹ್ಮಚೈತನ್ಯಂ ನಚೇತ್, ವಿಷ್ಣೋರನ್ಯದ್ಬ್ರಹ್ಮಚೈತನ್ಯಮಂಗೀಕ್ರಿಯತೇ ಚೇದಿತ್ಯರ್ಥಃ । ವಿಷ್ಣುಬ್ರಹ್ಮಣೋರುಭಯೋರಪಿ ವ್ಯಾಪ್ತತ್ವಸ್ಯೋಕ್ತಶ್ರುತಿದ್ವಯಸಿದ್ಧತ್ವಾತ್ ತಯೋಶ್ಚ ದ್ವಿತ್ವೇ ವ್ಯಾಪ್ತಚೈತನ್ಯದ್ವಯಮಾಪಯೇತ್ । ತಚ್ಚಾಪ್ರಾಮಾಣಿಕಮ್ । ಅತೋ ವ್ಯಾಪ್ತಚೈತನ್ಯತಯೋಚ್ಯಮಾನಂ ಬ್ರಹ್ಮ ವಿಷ್ಣುರೇವೇತಿ ಭಾವಃ ॥ ೫೧೫ ॥

**ವಿವರಣೆ–** ಬ್ರಹ್ಮ ವಿಷ್ಣುಬೇರೆ ಬೇರೆ ಎಂದು ಹೇಳಿದರೆ ಬಾಧಕವನ್ನು ಹೇಳುತ್ತಾರೆ. ಬ್ರಹ್ಮೈವಾಧಸ್ತಾತ್ ಬ್ರಹ್ಮೈವೋಪರಿಷ್ಟಾತ್ ಎಂಬುದಾಗಿ ಶ್ರುತಿಯು ಒಂದು ಕಡೆ ಬ್ರಹ್ಮನನ್ನು ವ್ಯಾಪ್ತನೆಂದು ಹೇಳಿದೆ, ಹಾಗಯೇ ಇನ್ನೊಂದು ಕಡೆ ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ ಎಂಬುದಾಗಿ ನಾರಾಯಣನಿಗೆ ವ್ಯಾಪ್ತಿಯನ್ನು ಹೇಳಿದೆ. ಹೀಗಾಗಿ ಬ್ರಹ್ಮ ಮತ್ತು ನಾರಾಯಣ ಇವರಿಗೆ ಅಭೇದವನ್ನು ಒಪ್ಪಬೇಕಾಗುತ್ತದೆ. ಹಾಗೆ ಒಪ್ಪದಿದ್ದರೆ ವ್ಯಾಪ್ತರಾದವರು ಎರಡು ಚೇತನರೆಂದು ಅಂಗೀಕರಿಸಬೇಕಾದೀತು. ಇದು ಮಾಯಾವಾದಿಗೆ ಇಷ್ಟವಾಗುವುದಿಲ್ಲ. ಆದ್ದರಿಂದ ಬ್ರಹ್ಮ ಮತ್ತು ವಿಷ್ಣು ಒಬ್ಬರೇ ಎಂದು ಅಂಗೀಕರಿಸಬೇಕು.

**ಜೀವಾಭೇದೇಽಪಿ ಯಸ್ಯಾಶಾ ಬ್ರಹ್ಮ ಕಸ್ಮಾದ್ ಭಿನತ್ತ್ಯಸೌ ।**
**ಕಲ್ಪನಾಗೌರವಂ ಯತ್ ಸ್ಯಾದ್ ವಿದ್ಯಾಯಾ ಲಾಘವಂ ಚ ಯತ್ ॥೫೧೬॥**

**ಅರ್ಥ–** ಯಸ್ಯ = ಯಾವ ಮಾಯಾವಾದಿಗೆ, (ಬ್ರಹ್ಮಣಃ = ಬ್ರಹ್ಮನಿಗೆ), ಜೀವಾಭೇದೇ ಅಪಿ = ಜೀವರಿಂದ ಐಕ್ಯವಿಷಯದಲ್ಲೂ ಕೂಡ, ಆಶಾ = ಇಚ್ಛೆಯು, (ವರ್ತತೇ = ಇದೆಯೋ) ಅಸೌ = ಇಂತಹ ಮಾಯಾವಾದಿಯು, ಕಸ್ಮಾತ್ = ಯಾವ ಕಾರಣದಿಂದ, ಬ್ರಹ್ಮ = ಬ್ರಹ್ಮನನ್ನು ಭಿನತ್ತಿ = ಎರಡನ್ನಾಗಿ ಮಾಡುತ್ತಾನೆ? (ತಥಾ ಕಲ್ಪನೇ = ಹಾಗೆ ಎರಡನ್ನಾಗಿ ಕಲ್ಪಿಸಿದರೆ) ಕಲ್ಪನಾಗೌರವಂ = ಕಲ್ಪನೆಯಲ್ಲಿ ಗೌರವ ಎಂಬ ದೋಷವು, ಯತ್ = ಯಾವ ಕಾರಣದಿಂದ, ಸ್ಯಾತ್ = ಬಂದೀತೋ, (ತಥಾ ಅಕಲ್ಪನೇ = ಹಾಗೆ ಬ್ರಹ್ಮನನ್ನು

ಎರಡನ್ನಾಗಿ ಕಲ್ಪಿಸದೇ ಇದ್ದರೆ) ವಿದ್ಯಾಯಾಃ = ಉಪಾಸನಾರೂಪವಾದ ವಿದ್ಯೆಗೆ, ಲಾಘವಂ = ಸುಲಭತನವು, (ಭವತಿ = ಆಗುವುದು.)

**ಅನುವಾದ–** ಯಾವ ನಿನಗೆ ಜೀವರುಗಳಿಗೆ ಅಭೇದವನ್ನು ಹೇಳುವುದರಲ್ಲಿಯೂ ಬಹಳವಾದ ಆಸೆ ಇದೆಯೋ, ಅಂತಹ ನೀನು ಬ್ರಹ್ಮನನ್ನು ಏಕೆ ಭಿನ್ನನನ್ನಾಗಿ ಮಾಡುತ್ತೀಯೇ? ಹಾಗೆ ಮಾಡಿದರೆ ಕಲ್ಪನಾ ಗೌರವವು, ಒಬ್ಬನೇ ಬ್ರಹ್ಮನನ್ನು ಅಂಗೀಕರಿಸಿದರೆ ಕಲ್ಪನಾ ಲಾಘವವು ಉಂಟಾಗುವುದಿಲ್ಲವೇ?

**ಭಾವವಿಲಾಸಿನೀ–** ವ್ಯಾಪ್ತಚೈತನ್ಯದ್ವಯಕಲ್ಪನಂ ಪರಸ್ಯ ಸ್ವಪ್ರಕ್ರಿಯಾವಿರುದ್ಧಂ ಚೇತ್ಯಾಹ – **ಜೀವಾಭೇದ ಇತಿ ॥** ಬ್ರಹ್ಮ ವ್ಯಾಪ್ತಚೈತನ್ಯಂ ಭಿನತ್ತಿ ದ್ವಯಂ ಕರೋತಿ। ಯದ್ಯಸ್ಮಾತ್। ಲಾಘವಮ್ ಅಲ್ಪತಾ । ತಸ್ಮಾತ್ಕಸ್ಮಾದ್ಭಿನತ್ತೀತಿ ಪೂರ್ವೇಣಾನ್ವಯಃ ॥ ೫೧೬ ॥

**ವಿವರಣೆ–** ವ್ಯಾಪ್ತಚೈತನ್ಯದ್ವಯದ ಕಲ್ಪನೆಯು ಮಾಯಾವಾದಿಗಳ ಪ್ರಕ್ರಿಯೆಗೆ ವಿರುದ್ಧವಾಗುತ್ತದೆ ಎಂದು ತಿಳಿಸುತ್ತಾರೆ. ಅದ್ವೈತವಾದಿಗಳಿಗೆ ಜೀವರನ್ನು ಬ್ರಹ್ಮನಿಂದ ಇಬ್ಭಾಗಿಸಲು ಇಷ್ಟವಿಲ್ಲ, ಕಿಂತು ಜೀವೈಕ್ಯವನ್ನು ಹೇಳುವುದರಲ್ಲೇ ಆಶೆ ಇರುವುದು. ಇಂತಹ ಅದ್ವೈತಿಗಳು ಬ್ರಹ್ಮನನ್ನೇ ಎರಡನ್ನಾಗಿಸಲು ಇಷ್ಟಪಡುವರೇನು? ಖಂಡಿತವಾಗಿಯೂ ಇಷ್ಟಪಡುವುದಿಲ್ಲ. ಒಂದು ಪಕ್ಷ ಹಾಗೆ ಕಲ್ಪಿಸಿದಲ್ಲಿ ಪ್ರಮಾಣವಿಲ್ಲದೆ ಕಲ್ಪಿಸುವುದರಿಂದ ಕಲ್ಪನಾಗೌರವ ಎಂಬ ದೋಷ ಬಂದೀತು. ಅಷ್ಟೇ ಅಲ್ಲ ಮೋಕ್ಷಕ್ಕೋಸ್ಕರ ಎರಡು ಬ್ರಹ್ಮರ ಉಪಾಸನೆ ಮಾಡಬೇಕಾಗಿ ಉಪಾಸನೆಯಲ್ಲಿ ಗೌರವವೆಂಬ ಕ್ಲೇಶ ಬಂದೀತು. ಒಂದೇ ಬ್ರಹ್ಮನನ್ನು ಹೇಳಿದರೆ ಉಪಾಸನೆಯಲ್ಲಿ ಅನಾಯಾಸವೆಂಬ ಲಾಘವವು ಬರುತ್ತದೆ. ಆದ್ದರಿಂದ ವ್ಯಾಪ್ತರಾದ ಬ್ರಹ್ಮ ವಿಷ್ಣು ಒಬ್ಬನೇ ಎಂದು ಅಂಗೀಕರಿಸಬೇಕು.

**ಜೀವಾನ್ ಜಗ್ರಾಸ ಯಾ ಮಾಯಾ ವ್ಯಾಪ್ತೇ ಬ್ರಹ್ಮಣಿ ಕಿಂ ತಯಾ ।**
**ಕವಿರ್ಮನೀಷೀ ಪರಿಭೂರ್ಯಥಾರ್ಥಾನ್ ಸೋಽಸೃಜತ್ ಕಿಲ ॥ ೫೧೭ ॥**

**ಅರ್ಥ–** ಯಾ = ಯಾವ, ಮಾಯಾ = ಮಾಯೆಯು, ಜೀವಾನ್ = ಜೀವರನ್ನು ಜಗ್ರಾಸ = ಆವರಿಸಿತೋ, ತಯಾ = ಅಂತಹ ಮಾಯೆಯಿಂದ, ವ್ಯಾಪ್ತೇ = ವ್ಯಾಪ್ತನಾದ, ಬ್ರಹ್ಮಣಿ = ಬ್ರಹ್ಮನಾದ ವಿಷ್ಣುವಿನಲ್ಲಿ, ಕಿಂ =ಯಾವ, (ಪ್ರಯೋಜನಂ ಅಸ್ತಿ = ಪ್ರಯೋಜನವಿದೆ?) ಕವಿಃ = ಸರ್ವಜ್ಞನಾದ, ಮನೀಷೀ = ಬಹಳ ಬುದ್ಧಿವಂತನಾದ, ಪರಿಭೂಃ = ಸರ್ವಸಮರ್ಥನಾದ, ಸಃ = ಆ ವಿಷ್ಣುವು, ಯಥಾರ್ಥಾನ್ = ಸತ್ಯವಾದ ವಸ್ತುಗಳನ್ನು ಅಸೃಜತ್ ಕಿಲ = ಸೃಷ್ಟಿಸಿದನಷ್ಟೆ?

**ಅನುವಾದ–** ಯಾವ ಮಾಯೆಯು ಜೀವರನ್ನೇ ತಿಂದು ಹಾಕಿತೋ (ಆವರಿಸಿತೋ) ಆ ಮಾಯೆಯಿಂದ ವ್ಯಾಪ್ತವಾದ ಬ್ರಹ್ಮನಲ್ಲಿ ಯಾವ ಫಲವು ಉಂಟಾಗುತ್ತದೆ.

**ಅವನು ಜ್ಞಾನಿಯಾದವನು, ಮನಸ್ಸುಗಳಿಗೆ ಪ್ರಭುವಾದವನು, ಎಲ್ಲರನ್ನೂ ಸೋಲಿಸುವವನು (ವ್ಯಾಪ್ತನಾದವನು) ಮತ್ತು ಯಥಾರ್ಥವಾದ ವಸ್ತುಗಳನ್ನು ಸೃಷ್ಟಿಸಿದವನಷ್ಟೇ?**

**ಭಾವವಿಲಾಸಿನೀ**– ವಿಷ್ಣೋರ್ಮಾಯಾವಚ್ಛಿನ್ನತ್ವಾತ್ ಕಥಂ ಬ್ರಹ್ಮತ್ವೇತ ಆಹ–**ಜೀವಾನಿತಿ** ॥ ತಯಾ ಮಾಯಯಾ ಕಿಂ ನ ಕಿಮಪಿ ಪ್ರಯೋಜನಮಿತ್ಯರ್ಥಃ। ಜೀವೇಷು ದುಃಖಾತ್ಮಕಸಂಸಾರ-ಸಂಪಾದನಾಯ ಮಾಯಾಯಾ ಅವಶ್ಯಮಂಗೀಕಾರ್ಯತ್ವೇನ ತಾವತೈವ ಚರಿತಾರ್ಥತ್ವಾತ್ ನಿರ್ದುಃಖೇವ್ಯಾಪ್ತೇ ಚ ವಿಷ್ಣೌ ಮಾಯಾವೃತತ್ವಾಂಗೀಕಾರೋ ವ್ಯರ್ಥೋಽಸಾಧ್ಯಶ್ಚೇತಿ ಭಾವಃ। ಸೃಷ್ಟ್ಯುಪಯೋಗಿತಯಾ ವಿಷ್ಣೌ ಮಾಯಾಂಗೀಕಾರ ಇತಿ ಶಂಕಾಂ ನಿರಾಕರೋತಿ–**ಕವಿರಿತಿ** ॥ ೫೧೭ ॥

**ವಿವರಣೆ**– ಮಾಯೆಯಿಂದ ಆವೃತನಲ್ಲದ ಶುದ್ಧಬ್ರಹ್ಮನಿಗೆ ಮಾಯಾವೃತನಾದ ವಿಷ್ಣುವಿನಿಂದ ಅಭೇದ ಹೇಗೆ ಸಾಧ್ಯ ಎಂಬ ಆಕ್ಷೇಪಕ್ಕೆ ಉತ್ತರಿಸುತ್ತಾರೆ. ವ್ಯಾಪ್ತನಾದ ವಿಷ್ಣುವು ಮಾಯಾವೃತನಾಗಿದ್ದರೆ ಅವನಿಗೆ ಆವೃತನಲ್ಲದ ಬ್ರಹ್ಮನಿಂದ ಅಭೇದವುಕೂಡದೇ ಹೋದೀತು. ಆದರೆ ಅವನು ಮಾಯಾವೃತನಲ್ಲ. ಏಕೆಂದರೆ ಜೀವನಲ್ಲಿ ಸಂಸಾರದ ಮೋಹ ದುಃಖಾದಿಗಳು ಬರಲು ಮಾಯೆಯ ಆವಶ್ಯಕತೆ ಇದೆ. ಆದರೆ ವ್ಯಾಪ್ತನಾದ ವಿಷ್ಣುವಿಗೆ ಆ ಮಾಯೆಯಿಂದ ಆಗುವ ಯಾವ ಪ್ರಯೋಜನವೂ ಇಲ್ಲ. ಹಾಗಲ್ಲದೆ, ಅವನಲ್ಲಿ ಜಗತ್ತನ್ನು ಸೃಷ್ಟಿಸಲು ಮಾಯೆಯ ಆವಶ್ಯಕತೆ ಇದೆ ಎಂದರೆ, ಅದಕ್ಕೂ ಅದು ಬೇಡ. ಏಕೆಂದರೆ ಅಘಟಿತಘಟನಾಸಾಮರ್ಥ್ಯದಿಂದಲೇ ಸತ್ಯಜಗತ್ತಿನ ಸೃಷ್ಟ್ಯಾದಿಗಳನ್ನು ಮಾಡುವನು ಎಂದು ಕವಿರ್ಮನೀಷೀ ಪರಿಭೂಃ ಸ್ವಯಂಭೂರ್ಯಾಥಾತಥ್ಯತೋಽರ್ಥಾನ್ ವ್ಯದಧಾಚ್ಛಾಶ್ವತೀಭ್ಯಃ ಸಮಾಭ್ಯಃ ಎಂಬ ಶ್ರುತಿಯು ಸಾರುತ್ತಿದೆ. ಹಾಗಾಗಿ ಸೃಷ್ಟಿಗಾಗಿಯೂ ಮಾಯೆಯ ಆವಶ್ಯಕತೆ ಇಲ್ಲ. ಏವಂ ಚ ಮಾಯಾವೃತನಲ್ಲದ ವಿಷ್ಣುವೇ ವ್ಯಾಪ್ತಬ್ರಹ್ಮನಾಗಿದ್ದಾನೆ.

**ಅತಃ ಸತ್ಯಜಗತ್ಸೃಷ್ಟೌ ಮಿಥ್ಯಾಜ್ಞಾನಂ ತವ ಪ್ರಿಯಂ।**
**ಕುತ್ರೋಪಯುಜ್ಯತೇ ತಸ್ಮಾತ್ ಸ್ವಜಾಯಾಂ ನ ಪರೇಽರ್ಪಯ ॥ ೫೧೮ ॥**

**ಅರ್ಥ**– ಅತಃ = ಆದ್ದರಿಂದ, ತವ = ನಿನಗೆ, ಪ್ರಿಯಂ = ಪ್ರೀತಿಪಾತ್ರವಾದ, ಮಿಥ್ಯಾಜ್ಞಾನಂ = ಮಿಥ್ಯಾಭೂತವಾದ ಮಾಯೆಯು, ಸತ್ಯಜಗತ್ಸೃಷ್ಟೌ = ಸತ್ಯವಾದ ಜಗತ್ತಿನ ಸೃಷ್ಟಿಯಲ್ಲಿ, ಕುತ್ರ = ಯಾವ ಸಂದರ್ಭದಲ್ಲಿ ಉಪಯುಜ್ಯತೇ = ಉಪಯೋಗಿಸಲ್ಪಡುತ್ತದೆ? ತಸ್ಮಾತ್ = ಆಕಾರಣದಿಂದ (ತ್ವಂ = ನೀನು) ಸ್ವಜಾಯಾಂ = ನಿನ್ನ ಹೆಂಡತಿಯಂತೆ, ಸದಾ ಕಾಲ ನಿನ್ನೊಂದಿಗಿರುವ ಅಜ್ಞಾನವನ್ನು, ಪರೇ = ಪರಮಾತ್ಮನಲ್ಲಿ, ನ ಅರ್ಪಯ = ಇಡಬೇಡ.

**ಅನುವಾದ–** ಆದ್ದರಿಂದ ಸತ್ಯವಾದ ಜಗತ್ತನ್ನು ಸೃಷ್ಟಿಸಲು ನಿನಗೆ ಪ್ರಿಯವಾದ ಮಿಥ್ಯಾಭೂತವಾದ ಅಜ್ಞಾನಕ್ಕೆ (ಮಾಯೆಗೆ) ಎಲ್ಲಿ ಉಪಯೋಗವಿದೆ? ಆದ್ದರಿಂದ ನಿನ್ನ ಹೆಂಡತಿಯನ್ನು ಇನ್ನೊಬ್ಬರಿಗೆ ಒಪ್ಪಿಸಬೇಡ.

**ಭಾವವಿಲಾಸಿನೀ–** ಮಿಥ್ಯಾऽಜ್ಞಾನಂ ಮಿಥ್ಯಾಭೂತಮಜ್ಞಾನಮ್ । ಸರ್ವಜ್ಞಸ್ಯ ಭಗವತಃ ಸತ್ಯಜಗತ್ಸೃಷ್ಟೌ ಮಿಥ್ಯಾಭೂತಾಜ್ಞಾನಸ್ಯೋಪಯೋಗಾಭಾವಾತ್ । ಪ್ರತ್ಯುತ ವಿರುದ್ಧತ್ವಾದಿತಿ ಭಾವಃ । ಸ್ವಜಾಯಾಂ ಸ್ವಸ್ಯ ಜೀವಸ್ಯ ಜಾಯಾಂ ಜಾಯಾವದನಾದಿಕಾಲಮಾರಭ್ಯ ವಿದ್ಯಮಾನಮ್ । ಪರೇ ಪರಮಾತ್ಮನಿ ॥ ೫೧೮ ॥

**ವಿವರಣೆ–** ಜಗತ್ಸೃಷ್ಟಿವಿಷಯದಲ್ಲೂ ಮಾಯೆಯ ಆವಶ್ಯಕತೆ ಇಲ್ಲ ಎಂದು ಸಮರ್ಥಿಸುತ್ತಾರೆ. ಭಗವಂತನು ಸತ್ಯವಾದ ಜಗತ್ತನ್ನೇ ಸೃಷ್ಟಿಸುತ್ತಾನೆಂದು ಶ್ರುತಿಯು ಸಾರುತ್ತಿದೆ. ಮಾಯಾವಾದಿಯಾದ ನಿನಗೆ ಪ್ರಿಯವಾದ ಅಜ್ಞಾನವಾದರೂ ಮಿಥ್ಯೆಯಾಗಿದೆ. ಹೀಗೆ ಪರಸ್ಪರ ವಿರುದ್ಧವಾದ್ದರಿಂದ ಮಿಥ್ಯಾಭೂತ ಅವಿದ್ಯೆಯ ಉಪಯೋಗವು ಸತ್ಯಜಗತ್ತಿನ ಸೃಷ್ಟಿಯಲ್ಲಿ ಖಂಡಿತವಾಗಿಯೂ ಕೂಡುವುದಿಲ್ಲ. ಆ ಕಾರಣ ಮಾಯಾವಾದಿಯ ಜೊತೆಗೆ ಅನಾದಿಕಾಲದಿಂದಲೂ ಇರುವ ಅವಿದ್ಯೆ ವಿಷ್ಣುವಿಗೆ ಕೂಡುವುದಿಲ್ಲ. ಹಾಗಾಗಿ ವಿಷ್ಣುವಿಗೆ ಮಾಯಾವೃತತ್ತ್ವವು ಇಲ್ಲವೇ ಇಲ್ಲ.

**ಅತೋ ಘಟಮಠಾಕಾಶಾದ್ಯುಪಮಾ ವಿಷಮೋಪಮಾ ॥ ೫೧೯ ॥**

**ಅರ್ಥ–** ಅತಃ = ಹಿಂದೆ ಹೇಳಿದ ಯುಕ್ತಿಸಮುದಾಯಗಳಿಂದ, ಘಟಮಠಾಕಾಶಾದ್ಯುಪಮಾ = ಘಟಾಕಾಶ, ಮಠಾಕಾಶವೇ ಮೊದಲಾದ ಉಪಮೆಗಳು, ವಿಷಮೋಪಮಾ = ವಿರುದ್ಧ ಉಪಮೆಗಳಾಗಿ (ಭವತಿ = ಆಗುತ್ತದೆ.)

**ಅನುವಾದ–** ಆದ್ದರಿಂದ ನೀನು ಹೇಳಿದ ಘಟಾಕಾಶ, ಮಠಾಕಾಶ ದೃಷ್ಟಾಂತವು ವಿಷಮ ದೃಷ್ಟಾಂತವಾಗಿದೆ.

**ಭಾವವಿಲಾಸಿನೀ–** ಪ್ರಾಗುಪಪಾದಿತಂ ಪ್ರಮೇಯಂ ಬುದ್ಧ್ಯಾವಾರೋಹಾಯಸ್ಮಾರಯನ್ ಉಪಸಂಹರತಿ ॥ **ಅತ ಇತಿ** ॥ ಅತಃ ಉಕ್ತಯುಕ್ತಿಸಮೂಹಾತ್ ॥ ೫೧೯ ॥

**ವಿವರಣೆ–** ಹಿಂದೆ ಹೇಳಿದ ಘಟಮಠಾಕಾಶಾದಿ ದೃಷ್ಟಾಂತ ನಿರಾಕರಣೆಯನ್ನು ಉಪಸಂಹರಿಸುತ್ತಾರೆ. ಘಟಮಠಾದಿ ಉಪಾಧಿಗಳಿಂದಾಗಿ ಒಂದೇ ವ್ಯಾಪ್ತವಾದ ಆಕಾಶದಲ್ಲಿ ಘಟಾಕಾಶ ಮಠಾಕಾಶಾದಿಗಳೆಂಬ ವಿಭಿನ್ನ ವ್ಯವಹಾರವು ಹೇಗೋ, ಹಾಗೆಯೇ ವ್ಯಾಪ್ತನಾದ ಪರಬ್ರಹ್ಮನಿಗೂ ಅಜ್ಞಾನಾದ್ಯುಪಾಧಿಯಿಂದ ಅನೇಕ ಜೀವವ್ಯವಹಾರವು ಬರುತ್ತದೆ, ಎಂದು ಜೀವಬ್ರಹ್ಮಭೇದವಿಲ್ಲದಿದ್ದರೂ ಭೇದವ್ಯವಹಾರ ವಿಷಯದಲ್ಲಿ ಘಟಾಕಾಶ ಮಠಾಕಾಶಾದಿಗಳನ್ನು ಉಪಮೆಗಳನ್ನಾಗಿ ನೀವು ಹಿಂದೆ

ಹೇಳಿದ್ದು ನಾವು ಈ ಹಿಂದೆ ಹೇಳಿದ ಯುಕ್ತಿಸಮುದಾಯಗಳಿಂದ ಯುಕ್ತವಲ್ಲ. ಕಿಂತು ವಿರುದ್ಧಗಳೇ ಆಗಿವೆ.

**ಘಟೇ ಘಟಪ್ರಮಾಣೋಽಸೌ ಮಠಮಾತ್ರೋ ಮಠೇಽಪಿ ಚ ।**
**ಘಟೇ ಗಚ್ಛತಿ ನೋ ಗಚ್ಛೇದಾಗಚ್ಛತಿ ನ ಚಾವ್ರಜೇತ್ ॥ ೫೨೦ ॥**

**ಅರ್ಥ–** ಅಸೌ = ಈ ಮಹಾಕಾಶವು, ಘಟೇ = ಮಡಕೆಯಲ್ಲಿ, ಘಟಪ್ರಮಾಣಃ = ಮಡಿಕೆಯಷ್ಟೇ ಪರಿಮಾಣವುಳ್ಳದ್ದು (ಅಸ್ತಿ = ಆಗಿದೆ). ಮಠೇ ಚ = ಮಠದಲ್ಲಿಯಾದರೂ ಕೂಡ, ಮಠಮಾತ್ರೋಽಪಿ = ಮಠದಷ್ಟೇ ಪರಿಮಾಣವುಳ್ಳದ್ದಾಗಿಯೂ ಕೂಡ, (ಅಸ್ತಿ = ಇದೆ.). (ತಥಾಪಿ = ಹಾಗಿದ್ದರೂ ಕೂಡ) ಘಟೇ = ಮಡಕೆಯು, ಗಚ್ಛತಿ (ಸತಿ) = ಹೋಗುತ್ತಿರಲು, ನೋ ಗಚ್ಛತಿ = ಹೋಗುವುದಿಲ್ಲ. ಘಟೇ = ಮಡಕೆಯು, ಆಗಚ್ಛತಿ ಸತಿ = ಬರುತ್ತಿರಲು, ನ ಆವ್ರಜೇತ್ ಅಪಿ = ಬರುವುದೂ ಕೂಡ ಇಲ್ಲ.

**ಅನುವಾದ– ಈ ಮಹಾಕಾಶವು ಘಟದಲ್ಲಿ ಘಟ ಪ್ರಮಾಣವುಳ್ಳದ್ದು, ಮತ್ತು ಮಠದಲ್ಲಿ ಮಠ ಪ್ರಮಾಣವುಳ್ಳದ್ದು ಆಗಿದೆ. ಘಟವು ಹೋದಾಗ ಅದು ಹೋಗುವುದೂ ಇಲ್ಲ, ಘಟವು ಬಂದಾಗ ಅದು ಬರುವುದೂ ಇಲ್ಲ.**

**ಭಾವವಿಲಾಸಿನೀ– ವೈಷಮ್ಯಮೇವೋಪಪಾದಯತಿ – ಘಟ ಇತಿ ॥ ೫೨೦ ॥**

**ವಿವರಣೆ–** ಹಿಂದೆ ಹೇಳಿದ ಘಟಾಕಾಶಾದ್ಯುಪಮೆಗಳು ಏಕೆ ಸರಿಯಲ್ಲ ಎಂಬುದನ್ನು ವಿವರಿಸುತ್ತಾರೆ. ಮಡಕೆಯಲ್ಲಿರುವ ಅವಕಾಶವು ಮಡಕೆಯಷ್ಟೇ ದೊಡ್ಡದಾಗಿರುತ್ತದೆ. ಮಠದಲ್ಲಿರುವ ಅವಕಾಶವು ಮಠದಷ್ಟೇ ದೊಡ್ಡದಾಗಿರುತ್ತದೆ. ಆದರೂ ಮಡಕೆಯನ್ನು ಬೇರೆ ಕಡೆ ತೆಗೆದುಕೊಂಡು ಹೋದಾಗ ಆಕಾಶವು ಮಾತ್ರ ಅಲ್ಲೇ ಇದ್ದು ಬೇರೆ ಕಡೆ ಹೋಗುವುದಿಲ್ಲ. ಆ ಮಡಕೆಯನ್ನು ತಂದಾಗ ಆಕಾಶವು ಬರುವುದೂ ಇಲ್ಲ. ಹೀಗೆ ಎಲ್ಲ ಆಕಾಶದ ಭಾಗಗಳೂ ಮಹಾಕಾಶದಂತೆ ನಿಷ್ಕ್ರಿಯವಾಗಿಯೇ ಇರುತ್ತದೆ. ಇದರಂತೆ ಜೀವರು ಬ್ರಹ್ಮನ ಭಾಗಗಳಾಗಿದ್ದರೆ ಅವನಂತೆ ನಿಷ್ಕ್ರಿಯಗಳಾಗಿರಬೇಕಾಗಿತ್ತು. ಹಾಗಾಗಿಲ್ಲ. ಕಿಂತು ವಿರುದ್ಧ ಸ್ವಭಾವವುಳ್ಳವರಾದ್ದರಿಂದ ಅವನಿಗಿಂತ ಭಿನ್ನರೇ ಸರಿ.

**ಮಹಾಕಾಶಸ್ಯ ಖಂಡೋಽಸೌ ಮಹಾಕಾಶಸ್ವಭಾವವಾನ್ ।**
**ತಸ್ಯ ತದ್ರೂಪತಾಪ್ಯಸ್ತು ಮತ್ಸ್ಯಾದೀನಾಂ ಹರಿತ್ವವತ್ ॥ ೫೨೧ ॥**

**ಅರ್ಥ–** ಮಹಾಕಾಶಸ್ಯ = ಮಹಾಕಾಶದ, ಖಂಡಃ = ಭಾಗವಾದ, ಅಸೌ = ಈ ಘಟಾಕಾಶವು, ಮಹಾಕಾಶಸ್ವಭಾವವಾನ್ = ಮಹಾಕಾಶದಂತೆ ನಿಷ್ಕ್ರಿಯತ್ವಾದಿ ಸ್ವಭಾವವುಳ್ಳದ್ದಾಗಿ, (ಅಸ್ತಿ = ಆಗಿದೆ). (ಅತಃ = ಆದ್ದರಿಂದ) ತಸ್ಯ = ಆ ಘಟಾಕಾಶಕ್ಕೆ,

ತದ್ರೂಪತಾ ಅಪಿ = ಮಹಾಕಾಶದ ಸ್ವರೂಪತ್ವವೂ, ಮತ್ಸ್ಯಾದೀನಾಂ = ಮತ್ಸ್ಯಾದಿಗಳಿಗೆ, ಹರಿತ್ವವತ್ = ವಿಷ್ಣುತ್ವ ಇರುವಂತೆ, ಅಸ್ತು = ಇರಲಿ.

**ಅನುವಾದ–** ಮಹಾಕಾಶದ ಖಂಡವಾದ ಈ ಘಟಾಕಾಶಕ್ಕೆ ಮಹಾಕಾಶ ಸ್ವಭಾವವು (ಇರುವುದರಿಂದ) ಮತ್ಸ್ಯಾದಿ ರೂಪಗಳಿಗೆ ಹರಿತ್ವವು ಇರುವಂತೆ ಮಹಾಕಾಶತ್ವವು ಕೂಡ ಇರಲಿ.

**ಭಾವವಿಲಾಸಿನೀ–** ಮಹಾಕಾಶಸ್ವಭಾವವಾನ್ ಮಹಾಕಾಶವನ್ನಿಷ್ಕ್ರಿಯತ್ವನಿರಾಕಾರತ್ವಾದಿ-ಸ್ವಭಾವವಾನ್ । ತಸ್ಯ ಖಂಡಾಕಾಶಸ್ಯ । ತದ್ರೂಪತಾ ಮಹಾಕಾಶರೂಪತಾ । ಉಭಯೋ-ರಪ್ಯೇಕಸ್ವಭಾವತ್ವಾದಿತಿ ಭಾವಃ । ತತ್ರ ದೃಷ್ಟಾಂತಮಾಹ – **ಮತ್ಸ್ಯಾದೀನಾಮಿತಿ** ॥ ಖಂಡಾಕಾಶ-ಮಹಾಕಾಶದೃಷ್ಟಾಂತೋ ಭಗವದವತಾರಾಣಾಂ ಭಗವತಶ್ಚ ದಾತುಮುಚಿತೋ ನ ಜೀವಾನಾಮಿತಿ ಭಾವಃ ॥ ೫೨೧ ॥

**ವಿವರಣೆ–** ಘಟಾಕಾಶಾದಿ ದೃಷ್ಟಾಂತಗಳು ಮತ್ಸ್ಯಾದಿ ಭಗವದ್ರೂಪಗಳಿಗೆ ಭಗವದಭೇದವನ್ನು ಹೇಳಲು ಉಪಯೋಗಕ್ಕೆ ಬರುತ್ತದೆ ಎನ್ನುತ್ತಾರೆ. ಮಹಾಕಾಶದ ಭಾಗಗಳಾದ ಘಟಾಕಾಶ ಮಠಾಕಾಶಾದಿಗಳಿಗೆ ಮಹಾಕಾಶದಂತೆ ನಿಷ್ಕ್ರಿಯತ್ವಾದಿ ಸ್ವಭಾವವಿದೆ. ಆದ್ದರಿಂದ ಅವುಗಳಿಗೆ ಮಹಾಕಾಶಸ್ವರೂಪತ್ವವು, ಮತ್ಸ್ಯಾದಿಭಗವಂತನ ರೂಪಗಳಿಗೆ ಹರಿತ್ವವು ಹೇಗೆ ಇದೆಯೋ ಹಾಗಯೇ ಇರಲಿ. ಮತ್ಸ್ಯಾದಿ ಭಗವದ್ರೂಪಗಳಲ್ಲಿ ಮೂಲರೂಪದಂತೆ ಜ್ಞಾನ ಗುಣ ಶಕ್ತ್ಯಾದಿಗಳು ಇವೆ. ಯಾವ ತರಹದ ನ್ಯೂನತೆಗಳೂ ಇರುವುದಿಲ್ಲ, ಆದರೆ ವಿರುದ್ಧ ಸ್ವಭಾವವುಳ್ಳ ಜೀವರಿಗೆ ಮಾತ್ರ ಹರಿಯ ಅಭೇದವು ಇರಲು ಸಾಧ್ಯವಿಲ್ಲ.

**ಜೀವಾಸ್ತ್ವಾಕಾಶಮಧ್ಯಸ್ಥತ್ರಸರೇಣುಗಣೋಪಮಾಃ ।**
**ತಸ್ಮಾದ್ ಬ್ರಹ್ಮೈಕ್ಯಮೇತೇಷಾಂ ನಾಭೂದಸ್ತಿ ಭವಿಷ್ಯತಿ ।**
**ಅಣೂನಾಂ ಗಗನೇನೇವ ಮಣೀನಾಮಿವ ಸೂತ್ರತಃ ॥ ೫೨೨ ॥**

**ಅರ್ಥ–** ಜೀವಾಸ್ತು = ಜೀವರಾದರೂ, ಆಕಾಶಮಧ್ಯಸ್ಥತ್ರಸರೇಣುಗಣೋಪಮಾಃ = ಆಕಾಶದ ಮಧ್ಯದಲ್ಲಿರುವ ತ್ರ್ಯಣುಕಗಳ ಸಮುದಾಯವೇ ಉಪಮೆಯಾಗಿವುಳ್ಳವರಾಗಿ (ಸಂತಿ = ಆಗಿದ್ದಾರೆ.) ತಸ್ಮಾತ್ = ವಿರುದ್ಧಸ್ವಭಾವವುಳ್ಳವರಾದ್ದರಿಂದ, ಏತೇಷಾಂ = ಈ ಜೀವರಿಗೆ, ಬ್ರಹ್ಮೈಕ್ಯಂ = ಬ್ರಹ್ಮನಿಂದ ಅಭೇದವು, ಅಣೂನಾಂ = ಪರಮಾಣುಗಳಿಗೆ, ಗಗನೇನ ಇವ = ಆಕಾಶದಿಂದ ಎಂಬಂತೆ, ಮಣೀನಾಂ = (ನೂಲಿನಲ್ಲಿ ಪೋಣಿಸಲ್ಪಟ್ಟ) ಮಣಿಗಳಿಗೆ, ಸೂತ್ರತಃ ಇವ = ನೂಲಿನಿಂದ ಎಂಬಂತೆ, ನ ಅಭೂತ್ = ಹಿಂದೆ ಇರಲಿಲ್ಲ, ನ ಅಸ್ತಿ = ಈಗ ಇಲ್ಲ, ನ ಭವಿಷ್ಯತಿ = ಮುಂದೆ ಬರುವುದೂ ಇಲ್ಲ.

**ಅನುವಾದ–** ಜೀವರಾದರೋ ಆಕಾಶದ ಮಧ್ಯದಲ್ಲಿ ಸಂಚರಿಸುವ ಸೂಕ್ಷ್ಮಕಣಗಳ ಗಣದಂತೆ. ಆ ಕಾರಣದಿಂದ ಅವರಿಗೆ ಬ್ರಹ್ಮೈಕ್ಯವು ಆ ಸೂಕ್ಷ್ಮಕಣಗಳಿಗೂ ಮತ್ತು ಆಕಾಶಕ್ಕೂ ಹೇಗೆ ಐಕ್ಯವಿಲ್ಲವೋ ಮತ್ತು ಮಣಿಗಳಿಗೂ ಅವುಗಳನ್ನು ಪೋಣಿಸುವ ನೂಲಿಗೆ ಹೇಗೆ ಐಕ್ಯವಿಲ್ಲವೋ, ಅದರಂತೆ ಹಿಂದೆ ಇರಲಿಲ್ಲ, ಈಗ ಇಲ್ಲ ಮತ್ತು ಮುಂದೆ ಇರುವುದಿಲ್ಲ.

**ಭಾವವಿಲಾಸಿನೀ–** ಜೀವಯೋಗ್ಯದೃಷ್ಟಾಂತಮಾಹ – **ಜೀವಾಸ್ತ್ವಿತಿ** ॥ ಗಮನಾಗಮನಾದಿ ಕ್ರಿಯಾನಿರ್ವಾಹಾಯಾನಾದಿಭೇದನಿರ್ವಾಹಾಯ ಚಾಯಮೇವ ದೃಷ್ಟಾಂತೋ ನ್ಯಾಯ್ಯ ಇತಿ ಭಾವಃ । ತಸ್ಮಾದ್ವಿಜಾತೀಯಸ್ವಭಾವತ್ವಾತ್ । ಅಣೂನಾಂ ಪರಮಾಣೂನಾಂ ಯಥಾ ಗಗನವಿಜಾತೀಯಾನಾಂ ರೇಣೂನಾಂ ನ ಗಗನೈಕ್ಯಮ್ ತಥಾ ಜೀವಾನಾಮಪಿ ಬ್ರಹ್ಮೈಕ್ಯಂ ಕದಾಪಿ ನ ಭವೇದಿತಿ ಭಾವಃ ॥ ೫೨೨ ॥

**ವಿವರಣೆ–** ಜೀವಯೋಗ್ಯ ದೃಷ್ಟಾಂತವನ್ನು ತಿಳಿಸುತ್ತಾರೆ. ಜೀವರಿಗೆ ಆಕಾಶದ ಮಧ್ಯದಲ್ಲಿ ಸಂಚರಿಸುತ್ತಿರುವ ಪರಮಾಣುಗಳ ಸಮುದಾಯವನ್ನು ಉಪಮೆಯನ್ನಾಗಿ ಹೇಳಬಹುದು. ಏಕೆಂದರೆ ಆಕಾಶದಲ್ಲಿ ಸಂಚರಿಸುವ ಪರಮಾಣುಗಳು ಸಕ್ರಿಯಗಳು, ಆಕಾಶವು ನಿಷ್ಕ್ರಿಯ, ಹೀಗೆ ವಿರುದ್ಧಸ್ವಭಾವವುಳ್ಳದ್ದಾದ್ದರಿಂದ ಅವುಗಳಿಗೆ ಪರಸ್ಪರ ಭೇದವೇ ಹೇಗೆ ಇರುತ್ತದೆಯೋ ಹಾಗೆ ಜೀವರು ಮತ್ತು ಬ್ರಹ್ಮ ಇವರು ವಿರುದ್ಧಸ್ವಭಾವವುಳ್ಳವ-ರಾದ್ದರಿಂದ ಪರಸ್ಪರಭಿನ್ನರೇ ಸರಿ. ಜೀವಬ್ರಹ್ಮರಿಗೆ ಮಣಿಸೂತ್ರದೃಷ್ಟಾಂತವನ್ನು ಹೇಳಬಹುದು. ಹೇಗೆಂದರೆ ನೂಲಿನಲ್ಲಿ ಪೋಣಿಸಲ್ಪಟ್ಟ ಮಣಿಗಳು ನೂಲನ್ನು ಆಶ್ರಯಿಸಿಕೊಂಡಿವೆ. ಹೀಗೆ ಆಶ್ರಯತ್ವ, ಆಶ್ರಯಿತ್ವ ಎಂಬ ವಿರುದ್ಧಧರ್ಮ ವಿರುವುದರಿಂದ ನೂಲು ಮತ್ತು ಮಣಿಗಳು ಹೇಗೆ ಪರಸ್ಪರ ಭಿನ್ನಗಳಾಗಿಯೇ ಇವೆಯೋ ಹಾಗೆಯೇ ಬ್ರಹ್ಮನಲ್ಲಿ ಅನಂತ ಜೀವರು ಆಶ್ರಯಿಸಿಕೊಂಡಿರುವುದರಿಂದ, ಆಶ್ರಯ-ಆಶ್ರಯಿಭಾವರೂಪವಾದ ವಿರುದ್ಧಧರ್ಮಗಳಿರುವುದರಿಂದ ಪರಸ್ಪರ ಭಿನ್ನರೇ ಸರಿ.

ಅನಾದಿ ಬ್ರಹ್ಮ ಕಿಲ ತೇ ಜೀವಾಃ ಸರ್ವೇಪ್ಯನಾದಯಃ ।
ತದ್ಭೇದಸ್ಯಾಪ್ಯನಾದಿತ್ವೇಽಭೇದೋಭೂದ್ ಬ್ರಹ್ಮಣಃ ಕದಾ ॥ ೫೨೩ ॥

**ಅರ್ಥ–** ತೇ(ಮತೇ) = ನಿನ್ನ ಮತದಲ್ಲಿ, ಬ್ರಹ್ಮ = ಬ್ರಹ್ಮನು, ಅನಾದಿ ಕಿಲ = ಅನಾದಿಯಷ್ಟೇ. ಸರ್ವೇ = ಎಲ್ಲಾ ಜೀವಾಃ ಅಪಿ = ಜೀವರೂ ಕೂಡ, ಅನಾದಯಃ = ಅನಾದಿಕಾಲೀನರಾಗಿದ್ದಾರೆ ತಾನೆ. ತದ್ಭೇದಸ್ಯ ಅಪಿ = ಜೀವಬ್ರಹ್ಮರ ಭೇದಕ್ಕೂ ಕೂಡ, ಅನಾದಿತ್ವೇ( ಸತಿ) = ಅನಾದಿಕಾಲೀನತ್ವವಿರಲು, ಬ್ರಹ್ಮಣಃ = ಬ್ರಹ್ಮನಿಗೆ, (ಜೀವೈಃ = ಜೀವರಿಂದ) ಅಭೇದಃ = ಐಕ್ಯವು, ಕದಾ = ಯಾವಾಗ ಅಭೂತ್ = ಆಯಿತು? (ವದ = ಹೇಳು.)

**ಅನುವಾದ–** ನಿನ್ನ ಮತದಲ್ಲಿ ಬ್ರಹ್ಮನು ಅನಾದಿ ಮತ್ತು ಎಲ್ಲ ಜೀವರು ಅನಾದಿಯಷ್ಟೇ? ಅವರ ಭೇದವೂ ಅನಾದಿಯಾದರೆ ಜೀವರಿಗೆ ಬ್ರಹ್ಮಾಭೇದವು ಯಾವಾಗ ಉಂಟಾಯಿತು?

**ವಿವರಣೆ–** ಅನಾದಿ ಭೇದವು ಹೇಗೆ ಹೋಗಲು ಸಾಧ್ಯ ಎಂದು ಕೇಳುತ್ತಾರೆ. ಅದ್ವೈತಮತದಲ್ಲಿ ಬ್ರಹ್ಮನೂ ಅನಾದಿ, ಎಲ್ಲಾ ಜೀವರೂ ಅನಾದಿ, ಹಾಗೆಯೇ ಅವರಿಗಿರುವ ಭೇದವೂ ಅನಾದಿಕಾಲದಿಂದಲೂ ಇದೆ. ಹೀಗಿರುವಾಗ ಜೀವಬ್ರಹ್ಮರಿಗೆ ಐಕ್ಯವು ಯಾವಾಗ ಆಗಿದ್ದಿತು? ಈಗಲಾದರೂ ಇದೆಯೋ? ಇನ್ನು ಮುಂದಾದರೂ ಬರುತ್ತದೆ ಎಂಬುದಕ್ಕೆ ಏನು ಪ್ರಮಾಣ ಇದೆ? ಹೇಳು.

ಅನಾದಿತ್ವಂ ಚ ಭೇದಾದೇಃ ಷಡಸ್ಮಾಕಮನಾದಯಃ ।
ಇತಿ ತ್ವದ್ಗ್ರಂಥ ಏವೋಕ್ತಮತೋ ಯುಕ್ತಿವಿಚಾರಣೇ ।
ನಾಖಂಡಬ್ರಹ್ಮಚಿತ್ಖಂಡೋ ಜೀವರಾಶಿರಭೂದಯಂ ॥ ೫೨೪ ॥

**ಅರ್ಥ–** ಭೇದಾದೇಃ = ಭೇದವೇ ಮೊದಲಾದುದಕ್ಕೆ, ಅನಾದಿತ್ವಂ ಚ = ಅನಾದಿಕಾಲೀನತ್ವವಾದರೂ, ಷಡಸ್ಮಾಕಮನಾದಯಃ ಇತಿ = ಜೀವೋ ಬ್ರಹ್ಮ ವಿಶುದ್ಧಾ ಚಿತ್ ತೇಷಾಂ ಭೇದಃ ಪರಸ್ಪರಂ । ಅವಿದ್ಯಾ ತಚ್ಚಿತೋರ್ಯೋಗಃ ಷಡಸ್ಮಾಕಮನಾದಯಃ॥' ಎಂಬುದಾಗಿ, ತ್ವದ್ಗ್ರಂಥೇ ಏವ = ನಿನ್ನ (ಅದ್ವೈತಿಯ) ಗ್ರಂಥದಲ್ಲೇ, ಉಕ್ತಂ = ಹೇಳಲ್ಪಟ್ಟಿದೆ. ಅತಃ = ಅನಾದಿಕಾಲದಿಂದಲೂ ಜೀವರು ಬ್ರಹ್ಮನಿಂದ ಭಿನ್ನರಾಗಿಯೇ ಇರುವುದರಿಂದ, ಯುಕ್ತಿವಿಚಾರಣೇ = ಯುಕ್ತಿಗಳಿಂದ ವಿಚಾರಣೆ ಮಾಡಿದಲ್ಲಿ ಅಯಂ ಜೀವರಾಶಿಃ= ಈ ಜೀವಸಮೂಹವು, ಅಖಂಡಬ್ರಹ್ಮ ಚಿತ್ ಖಂಡಃ= ಅಖಂಡವಾದ ಬ್ರಹ್ಮಚೈತನ್ಯದ ಭಾಗವಾಗಿ, ನ ಅಭೂತ್= ಆಗಲಿಲ್ಲ.

**ಅನುವಾದ–** ಜೀವಬ್ರಹ್ಮ ಭೇದಾದಿಗಳು ಅನಾದಿ ಎಂದು ನಿನ್ನ ಗ್ರಂಥದಲ್ಲಿಯೇ ಷಡಸ್ಮಾಕಮನಾದಯಃ ಎಂದು ಹೇಳಲ್ಪಟ್ಟಿದೆ. ಆದ್ದರಿಂದ ಯುಕ್ತಿಯಿಂದ ವಿಚಾರ ಮಾಡಿದರೆ ಈ ಜೀವರಾಶಿಯು ಅಖಂಡ ಬ್ರಹ್ಮಚೈತನ್ಯದ ಭಾಗಗಳಲ್ಲವೆಂದು ಸಿದ್ಧವಾಗುತ್ತದೆ.

**ಭಾವವಿಲಾಸಿನೀ–**ಇದಾನೀಂ ಪರರೀತ್ಯೈವ ಭೇದಸ್ಯ ಸದಾತನತ್ವಮುಪಪಾದಯತಿ–**ಅನಾದೀತಿ** । ತದ್ಭೇದಸ್ಯ ಜೀವಬ್ರಹ್ಮಭೇದಸ್ಯ ॥ ಭೇದಾನಾದಿತ್ವಂ ನ ಮಯಾಽಂಗೀಕ್ರಿಯತ ಇತ್ಯತ ಆಹ – **ಅನಾದಿತ್ವಂ ಚೇತಿ** ॥ ಷಡಸ್ಮಾಕಮನಾದಯ ಇತ್ಯನೇನ ಜೀವೋ ಬ್ರಹ್ಮವಿಶುದ್ಧಾಚಿತ್ತೇಷಾಂ ಭೇದಃ ಪರಸ್ಪರಮ್ । ಅವಿದ್ಯಾತಚ್ಚಿತೋರ್ಯೋಗಷ್ಷಡಸ್ಮಾಕಮನಾದಯ ಇತಿ ಪರಕೀಯಮೂಲ-ಗ್ರಂಥಸ್ಥವಾಕ್ಯಂ ಸಂಗೃಹ್ಣಾತಿ । ಜೀವೋ ದೇಹಾಂತಃಕರಣಾದ್ಯುಪಾಧವಚ್ಛಿನ್ನಚೈತನ್ಯಮ್ ।

ಲಿಂಗಶರೀರಸ್ಯಾನಾದಿತ್ವಾತ್ತೋಽಪ್ಯನಾದಿರಿತಿ ಭಾವಃ । ಅವಿದ್ಯಾವಚ್ಛಿನ್ನಂ ಜಗದುಪಾದಾನಭೂತಂಚೈತನ್ಯಂ ಬ್ರಹ್ಮ । ಪರಿಚ್ಛಿನ್ನಜಗದುಪಾದಾನಚೈತನ್ಯಾದನ್ಯತ್ರಾಪಿ ವಿದ್ಯಮಾನಂ ಅಪರಿಚ್ಛಿನ್ನಂ ಚೈತನ್ಯಂ ವಿಶುದ್ಧಾಚಿತ್ । ಅನ್ಯತ್ ಸ್ಪಷ್ಟಮ್ । ಅತೋಽನಾದಿಕಾಲಮಾರಭ್ಯ ಜೀವಾನಾಂ ಪೃಥಗೇವ ವಿದ್ಯಮಾನತ್ವಾತ್ ॥ ೫೨೩-೫೨೪॥

**ವಿವರಣೆ–** ಅದ್ವೈತಮತದಲ್ಲಿ ಜೀವ, ಬ್ರಹ್ಮ ಅವರ ಭೇದ, ಇವೆಲ್ಲ ಅನಾದಿ ಎಂದು ಎಲ್ಲಿ ಹೇಳಿದ್ದಾರೆ ಎಂದು ತಿಳಿಸುತ್ತಾರೆ. ಅದ್ವೈತಮೂಲಗ್ರಂಥದಲ್ಲಿರುವ 'ಜೀವ ಈಶೋ ವಿಶುದ್ಧಾ ಚಿತ್ ತೇಷಾಂ ಭೇದಃ ಪರಸ್ಪರಂ । ಅವಿದ್ಯಾ ತಚ್ಚಿತೋರ್ಯೋಗಷ್ಷಡಸ್ಮಾಕಮನಾದಯಃ ॥' ಎಂಬ ಶ್ಲೋಕದಲ್ಲಿ ಜೀವ, ಈಶ್ವರ, ಶುದ್ಧಚೈತನ್ಯ, ಅವರಿಗಿರುವ ಭೇದ, ಅವಿದ್ಯೆ, ಅವಿದ್ಯೆ ಮತ್ತು ಚೇತನರಿಗಿರುವ ಸಂಬಂಧ - ಹೀಗೆ ಆರು ಪದಾರ್ಥಗಳಿಗೆ ಅನಾದಿತ್ವವನ್ನು ಹೇಳಿರುವುದರಿಂದ ಸರಿಯಾದ ಯುಕ್ತಿಗಳಿಂದ ವಿಚಾರಮಾಡಿದರೆ ಈ ಜೀವ ಸಮೂಹವು ಅಖಂಡ ಬ್ರಹ್ಮಚೈತನ್ಯದ ಭಾಗವಲ್ಲವೆಂದು ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

ಇದಾನೀಂ ತು ಭಿದಾಸ್ತ್ಯೇವ ನ ಭವಿಷ್ಯತಿ ಸಾ ಕದಾ ।
ಅಜ್ಞಾನನಾಶೇಪ್ಯಜ್ಞಾನಾಕಾರ್ಯಾನಾದೇರನಾಶನಾತ್ ॥ ೫೨೫ ॥

**ಅರ್ಥ–** (ಅನಾದಿಕಾಲಮಾರಭ್ಯ = ಅನಾದಿಕಾಲದಿಂದಾರಂಭಿಸಿ) ಇದಾನೀಂ ತು = ಈಗಿನಕಾಲದವರೆಗೂ, ಭಿದಾ = ಭೇದವು, ಅಸ್ತಿ ಏವ = ಇದ್ದೇ ಇದೆ. ಅಜ್ಞಾನನಾಶೇಪಿ = ಅಜ್ಞಾನನಾಶವಾದರೂ, ಅಜ್ಞಾನಾಕಾರ್ಯಾನಾದೇಃ = ಅಜ್ಞಾನಕಾರ್ಯವಲ್ಲದ ಅನಾದಿಯಾದ ಪದಾರ್ಥವು, ಅನಾಶನಾತ್ = ನಾಶವಾಗದೇ ಇರುವುದರಿಂದ, ಸಾ = ಆ ಭೇದವು, ಕದಾ = ಯಾವಾಗ, ನ ಭವಿಷ್ಯತಿ =ಇಲ್ಲವೆಂದು ಆಗುವುದು? ವದ= ಹೇಳು.

**ಅನುವಾದ–** ಅನಾದಿಕಾಲದಿಂದಲೂ ಜೀವಬ್ರಹ್ಮಭೇದವಿದ್ದರೂ ಅಜ್ಞಾನನಾಶವಾದಾಗ ಭೇದನಾಶವಾಗಿ ಐಕ್ಯ ಬರುತ್ತದೆ ಎಂಬುದಾಗಿ ಶಂಕಿಸಿದರೆ, ಈ ಶಂಕೆಯೂ ಸರಿಯಲ್ಲ. ಏಕೆಂದರೆ ಅಜ್ಞಾನನಾಶವಾದರೆ ಅಜ್ಞಾನದಿಂದ ಹುಟ್ಟಿದ ಪದಾರ್ಥಗಳು ನಾಶವಾಗಬಹುದು. ಆದರೆ ಅಜ್ಞಾನದಿಂದ ಹುಟ್ಟಿಲ್ಲದ ಅನಾದಿಯಾದ ಜೀವಬ್ರಹ್ಮಭೇದವು ನಾಶವಾಗಲಾರದು. ಹೀಗಾಗಿ ಈ ಅನಾದಿಯಾದ ಭೇದವು ಮುಂದೆ ಯಾವಾಗ ಇಲ್ಲವೆಂದು ಆಗಲು ಸಾಧ್ಯ? ಹೇಳು.

**ಭಾವವಿಲಾಸಿನೀ–** ಇದಾನೀಮಿತ್ಯುಪಲಕ್ಷಣಮ್ । ಅನಾದಿಕಾಲಮಾರಭ್ಯೇತಿ ಗ್ರಾಹ್ಯಮ್ । ಭಿದಾ ಜೀವಬ್ರಹ್ಮಭಿದಾ । ಸಾ ಭಿದಾ ಕದಾ ನ ಭವಿಷ್ಯತಿ । ಮುಕ್ತಾವಪಿ ಭವಿಷ್ಯತ್ಯೇವೇತಿ ಭಾವಃ । ತದುಪಪಾದಯತಿ – **ಅಜ್ಞಾನನಾಶ ಇತಿ** ॥ ಅಜ್ಞಾನಾಕಾರ್ಯಸ್ಯ ಅಜ್ಞಾನಾನುಪಾದಾನಕಸ್ಯೇತ್ಯರ್ಥಃ । ತತ್ರ ಹೇತುರನಾದೇರಿತಿ । ಭೇದಸ್ಯಾನಾಶನಾತ್ । ನಾಶೇ

ಕಾರಣಾಭಾವಾದಿತ್ಯರ್ಥಃ। ಜ್ಞಾನಮಜ್ಞಾನಸ್ಯೈವ ನಾಶಕಮಿತಿ ನಿಯಮಾಂಗೀಕಾರೇಣ ಸಾಕ್ಷಾತ್ ಜ್ಞಾನಸ್ಯೈವ ಭೇದನಾಶಕತ್ವಾಸಮ್ಮತೇಃ। ಉಪಾದಾನಭೂತಾಜ್ಞಾನಾನಾಶಪ್ರನಾಡ್ಯಾ ನಾಶಸ್ಯ ಚ ತ್ವದ್ರೀತ್ಯೈವಾನಾದಿತಯಾ ಬ್ರಹ್ಮವದಜ್ಞಾನಾನುಪಾದಾನೇ ಭೇದೇऽಸಂಭಾವಿತತ್ವಾಚ್ಚೇತಿ ಭಾವಃ। ಅತ ಏವೈಕ್ಯಪ್ರಾಪ್ತ್ಯಾಭೇದನಿವೃತ್ತಿರಿತ್ಯಪಿ ನಿರಸ್ತಮ್। ಸಾಕ್ಷಾತ್ ಪರಂಪರಯಾ ವಾ ಜ್ಞಾನೇನೈವ ಸರ್ವನಿವೃತ್ತ್ಯಂಗೀಕಾರಾತ್। ಅನ್ಯಥಾ ಮಿಥ್ಯಾತ್ವಾಸಿದ್ಧೇಃ। ಅನಾದೌ ನಾಶರಹಿತೇ ಚ ಭೇದೇ ಜಾಗರೂಕೇ ತದ್ವಿರುದ್ಧೈಕ್ಯಪ್ರಾಪ್ತೇರೇವಾಯೋಗಾಚ್ಚ॥ ೫೨೫॥

**ತದನುದ್ಧೃತಖಂಡಾನಾಂ ತತ್ರೈಕ್ಯಂ ಚ ನ ಯುಕ್ತಿಮತ್ ।**
**ಘಟಾಕಾಶೇ ಮಹಾಕಾಶಸ್ಯೈಕ್ಯಂ ಸ್ಯಾನ್ನ ಘನಾವಲೇಃ ॥ ೫೨೬ ॥**

**ಅರ್ಥ–** ತದನುದ್ಧೃತಖಂಡಾನಾಂ = ಆ ಬ್ರಹ್ಮನಿಂದ ಉದ್ಧೃತವಲ್ಲದ ಭಾಗಗಳಾದ ಜೀವರಿಗೆ, ತತ್ರ = ಆ ಬ್ರಹ್ಮನಲ್ಲಿ, ಐಕ್ಯಂ ಚ = ಅಭೇದವಾದರೂ, ಯುಕ್ತಿಮತ್ = ಯುಕ್ತಿಸಿದ್ಧವು, ನ (ಭವತಿ) = ಆಗುವುದಿಲ್ಲ. ಘಟಾಕಾಶೇ = ಘಟಾಕಾಶದಲ್ಲಿ, ಮಹಾಕಾಶಸ್ಯ = ಮಹಾಕಾಶದ, ಐಕ್ಯಂ = ಅಭೇದವು, ಸ್ಯಾತ್ =ಆದೀತು. ಘನಾವಲೇಃ = ಮೋಡಗಳ ಸಾಲಿಗೆ, ಮಹಾಕಾಶಸ್ಯ = ಮಹಾಕಾಶದ, ಐಕ್ಯಂ = ಭೇದವು, ನ ಸ್ಯಾತ್ = ಆಗುವುದಿಲ್ಲ.

**ಅನುವಾದ–** ಒಂದು ವಸ್ತುವಿನಿಂದ ತೆಗೆಯದಿದ್ದ ಭಾಗಗಳಿಗೆ ಆ ವಸ್ತುವಿನ ಐಕ್ಯವು ಯುಕ್ತಿ ಯುಕ್ತವಾದುದಲ್ಲ. ಘಟಾಕಾಶಕ್ಕೆ ಮಹಾಕಾಶದಿಂದ ಐಕ್ಯವಿರಬಹುದು. ಆದರೆ ಮಹಾಕಾಶದಲ್ಲಿ ಸಂಚರಿಸುವ ಮೇಘಸಮೂಹಕ್ಕೂ ಮತ್ತು ಮಹಾಕಾಶಕ್ಕೂ ಐಕ್ಯವಿರುವುದಿಲ್ಲ.

**ಭಾವವಿಲಾಸಿನೀ–** ಯುಕ್ತ್ಯಂತರಂ ಚಾಹ – **ತದನುದ್ಧೃತಖಂಡಾನಾಮಿತಿ** ॥ ತತ್ರ ವ್ಯತಿರೇಕ-ದೃಷ್ಟಾಂತಮನ್ವಯದೃಷ್ಟಾಂತಂ ಚಾಹ – **ಘಟಾಕಾಶ ಇತಿ** ॥ ಮಹಾಕಾಶಸ್ಯೈಕ್ಯಮ್ । ಮಹಾಕಾಶೇನೈಕ್ಯಮಿತ್ಯರ್ಥಃ। ಯಥಾ ಮಹಾಕಾಶಖಂಡತಯೋದ್ಧೃತಸ್ಯ ಘಟಕಾಶಸ್ಯ ಘಟನಾಶೇ ಮಹಾಕಾಶಸ್ಯೈಕ್ಯಮ್ ತಥಾ ಬ್ರಹ್ಮಚೈತನ್ಯೋದ್ಧೃತನ್ಯಖಂಡಾನಾಮೇವ ಬ್ರಹ್ಮಣೈಕ್ಯಂ ಸ್ಯಾತ್। ನತು ತದನುದ್ಧೃತಖಂಡಾನಾಮನಾದಿಕಾಲಮಾರಭ್ಯ ಭಿನ್ನತಯಾ ಪರಿವರ್ತ-ಮಾನಾನಾಂ ಜೀವಖಂಡಾನಾಮ್। ಗಗನಖಂಡತಯಾऽನುದ್ಧೃತಘನಖಂಡಾನಾಂ ಗಗನ-ಭಿನ್ನತಯಾ ಪರಿವರ್ತಮಾನಾನಾಂ ಗಗನೈಕ್ಯಾದರ್ಶನಾದಿತಿ ಭಾವಃ॥ ೫೨೬ ॥

**ವಿವರಣೆ–** ಯಾವ ವಸ್ತುವು ಯಾವುದರ ಭಾಗವಾಗಿರುತ್ತದೆಯೋ, ಅದಕ್ಕೆ ಆ ವಸ್ತುವಿನ ಜೊತೆ ಐಕ್ಯವಿರಬಹುದು. ಆದರೆ ಯಾವುದು ಯಾವ ವಸ್ತುವಿನ ಭಾಗವಾಗಿರುವುದಿಲ್ಲವೋ ಅದಕ್ಕೆ ಅದರ ಜೊತೆಗೆ ಐಕ್ಯವು ಸಲ್ಲದು. ಹೇಗೆಂದರೆ ಘಟಾಕಾಶವು ಮಹಾಕಾಶದ ಒಂದು ಭಾಗವಾಗಿದೆ. ಆದ್ದರಿಂದ ಘಟವು ನಾಶವಾದಾಗ ಅದಕ್ಕೆ ಮಹಾಕಾಶದಿಂದ ಐಕ್ಯ ಬರುತ್ತದೆ. ಆದರೆ ಮಹಾಕಾಶದ ಭಾಗವಲ್ಲದ

ಮೋಡಗಳ ಸಾಲಿಗೆ ಮಹಾಕಾಶದ ಐಕ್ಯವಿಲ್ಲವಷ್ಟೇ? ಅದರಂತೆ ಪರಬ್ರಹ್ಮನಿಂದ ಹೊರಟುಬಂದ ಅವನ ಭಾಗಗಳಾದ ಮತ್ಸ್ಯಾದಿರೂಪಗಳಿಗೆ ಬ್ರಹ್ಮನಿಂದ ಐಕ್ಯ ಬರುತ್ತದೆ. ಆದರೆ ಬ್ರಹ್ಮನಿಂದ ಹೊರಟುಬಾರದ ಅವನ ಭಾಗಗಳಲ್ಲದ ಜೀವರಿಗೆ ಮಾತ್ರ ಅವನಿಂದ ಐಕ್ಯವು ಕೂಡುವುದಿಲ್ಲ.

**ಮುಕ್ತಾಸ್ತು ಧೌತಮಣಿವತ್ ಪಂಕಾರ್ದ್ರಮಣಿವತ್ ಸೃತೌ ॥ ೫೨೭ ॥**

**ಅರ್ಥ–** ಮುಕ್ತಾಃ = ಮುಕ್ತರಾದ, (ಜೀವಾಃ ತು = ಜೀವರು) ಧೌತಮಣಿವತ್ = ಸ್ವಚ್ಛಮಾಡಿದ ಮಣಿಯಂತೆ, (ಸಂತಿ = ಇರುತ್ತಾರೆ.). ಸೃತೌ = ಸಂಸಾರದಲ್ಲಿ (ಜೀವಾಃ = ಜೀವರು) ಪಂಕಾರ್ದ್ರಮಣಿವತ್ = ಕೆಸರಿನಿಂದ ಒದ್ದೆಯಾದ ಮಣಿಯಂತೆ, (ಸಂತಿ = ಇರುತ್ತಾರೆ).

**ಅನುವಾದ– ಜೀವರಾದರೂ ಸಂಸಾರದಲ್ಲಿ ಕೆಸರಿನಿಂದ ಆವರಿಸಲ್ಪಟ್ಟ ಮಣಿಯಂತೆಯೂ ಮೋಕ್ಷದಲ್ಲಿ ತೊಳೆದು ಶುದ್ಧ ಮಾಡಿದ ಮಣಿಯಂತೆಯೂ ಇರುತ್ತಾರೆ.**

**ಭಾವವಿಲಾಸಿನೀ– ಐಕ್ಯಪ್ರಾಪ್ತ್ಯಭಾವೇ ಮುಕ್ತಿಂ ಕೇತ್ಯತ ಆಹ – ಮುಕ್ತಾಸ್ತ್ವಿತಿ ॥ ಮಣೇಃ ಪಂಕಾದುದ್ಧಾರವತ್ಸಂಸಾರಾದುದ್ಧಾರ ಏವ ಮೋಕ್ಷೋ ಭವೇತ್ । ಬ್ರಹ್ಮಚೈತನ್ಯಾಭೇದಸ್ಯ ತು ನ ಕೋऽಪ್ಯುಪಯೋಗ ಇತಿ ಭಾವಃ ॥ ೫೨೭ ॥**

**ವಿವರಣೆ–** ಬ್ರಹ್ಮನಿಂದ ಐಕ್ಯಪ್ರಾಪ್ತಿಯಿಲ್ಲದಿದ್ದರೆ ಜೀವರಿಗೆ ಮುಕ್ತಿ ಎಂದರೆ ಏನು ಎಂಬ ಆಕ್ಷೇಪಕ್ಕೆ ಉತ್ತರಿಸುತ್ತಾರೆ. ಲೋಕದಲ್ಲಿ ಪ್ರಕಾಶಮಾನವಾದ ಒಂದು ಮಣಿಗೆ ಕೆಸರು ಮೆತ್ತಿಕೊಂಡಾಗ ಅದರ ಹೊಳಪು ಅನುಭವಕ್ಕೆ ಬಾರದೆ ಅದು ಬೆಲೆ ಇಲ್ಲದಂತಾಗುತ್ತದೆ. ಆದರೆ ಅದೇ ಮಣಿಯನ್ನು ಸ್ವಚ್ಛಗೊಳಿಸಿದಾಗ ಅದರ ಹೊಳಪು ಗೋಚರವಾಗಿ ಅದು ಬಹಳ ಬೆಲೆ ಉಳ್ಳದ್ದಾಗುವುದು. ಹಾಗಯೇ ಜೀವರು ಜ್ಞಾನಾನಂದರೂಪರು. ಅವರಿಗೆ ಆವರಣಗಳಿರುವಾಗ ಅವರ ಸ್ವರೂಪ ಸುಖವು ಅನುಭವಕ್ಕೆ ಬಾರದೆ ದುಃಖಾದಿಗಳನ್ನು ಅನುಭವಿಸುತ್ತಾ ಸಂಸಾರಸ್ಥರು ಎಂದೆನಿಸಿಕೊಳ್ಳುತ್ತಾರೆ. ಆದರೆ ಭಗವಂತನ ಅನುಗ್ರಹದಿಂದ ಅವರ ಆವರಣ ಹೋದಾಗ ಅವರ ಸ್ವರೂಪಭೂತವಾದ ಜ್ಞಾನಾನಂದಾದಿಗಳು ಅನುಭವಕ್ಕೆ ಬಂದು ಮುಕ್ತರೆನಿಸಿಕೊಳ್ಳುತ್ತಾರೆ. ಆದ್ದರಿಂದ ಬ್ರಹ್ಮನಿಂದ ಐಕ್ಯವು ಮುಕ್ತಿಯಲ್ಲೂ ಇಲ್ಲ. ಆದ್ದರಿಂದ ಮುಕ್ತಿಯನ್ನು ಕೂಡಿಸುವುದಕ್ಕೋಸ್ಕರವೂ ಐಕ್ಯವು ಬೇಕಾಗಿಲ್ಲ.

**ಸರ್ವತೋಽಪ್ಯಪರಿಚ್ಛಿನ್ನಚೈತನ್ಯೇ ಬ್ರಹ್ಮಣಿ ಸ್ಥಿರೇ ।**
**ಇತಸ್ತತಶ್ಚರಚ್ಛಿನ್ನಚೈತನ್ಯಂ ಹ್ಯನ್ಯದೇವ ಹಿ ॥ ೫೨೮ ॥**

**ಮುಗ್ಧಸ್ತ್ರೀ ಮೂರ್ಧಮಾಲಾವದಬ್ಧಿಸ್ಥಜಲಜಂತುವತ್ ।**
**ವ್ಯೋಮಸ್ಥಪಕ್ಷಿಶ್ರೇಣೀವದ್ ಭೂಮಿಸ್ಥಜನಜಾಲವತ್ ॥ ೫೯ ॥**

**ಅರ್ಥ–** ಸರ್ವತಃ ಅಪಿ = ಎಲ್ಲ ವಿಧದಿಂದಲೂ ಕೂಡ, ಅಪರಿಚ್ಛಿನ್ನಚೈತನ್ಯೇ = ಅಳತೆಯನ್ನು ಮೀರಿದ ಚೇತನರೂಪನಾದ, ಸ್ಥಿರೇ = ನಿಶ್ಚಲನಾದ, ಬ್ರಹ್ಮಣಿ = ಬ್ರಹ್ಮನಲ್ಲಿ (ಆಶ್ರಿತ್ಯ ಸ್ಥಿತಂ = ಆಶ್ರಯಿಸಿರುವ) ಇತಃ ತತಃ = ಈಕಡೆ ಆಕಡೆ, ಚರತ್ = ಸಂಚರಿಸುತ್ತಿರುವ, ಪರಿಚ್ಛಿನ್ನಚೈತನ್ಯಂ = ದೇಶಕಾಲಾದಿಗಳಿಂದ ಪರಿಚ್ಛಿನ್ನವಾದ ಜೀವಚೈತನ್ಯವಾದರೂ, ಮುಗ್ಧ ಸ್ತ್ರೀ ಮೂರ್ಧಮಾಲಾವತ್ ಸುಂದರಿ ಸ್ತ್ರೀಯ ತಲೆಯಲ್ಲಿ ಮುಡಿದ ಮಾಲೆಯಂತೆ, ಅಬ್ಧಿಸ್ಥಜಲಜಂತುವತ್= ಸಮುದ್ರದಲ್ಲಿರುವ ಜಲಪ್ರಾಣಿಗಳಂತೆ, ವ್ಯೋಮಸ್ಥಪಕ್ಷಿ-ಶ್ರೇಣೀವತ್= ಆಕಾಶದಲ್ಲಿರುವ ಪಕ್ಷಿಗಳ ಸಾಲಿನಂತೆ, ಭೂಮಿಸ್ಥಜನಜಾಲವತ್ = ಭೂಮಿಯಲ್ಲಿರುವ ಜನಸಮುದಾಯದಂತೆ, (ಬ್ರಹ್ಮಣಃ = ಬ್ರಹ್ಮನಿಗಿಂತ) ಅನ್ಯದೇವ = ಭಿನ್ನವೇ ಸರಿ, ಹಿ = ಇದು ಪ್ರಮಾಣಪ್ರಸಿದ್ಧವಾಗಿದೆ.

**ಅನುವಾದ–** ಎಲ್ಲ ರೀತಿಯಿಂದಲೂ ಅಪರಿಚ್ಛಿನ್ನವಾದ ಚಲನ ರಹಿತವಾದ ಬ್ರಹ್ಮನಲ್ಲಿ ಇಲ್ಲಿಂದಲ್ಲಿಗೆ ಚಲಿಸುವ ಪರಿಚ್ಛಿನ್ನವಾದ ಚೈತನ್ಯವು ಬೇರೆಯೇ ಆಗಿದೆಯಷ್ಟೇ? ಮುಗ್ಧ ವನಿತೆಯ ತಲೆಯಲ್ಲಿ ಮುಡಿದ ಹೂವಿನಂತೆ, ಸಮುದ್ರದಲ್ಲಿರುವ ಜಲಜಂತುಗಳಂತೆ, ಆಕಾಶದಲ್ಲಿರುವ ಪಕ್ಷಿ ಸಮೂಹದಂತೆ, ಭೂಮಿಯಲ್ಲಿರುವ ಜನಸಮೂಹದಂತೆ ಅದು ಭಿನ್ನವೇ ಆಗಿದೆ.

**ಭಾವವಿಲಾಸಿನೀ–** ಬ್ರಹ್ಮೈವ ಸನ್ ಬ್ರಹ್ಮಾಪ್ಯೇತೀತಿ ಶ್ರುತೇಸ್ಸಂಸಾರೇಽಪಿ ಜೀವೈಕ್ಯಸದ್ಭಾವಾನ್ಮುಕ್ತೌ ಕಥಂ ತದಭಾವ ಇತಿ ಶಂಕಾಂ ಪೂರ್ವೋಕ್ತಯುಕ್ತ್ಯೈವ ದೂಷಯನ್ನುಪಸಂಹರತಿ– **ಸರ್ವತ ಇತಿ** ॥ ಛಿನ್ನಚೈತನ್ಯಂ ಪರಿಚ್ಛಿನ್ನಚೈತನ್ಯಮ್ । ಹೀತ್ಯನೇನ ಸಕ್ರಿಯಘನಖಂಡಾನಾಂ ನಿಷ್ಕ್ರಿಯಗಗನೈಕ್ಯಾಭಾವಪ್ರಸಿದ್ಧಿಂ ನಿಷ್ಕ್ರಿಯಗಗನಾಭಿನ್ನಾನಾಂ ಘಟಾಕಾಶಾದೀನಾಂ ತತ್ತದುಪಾಧಿನಿಮಿತ್ತ-ಮಿಥ್ಯಾಭೂತಕ್ರಿಯಾಯಾ ಅಪ್ಯದರ್ಶನಪ್ರಸಿದ್ಧಿಂ ಚ ಸೂಚಯತಿ । ಸಂಸಾರೇಽಪಿ ಸಕ್ರಿಯ-ಜೀವಾನಾಂ ನಿಷ್ಕ್ರಿಯಬ್ರಹ್ಮೈಕ್ಯಂ ಯುಕ್ತಿಬಾಧಿತತ್ವಾನ್ನ ಶ್ರುತಿಶತೇನಾಪಿ ಬೋಧಯಿತುಂ ಶಕ್ಯಮಿತಿ ಭಾವಃ । ತರ್ಹಿ ಶ್ರುತೇಃ ಕಾ ಗತಿರಿತ್ಯತಃ ಸಪ್ತಸು ಪ್ರಥಮೇತ್ಯನುಶಾಸನಾತ್ ಬ್ರಹ್ಮೈವೇತಿ ಪ್ರಥಮಾಯಾಃ ಸಪ್ತಮ್ಯರ್ಥತ್ವಮೇವ ಗತಿಃ । ನೋ ಚೇತ್ ಬ್ರಹ್ಮಾಪ್ಯೇತೀತ್ಯುತ್ತರಖಂಡವಿರೋಧ ಇತಿ ಭಾವೇನ ಜೀವಾನಾಂ ಬ್ರಹ್ಮಾಶ್ರಿತತ್ವೇ ದೃಷ್ಟಾಂತಾನಾಹ – ಮುಗ್ಧಸ್ತ್ರೀಮೂರ್ಧ-ಮಾಲಾವದಿತ್ಯಾದಿನಾ ॥ ೫೮-೫೯॥

**ವಿವರಣೆ–** ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ ಎಂಬ ಶ್ರುತಿಯಲ್ಲಿ ಸಂಸಾರದಲ್ಲಿಯೂ ಕೂಡ ಜೀವರಿಗೆ ಜೀವೈಕ್ಯವನ್ನು ಹೇಳಿರುವಾಗ ಮುಕ್ತಿಯಲ್ಲಿ ಬ್ರಹ್ಮೈಕ್ಯ ಏಕೆ ಇರಲಾರದು ಎಂದು

ಆಕ್ಷೇಪಿಸಿದರೆ ಅದನ್ನು ಹಿಂದೆ ಹೇಳಿದ ದೂಷಣಗಳಿಂದಲೇ ಖಂಡಿಸಿ ಉಪಸಂಹಾರ ಮಾಡುತ್ತಾರೆ. ದೇಶಕಾಲಾದಿಗಳಿಂದ ಅಳೆಯಲು ಸಾಧ್ಯವಿಲ್ಲದೆ ಯಾವವಿಕಾರಕ್ಕೂ ಒಳಗಾಗದೆ ಇರುವವನು ಬ್ರಹ್ಮ, ಅವನನ್ನೇ ಆಶ್ರಯಿಸಿಕೊಂಡು ಸ್ವರ್ಗಭೂಮಿ ನರಕಾದಿಲೋಕಗಳಲ್ಲಿ ಸಂಚರಿಸುತ್ತಾ ದುಃಖಾದಿಗಳನ್ನು ಅನುಭವಿಸಿಕೊಂಡಿರುವ ಉತ್ಪತ್ತಿವಿನಾಶಗಳಿಂದ ಕೂಡಿರುವ ಜೀವಚೇತನಾದರೂ ಬ್ರಹ್ಮನಿಗಿಂತ ಭಿನ್ನರೇ ಸರಿ. ಹೇಗೆ ಸ್ತ್ರೀಯರ ತಲೆಯಲ್ಲಿರುವ ಹೂವಿನಮಾಲೆಯು ಸ್ತ್ರೀಯರಿಗಿಂತ ಭಿನ್ನವಾಗಿದೆಯೋ, ಹೇಗೆ ಸಮುದ್ರವನ್ನು ಆಶ್ರಯಿಸಿಕೊಂಡಿರುವ ಜಲಪ್ರಾಣಿಗಳು ಸಮುದ್ರಕ್ಕಿಂತ ಬೇರೆಯಾಗಿದೆಯೋ, ಹೇಗೆ ಆಕಾಶದಲ್ಲಿ ಹಾರಾಡುತ್ತಿರುವ ಪಕ್ಷಿಗಳ ಸಾಲು ಆಕಾಶಕ್ಕಿಂತ ಬೇರೆಯಾಗಿವೆಯೋ, ಹೇಗೆ ಭೂಮಿಯನ್ನು ಆಶ್ರಯಿಸಿಕೊಂಡಿರುವ ಜನಸಮುದಾಯವು ಭೂಮಿಗಿಂತ ಭೇದವುಳ್ಳದ್ದೋ, ಹಾಗೆಯೇ ಬ್ರಹ್ಮನನ್ನೇ ಆಶ್ರಯಿಸಿಕೊಂಡು ಬ್ರಹ್ಮನಿಗಿಂತ ವಿರುದ್ಧಧರ್ಮಗಳಿಂದ ಕೂಡಿದ ಜೀವಚೇತನರೂ ಬ್ರಹ್ಮನಿಗಿಂತ ಭಿನ್ನರೇ ಸರಿ. ಹಾಗಾದರೆ ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ ಎಂಬ ಶ್ರುತಿಯನ್ನು ಹೇಗೆ ಕೂಡಿಸುವುದು ಎಂದರೆ, ಸಪ್ತಸು ಪ್ರಥಮಾ ಎಂಬ ನ್ಯಾಯದಂತೆ ಸಪ್ತಮ್ಯರ್ಥದಲ್ಲಿ ಪ್ರಥಮಾ ವಿಭಕ್ತಿಯನ್ನು ಹೇಳಿದ್ದಾರೆ. ಹಾಗಾಗಿ ಬ್ರಹ್ಮನಲ್ಲೇ ಆಶ್ರಯಿಸಿಕೊಂಡು ಬ್ರಹ್ಮನನ್ನೇ ವಿಶೇಷರೂಪದಿಂದ ಹೊಂದುತ್ತಾನೆಂದು ಅರ್ಥ ಮಾಡಬೇಕು. ಹೀಗೆ ಅರ್ಥಮಾಡದಿದ್ದರೆ ಬ್ರಹ್ಮಾಪ್ಯೇತಿ ಎಂದು ಮುಂದಿನ ವಾಕ್ಯದ ವಿರೋಧ ಬರುತ್ತದೆ. ಅಥವಾ ಬೃಹ ಧಾತುವಿನಿಂದ ನಿಷ್ಪನ್ನವಾದ ಬ್ರಹ್ಮಶಬ್ದಕ್ಕೆ ಜೀವ ಎಂದು ಅರ್ಥಮಾಡಿದರೆ, ಜೀವನು ಜೀವನಾಗಿದ್ದುಕೊಂಡೇ ಮೋಕ್ಷದಲ್ಲಿ ಬ್ರಹ್ಮನನ್ನು ಹೊಂದುತ್ತಾನೆ, ಎಂದು ಅರ್ಥಮಾಡಿದರೆ ಯಾವ ವಿರೋಧವೂ ಬರುವುದಿಲ್ಲ.

**ಅಥ ಸರ್ವಾ ವ್ಯವಸ್ಥೇಯಂ ದೃಶ್ಯತೇ ಕೇವಲಂ ಜನೈಃ ।**
**ವಸ್ತುತೋ ನಾಸ್ತಿ ತತ್ ಸರ್ವಂ ಮೃಷೇತಿ ಯದಿ ಮನ್ಯಸೇ ॥ ೫೩೦ ॥**

**ಅರ್ಥ–** ಅಥ = (ಹಿಂದಿನ ಮತವನ್ನು ಖಂಡಿಸಿದ) ಅನಂತರ, ಇಯಂ = ಕಾಣಲ್ಪಡುವ, ಸರ್ವಾ = ಎಲ್ಲ, ವ್ಯವಸ್ಥಾ = ಜೀವಜಡಾದಿರೂಪವಾದ ವ್ಯವಸ್ಥೆಯು, ಜನೈಃ = ಜನರಿಂದ, ಕೇವಲಂ = ವಸ್ತುಗಳಿಲ್ಲದಿದ್ದರೂ, ದೃಶ್ಯತೇ = ನೋಡಲ್ಪಡುತ್ತದೆ, ವಸ್ತುತಃ = ವಾಸ್ತವವಾಗಿ, ತತ್ಸರ್ವಂ = ಅದೆಲ್ಲವೂ, ನ ಅಸ್ತಿ = ಇರುವುದಿಲ್ಲ (ಕಿಂತು = ಆದರೆ) ಮೃಷಾ = ಒಂದು ಸುಳ್ಳು, ಇತಿ = ಹೀಗೆಂದು, ಯದಿ = ಪಕ್ಷದಲ್ಲಿ, ಮನ್ಯಸೇ = ತಿಳಿಯುವುದಾದರೆ (ಅದು ಸರಿಯಲ್ಲ).

**ಅನುವಾದ–** ಇನ್ನು ಪ್ರಪಂಚದಲ್ಲಿರುವ ಈ ವ್ಯವಸ್ಥೆ ಎಲ್ಲವೂ ಕೇವಲ ತೋರಿಕೆಯು ಮಾತ್ರ, ನಿಜವಾಗಿ ಯಾವ ವ್ಯವಸ್ಥೆಯೂ ಇಲ್ಲ, ಎಲ್ಲವೂ ಮಿಥ್ಯಾಭೂತವಾದುದು ಎಂದು ನೀನು ತಿಳಿಯುವುದಾದರೆ (ಹೇಳುವುದಾದರೆ) ಅದೂ ಸಹ ಸರಿಯಲ್ಲ.

**ವಿವರಣೆ–** ಏಕಜೀವಮತವನ್ನು ಆಶ್ರಯಿಸಿ ಪ್ರಶ್ನಿಸುತ್ತಾರೆ. ಹಿಂದೆ ಹೇಳಿದ್ದಕ್ಕಿಂತ ಹೊಸಮತವನ್ನು ಅವಲಂಬಿಸಿ ಪ್ರಶ್ನಿಸುವುದರಿಂದ ಅಥ ಎಂದು ಪ್ರಯೋಗಿಸುತ್ತಾರೆ. ಈ ಏಕಜೀವವಾದದ ಅಭಿಪ್ರಾಯ ಹೀಗಿದೆ - ಲೋಕದಲ್ಲಿ ಜೀವ, ಜಡ ಇತ್ಯಾದಿ ಪದಾರ್ಥಗಳು, ಗಮನಾಗಮನಾದಿ ಕ್ರಿಯೆಗಳು ಇವೆಲ್ಲಾ ಯಾವುದೂ ವಾಸ್ತವಿಕವಾಗಿ ಇಲ್ಲವೇ ಇಲ್ಲ, ಕೇವಲ ನೋಡಲ್ಪಡುವುದು ಮಾತ್ರ ಎಂದು.

**ದೇಹಾದಿಕಂ ಮೃಷಾ ತೇಸ್ತು ನಾನಾದೇಹಸ್ಥಚೇತನಾಃ ।**
**ಮೃಷಾ ಚೇದ್ ಗಮನಂ ನ ಸ್ಯಾದ್ ರಜ್ಜುಸರ್ಪೋ ನ ಸರ್ಪತಿ ॥ ೫೩೦॥**

**ಅಸ್ತಿ ತತ್ರಾಪಿ ಚೈತನ್ಯಭ್ರಮಃ ಸ್ಥಾಣುಷು ಪುಂಭ್ರಮೇ ।**
**ಚರೇಯುರ್ಭ್ರಮಕಾಲೇ ವಾ ವ್ಯಾವಹಾರಿಕತಾಪಿ ತೇ ।**
**ವೃಥಾಭೂದ್ ಬಾಧತಃ ಪೂರ್ವಮಪ್ಯೇಷಾಂ ಗತ್ಯದರ್ಶನಾತ್ ॥ ೫೩೨ ॥**

**ಅರ್ಥ–** ತೇ (ಮತೇ) = ನಿನ್ನ ಸಿದ್ಧಾಂತದಲ್ಲಿ, ದೇಹಾದಿಕಂ = ದೇಹವೇ ಮೊದಲಾದ ಜಡಪದಾರ್ಥಗಳು, ಮೃಷಾ = ಸುಳ್ಳಾಗಿ, ಅಸ್ತು = ಆಗಲಿ. ನಾನಾದೇಹಸ್ಥಚೇತನಾಃ = ಅನೇಕ ದೇಹಗಳಲ್ಲಿರುವ ಜೀವಚೇತನರೂ, ಮೃಷಾ ಚೇತ್ = ಸುಳ್ಳಾದರೆ, ಗಮನಂ = ಚಲನೆಯೇ, ನ ಸ್ಯಾತ್ = ಆಗದೇ ಹೋದೀತು. (ಏಕೆಂದರೆ) ರಜ್ಜುಸರ್ಪಃ = ಹಗ್ಗದಲ್ಲಿ ಆರೋಪಿತಸಲ್ಪಟ್ಟ ಹಾವು, ನ ಸರ್ಪತಿ = ಚಲಿಸುವುದಿಲ್ಲ. ತತ್ರ ಅಪಿ = ರಜ್ಜುಸರ್ಪದಲ್ಲಿಯೂ ಕೂಡ, ಚೈತನ್ಯಭ್ರಮಃ = ಚೇತನವೆಂಬ ಭ್ರಮವಿಷಯತ್ವವು, ಅಸ್ತಿ = ಇದೆ (ಎಂದರೆ) ಸ್ಥಾಣುಷು = ಮರದ ದಿಮ್ಮಿಗಳಲ್ಲಿ, ಪುಂಭ್ರಮೇ = ಪುರುಷರೆಂಬ ಭ್ರಮೆ ಬಂದಾಗ, ಭ್ರಮಕಾಲೇ = (ಬಾಧಕಜ್ಞಾನಬಾರದಿರುವ) ಭ್ರಮೆಯ ಸಮಯದಲ್ಲಿ, ಚರೇಯುಃ = ಚಲಿಸಬೇಕಾದೀತು. ವಾ = ಅಥವಾ, ತೇ(ಮತರೀತ್ಯಾ) = ನಿನ್ನ ಸಿದ್ಧಾಂತದ ರೀತಿಯಿಂದ, ವ್ಯಾವಹಾರಿಕತಾ ಅಪಿ = ವ್ಯಾವಹಾರಿಕತ್ವವೂ ಕೂಡ, ಬಾಧತಃ ಪೂರ್ವಂ ಅಪಿ = ಬಾಧಕ್ಕಿಂತ ಮೊದಲೂ ಕೂಡ, ಏಷಾಂ ಗತ್ಯದರ್ಶನಾತ್ = ಚಲನೆ ಕಾಣದಿರುವುದರಿಂದ, ವೃಥಾ = ವ್ಯರ್ಥವಾಗಿ, ಅಭೂತ್ = ಅಭೂತ್.

**ಅನುವಾದ–** ನೀನು ಬೇಕಾದರೆ ದೇಹಾದಿಗಳನ್ನು ಮಿಥ್ಯೆಯೆಂದು ಅಂಗೀಕರಿಸು. ನಾನಾ ದೇಹಗಳಲ್ಲಿರುವ ಚೇತನರೇ ಮಿಥ್ಯಾಭೂತರಾದರೆ ಗಮನ ರೂಪವಾದ ಕ್ರಿಯೆಯು ಹೇಗೆ ನಡೆಯುತ್ತದೆ? ರಜ್ಜು ಸರ್ಪವು ಚಲಿಸುವುದಿಲ್ಲವಷ್ಟೇ? ಅಲ್ಲಿಯೂ ಚೈತನ್ಯ ಭ್ರಮವಿದೆ, ಅದರಿಂದಲೇ ಕ್ರಿಯೆ ಉಂಟಾಗುತ್ತದೆ ಎಂದು ಹೇಳಿದರೆ ಸ್ಥಾಣುವಿನಲ್ಲಿ ಪುರುಷ ಭ್ರಮವುಂಟಾದಾಗ ಸ್ಥಾಣುಗಳೂ ಚಲಿಸಬೇಕಾದೀತು ಮತ್ತು ನೀನು ಅಂಗೀಕರಿಸಿದ ವ್ಯಾವಹಾರಿಕತ್ವವೂ ಸಹ ವ್ಯರ್ಥವೇ ಆಗುತ್ತದೆ. ಏಕೆಂದರೆ ಬಾಧಕ್ಕಿಂತ ಪೂರ್ವಕಾಲದಲ್ಲಿ ಅವುಗಳಲ್ಲಿ ಗಮನಾದಿ ಕ್ರಿಯೆಗಳು ಕಾಣುವುದಿಲ್ಲ.

**ಭಾವವಿಲಾಸಿನೀ**–ಏಕಜೀವಮತಮವಲಂಬ್ಯಶಂಕತೇ–**ಅಥೇತಿ** ॥ ಇಯಂ ಜೀವಾದಿರೂಪಾ ॥ ಕೇವಲಂ ಅರ್ಥಾಭಾವೇಽಪೀತ್ಯರ್ಥಃ । ದೃಶ್ಯತೇ ಭ್ರಾಂತ್ಯಾ ಪ್ರತೀಯತೇ । ಉತ್ತರಮಾಹ – **ದೇಹಾದಿಕಮಿತಿ** ॥ ಗಮನಂ ಯಜ್ಞದತ್ತದೇವದತ್ತಾದೀನಾಮಿತಸ್ತತೋ ಗಮನಮ್ । ಚೈತನ್ಯಾ-ರೋಪಾತ್ ಸಂಚರಣಮಿತಿ ಶಂಕಾಂ ಪರಿಹರತಿ ॥ **ರಜ್ಜುಸರ್ಪ ಇತಿ** ॥೫೩೦-೫೩೧॥

ತತ್ರಾಪಿ ರಜ್ಜುಸರ್ಪೇಽಪಿ। ಉದಾಹರಣಾಂತರಂ ಚಾಹ–**ಸ್ಥಾಣುಷು ಪುಂಭ್ರಮ ಇತಿ** ॥ ದೂರಸ್ಥ-ಸ್ಥಾಣುಷು ಪುಂಭ್ರಮೇ ಪುರುಷೋಽಯಮಿತಿ ಭ್ರಮೇ । ಚರೇಯುರಿತ್ಯುಪಲಕ್ಷಣಮ್ । ಹಾನೋಪಾದಾನವ್ಯವಹಾರಂ ಚ ಕುರ್ಯುರಿತಿ ದ್ರಷ್ಟವ್ಯಮ್ । ಭ್ರಮಕಾಲೇ ಅನುತ್ಪನ್ನಬಾಧಭ್ರಮಕಾಲೇ । ತೇಷಾಂ ರಜ್ಜುಸರ್ಪಸ್ಥಾಣುಪುರುಷಾದೀನಾಮ್ ಬಾಧತಃ ಪೂರ್ವಮಪಿ ಅನುತ್ಪನ್ನಬಾಧಭ್ರಮದಶಾಯಾಮಪಿ ಗತ್ಯದರ್ಶನಾತ್ । ಇತಸ್ತತೋ ಗಮನಾದರ್ಶನಾತ್ ತೇ ವ್ಯಾವಹಾರಿಕತಾಪಿ ವೃಥಾಽಭೂತ್ । ಅನುತ್ಪನ್ನಬಾಧದೀರ್ಘ-ಭ್ರಾಂತಿರೂಪ ವ್ಯಾವಹಾರಿಕತ್ವಾತ್ ದೇವದತ್ತಾದೀನಾಂ ಗಮನಾಗಮನಾದಿಕಾರ್ಯ-ನಿರ್ವಾಹಾಯ ನಾಭೂದಿತ್ಯರ್ಥಃ । ತಥಾ ಸತ್ಯನುತ್ಪನ್ನಬಾಧಭ್ರಮರೂಪವ್ಯಾವಹಾರಿಕ-ದಶಾವಲಂಬಿಯಜ್ಞದತ್ತಾದಿವತ್ ರಜ್ಜುಸರ್ಪಸ್ಥಾಣುಪುರುಷಾದಾವಪಿ ಬಾಧಾತ್ ಪೂರ್ವಂ ತತ್ತತ್ ಭ್ರಮದಶಾಯಾಂ ಗಮನಾಗಮನಾದಿಕ್ರಿಯಾಪ್ರಸಂಗಾತ್ । ಅತಶ್ಚೈತನ್ಯ-ಸ್ಯಾರೋಪಿತತ್ವೇನ ನ ಕ್ವಾಪಿ ಕ್ರಿಯೇತಿ ಭಾವಃ ॥ ೫೩೨ ॥

**ವಿವರಣೆ–** ವಾಸ್ತವಿಕವಾಗಿ ಯಾವುಗಳೂ ಇಲ್ಲ, ಬರೇ ನೋಡಲ್ಪಡುವುದು ಮಾತ್ರ ಎಂದು ತಿಳಿದರೆ ಆಗುವ ತೊಂದರೆಯನ್ನು ಉದಾಹರಣೆಗಳೊಂದಿಗೆ ತಿಳಿಸುತ್ತಾರೆ. ಏಕಜೀವವಾದಿಗಳ ರೀತಿಯಲ್ಲಿ ದೇಹವೇ ಮೊದಲಾದ ಜಡಪದಾರ್ಥಗಳು ಸುಳ್ಳಾಗಲಿ. ಆದರೆ ನಾನಾದೇಹದಲ್ಲಿರುವ ಜೀವಚೇತನರೂ ಸುಳ್ಳೆಂದು ಹೇಳಿದರೆ ಆದೇಹಗಳಲ್ಲಿ ಚಲನೆಯೇ ಇಲ್ಲವಾದೀತು. ಹೇಗೆ ಹಗ್ಗವನ್ನು ನೋಡಿ ಹಾವು ಎಂದು ಭ್ರಮೆಯು ಬಂದಾಗ ಆ ಹಗ್ಗದಲ್ಲಿ ಆರೋಪಿತವಾದ ಸರ್ಪವೂ ಸುಳ್ಳು. ಹಗ್ಗದಲ್ಲಿರುವ ಚೇತನವೂ ಸುಳ್ಳು. ಹೀಗಾಗಿ ಆ ಹಗ್ಗಕ್ಕೆ ಚಲನೆ ಎಂಬುದೇ ಇರುವುದಿಲ್ಲ. ಇದೇ ರೀತಿ ಮರದ ದಿಮ್ಮಿಗಳನ್ನೂ ಕಂಡು ಪುರುಷರೆಂದು ಭ್ರಮಿಸಿದಾಗ ಪುರುಷಚೇತನರು ಸುಳ್ಳು. ಆದ್ದರಿಂದ ಮರದ ದಿಮ್ಮಿಗಳಲ್ಲೂ ಚಲನೆ ಇರುವುದಿಲ್ಲ. ಅದರಂತೆ ನಾನಾ ದೇಹಗಳಲ್ಲಿರುವ ಜೀವರು ಸುಳ್ಳಾದರೂ ಕೇವಲ ಚೈತನ್ಯ ಭ್ರಮೆಯಿಂದ ಚಲನೆಯುಂಟಾಗುವುದಾದರೆ ಭ್ರಮಕಾಲದಲ್ಲಿ ಹಗ್ಗದಲ್ಲೂ ಹಾಗೂ ಮರದ ದಿಮ್ಮಿಗಳಲ್ಲೂ ಚಲನಾದಿಗಳು ಬರಬೇಕಾದೀತು. ಅಷ್ಟೇ ಅಲ್ಲ, ಮರದ ದಿಮ್ಮಿಗಳಲ್ಲಿ ಮನುಷ್ಯರಂತೆ ಮಾತುಕತೆಯೇ ಮೊದಲಾದ ವ್ಯವಹಾರವೂ ಬಂದು ಅವುಗಳೂ ವ್ಯಾವಹಾರಿಕ ಸತ್ಯರಾದ ಮನುಷ್ಯರಾಗ ಬೇಕಾದೀತು. ಹಾಗಿಲ್ಲ, ಆದ್ದರಿಂದ ಚೇತನರೂ ಸುಳ್ಳಾದರೆ ದೇಹಾದಿಗಳಲ್ಲಿ ಚಲನೆಯೇ ಮೊದಲಾದ ವ್ಯವಹಾರ ಇಲ್ಲವಾದೀತು. ಅಲ್ಲಿ ಚಲನಾದಿಗಳು ಇಲ್ಲದೇ ಇರುವುದರಿಂದ ಅದರಲ್ಲಿ ವ್ಯಾವಹಾರಿಕತ್ವವೂ ವ್ಯರ್ಥವಾದೀತು.

ಸತ್ಯೇನ ಬ್ರಹ್ಮಣಾ ತೇಷಾಮೈಕ್ಯಂ ನ ಸ್ಯಾನ್ಮೃಷಾತ್ಮನಾಂ ॥ ೫೩೩ ॥

**ಅರ್ಥ**— ಸತ್ಯೇನ = ಪಾರಮಾರ್ಥಿಕಸತ್ಯನಾದ, ಬ್ರಹ್ಮಣಾ = ಬ್ರಹ್ಮನಿಂದ, ಮೃಷಾತ್ಮನಾಂ= ಸುಳ್ಳಾದ ಸ್ವರೂಪವುಳ್ಳ, ತೇಷಾಂ = ಆ ಜೀವಚೇತನರಿಗೆ, ಐಕ್ಯಂ = ಅಭೇದವು, ನ ಸ್ಯಾತ್= ಆಗದೇ ಹೋದೀತು.

**ಅನುವಾದ**— ಸತ್ಯನಾದ ಬ್ರಹ್ಮನಿಗೂ ಮತ್ತು ಮಿಥ್ಯಾಭೂತರಾದ ಆ ಜೀವರಿಗೂ ಐಕ್ಯವಿರಲು ಸಾಧ್ಯವಿಲ್ಲ.

**ಭಾವವಿಲಾಸಿನೀ**— ದೂಷಣಾನಂತರಂ ಚಾಹ — **ಸತ್ಯೇನೇತಿ** ॥ ತೇಷಾಂ ಜೀವಚೈತನ್ಯಾನಾಂ ಮೃಷಾತ್ಮನಾಮಾರೋಪಿತಾನಾಮ್ । ಪ್ರತೀಯಮಾನಸರ್ವಜೀವಾನಾಂ ಚೈತನ್ಯಾರೋಪಾದೇವ ಗಮನಾಗಮನಾದಿಕ್ರಿಯಾಸಂಭವೇಽವಿಶೇಷಾದೇಕಸ್ಮಿನ್ನಪಿ ಜೀವೇ ಬ್ರಹ್ಮಭ್ರಮನಿಮಿತ್ತ-ಚೈತನ್ಯಾರೋಪಾದೇವ ಸರ್ವವ್ಯವಹಾರಸಂಭವಾದೇಕೋಽಪಿ ಜೀವಃಸತ್ಯೋ ನ ಸ್ಯಾತ್ । ತಥಾ ಚ ಕಥಂ ಜೀವೈಕ್ಯಮಿತಿ ಭಾವಃ । ಅಥವಾ । ಏಕಜೀವವ್ಯತಿರಿಕ್ತ ಸರ್ವಜೀವಾನಾ-ಮಾರೋಪಿತತ್ವೇ, ತತ್ತ್ವಮಸಿ ಬ್ರಹ್ಮಾಹಮಸ್ಮಿ ಸರ್ವಂ ಖಲ್ವಿದಂ ಬ್ರಹ್ಮೇತ್ಯಾದಿನಾ ಶ್ವೇತಕೇತ್ವಾದಿ ಋಷಿವಿಶೇಷಾಣಾಂ ಕಥ್ಯಮಾನಮೈಕ್ಯಂ ನ ಸ್ಯಾತ್ । ಅತ ಏಕಜೀವವ್ಯತಿರಿಕ್ತ ಜೀವಾರೋಪಪಕ್ಷೋ ನ ಮಾಯಾವಾದಿನಾ ವಕ್ತುಂ ಶಕ್ಯ ಇತಿ ಭಾವಃ ॥ ೫೩೩ ॥

**ವಿವರಣೆ**— ಏಕಜೀವವಾದಿಗಳ ಮತದಲ್ಲಿ ಬ್ರಹ್ಮನು ಪಾರಮಾರ್ಥಿಕಸತ್ಯ. ನಾನಾದೇಹಗಳಲ್ಲಿರುವ ಜೀವರೆಲ್ಲರೂ ಸುಳ್ಳು. ಹೀಗೆ ಸತ್ಯತ್ವ ಮತ್ತು ಮಿಥ್ಯಾತ್ವ ಎಂಬ ವಿರುದ್ಧ ಧರ್ಮಗಳುಳ್ಳ ಬ್ರಹ್ಮಜೀವರಿಗೆ ಐಕ್ಯವಾದರೂ ಹೇಗೆ ಸಾಧ್ಯ? ಆದ್ದರಿಂದ ಐಕ್ಯವನ್ನು ಹೇಳುವುದಕ್ಕಾದರೂ ಜೀವರನ್ನು ಸತ್ಯರೆಂದು ಹೇಳಬೇಕು.

ಅಥ ಸಂತ್ಯೇವ ಚೈತನ್ಯಭಾಗಾಸ್ತೇ ಸರ್ವದೇಹಗಾಃ ।
ತೇಷಾಂ ಬ್ರಹ್ಮವಿಭೇದಸ್ತು ಮೃಷೇತಿ ಯದಿ ಮನ್ಯಸೇ ॥ ೫೩೪ ॥

ಸರ್ವತ್ರ ನಿಷ್ಕ್ರಿಯಂ ಬ್ರಹ್ಮ ನಿಶ್ಛಿದ್ರಂ ವರ್ತತೇ ಕಿಲ ॥ ೫೩೫ ॥

ನಾನಾದೇಹಗತಾನ್ಯೇತಾನ್ಯನಂತಾನ್ಯತ್ಯಣೂನಿ ಚ ।
ಚೈತನ್ಯಾನ್ಯಾದಿತಃ ಸಂತಿ ಸಂಚರಂತಿ ಪೃಥಕ್ ಪೃಥಕ್ ॥ ೫೩೬ ॥

ಅನ್ಯತೋನುದ್ಧೃತಾಂಶಾನಾಮನಾದಿಪರಿವರ್ತಿನಾಮ್ ।
ಅಣೂನಾಂ ಸಕ್ರಿಯಾಣಾಂ ಚ ಬಹೂನಾಂ ಕ್ಲೇಶಭೋಗಿನಾಮ್ ॥ ೫೩೭ ॥

ಸದಾ ಸರ್ವತ್ರ ಪೂರ್ಣೇನ ನಿಶ್ಛಿದ್ರಸ್ಥಿರಮೂರ್ತಿನಾ ।
ಏಕೇನ ನಿರ್ವಿಕಾರೇಣ ಕ್ಲೇಶಾನಾಂ ದೂರವರ್ತಿನಾ ॥ ೫೩೮ ॥

**ಭಾವವಿಲಾಸಿನೀ**–ಏಕಜೀವಮತಮವಲಂಬ್ಯಶಂಕತೇ–**ಅಥೇತಿ** ॥ ಇಯಂ ಜೀವಾದಿರೂಪಾ ॥ ಕೇವಲಂ ಅರ್ಥಾಭಾವೇಽಪೀತ್ಯರ್ಥಃ । ದೃಶ್ಯತೇ ಭ್ರಾಂತ್ಯಾ ಪ್ರತೀಯತೇ । ಉತ್ತರಮಾಹ – **ದೇಹಾದಿಕಮಿತಿ** ॥ ಗಮನಂ ಯಜ್ಞದತ್ತದೇವದತ್ತಾದೀನಾಮಿತಸ್ತತೋ ಗಮನಮ್ । ಚೈತನ್ಯಾರೋಪಾತ್ ಸಂಚರಣಮಿತಿ ಶಂಕಾಂ ಪರಿಹರತಿ ॥ **ರಜ್ಜುಸರ್ಪ ಇತಿ** ॥೫೩೦-೫೩೧॥

ತತ್ರಾಪಿ ರಜ್ಜುಸರ್ಪೇಽಪಿ। ಉದಾಹರಣಾಂತರಂ ಚಾಹ – **ಸ್ಥಾಣುಷು ಪುಂಭ್ರಮ ಇತಿ** ॥ ದೂರಸ್ಥಸ್ಥಾಣುಷು ಪುಂಭ್ರಮೇ ಪುರುಷೋಽಯಮಿತಿ ಭ್ರಮೇ । ಚರೇಯುರಿತ್ಯುಪಲಕ್ಷಣಮ್ । ಹಾನೋಪಾದಾನವ್ಯವಹಾರಂ ಚ ಕುರ್ಯುರಿತಿ ದ್ರಷ್ಟವ್ಯಮ್ । ಭ್ರಮಕಾಲೇ ಅನುತ್ಪನ್ನಬಾಧಭ್ರಮಕಾಲೇ । ತೇಷಾಂ ರಜ್ಜುಸರ್ಪಸ್ಥಾಣುಪುರುಷಾದೀನಾಮ್ ಬಾಧತಃ ಪೂರ್ವಮಪಿ ಅನುತ್ಪನ್ನಬಾಧಭ್ರಮದಶಾಯಾಮಪಿ ಗತ್ಯದರ್ಶನಾತ್ । ಇತಸ್ತತೋ ಗಮನಾದರ್ಶನಾತ್ ತೇ ವ್ಯಾವಹಾರಿಕತಾಪಿ ವೃಥಾಽಭೂತ್ । ಅನುತ್ಪನ್ನಬಾಧದೀರ್ಘಭ್ರಾಂತಿರೂಪ ವ್ಯಾವಹಾರಿಕತ್ವಾತ್ ದೇವದತ್ತಾದೀನಾಂ ಗಮನಾಗಮನಾದಿಕಾರ್ಯನಿರ್ವಾಹಾಯ ನಾಭೂದಿತ್ಯರ್ಥಃ । ತಥಾ ಸತ್ಯನುತ್ಪನ್ನಬಾಧಭ್ರಮರೂಪವ್ಯಾವಹಾರಿಕದಶಾವಲಂಬಿಯಜ್ಞದತ್ತಾದಿವತ್ ರಜ್ಜುಸರ್ಪಸ್ಥಾಣುಪುರುಷಾದಾವಪಿ ಬಾಧಾತ್ ಪೂರ್ವಂ ತತ್ತತ್ ಭ್ರಮದಶಾಯಾಂ ಗಮನಾಗಮನಾದಿಕ್ರಿಯಾಪ್ರಸಂಗಾತ್ । ಅತಶ್ಚೈತನ್ಯಸ್ಯಾರೋಪಿತತ್ವೇನ ನ ಕ್ವಾಪಿ ಕ್ರಿಯೇತಿ ಭಾವಃ ॥ ೫೩೨ ॥

**ವಿವರಣೆ**– ವಾಸ್ತವಿಕವಾಗಿ ಯಾವುಗಳೂ ಇಲ್ಲ, ಬರೇ ನೋಡಲ್ಪಡುವುದು ಮಾತ್ರ ಎಂದು ತಿಳಿದರೆ ಆಗುವ ತೊಂದರೆಯನ್ನು ಉದಾಹರಣೆಗಳೊಂದಿಗೆ ತಿಳಿಸುತ್ತಾರೆ. ಏಕಜೀವವಾದಿಗಳ ರೀತಿಯಲ್ಲಿ ದೇಹವೇ ಮೊದಲಾದ ಜಡಪದಾರ್ಥಗಳು ಸುಳ್ಳಾಗಲಿ. ಆದರೆ ನಾನಾದೇಹದಲ್ಲಿರುವ ಜೀವಚೇತನರೂ ಸುಳ್ಳೆಂದು ಹೇಳಿದರೆ ಆದೇಹಗಳಲ್ಲಿ ಚಲನೆಯೇ ಇಲ್ಲವಾದೀತು. ಹೇಗೆ ಹಗ್ಗವನ್ನು ನೋಡಿ ಹಾವು ಎಂದು ಭ್ರಮೆಯು ಬಂದಾಗ ಆ ಹಗ್ಗದಲ್ಲಿ ಆರೋಪಿತವಾದ ಸರ್ಪವೂ ಸುಳ್ಳು. ಹಗ್ಗದಲ್ಲಿರುವ ಚೇತನವೂ ಸುಳ್ಳು. ಹೀಗಾಗಿ ಆ ಹಗ್ಗಕ್ಕೆ ಚಲನೆ ಎಂಬುದೇ ಇರುವುದಿಲ್ಲ. ಇದೇ ರೀತಿ ಮರದ ದಿಮ್ಮಿಗಳನ್ನೂ ಕಂಡು ಪುರುಷರೆಂದು ಭ್ರಮಿಸಿದಾಗ ಪುರುಷಚೇತನರು ಸುಳ್ಳು. ಆದ್ದರಿಂದ ಮರದ ದಿಮ್ಮಿಗಳಲ್ಲೂ ಚಲನೆ ಇರುವುದಿಲ್ಲ. ಅದರಂತೆ ನಾನಾ ದೇಹಗಳಲ್ಲಿರುವ ಜೀವರು ಸುಳ್ಳಾದರೂ ಕೇವಲ ಚೈತನ್ಯ ಭ್ರಮೆಯಿಂದ ಚಲನೆಯುಂಟಾಗುವುದಾದರೆ ಭ್ರಮಕಾಲದಲ್ಲಿ ಹಗ್ಗದಲ್ಲೂ ಹಾಗೂ ಮರದ ದಿಮ್ಮಿಗಳಲ್ಲೂ ಚಲನಾದಿಗಳು ಬರಬೇಕಾದೀತು. ಅಷ್ಟೇ ಅಲ್ಲ, ಮರದ ದಿಮ್ಮಿಗಳಲ್ಲಿ ಮನುಷ್ಯರಂತೆ ಮಾತುಕತೆಯೇ ಮೊದಲಾದ ವ್ಯವಹಾರವೂ ಬಂದು ಅವುಗಳೂ ವ್ಯಾವಹಾರಿಕ ಸತ್ಯರಾದ ಮನುಷ್ಯರಾಗ ಬೇಕಾದೀತು. ಹಾಗಿಲ್ಲ. ಆದ್ದರಿಂದ ಚೇತನರೂ ಸುಳ್ಳಾದರೆ ದೇಹಾದಿಗಳಲ್ಲಿ ಚಲನೆಯೇ ಮೊದಲಾದ ವ್ಯವಹಾರ ಇಲ್ಲವಾದೀತು. ಅಲ್ಲಿ ಚಲನಾದಿಗಳು ಇಲ್ಲದೇ ಇರುವುದರಿಂದ ಅದರಲ್ಲಿ ವ್ಯಾವಹಾರಿಕತ್ವವೂ ವ್ಯರ್ಥವಾದೀತು.

ಸತ್ಯೇನ ಬ್ರಹ್ಮಣಾ ತೇಷಾಮೈಕ್ಯಂ ನ ಸ್ಯಾನ್ಮೃಷಾತ್ಮನಾಂ ॥ ೫೩೩ ॥

**ಅರ್ಥ–** ಸತ್ಯೇನ = ಪಾರಮಾರ್ಥಿಕಸತ್ಯನಾದ, ಬ್ರಹ್ಮಣಾ = ಬ್ರಹ್ಮನಿಂದ, ಮೃಷಾತ್ಮನಾಂ= ಸುಳ್ಳಾದ ಸ್ವರೂಪವುಳ್ಳ, ತೇಷಾಂ = ಆ ಜೀವಚೇತನರಿಗೆ, ಐಕ್ಯಂ = ಅಭೇದವು, ನ ಸ್ಯಾತ್= ಆಗದೇ ಹೋದೀತು.

**ಅನುವಾದ–** ಸತ್ಯನಾದ ಬ್ರಹ್ಮನಿಗೂ ಮತ್ತು ಮಿಥ್ಯಾಭೂತರಾದ ಆ ಜೀವರಿಗೂ ಐಕ್ಯವಿರಲು ಸಾಧ್ಯವಿಲ್ಲ.

**ಭಾವವಿಲಾಸಿನೀ–** ದೂಷಣಾನಂತರಂ ಚಾಹ – **ಸತ್ಯೇನೇತಿ** ॥ ತೇಷಾಂ ಜೀವಚೈತನ್ಯಾನಾಂ ಮೃಷಾತ್ಮನಾಮಾರೋಪಿತಾನಾಮ್ । ಪ್ರತೀಯಮಾನಸರ್ವಜೀವಾನಾಂ ಚೈತನ್ಯಾರೋಪಾದೇವ ಗಮನಾಗಮನಾದಿಕ್ರಿಯಾಸಂಭವೇಽವಿಶೇಷಾದೇಕಸ್ಮಿನ್ನಪಿ ಜೀವೇ ಬ್ರಹ್ಮಭ್ರಮನಿಮಿತ್ತ-ಚೈತನ್ಯಾರೋಪಾದೇವ ಸರ್ವವ್ಯವಹಾರಸಂಭವಾದೇಕೋಽಪಿ ಜೀವಃಸತ್ಯೋ ನ ಸ್ಯಾತ್ । ತಥಾ ಚ ಕಥಂ ಜೀವೈಕ್ಯಮಿತಿ ಭಾವಃ । ಅಥವಾ । ಏಕಜೀವವ್ಯತಿರಿಕ್ತ ಸರ್ವಜೀವಾನಾ-ಮಾರೋಪಿತತ್ವೇ, ತತ್ತ್ವಮಸಿ ಬ್ರಹ್ಮಾಹಮಸ್ಮಿ ಸರ್ವಂ ಖಲ್ವಿದಂ ಬ್ರಹ್ಮೇತ್ಯಾದಿನಾ ಶ್ವೇತಕೇತ್ವಾದಿ ಋಷಿವಿಶೇಷಾಣಾಂ ಕಥ್ಯಮಾನಮೈಕ್ಯಂ ನ ಸ್ಯಾತ್ । ಅತ ಏಕಜೀವವ್ಯತಿರಿಕ್ತ ಜೀವಾರೋಪಪಕ್ಷೋ ನ ಮಾಯಾವಾದಿನಾ ವಕ್ತುಂ ಶಕ್ಯ ಇತಿ ಭಾವಃ ॥ ೫೩೩ ॥

**ವಿವರಣೆ–** ಏಕಜೀವವಾದಿಗಳ ಮತದಲ್ಲಿ ಬ್ರಹ್ಮನು ಪಾರಮಾರ್ಥಿಕಸತ್ಯ. ನಾನಾದೇಹಗಳಲ್ಲಿರುವ ಜೀವರೆಲ್ಲರೂ ಸುಳ್ಳು. ಹೀಗೆ ಸತ್ಯತ್ವ ಮತ್ತು ಮಿಥ್ಯಾತ್ವ ಎಂಬ ವಿರುದ್ಧ ಧರ್ಮಗಳುಳ್ಳ ಬ್ರಹ್ಮಜೀವರಿಗೆ ಐಕ್ಯವಾದರೂ ಹೇಗೆ ಸಾಧ್ಯ? ಆದ್ದರಿಂದ ಐಕ್ಯವನ್ನು ಹೇಳುವುದಕ್ಕಾದರೂ ಜೀವರನ್ನು ಸತ್ಯರೆಂದು ಹೇಳಬೇಕು.

ಅಥ ಸಂತ್ಯೇವ ಚೈತನ್ಯಭಾಗಾಸ್ತೇ ಸರ್ವದೇಹಗಾಃ ।
ತೇಷಾಂ ಬ್ರಹ್ಮವಿಭೇದಸ್ತು ಮೃಷೇತಿ ಯದಿ ಮನ್ಯಸೇ ॥ ೫೩೪ ॥

ಸರ್ವತ್ರ ನಿಷ್ಕ್ರಿಯಂ ಬ್ರಹ್ಮ ನಿಶ್ಛಿದ್ರಂ ವರ್ತತೇ ಕಿಲ ॥ ೫೩೫ ॥

ನಾನಾದೇಹಗತಾನ್ಯೇತಾನ್ಯನಂತಾನ್ಯತ್ಯಣೂನಿ ಚ ।
ಚೈತನ್ಯಾನ್ಯಾದಿತಃ ಸಂತಿ ಸಂಚರಂತಿ ಪೃಥಕ್ ಪೃಥಕ್ ॥ ೫೩೬ ॥

ಅನ್ಯತೋನುದ್ಧೃತಾಂಶಾನಾಮನಾದಿಪರಿವರ್ತಿನಾಮ್ ।
ಅಣೂನಾಂ ಸಕ್ರಿಯಾಣಾಂ ಚ ಬಹೂನಾಂ ಕ್ಲೇಶಭೋಗಿನಾಮ್ ॥ ೫೩೭ ॥

ಸದಾ ಸರ್ವತ್ರ ಪೂರ್ಣೇನ ನಿಶ್ಛಿದ್ರಸ್ಥಿರಮೂರ್ತಿನಾ ।
ಏಕೇನ ನಿರ್ವಿಕಾರೇಣ ಕ್ಲೇಶಾನಾಂ ದೂರವರ್ತಿನಾ ॥ ೫೩೮ ॥

**ಭೇದೋ ಮೃಷೇತಿ ಯದ್ ವಾಕ್ಯಂ ಯಚ್ಛಾಸ್ತ್ರಂ ತತ್ಕೃತೇ ಕೃತಮ್ ।**
**ಬಧಿರಾಸ್ತತ್ರ ಶಿಷ್ಯಾಃ ಸ್ಯುರುನ್ಮತ್ತಾ ವಾ ನ ಬುದ್ಧಿಮಾನ್ ॥ ೫೩ ॥**

**ಅರ್ಥ–** ಅಥ = (ಬಹುಜೀವವಾದವನ್ನು ಅಂಗೀಕರಿಸಿದ) ಅನಂತರ, ತೇ(ಮತೇ) = ನಿನ್ನ ಸಿದ್ಧಾಂತದಲ್ಲಿ, ಸರ್ವದೇಹಗಾಃ = ಎಲ್ಲ ದೇಹಗಳಲ್ಲಿರುವ, ಚೈತನ್ಯಭಾಗಾಃ = ಚೈತನ್ಯಾಂಶಗಳು, ಸಂತಿ ಏವ = ಇದ್ದೇ ಇರುತ್ತವೆ. ತೇಷಾಂ = ಆ ಅಂಶಗಳಿಗೆ, ಬ್ರಹ್ಮವಿಭೇದಃ ತು = ಬ್ರಹ್ಮನಿಂದ, ಭೇದವಾದರೂ, ಮೃಷಾ = ಸುಳ್ಳು, ಇತಿ = ಹೀಗೆಂದು, ಯದಿ = ಒಂದು ಪಕ್ಷ ತ್ವಂ ಮನ್ಯಸೇ = ತಿಳಿಯುವಿಯಾದರೆ, (ತರ್ಹಿ = ಆ ಪಕ್ಷದಲ್ಲಿ), ಬ್ರಹ್ಮ = ಬ್ರಹ್ಮನು, ಸರ್ವತ್ರ = ಎಲ್ಲಕಡೆ, ನಿಷ್ಕ್ರಿಯಂ = ಕ್ರಿಯಾರಹಿತವಾಗಿಯೂ, ನಿಶ್ಛಿದ್ರಂ = ಛಿದ್ರರಹಿತವಾಗಿಯೂ ವರ್ತತೇ ಕಿಲ = ಇದ್ದಾನಷ್ಟೆ? ನಾನಾದೇಹಗತಾನಿ = ಅನೇಕ ದೇಹಗಳಲ್ಲಿರುವ, ಏತಾನಿ = ಈ ಯಾವ, ಚೈತನ್ಯಾನಿ = ಜೀವಚೇತನರು, ಆದಿತಃ = ಮೊದಲಿನಿಂದಲೂ (ಅನಾದಿಕಾಲದಿಂದಲೂ) ಅನಂತಾನಿ = ಅನಂತಸಂಖ್ಯಾಕರೂ, ಅತ್ಯಣೂನಿ ಚ = ಅಣುಸ್ವರೂಪರೂ ಕೂಡ, ಸಂತಿ = ಆಗಿದ್ದಾರೆ. ಪೃಥಕ್ ಪೃಥಕ್ = ಬೇರೆ ಬೇರೆಯಾಗಿ, ಸಂಚರಂತಿ = ಸಂಚಾರಮಾಡುತ್ತಾರೆ. ಅನ್ಯತಃ = ಬೇರೆ ಕಡೆಯಿಂದ, ಅನುದ್ಧೃತಾಂಶಾನಾಂ = ಎತ್ತರದ ಭಾಗಗಳಾದ, ಅನಾದಿಪರಿವರ್ತಿನಾಂ = ಅನಾದಿಕಾಲದಿಂದಲೂ ಸಂಚರಿಸುತ್ತಿರುವ, ಅಣೂನಾಂ = ಅಣುಸ್ವರೂಪರಾದ, ಸಕ್ರಿಯಾಣಾಂ = ಕ್ರಿಯಾಸಹಿತರಾದ, ಬಹೂನಾಂ = ಬಹುಸಂಖ್ಯಾಕರಾದ, ಕ್ಲೇಶಭೋಗಿನಾಂ ಚ = ದುಃಖವನ್ನು ಅನುಭವಿಸುತ್ತಿರುವವರೂ ಆದ, (ಏಷಾಂ = ಈ ಜೀವರಿಗೆ) ಸದಾ = ಯಾವಾಗಲೂ, ಸರ್ವತ್ರ = ಎಲ್ಲಕಡೆಯಿಂದಲೂ, ಪೂರ್ಣೇನ = ಪರಿಪೂರ್ಣನಾದ, ನಿಶ್ಛಿದ್ರಸ್ಥಿರಮೂರ್ತಿನಾ = ಛಿದ್ರವಿಲ್ಲದೆ ನಿಶ್ಚಲಸ್ವರೂಪನಾದ, ಏಕೇನ = ಒಬ್ಬನೇ ಆಗಿರುವ, ನಿರ್ವಿಕಾರೇಣ = ಯಾವ ತರಹದ ವಿಕಾರಗಳಿಲ್ಲದ, ಕ್ಲೇಶಾನಾಂ = ದುಃಖಗಳಿಂದ, ದೂರವರ್ತಿನಾ = ಅತ್ಯಂತ ದೂರವಿರುವ, (ಬ್ರಹ್ಮಣಾ = ಪರಬ್ರಹ್ಮನಿಂದ) ಭೇದಃ = ಭೇದವು, ಮೃಷಾ ಇತಿ = ಸುಳ್ಳು ಎಂದು, ಯದ್ವಾಕ್ಯಂ = ಯಾವ ವಾಕ್ಯವಿದೆಯೋ, ತತ್ಕೃತೇ = ಆ ಭೇದಮಿಥ್ಯಾತ್ವಸಾಧನೆಗೋಸ್ಕರ, ಯತ್ = ಯಾವ, ಶಾಸ್ತ್ರಂ = ಶಾಸ್ತ್ರವು, ಕೃತಂ = ಮಾಡಲ್ಪಟ್ಟಿದೆಯೋ, ತತ್ರ = ಅಂತಹ ಶಾಸ್ತ್ರದಲ್ಲಿ ಬಧಿರಾಃ = ಕಿವುಡರಾಗಲೀ, ಉನ್ಮತ್ತಾಃ = ಹುಚ್ಚರಾಗಲೀ, ಅಥವಾ ಶಿಷ್ಯಾಃ = ಶಿಷ್ಯರಾಗಿ, ಸ್ಯುಃ = ಆದಾರು. . ಬುದ್ಧಿಮಾನ್ = ವಿವೇಕಿಯಾದವನು, (ಶಿಷ್ಯಃ = ಶಿಷ್ಯನಾಗಿ) ನ ಸ್ಯಾತ್ = ಆಗಲಿಕ್ಕಿಲ್ಲ..

**ಅನುವಾದ–** ಇನ್ನು ಎಲ್ಲ ದೇಹಗಳಲ್ಲಿಯೂ ಚೈತನ್ಯದ ಅಂಶಗಳು ಇದ್ದೇ ಇದೆ. ಆ ಚೈತನ್ಯಾಂಶಗಳಿಗೂ ಮತ್ತು ಬ್ರಹ್ಮನಿಗೂ ಪರವಾದಿಗಳು ಹೇಳುವ ಭೇದವು ಮಾತ್ರ ಮಿಥ್ಯಾ ಎಂದು ಅಂಗೀಕರಿಸುವುದಾದರೆ ಆಗ ಇದು ನಮ್ಮ ಉತ್ತರ :-

ನಿಷ್ಕ್ರಿಯನೂ, ನಿಶ್ಛಿದ್ರನೂ ಆದ ಬ್ರಹ್ಮನು ಸರ್ವತ್ರ ಇದ್ದಾನಷ್ಟೇ? ಈ ಜೀವರಾದರೋ ನಾನಾ ದೇಹಗತರಾದವರು, ಅನಂತರಾದವರು ಮತ್ತು ಅತ್ಯಂತ ಅಣುಪರಿಮಾಣವುಳ್ಳವರು. ಈ ಜೀವಚೈತನ್ಯಗಳು ಅನಾದಿಕಾಲದಿಂದಲೂ ಇದ್ದು ಪ್ರತ್ಯೇಕಪ್ರತ್ಯೇಕವಾಗಿ ಸಂಚಾರವನ್ನು ಮಾಡುತ್ತಾರೆ. ಆದ್ದರಿಂದ ಬ್ರಹ್ಮನಿಂದ ಉದ್ಧೃತರಲ್ಲದ (ಬೇರ್ಪಡಿಸಲ್ಪಡದ), ಅನಾದಿಕಾಲದಿಂದಲೂ ಇರುವ, ಅಣುಗಳಾದ, ಕ್ರಿಯಾಸಹಿತರಾದ, ಅನೇಕರಾದ, ಕ್ಲೇಶಭೋಗಿಗಳಾದ ಈ ಅಂಶಗಳಿಗೆ ಯಾವಾಗಲೂ ಸರ್ವತ್ರಪೂರ್ಣನಾಗಿರುವ ನಿಶ್ಛಿದ್ರನಾದ, ಕ್ರಿಯಾರಹಿತನಾದ, ಒಬ್ಬನೇ ಆದ, ನಿರ್ವಿಕಾರನಾದ, ಕ್ಲೇಶದೂರನಾದ ಬ್ರಹ್ಮನಿಂದ ಇರುವ ಭೇದವು ಮಿಥ್ಯಾ ಎಂಬ ವಾಕ್ಯವು ಮತ್ತು ಅದನ್ನು ಪ್ರತಿಪಾದನೆ ಮಾಡಲು ಯಾವ ಶಾಸ್ತ್ರವು ಇದೆಯೋ ಅಂತಹ ಶಾಸ್ತ್ರವನ್ನು ಕೇಳಲು ಕಿವುಡರಾಗಲೀ ಅಥವಾ ಹುಚ್ಚರಾಗಲೀ ಶಿಷ್ಯರಾಗಬೇಕು. ವಿವೇಕಿಯಾದವನು ಎಂದೂ ಶಿಷ್ಯನಾಗುವುದಿಲ್ಲ.

**ಭಾವವಿಲಾಸಿನೀ–** ತರ್ಹಿ ಬಹುಜೀವವಾದ ಏವಾಸ್ತು । ತಥಾಪ್ಯನಾದಿರಪಿ ಜೀವಬ್ರಹ್ಮಭೇದೋ ಮೃಷೈವೇತ್ಯಂಗೀಕ್ರಿಯತ ಇತಿ ಶಂಕಾಮನೂದ್ಯ ಜೀವಸ್ವಭಾವಂ ಬ್ರಹ್ಮಸ್ವಭಾವಂ ಚ ವರ್ಣಯನ್ನೇವ ಧಿಕ್ಕರೋತಿ ॥ **ಅಥೇತಿ** ॥ ಆದಿತಃ ಅನಾದಿಕಾಲಮಾರಭ್ಯ । ತತ್ಕೃತೇ ಭೇದಮಿಥ್ಯಾತ್ವಕೃತೇ । ತತ್ರ ಶಾಸ್ತ್ರೇ । ಉಕ್ತರೀತ್ಯಾ ಬಹುಧಾವಿರುದ್ಧಧರ್ಮಾಕ್ರಾಂತ ಜೀವಬ್ರಹ್ಮಭೇದಮೃಷಾತ್ವಂ ನ ಕೋಽಪಿ ಪ್ರೇಕ್ಷಾವಾಂಚ್ಛೃಣುಯಾದಿತಿ ಭಾವಃ ॥೫೩೪-೫೩೫॥

**ವಿವರಣೆ–** ಬಹುಜೀವವಾದವನ್ನು ಅಂಗೀಕರಿಸಿದರೂ ಕೂಡ ಬ್ರಹ್ಮೈಕ್ಯವು ಕೂಡಲಾರದು. ನಿನ್ನ ಸಿದ್ಧಾಂತದಲ್ಲಿ ಬಹಳ ದೇಹಗಳಲ್ಲಿ ಬಹುಜೀವರಿದ್ದರೂ ಅವರಿಗೂ ಬ್ರಹ್ಮನಿಗೂ ಇರುವ ಭೇದವು ಸುಳ್ಳು ಎಂದು ತಿಳಿಸಿದೆ. ಅದು ಸರಿಯಲ್ಲ. ಏಕೆಂದರೆ ಜೀವ ಮತ್ತು ಬ್ರಹ್ಮರಲ್ಲಿ ಅನೇಕ ವಿರುದ್ಧ ಧರ್ಮಗಳಿವೆ, ಯಾವುವೆಂದರೆ-

| ಜೀವ | ಬ್ರಹ್ಮ |
|---|---|
| ಬಹುಸಂಖ್ಯಾಕರು | ಏಕಸಂಖ್ಯಾಕನು |
| ಅಣುಸ್ವರೂಪರು | ವ್ಯಾಪ್ತಸ್ವರೂಪ |
| ದುಃಖಭೋಗಿ | ದುಃಖದೂರ |
| ಅಪೂರ್ಣ | ಪೂರ್ಣ |
| ಸಕ್ರಿಯ | ನಿಷ್ಕ್ರಿಯ |
| ಪರಿಚ್ಛಿನ್ನ | ಅಪರಿಚ್ಛಿನ್ನ |

ಇತ್ಯಾದಿ ಅನೇಕ ವಿರುದ್ಧಧರ್ಮಗಳು ಅನಾದಿಕಾಲದಿಂದಲೂ ಇರುವಾಗ ಅವರಿಗೆ ಭೇದವೂ ಅನಾದಿಕಾಲದಿಂದ ಇರುವಾಗ ಈ ಭೇದವು ಸುಳ್ಳು ಎಂದು ಹೇಳುವ ನಿನಗೆ, ಇದರ ಮಿಥ್ಯಾತ್ವವನ್ನು ಸಾಧಿಸಲು ಹೊರಟ ನಿನ್ನ ಶಾಸ್ತ್ರವನ್ನು ಅಧ್ಯಯನಮಾಡಲು

ಕಿವುಡರಾಗಲೀ, ಉನ್ಮತ್ತರಾಗಲೀ ಶಿಷ್ಯರಾಗಬಹುದೇ ಹೊರತು ಯಾವ ಬುದ್ಧಿವಂತನೂ ಶಿಷ್ಯನಾಗಲಾರ.

ಮೃಷಾಭೇದಂ ಘಟವ್ಯೋಮ ಪ್ರಚಲೇತ್ ತತ್ರ ತತ್ರ ಕಿಮ್ ।
ಜಲೇನ ಜಲಪಂಕೇನ ಲಿಪ್ಯತೇ ಕಿಂ ದಿನೇ ದಿನೇ ॥ ೫೪೦ ॥

ಕಿಂತು ಸ್ವಭಾವಭಿನ್ನಾನಾಂ ರೇಣೂನಾಂ ಗಗನಾದಿನಾ ।
ತತ್ರ ತತ್ರ ಕ್ರಿಯಾ ಚಾಸ್ತಿ ವಿಕ್ರಿಯಾ ಚ ತತಸ್ತತಃ ॥ ೫೪೧ ॥

ನಿಷ್ಕ್ರಿಯಬ್ರಹ್ಮಭಾಗಾಶ್ಚೇತ್ ಸಕ್ರಿಯತ್ವಂ ನ ಕರ್ಹಿಚಿತ್ ।
ನಿಷ್ಕ್ರಿಯಾಕಾಶಭಾಗಾಸ್ತೇ ಸಕ್ರಿಯಾ ಕೇನ ವಾ ಕೃತಾಃ ॥ ೫೪೨ ॥

**ಅರ್ಥ–** ಮೃಷಾಭೇದಂ = ಸುಳ್ಳಾದ ಭೇದವುಳ್ಳ, ಘಟವ್ಯೋಮ = ಘಟಾಕಾಶವು, ತತ್ರ ತತ್ರ = ಅಲ್ಲಲ್ಲಿ ಪ್ರಚಲೇತ್ ಕಿಂ? = ಚಲಿಸುತ್ತದೆಯೇನು? ದಿನೇ ದಿನೇ = ಪ್ರತಿದಿವಸದಲ್ಲಿಯೂ, ಜಲೇನ = ನೀರಿನಿಂದಲಾಗಲೀ, ಜಲಪಂಕೇನ = ನೀರಿನಕೆಸರಿನಿಂದಲಾಗಲೀ, ಲಿಪ್ಯತೇ ಕಿಂ? = ಲೇಪಿಸಲ್ಪಡುತ್ತದೆಯೇನು? ಕಿಂತು = ಆದರೆ, ಗಗನಾದಿನಾ = ಆಕಾಶಾದಿಗಳಿಂದ, ಸ್ವಭಾವಭಿನ್ನಾನಾಂ = ಸ್ವಾಭಾವಿಕವಾಗಿ ಬೇರೆಯಾಗಿರುವ, ರೇಣೂನಾಂ = ಕಣಗಳಿಗೆ, ತತ್ರ ತತ್ರ = ಅಲ್ಲಲ್ಲಿ ಕ್ರಿಯಾ ಚ = ಚಲನೆಯೂ ಕೂಡ, ಅಸ್ತಿ = ಇದೆ. ತತಃ ತತಃ = ಆಗಾಗ್ಗೆ ವಿಕ್ರಿಯಾ ಚ = ವಿಕಾರವೂ ಕೂಡ, (ಅಸ್ತಿ = ಇದೆ). (ಜೀವಾಃ = ಜೀವಚೇತನರು) ನಿಷ್ಕ್ರಿಯಬ್ರಹ್ಮಭಾಗಾಃ ಚೇತ್ = ಕ್ರಿಯೆಇಲ್ಲದಿರುವ ಬ್ರಹ್ಮನ ಏಕದೇಶಗಳಾಗಿದ್ದರೆ, ತೇಷಾಂ = ಅವರಿಗೆ, ಕರ್ಹಿಚಿತ್ = ಯಾವುದೇ ಸಂದರ್ಭದಲ್ಲಿಯೂ, ಸಕ್ರಿಯತ್ವಂ = ಕ್ರಿಯಾಸಾಹಿತ್ಯವು, ನ (ಸ್ಯಾತ್) = ಬರದೇ ಹೋದೀತು. ನಿಷ್ಕ್ರಿಯಾಕಾಶಭಾಗಾಃ = ಕ್ರಿಯೆ ಇಲ್ಲದ ಆಕಾಶದ ಏಕದೇಶಗಳಾದ, ತೇ = ಆ ಘಟಾಕಾಶಾದಿಗಳು, ಸಕ್ರಿಯಾಃ = ಕ್ರಿಯೆಯಿಂದ ಕೂಡಿದವುಗಳಾಗಿ, ಕೇನ ವಾ = ಯಾರಿಂದ ತಾನೇ, ಕೃತಾಃ = ಮಾಡಲ್ಪಟ್ಟಿವೆ.

**ಅನುವಾದ–** ಮಹಾಕಾಶದಿಂದ ಮಿಥ್ಯಾಭೇದವುಳ್ಳ ಘಟಾಕಾಶವು ಅಲ್ಲಲ್ಲಿ ಸಂಚರಿಸುತ್ತದೆಯೇ? ಪ್ರತಿನಿತ್ಯವೂ ನೀರಿನಿಂದಲಾಗಲೀ ಅಥವಾ ಕೆಸರಿನಿಂದಲಾಗಲೀ ಲೇಪಿಸಲ್ಪಡುತ್ತದೆಯೇ? ಆದರೆ ಗಗನಾದಿಗಳಿಂದ ಸ್ವಾಭಾವಿಕವಾದ ಭೇದವುಳ್ಳ ಧೂಳಿನ ಕಣಗಳಿಗೆ ಅಲ್ಲಲ್ಲಿ ಕ್ರಿಯೆಯೂ ಇದೆ ಮತ್ತು ವಿಕಾರವೂ ಇದೆ. ಅದರಂತಿರುವ ಜೀವಚೇತನರು ನಿಷ್ಕ್ರಿಯನಾದ ಬ್ರಹ್ಮನ ಭಾಗಗಳಾಗಿದ್ದರೆ ಅವರಲ್ಲಿ ಕ್ರಿಯೆಯು ಯಾವ ಕಾರಣದಿಂದಲೂ ಉಂಟಾಗಲಾರದು. ನಿಷ್ಕ್ರಿಯವಾದ ಮಹಾಕಾಶದ ಭಾಗವಾದ ಘಟಾಕಾಶಗಳನ್ನು ಯಾವುದಾದರೂ ಕಾರಣದಿಂದ ಕ್ರಿಯಾಸಹಿತವಾಗಿ ಮಾಡಲು ಸಾಧ್ಯವೇ?

ಘಟಾಕಾಶಕ್ಕೂ ಮಹಾಕಾಶಕ್ಕೂ ಸುಳ್ಳಾದ ಭೇದವಿದೆ ಎಂಬ ಕಾರಣಕ್ಕೆ ಘಟಾಕಾಶದಲ್ಲಿ ಚಲನೆ ಬರಲು ಸಾಧ್ಯವೇ? ಹಾಗಯೆ ಮಡಿಕೆಯಲ್ಲಿ ನೀರು ತುಂಬಿಸಿದಾಗ ಅಲ್ಲಿರುವ ನೀರಿನಿಂದಾಗಲೀ, ನೀರಲ್ಲಿದ್ದ ಕೆಸರಿನಿಂದಾಗಲೀ ಘಟಾಕಾಶವು ಲೇಪಿಸಲ್ಪಡುತ್ತದೆಯೇನು? ಖಂಡಿತ ಇಲ್ಲ. ಆದರೆ ಆಕಾಶದಿಂದ ಸ್ವಾಭಾವಿಕವಾಗಿ ಭಿನ್ನಗಳಾದ ಅತಿ ಸೂಕ್ಷ್ಮಗಳಾದ ಕಣಗಳಲ್ಲಿ ಅಲ್ಲಲ್ಲಿ ಸಂಚಾರವೂ, ಆಗಾಗ್ಗೆ ವಿಕಾರವೂ ಇದೆ. ಇದರಂತೆ ಜೀವರೂ ಒಂದು ಪಕ್ಷ ಕ್ರಿಯೆಯಿಲ್ಲದ ಬ್ರಹ್ಮನದ್ದೇ ಏಕದೇಶಗಳಾಗಿದ್ದರೆ ಘಟಾಕಾಶಗಳಂತೆ ಎಂದೂ ಸಕ್ರಿಯತ್ವವು ಬರದೇ ಹೋದೀತು. ನಿಷ್ಕ್ರಿಯ ಆಕಾಶದ ಏಕದೇಶಗಳಾದ ಘಟಾಕಾಶಾದಿಗಳು ಎಂದಾದರೂ ಯಾರಿಂದಲಾದರೂ ಕ್ರಿಯಾಸಹಿತಗಳಾಗಿ ಮಾಡಲ್ಪಟ್ಟವೆಯೇನು?

**ಭಾವವಿಲಾಸಿನೀ–** ಉಕ್ತವಿರುದ್ಧಧರ್ಮಾಣಾಂ ಭೇದಮೃಷಾತ್ವೇऽಸಂಭವಂ ತಾತ್ವಿಕಭೇದೇ ಸತ್ಯೇವ ಸಂಭವಂ ಚ ದೃಷ್ಟಾಂತಮುಖೇನ ದರ್ಶಯತಿ – **ಮೃಷಾಭೇದಮಿತಿ** ॥ ಜಲೇನ ಘಟಸ್ಥಜಲೇನ । ಜಲಪಂಕೇನ ಘಟಸ್ಥಜಲಪಂಕೇನ । ಏವಮೇವ ವ್ಯಾಪ್ತಶುದ್ಧಬ್ರಹ್ಮಚಿದಾತ್ಮಕತ್ವೇ ಜೀವಸ್ಯ ನ ಕೋऽಪಿ ವಿಕಾರಃಸ್ಯಾತ್ । ನಿರ್ವಿಕಾರಗಗನೈಕದೇಶೇ ಘಟಾಕಾಶೇ ಘಟಾದಾವಿವ ತದುಪಾಧಿತೋ ವ್ಯಾವಹಾರಿಕವಿಕಾರಸ್ಯಾಪ್ಯದರ್ಶನಾದಿತಿ ಭಾವಃ ॥ ೫೪೦ ॥

ಗಗನಾದಿನಾ ಸ್ವಭಾವಭಿನ್ನನಾಮಿತಿ ಸಂಬಂಧಃ ॥ ಭೇದಮೃಷಾತ್ವೇ ಇದಂ ತು ಸರ್ವಥಾऽನುಪಪನ್ನಮಿತ್ಯಾಹ – **ನಿಷ್ಕ್ರಿಯೇತಿ** ॥ ೫೪೧-೫೪೨ ॥

**ವಿವರಣೆ–** ಹಿಂದೆ ಹೇಳಿದ ವಿರುದ್ಧ ಧರ್ಮಗಳು ಭೇದಕ್ಕೆ ಮಿಥ್ಯಾತ್ವವನ್ನು ಒಪ್ಪಿದರೆ ಕೂಡಲಾರವು. ಸತ್ಯಭೇದವನ್ನು ಒಪ್ಪಿದರೆ ಮಾತ್ರ ಕೂಡುತ್ತವೆ ಎಂಬುದನ್ನು ದೃಷ್ಟಾಂತದಿಂದ ತೋರಿಸುತ್ತಾರೆ. ಏವಂ ಚ ಸಕ್ರಿಯತ್ವಾದಿ ವಿರುದ್ಧಧರ್ಮಗಳಿಂದ ಕೂಡಿದ ಜೀವರಿಗೆ ನಿಷ್ಕ್ರಿಯತ್ವಾದಿ ಧರ್ಮಗಳಿಂದ ಕೂಡಿದ ಬ್ರಹ್ಮನಿಂದ ಸತ್ಯವಾದ ಭೇದವನ್ನೇ ಒಪ್ಪಬೇಕು ಹೊರತು ಸುಳ್ಳಾದದ್ದನ್ನಲ್ಲ.

ತಜ್ಜೀವೇಶ್ವರಭೇದೋ ವಾ ಮೂಕತಾ ವಾ ಗತಿಸ್ತವ ।
ಸ್ಫೋಟೋ ಯನ್ನಾಕ್ರಿಯೇಣೈಕ್ಯೇ ತಾಲ್ವೋಷ್ಠಪುಟಸಂಪುಟೇ ॥ ೫೪೩ ॥

**ಅರ್ಥ–** ತತ್ = ನಿಷ್ಕ್ರಿಯ ಸಕ್ರಿಯರಾದ ಬ್ರಹ್ಮಜೀವರಿಗೆ ಅಭೇದಕೂಡದೇ ಇರುವುದರಿಂದ, ತವ = ನಿನಗೆ, ಜೀವೇಶ್ವರಭೇದಃ ವಾ = ಜೀವೇಶ್ವರರಿಗೆ ಇರುವ ಸತ್ಯಭೇದವಾಗಲೀ, ಮೂಕತಾ ವಾ = ಏನೂ ಮಾತನಾಡದೇ ಸುಮ್ಮನಿರುವುದಾಗಲೀ, ಗತಿಃ = ದಾರಿಯು, (ಭವತಿ = ಆಗುತ್ತದೆ.) ಯತ್ = ಯಾವ ಕಾರಣದಿಂದ, ಅಕ್ರಿಯೇಣ = ನಿಷ್ಕ್ರಿಯನಾದ ಬ್ರಹ್ಮನಿಂದ, ಐಕ್ಯೇ = ಅಭೇದವಿದ್ದಪಕ್ಷದಲ್ಲಿ (ಅಕ್ರಿಯಸ್ಯ ಜೀವಸ್ಯ = ನಿಷ್ಕ್ರಿಯನಾದ ಜೀವನಿಗೆ) ತಾಲ್ವೋಷ್ಠಪುಟಸಂಪುಟೇ= ತಾಲು ಮತ್ತು ತುಟಿಪ್ರದೇಶವುಳ್ಳ

ಬಾಯಲ್ಲಿ ಸ್ಫೋಟಃ = ವಿಭಾಗವೇ (ಬಾಯಿ ತೆರೆಯುವಿಕೆಯೇ) ನ (ಸ್ಯಾತ್) = ಆಗದೇ ಹೋದೀತು.

**ಅನುವಾದ–** ಸಕ್ರಿಯ ನಿಷ್ಕ್ರಿಯರಾದ ಜೀವೇಶ್ವರರಿಗೆ ಐಕ್ಯವು ಕೂಡದೇ ಇರುವುದರಿಂದ ನೀನು ಜೀವೇಶ್ವರರಿಗೆ ಸತ್ಯಭೇದವನ್ನಾಗಲೀ ಅಂಗೀಕರಿಸಬೇಕು. ಅಥವಾ ಮಾತನಾಡದೇ ಸುಮ್ಮನೇ ಇರಬೇಕಾಗುತ್ತದೆ. ಇದು ಬಿಟ್ಟು ಬೇರೆ ದಾರಿಯೇ ಇಲ್ಲ. ಏಕೆಂದರೆ ನಿಷ್ಕ್ರಿಯನಾದ ಬ್ರಹ್ಮನ ಜೊತೆ ಐಕ್ಯ ಹೇಳಿದರೆ ಜೀವನಿಗೂ ನಿಷ್ಕ್ರಿಯತ್ವಪ್ರಾಪ್ತವಾಗಿ ಅವನ ತಾಲು ತುಟಿ ಇವುಗಳಲ್ಲಿ ತೆರೆದು ಮುಚ್ಚುವಿಕೆ ಮೊದಲಾದ ಕ್ರಿಯೆಯು ಇಲ್ಲವಾಗಿ ಮಾತುಕತೆ ನಿಂತು ಹೋಗುತ್ತದೆ. ಹಾಗಾಗಿ ಮೂಕತ್ವವನ್ನು ನೀನು ಅಂಗೀಕರಿಸಲೇಬೇಕು. ನೀನು ಮೂಕನಲ್ಲ ಹಾಗಾಗಿ ಜೀವೇಶ್ವರರಿಗೆ ಸತ್ಯಭೇದವನ್ನು ಅಂಗೀಕರಿಸಲೇಬೇಕು.

**ಭಾವವಿಲಾಸಿನೀ–** ತತ್ತಸ್ಮಾತ್ ನಿಷ್ಕ್ರಿಯಸಕ್ರಿಯಯೋರಭೇದಾಯೋಗಾತ್ । ನಿಷ್ಕ್ರಿಯೇಣೈಕ್ಯೇ ಮುಕ್ತಾಮುಪಪಾದಯತಿ – **ಸ್ಫೋಟ ಇತಿ** ॥ ಯದ್ಯಸ್ಮಾತ್ । ಸ್ಫೋಟೋ ವಿಭಾಗಃ । ನಿಷ್ಕ್ರಿಯ-ಬ್ರಹ್ಮಣೈಕೀಭೂತಜೀವಸ್ಯಾಪಿ ನಿಷ್ಕ್ರಿಯತ್ವಾವಶ್ಯಂಭಾವಾತ್ ತಾಲ್ವೋಷ್ಠಪುಟವಿಭಾಗೋ-ಪಯುಕ್ತಚೈತನ್ಯಾಂಶಾನಾಂ (ಚೈತನ್ಯಾತ್ಮಕತತ್ ಪ್ರಕಾಶಾನಾಂ ಚ) ಕ್ರಿಯಾऽ- ಯೋಗೇನ ಜಡೋಷ್ಠಯೋರಪಿ ಕದಾಪಿ ವಿಭಾಗೋ ನ ಸ್ಯಾದಿತಿ ಭಾವಃ ॥ ೫೪೩ ॥

ವ್ಯಾವಹಾರಿಕತೋಕ್ತಿಸ್ತು ಸ್ಪರ್ಧತೇ ಪದಮಂಜರೀಂ ।
ಬಾಧಶ್ಚೇದಸ್ತಿ ತರ್ಹ್ಯರ್ಥನಾಸ್ತಿತೈವೇತಿ ಕಿಂ ತಯಾ ।
ಬಾಧಶ್ಚೇನ್ನಾಸ್ತಿ ತೇ ಶಾಸ್ತ್ರನಾಸ್ತಿತೈವೇತಿ ಕಿಂ ತಯಾ ॥ ೫೪೪ ॥

**ಅರ್ಥ–** ತೇ = ನಿನ್ನ ವ್ಯಾವಹಾರಿಕತೋಕ್ತಿಃ = ವ್ಯಾವಹಾರಿಕಸತ್ಯವೆಂಬ ಮಾತು, ಪದಮಂಜರೀಂ = ಪದಮಂಜರೀ ಎಂಬ ವ್ಯಾಕರಣಗ್ರಂಥವನ್ನು ಸ್ಪರ್ಧತೇ = (ಉಭಯಥಾಪಿ ವೈಯರ್ಥ್ಯ ವಿಷಯದಲ್ಲಿ ನಾನೇ ಹೆಚ್ಚು ಎಂದು) ಸ್ಪರ್ಧಿಸುತ್ತದೆ. (ಯದಿ = ಒಂದು ಪಕ್ಷದಲ್ಲಿ) (ವ್ಯಾವಹಾರಿಕಭೇದಸ್ಯ = ವ್ಯಾವಹಾರಿಕಸತ್ಯವಾದ ಭೇದಕ್ಕೆ) ಬಾಧಃ = ಬಾಧಕಜ್ಞಾನವು, ಅಸ್ತಿ ಚೇತ್ = ಇದೆಯಾದರೆ, ತರ್ಹಿ = ಆ ಪಕ್ಷದಲ್ಲಿ ಅರ್ಥನಾಸ್ತಿತಾ ಏವ (ಸ್ಯಾತ್) = ವಸ್ತುವು ಇಲ್ಲವೆಂದೇ ಆದೀತು. ಇತಿ = ಹೀಗಾಗಿ, ತಯಾ = ಆ ವ್ಯಾವಹಾರಿಕ ಸತ್ಯತೆಯಿಂದಲೂ, ಕಿಂ = ಏನು ಪ್ರಯೋಜನ? . (ಯದಿ = ಒಂದು ಪಕ್ಷದಲ್ಲಿ) (ವ್ಯಾವಹಾರಿಕಭೇದಸ್ಯ = ವ್ಯಾವಹಾರಿಕಸತ್ಯವಾದ ಭೇದಕ್ಕೆ) ಬಾಧಃ = ಬಾಧಜ್ಞಾನವು, ನಾಸ್ತಿ ಚೇತ್ = ಇಲ್ಲವಾದರೆ (ತರ್ಹಿ = ಆ ಪಕ್ಷದಲ್ಲಿ) ತೇ ಶಾಸ್ತ್ರನಾಸ್ತಿತಾ ಏವ (ಸ್ಯಾತ್) = ಐಕ್ಯಪ್ರತಿಪಾದಕಶಾಸ್ತ್ರವೇ ಇಲ್ಲದಂತಾಗುವುದೇ ಸರಿ, ಇತಿ = ಹೀಗಾಗಿ, ತಯಾ = ಇಂತಹ ವ್ಯಾವಹಾರಿಕಸತ್ಯತೆಯಿಂದ, ಕಿಂ = ಏನು ಪ್ರಯೋಜನ?

**ಅನುವಾದ–** ವ್ಯಾವಹಾರಿಕ ಎಂಬ ವಚನವು ಪದಮಂಜರಿಯ ಜೊತೆಯಲ್ಲಿ ಸ್ಪರ್ಧಿಸುತ್ತದೆ. ವ್ಯಾವಹಾರಿಕ ವಸ್ತುವಿಗೆ ಬಾಧವಿರುವುದಾದರೆ ಅರ್ಥವು ಇಲ್ಲವೆಂದೇ ಆಗುವುದರಿಂದ ಆ ವ್ಯಾವಹಾರಿಕ ಸತ್ತ್ವದಿಂದ ಏನು ಪ್ರಯೋಜನ? ವ್ಯಾವಹಾರಿಕ ಸತ್ ಪದಾರ್ಥಕ್ಕೆ ಬಾಧವಿಲ್ಲವೆನ್ನುವುದಾದರೆ ಅಂತಹ ವ್ಯಾವಹಾರಿಕತ್ವವನ್ನು ಪ್ರತಿಪಾದನೆ ಮಾಡುವ ನಿನ್ನ ಶಾಸ್ತ್ರವು ಇಲ್ಲವೆಂದೇ ಆಗುವುದರಿಂದ ಅಂತಹ ವ್ಯಾವಹಾರಿಕ ಸತ್ವದ ಅಂಗೀಕಾರದಿಂದ ಏನು ಪ್ರಯೋಜನ?

**ಭಾವವಿಲಾಸಿನೀ–** ನನು ಸರ್ವಥಾ ಭೇದಾಭಾವೋನೋಚ್ಯತೇ ಕಿಂತು ವ್ಯಾವಹಾರಿಕ ಭೇದೋಽಪ್ಯಸ್ತೀತಿ ಶಂಕಾಮಪಹಸತಿ – **ವ್ಯವಹಾರಿಕತೋಕ್ತಿರಿತಿ** ॥ ಪದಮಂಜರೀಂ ಸ್ಪರ್ಧತೇ । ಉಭಯಥಾಪಿ ವ್ಯರ್ಥಾ ಪದಮಂಜರೀತಿ ವಚನಾತ್ ಪದಮಂಜರೀವದುಭಯಥಾ ವ್ಯರ್ಥೇತ್ಯರ್ಥಃ । ತದೇವ ದರ್ಶಯತಿ – **ಬಾಧಶ್ಚೇತಿ** ॥ ತಯಾ ವ್ಯಾವಹಾರಿಕತಯಾ । ಶಾಸ್ತ್ರಾನಾಸ್ತಿತಾ ಐಕ್ಯಶಾಸ್ತ್ರಾನಾಸ್ತಿತಾ । ಅಬಾಧಿತಭೇದಾಂಗೀಕಾರೇಣ ಸದದ್ವೈತಭಂಗ ಪ್ರಸಂಗಾದಿತಿ ಭಾವಃ ॥ ೫೪೪ ॥

**ವಿವರಣೆ–** ಸರ್ವಥಾ ಭೇದ ಇಲ್ಲವೇ ಇಲ್ಲ ಎಂದೇನೂ ನಾವು ಹೇಳುವುದಿಲ್ಲ, ವ್ಯಾವಹಾರಿಕಸತ್ಯವಾದ ಭೇದವನ್ನು ಅಂಗೀಕರಿಸಿ ಎಲ್ಲ ವ್ಯವಹಾರಗಳನ್ನು ಕೂಡಿಸುತ್ತೇವೆ ಎಂದು ಆಕ್ಷೇಪಿಸಿದರೆ, ಅದನ್ನು ಅಪಹಾಸದ ಮೂಲಕ ಖಂಡಿಸುತ್ತಾರೆ. ವ್ಯಾವಹಾರಿಕಸತ್ಯವಾದ ಭೇದವನ್ನು ಹೇಳುತ್ತೇನೆ ಎಂಬ ನಿನ್ನ ವಾಕ್ಯವು ಪದಮಂಜರೀ ಎಂಬ ವ್ಯಾಕರಣಶಾಸ್ತ್ರದ ಜೊತೆ ಎರಡು ವಿಧದಿಂದಲೂ ವ್ಯರ್ಥ ಎಂಬ ವಿಷಯದಲ್ಲಿ ತಾನೇ ಹೆಚ್ಚು ಎಂಬುದಾಗಿ ಸ್ಪರ್ಧಿಸುವಂತೆ ಕಾಣಸುತ್ತದೆ. ಏಕೆಂದರೆ, ಪದಮಂಜರೀ ಎಂಬುದೊಂದು ವ್ಯಾಕರಣಮಹಾಭಾಷ್ಯದ ವ್ಯಾಖ್ಯಾನ ಗ್ರಂಥ. ಬಹಳ ಕ್ಲಿಷ್ಟವಾದದ್ದು. ಭಾಷ್ಯ ಓದದೇ ಇದ್ದರೆ ಅದು ಅರ್ಥವೇ ಆಗುವುದಿಲ್ಲವಾದ್ದರಿಂದ ವ್ಯರ್ಥವಾಗುತ್ತದೆ. ಭಾಷ್ಯ ಚೆನ್ನಾಗಿ ತಿಳಿದುಕೊಂಡ ಮೇಲೆ ಅದನ್ನು ತಿಳಿದುಕೊಂಡದ್ದರಿಂದ ಅದರ ತಿಳಿವಳಿಕೆಗೋಸ್ಕರ ಇರುವ ಪದವಂಜರೀ ಗ್ರಂಥ ವ್ಯರ್ಥವೇ ಸರಿ. ಹೀಗಾಗಿ ಉಭಯಥಾಪಿ ವ್ಯರ್ಥಾ ಪದಮಂಜರೀ ಎಂಬ ಮಾತು ಲೋಕದಲ್ಲಿ ಬಂದಿದೆ. ಹಾಗೆಯೇ ವ್ಯಾವಹಾರಿಕ ಸತ್ಯವೆಂಬ ಮಾತೂ ಕೂಡ, ವ್ಯಾವಹಾರಿಕ ವಸ್ತುವಿಗೆ ಬಾಧವಿದೆ ಹಾಗೂ ಬಾಧವಿಲ್ಲ ಎಂಬ ಎರಡು ಪಕ್ಷದಲ್ಲೂ ವ್ಯರ್ಥವೇ ಆಗುತ್ತದೆ.

ಹೇಗೆಂದರೆ - ವ್ಯಾವಹಾರಿಕಭೇದಕ್ಕೆ ಬಾಧವಿದೆ ಎಂದಾದರೆ ಭೇದವೆಂಬ ವಸ್ತುವೇ ಇಲ್ಲವಾಗಿ ಆವಸ್ತು ಇದೆ ಎಂಬುದಕ್ಕೆ ಅರ್ಥವಿಲ್ಲದಂತಾಗಿ ವ್ಯರ್ಥವಾಗುತ್ತದೆ. ಬಾಧವಿಲ್ಲವೆಂದಾದರೆ ಭೇದವು ಸತ್ಯವೆಂದಾಗಿ ಐಕ್ಯವನ್ನೇ ಬಾಧಿಸುವುದರಿಂದ ಐಕ್ಯಪ್ರತಿಪಾದಕವಾದ ನಿನ್ನ ಶಾಸ್ತ್ರವು ಬಾಧಿತವಾಗಿ ವ್ಯರ್ಥವಾಗುತ್ತದೆ. ಆದ್ದರಿಂದ ವ್ಯಾವಹಾರಿಕಸತ್ವಾಂಗೀಕಾರದಿಂದ ಏನೂ ಪ್ರಯೋಜನವಿಲ್ಲ ಎಂದು ಅಭಿಪ್ರಾಯ.

**ಸರ್ವಾನುಭವಸಿದ್ಧಸ್ಯ ಮರ್ಯಾದಾರಕ್ಷಕಸ್ಯ ಚ ।**
**ಜೀವೇಶ್ವರಾದಿಭೇದಸ್ಯ ಮೃಷಾತ್ವಂ ಕೇನ ಹೇತುನಾ ॥ ೫೪೫ ॥**

**ಯಥಾನುಭವಮೇವಾರ್ಥಃ ಸದಾ ಸರ್ವತ್ರ ತಿಷ್ಠತು ।**
**ಜೀವೋ ಜೀವೋಽಸ್ತು ಸರ್ವತ್ರ ಜಡಮಸ್ತು ಜಡಂ ಸದಾ ॥ ೫೪೬ ॥**

**ಈಶಃ ಸರ್ವತ್ರ ಚೇಶೋಽಸ್ತು ಯಥಾಪೂರ್ವಮಿತಿ ಶ್ರುತಿಂ ।**
**ಉಪೇಕ್ಷ್ಯ ಲೋಕಸಂಹಾರಃ ಕ್ರಿಯತೇ ಕೇನ ಹೇತುನಾ ॥ ೫೪೭ ॥**

**ನ ಹ್ಯನಾದಿಭವೇಽಪ್ಯಸ್ಯ ವ್ಯತ್ಯಯೋಽರ್ಥಸ್ಯ ಕಸ್ಯಚಿತ್ ।**
**ಇದಾನೀಂ ನ ಕುತೋ ಭಾವಿಕಾಲೇ ವ್ಯತ್ಯಾಸ ಇಷ್ಯತೇ ॥ ೫೪೮ ॥**

**ಅರ್ಥ–** ಸರ್ವಾನುಭವಸಿದ್ಧಸ್ಯ = ಎಲ್ಲರ ಅನುಭವದಿಂದ ಸಿದ್ಧವಾದ, ಚ = ಮತ್ತು, ಮರ್ಯಾದಾರಕ್ಷಕಸ್ಯ = ಲೋಕದ ವ್ಯವಸ್ಥೆಗಳನ್ನು ರಕ್ಷಿಸುವ, ಜೀವೇಶ್ವಾದಿಭೇದಸ್ಯ = ಜೀವೇಶ್ವರರೇ ಮೊದಲಾದವರ ಭೇದಕ್ಕೆ, ಮೃಷಾತ್ವಂ = ಮಿಥ್ಯಾತ್ವವು, ಕೇನ ಹೇತುನಾ = ಯಾವಕಾರಣದಿಂದ, (ಉಚ್ಯತೇ? = ಹೇಳಲ್ಪಡುತ್ತದೆ?) ಅರ್ಥಃ = ವಸ್ತುವು, ಸದಾ = ಯಾವಾಗಲೂ, ಸರ್ವತ್ರ = ಎಲ್ಲಕಡೆಯೂ, ಯಥಾನುಭವಂ ಏವ = ಅನುಭವಕ್ಕೆ ಅನುಸಾರಿಯಾಗಿಯೇ, ತಿಷ್ಠತು = ಇರಲಿ. ಜೀವಃ = ಜೀವಚೇತನನು, ಸರ್ವತ್ರ = ಎಲ್ಲ ಕಡೆ, ಜೀವ (ಏವ) = ಜೀವಚೇತನನಾಗಿಯೇ, ಅಸ್ತು = ಇರಲಿ. ಜಡಂ = ಜಡವಸ್ತುವು, ಸದಾ = ಯಾವಾಗಲೂ, ಜಡಂ (ಏವ) = ಜಡವಸ್ತುವಾಗಿಯೇ, ಅಸ್ತು = ಇರಲಿ. ಈಶಃ ಚ = ಈಶ್ವರನಾದರೂ ಕೂಡ, ಸರ್ವತ್ರ = ಎಲ್ಲ ಕಡೆ, ಈಶ (ಏವ) = ಈಶ್ವರನಾಗಿಯೇ, ಅಸ್ತು = ಇರಲಿ. (ತ್ವಯಾ = ನಿನ್ನಿಂದ) ಯಥಾಪೂರ್ವಂ = ಧಾತಾ ಯಥಾಪೂರ್ವಮಕಲ್ಪಯತ್ ಇತಿ = ಹೀಗೆಂಬ, ಶ್ರುತಿಂ = ವೇದವಾಕ್ಯವನ್ನು, ಉಪೇಕ್ಷ್ಯ = ತಿರಸ್ಕರಿಸಿ, ಲೋಕಸಂಹಾರಃ = ಲೋಕದಲ್ಲಿರುವ ವ್ಯವಸ್ಥೆಗಳ ನಾಶವು, ಕೇನ ಹೇತುನಾ = ಯಾವ ಕಾರಣದಿಂದ, ಕ್ರಿಯತೇ= ಮಾಡಲ್ಪಡುತ್ತದೆ ಅನಾದಿಭವೇ ಅಪಿ = ಅನಾದಿಕಾಲದಿಂದ ಇರುವ ಸಂಸಾರದಲ್ಲಿಯೂ ಕೂಡ, ಕಸ್ಯಚಿತ್ = ಯಾವುದೇ ಒಂದು, ಅಸ್ಯ = ಈ ಅರ್ಥಸ್ಯ = ವಸ್ತುವಿಗೆ ವ್ಯತ್ಯಯಃ = ವ್ಯತ್ಯಾಸವು, ನ ಹಿ (ಆಸೀತ್) = ಆಗಿರಲಿಲ್ಲ. ಇದಾನೀಂ (ಅಪಿ) = ಈವಾಗಲೂ ಕೂಡ, ನ (ಅಸ್ತಿ) =ಇರುವುದಿಲ್ಲ. ಭಾವಿಕಾಲೇ (ಏವ) = ಭವಿಷ್ಯತ್ ಕಾಲದಲ್ಲಿ ಮಾತ್ರ ವ್ಯತ್ಯಾಸಃ = ವ್ಯತ್ಯಾಸವು ಕುತಃ = ಯಾವಕಾರಣದಿಂದ, ಇಷ್ಯತೇ? = ಇಚ್ಛಿಸಲ್ಪಡುತ್ತದೆ?

**ಅನುವಾದ–** ಜೀವೇಶ್ವರಾದಿವಸ್ತುಗಳಿಗಿರುವ ಪಂಚಭೇದಗಳು ಎಲ್ಲರ ಅನುಭವವೆಂಬ ಪ್ರಮಾಣದಿಂದ ಸಿದ್ಧವಾಗಿದೆ. ಅಷ್ಟೇ ಅಲ್ಲ ಲೋಕದಲ್ಲಿರುವ, ಕೆಲಸಮಾಡುವುದು, ತಿನ್ನುವುದು ಇತ್ಯಾದಿಯಾದ, ತಂದೆ, ತಾಯಿ, ಮಗ, ಬಂಧುಗಳು ಇವೇ

ಮೊದಲಾದ ಮರ್ಯಾದೆಗಳನ್ನು ರಕ್ಷಣೆಮಾಡುತ್ತದೆಯೂ ಕೂಡ. ಇಂತಹ ಭೇದಕ್ಕೆ ಮಿಥ್ಯಾತ್ವವನ್ನು ಯಾವ ಕಾರಣದಿಂದ ಮತ್ತು ಯಾವ ಪ್ರಯೋಜನಕ್ಕಾಗಿ ಹೇಳುತ್ತೀಯೆ? ಹೀಗೆ ಹೇಳಲು ಪ್ರಮಾಣವೂ ಇಲ್ಲ, ಪ್ರಯೋಜನವೂ ಇಲ್ಲ. ಹಾಗಾಗಿ ಲೋಕದಲ್ಲಿರುವ ಎಲ್ಲ ವಸ್ತುಗಳೂ ಯಾವಾಗಲೂ ಎಲ್ಲ ಕಡೆಯೂ ಅನುಭವಕ್ಕೆ ಅನುಸಾರವಾಗಿ ಸತ್ಯಗಳಾಗಿಯೇ ಬೇರೆ ಬೇರೆಯಾಗಿಯೇ ಇರಲಿ. ಹೇಗೆಂದರೆ - ಜೀವರೆಲ್ಲರೂ ಎಲ್ಲಕಡೆ ಜೀವರಾಗಿಯೇ ಇರಲಿ. ಜಡವಸ್ತುಗಳು ಯಾವಾಗಲೂ ಜಡವಸ್ತುಗಳಾಗಿಯೇ ಇರಲಿ. ಸರ್ವಸ್ವಾಮಿಯಾದ ಪರಮಾತ್ಮನು ಎಲ್ಲ ಸ್ಥಳದಲ್ಲೂ ಸರ್ವಸ್ವಾಮಿಯಾದ ಪರಮಾತ್ಮನೇ ಆಗಿರಲಿ. ಸರ್ವಕರ್ತನಾದ ಈಶ್ವರನು ಯಾವಾಗಲೂ (ಪ್ರತಿಸೃಷ್ಟಿಯಲ್ಲೂ) ಹಿಂದಿನ ಕಲ್ಪದಲ್ಲಿ ಹೇಗೆ ಸೃಷ್ಟಿಸಿದನೋ ಹಾಗೆಯೇ ಎಲ್ಲ ಕಲ್ಪಗಳಲ್ಲೂ ಸೃಷ್ಟಿಸುತ್ತಾನೆ ಎಂಬುದು ಧಾತಾ ಯಥಾಪೂರ್ವಮಕಲ್ಪಯತ್ ಎಂಬ ಋಗ್ವೇದದಲ್ಲಿರುವ ವಾಕ್ಯವು ತಿಳಿಸುತ್ತಿದೆ. ಇಂತಹ ಶ್ರುತಿವಾಕ್ಯವನ್ನು ತಿರಸ್ಕರಿಸುತ್ತಾ, ಅನಾದಿಕಾಲದಿಂದ ನಿನ್ನೆಯವರೆಗೂ ವ್ಯತ್ಯಾಸವಾಗದ, ಇವತ್ತಿಗೂ ವ್ಯತ್ಯಾಸವಿಲ್ಲದ ವಸ್ತುಗಳಿಗೆ ಭವಿಷ್ಯತ್‌ಕಾಲದಲ್ಲಿ ಮಾತ್ರ ವ್ಯತ್ಯಾಸವಾಗುತ್ತದೆ ಎಂದು ಹೇಳುವುದು ಯಾವ ಕಾರಣದಿಂದ ಹಾಗೂ ಯಾವ ಪ್ರಯೋಜನಕ್ಕಾಗಿ? ತಿಳಿಸು.

**ಭಾವವಿಲಾಸಿನೀ–** ತಸ್ಮಾದನಾದಿಕಾಲಮಾರಭ್ಯ ಪರಿವರ್ತಮಾನಜೀವೇಶ್ವರಾದಿ ಭೇದಸ್ಯ ಸರ್ವವ್ಯವಹಾರನಿರ್ವಾಹಕಸ್ಯಾಽಽವಿಪಾಲಗೋಪಾಲಮಪ್ಯನುಭವೇನಾದ್ಯಾಪ್ಯಬಾಧಿತಸ್ಯ ಯಥಾಪೂರ್ವಮಕಲ್ಪಯದಿತಿ ಶ್ರುತ್ಯಾ ಪೂರ್ವಂ ಪೂರ್ವಂ ಯಥಾ ತಥೈವ ಸರ್ವಥಾ ಜಗತ್‌ಸೃಷ್ಟಿರಿತ್ಯರ್ಥಕಥಿಕಯಾಽನುಗೃಹೀತಸ್ಯ ಚ ನಿರ್ನಿಮಿತ್ತಂ ಮೃಷಾತ್ವಕಲ್ಪನೇ ಕುತೋ ವ್ಯತ್ಯಾಸ ಇತಿ ವದನ್ಯುಕ್ತಿ ಚರ್ಚಾಮುಪಸಂಹರತಿ – **ಸರ್ವಾನುಭವೇತ್ಯಾದಿನಾ** ॥ ೫೪೫ - ೫೪೭ ॥

ಅಸ್ಯಾರ್ಥಸ್ಯ ಜೀವೇಶ್ವರಾದಿಭೇದರೂಪಾರ್ಥಸ್ಯ । ಭಾವಿಕಾಲೇ ಭವಿಷ್ಯತ್ಕಾಲೇ ॥೫೪೮॥

**ವಿವರಣೆ–** ಶ್ರುತಿಸ್ಮೃತಿಗಳಿಗೆ ವಿರುದ್ಧವಾಗಿ ಅನಾದಿಯಾದ ಜೀವೇಶ್ವರಭೇದಕ್ಕೆ ಯಾವ ಕಾರಣವೂ ಇಲ್ಲದೆ ತನಗೂ ಪ್ರಯೋಜನಕಾರಿಯಲ್ಲದ ಮಿಥ್ಯಾತ್ವವನ್ನು ಕಲ್ಪಿಸುವುದು ಸರಿಯಲ್ಲ ಎಂದೆನ್ನುತ್ತಾ ಹಿಂದೆ ಹೇಳಿದ ಯುಕ್ತಿಗಳ ಚರ್ಚೆಗಳನ್ನು ನಾಲ್ಕು ಶ್ಲೋಕಗಳಿಂದ ಉಪಸಂಹಾರಮಾಡುತ್ತಾರೆ.

ನಿರ್ದುಃಖಸ್ವಸುಖಪ್ರಾಪ್ತ್ಯಾ ಮುಕ್ತಿಶ್ಚೈಕ್ಯಂ ವಿನಾ ಭವೇತ್ ॥ ೫೪೯ ॥

**ಅರ್ಥ–** ಮುಕ್ತಿಶ್ಚ = ಮೋಕ್ಷವೂ ಕೂಡ, ಐಕ್ಯಂ ವಿನಾ = ಜೀವಬ್ರಹ್ಮೈಕ್ಯವನ್ನು ಹೊರತಾಗಿಯೂ ಕೂಡ, ನಿರ್ದುಃಖಸ್ವಸುಖಪ್ರಾಪ್ತ್ಯಾ = ದುಃಖವಿಲ್ಲದ ತನ್ನ ಸ್ವರೂಪಸುಖಪ್ರಾಪ್ತಿಯಿಂದಲೇ, ಭವೇತ್ = ಆಗುತ್ತದೆ.

**ಅನುವಾದ–** ಐಕ್ಯವನ್ನು ಅಂಗೀಕಾರ ಮಾಡದೆಯೂ ನಿರ್ದುಃಖಸ್ವರೂಪ ಸುಖಪ್ರಾಪ್ತಿರೂಪವಾದ ಮೋಕ್ಷವು ಹಾಗೆಯೇ ಉಪಪನ್ನವಾಗುತ್ತದೆ.

**ಭಾವವಿಲಾಸಿನೀ–** ಐಕ್ಯಾಭಾವೇ ಕಾ ಮುಕ್ತಿರಿತ್ಯಸ್ಯ ಮುಕ್ತಸ್ತು ಧೌತಮಣಿವದಿತಿ ಸಂಸಾರಾದುದ್ಧಾರ ಏವ ಮುಕ್ತಿರಿತ್ಯೇಕಮುತ್ತರಂ ದತ್ತಮ್ । ಪ್ರಕಾರಾಂತರೇಣಾಪ್ಯುತ್ತರಮಾಹ – ನಿರ್ದುಃಖೇತಿ ॥ ನನು ಸರ್ವಂ ಖಲ್ವಿದಂ ಬ್ರಹ್ಮೇತಿ ಶ್ರುತ್ಯಾ ಸರ್ವಾದ್ವೈತಕಥನಾತ್ ಉಕ್ತವಿಧಯಾ ಸರ್ವಾನುಭವ-ಸಿದ್ಧಸ್ಯಾಪಿ ಭೇದಸ್ಯ ಮೃಷಾತ್ವಂ ಕಲ್ಪ್ಯತ ಇತಿ ಚೇನ್ನ । ಗಂಗಾಯಾಂ ಘೋಷಃಸಿಂಹೋ ದೇವದತ್ತ ಇತ್ಯಾದಿ ಲೌಕಿಕವಾಕ್ಯೈರ್ವಾ ಯಜಮಾನಃ ಪ್ರಸ್ತರಃ ಆದಿತ್ಯೋ ವೈ ಯೂಪ ಇತ್ಯಾದಿ ವೈದಿಕ-ವಾಕ್ಯೈರ್ವಾ ಪ್ರತ್ಯಕ್ಷಸಿದ್ಧಾರ್ಥಬಾಧಸ್ಯ ಕ್ವಾಪ್ಯದರ್ಶನಾತ್ । ಪ್ರಸ್ತುತ ಪ್ರತ್ಯಕ್ಷಬಾಧಿತ ಸ್ವಾರ್ಥಪರಿತ್ಯಾಗೇನಾರ್ಥಾಂತರೇ ವೃತ್ತೇರೇವ ದರ್ಶನಾತ್ । ಸರ್ವಂ ಖಲ್ವಿದಂ ಬ್ರಹ್ಮೇತಿ ವಾಕ್ಯಸ್ಯಾಪಿ ಸರ್ವಾನುಭಾವಬಾಧಿತಸರ್ವಾದ್ವೈತಾಖ್ಯಾರ್ಥಪರಿತ್ಯಾಗೇನ ರಾಜೈವ ರಾಷ್ಟ್ರ-ಮಿತಿವತ್ಸರ್ವಸ್ಯ ಬ್ರಹ್ಮಾಧೀನತ್ವಾರ್ಥ ಏವ ವೃತ್ತೇರುಚಿತತ್ವಾತ್ ॥ ೫೪೯ ॥

**ವಿವರಣೆ–** ಭೇದಕ್ಕೆ ಮಿಥ್ಯಾತ್ವ ಹೇಳದಿದ್ದರೆ ಜೀವಬ್ರಹ್ಮೈಕ್ಯ ಸಿದ್ಧವಾಗಲಾರದು, ಐಕ್ಯ ಸಿದ್ಧಿಸದೆ ಇದ್ದರೆ ಮೋಕ್ಷವೇ ಇಲ್ಲವೆಂದಾಗುತ್ತದೆ. ಆದ್ದರಿಂದ ಎಲ್ಲರ ಮೋಕ್ಷಕ್ಕೋಸ್ಕರ ಹೀಗೆ ಭೇದಮಿಥ್ಯಾತ್ವವನ್ನು ಹೇಳುತ್ತೇನೆಂದು ಆಕ್ಷೇಪಿಸಿದರೆ ಇದಕ್ಕೂ ಉತ್ತರಿಸುತ್ತಾರೆ. ಮಾಯಾವಾದಿಗಳು ಹೇಳುವಂತೆ ಜೀವಬ್ರಹ್ಮೈಕ್ಯವೇ ಮೋಕ್ಷ ಎಂದು ಸಿದ್ಧವಾದರೆ, ಅಂತಹ ಮೋಕ್ಷಕ್ಕೋಸ್ಕರ ಭೇದಮಿಥ್ಯಾತ್ವಾದಿವಸ್ತುವ್ಯತ್ಯಾಸವನ್ನು ಹೇಳಬೇಕಾಗಬಹುದು. ಆದರೆ ಜೀವಬ್ರಹ್ಮೈಕ್ಯವೇ ಮೋಕ್ಷವಲ್ಲ. ಯೋಗ್ಯಜೀವರೆಲ್ಲರೂ ನಿರ್ದುಃಖಸ್ವರೂಪರೇ ಆಗಿದ್ದಾರೆ. ಅದಕ್ಕೆ ಆವರಣ ಇರುವುದರಿಂದ ಆ ಸ್ವರೂಪಸುಖದ ಅನುಭವ ಆಗಿಲ್ಲ. ಭಗವಂತನ ಅಪರೋಕ್ಷಜ್ಞಾನದಿಂದ ಪರಮಾತ್ಮನಲ್ಲಿ ವಿಶೇಷಭಕ್ತಿ ಬರುತ್ತದೆ. ಆ ಭಕ್ತಿಯಿಂದ ಪ್ರಸನ್ನನಾದ ಭಗವಂತನೇ ಜೀವನಲ್ಲಿ ಅನಾದಿಕಾಲದಿಂದಲೂ ಇರುವ ತನ್ನ ಅಧೀನವಾದ ಅವರ ಆವರಣವನ್ನು ತೆಗೆಯುತ್ತಾನೆ. ಆಗ ಜೀವನಿಗೆ ನಿರ್ದುಃಖಸ್ವರೂಪಸುಖದ ಅನುಭವ ಬರುತ್ತದೆ. ಇದೇ ಮೋಕ್ಷ, ಹೊರತು ಜೀವಬ್ರಹ್ಮೈಕ್ಯವಲ್ಲ. ಹೀಗೆ ಜೀವಬ್ರಹ್ಮೈಕ್ಯವನ್ನು ಒಪ್ಪದಿದ್ದರೂ ಮೋಕ್ಷವನ್ನು ಹೇಳಲು ಬರುವುದರಿಂದ ಮೋಕ್ಷರೂಪಪ್ರಯೋಜನಕ್ಕೋಸ್ಕರವೂ ಭೇದಮಿಥ್ಯಾತ್ವಾದಿಗಳನ್ನು ಹೇಳುವ ಆವಶ್ಯಕತೆಯು ಇಲ್ಲ.

ವೇದಸ್ತು ಸರ್ವಂ ಬ್ರಹ್ಮೇತಿ ಸರ್ವಸ್ಯಾಪ್ಯೇಕತಾಂ ಸ್ಫುಟಂ ।
ವಕ್ತಿ ತತ್ರ ತು ಜೀವೈಕ್ಯಮಾತ್ರೇ ಕೇನ ಭರಸ್ತವ ॥ ೫೫೦ ॥

**ಅರ್ಥ–** ವೇದಸ್ತು = ಶ್ರುತಿಯಾದರೂ, ಸರ್ವಂ ಬ್ರಹ್ಮ ಇತಿ = ಸರ್ವಂ ಖಲ್ವಿದಂ ಬ್ರಹ್ಮ ಎಂಬುದಾಗಿ, ಸರ್ವಸ್ಯ ಅಪಿ = ಜೀವಜಡಾತ್ಮಕವಾದ ಸಕಲ ಪ್ರಪಂಚಕ್ಕೂ, (ಬ್ರಹ್ಮಣಾ =

ಬ್ರಹ್ಮನಿಂದ) ಏಕತಾಂ = ಐಕ್ಯವನ್ನು, ಸ್ಫುಟಂ = ಸ್ಪಷ್ಟವಾಗಿ, ವಕ್ತಿ = ಹೇಳುತ್ತದೆ.. ತತ್ರ ತು = ಸಕಲಪ್ರಪಂಚಕ್ಕೂ ಐಕ್ಯವನ್ನು ಹೇಳುವ ಆ ವಾಕ್ಯದಲ್ಲಿಯಾದರೂ, ತವ = ನಿನಗೆ, ಜೀವೈಕ್ಯಮಾತ್ರೇ = ಜೀವಬ್ರಹ್ಮೈಕ್ಯವನ್ನು ಮಾತ್ರ ತಿಳಿಸುವ ವಿಷಯದಲ್ಲಿ, ಭರಃ = ಆಗ್ರಹವು, ಕೇನ = ಯಾವ ಕಾರಣದಿಂದ, (ಅಸ್ತಿ? = ಇದೆ?)

**ಅನುವಾದ–** ಸರ್ವಂ ಖಲ್ವಿದಂ ಬ್ರಹ್ಮ ಎಂಬ ವೇದವಾಕ್ಯವಾದರೋ ಸ್ಪಷ್ಟವಾಗಿ ಜೀವ ಜಡಾತ್ಮಕವಾದ ಎಲ್ಲ ಪ್ರಪಂಚಕ್ಕೂ ಐಕ್ಯವನ್ನು ಹೇಳುತ್ತದೆ. ಆ ವಾಕ್ಯದಿಂದ ಜಡೈಕ್ಯವನ್ನು ತ್ಯಜಿಸಿ ಜೀವೈಕ್ಯವನ್ನು ಮಾತ್ರ ಆಗ್ರಹದಿಂದ ತಿಳಿಸುವ ನಿನಗೆ ಏನು ಕಾರಣವಿದೆ?

**ಭಾವವಿಲಾಸಿನೀ–** ಪ್ರಕಾರಾಂತರೇಣಾಪಿ ಸರ್ವಂ ಖಲ್ವಿದಂ ಬ್ರಹ್ಮೇತಿ ವಾಕ್ಯಸ್ಯ ಪರಕೀಯಾರ್ಥೇಽನುಪಪತ್ತಿಮಾಹ – **ವೇದಸ್ತ್ವಿತಿ** ॥ ಸರ್ವಸ್ಯ ಜಡಾಜಡಾತ್ಮಕಪ್ರಪಂಚಸ್ಯ। ತತ್ರ ಜೀವಜಡಾತ್ಮಕಸಕಲಪ್ರಪಂಚಸ್ಯ ಬ್ರಹ್ಮೈಕ್ಯಕಥಕವಾಕ್ಯೇ ಸರ್ವಶಬ್ದಸಂಕೋಚಾಯೋಗಾದಿತಿ ಭಾವಃ ॥೫೫೦॥

**ವಿವರಣೆ–** ಸರ್ವಂ ಖಲ್ವಿದಂ ಬ್ರಹ್ಮ ಎಂಬ ಶ್ರುತಿವಾಕ್ಯಕ್ಕೆ ಅದ್ವೈತವಾದಿಗಳು ಹೇಳಿದ ಅರ್ಥವಿಷಯದಲ್ಲಿ ಹಿಂದೆ ಹೇಳಿದ ಅನುಪಪತ್ತಿಗಿಂತ ಬೇರೆ ವಿಧದಿಂದ ಅನುಪಪತ್ತಿಯನ್ನು ತಿಳಿಸುತ್ತಾರೆ - ಸರ್ವಂ ಖಲ್ವಿದಂ ಬ್ರಹ್ಮ ಎಂಬ ಶ್ರುತಿವಾಕ್ಯದಲ್ಲಿ ಜೀವಜಡಾತ್ಮಕವಾದ ಸಕಲಪ್ರಪಂಚಕ್ಕೂ ಬ್ರಹ್ಮನಿಂದ ಐಕ್ಯವನ್ನು ಸ್ಪಷ್ಟವಾಗಿ ಹೇಳಿದೆ. ಮಾಯಾವಾದಿಯು ಮಾತ್ರ ಜಡಬ್ರಹ್ಮರಿಗೆ ಐಕ್ಯವನ್ನು ಹೇಳದೇ ಕೇವಲ ಜೀವಬ್ರಹ್ಮೈಕ್ಯವನ್ನು ಹೇಳುವುದರಲ್ಲಿ ಆಗ್ರಹಮಾಡುತ್ತಾನೆ. ಇದಕ್ಕೆ ಕಾರಣವೇನು? ಶ್ರುತಿಯಲ್ಲಿರುವ ಸರ್ವ ಎಂಬ ಶಬ್ದಕ್ಕೆ ಸಂಕುಚಿತವಾದ ಅರ್ಥವನ್ನು ಹೇಳುವುದು ಸರಿಯಲ್ಲ ಎಂದು ಅಭಿಪ್ರಾಯ.

ದೃಷ್ಟಸ್ತು ಜಡಭೇದೋಸ್ತು ಮೃಷಾ ಚ ವ್ಯಾವಹಾರಿಕಃ ॥ ೫೫೧ ॥

**ಅರ್ಥ–** ದೃಷ್ಟಃ = ಕಾಣಲ್ಪಡುವ, ಜಡಭೇದಃ ತು = ಜಡದಲ್ಲಿರುವ ಬ್ರಹ್ಮಭೇದವಾದರೂ, ವ್ಯಾವಹಾರಿಕಃ = ವ್ಯಾವಹಾರಿಕಸತ್ಯವು (ಪಾರಮಾರ್ಥಿಕವಾಗಿ) ಮೃಷಾ (ಇತಿ) ಚ = ಸುಳ್ಳಾಗಿಯೂ ಕೂಡ, ಅಸ್ತು = ಆಗಲಿ.

**ಅನುವಾದ–** ಪ್ರತ್ಯಕ್ಷವಾಗಿ ತೋರುವ ಜಡಭೇದವು ಮಿಥ್ಯೆಯು ಮತ್ತು ವ್ಯಾವಹಾರಿಕವೂ ಆಗಲಿ. (ಜಡಾಭೇದವೇ ಪಾರಮಾರ್ಥಿಕವಾಗಲಿ).

**ಭಾವವಿಲಾಸಿನೀ–** ನನು ಜಡಭೇದಸ್ಯ ಪ್ರತ್ಯಕ್ಷೇಣ ದರ್ಶನಾತ್ ಕಥಂ ತದಭೇದಃ ಶ್ರುತ್ಯಾಪಿ ವಕ್ತವ್ಯ ಇತಿ ಚೇತ್ತರ್ಹಿ ನಾಹಂ ಸರ್ವಜ್ಞೋ ನಾಹಂ ಸರ್ವಕರ್ತೇತಿ ಈಶ್ವರಪ್ರತಿಯೋಗಿಕಜೀವಭೇದಸ್ಯಾಪಿ ಪ್ರತ್ಯಕ್ಷೇಣ ದರ್ಶನಾತ್ ಜೀವಾಭೇದೋಽಪಿ ಕಥಂ ಕಥನೀಯಃ। ಯದಿ ಚ ಭೇದಸ್ಯ

**ವ್ಯಾವಹಾರಿಕತ್ವಮುವಲಂಬ್ಯ ಪರಮಾರ್ಥತೋ ಜೀವಾಭೇದಃ ಶ್ರುತ್ಯಾ ಕಥ್ಯತೇ ತರ್ಹಿ ಜಡೇಽಪಿ ಸೈವ ಗತಿರಸ್ತಿತ್ವತ್ಯಾಹ – ದೃಷ್ಟಸ್ತ್ವಿತಿ ॥ ದೃಷ್ಟೋ ಜಡಭೇದಸ್ತ್ವಿತಿ ಸಂಬಂಧಃ ॥ ೫೫೧ ॥**

**ವಿವರಣೆ–** ಜಡದಲ್ಲಿ ಬ್ರಹ್ಮಭೇದವು ಪ್ರತ್ಯಕ್ಷದಿಂದ ಕಾಣಸುವುದರಿಂದ ಶ್ರುತಿಯಿದ್ದರೂ ಐಕ್ಯವನ್ನು ಅವುಗಳಿಗೆ ಹೇಳಲು ಬರುವುದಿಲ್ಲ ಎಂದರೆ, ಜೀವನಿಗೂ ಕೂಡ ನಾನು ಸರ್ವಜ್ಞನಲ್ಲ, ನಾನು ಸರ್ವಕರ್ತನಲ್ಲ, ನಾನು ಸರ್ವೇಶ್ವರನಲ್ಲ ಎಂದು ಬ್ರಹ್ಮನಿಂದ ಭೇದವು ಕಾಣಸುತ್ತದೆ. ಹಾಗಾಗಿ ಜೀವಬ್ರಹ್ಮೈಕ್ಯವನ್ನಾದರೂ ಹೇಗೆ ಹೇಳಲು ಸಾಧ್ಯ ಎಂದು ಆಕ್ಷೇಪ ಸಹಜವಾಗಿ ಬರುತ್ತದೆ. ಹೀಗೆ ಆಕ್ಷೇಪ ಬಂದಾಗ, ಜೀವನಿಗೆ ಕಾಣಸುವ ಬ್ರಹ್ಮಭೇದವು ವ್ಯಾವಹಾರಿಕ. ಶ್ರುತಿಯಲ್ಲಿ ಪಾರಮಾರ್ಥಿಕವಾದ ಅಭೇದವನ್ನು ಹೇಳುತ್ತಿದ್ದಾರೆ. ವ್ಯಾವಹಾರಿಕ ಭೇದಕ್ಕೂ ಪಾರಮಾರ್ಥಿಕ ಅಭೇದಕ್ಕೂ ವಿರೋಧವಿಲ್ಲ ಎಂದು ಉತ್ತರಿಸಿದರೆ, ಇದೇ ರೀತಿಯಿಂದ ಉತ್ತರವನ್ನು ಜಡದಲ್ಲೂ ಹೇಳಲು ಬರುತ್ತದೆ ಎಂದು ಖಂಡಿಸುತ್ತಾರೆ. ಹಾಗಾದರೆ ಜಡಪದಾರ್ಥಗಳಲ್ಲಿ ಕಾಣುವ ಬ್ರಹ್ಮಭೇದವನ್ನೂ ವ್ಯಾವಹಾರಿಕ ಸತ್ಯವೆಂದೂ,ಪಾರಮಾರ್ಥಿಕವಾಗಿ ಸುಳ್ಳೇ ಆಗಿದೆ ಎಂದೂ ವೇದವು ಜಡಬ್ರಹ್ಮರಿಗೆ ಪಾರಮಾರ್ಥಿಕ ಅಭೇದವನ್ನು ಏಕೆ ಹೇಳಬಾರದು? ಆದ್ದರಿಂದ ಸರ್ವಂ ಖಲ್ವಿದಂ ಬ್ರಹ್ಮ ಎಂಬ ಶ್ರುತಿಗೆ ಜೀವಬ್ರಹ್ಮೈಕ್ಯಹೇಳುವುದರಲ್ಲಿಯೇ ತಾತ್ಪರ್ಯ ವಿರುವುದು, ಜಡಬ್ರಹ್ಮಾಭೇದಲ್ಲಿಲ್ಲ ಎಂದು ಅರ್ಥೈಸಿದ್ದು ಸರಿಯಲ್ಲ.

**ಯದಿ ತದ್ವ್ಯತಿರೇಕೇಣಾಸತ್ವಮರ್ಥೋ ಜಡೇ ತವ ।**
**ಚೇತನೇಪ್ಯಸ್ತು ನಿತ್ಯತ್ವಾನ್ನ ಚೇನ್ನಿತ್ಯಜಡೇಪಿ ನ ॥ ೫೫೨ ॥**

**ಅರ್ಥ–** ಯದಿ = ಒಂದು ಪಕ್ಷ, ತವ (ಮತೇ) = ನಿನ್ನ ಮತದಲ್ಲಿ , ಜಡೇ = ಜಡವಸ್ತುವಿನಲ್ಲಿ, ತದ್ವ್ಯತಿರೇಕೇಣ = ಬ್ರಹ್ಮನನ್ನು ಬಿಟ್ಟು, ಅಸತ್ವಂ = ಇಲ್ಲದಿರುವುದೇ ಮಿಥ್ಯಾತ್ವವು (ಇತಿ = ಹೀಗೆಂಬ) ಅರ್ಥಃ = ಅಭಿಪ್ರಾಯವು, ಉಚ್ಯತೇ = ಹೇಳಲ್ಪಟ್ಟರೆ, ತರ್ಹಿ = ಆ ಪಕ್ಷದಲ್ಲಿ ಚೇತನೇ ಅಪಿ = ಜೀವರಲ್ಲೂ ಕೂಡ ಬ್ರಹ್ಮನನ್ನು ಬಿಟ್ಟು ಇರುವುದಿಲ್ಲ, ಇತಿ = ಎಂಬ, ಅರ್ಥಃ = ಅಭಿಪ್ರಾಯವು, ಅಸ್ತು = ಆಗಲಿ. (ಚೇತನಸ್ಯ = ಜೀವಚೇತನಕ್ಕೆ) ನಿತ್ಯತ್ವಾತ್ = ನಿತ್ಯತ್ವವು ಇರುವುದರಿಂದ, (ತಥಾ = ಹಾಗೆ, ವಕ್ತುಂ = ಹೇಳಲು) ನ (ಶಕ್ಯತೇ) ಚೇತ್ = ಸಾಧ್ಯವಾಗುವುದಿಲ್ಲವಾದರೆ, ನಿತ್ಯಜಡೇ ಅಪಿ = ನಿತ್ಯವಾದ ಜಡದಲ್ಲಿಯೂ ಕೂಡ, ನಿತ್ಯತ್ವಾದೇವ = ನಿತ್ಯತ್ವವಿರುವುದರಿಂದಲೇ, (ತಥಾ ವಕ್ತುಂ = ಹಾಗೆ ಹೇಳಲು) ನ (ಶಕ್ಯತೇ) = ಸಾಧ್ಯವಾಗುವುದಿಲ್ಲ.

**ಅನುವಾದ–** ಜಡಕ್ಕೆ ಬ್ರಹ್ಮೈಕ್ಯವೆಂದರೆ ಬ್ರಹ್ಮನನ್ನು ಬಿಟ್ಟು ಇರುವುದಿಲ್ಲ ಎಂದು ಅರ್ಥ ಎಂದು ನೀನು ಅಂಗೀಕರಿಸುವುದಾದರೆ ಚೇತನಗಳಲ್ಲಿಯೂ ಅಂತಹ ಐಕ್ಯವನ್ನೇ ಅಂಗೀಕರಿಸು. ಚೇತನಗಳು ನಿತ್ಯವಾದ್ದರಿಂದ ಹಾಗೆ ಅಂಗೀಕರಿಸಲು

ಬರುವುದಿಲ್ಲವೆಂದು ಹೇಳುವುದಾದರೆ ಜಡಗಳಲ್ಲಿ ಕೆಲವು ನಿತ್ಯಜಡವೂ ಇರುವುದರಿಂದ ಅಲ್ಲಿಯೂ ಹಾಗೆ ಅಂಗೀಕರಿಸಲು ಸಾಧ್ಯವಿಲ್ಲ.

**ಭಾವವಿಲಾಸಿನೀ–** ಪುನರಪಿ ತಚ್ಛಂಕಾಮನೂದ್ಯ ಪ್ರತಿಬಂದ್ಯಾದೂಷಯತಿ – ಯದೀತಿ ॥ ತದ್ವ್ಯತಿರೇಕೇಣ ಬ್ರಹ್ಮವ್ಯತಿರೇಕೇಣ । ಬ್ರಹ್ಮೈವಾಸ್ತಿ ಬ್ರಹ್ಮವ್ಯತಿರೇಕೇಣ ಜಡಂ ತು ಸರ್ವಥಾ ನಾಸ್ತೀತಿ ಜಡಮಿಥ್ಯಾತ್ವಮಿತ್ಯರ್ಥಃ । ತರ್ಹಿ ಚೇತನೇಽಪ್ಯಸ್ತು ಸ ಏವಾರ್ಥೋ ಭವತ್ವಿತ್ಯರ್ಥಃ । ಸರ್ವಥಾ ಸಕೃಚ್ಛ್ರುತೈಕಶಬ್ದಸ್ಯಾರ್ಥದ್ವಯಕಲ್ಪನಾ ನ ಯುಕ್ತೇತಿ ಭಾವಃ । ನಿತ್ಯತ್ವಾತ್ ಚೇತನಸ್ಯ ಧ್ವಂಸಾಪ್ರತಿಯೋಗಿತ್ವಾತ್ । ನಚೇತ್ ಮಿಥ್ಯಾತ್ವಂ ನಚೇತ್ । ತರ್ಹಿ ನಿತ್ಯಜಡೇ ಪ್ರಕೃತಿವೇದಾದಾವಪಿ ಮಿಥ್ಯಾತ್ವಂ ನ ವಕ್ತುಂ ಶಕ್ಯಮಿತ್ಯರ್ಥಃ । ಉಪಲಕ್ಷಣಂ ಚೈತತ್ । ಅನಿತ್ಯಜಡೇಽಪಿ ಪ್ರಧ್ವಂಸಸ್ಯ ಪ್ರತಿಯೋಗಿಸತ್ತಾಪೂರ್ವಕತ್ವನಿಯಮೇನ ತ್ರೈಕಾಲಿಕ ಸತ್ತಾ- ನಿಷೇಧರೂಪಮಿಥ್ಯಾತ್ವಂ ನ ವಕ್ತುಂ ಶಕ್ಯಮ್ । ಅತಃ ಸರ್ವಸ್ಯ ತದಧೀನತ್ವಮೇವಾರ್ಥೋ ವಕ್ತವ್ಯ ಇತ್ಯಪಿ ದ್ರಷ್ಟವ್ಯಮ್ । ಕಿಂಚ ತದ್ವ್ಯತಿರೇಕೇಣಾಸತ್ತ್ವಮಿತಿ ವದತಾ ಪರೇಣಾಪಿ ಜಡಸ್ಯ ಬ್ರಹ್ಮಾತ್ಮನಾವಸ್ಥಾನಂ ನೈವೋಚ್ಯತೇ । ಅತಸ್ತದ್ವ್ಯತಿರೇಕೇಣೇತಿ ಪದವೈಯರ್ಥ್ಯಮ್ । ನಹಿ ಸರ್ವಥಾಽವಿದ್ಯಮಾನಸ್ಯ ಶಶವಿಷಾಣಸ್ಯ ಶಶವಿಷಾಣಂ ಬ್ರಹ್ಮೇತಿ ವಾಕ್ಯೇನ ಬ್ರಹ್ಮವ್ಯತಿರೇಕೇಣಾಸತ್ತ್ವಂ ಕೋಽಪಿಬ್ರೂತೇ । ಅತಸ್ತದ್ವ್ಯತಿರೇಕೇಣಾಸತ್ತ್ವಂ ಪರೇಣಾಪಿ ಜೀವ ಏವ ವಕ್ತುಂ ಶಕ್ಯತೇ ನ ಜಡೇ । ತಥಾ ಚ ಕಥಮುಭಯಸಾಧಾರಣ್ಯೇನಾರ್ಥಕಥನಮ್ । ಸಂಕೋಚೇ ಪದಾರ್ಥಸಂಕೋಚಾದ್ ವಿಭಕ್ತ್ಯರ್ಥಸಂಕೋಚಸ್ಯ ನ್ಯಾಯ್ಯತ್ವಾದಸ್ಮದುಕ್ತ ಏವ ವಾಕ್ಯಾರ್ಥ ಇತಿ ನೇದಂ ವಾಕ್ಯಂ ತವಾನುಕೂಲಮ್ ॥ ೫೫೨ ॥

**ವಿವರಣೆ–** ಪುನಃ ಮಾಯಾವಾದಿಯು ಹೇಳುವ ಆಕ್ಷೇಪವನ್ನು ಅನುವಾದ ಮಾಡಿ ಅದನ್ನು ಪ್ರತಿಬಂಧ್ಯುತ್ತರದಿಂದ ನಿರಾಕರಿಸುತ್ತಾರೆ. ಸರ್ವಂ ಖಲ್ವಿದಂ ಬ್ರಹ್ಮ ಎಂಬಲ್ಲಿ ಜಡವಿಷಯದಲ್ಲಿ ಈ ಜಡಪದಾರ್ಥಗಳೆಲ್ಲವೂ ಬ್ರಹ್ಮನನ್ನು ಬಿಟ್ಟು ಇರುವುದಿಲ್ಲ ಎಂಬುದಾಗಿ ಅರ್ಥ ಹೇಳಿದರೆ, ಅದೇ ರೀತಿ ಜೀವವಿಷಯದಲ್ಲಿಯೂ ಬ್ರಹ್ಮನನ್ನು ಬಿಟ್ಟು ಜೀವರು ಇರುವುದಿಲ್ಲ ಎಂದು ಅರ್ಥಮಾಡಿ. ಜಡದಲ್ಲಿ ಬ್ರಹ್ಮಾಭೇದಹೇಳದಿರುವಂತೆ ಜೀವರಲ್ಲೂ ಬ್ರಹ್ಮಾಭೇದವನ್ನು ಹೇಳಬೇಡಿ. ಜೀವರು ನಿತ್ಯರಾದ್ದರಿಂದ ಮಿಥ್ಯಾತ್ವವನ್ನು ಹೇಳಲು ಬರದಿದ್ದರೆ, ನಿತ್ಯವಾದ ಜಡಪದಾರ್ಥಗಳಲ್ಲಿಯೂ ಮಿಥ್ಯಾತ್ವವನ್ನು ಹೇಳಬಾರದು. ಅಲ್ಲಿಯೂ ಜೀವರಂತೆ ಬ್ರಹ್ಮೈಕ್ಯವನ್ನು ಹೇಳಬೇಕಾದೀತು.

ಈಶತ್ವಸರ್ವಕರ್ತೃತ್ವಸರ್ವಜ್ಞತ್ವಾದಯೋ ಗುಣಾಃ ।
ಅಲಭ್ಯಾಸ್ತಪಸಾಪ್ಯನ್ಯೈಃ ಸರ್ವಪ್ರಾಣಿಮನೋಹರಾಃ ।
ಜೀವೈಕ್ಯೇ ಖಲು ಸರ್ವೇಷಾಮೇಷಾಂ ನಾಶೋ ಭವಿಷ್ಯತಿ ॥ ೫೫೩ ॥

**ಅರ್ಥ–** ಸರ್ವಪ್ರಾಣಿಮನೋಹರಾಃ = ಎಲ್ಲ ಜೀವಿಗಳಿಗೂ ಆತ್ಯಾಕರ್ಷಕವಾದ, ಈಶತ್ವಸರ್ವಕರ್ತೃತ್ವಸರ್ವಜ್ಞತ್ವಾದಯಃ = ಸರ್ವಸ್ವಾಮಿತ್ವ, ಸರ್ವಕಾರ್ಯಕರ್ತೃತ್ವ,

ಸರ್ವಜ್ಞತ್ವ ಇವೇ ಮೊದಲಾದ (ಬ್ರಹ್ಮಣಃ = ಬ್ರಹ್ಮನಲ್ಲಿರುವ) ಗುಣಾಃ = ಗುಣಗಳು, ಅನ್ಯೈಃ = ಬ್ರಹ್ಮನಿಗಿಂತ ಬೇರೆಯವರಿಂದ, ತಪಸಾ ಅಪಿ = ತಪಸ್ಸಿನಿಂದಲೂ ಕೂಡ, ಅಲಭ್ಯಾಃ = ಹೊಂದಲು ಅಶಕ್ಯಗಳಾಗಿ, ವರ್ತಂತೇ = ಇವೆ. (ಬ್ರಹ್ಮಣಿ = ಬ್ರಹ್ಮನಲ್ಲಿ) ಜೀವೈಕ್ಯೇ (ಸತಿ) = ಜೀವೈಕ್ಯಬರುತ್ತಿರಲು, ಏಷಾಂ = ಹಿಂದೆ ಹೇಳಿದ, ಸರ್ವೇಷಾಂ = ಎಲ್ಲ ಗುಣಗಳಿಗೂ, ನಾಶಃ = ಧ್ವಂಸವು, ಭವಿಷ್ಯತಿ = ಆಗುವುದು.

**ಅನುವಾದ–** ಈಶತ್ವ, ಸರ್ವಕರ್ತೃತ್ವ, ಸರ್ವಜ್ಞತ್ವ ಮೊದಲಾದ ಗುಣಗಳು ಅನ್ಯರಿಂದ ತಪಸ್ಸಿನಿಂದಲೂ ಲಭ್ಯವಾಗುವುದಿಲ್ಲ. ಅಂತಹ ಗುಣಗಳು ಸರ್ವಪ್ರಾಣಿ ಮನೋಹರವಾಗಿವೆ. ಜೀವೈಕ್ಯವನ್ನು ಅಂಗೀಕರಿಸಿದರೆ ಈ ಎಲ್ಲಾ ಗುಣಗಳಿಗೂ ನಾಶವುಂಟಾಗುವುದು.

**ಭಾವವಿಲಾಸಿನೀ–** ದೋಷಾಂತರಂ ಚಾಹ – **ಈಶತ್ವೇತಿ** ॥ ಈಶತ್ವಂ ಸರ್ವೇಶ್ವರತ್ವಮ್ । ಏಷಾಂ ಸರ್ವೇಶ್ವರತ್ವಾದೀನಾಮ್ । ಅಲ್ಪೇಶೇನಾಲ್ಪಕರ್ತ್ರಾಽಲ್ಪಜ್ಞೇನ ಚ ಜೀವೇನೈಕ್ಯೇ ಸಾಕ್ಷಾತ್ತದ್ವಿರುದ್ಧಾಃ ಸರ್ವೇಶ್ವರತ್ವಾದಯೋ ಮಹಾಗುಣಾಸ್ತ್ಯಾಜ್ಯಾ ಇತಿ ಭಾವಃ ॥ ೫೫೩ ॥

**ವಿವರಣೆ–** ಜೀವರ ಜೊತೆಗೆ ಬ್ರಹ್ಮನಿಗೆ ಐಕ್ಯವನ್ನು ಹೇಳಿದರೆ ಬಹಳ ಅನರ್ಥವಿದೆ ಎಂದು ತಿಳಿಸುತ್ತಾರೆ. ಬ್ರಹ್ಮನಲ್ಲಿರುವ ಸರ್ವಸ್ವಾಮಿತ್ವ, ಸರ್ವಕರ್ತೃತ್ವ, ಸರ್ವಜ್ಞತ್ವ ಇವೇ ಮೊದಲಾದವುಗಳು ತನಗೂ ಬರಬೇಕೆಂದು ಅನೇಕರು ಹಾತೊರೆಯುತ್ತಾರೆ. ಹೀಗೆ ಎಲ್ಲರಿಗೂ ಇಷ್ಟವಾದರೂ ತಪಸ್ಸೇ ಮೊದಲಾದ ಯಾವ ಪುಣ್ಯಕೆಲಸಮಾಡಿದರೂ, ಹಾಗೂ ಯಾವುದೇ ತರಹದ ನೂರಾರು ಪ್ರಯತ್ನಮಾಡಿದರೂ ಲಭ್ಯವಾಗುವುದಿಲ್ಲ ಎಂಬುದು ಪ್ರಮಾಣಗಳಿಂದಲೂ, ಅನುಭವದಿಂದಲೂ ಸಿದ್ಧವಾದ ವಿಷಯ. ಹೀಗೆ ಜೀವನಲ್ಲಿ ಎಂದೂ ಬರದಿರುವಾಗ ಇಂತಹ ಜೀವರೊಂದಿಗೆ ಬ್ರಹ್ಮನಿಗೆ ಐಕ್ಯವನ್ನು ಹೇಳಿದರೆ ಬ್ರಹ್ಮನಲ್ಲೂ ಆ ಗುಣಗಳು ನಾಶವಾಗಿ ಜೀವನಲ್ಲಿರುವ ಅಸರ್ವಜ್ಞತ್ವ, ಅಲ್ಪಕರ್ತೃತ್ವ, ಅಲ್ಪಸ್ವಾಮಿತ್ವವೇ ಮೊದಲಾದ ಗುಣಗಳೇ ಬಂದೀತು. ಜೀವನಲ್ಲಿರುವ ಎಲ್ಲ ದುರ್ಗುಣಗಳನ್ನು ಬ್ರಹ್ಮನಿಗೆ ತಂದೊಡ್ಡುವುದು ಬ್ರಹ್ಮನಿಗೆ ಮಾಡುವ ದೊಡ್ಡ ಅಪಚಾರವಲ್ಲವೇ? ಇದಕ್ಕಿಂತ ದೊಡ್ಡದಾದ ಪಾಪಕರ ಕೆಲಸ ಬೇರೇನಿದೆ?

**ದುರ್ಘಟಂ ಘಟಯಂತೀ ತೇ ಮಾಯಾ ಚಿತ್ತ್ವಂ ಜಡೇ ದಿಶೇತ್ ।**
**ತೇನ ಚಿತ್ತ್ವಾದಿನಾಶಃ ಸ್ಯಾನ್ನ ಜಡೈಕ್ಯೇಪಿ ತೇ ಮತೇ ।**
**ತಚ್ಚೇದೈಕ್ಯಂ ಸುಖಗ್ರಾಹ್ಯಮಿದಂ ಕಸ್ಮಾನ್ನ ಗೃಹ್ಯತೇ ॥ ೫೫೪ ॥**

**ಅರ್ಥ–** ದುರ್ಘಟಂ = ಕೂಡಿಸಲು ಸಾಧ್ಯವಿಲ್ಲದ್ದನ್ನೂ, ಘಟಯಂತೀ = ಕೂಡಿಸುವ ಸಾಮರ್ಥ್ಯವುಳ್ಳ, ತೇ = ನಿನ್ನ ಮಾಯಾ = ಮಾಯೆಯು, ಜಡೇ (ಅಪಿ) = ಜಡದಲ್ಲಿಯೂ ಕೂಡ, ಚಿತ್ತ್ವಂ = ಚೈತನ್ಯವನ್ನು ದಿಶೇತ್ = ಕೊಡಲಿ. ತೇನ = ಹೀಗೆ ಜಡದಲ್ಲಿ ಚೈತನ್ಯವನ್ನು

ಕೊಟ್ಟದ್ದರಿಂದ, ತೇ = ನಿನ್ನ ಮತೇ = ಸಿದ್ಧಾಂತದಲ್ಲಿ ಜಡೈಕ್ಯೇ (ಅಪಿ) = (ಬ್ರಹ್ಮನಿಗೆ) ಜಡದಿಂದ ಅಭೇದವು ಬಂದರೂ ಕೂಡ, (ಬ್ರಹ್ಮಣಿ = ಬ್ರಹ್ಮನಲ್ಲಿರುವ) ಚಿತ್ತ್ವಾದಿನಾಶಃ = ಚೈತನ್ಯದ ನಾಶವು, ನ ಸ್ಯಾತ್ = ಉಂಟಾಗಲಾರದಷ್ಟೇ, ತತ್ ಐಕ್ಯಂ= ಆ ಜೀವೈಕ್ಯವು, ಸುಖಗ್ರಾಹ್ಯಂ ಚೇತ್ = (ಯಾವುದೇ ತೊಂದರೆಯೂ ಇಲ್ಲದಂತೆ) ಸುಖವಾಗಿ ಸ್ವೀಕರಿಸಲು ಯೋಗ್ಯವಾಗುವುದಾದರೆ, ಇದಂ = ಈ ಯಾವ, ಐಕ್ಯಂ = ಜಡೈಕ್ಯವು, ಕಸ್ಮಾತ್ = ಯಾವಕಾರಣದಿಂದ, ನ ಗೃಹ್ಯತೇ = ಸ್ವೀಕರಿಸಲ್ಪಡುವುದಿಲ್ಲ?

**ಅನುವಾದ–** ದುರ್ಘಟವಾದ ವಸ್ತುವನ್ನು ಘಟನೆ ಮಾಡುವ ನಿನ್ನ ಅವಿದ್ಯೆಯು ಜಡಕ್ಕೂ ಚಿತ್ತ್ವವನ್ನು ಉಂಟುಮಾಡಬಹುದು. ಆದ್ದರಿಂದ ನಿನ್ನ ಮತದಲ್ಲಿ ಜಡೈಕ್ಯವನ್ನು ಒಪ್ಪಿದರೂ ಚಿತ್ತ್ವಾದಿ ಧರ್ಮದ ನಾಶ ಪ್ರಸಂಗವಿಲ್ಲ. ಆ ಕಾರಣದಿಂದ ಜೀವೈಕ್ಯವನ್ನು ಸುಲಭವಾಗಿ ಒಪ್ಪಬಹುದಾದರೆ ಜಡೈಕ್ಯವನ್ನು ಏಕೆ ಒಪ್ಪುವುದಿಲ್ಲ?

**ಭಾವವಿಲಾಸಿನೀ–** ನನು ಜಡೇಽಲ್ಪೇಶ್ವರತ್ವಾದೇರಭಾವೇನ ಸರ್ವೇಶ್ವರತ್ವಾದಿಮೋಚಕಾಭಾವೇಽಪಿ ಜಡಸ್ಯಾಚೇತನತ್ವೇನ ತದ್ವಿರುದ್ಧಚಿತ್ತ್ವಂ ಬ್ರಹ್ಮಣಿ ನಷ್ಟಂ ಸ್ಯಾದಿತ್ಯತ ಆಹ – **ದುರ್ಘಟಮಿತಿ** ॥ ಏಕಜಾತೀಯತ್ವಲೋಭೇನ ಜಡೇ ಚಿತ್ತ್ವಂ ದಿಶೇದಿತಿ ಭಾವಃ । ತೇನ ಕಾರಣೇನ । ತತ್‌ಜೀವೈಕ್ಯಮ್ । ಇದಂ ಜಡೈಕ್ಯಮ್ ॥ ೫೫೪ ॥

**ವಿವರಣೆ–** ನೀವ ಹೇಳುವ ಜೀವೈಕ್ಯಕ್ಕಿಂತಲೂ ಬ್ರಹ್ಮನಿಗೆ ಜಡೈಕ್ಯವನ್ನು ಹೇಳುವದೇ ಶ್ರೇಷ್ಠ ಏಕೆಂದರೆ ಇದರಿಂದ ಬ್ರಹ್ಮನಲ್ಲಿ ಹಾನಿ ಕಡಿಮೆ ಎಂದು ಸಾರುತ್ತಾರೆ. ಬ್ರಹ್ಮನಿಗೆ ಜೀವನಿಂದ ಐಕ್ಯವನ್ನು ಹೇಳಿದರೆ ಬ್ರಹ್ಮನಲ್ಲಿರುವ ಸಕಲಗುಣಗಳೂ ನಾಶವಾಗುತ್ತದೆ ಎಂಬ ಅನರ್ಥವಿದ್ದರೂ ಜಡೈಕ್ಯವನ್ನು ಹೇಳಿದರೆ ಅಂತಹ ಅನರ್ಥಕ್ಕೆ ಅವಕಾಶವಿಲ್ಲ. ಏಕೆಂದರೆ ಬ್ರಹ್ಮನಿಗೆ ಜಡದಿಂದ ಐಕ್ಯವನ್ನು ಹೇಳಿದಾಗ ಆಗುವ ದೊಡ್ಡ ಅನರ್ಥವೆಂದರೆ ಬ್ರಹ್ಮನಲ್ಲಿರುವ ಚೈತನ್ಯದ ನಾಶ. ಇದಕ್ಕೂ ಅವಕಾಶವಿಲ್ಲ. ಹೇಗೆಂದರೆ ನಿಮ್ಮ ಮತದಲ್ಲಿ ಹೇಳುವ ಮಾಯೆಯು ಅಘಟಿತಘಟನಾಸಾಮರ್ಥ್ಯವುಳ್ಳದ್ದು. ಅಂತಹ ಮಾಯೆಯು ತನ್ನ ಸಾಮರ್ಥ್ಯದಿಂದ ಜಡದಲ್ಲಿಯೂ ಚೈತನ್ಯವನ್ನು ತಂದು ಕೊಡಲಿ. ಹೀಗೆ ಮಾಡಿದಾಗ ಜಡದಿಂದ ಬ್ರಹ್ಮನಿಗೆ ಐಕ್ಯವನ್ನು ಹೇಳಿದರೂ ಅವನಲ್ಲಿರುವ ಚೈತನ್ಯಕ್ಕೆ ನಾಶವಿಲ್ಲವೆಂದಾಗುವುದು. ಹೀಗೆ ಯಾವ ಅನರ್ಥವೂ ಇಲ್ಲದೆ ಸುಖವಾಗಿ ಸ್ವೀಕರಿಸಲು ಯೋಗ್ಯವಾದ ಜಡೈಕ್ಯವನ್ನು ನೀನು ಏಕೆ ಹೇಳುವುದಿಲ್ಲ? ಹೇಳು!

**ಅನರ್ಘರತ್ನಚೋರಸ್ತು ರಕ್ಷ್ಯೋ ಮೃದ್ಭಾಂಡತಸ್ಕರಃ ।**
**ಶಿಕ್ಷ್ಯಃ ಕಿಲ ಕೃಪಾಲುಸ್ತು ದೀನೇಷು ಕುರುತೇ ದಯಾಂ ॥ ೫೫೫ ॥**

**ಅರ್ಥ–** ಅನರ್ಘರತ್ನಚೋರಃ ತು = ಬೆಲೆಬಾಳುವ ರತ್ನಗಳನ್ನು ಅಪಹರಿಸಿದ ಕಳ್ಳನಾದರೂ, (ತ್ವಯಾ = ನಿನ್ನಿಂದ) ರಕ್ಷ್ಯಃ = ರಕ್ಷಿಸಲ್ಪಡುವವನಾಗಿ, (ಭವತಿ = ಆಗುತ್ತಾನೆ.)

ಮೃದ್ಭಾಂಡತಸ್ಕರಃ ತು = ಮಣ್ಣಿನಪಾತ್ರೆಯನ್ನು ಕದ್ದವನು. (ತ್ವಯಾ = ನಿನ್ನಿಂದ) ಶಿಕ್ಷ್ಯಃ = ಶಿಕ್ಷಿಸಲ್ಪಡುವವನು ಭವತಿ ಕಿಲ = ಆಗುತ್ತಾನಷ್ಟೇ? ಕೃಪಾಲುಃ ತು = ಕರುಣಾಳುವಾದರೂ, ದೀನೇಷು = ದರಿದ್ರರಲ್ಲಿ ದಯಾಂ = ದಯೆಯನ್ನು ಕುರುತೇ = ಮಾಡುತ್ತಾನೆ.

**ಅನುವಾದ–** ಅನರ್ಘವಾದ ರತ್ನಗಳನ್ನು ಕದಿಯುವ ಕಳ್ಳನು ರಕ್ಷಿಸಲ್ಪಡಬೇಕು. ಮಣ್ಣಿನ ಮಡಿಕೆಯನ್ನು ಕದಿಯುವ ಕಳ್ಳನು ಶಿಕ್ಷಿಸಲ್ಪಡಬೇಕಷ್ಟೇ! ದಯಾಳುವಾದರೋ ದೀನರಲ್ಲೇ ದಯೆಯನ್ನು ತೋರಿಸುವನಷ್ಟೇ!

**ಭಾವವಿಲಾಸಿನೀ–** ನನು ಯದ್ಯಪಿ ಜಡಸ್ಯ ಚಿತ್ತ್ವಂ ಭವದುಕ್ತಯುಕ್ತ್ಯಾ ಮನ್ಮತೇ ಘಟತೇ ತಥಾಪಿ ಮಯಾ ತನ್ನಾಂಗೀಕ್ರಿಯತೇ । ಅತೋ ಜಡೈಕ್ಯೇ ಚಿತ್ತ್ವನಾಶಃ ಸ್ಯಾತ್ । ಇತಿ ಚೇತ್ ಸತ್ಯಮ್ । ತಥಾಪಿ ಜೀವಸಾಧಾರಣಚಿತ್ತ್ವಮಾತ್ರನಾಶಾನ್ನ ಮಹಾಹಾನಿಃ । ಜೀವೈಕ್ಯೇ ತು ಸರ್ವೇಶ್ವರತ್ವಾದಿ ದಿವ್ಯಗುಣನಾಶಾತ್ತದೇವ ನಾಂಗೀಕಾರ್ಯಮಿತ್ಯತ್ರ ದೃಷ್ಟಾಂತಮಾಹ – ಅನರ್ಘ್ಯೇತಿ ॥ ಜಡತ್ವೇನಾತಿ- ಮೂಢತಯಾ ಕೃಪಾಪಾತ್ರತ್ವಾಪಸಂಸಾರಾದಿ- ದೋಷದೂರತ್ವಾಚ್ಚ ಜಡೈಕ್ಯಮೇವಾಂಗೀಕುರ್ಯಾದಿತಿ ಭಾವಃ ॥ ೫೫೫ ॥

**ವಿವರಣೆ–** ವಸ್ತುತಃ ದ್ವೈತಿಗಳಾದ ನೀವು ಹೇಳಿದ ಯುಕ್ತಿಯಿಂದ ಅದ್ವೈತಮತದಲ್ಲಿ ಜಡದಲ್ಲಿ ಚೈತನ್ಯವನ್ನು ಅಂಗೀಕರಿಸಲು ಬರಬಹುದು. ಆದರೆ ಅದ್ವೈತಿಗಳಾದ ನಾವು ಜಡದಲ್ಲಿ ಚೈತನ್ಯವನ್ನು ಒಪ್ಪುವುದಿಲ್ಲ, ಆದ್ದರಿಂದ ಜಡದ ಅಭೇದವನ್ನು ಬ್ರಹ್ಮನಿಗೆ ಹೇಳಿದರೆ ಬ್ರಹ್ಮನಲ್ಲಿರುವ ಚಿತ್ತ್ವಕ್ಕೆ ಹಾನಿಯಾಗುತ್ತದೆ ಎಂದು ಶಂಕಿಸಿದರೆ ನೀವು ಹೇಳುವುದು ಸತ್ಯ. ಆದರೂ ಜಡೈಕ್ಯವನ್ನು ಹೇಳಿದರೆ ಜೀವಸಾಧಾರಣವಾದ ಚೈತನ್ಯಕ್ಕೆ ಮಾತ್ರಹಾನಿಯಾಗುವುದು. ಜೀವೈಕ್ಯವನ್ನು ಹೇಳಿದರೆ ರತ್ನದಂತಿರುವ ಸರ್ವಜ್ಞತ್ವಾದಿ ಮಹಾಗುಣಗಳೇ ನಾಶವಾಗುವುದು ಎಂಬುದನ್ನು ದೃಷ್ಟಾಂತಸಹಿತವಾಗಿ ಹೇಳುತ್ತಾರೆ. ಜೀವೈಕ್ಯವು ಬ್ರಹ್ಮನಲ್ಲಿರುವ ರತ್ನಗಳಂತಿರುವ ಸರ್ವಜ್ಞತ್ವಾದಿ ಬಹಳ ಗುಣಗಳನ್ನೇ ಅಪಹರಿಸುತ್ತದೆ. ಆದ್ದರಿಂದ ಆ ಜೀವಕ್ಯೈವು ಬಹುಬೆಳೆಬಾಳುವ ರತ್ನಗಳನ್ನು ಅಪಹರಿಸಿದ ಮಹಾಕಳ್ಳನಂತಿದೆ. ಹಾಗಿದ್ದರೂ ಮಾಯಾವಾದಿಯಾದ ನೀನು ಮಾತ್ರ ಅದನ್ನೇ ರಕ್ಷಿಸುತ್ತೀಯೆ. ಜಡೈಕ್ಯವು ಮಾತ್ರ ಅವನಲ್ಲಿರುವ ಚೈತನ್ಯವನ್ನು ಮಾತ್ರ ಅಪಹರಿಸಿ, ಮಣ್ಣಿನ ಪಾತ್ರೆಯನ್ನು ಕದ್ದ ದೀನನಂತೆ ಇದೆ. ಆದರೂ ನೀನು ಮಾತ್ರ ಅದನ್ನು ದೂರವಿಟ್ಟು ಶಿಕ್ಷಿಸುತ್ತೀಯೆ. ಇದು ಯಾವ ನ್ಯಾಯ? ಲೋಕದಲ್ಲಿ ಕರುಣೆವುಳ್ಳವನು ದರಿದ್ರರಲ್ಲೇ ದಯೆ ತೋರಿಸುತ್ತಾನೆ. ನೀನು ಮಾತ್ರ ಕಠೋರನಂತೆ ದೀನನಂತಿರುವ ಜಡೈಕ್ಯದಲ್ಲಿ ದಯೆ ತೋರದೆ ಮಹಾಚೋರನಂತಿರುವ ಜೀವೈಕ್ಯದಲ್ಲಿ ದಯೆಯನ್ನು ತೋರುವಿಯಲ್ಲವೇ?

ಜಡಸ್ಯಾನಂದಮಯತಾ ಜಡಂ ಜನ್ಮಾದಿಕಾರಣಂ ।
ಜಡಾದಜ್ಞಾನನಾಶಸ್ತೇ ದುರ್ಘಟಂ ಘಟಯೇಜ್ಜಡಂ ॥ ೫೫೬ ॥

**ಅರ್ಥ–** ತೇ (ಮತೇ) = ನಿನ್ನ ಸಿದ್ಧಾಂತದಲ್ಲಿ, ಜಡಸ್ಯ = ಜಡವಾದ ಕೋಶಕ್ಕೆ, ಆನಂದಮಯತಾ = ಆನಂದಪೂರ್ಣತೆಯು (ಅಸ್ತಿ = ಇದೆ.) ಜಡಂ = ಜಡವಾದ ಅಜ್ಞಾನವೇ, ಜನ್ಮಾದಿಕಾರಣಂ = ಜಗತ್ಸೃಷ್ಟ್ಯಾದಿಕಾರಣವು, (ಭವತಿ = ಆಗುತ್ತದೆ.). ಜಡಾತ್ = ಜಡವಾದ ಚರಮಜ್ಞಾನದಿಂದಲೇ, ಅಜ್ಞಾನನಾಶಃ = ಅಜ್ಞಾನದ ನಾಶವು, (ಭವತಿ = ಆಗುತ್ತದೆ.). ಜಡಂ = ಜಡವಾದ ಮಾಯೆಯು, ದುರ್ಘಟಂ = ಕೂಡಿಸಲು ಬರದೇ ಇದ್ದುದನ್ನು ಘಟಯೇತ್ = ಕೂಡಿಸುತ್ತದೆ.

**ಅನುವಾದ–** ನಿನ್ನ ಮತದಲ್ಲಿ ಜಡಕ್ಕೆ ಆನಂದಮಯತ್ವವಿದೆ. ಜಡವೇ ಜನ್ಮಾದಿಕಾರಣವಾಗಿದೆ. ಜಡವಾದ ಚರಮಜ್ಞಾನವೇ ಅಜ್ಞಾನನಾಶವನ್ನು ಮಾಡುತ್ತದೆ. ಹೀಗೆ ದುರ್ಘಟವಾದ ಎಲ್ಲವನ್ನೂ ಜಡವೇ ಘಟನೆ ಮಾಡುವುದಷ್ಟೇ?

**ಭಾವವಿಲಾಸಿನೀ–** ಕಿಂಚ ತವ ಮತೇ ಜಡೈಕ್ಯೇ ಬ್ರಹ್ಮಣ್ಯಪೇಕ್ಷಿತಮಹಾಗುಣಸಿದ್ಧಿರೇವಸ್ಯಾದಿತ್ಯಾಹ – **ಜಡಸ್ಯೇತಿ** ॥ ಜಡಸ್ಯ ಕೋಶಸ್ಯ । ಜಡಮಜ್ಞಾನಮ್ । ಜನ್ಮಾದಿಕಾರಣತ್ವಸ್ಯ ತಟಸ್ಥಲಕ್ಷಣತ್ವಾಂಗೀಕಾರಾತ್ । ತೇ ಮತೇ । ಜಡಾತ್ ಅಂತಃಕರಣವೃತ್ತಿರೂಪಜ್ಞಾನಾತ್ । ಸ್ವರೂಪಜ್ಞಾನಸ್ಯಾಜ್ಞಾನಾವಿರೋಧಿತ್ವಾಂಗೀಕಾರಾತ್ । ಜಡೈಕ್ಯೇ ಅಂತಃಕರಣವೃತ್ತಿರೂಪಜ್ಞಾನೈಕ್ಯಸ್ಯಾಪಿ ಲಾಭಾತ್ ಅಜ್ಞಾನಾಖ್ಯಬಂಧನಾಶಕತ್ವಮಹಾಮಹಿಮಾ ಬ್ರಹ್ಮಣಿಸೇತ್ಸ್ಯತೀತಿ ಭಾವಃ । ಜಡಮಜ್ಞಾನಂ ದುರ್ಘಟಂ ಘಟಯೇತ್ । ತಥಾ ಚ ಜಡೈಕ್ಯೇ ದುರ್ಘಟಘಟಕತ್ವಾಖ್ಯಮಹಾಮಹಿಮಾಪಿ ಸಿದ್ಧ್ಯತೀತಿ ಭಾವಃ ॥ ೫೫೬ ॥

**ವಿವರಣೆ–** ಅದ್ವೈತಿಗಳ ಸಿದ್ಧಾಂತದ ರೀತಿಯಿಂದ ಬ್ರಹ್ಮನಿಗೆ ಜಡೈಕ್ಯವನ್ನು ಹೇಳಿದರೆ ಬ್ರಹ್ಮನಲ್ಲಿ ಅಪೇಕ್ಷಿತವಾದ ಮಹಾಗುಣಗಳು ಸಿದ್ಧಿಸುತ್ತವೆ ಎಂದು ತಿಳಿಸುತ್ತಾರೆ. ಅದ್ವೈತಮತದಲ್ಲಿ ಜಡವಾದ ಆನಂದಮಯಕೋಶಕ್ಕೆ ಆನಂದರೂಪತೆಯನ್ನು ಅಂಗೀಕರಿಸಿದ್ದಾರೆ. ಜಗತ್ಸೃಷ್ಟಿಕಾರಣತ್ವನ್ನು ಕೂಡ ಜಡವಾದ ಅಜ್ಞಾನಕ್ಕೆ ಒಪ್ಪಿದ್ದಾರೆ. ಹಾಗೆಯೇ ವೇದಾಂತಾಧ್ಯಯನಾದಿಗಳಿಂದ ಬಂದ ಜಡಭೂತವಾದ ಅಂತಃಕರಣಪರಿಣಾಮವಾದ ಚರಮಜ್ಞಾನಕ್ಕೆ ಅಜ್ಞಾನನಾಶಕತ್ವ ಇರುವುದು. ಅದರಂತೆ ಜಡವಾದ ಮಾಯೆಗೇ ಅಘಟಿತಘಟನಾಸಾಮರ್ಥ್ಯವಿರುವುದು. ಹೀಗೆ ಅನೇಕ ಮಹಾಗುಣಗಳನ್ನು ಜಡಕ್ಕೇ ಒಪ್ಪಿರುವುದರಿಂದ ಇಂತಹ ಜಡದ ಐಕ್ಯವನ್ನು ಬ್ರಹ್ಮನಿಗೆ ಹೇಳಿದರೆ ಆಗ ಬ್ರಹ್ಮನಲ್ಲಿಯೂ ಆನಂದರೂಪತೆ, ಜಗತ್‌ಸೃಷ್ಟಿಕಾರಣತ್ವ, ಅಜ್ಞಾನನಾಶಕತ್ವ, ಅಘಟಿತಘಟನಾಸಾಮರ್ಥ್ಯ ಇವೇ ಮೊದಲಾದ ಮಹಾಗುಣಗಳು ಸಿದ್ಧಿಸುವುದರಿಂದ ಜೀವೈಕ್ಯಕ್ಕಿಂತ ಜಡೈಕ್ಯವೇ ಶ್ರೇಷ್ಠವಾಗಿರುವುದರಿಂದ ಅದನ್ನೇ ನೀವು ಏಕೆ ಅಂಗೀಕರಿಸುವುದಿಲ್ಲ?

ಜ್ಞಾನತ್ವರೂಪಂ ಚಿತ್ತ್ವಂ ಚ ವಕ್ತ್ಯಾಮೋನುಪದಂ ಜಡೇ ।
ದುಷ್ಕರಂ ತಸ್ಕರತ್ವಂ ತದಸ್ಮಿನ್ ಬ್ರಹ್ಮಯಶಸ್ಕರೇ ॥ ೫೫೭ ॥

**ಅರ್ಥ–** ಜಡೇ ಚ = ಜಡದಲ್ಲಿಯೂ ಕೂಡ, ಜ್ಞಾನತ್ವರೂಪಂ = ಜ್ಞಾನತ್ವರೂಪವಾದ, ಚಿತ್ತ್ವಂ = ಚೈತನ್ಯವನ್ನು ಅನುಪದಂ = ಅತಿಸಮೀಪದಲ್ಲಿಯೇ (೫೬೩ - ಜ್ಞಾನರೂಪ ಮನಸ್ತತ್ವೇನ ಎಂಬ ಶ್ಲೋಕದಲ್ಲಿ) ವಕ್ಷ್ಯಾಮಃ = ಹೇಳುತ್ತೇವೆ. ತತ್ = ಆದ್ದರಿಂದ, ಬ್ರಹ್ಮಯಶಸ್ಕರೇ = ಬ್ರಹ್ಮನಲ್ಲಿ (ಮಹಾಗುಣಪ್ರಾಪ್ತಿರೂಪವಾದ) ಯಶಸ್ಸನ್ನು ಉಂಟುಮಾಡುವ, ಅಸ್ಮಿನ್ = ಈ ಜಡೈಕ್ಯದಲ್ಲಿ, ತಸ್ಕರತ್ವಂ = ಚೈತನ್ಯದ ಕಳ್ಳತನವು, ದುಷ್ಕರಂ = ಸಾಧಿಸಲು ಕಷ್ಟಸಾಧ್ಯವಾಗಿ, (ಭವತಿ = ಆಗುತ್ತದೆ.)

**ಅನುವಾದ–** ನಾವು ಮುಂದಿನ ಶ್ಲೋಕಗಳಲ್ಲಿಯೇ ಜಡಕ್ಕೂ ಸಹ ಜ್ಞಾನತ್ವರೂಪವಾದ ಚಿತ್ತ್ವವನ್ನು ಹೇಳುವವರಿದ್ದೇವೆ. ಆದ್ದರಿಂದ ಬ್ರಹ್ಮನಿಗೆ ಕೀರ್ತಿಯನ್ನೇ ಸಂಪಾದಿಸಿಕೊಡುವ ಈ ಜಡೈಕ್ಯದಲ್ಲಿ ತಸ್ಕರತ್ವವನ್ನು ಉಪಪಾದನೆ ಮಾಡುವುದು ದುಸ್ಸಾಧ್ಯವಾದುದು.

**ಭಾವವಿಲಾಸಿನೀ–** ಪೂರ್ವಂ ಜಡೈಕ್ಯಸ್ಯ ಚಿತ್ತ್ವಮಾತ್ರನಾಶಕತ್ವಾನ್ನ್ಯೂದ್ಬ್ರಾಂಡ ತಸ್ಕರತ್ವ ಮುಕ್ತಮ್ । ಅಧುನಾಂತಃಕರಣರೂಪಜಡಾಭೇದೇಽಜ್ಞಾನತ್ವರೂಪಚಿತ್ತ್ವಸ್ಯಾಪಿ ತನ್ಮತರೀತ್ಯೈವ ಲಾಭಾತ್ ತಸ್ಕರತ್ವೈವ ನೇತ್ಯಾಹ – **ಜ್ಞಾನತ್ವರೂಪಚಿತ್ತ್ವಂ ಚೇತಿ** ॥ ಅನುಪದಂ ಶ್ಲೋಕಪಂಚಕಾದುಪರಿ । ತತ್ತಸ್ಮಾತ್ ಜ್ಞಾನತ್ವರೂಪಚಿತ್ತ್ವಸ್ಯಹಾನೇಸ್ತಸ್ಕರತ್ವಂ ದುಷ್ಕರಮಿತಿ ಸಂಬಂಧಃ । ಅಸ್ಮಿನ್ ಜಡೈಕ್ಯೇ । ಬ್ರಹ್ಮಯಶಸ್ಕರೇ ಅಘಟಿತಘಟಕತ್ವಾದಿ ಪ್ರಾಗುಕ್ತಮಹಾಗುಣಹೇತುಭೂತ ಇತ್ಯರ್ಥಃ ॥೫೫೭॥

**ವಿವರಣೆ–** ಈ ಹಿಂದೆ ಜಡೈಕ್ಯಕ್ಕೆ ಚೈತನ್ಯತಸ್ಕರತ್ವವನ್ನು ಅಂಗೀಕರಿಸಿ ಉತ್ತರಿಸಿದರು. ಈಗ ಅಂತಃಕರಣರೂಪವಾದ ಜಡದಿಂದ ಅಭೇದವನ್ನು ಹೇಳಿದರೆ ಜ್ಞಾನತ್ವರೂಪವಾದ ಚಿತ್ತ್ವವೇ ಬಂದು ಜಡೈಕ್ಯಕ್ಕೆ ತಸ್ಕರತ್ವವೇ ಇಲ್ಲವೆನ್ನುತ್ತಾರೆ. ಜಡಭೂತವಾದ ಮನಸ್ತತ್ವದಲ್ಲಿ ಜ್ಞಾನರೂಪವಾದ ಚಿತ್ತ್ವವನ್ನು ನಾವು 563ನೇ ಶ್ಲೋಕದಲ್ಲಿ ಹೇಳುತ್ತೇವೆ. ಆದ್ದರಿಂದ ಜಡೈಕ್ಯವನ್ನು ಹೇಳಿದಾಗ ಬ್ರಹ್ಮನಲ್ಲಿ ಚೈತನ್ಯದ ಹಾನಿಯಾಗುವುದಿಲ್ಲ. ಆದ್ದರಿಂದ ಬ್ರಹ್ಮನಲ್ಲಿ ಮಹಾಗುಣಗಳು ಬರಲು ಕಾರಣವಾದ ಜಡೈಕ್ಯವನ್ನು ಹೇಳಿದರೆ ಚಿತ್ತ್ವವು ಬರುತ್ತದೆಯೇ ಹೊರತು ಅದರ ಹಾನಿಯಾಗುವುದಿಲ್ಲ. ಹೀಗಾಗಿ ಜಡೈಕ್ಯದಲ್ಲಿ ತಸ್ಕರತ್ವವೂ ಕೂಡ ಬರಲು ಸಾಧ್ಯವಿಲ್ಲ. ಆದ್ದರಿಂದ ಜೀವೈಕ್ಯವನ್ನು ಬ್ರಹ್ಮನಿಗೆ ಹೇಳುವ ಬದಲು ಜಡೈಕ್ಯವನ್ನು ಹೇಳುವುದೇ ನಿನಗೆ ಶ್ರೇಷ್ಠವಾಗುವುದು.

**ಮಾಯಾಶಕ್ತ್ಯಾ ಜಡಸ್ಯಾಪಿ ಸಾರ್ವಜ್ಞಾದಿಪ್ರದಾನತಃ ।**
**ಐಕ್ಯೇ ತು ನ ಜಡಾತ್ಮೈಕ್ಯಂ ತಸ್ಕರಃ ಸ್ಯಾದ್ಧಿ ಕಸ್ಯಚಿತ್ ॥ ೫೫೮ ॥**

**ಅರ್ಥ–** ಮಾಯಾಶಕ್ತ್ಯಾ = ಮಾಯೆಯ ಅಘಟಿತಘಟನಾಶಕ್ತಿಯಿಂದ, ಸಾರ್ವಜ್ಞಾದಿಪ್ರದಾನತಃ = ಸಾರ್ವಜ್ಞಾದಿಗಳು ಕೊಡಲ್ಪಟ್ಟದ್ದರಿಂದ, ಜಡಸ್ಯ = ಜಡದ, ಐಕ್ಯೇ (ಸತಿ) ಅಪಿ ತು = ಐಕ್ಯವನ್ನು ಒಪ್ಪಿದರೂ ಕೂಡ, ಜಡಾತ್ಮೈಕ್ಯಂ = ಜಡಬ್ರಹ್ಮೈಕ್ಯವು, (ಬ್ರಹ್ಮಣಿ =

ಬ್ರಹ್ಮನಲ್ಲಿ) ಕಸ್ಯಚಿತ್ (ಧರ್ಮಸ್ಯ) = ಯಾವುದೇ ಧರ್ಮದ, ತಸ್ಕರಃ = ಅಪಹಾರಕವಾಗಿ, ನ ಸ್ಯಾತ್ ಹಿ = ಆಗುವುದಿಲ್ಲವಷ್ಟೇ.

**ಅನುವಾದ–** ಜಡದಲ್ಲಿ ಸಾರ್ವಜ್ಞ್ಯವು ಇಲ್ಲದಿದ್ದರೂ ಮಾಯೆಯು ತನ್ನಲ್ಲಿರುವ ಅಘಟಿತಘಟನಾಶಕ್ತಿಯಿಂದ ಅದಕ್ಕೆ ಸಾರ್ವಜ್ಞ್ಯವನ್ನು ಕೊಡುತ್ತದೆ. ಹೀಗಾಗಿ ಜಡಕ್ಕೆ ಬ್ರಹ್ಮನಿಂದ ಅಭೇದಬಂದಾಗಲೂ ಕೂಡ ಅವನಲ್ಲಿರುವ ಸಾರ್ವಜ್ಞ್ಯಕ್ಕೆ ಭಂಗ ಬರುವುದಿಲ್ಲ. ಏವಂ ಚ ಜಡಬ್ರಹ್ಮೈಕ್ಯವು ಬ್ರಹ್ಮನಲ್ಲಿರುವ ಯಾವುದೊಂದು ಗುಣವನ್ನೂ ಅಪಹರಿಸುವುದಿಲ್ಲ.

**ಭಾವವಿಲಾಸಿನೀ–** ನನು ಜಡಸ್ಯ ಸಾರ್ವಜ್ಞಾಭಾವಾತ್ ಕಥಂ ಬ್ರಹ್ಮೈಕ್ಯಮಿತ್ಯತ ಆಹ – **ಮಾಯಾಶಕ್ತ್ಯೇತಿ** ॥ ಅಘಟಿತಘಟಕಮಾಯಾಶಕ್ತ್ಯೇತ್ಯರ್ಥಃ । ಉಪಲಕ್ಷಣಂ ಚೈತತ್ । ಬ್ರಹ್ಮಣೋಽಪಿ ಸಾರ್ವಜ್ಞಾದೇಃ ಪರೇಣ ಮಾಯಾಧೀನತ್ವಾಂಗೀಕಾರಾತ್ ಮಾಯಾಖ್ಯಜಡಸ್ಯ ಸಾರ್ವಜ್ಞಾದಿಸಕಲಗುಣಾ ಅಪಿ ಪರಮತೇ ಸಂಭಾವಿತಾ ಇತ್ಯಪಿ ದ್ರಷ್ಟವ್ಯಮ್ । ಜಡಸ್ಯೇತ್ಯ-ಕ್ಯೈಕ್ಯೇತ್ವಿತ್ಯತ್ರಾಪಿ ಸಂಬಂಧಃ । ಏವಂಚ ಜಡಸ್ಯೈಕ್ಯೇ ತು ಮಾಯಾಶಕ್ತ್ಯಾ ಜಡಸ್ಯಾಪಿ ಸಾರ್ವಜ್ಞಾದಿಪ್ರದಾನತಃ ತತ್ ಜಡಾತ್ಮೈಕ್ಯಂ ಕಸ್ಯಚಿದ್ಧರ್ಮಸ್ಯಾಪಿ ತಸ್ಕರೋ ನ ಸ್ಯಾದಿತಿ ಯೋಜನಾ ॥ ೫೫೮ ॥

**ವಿವರಣೆ–** ಜಡದಲ್ಲಿ ಸರ್ವಜ್ಞತ್ವವು ಇಲ್ಲವಾದ್ದರಿಂದ ಜಡೈಕ್ಯವನ್ನು ಹೇಳಿದಾಗ ಬ್ರಹ್ಮನ ಸರ್ವಜ್ಞತ್ವದ ಅಪಹಾರವಾಗಿ ಅದಕ್ಕೆ ಪುನಃ ತಸ್ಕರತ್ವವು ಬಂದೇ ಬರುತ್ತದೆ ಎಂದು ಆಕ್ಷೇಪಿಸಿದರೆ ಅದಕ್ಕೂ ಉತ್ತರಿಸುತ್ತಾರೆ.

**ಅಥವಾ ಜಡತಾಮೀಶೇ ದತ್ವಾ ಮಾಯಾ ಸ್ವಶಕ್ತಿತಃ ।**
**ಜಡೈಕ್ಯಮೇವ ಘಟಯೇದಿದಂ ತೇಽತಿಪ್ರಿಯಂ ಮತಂ ।**
**ಯತ್ರತ್ವಸ್ಯೇತಿ ವಾಕ್ಯೋಕ್ತಮುಕ್ತೇರತ್ಯುಪಯೋಗತಃ ॥ ೫೫೯ ॥**

**ಅರ್ಥ–** ಅಥವಾ = ಇನ್ನೊಂದು ಪಕ್ಷದಲ್ಲಿ, ಮಾಯಾ = ಮಾಯೆಯು, ಸ್ವಶಕ್ತಿತಃ = ತನ್ನ ಸಾಮರ್ಥ್ಯದಿಂದ, ಈಶೇ = ಬ್ರಹ್ಮನಲ್ಲಿ, ಜಡತಾಂ = ಜಡತ್ವವನ್ನು, ದತ್ವಾ = ಕೊಟ್ಟು (ಬ್ರಹ್ಮಣಿ = ಬ್ರಹ್ಮನಲ್ಲಿ) ಜಡೈಕ್ಯಂ ಏವ = ಜಡದ ಅಭೇದವನ್ನೇ, ಘಟಯೇತ್ = ಕೂಡಿಸೀತು. ಯತ್ರತ್ವಸ್ಯೇತಿವಾಕ್ಯೋಕ್ತಮುಕ್ತೇಃ = ಯತ್ರತ್ವಸ್ಯ ಸರ್ವಮಾತ್ಮೈವಾಭೂತ್ ತತ್ ಕೇನ ಕಂ ಪಶ್ಯೇತ್ ಕೇನ ಕಂ ಜಿಘ್ರೇತ್ ಇದೇ ಮೊದಲಾದ ವಾಕ್ಯದಲ್ಲಿ ಹೇಳಲ್ಪಟ್ಟ ಮೋಕ್ಷಕ್ಕೆ, ಅತ್ಯುಪಯೋಗತಃ = ಬಹಳ ಉಪಯೋಗವಾಗುವುದರಿಂದ, ಇದಂ ಮತಂ = ಜಡೈಕ್ಯರೂಪವಾದ ಸಿದ್ಧಾಂತವು, ತೇ = ನಿನಗೆ, ಅತಿಪ್ರಿಯಂ = ಬಹಳ ಪ್ರಿಯವಾಗಿ, (ಭವೇತ್ = ಆದೀತು).

**ಅನುವಾದ–** ಅಥವಾ ಮಾಯೆಯೇ ತನ್ನ ಶಕ್ತಿಯಿಂದ ಈಶ್ವರನಿಗೆ ಜಡತ್ವವನ್ನು ತಂದುಕೊಟ್ಟು ಜಡೈಕ್ಯವನ್ನೇ ಘಟನೆ ಮಾಡುತ್ತದೆ. ಇದೇ ನಿನಗೆ ಅತಿಪ್ರಿಯವಾದ ಮತವಷ್ಟೇ? ಏಕೆಂದರೆ ಯತ್ರತ್ವಸ್ಯ ಎಂಬ ವಾಕ್ಯದಿಂದ ಮುಕ್ತಿಯಲ್ಲಿ ಹೇಳಲ್ಪಡುವ ಜ್ಞಾನಾಭಾವವು ಈ ಪಕ್ಷದಲ್ಲಿ ಅತ್ಯಂತ ಉಪಪನ್ನವಾಗುತ್ತದೆ.

**ಭಾವವಿಲಾಸಿನೀ–** ಯುಕ್ತ್ಯಂತರಂ ಚಾಹ – **ಅಥವೇತಿ** ॥ **ಸ್ವಶಕ್ತಿತಃ** ದುರ್ಘಟಘಟಕತ್ವಾಖ್ಯ ಸ್ವಶಕ್ತಿತಃ । ಇದಂ ಬ್ರಹ್ಮಣೋ ಜಡತ್ವಮಾಪಾದ್ಯ ಜಡೈಕ್ಯಮ್ । ಅತಿಪ್ರಿಯತ್ವಮೇವ ದರ್ಶಯತಿ ॥ **ಯತ್ರತ್ವಸ್ಯೇತಿ** ॥ ಬ್ರಹ್ಮಣೋ ಜಡೈಕ್ಯೇ ಘಟಪ್ರಾಯತ್ವಾವಶ್ಯಂಭಾವಾತ್ಕೇನ ಕರಣೇನ ಕಂ ಪಶ್ಯೇದಿತಿ ಕೇನ ಕರಣೇನ ಕಂ ಜಿಘ್ರೇದಿತ್ಯುಕ್ತಪರಾಭಿಲಷಿತಮುಕ್ತಿರಪಿ ಸಮ್ಯಕ್ ಸಂಪಾದಿತಾ ಸ್ಯಾದಿತಿ ಭಾವಃ ॥ ೫೯ ॥

**ವಿವರಣೆ–** ಇನ್ನೊಂದು ವಿಧದಿಂದ ಜಡೈಕ್ಯಕ್ಕೆ ತಸ್ಕರತ್ವವಿಲ್ಲವೆಂದು ತಿಳಿಸುತ್ತಾರೆ. ಮೊದಲು ಮಾಯೆಯು ತನ್ನ ಸಾಮರ್ಥ್ಯದಿಂದ ಬ್ರಹ್ಮನಲ್ಲಿ ಜಡತ್ವವನ್ನು ಕೊಟ್ಟು ನಂತರ ಜಡದಿಂದ ಐಕ್ಯವನ್ನು ಹೇಳಿದರೆ ಆಗ ಜಡೈಕ್ಯಕ್ಕೆ ಯಾವ ತಸ್ಕರತ್ವವೂ ಬರುವುದಿಲ್ಲ. ಅಷ್ಟೇ ಅಲ್ಲ, ಮಾಯೆಯು ತನ್ನ ಸಾಮರ್ಥ್ಯದಿಂದ ಬ್ರಹ್ಮನಲ್ಲಿ ಜಡತ್ವವನ್ನು ಕೊಟ್ಟರೆ ಅದು ನಿನಗೆ ಅತಿಪ್ರಿಯವಾಗಬೇಕು. ಏಕೆಂದರೆ ಯತ್ರತ್ವಸ್ಯ ಇತ್ಯಾದಿ ವಾಕ್ಯದಲ್ಲಿ ಮುಕ್ತಿಯಲ್ಲಿ ಯಾರೂ ಯಾರನ್ನೂ ನೋಡುವುದಿಲ್ಲ, ಯಾರೂ ಯಾರನ್ನೂ ಆಘ್ರಾಣಿಸುವುದಿಲ್ಲ, ಯಾರೂ ಯಾರನ್ನೂ ಕೇಳುವುದಿಲ್ಲ - ಎಂದು ಈ ವಿಧದ ಮುಕ್ತಿಯನ್ನು ವರ್ಣಿಸಿದ್ದೀಯೆ. ಈ ತರಹದ ಮುಕ್ತಿಗೆ, ಬ್ರಹ್ಮನಲ್ಲಿ ಜಡತ್ವಬರುವುದು ಬಹಳ ಉಪಯೋಗವಾಗುತ್ತದೆ. ಆದ್ದರಿಂದಲೇ ಇದು ನಿನಗೆ ಅತಿಪ್ರಿಯವೂ ಆಗುತ್ತದೆ. ಚೈತನ್ಯೈಕ್ಯಕ್ಕಿಂತಲೂ ಜಡೈಕ್ಯವೇ ಶ್ರೇಷ್ಠವಾಗಿ ಅದನ್ನು ನೀನು ತಿರಸ್ಕರಿಸಿದ್ದು ಸರಿಯಲ್ಲ.

ನಾತ್ಮಾನಂ ನ ಪರಾಂಶ್ಚಾಪಿ ತವ ಮುಕ್ತಸ್ತದೇಕ್ಷತೇ ।
ಜಡಮುಕ್ತಸ್ತು ಸರ್ವತ್ರ ಜಡೈಕ್ಯೇ ನಿತ್ಯಮುಕ್ತತಾ ॥ ೫೬೦ ॥

**ಅರ್ಥ–** ತವ = ನಿನ್ನ, ಮುಕ್ತಃ = ಮುಕ್ತನಾದ, (ಜೀವಃ = ಜೀವನು) ತದಾ (ಏವ) = ಮುಕ್ತಿಕಾಲದಲ್ಲಿ ಮಾತ್ರ, ಆತ್ಮಾನಂ = ತನ್ನನ್ನು, ನ ಈಕ್ಷತೇ = ನೋಡುವುದಿಲ್ಲ, ಪರಾನ್ ಚ = ಬೇರೊಬ್ಬರನ್ನೂ ಕೂಡ, ನ ಈಕ್ಷತೇ = ನೋಡುವುದಿಲ್ಲ. ಜಡಮುಕ್ತಃ ತು = ಜಡಮುಕ್ತನಾದರೂ, ಸರ್ವತ್ರ = ಮುಕ್ತಿ ಮತ್ತು ಸಂಸಾರ ಈ ಎರಡು ಕಾಲಗಳಲ್ಲೂ, ಆತ್ಮಾನಂ = ತನ್ನನ್ನೂ, ಪರಾಂಶ್ಚ = ಇನ್ನೊಬ್ಬರನ್ನೂ ಕೂಡ, ನ ಈಕ್ಷತೇ = ನೋಡುವುದಿಲ್ಲ. (ಅತಃ = ಆದ್ದರಿಂದ) ಜಡೈಕ್ಯೇ = (ಬ್ರಹ್ಮನಿಗೆ) ಜಡೈಕ್ಯಬಂದಾಗ, ಬ್ರಹ್ಮಣಃ = ಬ್ರಹ್ಮನಿಗೆ, ನಿತ್ಯಮುಕ್ತತಾ = ನಿತ್ಯಮುಕ್ತತ್ವವು, (ಯುಜ್ಯತೇ = ಕೂಡುತ್ತದೆ).

**ಅನುವಾದ–** ನಿನ್ನ ಮತದಂತೆ ಮುಕ್ತನು ತನ್ನ ಜ್ಞಾನವನ್ನಾಗಲೀ, ಪರಜ್ಞಾನವನ್ನಾಗಲೀ ಹೊಂದಿರುವುದಿಲ್ಲವಷ್ಟೇ? ಜಡೈಕ್ಯವನ್ನು ಅಂಗೀಕರಿಸಿದರೆ ಜಡಮುಕ್ತನು ಸಂಸಾರಾವಸ್ಥೆಯಲ್ಲಿಯೂ ಮತ್ತು ಮೋಕ್ಷಾವಸ್ಥೆಯಲ್ಲಿಯೂ ಜ್ಞಾನಶೂನ್ಯ ನಾಗುವುದರಿಂದ ನಿತ್ಯಮುಕ್ತತ್ವವು ಅತ್ಯಂತ ಉಪಪನ್ನವಾಗುತ್ತದೆ.

**ಭಾವವಿಲಾಸಿನೀ–** ಕಿಂಚ ಜೀವೈಕ್ಯೇ ಪ್ರಾಗ್ಬಂಧಸದ್ಭಾವಾನ್ನ ನಿತ್ಯಮುಕ್ತತಾ । ಜಡೈಕ್ಯೇ ತು ಪ್ರಾಗಪಿ ಬಂಧಾಭಾವಾನ್ನಿತ್ಯಮುಕ್ತತ್ವಾಖ್ಯಮಹಾಮಹಿಮಸಿದ್ಧಿರಿತ್ಯಾಹ – **ನಾತ್ಮಾನಮಿತಿ** ॥ ತವಮುಕ್ತಃ । ತದಾ ಮುಕ್ತಿಕಾಲೇ । ಪೂರ್ವಂ ತು ಸ್ವಪರದರ್ಶನಸದ್ಭಾವಾದ್ಬದ್ಧ ಏವೇತಿ ಭಾವಃ । ಸರ್ವತ್ರ ಸಂಸಾರದಶಾಯಾಂ ಮುಕ್ತಿದಶಾಯಾಂಚ । ಆತ್ಮಾನಂ ಪರಾಂಶ್ಚ ನೇಕ್ಷತ ಇತ್ಯಾವೃತ್ತ್ಯಾ ಸಂಬಂಧಃ । ಜಡೈಕ್ಯೇ ಬ್ರಹ್ಮಜಡೈಕ್ಯೇ । ನಿತ್ಯಮುಕ್ತತಾ ಬ್ರಹ್ಮಣಃ ಸ್ಯಾದಿತ್ಯರ್ಥಃ ॥ ೫೬೦ ॥

**ವಿವರಣೆ–** ಜೀವೈಕ್ಯವನ್ನು ಬ್ರಹ್ಮನಿಗೆ ಹೇಳಿದರೆ ಮುಕ್ತಿಗಿಂತ ಮೊದಲು ಜೀವನು ಸಂಸಾರಿಯಾಗಿರುವುದರಿಂದ ಬ್ರಹ್ಮನಲ್ಲೂ ನಿತ್ಯಮುಕ್ತತ್ವವೂ ಹೊರಟು ಹೋಗುತ್ತದೆ. ಜಡೈಕ್ಯವನ್ನು ಹೇಳಿದರೆ ಜಡಕ್ಕೆ ಮೊದಲೂ ಸಂಸಾರಾದಿಗಳು ಇಲ್ಲದಿರುವುದರಿಂದ ಬ್ರಹ್ಮನಲ್ಲಿ ನಿತ್ಯಮುಕ್ತತ್ವವು ಹಾಗೆಯೇ ಇರುತ್ತದೆ ಎಂದು ತಿಳಿಸುತ್ತಾರೆ. ಅದ್ವೈತಮತದಲ್ಲಿ ಜೀವನಿಗೆ ಮುಕ್ತಿಯು ಬಂದಾಗ ಮುಕ್ತಿಕಾಲದಲ್ಲಿ ಮಾತ್ರ ತನ್ನ ಮತ್ತು ಇತರರ ದರ್ಶನ ಇಲ್ಲದೇ ಇರುವುದು. ಸಂಸಾರದಶೆಯಲ್ಲಿ ತನ್ನ ಮತ್ತು ಇತರರ ದರ್ಶನ ಇದ್ದೇ ಇದೆ. ಜಡರೂಪಮುಕ್ತನಿಗೆ ಮಾತ್ರ ಸಂಸಾರದಶೆಯಲ್ಲಿಯೂ ಹಾಗೂ ಮುಕ್ತಿದಶೆಯಲ್ಲೂ ಸ್ವಪರದರ್ಶನವಿಲ್ಲ. ಬ್ರಹ್ಮನಿಗೆ ಜೀವೈಕ್ಯಹೇಳಿದರೆ ನಿತ್ಯಮುಕ್ತತ್ವವು ಕೂಡುವುದಿಲ್ಲ. ಜಡೈಕ್ಯ ಬಂದರೆ ಮಾತ್ರ ನಿತ್ಯಮುಕ್ತತ್ವವು ಕೂಡುತ್ತದೆ. ಆದ್ದರಿಂದ ಬ್ರಹ್ಮನಿಗೆ ನಿತ್ಯಮುಕ್ತತ್ವವನ್ನು ಕೂಡಿಸುವುದಕ್ಕೋಸ್ಕರವಾಗಿಯಾದರೂ ಜಡೈಕ್ಯವನ್ನೇ ಹೇಳುವುದು ಉತ್ತಮ.

ಫಲೇ ತ್ವತಿಶಯಾದ್ ವಾಕ್ಯಂ ಜಡೈಕ್ಯಪರಮೇವ ತತ್ ।
ಸುಖಾತ್ಮತಾ ಜಡೇಪಿ ಸ್ಯಾನ್ಮಾನಸಂ ಹಿ ಸುಖಂ ನೃಣಾಂ ॥ ೫೬೧ ॥

**ಅರ್ಥ–** ಫಲೇ= ಮೋಕ್ಷರೂಪ ಫಲದಲ್ಲಿ ಅತಿಶಯಾತ್ = (ನಿತ್ಯಮುಕ್ತತ್ವಾದಿ) ಅತಿಶಯವಿರುವುದರಿಂದ, ತತ್ = ಹಿಂದೆ ಹೇಳಿದ, ವಾಕ್ಯಂ = ಯತ್ರತ್ವಸ್ಯ ಎಂಬ ವಾಕ್ಯವು, ಜಡೈಕ್ಯಪರಂ ಏವ = ಜಡೈಕ್ಯದಲ್ಲೇ ತಾತ್ಪರ್ಯವುಳ್ಳದ್ದು (ಭವತಿ = ಆಗುತ್ತದೆ). (ಯತಃಯಾವ ಕಾರಣದಿಂದ) ನೃಣಾಂ = ಮನುಷ್ಯರ, ಸುಖಂ = ಸುಖವಾದರೂ, ಮಾನಸಂ ಹಿ = ಮನೋವಿಕಾರವಷ್ಟೇ. (ಅತಃ = ಆದ್ದರಿಂದ) ಜಡೇಪಿ = ಜಡದಲ್ಲಿಯೂ ಕೂಡ, ಸುಖಾತ್ಮತಾ = ಸುಖರೂಪತೆಯು, ಸ್ಯಾತ್ = ಇರಲಿ.

**ಅನುವಾದ–** ಫಲದಲ್ಲಿ ಅತಿಶಯವುಂಟಾಗುವುದರಿಂದ ಸರ್ವಂ ಖಲ್ವಿದಂ ಎಂಬ ವಾಕ್ಯವು ಜಡೈಕ್ಯ ಪರವೇ ಆಗಲಿ. ಜೀವರಿಗೆ ಸುಖವು ಮನೋವೃತ್ತಿರೂಪ-ವಾದುದರಿಂದ ಜಡದಲ್ಲಿ ಸುಖರೂಪತ್ವವು ಕೂಡುತ್ತದೆ.

**ಭಾವವಿಲಾಸಿನೀ–** ತದ್ವಾಕ್ಯಂ ಯತ್ರತ್ವಸ್ಯೇತಿ ವಾಕ್ಯಮ್ । ನನು ನಿತ್ಯಮುಕ್ತತ್ವಲಾಭೇಽಪಿ ಸುಖರೂಪತ್ವಾಭಾವಾತ್ ಕಥಂ ಫಲತೇತಿ ಶಂಕಾಂ ನಿವಾರಯತಿ–ಸುಖಾತ್ಮತೇತಿ ॥ ೫೬೧ ॥

**ವಿವರಣೆ–** ಜಡೈಕ್ಯವನ್ನು ಹೇಳಿದರೆ ನಿತ್ಯಮುಕ್ತತ್ವ ಕೂಡಿದರೂ ಸುಖರೂಪತ್ವವು ಕೂಡುವುದಿಲ್ಲವಾದ್ದರಿಂದ ಜಡೈಕ್ಯವನ್ನೇ ಸ್ವೀಕರಿಸಿದರೆ ಮುಕ್ತಿರೂಪಫಲವು ಹೇಗಾಗುತ್ತದೆ ಎಂದು ಆಶಂಕಿಸಿದರೆ ಅದಕ್ಕೂ ಉತ್ತರಿಸುತ್ತಾರೆ. ಬ್ರಹ್ಮನಿಗೆ ಜಡೈಕ್ಯವನ್ನು ಹೇಳಿದರೆ ಮೋಕ್ಷದಲ್ಲಿ ನಿತ್ಯಮುಕ್ತತ್ವಾದಿ ಫಲಾತಿಶಯವಿರುವುದರಿಂದ, ಹಿಂದೆ ಹೇಳಿದ ಮೋಕ್ಷವನ್ನು ವರ್ಣಿಸುವ ಯತ್ರತ್ವಸ್ಯ ಸರ್ವಂ ಎಂಬ ವಾಕ್ಯಕ್ಕೆ ಜಡೈಕ್ಯವನ್ನು ತಿಳಿಸುವುದರಲ್ಲೇ ಅಭಿಪ್ರಾಯವಿದೆ ಎಂದು ತಿಳಿಯುತ್ತದೆ. ಜಡೈಕ್ಯವನ್ನು ಹೇಳಿದರೆ ಬ್ರಹ್ಮನಿಗೆ ಸುಖರೂಪತೆಯು ಇಲ್ಲವಾಗುತ್ತದೆ ಎಂಬುದಾಗಿ ನೀವು ಮಾಡಿದ ಆಕ್ಷೇಪವೂ ಸರಿಯಲ್ಲ. ಏಕೆಂದರೆ ಜೀವರ ಸುಖವೆಂದರೆ ಅಂತಃಕರಮಪರಿಣಾಮವೇ. ಆ ಅಂತಃಕರಣವು ಜಡವಾಗಿದೆ. ಆದ್ದರಿಂದ ಜಡಕ್ಕೂ ಸುಖರೂಪತೆಯು ಬರಲು ಯಾವ ತೊಂದರೆಯೂ ಇಲ್ಲ. ಹೀಗಾಗಿ ಜಡೈಕ್ಯವನ್ನು ಹೇಳಿದಾಗ ಬ್ರಹ್ಮನಲ್ಲಿರುವ ಸುಖರೂಪತ್ವದ ನಾಶಕ್ಕೂ ಅವಕಾಶವಿಲ್ಲ. ಹಾಗಾಗಿ ಜೀವೈಕ್ಯಕ್ಕಿಂತಲೂ ಜಡೈಕ್ಯವೇ ನಿನಗೆ ಹೆಚ್ಚು ಸೂಕ್ತವಾಗುತ್ತದೆ.

**ಮೋಕ್ಷಶ್ಚ ತಾರ್ಕಿಕಾಚಾರ್ಯಮೋಕ್ಷವದ್ವಾ ಭವಿಷ್ಯತಿ ॥ ೫೬೨ ॥**

**ಅರ್ಥ–** (ಜಡೈಕ್ಯೇ ಸತಿ = ಜಡೈಕ್ಯವನ್ನು ಒಪ್ಪಿದರೆ), ಮೋಕ್ಷಃ ಚ = ಮೋಕ್ಷವಾದರೂ, ತಾರ್ಕಿಕಾಚಾರ್ಯಮೋಕ್ಷವದ್ವಾ = ತಾರ್ಕಿಕಾಚಾರ್ಯರು ಹೇಳಿದ ಮೋಕ್ಷದಂತಿರ ತಕ್ಕದ್ದಾಗಿ, ಭವಿಷ್ಯತಿ = ಆಗುವುದು.

**ಅನುವಾದ–** ಮೋಕ್ಷವಾದರೂ ತಾರ್ಕಿಕ ಮತದಲ್ಲಿ ಹೇಳಿದ ಮೋಕ್ಷದಂತೆ ಉಪಪನ್ನವಾಗುತ್ತದೆ.

**ಭಾವವಿಲಾಸಿನೀ–** ಪ್ರಕಾರಾಂತರೇಣಾಪಿ ಗತಿಮಾಹ – **ಮೋಕ್ಷಶ್ಚೇತಿ** ॥ ಯಥಾ ತಾರ್ಕಿಕಮತೇ ಜಗದೀಶ್ವರಸ್ಯ ಸರ್ವದಾ ಸುಖಾಭಾವಾನ್ಮುಕ್ತತ್ವಮ್ । ನತು ದುಃಖಧ್ವಂಸಾತ್ । ನಾಪಿ ಸುಖಾತ್ । ತಥೇಽಪಿ ಭಾವಃ ॥ ೫೬೨ ॥

**ವಿವರಣೆ–** ಜಡೈಕ್ಯವನ್ನು ಹೇಳಿದರೆ ಬ್ರಹ್ಮನ ಸುಖರೂಪತೆಗೆ ಹಾನಿಯಾಗುತ್ತದೆ ಎಂಬ ಹಿಂದೆ ಹೇಳಿದ ಆಕ್ಷೇಪಕ್ಕೆ ಮತ್ತೊಂದು ರೀತಿಯಲ್ಲಿ ಗತಿಯನ್ನು ತೋರಿಸುತ್ತಾರೆ. ತಾರ್ಕಿಕರ ಸಿದ್ಧಾಂತದಲ್ಲಿ ಏಕವಿಂಶತಿದುಃಖಧ್ವಂಸಃ ಮೋಕ್ಷಃ ಎಂದು ಹೇಳಿದ್ದಾರೆ. ಆ ಇಪ್ಪತ್ತೊಂದು ವಿಧದ ದುಃಖಗಳಲ್ಲಿ ಜ್ಞಾನ, ಸುಖ, ದುಃಖ ಇತ್ಯಾದಿಗಳೆಲ್ಲವೂ ಸೇರುತ್ತವೆ. ಏಕೆಂದರೆ ಜ್ಞಾನವಿದ್ದರೆ ಅಜ್ಞಾನವಿರಲೇಬೇಕು, ಸುಖವಿದ್ದರೆ ದುಃಖವಿರಲೇಬೇಕು ಎಂಬುದಾಗಿ ವ್ಯಾಪ್ತಿಯಿರುವುದರಿಂದ ಸುಖ, ಜ್ಞಾನಾದಿಗಳನ್ನು ಒಪ್ಪಿದರೆ ಅಜ್ಞಾನ-ದುಃಖಾದಿಗಳನ್ನೂ ಅವಶ್ಯವಾಗಿ ಅಂಗೀಕರಿಸಬೇಕಾಗುತ್ತದೆ. ದುಃಖಾದಿಗಳೂ ಇದ್ದರೆ

ಅದು ಮೋಕ್ಷ ಹೇಗಾಗುತ್ತದೆ? ಹೀಗಾಗಿ ಏಕವಿಂಶತಿ ದುಃಖಗಳಲ್ಲಿ ಸುಖಜ್ಞಾನಾದಿಗಳೆಲ್ಲವೂ ಸೇರಿವೆ. ಅವುಗಳ ನಾಶವೆಂದರೆ ಜಡರೂಪತೆ ಬಂದಂತೆ. ಹೀಗೆ ತಾರ್ಕಿಕರು ಹೇಳುವ ಮೋಕ್ಷದಂತಿರುವ ಮೋಕ್ಷವನ್ನು ನಿಮ್ಮ ಸಿದ್ಧಾಂತದಲ್ಲಿ ಅಂಗೀಕರಿಸಿದರೆ, ಇಂತಹ ಮೋಕ್ಷ ಜಡೈಕ್ಯದಿಂದಲೇ ಸಾಧ್ಯವಾಗುವುದು. ಇಂತಹ ಮೋಕ್ಷವನ್ನು ಅಂಗೀಕರಿಸುವವರು ಜೀವೈಕ್ಯಕ್ಕಿಂತ ಜಡೈಕ್ಯವನ್ನು ಹೇಳುವುದೇ ಸೂಕ್ತ.

ಜ್ಞಾನರೂಪಮನಸ್ತತ್ತ್ವೇನೈಕ್ಯೇ ಜ್ಞಾನತ್ವಮಪ್ಯಲಂ ।
ಸ್ಯಾದೇವ ಯತ್ ಸಮಸ್ತಸ್ಯ ಜ್ಞಾನಂ ಮಾನಸಮಾವಯೋಃ ।
ನ ತೇ ಕಿಂಚಿದನಿಷ್ಟಂ ಸ್ಯಾದಸ್ಮಾಕಂ ಮಹತೀ ಕ್ಷತಿಃ ॥ ೫೬೩ ॥

**ಅರ್ಥ–** (ಬ್ರಹ್ಮಣಃ = ಬ್ರಹ್ಮನಿಗೆ) ಜ್ಞಾನರೂಪಮನಸ್ತತ್ತ್ವೇನ = ಜ್ಞಾನರೂಪ-ಮನಸ್ತತ್ತ್ವದಿಂದ, ಐಕ್ಯೇ = ಅಭೇದವನ್ನು ಹೇಳಿದ ಪಕ್ಷದಲ್ಲಿ, ಯತ್ = ಯಾವ ಕಾರಣದಿಂದ, ಜ್ಞಾನತ್ವಂ ಅಪಿ = ಜ್ಞಾನತ್ವವೂ ಕೂಡ, ಅಲಂ = ಚೆನ್ನಾಗಿ, ಸ್ಯಾದೇವ = ಬಂದೇ ಬರುತ್ತದೆ. ಯತ್= ಏಕೆಂದರೆ, ಆವಯೋಃ = ನಮ್ಮಿಬ್ಬರ, (ಮತಯೋಃ = ಮತಗಳಲ್ಲಿಯೂ) ಸಮಸ್ತಸ್ಯ= ಎಲ್ಲ ಘಟಾದಿವಸ್ತುಗಳ, ಜ್ಞಾನಂ = ಜ್ಞಾನವು, ಮಾನಸಂ (ಕಿಲ) = ಮನೋರೂಪವಾಗಿದೆಯಷ್ಟೇ! (ಅತಃ = ಆದ್ದರಿಂದ) (ಜಡೈಕ್ಯೇಪಿ = ಜಡದ ಅಭೇದವನ್ನು ಹೇಳಿದರೂ ಕೂಡ) ತೇ (ಮತೇ) = ನಿನ್ನ ಸಿದ್ಧಾಂತದಲ್ಲಿ, ಕಿಂಚಿತ್ = ಸ್ವಲ್ಪವೂ, ಅನಿಷ್ಟಂ = ಹಾನಿಯು, ನ ಸ್ಯಾತ್ = ಆಗಲಿಕ್ಕಿಲ್ಲ, ಅಸ್ಮಾಕಂ = ನಮ್ಮ (ಮತೇ ತು = ಮತದಲ್ಲಿಯಾದರೂ) ಮಹತೀ = ಬಹಳವಾದ, ಕ್ಷತಿಃ = ಹಾನಿಯು, ಸ್ಯಾತ್ = ಆದೀತು.

**ಅನುವಾದ–** ನಾವಿಬ್ಬರೂ ಜ್ಞಾನವನ್ನು ಮನೋವೃತ್ತಿರೂಪವೆಂದು ಅಂಗೀಕರಿಸಿ-ರುವುದರಿಂದ ಜ್ಞಾನರೂಪವಾದ ಮನಸ್ತತ್ವದಿಂದ ಐಕ್ಯವನ್ನು ಅಂಗೀಕರಿಸಿದರೆ ಬ್ರಹ್ಮನಿಗೆ ಜ್ಞಾನತ್ವವು ಚೆನ್ನಾಗಿಯೇ ಉಪಪನ್ನವಾಗುತ್ತದೆ. ಜಡೈಕ್ಯವನ್ನು ಅಂಗೀಕರಿಸಿದರೆ ನಿನಗೆ ಯಾವ ಅನಿಷ್ಟವೂ ಇಲ್ಲ. ನಮಗಾದರೆ ದೊಡ್ಡ ಅನಿಷ್ಟವಿದೆ.

**ಭಾವವಿಲಾಸಿನೀ–** ಅಧುನಾ ಜಡೈಕ್ಯೇಽಪಿ ಜ್ಞಾನತ್ವರೂಪಚಿತ್ತ್ವಮುಪಪಾದಯತಿ– **ಜ್ಞಾನ-ರೂಪಮನಸ್ತತ್ತ್ವೇನೇತಿ** ॥ ಯದ್ಯಸ್ಮಾತ್ । ಸಮಸ್ತಸ್ಯ ಘಟಪಟಾದೇಃ । ಮಾನಸಂ ಮನೋ-ರೂಪಮ್ । ಅಸ್ಮಾಕಂ ಮತೇ ಮಹತೀ ಕ್ಷತಿಃ । ಜಡೈಕ್ಯೇ ಮಹಾಕ್ಷತಿಃ ಸ್ಯಾತ್ । ತದ್ವತ್ । ಜಡೇಽಘಟಿತಘಟಕತ್ವ ಶಕ್ತೇರಸ್ಮಾಭಿರನಂಗೀಕಾರಾತ್ । ಮುಕ್ತೌ ಚ ಸಕಲಮೌಕ್ತವಿಷಯ-ದ್ರಷ್ಟೃತ್ವಾಂಗೀಕಾರಾಚ್ಚ ಜಡೈಕ್ಯಸ್ಯ ವಾರ್ತಾಪ್ಯಸ್ಮನ್ಮತೇ ನ ಶೋಭತೇ ಇತಿ ಭಾವಃ ॥ ೫೬೩ ॥

**ವಿವರಣೆ–** ಇನ್ನು ಜಡೈಕ್ಯವನ್ನು ಬ್ರಹ್ಮನಿಗೆ ಹೇಳಿದಾಗ ಜ್ಞಾನತ್ವರೂಪವಾದ ಚಿತ್ತ್ವವು ಇದ್ದೇ ಇರುತ್ತದೆ. ಅದಕ್ಕೆ ಹಾನಿಯಾಗುವುದಿಲ್ಲ ಎಂದು ಉಪಪಾದಿಸುತ್ತಾರೆ. ಬ್ರಹ್ಮನಿಗೆ ಜಡೈಕ್ಯ ಬಂದಾಗ ಮನಸ್ತತ್ತ್ವ ಎಂಬ ಜಡದಿಂದಲೂ ಐಕ್ಯವು ಬಂದೇ ಬರುತ್ತದೆ.

ನಮ್ಮಿಬ್ಬರ ಮತದಲ್ಲಿಯೂ ಜ್ಞಾನವು ಮನಸ್ಸೇ ಆಗಿದೆ. ಹೀಗಾಗಿ ಐಕ್ಯ ಬಂದಾಗ ಎಲ್ಲ ಜಡಗಳಿಗೂ ಜ್ಞಾನತ್ವವು ಬಂದೇ ತೀರುತ್ತದೆ. ಆದ್ದರಿಂದ ನಿನ್ನ ಮತದಲ್ಲಿ ಬ್ರಹ್ಮನಿಗೆ ಜಡದ ಜೊತೆಗೆ ಐಕ್ಯ ಹೇಳಿದಾಗ ಯಾವ ತೊಂದರೆಯೂ ಆಗುವುದಿಲ್ಲ. ಆದರೆ ನಮ್ಮ ದ್ವೈತಸಿದ್ಧಾಂತದಲ್ಲಿ ಮಾತ್ರ ಬಹಳ ತೊಂದರೆ ಇದೆ. ಏಕೆಂದರೆ ನಾವು ಜಡಕ್ಕೆ ನಿನ್ನ ಹಾಗೆ ಅಘಟಿತಘಟನಾಶಕ್ತಿಯನ್ನೂ ಅಂಗೀಕರಿಸಲಿಲ್ಲ. ಹಾಗೆಯೇ ಮುಕ್ತಿಯಲ್ಲಿ ಎಲ್ಲರೂ ಎಲ್ಲರನ್ನೂ ನೋಡುತ್ತಾರ, ಮಾತನಾಡುತ್ತಾರೆ, ಹೀಗೆ ಎಲ್ಲ ವ್ಯವಹಾರಗಳೂ ಇವೆ ಎಂದು ನಾವು ಅಂಗೀಕರಿಸಿದ್ದೇವೆ. ಹಾಗಾಗಿ ನಮಗೆ ಜಡೈಕ್ಯಮಾತ್ರವಲ್ಲದೆ ಆದರ ವಾರ್ತೆಯೂ ಶೋಭಿಸುವುದಿಲ್ಲ.

**ತಥಾಪಿ ಚಿತ್ತ್ವಮಾತ್ರಸ್ಯ ತ್ಯಾಗಾದ್ ಭೀತೋ ಜಡೈಕತಾಮ್ ।**
**ಶ್ರುತಾಮಪಿ ಜಹಾಸಿ ತ್ವಂ ಯರ್ಹಿ ತರ್ಹಿ ತವೈಕತಾಮ್ ॥ ೫೬೪ ॥**

**ಮಹಾಗುಣಾಪಹರ್ತ್ರೀಂ ತ್ವಂ ತ್ಯಜ ಭಕ್ತ್ಯಾ ಭಜಾಚ್ಯುತಮ್ ।**
**ನ ಚೇತ್ ಪ್ರಭುರ್ಮಹಾಚೋರಂ ತ್ವಾಮಂಧೇತಮಸಿ ಕ್ಷಿಪೇತ್ ॥ ೫೬೫ ॥**

**ಅರ್ಥ–** ತಥಾಪಿ = ಜಡೈಕ್ಯದಿಂದ ಬ್ರಹ್ಮನಲ್ಲಿ ಯಾವುದರ ಹಾನಿಯೂ ಇಲ್ಲದಿದ್ದರೂ ಕೂಡ, ಚಿತ್ತ್ವಮಾತ್ರಸ್ಯ = ಚೈತನ್ಯಮಾತ್ರದ, ತ್ಯಾಗಾತ್ = ಹಾನಿಯಿಂದ, ಭೀತಃ = ಭಯಗೊಂಡ, ತ್ವಂ = ನೀನು, ಶ್ರುತಾಂ ಅಪಿ = (ಸರ್ವಂ ಖಲ್ವಿದಂ ಬ್ರಹ್ಮ ಎಂಬ) ಶ್ರುತಿಯಲ್ಲಿ ಹೇಳಲ್ಪಟ್ಟರೂ ಕೂಡ, ಜಡೈಕತಾಂ = ಜಡೈಕ್ಯವನ್ನು, ಯರ್ಹಿ = ಯಾವ ಪಕ್ಷದಲ್ಲಿ, ಜಹಾಸಿ = ಪರಿತ್ಯಾಗ ಮಾಡುತ್ತೀಯೋ, ತರ್ಹಿ = ಆ ಪಕ್ಷದಲ್ಲಿ, ಮಹಾಗುಣಾಪಹರ್ತ್ರೀಂ = ಸರ್ವಶತ್ವವೇ ಮೊದಲಾದ ದೊಡ್ಡಗುಣಗಳನ್ನು ಅಪಹರಿಸುವ, ತವ = ನಿನ್ನ (ಜೀವನ), ಏಕತಾಂ ಅಪಿ = ಜೀವೈಕ್ಯವನ್ನೂ ಕೂಡ, ತ್ವಂ = ನೀನು, ತ್ಯಜ = ಬಿಡು. ಭಕ್ತ್ಯಾ = ಭಕ್ತಿಯಿಂದ, ಅಚ್ಯುತಂ = ಅಚ್ಯುತನನ್ನು, ಭಜ = ಭಜಿಸು. ನ ಚೇತ್ = ಹಾಗೆ ಮಾಡದಿದ್ದರೆ, ಪ್ರಭುಃ = ಸ್ವಾಮಿಯಾದ ಶ್ರೀಹರಿಯು, ಮಹಾಚೋರಂ = (ಸರ್ವೇಶ್ವರತ್ವಾದಿ ಮಹಾಗುಣಗಳನ್ನು ಅಪಹರಿಸಿ) ದೊಡ್ಡಕಳ್ಳನಾದ, ತ್ವಾಂ = ನಿನ್ನನ್ನು, ಅಂಧೇತಮಸಿ = ಅಂಧಂತಮಸ್ಸೆಂಬ ದೊಡ್ಡ ನಿತ್ಯನರಕದಲ್ಲಿ, ಕ್ಷಿಪೇತ್ = ಬೀಳಿಸಿಯಾನು.

**ಅನುವಾದ–** ಹಾಗಿದ್ದರೂ ನೀನು ಚಿತ್ತ್ವರೂಪವಾದ ಧರ್ಮದ ನಾಶವಾಗುತ್ತದೆ ಎಂದು ಹೆದರಿ ಶ್ರುತಿಯಲ್ಲಿ ಹೇಳಿದ ಜಡೈಕ್ಯವನ್ನು ಪರಿತ್ಯಾಗ ಮಾಡುವುದಾದರೆ ಆಗ ಈಶ್ವರನ ಮಹಾಗುಣಗಳನ್ನು ಅಪಹಾರ ಮಾಡುವ ಜೀವೈಕ್ಯವನ್ನೂ ಪರಿತ್ಯಜಿಸಿ ಭಕ್ತಿಯಿಂದ ಅಚ್ಯುತನನ್ನು ಭಜಿಸು. ಇಲ್ಲದಿದ್ದರೆ ಮಹಾಚೋರನಾದ ನಿನ್ನನ್ನು ನಮ್ಮ ಪ್ರಭುವು ಅಂಧತಮಸ್ಸಿನಲ್ಲಿ ಹಾಕುತ್ತಾನೆ.

**ಭಾವವಿಲಾಸಿನೀ–** ತಥಾಪಿ ಏವಮಪಿ । ಶ್ರುತಾಂ ಸರ್ವಂ ಬ್ರಹ್ಮೇತಿ ಶ್ರುತ್ಯುಕ್ತಾಮ್ । ತವೈಕತಾಂ ತ್ವದುಪಲಕ್ಷಿತಜೀವೈಕತಾವ್ । ಮಹಾಗುಣಾಪಹಂತ್ರೀಂ ಸರ್ವೇಶ್ವರತ್ವಾದಿಮಹಾಗುಣಹಂತ್ರೀಮ್ । ನಚೇತ್ ಜೀವಾಭೇದಂತ್ಯಕ್ತ್ವಾ ಭಗವದ್ಭಜನಂ ನ ಕರೋಷಿ ಚೇತ್ । ಮಹಾಚೋರಂ ಸರ್ವೇಶ್ವರತ್ವಾದಿ ಮಹಾಮಹಿಮತಸ್ಕರಮ್ ॥ ೫೬೪-೫೬೫ ॥

**ವಿವರಣೆ–** ಅದ್ವೈತ ಮತದಲ್ಲಿ ಜೀವೈಕ್ಯಕ್ಕಿಂತ ಜಡೈಕ್ಯವೇ ಶ್ರೇಷ್ಠವಾದರೂ, ಅದನ್ನು ಬಿಟ್ಟು ಜೀವೈಕ್ಯವನ್ನು ಮಾತ್ರ ಅಂಗೀಕರಿಸಿದರೆ ಅನರ್ಥವನ್ನು ತಿಳಿಸುತ್ತಾರೆ. ಬ್ರಹ್ಮನಿಗೆ ಜಡೈಕ್ಯವನ್ನು ಹೇಳಿದಾಗ ನಿನ್ನ ಮತದಲ್ಲಿ ಹಿಂದೆ ಸಮರ್ಥನೆ ಮಾಡಿದಂತೆ ಯಾವುದರ ಹಾನಿ ಆಗದಿದ್ದರೂ ಕೂಡ, ಬ್ರಹ್ಮನಲ್ಲಿ ಚೈತನ್ಯವು ನಾಶವಾಗುತ್ತದೆ ಎಂಬ ಭಯದಿಂದ ನೀನು ಜಡೈಕ್ಯವನ್ನು ಪರಿತ್ಯಾಗಮಾಡುತ್ತೀಯೆ ಎಂದಾದರೆ, ಬ್ರಹ್ಮನಿಗೆ ಜೀವೈಕ್ಯವನ್ನು ಹೇಳಿದರೆ ಬ್ರಹ್ಮನಲ್ಲಿರುವ ಸರ್ವೇಶ್ವರತ್ವ, ನಿತ್ಯಮುಕ್ತತ್ವವೇ ಮೊದಲಾದ ಬಹಳ ಗುಣಗಳ ಪರಿತ್ಯಾಗದ ಭಯದಿಂದ ಜೀವೈಕ್ಯವನ್ನೂ ಪರಿತ್ಯಜಿಸು. ನಾವು ಹೇಳುವ ನಿತ್ಯಮುಕ್ತನಾದ ಸರ್ವೇಶ್ವರನಾದ ಶ್ರೀಹರಿಯನ್ನು ಭಜಿಸು. ಹಾಗೆ ಮಾಡದಿದ್ದರೆ ಜೀವೈಕ್ಯವನ್ನು ಹೇಳಿ ಹರಿಯಲ್ಲಿರುವ ಎಲ್ಲ ಒಳ್ಳೆಯ ಗುಣಗಳನ್ನು ಅಪಹರಿಸಿ ಮಹಾಚೋರನಂತಿರುವ ನಿನ್ನನ್ನು ಅಂಧತಮಸ್ಸೆಂಬ ನಿತ್ಯನರಕದಲ್ಲಿ ಹಾಕಿಯಾನು. ಆದ್ದರಿಂದ ಅತಿ ದುಷ್ಟವಾದ ನಿನ್ನ ಮತದಲ್ಲಿ ಆಗ್ರಹ ಮತ್ತು ಅಭಿಮಾನಗಳನ್ನು ಬಿಟ್ಟು ನಮ್ಮ ಮತವನ್ನೇ ಅನುಸರಿಸು, ಇದು ನಿನಗೆ ಶ್ರೇಯಸ್ಕರ.

ದೃಶ್ಯಮಾನಮಿದಂ ಸರ್ವಂ ಬ್ರಹ್ಮೇತ್ಯೈಕ್ಯಾನುಶಾಸನಾತ್ ।
ಜಡಸ್ಯ ಬ್ರಹ್ಮಣೈಕ್ಯೇಪಿ ಕಾ ತೇ ಹಾನಿರ್ನಿಗದ್ಯತಾಂ ॥ ೫೬೬ ॥

ಸ್ವಾವೇದ್ಯತ್ವಂ ಸ್ವಭಾತತ್ವಂ ಜಡೈಕ್ಯೇ ಶೋಭತೇತರಾಂ ।
ಸಾರ್ವಜ್ಞಾದಿಗುಣಾನಾಂ ಚ ಮಿಥ್ಯಾತ್ವಂ ಶೋಭತೇತಮಾಂ ॥ ೫೬೭ ॥

ರಾಗಾದಿದೋಷಶೂನ್ಯತ್ವಮಪಿ ಯುಕ್ತತರಂ ಭವೇತ್ ।
ಸುಖಿತ್ವಮನುಭೂತಿತ್ವಂ ಮನೋವತ್ ಸ್ಯಾನ್ನಿರಾಕುಲಂ ।
ಜಡೋಪಾದಾನತಾಪ್ಯಸ್ಯ ಪಂಚಮ್ಯೋಕ್ತಾऽತಿಶೋಭತೇ ॥ ೫೬೮ ॥

**ಅರ್ಥ–** ದೃಶ್ಯಮಾನಂ = ಕಾಣಲ್ಪಡುವ, ಇದಂ = ಈ ಯಾವ, ಸರ್ವಂ = ಎಲ್ಲ ಪದಾರ್ಥಗಳೂ, ಬ್ರಹ್ಮ = ಬ್ರಹ್ಮಸ್ವರೂಪವು, ಇತಿ = ಹೀಗೆಂದು, ಐಕ್ಯಾನುಶಾಸನಾತ್ = (ಶ್ರುತಿಯಲ್ಲಿ) ಐಕ್ಯವನ್ನು ವಿಧಾನಮಾಡಿದ್ದರಿಂದ, ಜಡಸ್ಯ = ಜಡಪದಾರ್ಥಕ್ಕೆ, ಬ್ರಹ್ಮಣಾ = ಬ್ರಹ್ಮನಿಂದ, ಐಕ್ಯೇ = ಅಭೇದ ಬಂದ ಪಕ್ಷದಲ್ಲಿ, ತೇ = ನಿನಗೆ, ಕಾ = ಯಾವ, ಹಾನಿಃ = ತೊಂದರೆಯು, (ಭವೇತ್? = ಆದೀತು?) ನಿಗದ್ಯತಾಂ = ಹೇಳಲ್ಪಡಲಿ. ಜಡೈಕ್ಯೇ = ಜಡದ

ಅಭೇದವು ಬಂದ ಪಕ್ಷದಲ್ಲಿ ಸ್ವಾವೇದ್ಯತ್ವಂ = ತನ್ನನ್ನೇ ತಾನು ತಿಳಿಯದೇ ಇರುವಿಕೆಯೆಂಬ, ಸ್ವಭಾತತ್ವಂ = ಸ್ವಪ್ರಕಾಶತ್ವವು, ಶೋಭತೇತರಾಂ = ಅತ್ಯಂತ ಶೋಭಿಸುತ್ತದೆ. ಸಾರ್ವಜ್ಞಾದಿಗುಣಾನಾಂ = ಸರ್ವಜ್ಞತ್ವವೇ ಮೊದಲಾದ ಗುಣಗಳಿಗೆ, ಮಿಥ್ಯಾತ್ವಂ ಚ = ಮಿಥ್ಯಾತ್ವವೂ ಕೂಡ, ಶೋಭತೇತಮಾಂ = ಬಹಳ ಬಹಳ ಶೋಭಿಸುತ್ತದೆ. ರಾಗಾದಿದೋಷಶೂನ್ಯತ್ವಂ ಅಪಿ = ರಾಗಾದಿದೋಷಗಳ ಅಭಾವವೂ ಕೂಡ, ಯುಕ್ತತರಂ = ಅತ್ಯಂತ ಯೋಗ್ಯವಾಗಿಯೂ ಕೂಡ, ಭವೇತ್ = ಆದೀತು. ಸುಖಿತ್ವಂ = ಸುಖರೂಪತೆ, ಅನುಭೂತಿತ್ವಂ (ತು) = ಅನುಭವರೂಪತೆಯಾದರೂ, ಮನೋವತ್ = ಅಂತಃಕರಣಕ್ಕಿರುವಂತೆ, ನಿರಾಕುಲಂ = ಯಾವ ತೊಂದರೆ ಇಲ್ಲದೆ, ಸ್ಯಾತ್ = ಬಂದೀತು. ಪಂಚಮ್ಯಾ = (ಯತೋ ವಾ ಇಮಾನಿ ಎಂಬ ಶ್ರುತಿಯಲ್ಲಿ ಹೇಳಿದ ಯತಃ ಎಂಬ ಪದದಲ್ಲಿರುವ) ಪಂಚಮೀವಿಭಕ್ತಿಯಿಂದ, ಅಸ್ಯ = ಈ ಬ್ರಹ್ಮನಿಗೆ, ಉಕ್ತಾ = ಹೇಳಲ್ಪಟ್ಟ ಜಡೋಪಾದಾನತಾ ಅಪಿ = ಜಡರೂಪಪ್ರಪಂಚವನ್ನು ಕುರಿತು ಉಪಾದಾನಕಾರಣತ್ವವೂ ಕೂಡ, ಅತಿಶೋಭತೇ = ಬಹಳ ಶೋಭಿಸುತ್ತದೆ.

**ಅನುವಾದ–** ಜ್ಞಾನಕ್ಕೆ ವಿಷಯವಾದ ಎಲ್ಲವೂ ಬ್ರಹ್ಮ ಎಂಬ 'ಸರ್ವಂ ಖಲ್ವಿದಂ ಬ್ರಹ್ಮ' ಎಂಬ ಶ್ರುತಿರೂಪವಾದ ಐಕ್ಯನುಶಾಸನದಿಂದ ಜಡಕ್ಕೆ ಬ್ರಹ್ಮನಿಂದ ಐಕ್ಯವನ್ನು ಒಪ್ಪಿದರೂ ನಿನಗೆ ಏನು ಹಾನಿ ಎಂದು ಹೇಳು. ಸ್ವಾತ್ಮಕಜ್ಞಾನಾವಿಷಯತ್ವ-ರೂಪವಾದ ಸ್ವಪ್ರಕಾಶತ್ವವು ಜಡೈಕ್ಯವನ್ನು ಅಂಗೀಕರಿಸಿದರೆ ಚೆನ್ನಾಗಿ ಶೋಭಿಸುತ್ತದೆ. ಸಾರ್ವಜ್ಞಾದಿಗುಣಗಳ ಮಿಥ್ಯಾತ್ವವಂತೂ ಅದಕ್ಕಿಂತಲೂ ಚೆನ್ನಾಗಿ ಶೋಭಿಸುತ್ತದೆ. ರಾಗಾದಿ ದೋಷರಾಹಿತ್ಯವೂ ಸಹ ಅತ್ಯಂತ ಯುಕ್ತವಾಗುತ್ತದೆ. ಜಡವಾದ ಮನಸ್ಸಿಗೆ ಇರುವಂತೆ ಸುಖಿತ್ವ ಮತ್ತು ಅನುಭವತ್ವಗಳು ನಿರ್ಬಾಧವಾಗುತ್ತವೆ. ಪಂಚಮೀ ವಿಭಕ್ತಿಯು ಹೇಳಿದ ಜಡೋಪಾದನತ್ವವೂ ಕೂಡ ಅತ್ಯಂತವಾಗಿ ಶೋಭಿಸುತ್ತದೆ.

**ಭಾವವಿಲಾಸಿನೀ–** ಕಿಂಚೇದಂಪದವತೀಯಂ ಶ್ರುತಿಃ ಇದಂಪದಾರ್ಥರೂಪಜಡೈಕ್ಯ ಏವ ಯೋಜ್ಯಾ । ನತ್ವನಿದಂಪದಾರ್ಥರೂಪಚಿದೈಕ್ಯೇ ಇತಿ ವದನ್ ಪರಮತೇ ಜಡೈಕ್ಯಸ್ಯೈವ ಯುಕ್ತತ್ವೇ ಪ್ರಾಗುಕ್ತಯುಕ್ತೀರಭಿನವಯುಕ್ತೀಶ್ಚ ಸಂಕಲಯನ್ನನುಪಪತ್ತಿಂ ಪರಿಹರತಿ – ದೃಶ್ಯಮಾನಮಿತಿ ॥ ಇದಂ ಪದಸ್ಯಾರ್ಥಕಥನಮಿದಮ್ ॥ ೫೬೬ ॥

ಹಾನ್ಯಭಾವಮೇವೋಪಪಾದಯತಿ – ಸ್ವಾವೇದ್ಯತ್ವಮಿತಿ ॥ ಸ್ವಭಾತತ್ವಂ ಸ್ವಪ್ರಕಾಶತ್ವಮ್ । ಜಡೈಕ್ಯೇ ಪರಾಭಿಲಷಿತಸ್ವಾವೇದ್ಯತ್ವಸ್ಯ ಸಾರ್ವಜ್ಞಸರ್ವೇಶ್ವರತ್ವಾದಿ ಗುಣಾಮಿಥ್ಯಾತ್ವಸ್ಯ ಚ ಜಡೇ ಸರ್ವೈರಪ್ಯಂಗೀಕಾರೇಣ ವಿವಾದಾಭಾವಾದಿತಿ ಭಾವಃ ॥ ೫೬೭ ॥

ಅಸ್ಯ ಬ್ರಹ್ಮಣಃ । ಯತೋ ವಾ ಇಮಾನಿ ಭೂತಾನೀತಿ ಪಂಚಮ್ಯಾ ॥ ೫೬೮ ॥

**ವಿವರಣೆ–** ಸರ್ವಂ ಖಲ್ವಿದಂ ಬ್ರಹ್ಮ ಎಂಬ ಶ್ರುತಿಗೆ ಇದಂ ಪದಾರ್ಥವಾದ ಜಡದ ಐಕ್ಯವನ್ನು ಹೇಳುವುದರಲ್ಲೇ ತಾತ್ಪರ್ಯವಿದೆ. ಇದಂ ಪದದ ಅರ್ಥವಲ್ಲದ ಜೀವದ ಐಕ್ಯವನ್ನು ಹೇಳುವುದರಲ್ಲಿ ಅಲ್ಲ ಎಂಬ ವಿಷಯವನ್ನು ತಿಳಿಸುತ್ತಾ ಹಿಂದೆ ಹೇಳಿದ ಯುಕ್ತಿಸಮುದಾಯಗಳನ್ನು ಸಂಕ್ಷೇಪವಾಗಿ ಹೇಳಿ ಉಪಸಂಹಾರಮಾಡುತ್ತಾ ಅನುಪಪತ್ತಿಗಳನ್ನು ಪರಿಹರಿಸುತ್ತಾರೆ. ಸರ್ವಂ ಖಲ್ವಿದಂ ಬ್ರಹ್ಮ ಎಂಬ ಶ್ರುತಿಯಲ್ಲಿ ಕಾಣಲ್ಪಡುವ ಸಕಲಪ್ರಪಂಚಕ್ಕೂ ಬ್ರಹ್ಮನಿಂದ ಐಕ್ಯವು ಹೇಳಲ್ಪಟ್ಟಿದೆ. ಹೀಗಿದ್ದರೂ ಕೂಡ ಜಡಕ್ಕೆ ಬ್ರಹ್ಮನಿಂದ ಐಕ್ಯವನ್ನು ಹೇಳಿದರೆ ನಿನಗಾಗುವ ನಷ್ಟವಾದರೂ ಏನು? ಯಾವ ತೊಂದರೆಯೂ ಕೂಡ ಆಗುವುದಿಲ್ಲ ಎಂಬುದಷ್ಟೇ ಅಲ್ಲ ನೀನು ಬ್ರಹ್ಮನಿಗೆ ಹೇಳುವ ಅನೇಕ ಪ್ರಮೇಯಗಳಿಗೆ ಬಹಳ ಅನುಕೂಲವೂ ಆಗುತ್ತದೆ. ಹೇಗೆಂದರೆ - ಒಂದೇ ಕಡೆ ಕರ್ತೃತ್ವ ಮತ್ತು ಕರ್ಮತ್ವ ಬರುವುದು ನಿನ್ನ ಮತದಲ್ಲಿ ವಿರುದ್ಧವಾದ್ದರಿಂದ ಸ್ವಪ್ರಕಾಶತ್ವ ಎಂಬ ಶಬ್ದಕ್ಕೆ ತನ್ನಿಂದ ತಾನು ತಿಳಿಯಲ್ಪಡದೆ ಇರುವಿಕೆ ಎಂಬ ಅರ್ಥವನ್ನು ತಿಳಿಸಿದ್ದೀಯೆ. ಈ ಅರ್ಥವುಳ್ಳ ಸ್ವಪ್ರಕಾಶತ್ವವು ಜಡೈಕ್ಯವನ್ನು ಹೇಳಿದಾಗ ಚೆನ್ನಾಗಿ ಕೂಡುತ್ತದೆ. ಇದೇ ರೀತಿ ನೀನು ಬ್ರಹ್ಮನ ಸರ್ವಜ್ಞತ್ವಮೊದಲಾದ ಎಲ್ಲ ಗುಣಗಳಿಗೂ ಮಿಥ್ಯಾತ್ವವನ್ನು ಅಂಗೀಕರಿಸಿದ್ದೀಯೆ. ಅದೂ ಕೂಡ ಜಡೈಕ್ಯದಿಂದ ಚೆನ್ನಾಗಿ ಶೋಭಿಸುತ್ತದೆ. ಜಡದಲ್ಲಿ ರಾಗಾದಿ ದೋಷಗಳಿಗೆ ಯಾವುದಕ್ಕೂ ಅವಕಾಶವಿಲ್ಲ. ಅಂತಹ ಜಡೈಕ್ಯವನ್ನು ಹೇಳಿದಾಗ ಬ್ರಹ್ಮನಲ್ಲಿರುವ ದೋಷಶೂನ್ಯತ್ವವೂ ಕೂಡ ಬಹಳ ಉಪಪನ್ನವಾಗುವುದು. ಸುಖರೂಪತೆ ಮತ್ತು ಜ್ಞಾನರೂಪತೆ ಇವೆರಡನ್ನೂ ಜಡವಾದ ಮನಸ್ತತ್ವಕ್ಕೆ ಒಪ್ಪಿರುವುದರಿಂದ ಅದರ ಐಕ್ಯವು ಬಂದಾಗ ಬ್ರಹ್ಮನಲ್ಲಿರುವ ಅವೆರಡಕ್ಕೂ ಹಾನಿಯಾಗುವುದಿಲ್ಲ. ಹಾಗೆಯೇ ಯತೋ ವಾ ಇಮಾನಿ ಭೂತಾನಿ ಜಾಯಂತೇ ಎಂಬ ಶ್ರುತಿಯಲ್ಲಿ ಯತಃ ಎಂಬಲ್ಲಿರುವ ಪಂಚಮಿಯಿಂದ ಬ್ರಹ್ಮನ ಪ್ರಪಂಚೋಪಾದಾನಕಾರಣತ್ವವೂ ಕೂಡ ಜಡೈಕ್ಯದಿಂದ ಬ್ರಹ್ಮನಲ್ಲಿ ಬಹಳವಾಗಿ ಶೋಭಿಸುತ್ತದೆ. ಹೀಗೆ ಜಡೈಕ್ಯವನ್ನು ಹೇಳಿದಾಗ ಯಾವ ಬಾಧಕವೂ ಆಗುವುದಿಲ್ಲ. ಅಷ್ಟೇ ಅಲ್ಲ, ಬ್ರಹ್ಮನಲ್ಲಿ ನೀನು ಹೇಳುವ ಅನೇಕ ವಿಷಯಗಳಿಗೂ ಅದು ಬಹಳ ಅನುಕೂಲವೂ ಆಗಿದೆ. ಹೀಗಿರುವಾಗ ಜಡೈಕ್ಯವನ್ನು ಪರಿತ್ಯಜಿಸಿ ಎಲ್ಲ ವಿಧದಿಂದಲೂ ಬ್ರಹ್ಮನಿಗೆ ಬಾಧಕವಾಗಿರುವ ಜೀವೈಕ್ಯವನ್ನು ಮಾತ್ರ ಹೇಳಿದ್ದು ಸುತರಾಂ ಸರಿಯಲ್ಲ.

**ಸೃಷ್ಟಿಸ್ತ್ವದೃಷ್ಟತೋಽಸ್ತ್ವೇಷಾ ಭಾಟ್ಟಾನಾಮಿವ ತೇ ಮತೇ ।**
**ಮಿಥ್ಯಾಭೂತಂ ಚ ಕರ್ತೃತ್ವಂ ಕಸ್ಯ ನ ಸ್ಯಾದುದೀರ್ಯತಾಂ ॥ ೫೬೬ ॥**

**ಅರ್ಥ–** ಏಷಾ = ಈ ಯಾವ, ಸೃಷ್ಟಿಃ ತು = ಜಗತ್ತಿನ ಸೃಷ್ಟಿಯಾದರೂ, ತೇ = ನಿನ್ನ ಮತೇ (ಅಪಿ) = ಸಿದ್ಧಾಂತದಲ್ಲಿಯೂ, ಭಾಟ್ಟಾನಾಂ ಇವ = ಭಾಟ್ಟರಮತದಂತೆ, ಅದೃಷ್ಟತಃ = ಅದೃಷ್ಟದಿಂದಲೇ, ಅಸ್ತು = ಆಗಲಿ. (ತ್ವದುಕ್ತಂ = ನಿನ್ನಿಂದ ಹೇಳಲ್ಪಟ್ಟ) ಮಿಥ್ಯಾಭೂತಂ =

ಸುಖ್ಯಾದ, ಕರ್ತೃತ್ವಂ ಚ = ಜಗತ್‌ಕರ್ತೃತ್ವವು, ಕಸ್ಯ = ಯಾರಿಗೆ ತಾನೆ, ನ ಸ್ಯಾತ್ = ಬರುವುದಿಲ್ಲ? ಉದೀರ್ಯತಾಂ = ಹೇಳಲ್ಪಡಲಿ.

**ಅನುವಾದ–** ಭಾಟ್ಟರ ಮತದಲ್ಲಿರುವಂತೆ ಜಗತ್ತಿನ ಈ ಸೃಷ್ಟಿಯು ಅದೃಷ್ಟದಿಂದಲೇ ಆಗಲಿ. ಮಿಥ್ಯಾಭೂತವಾದ ಕರ್ತೃತ್ವವು ಯಾರಿಗೆ (ಯಾವುದಕ್ಕೆ) ಇರುವುದಿಲ್ಲ ಎಂದು ಹೇಳು.

**ಭಾವವಿಲಾಸಿನೀ–** ಈಶ್ವರಸ್ಯ ಜಡತ್ವೇ ಕರ್ತುರಭಾವಾತ್ ಕಥಂ ಜಗತ್‌ಸೃಷ್ಟಿರಿತ್ಯತ ಆಹ – **ಸೃಷ್ಟಿಸ್ತ್ವಿತಿ** ॥ ವ್ಯವಹಾರೇ ಭಟ್ಟನಯ ಇತಿ ತ್ವಯಾಪ್ಯಂಗೀಕಾರಾತ್ । ಯುಕ್ತ್ಯಂತರಂ ಚಾಹ – **ಮಿಥ್ಯಾಭೂತಮಿತಿ** ॥ ಚೇತನತ್ವೇಽಪಿ ಮಿಥ್ಯಾಭೂತಮೇವ ಕರ್ತೃತ್ವಂ ಬ್ರಹ್ಮಣಿ ಪರೋ ವಕ್ತಿ । ತಚ್ಚ ಜಡತ್ವೇ ಸುತರಾಂ ಶೋಭತ ಇತಿ ಭಾವಃ ॥ ೫೭೯ ॥

**ವಿವರಣೆ–** ಬ್ರಹ್ಮನಿಗೆ ಜಡೈಕ್ಯ ಬಂದರೆ ಕರ್ತೃವೇ ಇಲ್ಲದಂತಾಗಿ ಜಗತ್‌ಸೃಷ್ಟಿಯು ಹೇಗೆ ಆಗಲು ಸಾಧ್ಯ ಎಂಬ ಆಕ್ಷೇಪಕ್ಕೆ ಉತ್ತರಿಸುತ್ತಾರೆ. ಜಡಕ್ಕೆ ಕರ್ತೃತ್ವ ಶಕ್ತಿ ಇಲ್ಲ, ಇಂತಹ ಜಡದ ಜೊತೆ ಬ್ರಹ್ಮನಿಗೆ ಏಕವನ್ನುಹೇಳಿದರೆ ಬ್ರಹ್ಮನಿಗೂ ಕರ್ತೃತ್ವವು ಇಲ್ಲದಾಗಿ ಜಗತ್‌ಸೃಷ್ಟಿ ಹೇಗೆ ಆಗುತ್ತದೆ ಎಂಬ ಆಕ್ಷೇಪವೂ, ಸರಿಯಲ್ಲ. ಈಶ್ವರನನ್ನು ಒಪ್ಪದೇ ಇದ್ದರೂ ಭಾಟ್ಟರು ಅದೃಷ್ಟದಿಂದಲೇ ಜಗತ್‌ಸೃಷ್ಟಿ ಆಗುತ್ತದೆ ಎಂದು ಅಂಗೀಕರಿಸಿದ್ದಾರೆ. ವ್ಯವಹಾರೇ ಭಾಟ್ಟನಯಃ ಎಂದು ನೀನೂ ಒಪ್ಪಿದ್ದರಿಂದ ನಿನ್ನ ಮತದಲ್ಲಿಯೂ ಅದೃಷ್ಟದಿಂದಲೇ ಜಗತ್ತಿನ ಸೃಷ್ಟಿಯಾಗಲಿ. ಅದಕ್ಕೋಸ್ಕರ ಬ್ರಹ್ಮನಿಗೆ ಏಕೆ ಕರ್ತೃತ್ವವನ್ನು ಒಪ್ಪಬೇಕು? ಇಷ್ಟೇ ಅಲ್ಲ, ನೀನು ಹೇಳುವ ಜಗತ್‌ಕರ್ತೃತ್ವವು ಮಿಥ್ಯಾಭೂತವಾದದ್ದು. ಇದು ಯಾರಿಗೆ ಬರುವುದಿಲ್ಲ? ಹೇಳು. ಯಾರಿಗೆ ಬೇಕಾದರೂ ಇಂತಹ ಮಿಥ್ಯಾಭೂತವಾದ ಕರ್ತೃತ್ವವು ಬರಬಹುದಾದ್ದರಿಂದ ಅದೃಷ್ಟದಲ್ಲಿಯೂ ಏಕಿರಬಾರದು? ಏವಂ ಚ ಜಡೈಕ್ಯವು ಬ್ರಹ್ಮನಿಗೆ ಯಾವ ರೀತಿಯಲ್ಲಿಯೂ ಬಾಧಕವಾಗುವುದಿಲ್ಲ.

**ಚಿತ್ತ್ವಾದಿಧರ್ಮಶೂನ್ಯೈಸ್ತು ಚೇತನೈರ್ಘಟಸನ್ನಿಭೈಃ ।**
**ಅಪ್ಯೈಕ್ಯಂ ಯುಕ್ತಮೇವಾಸ್ಯೇತ್ಯಸ್ತು ಸರ್ವಂ ಸಮಂಜಸಮ್ ॥ ೫೭೦ ॥**

**ಅರ್ಥ–** ಚಿತ್ತ್ವಾದಿಧರ್ಮಶೂನ್ಯೈಃ = ಚಿತ್ತ್ವವೇ ಮೊದಲಾದ ಧರ್ಮಗಳಿಂದ ರಹಿತರಾದ, ಘಟಸನ್ನಿಭೈಃ = ಘಟಕ್ಕೆ ಸದೃಶರಾದ, ಚೇತನೈಃ ತು = ಚೇತನರಿಂದಲಾದರೂ, ಅಸ್ಯ = ಈ ಬ್ರಹ್ಮನಿಗೆ, ಐಕ್ಯಂ ಅಪಿ = ಅಭೇದವೂ ಕೂಡ, ಯುಕ್ತಂ ಏವ = ಯೋಗ್ಯವಾಗಿಯೇ, (ಭವೇತ್ = ಆದೀತು.) ಇತಿ = ಈ ರೀತಿಯಾಗಿ, ಸರ್ವಂ = ಎಲ್ಲವೂ, ಸಮಂಜಸಂ = ಯೋಗ್ಯವಾದದ್ದಾಗಿ, ಅಸ್ತು = ಆಗಲಿ.

**ಅನುವಾದ–** ಬ್ರಹ್ಮನಿಗೆ ಚಿತ್ತ್ವಾದಿಧರ್ಮಶೂನ್ಯರಾದ ಘಟಸದೃಶರಾದ ಚೇತನರಿಂದ ಐಕ್ಯವೂ ಕೂಡ ಯುಕ್ತವೇ ಆಗುತ್ತದೆ. ಆದ್ದರಿಂದ ಎಲ್ಲವೂ ಸಮಂಜಸ ವಾಗುವುದರಿಂದ ಜಡೈಕ್ಯವೇ ಇರಲಿ.

**ಭಾವವಿಲಾಸಿನೀ–** ನನ್ವೇವಂ ಬ್ರಹ್ಮಣೋ ಜಡೈಕ್ಯೇ ಚೈತನ್ಯೈಕ್ಯಂ ಕಥಂ ಘಟನೀಯಮಿತ್ಯತ ಆಹ – **ಚಿತ್ತ್ವಾದಿಧರ್ಮಶೂನ್ಯೈರಿತಿ ॥** ಚಿತ್ತ್ವಧರ್ಮಸಹಿತಸ್ಯ ಚೇತನಸ್ಯೈಕ್ಯಂ ಜಹಲ್ಲಕ್ಷಣಯಾ ಸಕಲಧರ್ಮಶೂನ್ಯಚಿನ್ಮಾತ್ರೈಕ್ಯವಾದೀ ಪರೋಽಪಿ ನ ವಕ್ತಿ । ಚಿತ್ತ್ವರಹಿತಸ್ತು ಘಟಪ್ರಾಯ ಏವೇತಿ ಬ್ರಹ್ಮಣೋ ಜಡತ್ವೇಽಪೀದೃಶಚೈತನ್ಯೈಕ್ಯಮಪಿ ಘಟತ ಏವ । ಅತೋ ನ ಕಾಪ್ಯನುಪಪತ್ತಿರಿತಿ ಭಾವೇನೋಕ್ತಂ ಸರ್ವಂ ಸಮಂಜಸಮಮಿತಿ ॥ ೫೭೦ ॥

**ವಿವರಣೆ–** ಬ್ರಹ್ಮನಿಗೆ ಜಡೈಕ್ಯವನ್ನು ಹೇಳಿದರೆ ಜೀವಚೇತನ್ಯೈಕ್ಯವನ್ನು ಅವನಿಗೆ ಹೇಗೆ ಕೂಡಿಸುವುದು ಎಂಬ ಈ ಆಕ್ಷೇಪವೂ ಸರಿಯಲ್ಲವೆಂದು ಪ್ರತಿಪಾದಿಸುತ್ತಾರೆ. ಸಕಲಧರ್ಮರಹಿತವಾದ ಚಿನ್ಮಾತ್ರಕ್ಕೇ ಅಭೇದವನ್ನು ಅಂಗೀಕಾರ ಮಾಡುವವರು ಅದ್ವೈತವಾದಿಗಳು. ಹೀಗಿರುವಾಗ ಚಿತ್ತ್ವವೇ ಮೊದಲಾದ ಧರ್ಮಗಳಿಂದ ಸಹಿತರಾದ ಚೇತನರಿಗೆ ಐಕ್ಯವನ್ನು ಅವರೂ ಅಂಗೀಕರಿಸುವುದಿಲ್ಲ. ಐಕ್ಯ ಬರಬೇಕಾದರೆ ಆ ಧರ್ಮಗಳನ್ನು ಬಿಡಲೇಬೇಕಾಗುತ್ತದೆ. ಆ ಧರ್ಮಗಳನ್ನು ಬಿಟ್ಟರೆ ಚೇತನರೂ ಘಟಪಟಾದಿ ಜಡಗಳಿಗೆ ಸದೃಶರಾಗುತ್ತಾರೆ. ಹೀಗಾಗಿ ಬ್ರಹ್ಮನಿಗೆ ಜಡೈಕ್ಯವು ಬಂದರೂ ಜೀವಚೇತನರಿಗೆ ಬ್ರಹ್ಮನ ಜೊತೆ ಅಭೇದ ಬರಲು ಯಾವ ತೊಂದರೆಯೂ ಆಗುವುದಿಲ್ಲ. ಹೀಗೆ ಜಡೈಕ್ಯವನ್ನು ಹೇಳಿದರೂ ಯಾವ ಬಾಧಕವೂ ಆಗದೆ ಎಲ್ಲವೂ ಸಮಂದಜಸವೆನಿಸುವುದು.

**ಯದ್ಯೇವಮಪಿ ತತ್ರಾರ್ಥಸ್ತದ್ವಿನಾಽಸತ್ವಮೇವ ತೇ ।**
**ಚೇತನೇಪ್ಯಸ್ತ್ವಸಾವರ್ಥೋ ದ್ವಿಧಾ ಕ್ಲೃಪ್ತಿಸ್ತು ತೇ ಮುಧಾ ॥ ೫೭೧ ॥**

**ಅರ್ಥ–** ಏವಂ ಅಪಿ = ಚೇತನ್ಯೈಕ್ಯಕ್ಕಿಂತಲೂ ಜಡೈಕ್ಯವೇ ಯುಕ್ತಿಯುಕ್ತವಾದರೂ, ತೇ (ಮತೇ) = ನಿನ್ನ ಸಿದ್ಧಾಂತದಲ್ಲಿ, ತತ್ರ = ಆ ಜಡವಿಷಯದಲ್ಲಿ, ತದ್ ವಿನಾ = ಆ ಬ್ರಹ್ಮನನ್ನು ಹೊರತಾಗಿ, ಅಸತ್ವಂ ಏವ = ಇಲ್ಲದಿರುವಿಕೆಯೇ, (ವಾಕ್ಯಸ್ಯ = ಸರ್ವಂ ಖಲ್ವಿದಂ ಬ್ರಹ್ಮ ಎಂಬ ವಾಕ್ಯದ) ಅರ್ಥಃ = ಅರ್ಥವು (ಆಗುತ್ತದೆ ಎಂದು) ಯದಿ = ಒಂದು ಪಕ್ಷದಲ್ಲಿ, (ಉಚ್ಯತೇ = ಹೇಳಲ್ಪಡುತ್ತದೆಯೋ) (ತರ್ಹಿ = ಆ ಪಕ್ಷದಲ್ಲಿ) ಚೇತನೇ ಅಪಿ = ಜೀವರ ವಿಷಯದಲ್ಲಿಯೂ ಕೂಡ, ಅಸೌ = ಈ ಯಾವ (ಬ್ರಹ್ಮನನ್ನು ಹೊರತಾಗಿ ಇರುವುದಿಲ್ಲ ಎಂಬುದಾಗಿ) ಅರ್ಥಃ = (ಆ ವಾಕ್ಯದ) ಅರ್ಥವು, ಅಸ್ತು = ಆಗಲಿ, ತೇ = ನಿನ್ನ ದ್ವಿಧಾ = ಎರಡು ರೀತಿಯಾದ (ಚೇತನರಲ್ಲಿ ಒಂದು ರೀತಿ, ಜಡದಲ್ಲಿ ಮತ್ತೊಂದು ರೀತಿ, ಹೀಗೆ ಎರಡು ರೀತಿಯಾದ), ಕ್ಲೃಪ್ತಿಃ ತು = ಅರ್ಥಕಲ್ಪನೆಯು, ಮುಧಾ = ವ್ಯರ್ಥವಾಗಿ, (ಭವತಿ = ಆಗುತ್ತದೆ).

**ಅನುವಾದ–** ಹೀಗಿದ್ದರೂ ಕೂಡ ಜಡದ ವಿಷಯದಲ್ಲಿ ಐಕ್ಯವೆಂದರೆ ಬ್ರಹ್ಮನನ್ನು ಬಿಟ್ಟು ಇರುವುದಿಲ್ಲ ಎಂಬ ಅರ್ಥವನ್ನು ಹೇಳುವುದಾದರೆ ಚೇತನರಾದ ಜೀವರಲ್ಲಿಯೂ ಅದೇ ಅರ್ಥವನ್ನು ಹೇಳು. ನೀನು ಮಾಡುವ ಎರಡು ರೀತಿಯ ಅರ್ಥಕಲ್ಪನೆಯು ವ್ಯರ್ಥವಾದುದು.

**ಭಾವವಿಲಾಸಿನೀ–** ಏವಮಪಿ ಚ ಉಪಸಂಹರತಿ – **ಯದ್ಯೇವಮಪೀತಿ ॥** ಏವಮಪಿ ಚೈತನ್ಯೈಕ್ಯಾದಪಿ ಜಡೈಕ್ಯಸ್ಯ ಯುಕ್ತಿಯುಕ್ತತ್ವೇಽಪಿ । ತತ್ರ ಜಡೇ । ಅರ್ಥಃ ವಾಕ್ಯಾರ್ಥಃ । ತತ್ ಬ್ರಹ್ಮ । ಮಿಥ್ಯಾತ್ವಮಿತ್ಯರ್ಥಃ । ಅಸೌ ಬ್ರಹ್ಮವಿನಾಽಸತ್ತಾಖ್ಯಮಿಥ್ಯಾತ್ವರೂಪಃ । ದ್ವಿಧಾ ಏಕತ್ರ ಮಿಥ್ಯಾತ್ವಮನ್ಯತ್ರೈಕ್ಯಮಿತಿ ಪ್ರಕಾರದ್ವಯೇನ ॥ ೫೭೧ ॥

**ವಿವರಣೆ–** ಹಿಂದೆ ಹೇಳಿದ ವಿಷಯದ ಉಪಸಂಹಾರ ಮಾಡುತ್ತಾರೆ. ಹಿಂದೆ ಸಮರ್ಥಿಸಿದ ರೀತಿಯಲ್ಲಿ ಚೇತನೈಕ್ಯಕ್ಕಿಂತಲೂ ಜಡೈಕ್ಯವೇ ಯುಕ್ತವಾಗಿದೆ. ಹೀಗಿದ್ದರೂ ಸರ್ವಂ ಖಲ್ವಿದಂ ಬ್ರಹ್ಮ ಎಂಬ ವಾಕ್ಯಕ್ಕೆ ಜಡವಿಷಯದಲ್ಲಿ ಮಾತ್ರ ಬ್ರಹ್ಮನನ್ನು ಬಿಟ್ಟು ಇರುವುದಿಲ್ಲ ಎಂದೇ ಅರ್ಥವನ್ನು ಹೇಳುವುದಾದರೆ ಜೀವರ ವಿಷಯದಲ್ಲಿಯೂ ಬ್ರಹ್ಮನನ್ನು ಬಿಟ್ಟು ಇರುವುದಿಲ್ಲ ಎಂಬುದಾಗಿಯೇ ಆ ವಾಕ್ಯಕ್ಕೆ ಅರ್ಥವನ್ನು ಏಕೆ ಹೇಳಬಾರದು? ಜಡದಲ್ಲಿ ಒಂದು ರೀತಿ, ಜೀವರಲ್ಲಿ ಇನ್ನೊಂದು ರೀತಿ ಹೀಗೆ ಒಂದೇ ವಾಕ್ಯಕ್ಕೆ ಎರಡು ರೀತಿಯಲ್ಲಿ ಅರ್ಥ ಕಲ್ಪಿಸುವುದು ವ್ಯರ್ಥವೇ ಸರಿ. ಆದ್ದರಿಂದ ಜಡದಲ್ಲಿ ಹೇಳುವಂತೆ ಜೀವರಿಗೂ ಮಿಥ್ಯಾತ್ವವನ್ನೇ ಹೇಳುವುದು ಉಚಿತವಾಗುತ್ತದೆ.

ಗಜೋ ಮಿಥ್ಯಾ ಯಥಾ ತದ್ವನ್ಮಿಥ್ಯಾ ಕಿಲ ಪಲಾಯನಂ ।
ಬಂಧೋ ಮಿಥ್ಯಾ ವಿಮೋಕ್ಷಶ್ಚ ಮಿಥ್ಯಾ ಕಿಲ ಭವನ್ಮತೇ ॥ ೫೭೨ ॥

**ಅರ್ಥ–** ಯಥಾ = ಯಾವ ರೀತಿ, ಗಜಃ = ಆನೆಯು, ಮಿಥ್ಯಾ = ಸುಳ್ಳೋ, ತದ್ವತ್ = ಅದರಂತೆ, ಪಲಾಯನಂ ಅಪಿ = ಓಡುವಿಕೆಯೂ ಕೂಡ, ಮಿಥ್ಯಾ = ಸುಳ್ಳಾಗಿ, ಭವತಿ ಕಿಲ = ಆಗುತ್ತದೆಯಷ್ಟೇ. ಭವನ್ಮತೇ = ನಿನ್ನ ಸಿದ್ಧಾಂತದಲ್ಲಿ, ಬಂಧಃ = ಸಂಸಾರ ಬಂಧನವೂ, ಮಿಥ್ಯಾ = ಸುಳ್ಳು, ವಿಮೋಕ್ಷಃ ಚ = ಮೋಕ್ಷವೂ ಕೂಡ, ಮಿಥ್ಯಾ = ಸುಳ್ಳಾಗಿ, ಭವತಿ ಕಿಲ = ಆಗುತ್ತದೆಯಷ್ಟೆ

**ಅನುವಾದ–** ಗಜವು ಮಿಥ್ಯೆಯಾದಂತೆ ಪಲಾಯನವೂ ಮಿಥ್ಯೆಯಷ್ಟೇ? ನಿನ್ನ ಮತದಲ್ಲಿ ಬಂಧವೂ ಮಿಥ್ಯೆ ಮತ್ತು ಮೋಕ್ಷವೂ ಮಿಥ್ಯೆಯಷ್ಟೇ?

**ಭಾವವಿಲಾಸಿನೀ–** ನನು ಚೇತನಾನಾಂ ಮಿಥ್ಯಾತ್ವೇ ಮೋಕ್ಷಭೋಕ್ತಾ ಕಃ ಸ್ಯಾದಿತ್ಯಶಂಕ್ಯ ತವ ಮತೇ ವಾಸ್ತುಸಾವಿತ್ಯಾಹ – **ಗಜೋ ಮಿಥ್ಯೇತಿ ॥** ಗಜಾದ್ಭೀತ್ಯಾಪಲಾಯನಂ ಕುರ್ವಂತಂ ಪರಾಚಾರ್ಯಂ ಪ್ರತಿ ಗಜೋ ಮಿಥ್ಯಾ ಪಲಾಯನಂ ಕಿಮರ್ಥಂ ಕ್ರಿಯತ ಇತ್ಯುಕ್ತೇ

ಪಲಾಯನಮಪಿ ಮಿಥ್ಯೇತ್ಯುತ್ತರಂ ದತ್ತಂ ಕಿಲ । ಏವಂಚ ಬಂಧೋ ಮಿಥ್ಯಾ ಕಿಮರ್ಥಂ ತತ್‌ಪರಿಹಾರೋದ್ಯೋಗ ಇತ್ಯುಕ್ತೇ ಸೋऽಪಿ ಮಿಥ್ಯೇತ್ಯೇವ ಪರಸ್ಯ ಸಿದ್ಧಾಂತೋऽನುಮೀಯತೇ । ಅತಃ ಕಸ್ಯ ಬಂಧಃ ಕಸ್ಯ ಮೋಕ್ಷೋ ನ ಕಸ್ಯಾಪೀತಿ ಭಾವಃ ॥ ೫೭೨ ॥

**ವಿವರಣೆ–** ಆನೆಯನ್ನು ನೋಡಿ ಹೆದರಿಕೆಯಿಂದ ಓಡುತ್ತಿರುವ ಅದ್ವೈತಾಚಾರ್ಯರನ್ನು ಕುರಿತು, ನಿಮ್ಮ ಮತದಲ್ಲಿ ಆನೆಯೇ ಸುಳ್ಳಾಗಿರುವಾಗ ಅದನ್ನು ನೋಡಿ ಹೆದರಿಕೆಯಿಂದ ನೀನು ಓಡುವುದಾದರೂ ಏಕೆ? ಎಂದು ಪ್ರಶ್ನಿಸಿದಾಗ, ಹೇಗೆ ಆನೆಯು ಸುಳ್ಳೋ ಹಾಗೆಯೇ ನಾನು ಓಡುವುದೂ ಸುಳ್ಳು ಎಂದು ಉತ್ತರವನ್ನು ಕೊಟ್ಟರೆಂದು ಪ್ರಸಿದ್ಧಿ ಇದೆ. ಹಾಗಯೇ ಬಂಧ ಎಂಬುದೂ ಸುಳ್ಳು, ಮೋಕ್ಷವೂ ಸುಳ್ಳೇ ಆಗಿದೆ ಎಂದು ಉತ್ತರಿಸಬಹುದು. ಹೀಗೆ ಬಂಧವೂ ಸುಳ್ಳು, ಮೋಕ್ಷವೂ ಸುಳ್ಳಾಗಿರುವಾಗ ಯಾರಿಗೆ ಬಂಧ? ಯಾರಿಗೆ ಮೋಕ್ಷ? ಯಾರಿಗೂ ಯಾವುದೂ ಯಾವಾಗಲೂ ಇಲ್ಲವೇ ಇಲ್ಲ. ಆದ್ದರಿಂದ ಮೋಕ್ಷವನ್ನು ಅನುಭವಿಸುವ ಜೀವನನ್ನು ಉಪಪಾದನೆ ಮಾಡಬೇಕಾಗಿಲ್ಲ ಎಂದು ಅಭಿಪ್ರಾಯ.

**ಅತಃ ಕಿಂ ಚೇತನೈರೇತೈಃ ಕರ್ತೃತಾಭೋಕ್ತೃತೋಜ್ಝಿತೈಃ ।**
**ಸರ್ವತ್ರೈಕ್ಯಶ್ರುತೀನಾಂ ಸ್ಯಾದೇವಂ ಚೇದೇಕವಾಕ್ಯತಾ ॥ ೫೭೩ ॥**

**ಅರ್ಥ–** ಅತಃ = ಬಂಧ ಮೋಕ್ಷಾದಿಗಳಿಗೆ ಮಿಥ್ಯಾತ್ವವನ್ನು ಹೇಳಿದ್ದರಿಂದ, ಕರ್ತೃತಾಭೋಕ್ತೃತೋಜ್ಝಿತೈಃ = ಕರ್ತೃತ್ವ ಭೋಕ್ತೃತ್ವವಿಲ್ಲದಿರುವ, ಏತೈಃ = ಈ ಯಾವ, ಚೇತನೈಃ = ಜೀವಚೇತನರಿಂದ, ಕಿಂ (ಪ್ರಯೋಜನಂ) = ಏನು ಪ್ರಯೋಜನವು (ಸ್ಯಾತ್ = ಆದೀತು?) ಏವಂ ಚೇತ್ = ಚೇತನಾಚೇತನಾತ್ಮಕಸರ್ವಪ್ರಪಂಚಕ್ಕೂ ಮಿಥ್ಯಾತ್ವವನ್ನು ಹೇಳಿದ ಪಕ್ಷದಲ್ಲಿ, ಐಕ್ಯಶ್ರುತೀನಾಂ = ಸರ್ವಂ ಖಲ್ವಿದಂ ಬ್ರಹ್ಮ ಇವೇ ಮೊದಲಾದ ಐಕ್ಯಶ್ರುತಿಗಳಿಗೆ, ಸರ್ವತ್ರ = ಚೇತನಾಚೇತನಗಳೆಂಬ ಎಲ್ಲ ವಿಷಯಗಳಲ್ಲೂ ಏಕವಾಕ್ಯತಾ = ಒಂದೇ ವಿಧದ ಅರ್ಥಪ್ರತಿಪಾದಕತ್ವವು, ಸ್ಯಾತ್ = ಆದೀತು.

**ಅನುವಾದ–** ಆದ್ದರಿಂದ ಕರ್ತೃತ್ವ ಭೋಕ್ತೃತ್ವರಹಿತವಾದ ಈ ಚೇತನಗಳಿಂದ ಏನು ಪ್ರಯೋಜನ? ಆದ್ದರಿಂದ ಅದನ್ನು ಬಿಟ್ಟು ಐಕ್ಯಶ್ರುತಿಗೆ ಎರಡು ಕಡೆಗಳಲ್ಲಿಯೂ ಒಂದೇ ರೀತಿಯಾದ ಅರ್ಥವನ್ನು ಹೇಳು. ಆಗ ಏಕವಾಕ್ಯತ್ವವು ಉಪಪನ್ನವಾಗುತ್ತದೆ.

**ಭಾವವಿಲಾಸಿನೀ–** ಅತಃ ಬಂಧಮೋಕ್ಷಾದಿವ್ಯವಸ್ಥಾಭಾವಾತ್ । ಯುಕ್ತ್ಯಂತರಂ ಚಾಹ – **ಕರ್ತೃತಾಭೋಕ್ತೃತೋಜ್ಝಿತೈರಿತಿ ॥** ಮೋಕ್ಷಸಾಧನಕರ್ತೃತ್ವಂ ಮಿಥ್ಯಾ ಚೇತ್ ಮೌಕ್ತಸುಖಭೋಕ್ತೃತ್ವಂ ಚ ಮಿಥ್ಯಾ ಚೇತ್ ಮುಕ್ತತ್ವಂ ವಾರ್ತಾಮಾತ್ರಮಿತಿ ಭಾವಃ । ಉಪಲಕ್ಷಣಂ ಚೈತತ್ । ಚೇತನಾಂತರಸ್ಯ ಮಿಥ್ಯಾತ್ವೇऽಪಿ ಬ್ರಹ್ಮಾಖ್ಯಚೇತನಸ್ಯ

ವಿದ್ಯಮಾನತ್ವಾತ್ತಸ್ಯೈವ ಬದ್ಧತ್ವಂ ಮುಕ್ತತ್ವಂ ಚ ಭವೇತ್ । ಅತೋ ಲಾಘವಾತ್ ಬ್ರಹ್ಮವ್ಯತಿರಿಕ್ತಸ್ಯ ಸರ್ವಸ್ಯ ಮಿಥ್ಯಾತ್ವೇ ಪರಸ್ಯ ನ ಕಾಪ್ಯನುಪಪತ್ತಿರಿತ್ಯಪಿ ದ್ರಷ್ಟವ್ಯಮ್ । ಏವಂ ಚೇತ್ ಬ್ರಹ್ಮವ್ಯತಿರಿಕ್ತಸ್ಯ ಚೇತನಾಚೇತನಾತ್ಮಕಸ್ಯ ಸರ್ವಸ್ಯ ಮಿಥ್ಯಾತ್ವಂ ಚೇತ್ ॥ ೫೭೩ ॥

**ವಿವರಣೆ–** ಜೀವರಿಗೆ ಮಿಥ್ಯಾತ್ವವನ್ನು ಹೇಳದಿದ್ದರೂ ಅದ್ವೈತಮತದಲ್ಲಿ ಮೋಕ್ಷದ ಅನುಭವ ಜೀವರಿಗೆ ಆಗುವುದಿಲ್ಲವೆನ್ನುತ್ತಾರೆ. ಅದ್ವೈತಮತದಲ್ಲಿ ಕರ್ತೃತ್ವ ಭೋಕ್ತೃತ್ವಾದಿ ಎಲ್ಲ ಧರ್ಮಗಳೂ ಮಿಥ್ಯಾಭೂತವಾಗಿವೆ. ಹೀಗಾಗಿ ಜೀವರಲ್ಲಿ ಕರ್ತೃತ್ವವಿಲ್ಲ. ಮೋಕ್ಷಸಾಧನೆಯೂ ಇಲ್ಲವಾಗಿ ಮೋಕ್ಷವೇ ಅವರಿಗೆ ಆಗಲು ಸಾಧ್ಯವಿಲ್ಲ. ಅಷ್ಟೇ ಅಲ್ಲ ಅವರಲ್ಲಿ ಭೋಕ್ತೃತ್ವವೂ ಮಿಥ್ಯಾಭೂತವಾಗಿದೆ. ಆದ್ದರಿಂದ ಮೋಕ್ಷವಾದರೂ ಅಲ್ಲಿ ಭೋಕ್ತೃತ್ವವೂ ಅವರಿಗೆ ಕೂಡುವುದಿಲ್ಲ. ಹೀಗೆ ಜೀವರಿಗೆ ಮಿಥ್ಯಾತ್ವವನ್ನು ಒಪ್ಪದಿದ್ದರೂ ಕೂಡ ಮೋಕ್ಷದಲ್ಲಿ ಭೋಕ್ತೃತ್ವವನ್ನು ಹೇಳಲು ಬರುವುದಿಲ್ಲ. ಆದ್ದರಿಂದ ಜಡಚೇತನರಿಗಿಬ್ಬರಿಗೂ ಮಿಥ್ಯಾತ್ವವನ್ನು ಅಂಗೀಕರಿಸಿದರೆ ಯಾವ ಬಾಧಕವೂ ಇಲ್ಲ. ಅಷ್ಟೇ ಅಲ್ಲ ಸರ್ವಂ ಖಲ್ವಿದಂ ಬ್ರಹ್ಮ ಇವೇ ಮೊದಲಾದ ಐಕ್ಯವಾಕ್ಯಗಳಿಗೆ ಜಡವಿಷಯದಲ್ಲಿ ಒಂದು ರೀತಿ ಅರ್ಥಹೇಳುವುದು, ಜೀವ ವಿಷಯದಲ್ಲಿ ಇನ್ನೊಂದು ರೀತಿ ಅರ್ಥಹೇಳುವುದು ಹೀಗೆ ಅರ್ಥದ್ವೈವಿಧ್ಯವನ್ನು ಕಲ್ಪಿಸದೆ, ಏಕಾರ್ಥವನ್ನೇ ಹೇಳಿದರೆ ಏಕವಾಕ್ಯತೆಯೂ ಬಂದು ಅನುಕೂಲವೇ ಆಗುವುದು. ಆದ್ದರಿಂದ ಜಡಚೇತನರೂಪಸಕಲಪ್ರಪಂಚಕ್ಕೂ ಐಕ್ಯವನ್ನೇ ಅಂಗೀಕರಿಸುವುದು ಉಚಿತವಾಗುತ್ತದೆ. ಹೀಗೆ ಜೀವಚೇತನಕ್ಕೆ ಮಿಥ್ಯಾತ್ವವನ್ನು ಒಪ್ಪಿದರೂ ಕೂಡ ಬ್ರಹ್ಮನೆಂಬ ಚೇತನವು ಇರುವುದರಿಂದ ಅದಕ್ಕೆ ಬದ್ಧತ್ವ ಮತ್ತು ಮುಕ್ತತ್ವವನ್ನು ಹೇಳಲು ಬರುತ್ತದೆ. ಹೀಗೆ ಹೇಳಿದರೆ ಮೋಕ್ಷದಲ್ಲಿ ಭೋಗ ಯಾರಿಗೆ ಎಂಬ ಹಿಂದೆ ಹೇಳಿದ ಆಕ್ಷೇಪಕ್ಕೂ ಅವಕಾಶವಿಲ್ಲವಾಗುತ್ತದೆ.

**ಸಾಮ್ಯೇಽಪಿ ಶ್ರುತಿಯುಕ್ತೀನಾಂ ಹಾನ್ಯಭಾವೇಽಪಿ ಕೇವಲಂ ।**
**ಯದಿ ಸ್ವಮತರಕ್ಷಾಯೈ ವಿವಕ್ಷೇಯಮಪೇಕ್ಷ್ಯತೇ ॥ ೫೭೪ ॥**

**ತರ್ಹ್ಯನ್ಯಮತರಕ್ಷಾಯೈ ಯುಕ್ತಿಪ್ರತ್ಯಕ್ಷಸತ್ಕೃತಂ ।**
**ಸರ್ವಸ್ಯ ತದಧೀನತ್ವಮರ್ಥಂ ಸಾ ವಕ್ತಿ ನ ದ್ವಿಧಾ ॥ ೫೭೫ ॥**

**ಅತೋ ವಾಕ್ಯಬಲಾದೈಕ್ಯಮಾಶಾಸ್ಯಂ ನ ಕ್ವಚಿತ್ ತ್ವಯಾ ॥ ೫೭೬ ॥**

**ಅರ್ಥ–** (ಉಭಯಪಕ್ಷೇಽಪಿ = ಜಡೈಕ್ಯ ಚೇತನೈಕ್ಯಪಕ್ಷ ಈ ಎರಡು ಪಕ್ಷಗಳಲ್ಲಿಯೂ ಕೂಡ) ಶ್ರುತಿಯುಕ್ತೀನಾಂ = ಶ್ರುತಿ ಮತ್ತು ಯುಕ್ತಿಗಳಿಗೆ, ಸಾಮ್ಯೇ ಅಪಿ = ಸಾಮ್ಯವಿದ್ದರೂ ಕೂಡ, ಹಾನ್ಯಭಾವೇ ಅಪಿ = ಬಾಧಕವಿಲ್ಲದಿದ್ದರೂ ಕೂಡ, ಸ್ವಮತರಕ್ಷಾಯೈ ಕೇವಲಂ = ನಿನ್ನ

ಸಿದ್ಧಾಂತದ ರಕ್ಷಣೆಗೋಸ್ಕರ ಮಾತ್ರ, ಇಯಂ = ಹಿಂದೆ ಹೇಳಿದ (ಜಡಮಿಥ್ಯಾತ್ವ, ಚೇತನೈಕ್ಯರೂಪ ದ್ವಿವಿಧ ಅರ್ಥಕಲ್ಪನೆಯ) ವಿವಕ್ಷಾ = ಅಭಿಪ್ರಾಯವು, ಯದಿ = ಒಂದು ಪಕ್ಷ ಅಪೇಕ್ಷ್ಯತೇ = ಅಪೇಕ್ಷಿಸಲ್ಪಡುವುದಾದರೆ, ತರ್ಹಿ = ಆ ಪಕ್ಷದಲ್ಲಿ, ಅನ್ಯಮತರಕ್ಷಾಯೈ = ತತ್ತ್ವವಾದಿಗಳ ಸಿದ್ಧಾಂತದ ರಕ್ಷಣೆಗೋಸ್ಕರ, ಸಾ = ಸರ್ವಂ ಖಲ್ವಿದಂ ಬ್ರಹ್ಮ ಎಂಬಿತ್ಯಾದಿ ಆ ಶ್ರುತಿಯು, ಸರ್ವಸ್ಯ = ಎಲ್ಲ ಪ್ರಪಂಚಕ್ಕೆ, ಯುಕ್ತಿಪ್ರತ್ಯಕ್ಷಸತ್ಕೃತಂ = ಯುಕ್ತಿ ಮತ್ತು ಪ್ರತ್ಯಕ್ಷಪ್ರಮಾಣಗಳಿಂದ ಸತ್ಕರಿಸಲ್ಪಟ್ಟ ತದಧೀನತ್ವಂ ಅರ್ಥಂ = ಈಶ್ವರಾಧೀನತ್ವರೂಪವಾದ ಅರ್ಥವನ್ನು ವಕ್ತಿ = ಹೇಳುತ್ತದೆ. (ತ್ವದುಕ್ತರೀತ್ಯಾ = ನೀನು ಹೇಳಿದ ರೀತಿಯಿಂದ) ದ್ವಿಧಾ = ಎರಡು ರೀತಿಯ, ಅರ್ಥಂ = ಅರ್ಥವನ್ನು ನ ವಕ್ತಿ = ಹೇಳುವುದಿಲ್ಲ, ಅತಃ = ಎಲ್ಲ ಐಕ್ಯವಾಕ್ಯಗಳಿಂದಲೂ ಎಲ್ಲವೂ ಈಶ್ವರಾಧೀನವಾಗಿವೆ ಎಂಬ ಲಘುಭೂತವಾದ ಅರ್ಥಲಾಭವಾಗುವುದರಿಂದ, ವಾಕ್ಯಬಲಾತ್ = ಶ್ರುತಿವಾಕ್ಯದ ಬಲದಿಂದ, ಕ್ವಚಿತ್ = ಎಲ್ಲಿಯೂ ಕೂಡ, ಐಕ್ಯಂ = ಬ್ರಹ್ಮೈಕ್ಯವು, ತ್ವಯಾ = ನಿನ್ನಿಂದ, ಆಶಾಸ್ಯಂ = ಇಚ್ಛಿಸಲ್ಪಡುವುದಾಗಿ, ನ ಭವೇತ್ = ಆಗಬಾರದು.

**ಅನುವಾದ–** ಶ್ರುತಿ ಯುಕ್ತಗಳು ಸಮಾನವಾಗಿದ್ದರೂ ಮತ್ತು ಹಾಗೆ ಅಂಗೀಕರಿಸಿದರೆ ಯಾವ ಹಾನಿಯೂ ಇಲ್ಲದಿದ್ದರೂ, ಕೇವಲ ನಿನ್ನ ಮತದ ರಕ್ಷಣೆಗೋಸ್ಕರ ನೀನು ಹೀಗೆ ಎರಡು ರೀತಿಯ ಅರ್ಥವನ್ನು ಹೇಳುವುದಾದರೆ, ನಮ್ಮ ಮತದ ರಕ್ಷಣೆಗೋಸ್ಕರ ಆ ಶ್ರುತಿಯು ಜಡಚೇತನ ಎಲ್ಲ ಪದಾರ್ಥಗಳಿಗೂ ಯುಕ್ತಿಪ್ರತ್ಯಕ್ಷ ಸಿದ್ಧವಾದಂತಹ ಬ್ರಹ್ಮಾಧೀನತ್ವ ರೂಪವಾದ ಅರ್ಥವನ್ನೇ ಹೇಳುತ್ತದೆ. ಎರಡು ರೀತಿಯ ಅರ್ಥವನ್ನು ಹೇಳುವುದಿಲ್ಲ ಎಂದು ಅಂಗೀಕರಿಸು. ಆದ್ದರಿಂದ ಐಕ್ಯವಾಕ್ಯದ ಬಲದಿಂದ ಎಂದೂ ಐಕ್ಯವನ್ನು ಆಶಿಸಬಾರದು.

**ಭಾವವಿಲಾಸಿನೀ–** ಕೇವಲಂ ಸ್ವಮತರಕ್ಷಾಯಾ ಇತಿ ಸಂಬಂಧಃ । ಇಯಂ ಜಡಮಿಥ್ಯಾತ್ವ - ಚೇತನಮಾತ್ರೈಕ್ಯರೂಪಾ । ಅನ್ಯಮತರಕ್ಷಾಯೈ ತತ್ತ್ವವಾದಮತರಕ್ಷಾಯೈ । ಯುಕ್ತಿಪ್ರತ್ಯಕ್ಷಸತ್ಕೃತಂ ಮುಖ್ಯಾರ್ಥಬಾಧೇ ಸರ್ವತ್ರ ಲಕ್ಷಣಾದರ್ಶನಾತ್ ಯುಕ್ತಿಸತ್ಕೃತಮ್ । ವಾಕ್ಯಾರ್ಥಸ್ಯ ಪ್ರತ್ಯಕ್ಷಬಾಧಾಭಾವಾತ್ ಪ್ರತ್ಯುತ ಭಗವದಧೀನತ್ವಸ್ಯ ಸರ್ವೈರಪ್ಯನುಭೂಯಮಾನತ್ವಾಚ್ಚ ಪ್ರತ್ಯಕ್ಷಸತ್ಕೃತಮ್ । ಸಾ ಸರ್ವಂ ಖಲ್ವಿದಂ ಬ್ರಹ್ಮೇತಿ ಶ್ರುತಿಃ । ಸಂಭವತ್ಯೇಕವಾಕ್ಯತ್ವೇ ವಾಕ್ಯಭೇದೋ ಹಿ ದೂಷಣಮಿತಿ ವಚನಾದಿತಿ ಭಾವಃ ॥ ೫೭೪-೫೭೫॥

ಅತಃ ಸರ್ವೈಕ್ಯವಾಕ್ಯೇಷ್ವಪಿ ಭಗವಧೀನತ್ವಾಖ್ಯಲಘುಭೂತಾರ್ಥಲಾಭಾತ್ ॥ ೫೭೬ ॥

**ವಿವರಣೆ–** ಸಕಲಪ್ರಪಂಚಕ್ಕೆ ಐಕ್ಯವನ್ನು ಹೇಳಿದರೆ ಐಕ್ಯವಾಕ್ಯಗಳಿಗೆ ಏಕವಾಕ್ಯತೆ ಎಂಬ ಆನುಕೂಲ್ಯವಿದ್ದರೂ, ಹಿಂದೆ ಹೇಳಿದ ಬಾಧಕಾದಿಗಳು ಇಲ್ಲದಿದ್ದರೂ ಕೂಡ ನಮ್ಮ ಮತದ ರಕ್ಷಣೆಗೋಸ್ಕರ ಆ ವಾಕ್ಯಗಳಿಗೆ ಅರ್ಥದ್ವೈವಿಧ್ಯವನ್ನು ಏಕೆ ಕಲ್ಪಿಸಬಾರದು ಎಂದು

ವಿದ್ಯಮಾನತ್ವಾತ್ತಸ್ಯೈವ ಬದ್ಧತ್ವಂ ಮುಕ್ತತ್ವಂ ಚ ಭವೇತ್ । ಅತೋ ಲಾಘವಾತ್ ಬ್ರಹ್ಮವ್ಯತಿರಿಕ್ತಸ್ಯ ಸರ್ವಸ್ಯ ಮಿಥ್ಯಾತ್ವೇ ಪರಸ್ಯ ನ ಕಾಪ್ಯನುಪಪತ್ತಿರಿತ್ಯಪಿ ದ್ರಷ್ಟವ್ಯಮ್ । ಏವಂ ಚೇತ್ ಬ್ರಹ್ಮವ್ಯತಿರಿಕ್ತಸ್ಯ ಚೇತನಾಚೇತನಾತ್ಮಕಸ್ಯ ಸರ್ವಸ್ಯ ಮಿಥ್ಯಾತ್ವಂ ಚೇತ್ ॥ ೫೭೩ ॥

**ವಿವರಣೆ–** ಜೀವರಿಗೆ ಮಿಥ್ಯಾತ್ವವನ್ನು ಹೇಳದಿದ್ದರೂ ಅದ್ವೈತಮತದಲ್ಲಿ ಮೋಕ್ಷದ ಅನುಭವ ಜೀವರಿಗೆ ಆಗುವುದಿಲ್ಲವೆನ್ನುತ್ತಾರೆ. ಅದ್ವೈತಮತದಲ್ಲಿ ಕರ್ತೃತ್ವ ಭೋಕ್ತೃತ್ವಾದಿ ಎಲ್ಲ ಧರ್ಮಗಳೂ ಮಿಥ್ಯಾಭೂತವಾಗಿವೆ. ಹೀಗಾಗಿ ಜೀವರಲ್ಲಿ ಕರ್ತೃತ್ವವಿಲ್ಲ, ಮೋಕ್ಷಸಾಧನೆಯೂ ಇಲ್ಲವಾಗಿ ಮೋಕ್ಷವೇ ಅವರಿಗೆ ಆಗಲು ಸಾಧ್ಯವಿಲ್ಲ. ಅಷ್ಟೇ ಅಲ್ಲ ಅವರಲ್ಲಿ ಭೋಕ್ತೃತ್ವವೂ ಮಿಥ್ಯಾಭೂತವಾಗಿದೆ. ಆದ್ದರಿಂದ ಮೋಕ್ಷವಾದರೂ ಅಲ್ಲಿ ಭೋಕ್ತೃತ್ವವೂ ಅವರಿಗೆ ಕೂಡುವುದಿಲ್ಲ. ಹೀಗೆ ಜೀವರಿಗೆ ಮಿಥ್ಯಾತ್ವವನ್ನು ಒಪ್ಪದಿದ್ದರೂ ಕೂಡ ಮೋಕ್ಷದಲ್ಲಿ ಭೋಕ್ತೃತ್ವವನ್ನು ಹೇಳಲು ಬರುವುದಿಲ್ಲ. ಆದ್ದರಿಂದ ಜಡಚೇತನರಿಗಿಬ್ಬರಿಗೂ ಮಿಥ್ಯಾತ್ವವನ್ನು ಅಂಗೀಕರಿಸಿದರೆ ಯಾವ ಬಾಧಕವೂ ಇಲ್ಲ. ಅಷ್ಟೇ ಅಲ್ಲ ಸರ್ವಂ ಖಲ್ವಿದಂ ಬ್ರಹ್ಮ ಇವೇ ಮೊದಲಾದ ಐಕ್ಯವಾಕ್ಯಗಳಿಗೆ ಜಡವಿಷಯದಲ್ಲಿ ಒಂದು ರೀತಿ ಅರ್ಥಹೇಳುವುದು, ಜೀವ ವಿಷಯದಲ್ಲಿ ಇನ್ನೊಂದು ರೀತಿ ಅರ್ಥಹೇಳುವುದು ಹೀಗೆ ಅರ್ಥದ್ವೈವಿಧ್ಯವನ್ನು ಕಲ್ಪಿಸದೆ, ಏಕಾರ್ಥವನ್ನೇ ಹೇಳಿದರೆ ಏಕವಾಕ್ಯತೆಯೂ ಬಂದು ಅನುಕೂಲವೇ ಆಗುವುದು. ಆದ್ದರಿಂದ ಜಡಚೇತನರೂಪಸಕಲಪ್ರಪಂಚಕ್ಕೂ ಐಕ್ಯವನ್ನೇ ಅಂಗೀಕರಿಸುವುದು ಉಚಿತವಾಗುತ್ತದೆ. ಹೀಗೆ ಜೀವಚೇತನಕ್ಕೆ ಮಿಥ್ಯಾತ್ವವನ್ನು ಒಪ್ಪಿದರೂ ಕೂಡ ಬ್ರಹ್ಮನೆಂಬ ಚೇತನವು ಇರುವುದರಿಂದ ಅದಕ್ಕೆ ಬದ್ಧತ್ವ ಮತ್ತು ಮುಕ್ತತ್ವವನ್ನು ಹೇಳಲು ಬರುತ್ತದೆ. ಹೀಗೆ ಹೇಳಿದರೆ ಮೋಕ್ಷದಲ್ಲಿ ಭೋಗ ಯಾರಿಗೆ ಎಂಬ ಹಿಂದೆ ಹೇಳಿದ ಆಕ್ಷೇಪಕ್ಕೂ ಅವಕಾಶವಿಲ್ಲವಾಗುತ್ತದೆ.

ಸಾಮ್ಯೇಪಿ ಶ್ರುತಿಯುಕ್ತೀನಾಂ ಹಾನ್ಯಭಾವೇಪಿ ಕೇವಲಂ ।
ಯದಿ ಸ್ವಮತರಕ್ಷಾಯೈ ವಿವಕ್ಷೇಯಮಪೇಕ್ಷ್ಯತೇ ॥ ೫೭೪ ॥

ತರ್ಹ್ಯನ್ಯಮತರಕ್ಷಾಯೈ ಯುಕ್ತಿಪ್ರತ್ಯಕ್ಷಸತ್ಕೃತಂ ।
ಸರ್ವಸ್ಯ ತದಧೀನತ್ವಮರ್ಥಂ ಸಾ ವಕ್ತಿ ನ ದ್ವಿಧಾ ॥ ೫೭೫ ॥

ಅತೋ ವಾಕ್ಯಬಲಾದೈಕ್ಯಮಾಶಾಸ್ಯಂ ನ ಕ್ವಚಿತ್ ತ್ವಯಾ ॥ ೫೭೬ ॥

**ಅರ್ಥ–** (ಉಭಯಪಕ್ಷೇಪಿ = ಜಡೈಕ್ಯ ಚೇತನೈಕ್ಯಪಕ್ಷ ಈ ಎರಡು ಪಕ್ಷಗಳಲ್ಲಿಯೂ ಕೂಡ) ಶ್ರುತಿಯುಕ್ತೀನಾಂ = ಶ್ರುತಿ ಮತ್ತು ಯುಕ್ತಿಗಳಿಗೆ, ಸಾಮ್ಯೇ ಅಪಿ = ಸಾಮ್ಯವಿದ್ದರೂ ಕೂಡ, ಹಾನ್ಯಭಾವೇ ಅಪಿ = ಬಾಧಕವಿಲ್ಲದಿದ್ದರೂ ಕೂಡ, ಸ್ವಮತರಕ್ಷಾಯೈ ಕೇವಲಂ = ನಿನ್ನ

ಸಿದ್ಧಾಂತದ ರಕ್ಷಣೆಗೋಸ್ಕರ ಮಾತ್ರ, ಇಯಂ = ಹಿಂದೆ ಹೇಳಿದ (ಜಡಮಿಥ್ಯಾತ್ವ, ಚೇತನೈಕ್ಯರೂಪ ದ್ವಿವಿಧ ಅರ್ಥಕಲ್ಪನೆಯ) ವಿವಕ್ಷಾ = ಅಭಿಪ್ರಾಯವು, ಯದಿ = ಒಂದು ಪಕ್ಷ ಅಪೇಕ್ಷ್ಯತೇ = ಅಪೇಕ್ಷಿಸಲ್ಪಡುವುದಾದರೆ, ತರ್ಹಿ = ಆ ಪಕ್ಷದಲ್ಲಿ ಅನ್ಯಮತರಕ್ಷಾಯೈ = ತತ್ತ್ವವಾದಿಗಳ ಸಿದ್ಧಾಂತದ ರಕ್ಷಣೆಗೋಸ್ಕರ, ಸಾ = ಸರ್ವಂ ಖಲ್ವಿದಂ ಬ್ರಹ್ಮ ಎಂಬಿತ್ಯಾದಿ ಆ ಶ್ರುತಿಯು, ಸರ್ವಸ್ಯ = ಎಲ್ಲ ಪ್ರಪಂಚಕ್ಕೆ, ಯುಕ್ತಿಪ್ರತ್ಯಕ್ಷಸತ್ಕೃತಂ = ಯುಕ್ತಿ ಮತ್ತು ಪ್ರತ್ಯಕ್ಷಪ್ರಮಾಣಗಳಿಂದ ಸತ್ಕರಿಸಲ್ಪಟ್ಟ ತದಧೀನತ್ವಂ ಅರ್ಥಂ = ಈಶ್ವರಾಧೀನತ್ವರೂಪವಾದ ಅರ್ಥವನ್ನು ವಕ್ತಿ = ಹೇಳುತ್ತದೆ. (ತ್ವದುಕ್ತರೀತ್ಯಾ = ನೀನು ಹೇಳಿದ ರೀತಿಯಿಂದ) ದ್ವಿಧಾ = ಎರಡು ರೀತಿಯ, ಅರ್ಥಂ = ಅರ್ಥವನ್ನು ನ ವಕ್ತಿ = ಹೇಳುವುದಿಲ್ಲ. ಅತಃ = ಎಲ್ಲ ಐಕ್ಯವಾಕ್ಯಗಳಿಂದಲೂ ಎಲ್ಲವೂ ಈಶ್ವರಾಧೀನವಾಗಿವೆ ಎಂಬ ಲಘುಭೂತವಾದ ಅರ್ಥಲಾಭವಾಗುವುದರಿಂದ, ವಾಕ್ಯಬಲಾತ್ = ಶ್ರುತಿವಾಕ್ಯದ ಬಲದಿಂದ, ಕ್ವಚಿತ್ = ಎಲ್ಲಿಯೂ ಕೂಡ, ಐಕ್ಯಂ = ಬ್ರಹ್ಮೈಕ್ಯವು, ತ್ವಯಾ = ನಿನ್ನಿಂದ, ಆಶಾಸ್ಯಂ = ಇಚ್ಛಿಸಲ್ಪಡುವುದಾಗಿ, ನ ಭವೇತ್ = ಆಗಬಾರದು.

**ಅನುವಾದ–** ಶ್ರುತಿ ಯುಕ್ತಗಳು ಸಮಾನವಾಗಿದ್ದರೂ ಮತ್ತು ಹಾಗೆ ಅಂಗೀಕರಿಸಿದರೆ ಯಾವ ಹಾನಿಯೂ ಇಲ್ಲದಿದ್ದರೂ, ಕೇವಲ ನಿನ್ನ ಮತದ ರಕ್ಷಣೆಗೋಸ್ಕರ ನೀನು ಹೀಗೆ ಎರಡು ರೀತಿಯ ಅರ್ಥವನ್ನು ಹೇಳುವುದಾದರೆ, ನಮ್ಮ ಮತದ ರಕ್ಷಣೆಗೋಸ್ಕರ ಆ ಶ್ರುತಿಯು ಜಡಚೇತನ ಎಲ್ಲ ಪದಾರ್ಥಗಳಿಗೂ ಯುಕ್ತಿಪ್ರತ್ಯಕ್ಷ ಸಿದ್ಧವಾದಂತಹ ಬ್ರಹ್ಮಾಧೀನತ್ವ ರೂಪವಾದ ಅರ್ಥವನ್ನೇ ಹೇಳುತ್ತದೆ. ಎರಡು ರೀತಿಯ ಅರ್ಥವನ್ನು ಹೇಳುವುದಿಲ್ಲ ಎಂದು ಅಂಗೀಕರಿಸು. ಆದ್ದರಿಂದ ಐಕ್ಯವಾಕ್ಯದ ಬಲದಿಂದ ಎಂದೂ ಐಕ್ಯವನ್ನು ಆಶಿಸಬಾರದು.

**ಭಾವವಿಲಾಸಿನೀ–** ಕೇವಲಂ ಸ್ವಮತರಕ್ಷಾಯಾ ಇತಿ ಸಂಬಂಧಃ । ಇಯಂ ಜಡಮಿಥ್ಯಾತ್ವ - ಚೇತನಮಾತ್ರೈಕ್ಯರೂಪಾ । ಅನ್ಯಮತರಕ್ಷಾಯೈ ತತ್ವವಾದಮತರಕ್ಷಾಯೈ । ಯುಕ್ತಿಪ್ರತ್ಯಕ್ಷಸತ್ಕೃತಂ ಮುಖ್ಯಾರ್ಥಬಾಧೇ ಸರ್ವತ್ರ ಲಕ್ಷಣಾದರ್ಶನಾತ್ ಯುಕ್ತಿಸತ್ಕೃತವಮ್ । ವಾಕ್ಯಾರ್ಥಸ್ಯ ಪ್ರತ್ಯಕ್ಷಬಾಧಾಭಾವಾತ್ ಪ್ರತ್ಯುತ ಭಗವದಧೀನತ್ವಸ್ಯ ಸರ್ವೈರಪ್ಯನುಭೂಯಮಾನತ್ವಾಚ್ಚ ಪ್ರತ್ಯಕ್ಷಸತ್ಕೃತಮ್ । ಸಾ ಸರ್ವಂ ಖಲ್ವಿದಂ ಬ್ರಹ್ಮೇತಿ ಶ್ರುತಿಃ। ಸಂಭವತ್ಯೇಕವಾಕ್ಯತ್ವೇ ವಾಕ್ಯಭೇದೋ ಹಿ ದೂಷಣಮಿತಿ ವಚನಾದಿತಿ ಭಾವಃ ।। ೫೭೪-೫೭೫।।

ಅತಃ ಸರ್ವೈಕ್ಯವಾಕ್ಯೇಷ್ವಪಿ ಭಗವದಧೀನತ್ವಾಖ್ಯಲಘುಭೂತಾರ್ಥಲಾಭಾತ್ ।। ೫೭೬ ।।

**ವಿವರಣೆ–** ಸಕಲಪ್ರಪಂಚಕ್ಕೆ ಐಕ್ಯವನ್ನು ಹೇಳಿದರೆ ಐಕ್ಯವಾಕ್ಯಗಳಿಗೆ ಏಕವಾಕ್ಯತೆ ಎಂಬ ಆನುಕೂಲ್ಯವಿದ್ದರೂ, ಹಿಂದೆ ಹೇಳಿದ ಬಾಧಕಾದಿಗಳು ಇಲ್ಲದಿದ್ದರೂ ಕೂಡ ನಮ್ಮ ಮತದ ರಕ್ಷಣೆಗೋಸ್ಕರ ಆ ವಾಕ್ಯಗಳಿಗೆ ಅರ್ಥದ್ವೈವಿಧ್ಯವನ್ನು ಏಕೆ ಕಲ್ಪಿಸಬಾರದು ಎಂದು

ಆಕ್ಷೇಪಿಸಿದರೆ ಇದಕ್ಕೂ ಮೂರು ಪದ್ಯಗಳಿಂದ ಉತ್ತರಿಸಿ ಉಪಸಂಹಾರ ಮಾಡುತ್ತಾರೆ. ಚೇತನೈಕ್ಯಪಕ್ಷದ ಹಾಗೆ ಜಡೈಕ್ಯಪಕ್ಷದಲ್ಲಿಯೂ ಶ್ರುತಿಯುಕ್ತಿಗಳು ಸಮಾನವಾಗಿವೆ. ಜಡೈಕ್ಯಪಕ್ಷದಲ್ಲಿ ಬಾಧಕಗಳೂ ಇಲ್ಲವೆಂದು ಸಾಧಿಸಲಾಯಿತು. ಹೀಗಿದ್ದರೂ ಅದ್ವೈತಮತದ ರಕ್ಷಣೆಗೋಸ್ಕರಮಾತ್ರವೇ ಸರ್ವಂ ಖಲ್ವಿದಂ ಬ್ರಹ್ಮ ಇತ್ಯಾದಿವಾಕ್ಯಗಳಿಗೆ ಜಡಮಿಥ್ಯಾತ್ವ ಮತ್ತು ಚೇತನೈಕ್ಯರೂಪವಾದ ಅರ್ಥದ್ವೈವಿಧ್ಯವನ್ನು ಕಲ್ಪಿಸುತ್ತೇವೆ ಎನ್ನುವುದಾದರೆ ನಿಮ್ಮಂತೆಯೇ ದ್ವೈತಸಿದ್ಧಾಂತದ ರಕ್ಷಣೆಗೋಸ್ಕರ ಅದೇ ಐಕ್ಯವಾಕ್ಯದಂತೆ ಕಾಣಿಸುವ ವಾಕ್ಯಗಳಿಗೆ ಎಲ್ಲಾ ಪದಾರ್ಥಗಳೂ ಪರಬ್ರಹ್ಮನ ಅಧೀನವಾಗಿವೆ ಎಂಬ ಅರ್ಥವನ್ನೇ ಏಕೆ ಹೇಳಬಾರದು? ಈ ಅರ್ಥವು ಯುಕ್ತಿ ಮತ್ತು ಪ್ರತ್ಯಕ್ಷಗಳಿಂದ ಅಂಗೀಕರಿಸಲ್ಪಟ್ಟಿದೆ. ಅಷ್ಟೇ ಅಲ್ಲ, ಎಲ್ಲ ಪದಾರ್ಥವಿಷಯದಲ್ಲೂ ಏಕರೂಪವಾಗಿ ಲಘುಭೂತವಾಗಿದೆಯೂ ಕೂಡ. ಆದ್ದರಿಂದ ಯುಕ್ತಿಪ್ರತ್ಯಕ್ಷಗಳಿಂದ ಸತ್ಕರಿಸಲ್ಪಟ್ಟ ಲಘುಭೂತವಾದ ಈ ಅರ್ಥವನ್ನು ಹೇಳುವುದರಲ್ಲಿಯೇ ಶ್ರುತಿಗೆ ಅಭಿಪ್ರಾಯವಿದೆ, ಹೊರತು ನೀನು ಹೇಳುವ, ಯುಕ್ತಿಪ್ರತ್ಯಕ್ಷಾದಿಗಳಿಗೆ ವಿರುದ್ಧವಾದ ಗುರುಭೂತವಾದ ಅರ್ಥದ್ವೈವಿಧ್ಯದ ವಿಷಯದಲ್ಲಿ ಶ್ರುತಿಗೆ ಖಂಡಿತವಾಗಿ ಅಭಿಪ್ರಾಯವಿಲ್ಲ ಎಂದು ತಿಳಿಯುತ್ತದೆ.

ಹಾಗಾಗಿ ಶ್ರುತಿವಾಕ್ಯಗಳ ಬಲದಿಂದಲೂ ನಿನಗೆ ಎಲ್ಲಿಯೂ ಕೂಡ ಬ್ರಹ್ಮೈಕ್ಯವನ್ನು ಸಾಧಿಸಲು ಬರುವುದಿಲ್ಲ. ಹೀಗಾಗಿ ಜೀವೇಶ್ವರಾದಿಭೇದವೇ ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

**ಅದ್ವೈತವಾದಿಯು ಹೇಳುವ ಸರ್ವಂ ಖಲ್ವಿದಂ ಬ್ರಹ್ಮ ಇತ್ಯಾದಿ ವಾಕ್ಯಗಳಿಗೆ ಆಪಾತತಃ ಪ್ರತೀಯಮಾನವಾದ ಐಕ್ಯರೂಪವಾದ ಅರ್ಥವು ಪ್ರತ್ಯಕ್ಷಾದಿಗಳಿಗೆ ವಿರುದ್ಧವಾದದ್ದು ಆಗಿದೆ. ಹಾಗಯೇ ಅದ್ವೈತಭಾಷ್ಯಕ್ಕೆ ಮೂಲಭೂತವಾದ ಬ್ರಹ್ಮಸೂತ್ರದ ಪ್ರಕ್ರಿಯೆಗೇ ವಿರುದ್ಧವಾಗಿದೆಯೂ ಕೂಡ ಎಂದು ತಿಳಿಸುತ್ತಾರೆ.**

ವಿರುದ್ಧಾಪಾತಲಬ್ಧೇऽರ್ಥೇ ತವೈವಾಯಂ ದುರಾಗ್ರಹಃ ।
ಅಭಿಮಾನ್ಯುಪದೇಶೇನ ವ್ಯಾಸಸ್ತ್ವರ್ಥಾಂತರಂ ಜಗೌ ॥ ೫೭೭ ॥

**ಅರ್ಥ–** (ಉಕ್ತವಾಕ್ಯಸ್ಯ = ಹಿಂದೆ ಹೇಳಿದ ಸರ್ವಂ ಖಲ್ವಿದಂ ಬ್ರಹ್ಮ ಇತ್ಯಾದಿ ವಾಕ್ಯಕ್ಕೆ) ವಿರುದ್ಧಾಪಾತಲಬ್ಧೇ = ಪ್ರತ್ಯಕ್ಷಕ್ಕೆ ವಿರುದ್ಧವಾಗಿ ಮೇಲ್ನೋಟಕ್ಕೆ ಕಾಣಿಸುವ, ಅರ್ಥೇ = ಐಕ್ಯರೂಪಅರ್ಥದಲ್ಲಿ, ಅಯಂ = ಈ ಯಾವ, ದುರಾಗ್ರಹಃ = ಕೆಟ್ಟ ಆಗ್ರಹವು, ತವ ಏವ = ನಿನಗೆ ಮಾತ್ರ, (ಅಸ್ತಿ = ಇದೆ.) ವ್ಯಾಸಃ ತು = ವೇದವ್ಯಾಸರಾದರೂ, ಅಭಿಮಾನ್ಯುಪದೇಶೇನ = ಮೃದಭಿಮಾನಿದೇವತೆ ಎಂಬ ಉಪದೇಶದಿಂದ, (ಮೃದಬ್ರವೀತ್ಯಾದಿವಾಕ್ಯಸ್ಯ = ಮೃದಬ್ರವೀತ್ ಇವೇ ಮೊದಲಾದ ವಾಕ್ಯಕ್ಕೆ) ಅರ್ಥಾಂತರಂ = (ಪ್ರತ್ಯಕ್ಷಾದಿಗಳಿಗೆ

ವಿರುದ್ಧವಾದ ಮೇಲ್ನೋಟಕ್ಕೆ ಕಾಣಿಸುವ ಮಣ್ಣು ಮಾತನಾಡಿತು ಎಂಬ ಅರ್ಥಕ್ಕಿಂತ) ಬೇರೆಯಾದ ಆರ್ಥವನ್ನು ಜಗೌ = ಹೇಳಿದರು.

**ಅನುವಾದ–** ಐಕ್ಯವಾಕ್ಯಗಳೆಂಬುದಾಗಿ ಈ ಹಿಂದೆ ಉದಾಹರಿಸಿದ ಸರ್ವಂ ಖಲ್ವಿದಂ ಬ್ರಹ್ಮ ಇತ್ಯಾದಿವಾಕ್ಯಗಳಿಗೆ ನೀನು ಹೇಳುವ ಅರ್ಥವು ಜೀವಬ್ರಹ್ಮೈಕ್ಯವಾಗಿದೆ. ಈ ಅರ್ಥವು ಪ್ರತ್ಯಕ್ಷಾದಿಪ್ರಮಾಣಗಳಿಗೆ ವಿರುದ್ಧವಾಗಿದೆ. ಹಾಗೆಯೇ ಮೋಲುನೋಟಕ್ಕೆ ಕಾಣಿಸುವ ಅರ್ಥವಾಗಿದೆ. ಈ ಅರ್ಥದಲ್ಲಿ ಕೆಟ್ಟದಾದ ಆಗ್ರಹವಿರುವುದು ನಿನಗೆ ಮಾತ್ರ. ಏಕೆಂದರೆ ನಿನ್ನ ಭಾಷ್ಯಕ್ಕೆ ಮೂಲಭೂತವಾದ ಗ್ರಂಥ ಬ್ರಹ್ಮಸೂತ್ರಗಳು. ಅದನ್ನು ಬರೆದ ವೇದವ್ಯಾಸರಿಗೂ ಕೂಡ ಯಾವುದೇ ಶ್ರುತಿವಾಕ್ಯಗಳಿಗೂ ಕೂಡ ಮೇಲ್ನೋಟಕ್ಕೆ ಕಾಣಿಸುವ, ಪ್ರತ್ಯಕ್ಷಾದಿಪ್ರಮಾಣಗಳಿಗೆ ವಿರುದ್ಧವಾದ ಅರ್ಥವನ್ನು ಹೇಳುವದರಲ್ಲಿ ತಾತ್ಪರ್ಯವಿಲ್ಲವಾಗಿದೆ. ಆದ್ದರಿಂದಲೇ ವ್ಯಾಸರು ಬ್ರಹ್ಮಸೂತ್ರದಲ್ಲಿ ಮೃದಬ್ರವೀತ್ ಇತ್ಯಾದಿ ವಾಕ್ಯಗಳಿಗೆ ಅಭಿಮಾನಿದೇವತಾ ಪರವಾಗಿ ಅರ್ಥಮಾಡಿದ್ದಾರೆ.

**ಭಾವವಿಲಾಸಿನೀ–** ಕಿಂಚ ತ್ವದ್ಭಾಷ್ಯಮೂಲಭೂತಸೂತ್ರಪ್ರಕ್ರಿಯಾವಿರುದ್ಧಾ ಚ ತವೇಯಂ ಪ್ರಕ್ರಿಯೇತ್ಯಾಹ – **ವಿರುದ್ಧೇತಿ** ॥ ಪ್ರತ್ಯಕ್ಷವಿರುದ್ಧೇ ವಾಕ್ಯಾದಾಪಾತಪ್ರತೀತೇ ಸರ್ವಸ್ಯ ಬ್ರಹ್ಮಾದ್ವೈತರೂಪಾರ್ಥೇ । ವ್ಯಾಸಸ್ತು ಮೃದಬ್ರವೀದಾಪೋಽಬ್ರುವನ್ನಿತ್ಯಾದಿ-ವಾಕ್ಯಾನಾಮಾಪಾತಪ್ರತೀತಪ್ರತ್ಯಕ್ಷಾದಿ ಪ್ರಮಾಣವಿರುದ್ಧಜಡಮೃದ್ವಚನಾದ್ಯರ್ಥಂ ತ್ಯಕ್ತ್ವಾ ಮೃದಾದ್ಯಭಿಮಾನಿ ದೇವತಾವ್ಯಪದೇಶೇನಾರ್ಥಾಂತರಂ ಮೃದಭಿಮಾನಿದೇವತಾ- ವಚನ-ರೂಪಾರ್ಥಂ ಜಗಾವಿತಿ ಸಂಬಂಧಃ । ಸ ತು ಪ್ರತ್ಯಕ್ಷವಿರುದ್ಧಾರ್ಥಂ ತ್ಯಕ್ತ್ವಾ ತದವಿರುದ್ಧಾದ್ಯರ್ಥ-ಮೇವಪ್ರಸಿದ್ಧಮಪಿ ವೃತ್ತ್ಯಂತರಮಾದಾಯೋಕ್ತವಾನ್ । ತ್ವಂ ತು ಸರ್ವಜನಪ್ರಸಿದ್ಧಮಪಿ ವೃತ್ತ್ಯಂತರಮುಪೇಕ್ಷ್ಯ ಪ್ರತ್ಯಕ್ಷಬಾಧಿತ ಏವ ವಾಕ್ಯಾರ್ಥೇ ದುರಾಗ್ರಹಂ ಕುರುಷೇ । ತಸ್ಮಾದುತ್ಸೂತ್ರಭಾಷ್ಯಕಾರೋ ಭವಾನಿತಿ ಭಾವಃ ॥ ೫೭೭ ॥

**ವಿವರಣೆ-** ಹೇಗೆಂದರೆ - ಮೃದಬ್ರವೀತ್, ಆಪೋ ಅಬ್ರುವನ್ ಇತ್ಯಾದಿ ವಾಕ್ಯಗಳಿಗೆ ಮೇಲ್ನೋಟಕ್ಕೆ ತೋರುವ ಅರ್ಥ - ಮಣ್ಣು ಮಾತನಾಡಿತು, ನೀರು ಮಾತನಾಡಿತು ಎಂದು. ಆದರೆ ಈ ಅರ್ಥವು ಅನುಭವ ಹಾಗೂ ಯುಕ್ತಿಗಳಿಗೆ ವಿರುದ್ಧವಾದವುಗಳು ಎಂದು ಆಕ್ಷೇಪ ಬಂದಾಗ ಅಭಿಮಾನಿವ್ಯಪದೇಶಸ್ತು ವಿಶೇಷಾನುಗತಿಭ್ಯಾಂ ಎಂಬ ಬ್ರಹ್ಮಸೂತ್ರದಲ್ಲಿ ಮೃತ್, ಅಪ್ ಈ ಶಬ್ದಗಳಿಗೆ ಅಭಿಮಾನಿದೇವತೆಗಳೆಂದು ಅರ್ಥಾಂತರ ವನ್ನು ಹೇಳಿ ಪ್ರತ್ಯಕ್ಷಾದಿಪ್ರಮಾಣಗಳ ವಿರೋಧವನ್ನು ಪರಿಹರಿಸಿದ್ದಾರೆ. ಹೀಗಿರುವುದರಿಂದ ನೀನು ಹೇಳುವ ಐಕ್ಯರೂಪ ಅರ್ಥವು ಪ್ರತ್ಯಕ್ಷಾದಿಗಳಿಗೆ ವಿರುದ್ಧ-ವಾದ್ದರಿಂದ ಅದನ್ನು ಬಿಟ್ಟು ಬೇರೆ ವಿರುದ್ಧವಲ್ಲದ ಅರ್ಥಾಂತರವನ್ನು ಹೇಳುವುದು ವ್ಯಾಸರಿಗೆ ಸಮ್ಮತವಾಗುತ್ತದೆ. ಇಲ್ಲದೇ ಇದ್ದರೆ ಅವರ ಪ್ರಕ್ರಿಯೆಗೆ ವಿರುದ್ಧವಾಗುತ್ತದೆ.

ಜೀವಬ್ರಹ್ಮೈಕ್ಯವು ಶ್ರುತಿಯ ಅಭಿಪ್ರಾಯಕ್ಕೂ ವಿರುದ್ಧವಾಗಿದೆ ಎಂದು ತಿಳಿಸುತ್ತಾರೆ-

**ಶ್ರುತಿಶ್ಚತುರ್ಮುಖೈಕ್ಯಂ ಚ ಮನ್ಯತೇ ನ ಪರಾತ್ಮನಃ ।**
**ಜೀವೈಕ್ಯಂ ಕಿಮು ತೇನೈವ ಮೋಚಿತಾನೇಕಸಂಕಟಾ ॥ ೫೭೮ ॥**

**ಅರ್ಥ–** (ಯತಃ = ಯಾವ ಕಾರಣದಿಂದ) ತೇನ ಏವ = ಆ ಪರಮಾತ್ಮನಾದ ನಾರಾಯಣನಿಂದಲೇ, ಅನೇಕಸಂಕಟಾ = (ಮಧುಕೈಟಭಾದಿಗಳಿಂದ) ತನಗೆ ಬಂದ ಬಹಳ ದುಃಖಗಳು, ಮೋಚಿತಾ = ಪರಿಹರಿಸಲ್ಪಟ್ಟಿವೆಯೋ, ಅತಃ = ಆ ಕಾರಣದಿಂದಲೇ, ಶ್ರುತಿಃ = ವೇದವು, ಪರಾತ್ಮನಃ = ಸರ್ವೋತ್ತಮನಾದ ನಾರಾಯಣನಿಗೆ, ಚತುರ್ಮುಖೈಕ್ಯಂ ಚ = ಚತುರ್ಮುಖನ ಐಕ್ಯವನ್ನೂ ಕೂಡ, ನ ಮನ್ಯತೇ = ತಿಳಿಯುವುದಿಲ್ಲ. ಜೀವೈಕ್ಯಂ = ಉಳಿದ ಜೀವರಿಂದ ಐಕ್ಯವನ್ನು ನ ಮನ್ಯತೇ = ತಿಳಿಯುವುದಿಲ್ಲ (ಇತಿ = ಹೀಗೆಂದು) ಕಿಮು (ವಕ್ತವ್ಯಂ?) = ಹೇಳಬೇಕೇನು?

**ಅನುವಾದ–** ಸೃಷ್ಟಿಯ ಪ್ರಾರಂಭದಲ್ಲಿ ಚತುರ್ಮುಖನ ಮುಖದಿಂದಲೇ ವೇದವನ್ನು ಮಧುಕೈಟಭಾದಿ ದೈತ್ಯರು ಅಪಹಾರಮಾಡಿದರು. ಆಗ ಅದನ್ನುಬಿಡಿಸಿ ತರಲು ಸಾಮರ್ಥ್ಯವಿಲ್ಲದ ಚತುರ್ಮುಖನು ಸುಮ್ಮನೆ ಕುಳಿತಿದ್ದ. ಆ ಸಮಯದಲ್ಲಿ ಸರ್ವಸಮರ್ಥನಾದ ಸರ್ವೋತ್ತಮನಾದ ಹರಿಯು ಮಾತ್ರ ಹಯಗ್ರೀವಮತ್ಸ್ಯಾದಿ ಅವತಾರಗಳನ್ನು ಮಾಡಿ ಆ ದೈತ್ಯರನ್ನು ಸಂಹಾರ ಮಾಡಿ ಶ್ರುತಿಯನ್ನು ಅವರಿಂದ ರಕ್ಷಿಸಿ ಅವಳ ದುಃಖವನ್ನು ಪರಿಹರಿಸಿದ್ದಾನೆ. ಇದನ್ನೆಲ್ಲಾ ಅನುಭವಿಸಿದ ಶ್ರುತಿಗೆ ಹರಿಯೇ ಸರ್ವಸಮರ್ಥ ಹಾಗೂ ಸರ್ವೋತ್ತಮ ಎಂದು ಅನುಭವಕ್ಕೆ ಬಂದಿದೆ. ಹೀಗಾಗಿ ಶ್ರುತಿಯು ಪರಮಾತ್ಮನಾದ ನಾರಾಯಣನಿಗೆ ಜೀವೋತ್ತಮರಾದ ಚತುರ್ಮುಖನಿಂದಲೇ ಐಕ್ಯವನ್ನು ತಿಳಿಯುವುದಿಲ್ಲ. ಹೀಗಿದ್ದ ಮೇಲೆ ಉಳಿದ ಅತ್ಯಲ್ಪಸಾಮರ್ಥ್ಯವುಳ್ಳ ಜೀವರಿಂದ ಐಕ್ಯವನ್ನು ತಿಳಿಯುವುದಿಲ್ಲ ಎಂದು ಪ್ರತ್ಯೇಕವಾಗಿ ಹೇಳಬೇಕೆ? ಆದ್ದರಿಂದ ಪರಬ್ರಹ್ಮನಿಗೆ ಜೀವಾಭೇದವನ್ನು ಹೇಳುವುದು ಶ್ರುತಿಯ ಅಭಿಪ್ರಾಯಕ್ಕೆ ವಿರುದ್ಧವೆಂದು ತಿಳಿಯುತ್ತದೆ.

**ಭಾವವಿಲಾಸಿನೀ–** ಶ್ರುತ್ಯಭಿಪ್ರಾಯವಿರುದ್ಧಂ ಚ ಜೀವೈಕ್ಯಮಿತ್ಯಾಹ – **ಶ್ರುತಿರಿತಿ** ॥ ಪರಾತ್ಮನಃ ಪರಮಾತ್ಮನೋ ನಾರಾಯಣಸ್ಯ । ಜೀವೈಕ್ಯಂ ನ ಮನ್ಯತ ಇತಿ ಕಿಮು ನ ವಕ್ತವ್ಯಮಿತ್ಯರ್ಥಃ । ಸರ್ವಜೀವೋತ್ತಮಚತುರ್ಮುಖೈಕ್ಯಮಸಹಮಾನಾ ಶ್ರುತಿರ್ನೀಚಜೀವೈಕ್ಯಂ ನ ಸಹತ ಇತಿ ಕಿಂ ವಕ್ತವ್ಯಮಿತಿ ಭಾವಃ । ಕುತಶ್ಚತುರ್ಮುಖೈಕ್ಯಂ ನ ಮನ್ಯತ ಇತ್ಯತ ಆಹ – **ತೇನೇತಿ** ॥ ತೇನ ನಾರಾಯಣೇನ ಮೋಚಿತಾನಿ ಅನೇಕಸಂಕಟಾನಿ ಮಧುಕೈಟಭಹಯಗ್ರೀವ ತಮ ಆದಿದೈತ್ಯ-ಕೃತಸಂಕಟಾನಿ ಯಸ್ಯಾಸ್ಸಾ ತಥೋಕ್ತಾ । ಬ್ರಹ್ಮಣೋ ಮುಖಾದೇವ ವೇದಾಪಹಾರೇ ಮೋಚನ-ಸಾಮರ್ಥ್ಯಾಭಾವಾತ್ ಬ್ರಹ್ಮಾ ತೂಷ್ಣೀಮೇವ ಸ್ಥಿತಃ । ಹರಿಸ್ತು ಮಹಾಸಾಮರ್ಥ್ಯ-

ಯುಕ್ತತ್ವಾದ್ಧಯಗ್ರೀವವಮತ್ಸ್ಯಾದ್ಯವತಾರಂ ಕೃತ್ವಾ ದೈತ್ಯಾನ್ ಹತ್ವಾ ಸ್ವಾತ್ಮಾನಂ ವೋಚಿತವಾನಿತೀಮಮರ್ಥಂ ಸ್ಪಷ್ಟಮನುಭೂತವತೀ ಶ್ರುತಿರಸಮರ್ಥಚತುರ್ಮುಖ-ಸ್ಯಾತಿಸಮರ್ಥೇನ ನಾರಾಯಣೇನೈಕ್ಯಂ ಕಥಂ ಮನ್ಯತ ಇತಿ ಭಾವಃ ॥ ೫೭೮ ॥

ಜೀವಬ್ರಹ್ಮೈಕ್ಯವು ಹರಿಯ ಅಭಿಪ್ರಾಯಕ್ಕೂ ವಿರುದ್ಧವಾಗಿದೆ ಎಂದು ತಿಳಿಸುತ್ತಾರೆ-

**ಹರಿಶ್ಚ ಸ್ವಗುಣಾನ್ ದಿವ್ಯಾನ್ ನ ಮುಂಚತಿ ನ ತಾನ್ ದಿಶೇತ್ ।**
**ತಪಸಾರಾಧಿತೋಪೀಷತ್ ಕರ್ತೃಜ್ಞಾತೃತ್ವದೋ ಹ್ಯಸೌ ॥ ೫೭೯ ॥**

**ಅರ್ಥ—** ಹರಿಃ ಚ = ಹರಿಯಾದರೂ, ದಿವ್ಯಾನ್ = ಶ್ರೇಷ್ಠಗಳಾದ, ಸ್ವಗುಣಾನ್ = ತನ್ನ ಗುಣಗಳನ್ನು, ನ ಮುಂಚತಿ = ತಾನು ಬಿಡುವುದೂ ಇಲ್ಲ, ತಾನ್ = ಆ ಗುಣಗಳನ್ನು (ಪರೇಷಾಂ = ಇನ್ನೊಬ್ಬರಿಗೆ) ನ ದಿಶೇತ್ = ಕೊಡುವುದೂ ಇಲ್ಲ, ಅಸೌ = ಈ ಹರಿಯು, ತಪಸಾ = ತಪಸ್ಸಿನಿಂದ, ಆರಾಧಿತಃ ಸನ್ ಅಪಿ = ಪೂಜಿಸಲ್ಪಟ್ಟವನಾಗಿಯೂ ಕೂಡ, ಈಷತ್ ಕರ್ತೃಜ್ಞಾತೃತ್ವದಃ = ಸ್ವಲ್ಪಮಾತ್ರ ಕರ್ತೃತ್ವ ಮತ್ತು ಜ್ಞಾತೃತ್ವವನ್ನು ಕೊಡುವವನಾಗಿ, (ಭವತಿ = ಆಗುತ್ತಾನೆ.) ಹಿ = ಇದು ಪ್ರಮಾಣಪ್ರಸಿದ್ಧವು.

**ಅನುವಾದ—** ಹರಿಯಲ್ಲಿ ಬಹಳ ಶ್ರೇಷ್ಠಗಳಾದ ಅನಂತಗುಣಗಳಿವೆ. ಇವುಗಳನ್ನು ತಾನು ಯಾವುದೇ ಸಂದರ್ಭದಲ್ಲಿಯೂ ಬಿಡುವುದಿಲ್ಲ, ಹಾಗಯೇ ಅವುಗಳನ್ನು ಇನ್ನೊಬ್ಬರಿಗೆ ಕೊಡುವುದೂ ಇಲ್ಲ, ಕೆಲವೊಮ್ಮೆ ಬಹಳ ತಪಸ್ಸು ಮಾಡಿ ಅವನನ್ನು ಒಲಿಸಿಕೊಂಡಾಗಲೂ ಕೂಡ ಸ್ವಲ್ಪಮಟ್ಟಿಗನ ಕರ್ತೃತ್ವ ಹಾಗೂ ಜ್ಞಾತೃತ್ವವನ್ನಷ್ಟೇ ಕೊಡುತ್ತಾನೆ, ಹೊರತು ಪೂರ್ಣವಾದದ್ದನ್ನು ಎಂದೂ ಕೊಡುವುದಿಲ್ಲ. ಹೀಗೆ ತನ್ನಲ್ಲಿರುವ ಗುಣಗಳಲ್ಲಿ ಕೆಲವನ್ನೂ ಕೂಡ ಸ್ವಲ್ಪಮಾತ್ರ ಕೊಡುವ ಶ್ರೀಹರಿಯು ತನ್ನ ಅಭೇದವನ್ನು ಹೇಗೆ ಕೊಟ್ಟಾನು? ಆದ್ದರಿಂದ ಜೀವಬ್ರಹ್ಮೈಕ್ಯವು ಶ್ರೀಹರಿಯ ಅಭಿಪ್ರಾಯಕ್ಕೂ ವಿರುದ್ಧವಾಗಿದೆ ಎಂದು ತಿಳಿಯುತ್ತದೆ.

**ಭಾವವಿಲಾಸಿನೀ—** ಹರ್ಯಭಿಪ್ರಾಯವಿರುದ್ಧಂ ಚ ಜೀವಬ್ರಹ್ಮೈಕ್ಯಮಿತ್ಯಾಹ – **ಹರಿಶ್ಚೇತಿ** ॥ ತಾನ್ಗುಣಾನ್ । ಕುತೋ ನ ದಿಶೇದಿತ್ಯತ ಆಹ – **ತಪಸೇತಿ** ॥ ಈಷತ್ಕರ್ತೃಜ್ಞಾತೃತ್ವದಃ । ಹಿ ಶಬ್ದೇನ ಪಾದ್ಮಕಲ್ಪಾಖ್ಯದಿವಸೇ ಜಗತ್ಕರ್ತೃತ್ವಶಕ್ತಿವಿಧುರಸ್ಯ ತತ್ಕರಣಕೌಶಲಜ್ಞಾನವಿಧುರಸ್ಯ ಸ್ವಾಧಾರಕಮಲನಾಲಮೂಲಭೂತಭಗವತ್ ಜ್ಞಾನವಿಧುರಸ್ಯ ಬ್ರಹ್ಮಣಸ್ತಪಸಾ ತುಷ್ಟೋಽಪಿ ಭಗವಾಂಸ್ತಸ್ಮಿನ್ನೇಕಸ್ಮಿನ್‌ದಿನ ಏವ ಕರಣಶಕ್ತಿಂ ಜ್ಞಾನಶಕ್ತಿಂ ಚ ದತ್ತವಾನ್ । ಕಿಮುತಾನ್ಯೇಷಾಮಿತಿ ಪೌರಾಣಿಕಪ್ರಸಿದ್ಧಿಂ ಸೂಚಯತಿ ॥ ೫೭೯ ॥

**ತಸ್ಮಾನ್ನಾತ್ಮೈಕ್ಯಮನ್ಯೇಷಾಂ ಕೇಷಾಮಪಿ ಸ ದಿತ್ಸತಿ ।**
**ಯಃ ಪೌಂಡ್ರಕವಧಂ ಚಕ್ರೇ ಯಶ್ಚೇದಿಪಮಖಂಡಯತ್ ॥ ೫೮೦ ॥**

**ಅರ್ಥ–** ತಸ್ಮಾತ್ = ತಪಸ್ಸನ್ನು ಮಾಡಿದಾಗಲೂ ತನ್ನ ಮಹಿಮೆಯನ್ನು ಕೊಡದಿರುವುದರಿಂದ, ಯಃ = ಯಾವ ಭಗವಂತನಾದ ಶ್ರೀಕೃಷ್ಣನು, ಪೌಂಡ್ರಕವಧಂ = ಪೌಂಡ್ರಕವಾಸುದೇವನ ಸಂಹಾರವನ್ನು, ಚಕ್ರೇ = ಮಾಡಿದನೋ, ಯಃ = ಯಾವ ಶ್ರೀಕೃಷ್ಣನು, ಚೇದಿಪಂ = ಚೇದಿಪಾಲನಾದ ಶಿಶುಪಾಲನನ್ನು, ಅಖಂಡಯತ್ = ಸಂಹರಿಸಿದನೋ, ಸಃ = ಅಂತಹ ಕೃಷ್ಣನು, ಅನ್ಯೇಷಾಂ = ತನಗಿಂತ ಭಿನ್ನರಾದ, ಕೇಷಾಮಪಿ = ಯಾರಿಗೂ ಕೂಡ, ಆತ್ಮೈಕ್ಯಂ = ತನ್ನ ಅಭೇದವನ್ನು, ನ ದಿತ್ಸತಿ (ಇತಿ) = ಕೊಡುವುದಿಲ್ಲ ಎಂಬುದಾಗಿ, (ಕಿಮು ವಕ್ತವ್ಯಂ? = ಬೇರೆ ಹೇಳಬೇಕೇನು?)

**ಅನುವಾದ– ಯಾವ ಹರಿಯು ಪೌಂಡ್ರಕ ವಾಸುದೇವನ ವಧೆಯನ್ನು ಮಾಡಿದನೋ ಮತ್ತು ಯಾವ ಹರಿಯು ಶಿಶುಪಾಲನ ವಧೆಯನ್ನು ಮಾಡಿದನೋ ಅಂತಹ ಹರಿಯು ಹಿಂದೆ ಹೇಳಿದ ಕಾರಣದಿಂದ ತನ್ನ ಐಕ್ಯವನ್ನು ಯಾರಿಗೂ ಕೊಡುವುದಿಲ್ಲ.**

**ಭಾವವಿಲಾಸಿನೀ– ತಸ್ಮಾತ್ತಪಸಾಪಿ ಸ್ವಮಹಿಮ್ನೋಽನ್ಯತ್ರಾದಾನಾತ್ । ಸಃ ಭಗವಾನ್ । ಯುಕ್ತ್ಯಂತರಂ ಚಾಹ – ಯ ಇತಿ ॥ ಯಃ ಕೃಷ್ಣರೂಪೀ ನಾರಾಯಣಃ । ಪೌಂಡ್ರಕಂ ಸೋಹಂಭಾವಾಭಿರತಪೌಂಡ್ರಕವಾಸುದೇವಾಖ್ಯಂ ದೈತ್ಯಮ್ । ಚೇದಿಪಂ ಲಕ್ಷ್ಮೀರೂಪರುಗ್ಮಿಣೀಪಾಣಿಗ್ರಹಣಕಾಮುಕಶಿಶುಪಾಲಮ್ । ಸ ಆತ್ಮೈಕ್ಯಮನ್ಯೇಷಾಂ ನ ದಿತ್ಸತೀತಿ ಪೂರ್ವೇಣಾನ್ವಯಃ ॥ ೫೮೦ ॥**

**ವಿವರಣೆ–** ಚತುರ್ಮುಖಬ್ರಹ್ಮನಂತಹ ಮಹಾಭಾಗವತನಿಗೂ ತನ್ನ ವಿಶಿಷ್ಟಗುಣಗಳನ್ನು ಭಗವಂತನು ಕೊಡುವುದಿಲ್ಲವಾದ್ದರಿಂದ ತನ್ನ ಅಭೇದವನ್ನು ಬೇರೆ ಯಾರಿಗೂ ಕೂಡ ಕೊಡಲಾರನು. ತಾನೇ ವಾಸುದೇವನೆಂದು ಹೇಳಿಕೊಂಡು ಬೀಗುತ್ತಿದ್ದ ಪೌಂಡ್ರಕನು ತಾನು ಭಗವಂತನಿಂದ ಅತ್ಯಂತಾಭಿನ್ನನೆಂದೇ ಭಾವಿಸಿದನೆಂದಾಯಿತು. ಹಾಗಾಗಿಯೇ ಶ್ರೀಕೃಷ್ಣನು ಆತನನ್ನು ಸಂಹರಿಸಿದನು. ಅಲ್ಲದೇ ರುಕ್ಮಿಣಿಯ ಪರಿಣಯಕ್ಕಾಗಿ ಹಾತೊರೆವ ಮೂಲಕ ಶಿಶುಪಾಲನು ಲಕ್ಷ್ಮೀಪತಿತ್ವವೆಂಬ ಭಗವಂತನ ವಿಶಿಷ್ಟಸ್ವರೂಪವೇ ತಾನೆಂದು ಭಾವಿಸಿದಂತಾಯಿತು. ಅದಕ್ಕಾಗಿಯೇ ಶ್ರೀಕೃಷ್ಣನು ಆತನನ್ನೂ ನಿಗ್ರಹಿಸಿದನು.

**ಸೋಽಹಂಭಾವಾತ್ ಕಿಮನ್ಯೋಽಸ್ತಿ ದ್ರೋಹಃ ಪೌಂಡ್ರಕರಾಕ್ಷಸೇ ।**
**ಸ ಚೇಚ್ಛಾಸ್ತ್ರಸ್ಯ ತತ್ತ್ವಾರ್ಥಃ ಕುತಸ್ತಂ ಶಿಕ್ಷಯೇತ್ ಪ್ರಭುಃ ॥ ೫೮೧ ॥**

**ಅರ್ಥ–** ಪೌಂಡ್ರಕರಾಕ್ಷಸೇ = ರಾಕ್ಷಸನಾದ ಪೌಂಡ್ರಕವಾಸುದೇವನಲ್ಲಿ ಸೋಽಹಂಭಾವಾತ್ = ಈಶ್ವರೈಕ್ಯಚಿಂತನೆಗಿಂತ, ಅನ್ಯಃ = ಬೇರೆಯಾದ, ದ್ರೋಹಃ = ದೈವದ್ರೋಹವು, ಅಸ್ತಿ ಕಿಂ? = ಇದೆಯೇನು? ಸಃ = ಆ ಈಶ್ವರೈಕ್ಯದ ಅನುಸಂಧಾನವೇ, ಶಾಸ್ತ್ರಸ್ಯ = ವೇದಾದಿಶಾಸ್ತ್ರಸಮುದಾಯದ, ತತ್ತ್ವಾರ್ಥಃ = ತಾತ್ಪರ್ಯ ವಿಷಯವು, ಚೇತ್ =

ಆಗಿರುವುದಾದರೆ, ಪ್ರಭುಃ = ಸರ್ವಶಕ್ತನಾದ ಶ್ರೀಕೃಷ್ಣನು, ತಂ = ಆ ಪೌಂಡ್ರಕವಾಸುದೇವನನ್ನು ಕುತಃ = ಬೇರೆ ಯಾವಕಾರಣಕ್ಕಾಗಿ, ಶಿಕ್ಷಯೇತ್ = ಶಿಕ್ಷೆಗೆ ಒಳಪಡಿಸುವನು?

**ಅನುವಾದ–** ರಾಕ್ಷಸನಾದ ಪೌಂಡ್ರಕ ವಾಸುದೇವನಲ್ಲಿ ನಾನೇ ಬ್ರಹ್ಮ ಎಂಬ ಚಿಂತನೆಯನ್ನು ಬಿಟ್ಟು ಬೇರೆ ಯಾವ ದ್ರೋಹವಿದೆ? ಅದೇ ಶಾಸ್ತ್ರದ ತತ್ತ್ವಾರ್ಥವಾದರೆ ಪ್ರಭುವಾದ ಹರಿಯು ಅವನಿಗೆ ಏಕೆ ಶಿಕ್ಷೆಯನ್ನು ಕೊಟ್ಟನು?

**ಭಾವವಿಲಾಸಿನೀ–** ಪೌಂಡ್ರಕವಧೇಽಪಿ ಕುತೋ ನಾತ್ಮೈಕ್ಯಂ ದಿಶತೀತ್ಯತೋ ಹೇತುಹೇತುಮದ್ಭಾವಂ ಸ್ಫೋರಯತಿ – **ಸೋಽಹಂಭಾವಾದಿತಿ** ॥ ಲಕ್ಷ್ಮೀಪತಿತ್ವಾಖ್ಯಭಾವಸ್ಯೋಪಲಕ್ಷಣಮೇತತ್ ॥ ೫೮೧ ॥

**ವಿವರಣೆ–** ದುರಾತ್ಮನಾದ ಪೌಂಡ್ರಕವಾಸುದೇವನು ತಾನೇ ವಾಸುದೇವನೆಂದು ಭಾವಿಸಿಕೊಳ್ಳುವುದಕ್ಕಿಂತ ಹೊರತಾದ ಬೇರೆ ಯಾವುದಾದರೂ ದೈವದ್ರೋಹವನ್ನು ಮಾಡಿದ್ದನೇನು? ಅಂತಯೇ ಶಿಶುಪಾಲಭೂಪಾಲನು ತಾನೇ ಲಕ್ಷ್ಮೀರೂಪಳಾದ ರುಗ್ಮಿಣಿಗೆ ರಮಣನಾಗಬೇಕೆಂದು ಭಾವಿಸಿದ್ದಕ್ಕಿಂತ ಹೊರತಾದ ಬೇರೆ ಯಾವುದಾದರೂ ದೈವದ್ರೋಹವನ್ನು ಮಾಡಿದ್ದನೇನು? ಅವರಿಬ್ಬರೂ ಬೇರೆ ಯಾವುದೇ ದ್ರೋಹವನ್ನು ಮಾಡಿರದಿದ್ದರೂ ಈಶ್ವರೈಕ್ಯಾನುಸಂಧಾನ ಮತ್ತು ಲಕ್ಷ್ಮೀಪತಿತ್ವಾನುಸಂಧಾನಗಳೆಂಬ ದ್ರೋಹಗಳ ಕಾರಣಕ್ಕಾಗಿಯೇ ಶ್ರೀಕೃಷ್ಣನು ಅವರಿಬ್ಬರನ್ನೂ ಸಂಹರಿಸಿದ. ಜೀವೇಶ್ವರಾಭೇದವೇ ಸಚ್ಛಾಸ್ತ್ರಗಳ ತಾತ್ಪರ್ಯ ವಿಷಯವಾಗಿದ್ದರೆ ಮತ್ತು ಅದೇ ಕೃಷ್ಣನ ಅಭಿಪ್ರಾಯವಾಗಿದ್ದರೆ ಆ ಇಬ್ಬರು ರಾಕ್ಷಸರನ್ನು ಆತ ಯಾವ ಕಾರಣಕ್ಕಾಗಿ ಶಿಕ್ಷೆಗೊಳಪಡಿಸಬೇಕಿತ್ತು? ಮೂಲಕಾರರು ಈ ಶ್ಲೋಕದಲ್ಲಿ ಸೋಽಹಂಭಾವಾತ್ ಎಂಬ ಒಂದೇ ಶಬ್ದವನ್ನು ಪ್ರಯೋಗಿಸಿದ್ದರೂ ಆ ಒಂದೇ ಶಬ್ದದಿಂದ ಅವರು ಪೌಂಡ್ರಕನ ಸೋಽಹಂಭಾವಚಿಂತನೆ ಮತ್ತು ಶಿಶುಪಾಲನ ಲಕ್ಷ್ಮೀಪತಿತ್ವಚಿಂತನೆಗಳೆಂಬ ಎರಡೂ ದ್ರೋಹಗಳನ್ನು (ಉಪಲಕ್ಷಣತಯಾ) ಸೂಚಿಸುವ ಅಭಿಪ್ರಾಯ ಹೊಂದಿದ್ದಾರೆಂದು ಗ್ರಹಿಸಬೇಕು.

ಐಕ್ಯಚಿಂತನೆಯು ನೀತಿವಿರುದ್ಧವೂ ಆಗಿದೆ-

**ಸತ್ಯಂ ಪ್ರಿಯಂ ವಚೋ ವಾಚ್ಯಂ ವಾಚ್ಯಂ ನಾಸತ್ಯಮಪ್ರಿಯಂ ।**
**ಯದಚ್ಯುತೋಽಹಮಿತ್ಯುಚ್ಚೈರುಚ್ಚರನ್ ಪೌಂಡ್ರಕಶ್ಚ್ಯುತಃ ॥ ೫೮೨ ॥**

**ಅರ್ಥ–** ಯತ್ = ಯಾವ ಕಾರಣದಿಂದ, ಪೌಂಡ್ರಕಃ = ಪೌಂಡ್ರಕವಾಸುದೇವನು, ಅಹಂ = ನಾನು, ಅಚ್ಯುತಃ = ವಾಸುದೇವನು, ಇತಿ = ಎಂದು, ಉಚ್ಚೈಃ = ಜೋರಾಗಿ,

ಉಚ್ಚರನ್ = ಹೇಳಿಕೊಳ್ಳುತ್ತಾ, ಚ್ಯುತಃ = ಪ್ರಾಣ ಕಳೆದುಕೊಂಡನೋ, ತಸ್ಮಾತ್ = ಆ ಕಾರಣದಿಂದ, ಸತ್ಯಂ = ಯಥಾರ್ಥವಾದ, ಪ್ರಿಯಂ = ಕೇಳುಗನ ಮನಸ್ಸಿಗೆ ಸಂತೋಷಕೊಡುವ, ವಚಃ = ಮಾತೇ, ವಾಚ್ಯಂ = ಹೇಳಲ್ಪಡಬೇಕು. ಅಸತ್ಯಂ = ಅಯಥಾರ್ಥವಾದ, ಅಪ್ರಿಯಂ = ಮನಸ್ಸಿಗೆ ಸಂತೋಷಕೊಡದ, ವಚಃ = ಮಾತು, ನ ವಾಚ್ಯಂ= ಹೇಳಲ್ಪಡಬಾರದು.

**ಅನುವಾದ–** ಯಾವ ಕಾರಣದಿಂದ ನಾನೇ ಅಚ್ಯುತನೆಂದು ಉಚ್ಚಕಂಠದಿಂದ ಹೇಳುವ ಪೌಂಡ್ರಕನು ಹತನಾದನೋ ಆ ಕಾರಣದಿಂದ ಸತ್ಯವಾದ ಮತ್ತು ಪ್ರಿಯವಾದ ಮಾತನ್ನೇ ಆಡಬೇಕು. ಅಸತ್ಯವಾದ ಮತ್ತು ಅಪ್ರಿಯವಾದ ಮಾತನ್ನು ಆಡಬಾರದು.

**ಭಾವವಿಲಾಸಿನೀ–** ನೀತಿವಿರುದ್ಧಂ ಚ ಬ್ರಹ್ಮೈಕ್ಯಾನುಸಂಧಾನಮಿತ್ಯಾಹ – **ಸತ್ಯಮಿತಿ** ॥ ಪ್ರಿಯಂ ಪ್ರಭುಮನಸ್ತೋಷಕರಂ ದಾಸೋಹಮಿತ್ಯಾದಿರೂಪಮ್ । ಯದ್ಯಸ್ಮಾತ್ । ಚ್ಯುತಃ ನಷ್ಟಃ । ತಸ್ಮಾದಿತಿ ಪೂರ್ವೇಣಾನ್ವಯಃ ॥ ೫೮೨ ॥

**ವಿವರಣೆ–** ತಾನೇ ವಾಸುದೇವನೆಂದು ಉಚ್ಚಕಂಠದಿಂದ ಘೋಷಿಸಿಕೊಳ್ಳುತ್ತಿದ್ದ ಪೌಂಡ್ರಕನು ಶ್ರೀಕೃಷ್ಣನಿಂದ ಪ್ರಾಣಕಳೆದುಕೊಂಡನು. ಇದರಿಂದ ತಿಳಿಯುವುದೇನೆಂದರೆ, ಹೇಳುವವನು ಯಾವಾಗಲೂ ಯಥಾರ್ಥವಾದ ಮತ್ತು ಕೇಳುವವನಿಗೆ ಪ್ರಿಯವಾದ ಸಂಗತಿಯನ್ನೇ ಹೇಳಬೇಕು. ಅಯಥಾರ್ಥವಾದ ಮತ್ತು ಪ್ರಿಯವಾಗದ ಸಂಗತಿಯನ್ನು ಹೇಳಲೇ ಬಾರದು. ವಿಶೇಷವಾಗಿ ದಾಸನಾದವನು ತನ್ನ ಯಜಮಾನನ ಮನಸ್ಸಿಗೆ ಪ್ರಿಯವಾಗುವಂತಹ ಸಂಗತಿಯನ್ನೇ ಹೇಳಬೇಕು. ಇಲ್ಲದಿದ್ದರೆ ಯಜಮಾನನು ದಾಸನ ಮೇಲೆ ಕೋಪಗೊಳ್ಳುತ್ತಾನೆ. ದಾಸರಾದ ಪೌಂಡ್ರಕ ಮತ್ತು ಶಿಶುಪಾಲರು ಪ್ರಭುವಾದ ಶ್ರೀಕೃಷ್ಣನ ಕೋಪವು ಕೆರಳುವಂತೆ ವಾಸುದೇವತ್ವ ಚಿಂತನೆ ಮತ್ತು ರುಗ್ಮಿಣೀಪತಿತ್ವ-ಚಿಂತನೆಗಳನ್ನು ಮಾಡಿದ್ದರಿಂದಲೇ ಆತನಿಂದ ಹತರಾದರು. ಆದ್ದರಿಂದ ಈಶ್ವರೈಕ್ಯವು ಶಾಸ್ತ್ರತಾತ್ಪರ್ಯವಿಷಯವಲ್ಲವೆಂದು ಸಿದ್ಧವಾಗುತ್ತದೆ.

**ಯಯಾ ಭಿಯೈಕವಾಕ್ಯಸ್ಥಂ ಜಡೈಕ್ಯಂ ತ್ಯಜ್ಯತೇ ತ್ವಯಾ ।**
**ತಯೈವ ತ್ಯಜ ಜೀವೈಕ್ಯಂ ವಿರಮ್ಯ ವ್ಯಾಪೃತಿರ್ನ ಚೇತ್ ॥ ೫೮೩ ॥**

**ಅರ್ಥ–** ತ್ವಯಾ = ನಿನ್ನಿಂದ, ಯಯಾ = ಯಾವ, ಭಿಯಾ = ಪ್ರತ್ಯಕ್ಷವಿರೋಧದ ಭಯದಿಂದ, ಏಕವಾಕ್ಯಸ್ಥಂ = ಸರ್ವಂ ಖಲ್ವಿದಂ ಬ್ರಹ್ಮ ಎಂಬ ಒಂದು ವಾಕ್ಯದಲ್ಲಿ ವರ್ಣಿತವಾದ, ಜಡೈಕ್ಯಂ = ಜಡಕ್ಕೆ ಈಶ್ವರನೊಂದಿಗೆ ಐಕ್ಯವು, ತ್ಯಜ್ಯತೇ = ನಿರಾಕರಿ-ಸಲ್ಪಡುವುದೋ, ತಯಾ = ಆ, ಭಿಯಾ ಏವ = ಪ್ರತ್ಯಕ್ಷವಿರೋಧದ ಭಯದಿಂದಲೇ, ಜೀವೈಕ್ಯಂ= ಜೀವರಿಗೆ ಈಶ್ವರನಿಂದ ಐಕ್ಯವನ್ನು ತ್ಯಜ = ನಿರಾಕರಿಸು. ನ ಚೇತ್ = ಹೀಗೆ

ಮಾಡದಿದ್ದರೆ, ವಿರಮ್ಯ ವ್ಯಾಪೃತಿಃ = ವೇದವೆಂಬ ಕರಣಕ್ಕೆ ವಿರಮ್ಯವ್ಯಾಪಾರವೆಂಬ ದೋಷವು ಬಂದೀತು.

**ಅನುವಾದ–** ಯಾವ ಭಯದಿಂದ ಒಂದೇ ವಾಕ್ಯದಲ್ಲಿರುವ ಜಡೈಕ್ಯವನ್ನು ನೀನು ಪರಿತ್ಯಜಿಸುತ್ತೀಯೋ ಅದೇ ಭಯದಿಂದಲೇ ಜೀವೈಕ್ಯವನ್ನೂ ಪರಿತ್ಯಜಿಸು. ಇಲ್ಲದಿದ್ದರೆ ಶಬ್ದಕ್ಕೆ ವಿರಮ್ಯವ್ಯಾಪಾರವು ಉಂಟಾಗುತ್ತದೆ.

**ಭಾವವಿಲಾಸಿನೀ–** ಸಕೃತ್ ಶ್ರುತ್ಯೈಕ್ಯವಾಕ್ಯಸ್ಯಾರ್ಥದ್ವಯಾಂಗೀಕಾರೇ ವಿರಮ್ಯ ವ್ಯಾಪಾರಾಖ್ಯ-ದೋಷೋ ಭವಿಷ್ಯತೀತಿ ವದನ್ ಶ್ರುತ್ಯರ್ಥಕಥನಮುಪಸಂಹರತಿ – **ಯಯೇತಿ** ॥ ಯಯಾ ಪ್ರತ್ಯಕ್ಷ ವಿರೋಧಾಖ್ಯಯಾ ॥ ೫೮೩ ॥

**ವಿವರಣೆ–** ಸರ್ವಂ ಖಲ್ವಿದಂ ಬ್ರಹ್ಮ ಎಂಬ ಶ್ರುತಿಯು ಜಡ ಮತ್ತು ಚೇತನಗಳೆಂಬ ಸಮಸ್ತ ಪ್ರಪಂಚವೂ ಬ್ರಹ್ಮವೇ ಆಗಿದೆಯೆಂಬ ಅರ್ಥವನ್ನು ಹೇಳುತ್ತದೆ. ಆದರೆ ನೀವು ಅದ್ವೈತಿಗಳು ಜಡವಸ್ತುಗಳಿಗೆ ಬ್ರಹ್ಮೈಕ್ಯವು ಪ್ರತ್ಯಕ್ಷವಿರುದ್ಧವೆಂಬ ಕಾರಣವನ್ನು ಮುಂದಿಟ್ಟು ಎಲ್ಲ ಜೀವಾತ್ಮರಿಗೆ ಮಾತ್ರ ಬ್ರಹ್ಮೈಕ್ಯವನ್ನು ಶ್ರುತಿಯು ಹೇಳುತ್ತದೆ ಎಂದು ಸಿದ್ಧಾಂತಿಸಿದ್ದೀರಿ.

ಆದರೆ ಜೀವಾತ್ಮರಿಗೂ ಕೂಡ ಬ್ರಹ್ಮೈವು ಪ್ರತ್ಯಕ್ಷವಿರುದ್ಧವಾಗಿದೆ ಎಂಬ ಅಂಶವನ್ನು ನೀವೇಕೆ ಗಮನಿಸಲಿಲ್ಲ? ಈ ವೇದವಾಕ್ಯವು ಜಡ,ಚೇತನಗಳೆಂಬ ಎರಡು ವಿಶೇಷ್ಯಗಳನ್ನು ಉದ್ದೇಶಿಸಿ ಬ್ರಹ್ಮರೂಪತ್ವವೆಂಬ ಒಂದು ವಿಶೇಷಣವನ್ನು ಹೇಳುತ್ತಿದೆಯಷ್ಟೇ! ಹಾಗಿರುವಾಗ ಜಡಚೇತನಗಳೆರಡಕ್ಕೂ ಸಮಾನವಾಗಿಯೇ ಬ್ರಹ್ಮಾಭೇದವು ಸಿದ್ಧವಾಗಬೇಕು ಅಥವಾ ಬ್ರಹ್ಮ ಎಂಬ ಶಬ್ದಕ್ಕೆ ಪ್ರತ್ಯಕ್ಷಸಮ್ಮತವಾದ ಅರ್ಥಾಂತರವನ್ನು ಹೇಳಿ ಅದನ್ನು ಜಡಚೇತನರಿಗೆ ಸಮಾನವಾಗಿ ವಿಶೇಷಣವನ್ನಾಗಿ ಹೇಳಬೇಕು.

ಇಲ್ಲದಿದ್ದರೆ ವಿರಮ್ಯವ್ಯಾಪಾರವೆಂಬ ದೋಷವು ಬರುತ್ತದೆ.

ವಿರಮ್ಯ ವ್ಯಾಪಾರ - ಒಮ್ಮೆ ಕೇಳಿಬಂದ ಒಂದು ವಾಕ್ಯವೆಂಬ ಕರಣಕ್ಕೆ ಎರಡು ಅರ್ಥಗಳನ್ನು ಹೇಳಿದಂತಾದ್ದರಿಂದ ಬರುವ ದೋಷ. ವಿರಮ್ಯ - ತಡೆದು, ವ್ಯಾಪಾರ - ಪದಾರ್ಥೋಪಸ್ಥಾಪಕತ್ವರೂಪ ವ್ಯಾಪಾರ.

ಮೊದಲು ಭಿನ್ನಗಳಾದ ವಸ್ತುಗಳು ಮತ್ತೆಂದಿಗೂ ಐಕ್ಯವನ್ನು ಪಡೆಯಲಾರವು-

**ಧೌತವಾಸಸಿ ದತ್ತೋಽನ್ನರಸೋ ರಜಕಮಂದಿರೇ ।**
**ಏಕೀಕರ್ತುಂ ಪ್ರಯತ್ನೇನ ತಾಡಿತೋಽಪಿ ಪುನಃ ಪುನಃ ॥ ೫೮೪ ॥**

**ಏಕೀಭೂತ ಇತಿ ಪ್ರೋಕ್ತೋಽಪ್ಯೇಕತಾಮೇತಿ ಕಿಂ ಪಟಃ ।**
**ವಾಕ್ಯಂ ತದ್ ಬಾಧಿತಾರ್ಥತ್ವಾತ್ ಸೋಪಚಾರಂ ಪ್ರಕಲ್ಪ್ಯತೇ ॥ ೫೮೫ ॥**

**ಅರ್ಥ–** ಧೌತವಾಸಸಿ = ಒಗೆದ ಬಟ್ಟೆಯಲ್ಲಿ, ರಜಕಮಂದಿರೇ = ಅಗಸನ ಮನೆಯಲ್ಲಿ, ದತ್ತಃ = ಹಾಕಲ್ಪಟ್ಟ ಅನ್ನರಸಃ = ಅನ್ನದ ಗಂಜಿಯು, ಪ್ರಯತ್ನೇನ = ಪ್ರಯತ್ನಪೂರ್ವಕವಾಗಿ, ಏಕೀಕರ್ತುಂ = ಬಟ್ಟೆಯೊಂದಿಗೆ ಒಂದಾಗಿ ಮಾಡಲು, ಪುನಃ ಪುನಃ = ಮತ್ತೆ ಮತ್ತೆ, ತಾಡಿತಃ ಅಪಿ = ದೊಣ್ಣೆಯಿಂದ ಹೊಡೆಯಲ್ಪಟ್ಟರೂ, ಏಕೀಭೂತಃ = ಬಟ್ಟೆಯೊಂದಿಗೆ ಅನ್ನದಗಂಜಿಯು ಏಕವಾಯಿತು, ಇತಿ = ಎಂಬುದಾಗಿ, ಪ್ರೋಕ್ತಃ ಅಪಿ = ಅಗಸನಿಂದ ಹೇಳಲ್ಪಟ್ಟರೂ, ಪಟೇ = ಬಟ್ಟೆಯಲ್ಲಿ ಏಕತಾಂ = ಐಕ್ಯವನ್ನು ಏತಿ ಕಿಂ? = ಹೊಂದುತ್ತದೇನು? ತತ್ = ಮೊದಲು ಭಿನ್ನವಾದವುಗಳು ಮುಂದೆಯೂ ಐಕ್ಯವನ್ನು ಪಡೆಯುವುದಿಲ್ಲವಾದ್ದರಿಂದ, ವಾಕ್ಯಂ = ಸರ್ವಂ ಖಲ್ವಿದಂ ಬ್ರಹ್ಮ ಎಂಬ ವಾಕ್ಯವು, ಬಾಧಿತಾರ್ಥತ್ವಾತ್ = ಬಾಧಿತಾರ್ಥವನ್ನು ಹೇಳುತ್ತಿರುವುದರಿಂದ, ಸೋಪಚಾರಂ = ಜಗತ್ತು ಬ್ರಹ್ಮಾಧೀನ ಇತ್ಯಾದಿರೂಪವಾದ ಅಮುಖ್ಯ ಐಕ್ಯವನ್ನು ಹೇಳುತ್ತಿದೆಯೆಂದು, ಪ್ರಕಲ್ಪ್ಯತೇ = ಅಂಗೀಕರಿಸಲ್ಪಡುತ್ತದೆ.

**ಅನುವಾದ–** ಅಗಸನ ಮನೆಯಲ್ಲಿ ಒಗೆದ ಬಟ್ಟೆಗೆ ಅನ್ನದ ಗಂಜಿಯನ್ನು ಸೇರಿಸಿ ಪ್ರಯತ್ನಪೂರ್ವಕವಾಗಿ ಮತ್ತೆ ಮತ್ತೆ ಅದನ್ನು ಬಡಿದು ಬಟ್ಟೆಯೂ, ಗಂಜಿಯು ಒಂದಾಗಿದೆ ಎಂದು ಹೇಳಿದರೂ ಸಹ, ಬಟ್ಟೆಯೂ, ಗಂಜಿಯೂ ಎಂದಾದರೂ ಒಂದಾಗುತ್ತದೆಯೇ? ಬಾಧಿತಾರ್ಥವಾದ ಆ ವಾಕ್ಯವು ಉಪಚರಿತ ಪ್ರಯೋಗವೆಂದೇ ಕಲ್ಪಿಸಲ್ಪಡುತ್ತದೆ.

**ಭಾವವಿಲಾಸಿನೀ–** ಪ್ರಾಕ್‌ಭಿನ್ನಾನಾಂ ಪದಾರ್ಥಾನಾಂ ಪುನಃ ಪರಸ್ಪರಮಭೇದೋ ಯತ್ನಶತೇನಾಪಿ ಲೋಕೇ ನ ದೃಷ್ಟೋ ನಾಪಿ ಕರ್ತುಂ ಶಕ್ಯ ಇತ್ಯಾಹ – **ಧೌತವಾಸಸೀತಿ ॥** ರಜಕಮಂದಿರೇ ಧೌತವಾಸಸಿ ದತ್ತೋಽನ್ನರಸ ಇತಿ ಸಂಬಂಧಃ । ಏಕೀಕರ್ತುಂ ವಸ್ತ್ರೇಣ ಸಹಾಭಿನ್ನಂ ಕರ್ತುಮ್ । ಪ್ರಯತ್ನೇನ ಸ್ನಿಗ್ಧದಾರುಮಯಖಂಡವಿಶೇಷಾದಿನಾ ಪ್ರಯತ್ನೇನ ಪುನಃ ಪುನಸ್ತಾಡಿತೋಽಪ್ಯೇಕೀ ಭಾವಪರ್ಯಂತಂ ತಾಡಿತೋಽಪಿ ಸಮ್ಯಕ್ ಸಂಶ್ಲೋಷೇ ಜಾತೇ ಸತಿ ರಜಕೇನೈಕೀಭೂತ ಇತಿ ಪ್ರೋಕ್ತೋಽಪ್ಯನ್ನರಸಃ ಪಟೇ ಏಕತಾಮೇತಿ ಕಿಮ್ । ನೈವೇತಿ । ಪುನರೇಕವಾರಂ ಪ್ರಕ್ಷಾಲನೇ ಸತ್ಯನ್ನರಸಸ್ಯಾಪಗಮಾದ್ವಸ್ತ್ರಸ್ಯಾನಪಗಮಾಚ್ಚ । ಏವಂಚ ಪ್ರಾಗನೇಕೀಭೂತಪದಾರ್ಥಸ್ಯ ಬಹುಪ್ರಯತನೇಽಪ್ಯ ಭೇದಾಖ್ಯೈಕೀಭಾವಾದರ್ಶನಾತ್ ಅತಿಸಾಂದ್ರತರಃ ಸಂಬಂಧ ವಿಶೇಷ ಏವ ಪ್ರಾಕ್‌ಭಿನ್ನಾನಾಮೈಕ್ಯಮಿತ್ಯುಚ್ಯತೇ । ನ ತ್ವಭೇದ ಏವೇತಿ ಭಾವಃ । ತತ್ತಸ್ಮಾತ್ । ಪ್ರಾಕ್‌ಭಿನ್ನಸ್ಯಾಭೇದಾಸಂಭವಾತ್ ॥ ೫೮೪-೫೮೫ ॥

**ವಿವರಣೆ–** ಮೊದಲು ಭಿನ್ನಗಳಾದ ವಸ್ತುಗಳು ಎಷ್ಟೇ ಪ್ರಯತ್ನಿಸಿದರೂ ಒಂದಾಗುವುದು ಎಲ್ಲೂ ಕಂಡಿಲ್ಲ ಮತ್ತು ಆ ಐಕ್ಯವನ್ನು ತಂದುಕೊಡಲಾಗುವುದೂ ಇಲ್ಲ. ಅದಕ್ಕೆ ದೃಷ್ಟಾಂತವೇನೆಂದರೆ - ಅಗಸನು ಬಟ್ಟೆಯನ್ನು ಒಗೆದು ಅದನ್ನು ಗರಿಗರಿಯಾಗಿ ಮಾಡಲು ತನ್ನ ಮನೆಯಲ್ಲಿ ಅನ್ನದ ಗಂಜಿಯನ್ನು ಹಾಕಿ ಗಂಜಿಯು ಬಟ್ಟೆಯೊಂದಿಗೆ

ಸರಿಯಾಗಿ ಹೊಂದಿಕೊಳ್ಳುವಂತೆ ಮಾಡಲು ದೊಣ್ಣೆಯಿಂದ ಚೆನ್ನಾಗಿ ಬಡಿಯುತ್ತಾನೆ. ಹೊಂದಿಕೊಂಡಾದ ಮೇಲೆ ಆತನು ಗಂಜಿಯು ಬಟ್ಟೆಯೊಂದಿಗೆ ಒಂದಾಯಿತು ಎಂದು ಹೇಳಿ ಬಟ್ಟೆಯನ್ನು ಹಿಂಡಿ ಒಣಗಲು ಹಾಕುತ್ತಾನೆ. ಅವನು ಅಷ್ಟೆಲ್ಲ ಪ್ರಯತ್ನಿಸಿದರೂ, ಒಂದಾಯಿತೆಂದು ಹೇಳಿಕೊಂಡರೂ, ಗಂಜಿಯು ಬಟ್ಟೆಯೊಂದಿಗೆ ಅಭೇದವನ್ನು ಹೊಂದುತ್ತದೆಯೇನು? ಇಲ್ಲ, ಏಕೆಂದರೆ ಬಟ್ಟೆಯನ್ನು ಮುಂದೊಮ್ಮೆ ಮತ್ತೆ ಒಗೆದಾಗ ಗಂಜಿಯು ತೊಳೆದುಹೋಗತ್ತದೆಯಾದರೂ ಬಟ್ಟೆಗೇನೂ ಹಾನಿಯಾಗುವುದಿಲ್ಲ. ಹಾಗಾಗಿ ಭಿನ್ನಗಳಾದ ವಸ್ತುಗಳಿಗೆ ಎಷ್ಟೇ ಪ್ರಯತ್ನಪಟ್ಟರೂ ಐಕ್ಯವು ಕಂಡಿಲ್ಲವಾದ್ದರಿಂದ ಆ ವಸ್ತುಗಳ ನಡುವೆ ಉಂಟಾದ ಗಾಢವಾದ ಸಂಬಂಧವನ್ನೇ ಐಕ್ಯವೆನ್ನಲಾಗುತ್ತದೆ.

ಆದ್ದರಿಂದ ಸರ್ವಂ ಖಲ್ವಿದಂ ಬ್ರಹ್ಮ ಎಂಬ ವೇದವಾಕ್ಯವು ಜಡ,ಚೇತನಗಳಿಗೆ ಬ್ರಹ್ಮನಿಂದ ಅಭೇದವನ್ನು ಹೇಳುವಂತೆ ಮೇಲ್ನೋಟಕ್ಕೆ ತೋರಿದರೂ ಆ ಅರ್ಥವು ಪ್ರತ್ಯಕ್ಷಬಾಧಿತವಾದ್ದರಿಂದ ಆ ವಾಕ್ಯಕ್ಕೆ ಮುಖ್ಯಾರ್ಥವಾದ ಅತ್ಯಂತಾಭೇದವನ್ನು ತಾತ್ಪರ್ಯವೆಂದು ಪರಿಗಣಿಸದೇ ಔಪಚಾರಿಕ (ಅಮುಖ್ಯ)ವಾದ ಅಭೇದವನ್ನು ಅರ್ಥಾತ್ ಜಡ,ಚೇತನಗಳಿಗೆ ಪರಮಾತ್ಮನಿಂದ ಗಾಢಸಂಬಂಧ (ವ್ಯಾಪ್ಯತ್ವ) ವನ್ನು ಅಥವಾ ಭಗವದಧೀನತ್ವವನ್ನು ತಾತ್ಪರ್ಯವಿಷಯವೆಂದು ಕಲ್ಪಿಸಬೇಕು.

**ಗ್ರಾಮೇಸ್ಮಿನ್ನೇಕ ಏವ ತ್ವಮಿತ್ಯುಕ್ತೇ ಶ್ವಾಪಿ ಕಿಂ ಭವಾನ್ ।**
**ಅತೋಽನ್ಯಸ್ಯಾನ್ಯವಸ್ತುತ್ವಂ ವಾಕ್ಯೈರ್ಯತ್ನಶತೈರಪಿ ।**
**ಕರ್ತುಂ ನ ಶಕ್ಯಂ ಕಿಂ ವಾಚಾ ಕಾಚೋ ನೀಲಮಣಿರ್ಭವೇತ್ ॥ ೫೮೬ ॥**

**ಅರ್ಥ–** ಅಸ್ಮಿನ್ = ಈ, ಗ್ರಾಮೇ = ಊರಿನಲ್ಲಿ, ತ್ವಂ = ನೀನು, ಏಕ ಏವ = ಒಬ್ಬನೇ (ಇದ್ದೀಯೆ) ಇತಿ = ಎಂದು, ಉಕ್ತೇ = ನಿನ್ನನ್ನು ಕುರಿತು ಹೇಳಲ್ಪಟ್ಟರೆ, ಭವಾನ್ = ನೀನು, ಶ್ವಾ ಅಪಿ = ನಾಯಿಯ ಕೂಡ, ಭವತಿ ಕಿಂ? = ಆಗುತ್ತೀಯೆ? (ಅತಃ = ಬಟ್ಟೆ ಮತ್ತು ನಾಯಿಯ ದೃಷ್ಟಾಂತಗಳೆರಡರಲ್ಲಿಯೂ ಭಿನ್ನವಸ್ತುಗಳಿಗೆ ಅಭೇದ ಕಂಡಿಲ್ಲವಾದ್ದರಿಂದ) ಅತಃ = ಆದ್ದರಿಂದ, ಅನ್ಯಸ್ಯ = ಒಂದು ವಸ್ತುವಿಗೆ, ಅನ್ಯವಸ್ತುತ್ವಂ = ಬೇರೊಂದು ವಸ್ತುವಿನ ಅಭೇದವನ್ನು (ಸ್ವರೂಪವನ್ನು) ಕರ್ತುಂ = ಮಾಡಲು, ವಾಕ್ಯೈಃ = ಅನೇಕವಾಕ್ಯಗಳಿಂದ, ಅಪಿ = ಮತ್ತು, ಯತ್ನಶತೈಃ = ನೂರಾರು ಪ್ರಯತ್ನಗಳಿಂದಲೂ, ನ ಶಕ್ಯಂ = ಸಾಧ್ಯವಿಲ್ಲ. ವಾಚಾ = ಇದು ಇಂದ್ರನೀಲಮಣಿಯಾಗಿದೆ ಎಂಬ ಬರಿಯ ಮಾತಿನಿಂದ, ಕಾಚಃ = ಗಾಜಿನ ಮಣಿಯು, ನೀಲಮಣಿಃ = ಇಂದ್ರನೀಲಮಣಿಯು, ಭವೇತ್ ಕಿಂ = ಆಗುತ್ತದೇನು?

**ಅನುವಾದ– ಈ ಗ್ರಾಮದಲ್ಲಿ ನೀನೊಬ್ಬನೇ ಇರುವವನು ಎಂದು ಹೇಳಿದರೆ ಆ ಗ್ರಾಮದಲ್ಲಿರುವ ನಾಯಿಯೂ ಸಹ ನೀನೇ ಆಗುತ್ತೀಯೇನು? ಆದ್ದರಿಂದ ನೂರು ವಾಕ್ಯಗಳನ್ನು ಪ್ರಯೋಗಿಸಿದರೂ ಒಂದು ವಸ್ತುವನ್ನು ಇನ್ನೊಂದು ವಸ್ತುವನ್ನಾಗಿ**

ಮಾಡಲು ಸಾಧ್ಯವಿಲ್ಲ. ಕೇವಲ ವಾಕ್ಯದಿಂದ ಒಂದು ಗಾಜಿನ ಮಣಿಯು ನೀಲ ಮಣಿಯಾಗುತ್ತದೆಯೇ?

**ಭಾವವಿಲಾಸಿನೀ–** ತದೇವ ದರ್ಶಯತಿ – **ಗ್ರಾಮ ಇತಿ ॥** ಹೇ ಮಾಯಾವಾದಿನ್ । ಅಸ್ಮಿನ್ ಗ್ರಾಮೇ ತ್ವಮೇಕ ಏವೇತ್ಯುಕ್ತೇ ಭವಾನ್‌ಶ್ವಾಪಿ ಕಿಂ ಭವತಿ । ನ ಭವತ್ಯೇವ । ಅತೋ ದೃಷ್ಟಾಂತ-ದ್ವಯೇಽಪಿ ಭಿನ್ನಸ್ಯಾಭೇದಾದರ್ಶನಾತ್ । ದೃಷ್ಟಾಂತಾಂತರಮಪ್ಯಾಹ – **ಕಿಂ ವಾಚೇತಿ ॥** ಕಾಚಃ ನೀಲಮ್ಮಣ್ಮಯಮಣಿವಿಶೇಷಃ । ವಾಚಾ ನೀಲಮಣಿರಿತ್ಯಜ್ಞಾನಾಂ ವಾಚಾ । ಅಜ್ಞೈರ್ವಾಚಾ ನೀಲಮಣಿರಿತ್ಯುಕ್ತೋಽಪೀತ್ಯರ್ಥಃ । ನೀಲಮಣಿಃ ನೀಲರತ್ನಮ್ । ಇತೋಽಪ್ಯನ್ಯಸ್ಯಾನ್ಯಾಭೇದಃ ಕದಾಪಿ ನ ಭವತೀತಿ ಭಾವಃ ॥ ೫೮೬ ॥

**ವಿವರಣೆ–** ಈ ಊರಿನಲ್ಲಿ ನೀನೊಬ್ಬನೇ ಇರುವಿ ಎಂದು ನಿನ್ನನ್ನು ಕುರಿತು ಹೇಳಿದರೆ ಊರಿನಲ್ಲಿರುವ ಎಲ್ಲರೊಂದಿಗೆ ನಿನಗೆ ಅಭೇದವಿದೆಯೆಂದು ಅರ್ಥವಾಗುತ್ತದೆಂದು ಭಾವಿಸಿ ಆ ಎಲ್ಲರೊಳಗೆ ಸೇರಿದ ನಾಯಿಯೂ ಕೂಡ ನೀನಾಗುವಿಯೇನು? ಇಲ್ಲ, ಆ ಮಾತಿಗೆ ನೀನೇ ಈ ಊರಿನಲ್ಲಿ ಪ್ರಧಾನ, ಶ್ರೇಷ್ಠ ಎಂಬ ಅರ್ಥವನ್ನು ಎಲ್ಲರೂ ಸ್ವೀಕರಿಸುತ್ತಾರೆ. ಹಾಗಾಗಿ ಮೊದಲು ಭಿನ್ನವಾದ ಒಂದು ವಸ್ತುವಿಗೆ ಮತ್ತೊಂದು ವಸ್ತುವಿನೊಂದಿಗೆ ಅಭೇದವನ್ನು ಹೇಳುವ ಹಲವಾರು ವಾಕ್ಯಗಳಿದ್ದರೂ ಆ ವಾಕ್ಯಗಳಿಂದ ವಸ್ತುಗಳಲ್ಲಿ ಅಭೇದವಿದೆಯೆಂದು ಸಿದ್ಧವಾಗಲಾರದು. ಅಂತಹ ಐಕ್ಯವನ್ನು ಮಾಡಲು ನೂರಾರು ಬಾರಿ ಪ್ರಯತ್ನಿಸಿದರೂ ಸಾಧ್ಯವಾಗುವುದಿಲ್ಲವೆಂಬುದು ಗಂಜಿ ಮತ್ತು ನಾಯಿಯ ದೃಷ್ಟಾಂತಗಳಿಂದ ತಿಳಿದುಬರುತ್ತದೆ. ಇದಕ್ಕೆ ಸಂಬಂಧಿಸಿದಂತೆ ಬೇರೊಂದು ದೃಷ್ಟಾಂತವನ್ನೂ ಹೇಳಬಹುದಾಗಿದೆ.

ನೀಲಿ ಬಣ್ಣದ ಗಾಜಿನ ಹರಳನ್ನು ನೋಡಿದ ಒಬ್ಬಾತನು ಅದನ್ನು ಗಾಜೆಂದು ತಿಳಿಯದೇ, ಇದು ಇಂದ್ರನೀಲಮಣಿ ಎಂದು ಹೇಳಿದ ಮಾತ್ರಕ್ಕೆ ಆ ಗಾಜಿನ ಹರಳು ಇಂದ್ರನೀಲಮಣಿಯಾಗುತ್ತದೇನು? ಆಗುವುದಿಲ್ಲ. ಆದ್ದರಿಂದ ಜೀವರಿಗೆ ಪರಮಾತ್ಮನಿಂದ ಅಭೇದವು ಯಾವ ವಾಕ್ಯದಿಂದಲೂ, ಪ್ರಯತ್ನದಿಂದಲೂ ಸಿದ್ಧವಾಗುವುದಿಲ್ಲ.

**ಭ್ರಮರಾದ್ ಭ್ರಮರೋಽನ್ಯಃ ಸ್ಯಾದ್ ದೀಪಾದ್ ದೀಪಾಂತರಂ ಭವೇತ್ ।**
**ತಯೋರೈಕ್ಯಂ ನ ತತ್ರಾಪಿ ದ್ವಿತಾಯಾಃ ಸ್ಪಷ್ಟಮೀಕ್ಷಣಾತ್ ॥ ೫೮೭ ॥**

**ಅರ್ಥ–** ಭ್ರಮರಾತ್ = ತಾಯಿ ದುಂಬಿಯಿಂದ, ಅನ್ಯಃ =ಮತ್ತೊಂದು, ಭ್ರಮರಃ = ಮರಿದುಂಬಿಯು, ಸ್ಯಾತ್ = ಹುಟ್ಟುತ್ತದೆ. ದೀಪಾತ್ = ಒಂದು ದೀಪದಿಂದ, ದೀಪಾಂತರಂ = ಇನ್ನೊಂದು ದೀಪವು, ಭವೇತ್ = ಹುಟ್ಟುತ್ತದೆ. ದ್ವಿತಾಯಾಃ = ತಾಯಿದುಂಬಿ ಹಾಗೂ ಮರಿದುಂಬಿಗಳ ನಡುವಣ ಹಾಗೂ ದೀಪಗಳ ನಡುವಣ ದ್ವಿರೂಪತ್ವದ, ಸ್ಪಷ್ಟಂ =

ನಿಶ್ಚಳವಾಗಿ, ಈಕ್ಷಣಾತ್ = ಕಾಣುವಿಕೆ ಇರುವುದರಿಂದ, (ಭೇದದ ದ್ವಿರೂಪತ್ವದ ಕಾಣುವಿಕೆ ಸ್ಪಷ್ಟವಾಗಿ ಇರುವುದರಿಂದ) ತಯೋಃ = ದುಂಬಿಗಳಿಗೆ ಮತ್ತು ದೀಪಗಳಿಗೆ, ಐಕ್ಯಂ = ಅಭೇದವು, ನ = ಇಲ್ಲ

**ಅನುವಾದ–** ಒಂದು ದುಂಬಿಯಿಂದ ಹುಟ್ಟುವ ದುಂಬಿಯು ಅದಕ್ಕಿಂತ ಭಿನ್ನವೇ ಆಗಿರುತ್ತದೆ. ಒಂದು ದೀಪದಿಂದ ಉಂಟಾಗುವ ಇನ್ನೊಂದು ದೀಪವು ಮೊದಲಿನ ದೀಪಕ್ಕಿಂತಲೂ ಭಿನ್ನವೇ ಆಗಿರುತ್ತದೆ. ಸ್ಪಷ್ಟವಾಗಿ ಭೇದವೇ (ದ್ವಿತ್ವವೇ) ಕಾಣುವುದರಿಂದ ಆ ಸ್ಥಳದಲ್ಲಿಯೂ ಕೂಡ ಅವುಗಳಿಗೆ ಐಕ್ಯವಿಲ್ಲ.

**ಭಾವವಿಲಾಸಿನೀ–** ಭ್ರಮರಕೀಟಕನಿದರ್ಶನೇ ದೀಪಾದ್ದೀಪಾಂತರನಿದರ್ಶನೇಽಪಿ ನೈಕ್ಯಮಿತ್ಯಾಹ – **ಭ್ರಮರಾದಿತಿ ॥** ಭ್ರಮರಾತ್ ಮಾತೃಭೂತಭ್ರಮರಾತ್ । ಭ್ರಮರಃ ಪುತ್ರಭೂತಭ್ರಮರಃ । ದ್ವಿತಾಯಾಃ ದ್ವಿರೂಪತ್ವಸ್ಯ । ಕೀಟಸ್ಯ ಭ್ರಮರತೇವ ಲೋಹಸ್ಯ ಸುವರ್ಣತಾಪಿ ಲೋಹಾಂತರಜನಿತ ಸುವರ್ಣಾಂತರಾಭೇದಾಭಾವೇನೇಶ್ವರಶಕ್ತ್ಯಾ ನಿತ್ಯಸಿದ್ಧಸುವರ್ಣಾಂತರಾಭೇದಾಭಾವೇ ನಚಬದ್ಧಸ್ಯಾಪಿ ಯೋಗ್ಯಜೀವಸ್ಯ ಮುಕ್ತೌ ಸತ್ಯಾಂ ಪ್ರಾಚೀನಕಾದಾಚಿತ್ಕ-ಮುಕ್ತಜೀವರಾಶಿಭ್ಯೋ ನಿತ್ಯಮುಕ್ತಪರಮಾತ್ಮನಾ ಚಾಭೇದಾಭಾವ ಏವೋಪಮಾ ನತು ತದಭೇದೇ । ನಿತ್ಯಸಿದ್ಧಸುವರ್ಣಾಂತರ- ಸಾದೃಶ್ಯಮಾತ್ರಸ್ಯಾತ್ರಾಪಿ ದರ್ಶನೇನ ನಿತ್ಯಮುಕ್ತ-ಭಾಗವತ್ಸಾರೂಪ್ಯಮಾತ್ರಸ್ಯ ಸ್ಯಾತ್ ಕಥಂಚಿದುಪಮಾ । ತಥಾಪಿ ಸಹಜಸುವರ್ಣಾ-ಲ್ಲೋಹಜಸುವರ್ಣಸ್ಯ ವೈಜಾತ್ಯವನ್ನಿತ್ಯಮುಕ್ತಭಗವದ್ರೂಪಾದ್ಮುಕ್ತಾನಾಂ ಶ್ರೀವತ್ಸಕೌಸ್ತುಭಾಭಾವಲಕ್ಷಣವೈಜಾತ್ಯಮನವಚ್ಛಿನ್ನಾನಂದಾದ್ಯಭಾವರೂಪವೈಜಾತ್ಯಂ ಚ ಸ್ಯಾದೇವ । ಅತೋಽನ್ಯಸ್ಯಾನ್ಯಾತ್ಮತಾ ನಾತ್ರ ದೃಷ್ಟಾ। ಯೋ ಲೋಹಃ ಸ್ಪರ್ಶಯೋಗೇ ಸತಿ ಯತ್ ಸುವರ್ಣಂಭವತಿ ತಸ್ಯ ತು ಸುವರ್ಣಸ್ಯ ಸ ಲೋಹ ಉಪಾದಾನಮ್ । ಸ್ಪರ್ಶಯೋಗಸ್ತು ನಿಮಿತ್ತಮಾತ್ರಮ್ । ಉಪಾದಾನೋಪಾದೇಯಯೋಶ್ಚ ಪ್ರಾಗಪ್ಯಭೇದ ಏವೇತಿ ಅನ್ಯಸ್ಯಾನ್ಯಾತ್ಮ-ತಾಯಾಂ ನೇದಮಪಿ ನಿದರ್ಶನಮ್ । ಕಿಂ ಚಾವಸ್ಥಾಂತರಾಖ್ಯ ವಿಕಾರವತಿ ಜಡೇ ಕೀಟ-ದೇಹಾದೌ ಭ್ರಮರದೇಹತ್ವಾದ್ಯವಸ್ಥಾಂತರಪ್ರಾಪ್ತಾವಪಿ ನಿರ್ವಿಕಾರಕೀಟಚೈತನ್ಯಸ್ಯ ಭ್ರಮರತ್ವ-ದಶಾಯಾಮಪ್ಯವಸ್ಥಾಂತರಾಖ್ಯ ವಿಕಾರಾದರ್ಶನೇನ ಚೈತನ್ಯಾಂತರಾಭೇದಾದರ್ಶನೇನ ಚ ಪರಿಚ್ಛಿನ್ನ ಜೀವಚೈತನ್ಯಾನಾಮಪರಿಚ್ಛಿನ್ನಬ್ರಹ್ಮಚಿತ್ತ್ವದಶಾ ತದಭೇದದಶಾ ವಾ ನ ತ್ರಿದಶಾಯುಷಾಪಿ ಸಾಧಯಿತುಂ ಶಕ್ಯಾ । ಅತಃ ಪರಾಭಿಲಷಿತಪ್ರಮೇಯೇ ನ ಕಿಂಚಿನ್ನಿದರ್ಶನಮ್ । ಗ್ರಂಥಕಾರೇಣ ತು ಯುಕ್ತಿದಾರಿದ್ರ್ಯಾಭಾವಾತ್ ಜಡದೃಷ್ಟಾಂತಾನಾಮಪಿ ವೈಷಮ್ಯಪ್ರದರ್ಶನಾಯ ಪ್ರಯತ್ನಃ ಕೃತ ಇತಿ ಜ್ಞಾತವ್ಯಮ್ ॥ ೫೮೭ ॥

**ವಿವರಣೆ–** ಜೀವರಿಗೆ ಬ್ರಹ್ಮೈಕ್ಯವನ್ನು ಸಾಧಿಸಲು ಅದ್ವೈತಿಗಲು ಈ ಮುಂದಿನ ದೃಷ್ಟಾಂತಗಳನ್ನು ಕೊಡುತ್ತಾರೆ - ತಾಯಿ ದುಂಬಿಯು ಮೊಟ್ಟೆಯನ್ನಿಟ್ಟು ಕೀಟವನ್ನು ಹುಟ್ಟಿಸುತ್ತದೆ. ಆ ಮರಿಕೀಟವು ತಾನೂ ದುಂಬಿಯಾಗಬೇಕೆಂದು ಬಯಸಿ ಬಯಸಿ

ದುಂಬಿಯಾಗಿಯೇ ಪರಿಣಮಿಸುತ್ತದೆ. ಒಂದು ದೀಪದ ಸ್ಪರ್ಶದಿಂದ ಮತ್ತೊಂದು ದೀಪವು ಹುಟ್ಟುತ್ತದೆ. ಕಬ್ಬಿಣಕ್ಕೆ ಸ್ಪರ್ಶಮಣಿಯನ್ನು ಮುಟ್ಟಿಸಿದರೆ ಅದೂ ಬಂಗಾರವಾಗುತ್ತದೆ. ಅಂತೆಯೇ ಬ್ರಹ್ಮನಾಗಬೇಕೆಂದು ತೀವ್ರವಾಗಿ ಹಂಬಲಿಸಿದ ಸಾಧಕನು ಬ್ರಹ್ಮಜ್ಞಾನದಿಂದ ತಾನೂ ಬ್ರಹ್ಮನೇ ಆಗಿಬಿಡುತ್ತಾನೆ ಎಂದು.

ಇದಕ್ಕೆ ಉತ್ತರರೂಪವಾಗಿ ಮೂಲಕಾರರು ಮೊದಲೊಮ್ಮೆ ಭಿನ್ನವಾಗಿದ್ದ ವಸ್ತುಗಳು ಮುಂದೆಂದೂ ಐಕ್ಯವನ್ನು ಪಡೆಯಲಾರವೆಂಬ ಸಿದ್ಧಾಂತವನ್ನೇ ಸಮರ್ಥಿಸುತ್ತಾ ಅದ್ವೈತಿಗಳ ದೃಷ್ಟಾಂತವನ್ನು ವಿಮರ್ಶಿಸುತ್ತಾರೆ -

| ಉಪಾದಾನ - | ಉಪಾದೇಯ |
|---|---|
| 1. ತಾಯಿದುಂಬಿ | ಮರಿಕೀಟ |
| ಮರಿಕೀಟ | ಮರಿದುಂಬಿ |
| 2. ಮೊದಲ ದೀಪ | ಎರಡನೇ ದೀಪ |
| 3. ಕಬ್ಬಿಣ | ಬಂಗಾರ |

ಈ ಮೂರೂ ದೃಷ್ಟಾಂತಗಳಲ್ಲಿಯೂ ದ್ವಿತಾ - ಉಪಾದೇಯವನ್ನು ಬಿಟ್ಟು ಉಪಾದಾನಕ್ಕೆ ಅಸ್ತಿತ್ವವು ಸ್ಪಷ್ಟವಾಗಿ ಅನುಭವಕ್ಕೆ ಬರುತ್ತಿರುವುದರಿಂದ ಉಪಾದಾನ ಉಪಾದೇಯಗಳಿಗೆ ಮೊದಲೂ, ಅನಂತರವೂ ಭೇದಸಹಿತವಾದ ಅಭೇದವು (ಭೇದಾಭೇದವೇ) ಇದೆ ಹೊರತು ಯಾವಾಗಲೂ ಕೇವಲ ಅತ್ಯಂತಾಭೇದವು ಇರುವುದೇ ಇಲ್ಲ. ಕಬ್ಬಿಣದಿಂದ ಜನಿಸಿದ ಬಂಗಾರವೂ ಕೂಡ, ತನ್ನಂತೆಯೇ ಇನ್ನೊಂದು (ಕಬ್ಬಿಣ)ಲೋಹದಿಂದ ಜನಿಸಿದ ಬಂಗಾರದಿಂದಲೂ ನೈಸರ್ಗಿಕ ಬಂಗಾರದಿಂದಲೂ ಅಭಿನ್ನವಲ್ಲ. ಹಾಗಾಗಿ ನೀವು ಕೊಡುವ ಮೂರೂ ದೃಷ್ಟಾಂತಗಳೂ ಒಂದು ಇನ್ನೊಂದಾಗುತ್ತದೆಂಬುದಕ್ಕೆ ಸಾಧಕಗಳಾಗಲಾರವು. ಹೊರತಾಗಿ ಸಂಸಾರಸ್ಥನಾಗಿದ್ದ ಜೀವನು ಮುಕ್ತಿ ಪಡೆದ ಮೇಲೆ, ತನ್ನಂತೆ ಸಂಸಾರಸ್ಥರಾಗಿದ್ದು ಮುಕ್ತಿಪಡೆದ ಜೀವರಿಂದಲೂ ಮತ್ತು ನಿತ್ಯಮುಕ್ತನಾದ ಪರಮಾತ್ಮನಿಂದಲೂ ಅಭಿನ್ನನಲ್ಲ ಎಂಬುದಕ್ಕೇ ಆ ದೃಷ್ಟಾಂತಗಳು ಸಾಧಕಗಳಾಗುತ್ತವೆ.

ನೈಸರ್ಗಿಕವಾದ ಬಂಗಾರಕ್ಕೂ, ಕಬ್ಬಿಣದಿಂದ ಮಾಡಿ ಬಂಗಾರಕ್ಕೂ ಹೋಲಿಕೆಯಿರುವಂತೆ ನಿತ್ಯಮುಕ್ತನಾದ ಭಗವಂತನಿಗೂ, ಸಂಸಾರದಿಂದ ಮುಕ್ತನಾದ ಜೀವರಿಗೂ ಸ್ವಲ್ಪ ಹೋಲಿಕೆಯಿದೆ ಎಂಬುದನ್ನೇನೋ ಈ ದೃಷ್ಟಾಂತಗಳು ತೋರಿಸಬಲ್ಲವು. ಹಾಗಿದ್ದರೂ ಕಬ್ಬಿಣದಿಂದ ಹುಟ್ಟಿದ ಬಂಗಾರಕ್ಕೂ ನೈಸರ್ಗಿಕಬಂಗಾರಕ್ಕೂ ವ್ಯತ್ಯಾಸವಿರುವಂತೆ ಭಗವಂತನಲ್ಲಿರುವ ಶ್ರೀವತ್ಸ ಕೌಸ್ತುಭ ಮೊದಲಾದ (ಚಿಹ್ನೆಗಳೂ) ಲಕ್ಷಣಗಳೂ ಅನಂತಾನಂದಜ್ಞಾನಸ್ವರೂಪ ಎಂಬ ವಿಶಿಷ್ಟತೆಯೂ ಸಂಸಾರಮುಕ್ತರಾದ ಜೀವರಿಗೆ ಇಲ್ಲವೆಂಬ ವ್ಯತ್ಯಾಸ ಇದ್ದೇ ಇದೆ.

ಅದಲ್ಲದೆ ಜಡವಾದ ಕೀಟದೇಹಕ್ಕೆ ರೂಪಾಂತರಗಳೆಂಬ ವಿಕಾರಗಳು ಯಾವಾಗಲೂ ಆಗುತ್ತಲೇ ಇರುವುದರಿಂದ ಭ್ರಮರತ್ವವೆಂಬ ವಿಕಾರವೂ ಸಮರ್ಥನೀಯವೇ ಸರಿ. ಆದರೆ ಚೇತನರೆಲ್ಲರೂ ನಿರ್ವಿಕಾರರಾದ್ದರಿಂದ ಕೀಟವು ಭ್ರಮರವಾದಾಗಲೂ ಕೀಟ ಚೇತನಕ್ಕೆ ಯಾವುದೇ ವಿಕಾರವು ಬರುವುದಿಲ್ಲವಾದ್ದರಿಂದ ಆ ಕೀಟಚೇತನವು ಮತ್ತಾವ ಚೇತನದೊಂದಿಗೆ ಅಭೇದವನ್ನು ಹೊಂದಿಲ್ಲ. ಅಂತಯೇ ಅಲ್ಪರಾದ ಜೀವಚೇತನರಿಗೆ ಪೂರ್ಣನಾದ ಭಗವಂತನ ಅಪರಿಚ್ಛಿನ್ನ ಚಿದ್ರೂಪತ್ವವನ್ನಾಗಲೀ, ಅಭೇದವನ್ನಾಗಲೀ ನಾವು ದೇವತೆಗಳ ಆಯುಷ್ಯವನ್ನು ನಮಗೆ ಕೊಟ್ಟರೂ ಸಾಧಿಸಲಾರೆವು.

ಹಾಗಾಗಿ ಐಕ್ಯವನ್ನು ಸಾಧಿಸಲು ಉಪಯೋಗವಾಗುವ ದೃಷ್ಟಾಂತ ಯಾವುದೂ ಇಲ್ಲವೇ ಇಲ್ಲ. ಜಡವಸ್ತುಗಳ ದೃಷ್ಟಾಂತದಿಂದ ಚೇತನರಿಗೆ ಐಕ್ಯವನ್ನು ಸಾಧಿಸಲು ಬರುವುದಿಲ್ಲವೆಂದಾದರೆ ಆ ದೃಷ್ಟಾಂತಗಳನ್ನು ವಿಮರ್ಶಿಸುವ ಗೋಜಾದರೂ ಮೂಲಕಾರರಿಗೆ ಏಕೆ ಎಂದರೆ - ಜಡವಸ್ತುಗಳ ದೃಷ್ಟಾಂತಗಳನ್ನು ವಿಮರ್ಶಿಸಲು ಕೂಡ ಮೂಲಕಾರರಿಗೆ ಯುಕ್ತಿಗಳ ಕೊರತೆಯಿಲ್ಲವಾದ್ದರಿಂದ ಆ ಜಡವಸ್ತುಗಳಲ್ಲೂ ಐಕ್ಯವು ಇಲ್ಲವೆಂಬುದನ್ನು ತೋರಿಸುವ ಕಾರ್ಯವನ್ನು ಅವರು ಮಾಡಿದ್ದಾರೆಂದು ಭಾವಿಸಬೇಕು.

**ಅಯೋಽಪಿ ಸ್ವರ್ಣತಾಯೋಗ್ಯಂ ಸ್ವರ್ಣಂ ಸ್ಯಾನ್ನ ತು ಮೃತ್ತಿಕಾ ।**
**ತತ್ಕಿಂ ಸ್ವರ್ಣಾಂತರಾಭಿನ್ನಂ ವಿಕ್ರಿಯಾಯಾಂ ಕ್ರಯೋಽಧಿಕಃ ॥ ೫೮೮ ॥**

**ಅರ್ಥ–** ಸ್ವರ್ಣತಾಯೋಗ್ಯಂ = ಬಂಗಾರವಾಗುವ ಯೋಗ್ಯತೆಯುಳ್ಳ, ಅಯಃ ಅಪಿ = ಕಬ್ಬಿಣವಾದರೂ, ಸ್ವರ್ಣಂ = ಬಂಗಾರವು, ಸ್ಯಾತ್ = ಆಗುತ್ತದೆ. ಮೃತ್ತಿಕಾ ತು = ಬಂಗಾರವಾಗುವ ಯೋಗ್ಯತೆಯಿಲ್ಲದ ಮಣ್ಣಾದರೂ, ನ ಸ್ಯಾತ್ = ಸ್ಪರ್ಶಮಣಿಯಸಂಪರ್ಕ ಪಡೆದರೂ ಬಂಗಾರವಾಗಲಾರದು. ತತ್ = ಒಂದು ಕಬ್ಬಿಣದಿಂದ ಜನಿಸಿದ ಬಂಗಾರವು, ಸ್ವರ್ಣಾಂತರಾಭಿನ್ನಂ ಕಿಂ? = ಬೇರೊಂದು ಲೋಹದಿಂದ ಜನಿಸಿದ ಬಂಗಾರದಿಂದ ಮತ್ತು ನೈಸರ್ಗಿಕ ಬಂಗಾರದಿಂದ ಅಭಿನ್ನವಾಗುತ್ತದೇನು? ವಿಕ್ರಿಯಾಯಾಂ = ಎರಡೂ ಬಂಗಾರದ ತುಣುಕುಗಳನ್ನು ಕರಗಿಸಿದರೆ, ಕ್ರಯಃ = ಬೆಲೆಯು, ಅಧಿಕಃ = ಹೆಚ್ಚಾಗುತ್ತದೆ.

**ಅನುವಾದ–** ಸುವರ್ಣತ್ವವನ್ನು ಪಡೆಯಲು ಯೋಗ್ಯವಾದ ಕಬ್ಬಿಣವೇ ಸುವರ್ಣವಾಗುತ್ತದೆಯೇ ಹೊರತು ಮೃತ್ತಿಕೆಯು ಸುವರ್ಣವಾಗುವುದಿಲ್ಲ. ಹಾಗೆ ಕಬ್ಬಿಣವು ಸುವರ್ಣವಾದಾಗ ಅದು ಇನ್ನೊಂದು ಸುವರ್ಣಕ್ಕಿಂತ ಅಭಿನ್ನವಾಗಿರುತ್ತದೆಯೇ? ಎರಡು ಸುವರ್ಣಗಳನ್ನು ಕರಗಿಸಿದರೆ ಬೆಲೆಯು ಹೆಚ್ಚಾಗುವುದಷ್ಟೇ?

**ಭಾವವಿಲಾಸಿನೀ–** ತರ್ಹಿ ಸ್ಪರ್ಶಯೋಗೇನ ಲೋಹಮಾತ್ರಸ್ಯ ಸುವರ್ಣತ್ವವತ್ ಜ್ಞಾನೇ ಸತಿ ಜೀವಮಾತ್ರಸ್ಯ ಮುಕ್ತತ್ವಂ ಸ್ಯಾದಿತ್ಯಪಿ ಶಂಕಾ ನ ಕಾರ್ಯೇತ್ಯಾಹ – **ಅಯೋಽಪೀತಿ** ॥ ಏವಂ

ಮುಕ್ತಿಯೋಗ್ಯಸ್ಯ ಜೀವಸ್ಯೈವ ಸಾಧನಾನುಷ್ಠಾನೇಽಪಿ ಮುಕ್ತಿಸ್ಸ್ಯಾನ್ನ ತು ಯಸ್ಯ ಕಸ್ಯಾಪಿ ಜೀವಸ್ಯ । ಸ್ಪರ್ಶಯೋಗೇಽಪಿ ಮೃತ್ತಿಕಾಯಾಃ ಸುವರ್ಣತ್ವಾಪ್ರಾಪ್ತೇರಿತಿ ಭಾವಃ ॥ ತತ್ ಸ್ಪರ್ಶ-ಯೋಗೇಸತಿ ಲೋಹಾಜ್ಜನಿತಸುವರ್ಣಂ ಸ್ವರ್ಣಾಂತರಾಭಿನ್ನಂ ಸ್ವರ್ಣಾಂತರೇಣ ಪ್ರಾಕ್ ಲೋಹಾಂತರಜನಿತಸುವರ್ಣಾಂತರೇಣ ಸಹಜ ಜಾಂಬೂನದಾದಿಸುವರ್ಣೇನ ಚಾಭಿನ್ನಂ ಕಿಮ್ । ನೈವ । ತಥಾ ಜ್ಞಾನೇನ ಮುಕ್ತೋಽಪಿ ಜ್ಞಾನಾನ್ಮುಕ್ತಜೀವಾಂತರೇಣ ಸ್ವಭಾವಮುಕ್ತ-ಪರಮಾತ್ಮನಾ ಚಾಭಿನ್ನೋ ನ ಭವತಿ । ಕಿಂತು ಸ್ವಯಮಪಿ ಮುಕ್ತಾಂತರವನ್ಮುಕ್ತೋ ಭವತೀತಿ ಭಾವಃ । ಏತದೇವಾಭಿಪ್ರೇತ್ಯ ಪ್ರಾಕ್‌ಟೀಕಾಯಾಂ ಶಂಕಾಸಮಾಧಾನಂ ಚೇತಿ ದ್ರಷ್ಟವ್ಯಮ್ । ನನು ಪ್ರಾಕ್‌ಸಿದ್ಧಸುವರ್ಣಸ್ಯ ಪಶ್ಚಾತ್ ಸಿದ್ಧಸುವರ್ಣಸ್ಯ ಚಾಗ್ನಿನೈಕರಸೀಕರಣೇ ಐಕ್ಯಂ ಸ್ಯಾದಿತ್ಯತ **ಆಹ–ವಿಕ್ರಿಯಾಯಾಮಿತಿ** ॥ ವಿಕ್ರಿಯಾಯಾಂ ದ್ರವೀಭಾವಾಖ್ಯವಿಕಾರೇ । ಕ್ರಯಃ ಮೌಲ್ಯಮ್ । ಪ್ರಾಕ್‌ಪಂಚವರಹಾರ್ಹಖಂಡಯೋರೇಕರಸತಾಯಾಂ ದಶವರಹಾರ್ಹತಾ ಜಾಯತೇ । ಉಪಲಕ್ಷಣಂ ಚೈತತ್ । ಭಾರೋಽಪ್ಯಧಿಕೋ ಜಾಯತೇ । ಅತಸ್ತತ್ರಾತಿಸಾದೃಶ್ಯಾದವಿವೇಕಿಭಿರ-ಜ್ಞಾತೋಽಪಿ ಭೇದೋ ವಿವೇಕಿನಾಂ ಮತೇ ವರ್ತತ ಏವೇತಿ ಭಾವಃ ॥ ೫೮೮ ॥

**ವಿವರಣೆ–** ಸ್ಪರ್ಶಮಣಿಯ ಸಂಬಂಧದಿಂದ ಯಾವುದೇ ಲೋಹವು ಬಂಗಾರವಾಗುವಂತೆ ಯಾವ ಜೀವನಾದರೂ ಜ್ಞಾನಪಡೆದುಕೊಂಡು ಮುಕ್ತನಾಗುವನೇ ಎಂಬ ಪ್ರಶ್ನೆಗೆ ಉತ್ತರ ಹೀಗಿದೆ - ಬಂಗಾರವಾಗುವ ಯೋಗ್ಯತೆ ಕಬ್ಬಿಣಕ್ಕೆ ಇರುವುದರಿಂದ ಅದು ಸ್ಪರ್ಶಮಣಿಯ ಸಂಬಂಧ ಪಡೆದರೆ ಬಂಗಾರವಾಗುತ್ತದೆ. ಅಂತೆಯೇ ಕೆಲ ಲೋಹಗಳೂ ಬಂಗಾರವಾಗುತ್ತವೆ. ಆದರೆ ಬಂಗಾರವಾಗುವ ಯೋಗ್ಯತೆಯೇ ಇಲ್ಲದ ಮಣ್ಣು ಸ್ಪರ್ಶಮಣಿಯ ಸಂಬಂಧ ಪಡೆದರೂ ಬಂಗಾರವಾಗಲಾರದು. ಅಂತೆಯೇ ಯೋಗ್ಯ ಜೀವರು ಮಾತ್ರ ಸಾಧನಮಾಡಿ ಮುಕ್ತರಾಗುತ್ತಾರೆ, ಅಯೋಗ್ಯಜೀವರು ಸಾಧನವನ್ನೂ ಮಾಡಲಾರರು ಮತ್ತು ಮುಕ್ತಿಯನ್ನೂ ಪಡೆಯಲಾರರು.

ಕಬ್ಬಿಣದಿಂದ ಜನಿಸಿದ ಬಂಗಾರವು ತನ್ನಂತೆ ಬೇರೆಯ ಲೋಹದಿಂದ (ಅಥವಾ ಬೇರೊಂದು ಕಬ್ಬಿಣದಿಂದ) ಜನಿಸಿದ ಬಂಗಾರದಿಂದ ಮತ್ತು ನೈಸರ್ಗಿಕ ಬಂಗಾರದಿಂದ ಅಭಿನ್ನವಾಗುತ್ತದೇನು? ಹಾಗೆಯೇ ಸಂಸಾರದಿಂದ ಮುಕ್ತನಾದ ಒಬ್ಬ ಜೀವನು ಸಂಸಾರದಿಂದ ಮುಕ್ತನಾದ ಮತ್ತೊರ್ವ ಜೀವನಿಂದ ಮತ್ತು ನಿತ್ಯಮುಕ್ತನಾದ ಪರಮಾತ್ಮನಿಂದ ಅಭಿನ್ನನಾಗಲಾರನು.

ನೈಸರ್ಗಿಕವಾದ ಬಂಗಾರದೊಂದಿಗೆ (ಕಬ್ಬಿಣದ ತುಂಡೊಂದರಿಂದ ಮೊದಲೇ ಜನಿಸಿದ ಬಂಗಾರದೊಂದಿಗೆ ಕೂಡ) ಅನಂತರ ಕಬ್ಬಿಣದಿಂದ ಜನಿಸಿದ ಬಂಗಾರವನ್ನು ಬೆಂಕಿಯಲ್ಲಿ ಹಾಕಿದರೆ ಅವೆರಡೂ ಕರಗಿ ಒಂದೇ ರಸವಾಗಿ (ಅಭಿನ್ನವಾಗಿ) ಪರಿಣಮಿಸುತ್ತವಲ್ಲವೇ ಅಂದರೆ - ಎರಡೂ ಬಂಗಾರದ ತುಣುಕುಗಳನ್ನು ಬೆಂಕಿಯಲ್ಲಿ ಹಾಕಿ ಕರಗಿಸಿದರೆ ಒಂದೇ ರಸವಾಗಿ ಪರಿಣಮಿಸಿದರೂ ಅಭಿನ್ನವಾಗಲಾರವು. ಏಕೆಂದರೆ

ತಲಾ ಐದು ವರಹ ಬೆಲೆಬಾಳುತ್ತಿದ್ದ ಆ ತುಂಡುಗಳನ್ನು ಬೆಂಕಿಯಲ್ಲಿ ಕರಗಿಸಿದರೆ ಆ ರಸವು ಸ್ವಲ್ಪಸಮಯದ ಬಳಿಕ ಘನೀಭವಿಸಿ ಮತ್ತೊಂದು ಬಂಗಾರ ತುಣುಕಾದಾಗ ಒಟ್ಟು ಹತ್ತು ವರಹ ಬೆಲೆಬಾಳುವಂತಾಗುತ್ತದೆ. ಅಲ್ಲದ ಮೊದಲು ಆ ತುಣುಕುಗಳಿಗೆ ಪ್ರತ್ಯೇಕವಾಗಿ ಯಾವ ಭಾರವು ಇತ್ತೊ ಆ ಭಾರದ ಎರಡರಷ್ಟು ಭಾರವು ಕರಗಿ ಸೇರಿದ ತುಣುಕುಗಳಲ್ಲಿ ಕಂಡುಬರುತ್ತದೆ.

ಆದ್ದರಿಂದ ಕರಗಿದ ಆ ಎರಡು ತುಣುಕುಗಳಲ್ಲಿಯೂ ಭೇದವೇ ಇದೆ. ಸ್ಥೂಲದೃಷ್ಟಿಯು ಅದನ್ನು ತಿಳಿಯಲಾರದಾದರೂ ಸೂಕ್ಷ್ಮಪರಿಶೀಲನೆಗೆ ಅದು ತಿಳಿದುಬರುತ್ತದೆ-

**ಕ್ಷೀರಾಂತಃಸ್ಥಿತನೀರಸ್ಯಾಪ್ಯಂತರ್ಭೇದೋಽಗ್ನಿನೇಕ್ಷ್ಯತೇ ।**
**ಅದನಾನದನಾಭ್ಯಾಂ ಹಿ ಯಥಾ ಜೀವೇಶಯೋಃ ಹೃದಿ ॥ ೫೮ ॥**

**ಅರ್ಥ—** ಕ್ಷೀರಾಂತಃ = ಹಾಲಿನಲ್ಲಿ, ಸ್ಥಿತಃ = ಸೇರಿಕೊಂಡಿರುವ, ನೀರಸ್ಯ = ನೀರಿನ, ಅಪಿ = ಕೂಡ (ಹಾಲಿನಲ್ಲಿ ಸೇರಿದ ನೀರಿಗೆ ಸಂಬಂಧಿಸಿದಂತೆ ಕೂಡ) ಅಂತರ್ಭೇದಃ = ಗುಪ್ತವಾಗಿರುವ ಭೇದವು, ಅಗ್ನಿನಾ = ಬೆಂಕಿಯಿಂದ, ಈಕ್ಷ್ಯತೇ = ತಿಳಿಯಲ್ಪಡುತ್ತದೆ. ಯಥಾ = ಯಾವರೀತಿಯಾಗಿ, ಹೃದಿ = ಹೃದಯಪ್ರದೇಶದಲ್ಲಿ ಇರುವ, ಜೀವೇಶಯೋಃ = ಜೀವಾತ್ಮಪರಮಾತ್ಮರಲ್ಲಿರುವ ಭೇದವು, ಅದನ ಅನದನಾಭ್ಯಾಂ = ಜೀವನ ತನ್ನ ಕರ್ಮಫಲಗಳನ್ನು ಅನುಭವಿಸುತ್ತಿರುವಿಕೆ ಮತ್ತು ಪರಮಾತ್ಮನ ಕರ್ಮಫಲಗಳನ್ನು ಅನುಭವಿಸುತ್ತಿಲ್ಲದಿರುವಿಕೆ ಎಂಬ ವಿರುದ್ಧಧರ್ಮಗಳಿಂದಾಗಿ ತಿಳಿಯಲ್ಪಡುತ್ತದೆಯೋ ಹಾಗೆ.

**ಅನುವಾದ—** ಕ್ಷೀರ ಮತ್ತು ಜಲವು ಬೆರೆತಾಗ ಅವುಗಳಲ್ಲಿರುವ ಭೇದವು ಅಗ್ನಿಯಿಂದ ನೋಡಲ್ಪಡುತ್ತದೆ. ಅಶನ ಮತ್ತು ಅನಶನಗಳಿಂದ ಹೃದಯದಲ್ಲಿರುವ ಜೀವೇಶ್ವರರ ಭೇದವು ಹೇಗೆ ತಿಳಿಯಲ್ಪಡುತ್ತದೆಯೋ ಅದರಂತೆ.

**ಭಾವವಿಲಾಸಿನೀ—** ಕ್ಷೀರಾಂತಃಸ್ಥಿತನೀರಸ್ಯಾಪ್ಯೈಕ್ಯಂ ನಾಸ್ತೀತ್ಯಾಹ – **ಕ್ಷೀರೇತಿ ॥** ಅಗ್ನಿನಾ ಅಗ್ನಿಕೃತಪಾಕೇನೇತ್ಯರ್ಥಃ । ಕ್ಷೀರಮಿಲಿತನೀರಸ್ಯಾಪ್ಯಗ್ನಿನಾ ಸಮ್ಯಕ್ಪಾಕೇ ಸತಿ ನಾಶೋ ಜಾಯತೇ । ಕ್ಷೀರಂ ತು ಘನೀಭೂತಂ ತಿಷ್ಠತ್ಯೇವ । ಅತಸ್ತಯೋರ್ನೈಕ್ಯಮ್ । ಏವಮೇವ ಪರಮಾತ್ಮನಿ ನಿಲೀನತಯಾಂತಃ ಪ್ರವಿಷ್ಟಾನಾಂ ಸಾಯುಜ್ಯಮುಕ್ತಾನಾಂ ಮಂದದೃಷ್ಟಿಭಿಃ ಪೃಥಗದರ್ಶನೇಽಪಿ ನೈಕ್ಯಮಿತಿ ಭಾವಃ । ಶ್ರುತ್ಯಾ ಸ್ಮೃತ್ಯಾ ಚಾತಿ ನಿಶ್ಚಿತತ್ವಾದ್ದಾರ್ಷ್ಟಾಂತಿಕಮೇವ ತತ್ರ ದೃಷ್ಟಾಂತೀ **ಕರೋತಿ— ಅದನಾನದನಾಭ್ಯಾಮಿತಿ ॥** ಹೃದಿ ಹೃದಯಪ್ರದೇಶೇ । ಜೀವಾಂತರಾದೃಶ್ಯತಯಾ ನಿಯಂತುಹರೇರಜ್ಞೈಃ ಸ್ಪಷ್ಟಮದೃಷ್ಟೋಽಪಿ ಭೇದಃ ಕರ್ಮಫಲಸ್ಯಾದನಾನದಾನಾಭ್ಯಾಂ ಜೀವೇ-ಶ್ವರಗತ ವಿರುದ್ಧಧರ್ಮಾಭ್ಯಾಂ ಸರ್ವೈರಪಿ ಸಮ್ಯಜ್ನಿಶ್ಚೀಯತೇ । ತಥೇತಿ ಭಾವಃ ॥ ೫೮ ॥

**ವಿವರಣೆ—** ಜೀವೇಶ್ವರಾಭೇದವನ್ನು ಸಾಧಿಸುವ ನಿಟ್ಟಿನಲ್ಲಿ ಮಾಯಾವಾದಿಗಳು ಮೊದಲು ಭಿನ್ನಗಳೇ ಆಗಿರುವ ಹಾಲು ಮತ್ತು ನೀರನ್ನು ಮಿಶ್ರಣ ಮಾಡಿದಾಗ

ಅಭಿನ್ನಗಳಾಗಿಬಿಡುತ್ತವೆ ಎಂದು ದೃಷ್ಟಾಂತಹೇಳುತ್ತಾರೆ. ಆದರೆ ಈ ದೃಷ್ಟಾಂತವೂ ಉಚಿತವಲ್ಲ. ಹಾಲಿನೊಂದಿಗೆ ಸೇರಿರುವ ನೀರಿನ ಭೇದವನ್ನು ನಾವು ಮೊದಲು ಅರಿಯಲುಾಗದಿದ್ದರೂ, ಆ ಹಾಲನ್ನು ಬೆಂಕಿಯಿಂದ ಕಾಯಿಸಿದಾಗ ನೀರು ಆವಿಯಾಗಿ ಹೋಗುತ್ತದೆ ಮತ್ತು ಗಟ್ಟಿಯಾದ ಹಾಲು ಅಲ್ಲೇ ಉಳಿಯುವುದೆಂಬುದನ್ನು ಬಲ್ಲೆವು. ಹೀಗೆ ಮೊದಲು ತಿಳಿಯಲುಾಗದ ಆ ಭೇದವನ್ನು ಅಗ್ನಿಯ ಸಹಾಯದಿಂದ ತಿಳಿಯುತ್ತೇವೆ.

ಅದರಂತೆ ಪರಮಾತ್ಮನಲ್ಲಿ ನಿಲೀನರಾದ ಸಾಯುಜ್ಯಮುಕ್ತರಿಗೂ ಪರಮಾತ್ಮನಿಗೂ ಇರುವ ಭೇದವನ್ನು ಅಜ್ಞಾನಿಗಳು ತಿಳಿಯಲಾರರಾದರೂ ಜ್ಞಾನಿಗಳು ತಿಳಿಯಬಲ್ಲರು.

ಹಾಲು ನೀರುಗಳ ಅಭೇದವನ್ನು ದೃಷ್ಟಾಂತವಾಗಿಟ್ಟು ನೀವು ಜೀವೇಶ್ವರಾಭೇದವನ್ನು ಸಾಧಿಸಲು ಪ್ರಯತ್ನಿಸುತ್ತಿದ್ದೀರಿ; ಮತ್ತು ಹಾಲು ನೀರುಗಳ ಸಂಬಂಧವನ್ನು ದೃಷ್ಟಾಂತವನ್ನಾಗಿಯೂ ಜೀವೇಶ್ವರಸಂಬಂಧವನ್ನು ದಾರ್ಷ್ಟಾಂತಿಕವನ್ನಾಗಿಯೂ ಬಳಸುವ ಪ್ರಯತ್ನಮಾಡಿದ್ದೀರಿ. ಆದರೆ ನಿಮಗೆ ದೃಷ್ಟಾಂತವಾಗಬೇಕಾಗಿರುವ ಹಾಲು ನೀರುಗಳ ನಡುವೆಯೇ ಅಭೇದ ಇಲ್ಲವೆಂದು ಗೊತ್ತಿದ್ದಂತೆ ಕಾಣುತ್ತಿಲ್ಲ. ಅದನ್ನು ತಿಳಿಯಪಡಿಸುವುದಕ್ಕಾಗಿಯೇ ದಾರ್ಷ್ಟಾಂತಿಕವಾಗಬೇಕಿರುವ ಜೀವೇಶ್ವರಸಂಬಂಧವನ್ನೇ (ಭೇದ)ದೃಷ್ಟಾಂತವನ್ನಾಗಿ ಮಾಡಿಕೊಂಡು ನಾವು ಪ್ರವೃತ್ತರಾಗಿದ್ದೇವೆ.

ಜೀವನು ತನ್ನ ಕರ್ಮಫಲಗಳನ್ನು ಅನುಭವಿಸುತ್ತಿದ್ದಾನೆ ಮತ್ತು ಪರಮಾತ್ಮನು ಕರ್ಮಫಲಗಳನ್ನು ಅನುಭವಿಸುತ್ತಿಲ್ಲವೆಂಬ ಸಂಗತಿಯು ಶ್ರುತಿ,ಸ್ಮೃತಿ,ಪುರಾಣಗಳಿಂದ ಸಿದ್ಧವಾಗಿದೆ. ಹಾಗಾಗಿ ನಿಮ್ಮ ದಾರ್ಷ್ಟಾಂತಿಕವಾದ ಜೀವೇಶ್ವರಸಂಬಂಭವನ್ನೇ ನಾವು ದೃಷ್ಟಾಂತವನ್ನಾಗಿ ಬಳಕೆ ಮಾಡಿಕೊಂಡು ಹಾಲುನೀರುಗಳ ನಡುವಣ ಭೇದವನ್ನು ಸಿದ್ಧಮಾಡುತ್ತಿದ್ದೇವೆ.

ಅನ್ಯರಿಗೆ ಗೋಚರವಾಗದಂತೆ ಪ್ರತಿಯೋರ್ವರ ಹೃದಯದಲ್ಲಿ ನಿಯಾಮಕನಾಗಿ ನೆಲೆನಿಂತ ಪರಮಪುರುಷನಿಗೂ ಜೀವಾತ್ಮನಿಗೂ ಇರುವ ಭೇದವನ್ನು ಅಜ್ಞಾನಾವಸ್ಥೆಯಲ್ಲಿ ನಾವು ಕಾಣಲಾರೆವಾದರೂ ಕರ್ಮಫಲಭೋಗ ಮತ್ತು ಭೋಗಾಭಾವಗಳೆಂಬ ವಿರುದ್ಧಧರ್ಮಗಳ ವಿಮರ್ಶೆಯನ್ನು ಮಾಡಿದರೆ ಜೀವಗಳ ಭೇದವನ್ನು ನಿಶ್ಚಯತಂದುಕೊಳ್ಳಬಲ್ಲೆವು. ಅದರಂತೆ ಹಾಲು ನೀರುಗಳ ನಡುವಿನ ಭೇದವನ್ನು ಈ ಅಗ್ನಿಯ ಸಹಾಯದಿಂದ ತಿಳಿಯಬಲ್ಲೆವು.

ಏವಂ ಭಿನ್ನಸ್ವಭಾವಾನಾಂ ಜೀವಾನಾಂ ಬ್ರಹ್ಮಣೇಶ್ವರೇ ।
ಅಪರಿಚ್ಛನ್ನಚಿದ್ರೂಪೇ ಪರಿಚ್ಛಿನ್ನಾಣುರೂಪಿಣಾಮ್ ॥ ೫೮೦ ॥

**ಅನಾದಿತೋऽಪ್ಯನಂತಾನಾಂ ಅನಂತಕ್ಲೇಶಭೋಗಿನಾಂ ।**
**ಐಕ್ಯಂ ವಾಕ್ಯಶತೇನಾಪಿ ವಕ್ತುಂ ಶಕ್ಯಂ ನ ಕುತ್ರಚಿತ್ ॥ ೫೧ ॥**

**ಅರ್ಥ–** ಏವಂ = ಈ ಹಿಂದೆ ತಿಳಿಸಿದಂತೆ, ಭಿನ್ನಸ್ವಭಾವಾನಾಂ = ಭಗವಂತನಿಗಿಂತ ಭಿನ್ನಸ್ವಭಾವಗಳುಳ್ಳ, ಪರಿಚ್ಛಿನ್ನಾಣುರೂಪಿಣಾಂ = ದೈಶಿಕ, ಮಿತಿಯುಳ್ಳ ಪರಮಾಣುರೂಪದ ರೂಪಗಳುಳ್ಳ, ಅನಾದಿತಃ ಅಪಿ = ಅನಾದಿಕಾಲದಿಂದಲೂ, ಅನಂತಾನಾಂ = ಅನಂತ ಸಂಖ್ಯೆಯಲ್ಲಿರುವ, ಅನಂತಕ್ಲೇಶಭೋಗಿನಾಂ = ಅಪಾರದುಃಖಗಳನ್ನು ಅನುಭವಿಸುತ್ತಿರುವ, ಜೀವಾನಾಂ = ಜೀವರಿಗೆ, ಅಪರಿಚ್ಛಿನ್ನಚಿದ್ರೂಪೇ = ದೈಶಿಕಮಿತಿಯಿಲ್ಲದ ಜ್ಞಾನರೂಪನಾದ, ಈಶ್ವರೇ = ಸರ್ವಶಕ್ತನಾದ, ಬ್ರಹ್ಮಣಿ = ಪರಬ್ರಹ್ಮನಲ್ಲಿ, ಕುತ್ರಚಿತ್ = ಸಂಸಾರಾವಸ್ಥಾ ಮುಕ್ತಾವಸ್ಥಾ ಮುಂತಾದ ಯಾವ ಅವಸ್ಥೆಗಳಲ್ಲಿಯಾದರೂ, ಅಥವಾ ಶ್ರುತಿ,ಸ್ಮೃತಿ,ಪುರಾಣ ಮುಂತಾದ ಯಾವ ಶಾಸ್ತ್ರಗಳಲ್ಲಿಯೂ, ಐಕ್ಯಂ = ಅಭೇದವನ್ನು ವಾಕ್ಯಶತೇನ ಅಪಿ = ನೂರಾರು ವಾಕ್ಯಗಳಿಂದ ಕೂಡ, ವಕ್ತುಂ = ಹೇಳಲು, ನ ಶಕ್ಯಂ = ಸಾಧ್ಯವಿಲ್ಲ.

**ಅನುವಾದ– ಈ ರೀತಿಯಲ್ಲಿ ಭಿನ್ನ ಸ್ವಭಾವವುಳ್ಳ ಅನಾದಿಕಾಲದಿಂದಲೂ ಅನಂತರಾಗಿರುವ, ಅನಂತ ಕ್ಲೇಶಗಳನ್ನು ಅನುಭವಿಸುವ ಅಣುಪರಿಮಾಣವುಳ್ಳ ಜೀವರಿಗೆ ವ್ಯಾಪ್ತನಾದ ಚಿದ್ರೂಪನಾದ, ಅನಂತಗುಣಪರಿಪೂರ್ಣನಾದ ಬ್ರಹ್ಮನಿಂದ ಐಕ್ಯವನ್ನು ನೂರು ವಾಕ್ಯಗಳೂ ಕೂಡ ಎಂದೂ ಹೇಳಲಾರವು.**

**ಭಾವವಿಲಾಸಿನೀ–** ಯಥೋಕ್ತಸಮಸ್ತಲೌಕಿಕ ದೃಷ್ಟಾಂತೇಷ್ವೈಕ್ಯ ಭ್ರಮವಿಷಯಾಣಾಮೇಕತಯಾ ವಾಕ್ಯಶತೈರ್ನಿರ್ದಿಷ್ಟಾನಾಮಪಿ ವಿಚಾರ್ಯಮಾಣೇ ವಿರುದ್ಧಧರ್ಮದರ್ಶನಾತ್ ಪರಸ್ಪರಂ ಭೇದ ಏವಾಸ್ತಿ ತಥಾ ಜೀವಾನಾಂ ಪರಮಾತ್ಮನಶ್ಚೇತ್ಯಾಹ – ಏವಮಿತಿ ॥ ಭಿನ್ನಸ್ವಭಾವತ್ವಮೇವ ದರ್ಶಯಿತುಮುಕ್ತಮಪರಿಚ್ಛಿನ್ನಚಿದ್ರೂಪ ಇತ್ಯಾದಿ ॥ ೫೦-೫೧ ॥

**ವಿವರಣೆ–** ಈ ಹಿಂದೆ ಲೌಕಿಕದೃಷ್ಟಾಂತಗಳ ಮೂಲಕ ತಿಳಿದುಬರುವಂತೆ ಜೀವರು ಪಮಾತ್ಮನಿಗಿಂತ ಭಿನ್ನಸ್ವಭಾವವನ್ನು ಪಡೆದಿದ್ದಾರೆ. ಜೀವರು ದೈಶಿಕ ಮಿತಿಯುಳ್ಳ ಪರಮಾಣುಸ್ವರೂಪವುಳ್ಳವರಾಗಿದ್ದರೆ, ಪರಮಾತ್ಮನ ಸ್ವರೂಪವು ದೈಶಿಕ ಮಿತಿಗಳನ್ನು ಮೀರಿದೆ ಮತ್ತು ಅಣುವಿಗಿಂತ ಅಣುವೂ, ಮಹತ್ತಿಗಿಂತ ಮಹತ್ ಕೂಡ ಆಗಿದೆ. ಅನಾದಿಕಾಲದಿಂದಲೂ ಜೀವರು ಅನಂತಸಂಖ್ಯೆಯಲ್ಲಿ ಇದ್ದರೆ ಪರಮಾತ್ಮನು ಏಕ (ಅದ್ವಿತೀಯನಾಗಿದ್ದಾನೆ.) ಜೀವರು ಅನಾದಿಕಾಲದಿಂದಲೂ ಅಪಾರದುಃಖಗಳನ್ನು ಅನುಭವಿಸುತ್ತಿದ್ದಾರೆ. ಪರಮಾತ್ಮನು ಎಂದೆಂದಿಗೂ ಸುಖಸ್ವರೂಪಿಯೇ ಆಗಿದ್ದಾನೆ. ಜೀವರು ಅಲ್ಪಶಕ್ತರೂ, ಅಲ್ಪೈಶ್ವರ್ಯವುಳ್ಳವರೂ ಆಗಿದ್ದಾರೆ ಪರಮಾತ್ಮನು ಸರ್ವಶಕ್ತನೂ, ಪೂರ್ಣೈಶ್ವರ್ಯವುಳ್ಳವನೂ ಆಗಿದ್ದಾನೆ. ಹಾಗಾಗಿ ಸಂಸಾರಾವಸ್ಥೆಯಲ್ಲಾಗಲೀ, ಮುಕ್ತಾವಸ್ಥೆಯಲ್ಲಾಗಲೀ, ಶ್ರುತಿ, ಸ್ಮೃತಿ, ಪುರಾಣ ಮುಂತಾದ ಯಾವ ಶಾಸ್ತ್ರಗಳಲ್ಲಿಯೂ

ನೂರಾರು ವಾಕ್ಯಗಳಿಂದಲೂ ಈ ಜೀವಬ್ರಹ್ಮರಿಗೆ ಅಬೇದವನ್ನು ಹೇಳಲು ಸಾಧ್ಯವಾಗುವುದಿಲ್ಲ. ಜೀವರು ಪ್ರಾಕೃತಶರೀರಸಂಬಂಧವನ್ನು ಪಡೆದಿದ್ದರೆ ಪರಮಾತ್ಮನು ಜ್ಞಾನಸುಖಸ್ವರೂಪನಾಗಿದ್ದಾನೆ.

**ಮುಖ್ಯಾರ್ಥಬಾಧೇ ವಾಕ್ಯಾನಾಮನ್ಯೋಽರ್ಥಃ ಕಥ್ಯತೇ ಬುಧೈಃ ।**
**ಯಜಮಾನಃ ಪ್ರಸ್ತರಃ ಕಿಮಗ್ನಿರ್ಮಾಣವಕೋಽಪಿ ವಾ ॥ ೫೨ ॥**

**ಕಿಂ ಯೋಷಿದಗ್ನಿರಾದಿತ್ಯೋ ಯೂಪೋಽಂಧೋ ಮಣಿಮೀಕ್ಷತೇ ।**
**ಮೃದಬ್ರವೀತ್ಕಿಮು ಗ್ರಾವಾ ಪ್ಲವತೇ ಕಿಮಪಾಂ ಚ ವಾಕ್ ॥ ೫೩ ॥**

**ಏತಾಸಾಂ ಬಾಧಿತಾರ್ಥಾನಾಂ ಯಥಾನ್ಯೋಽರ್ಥೋ ಮತಸ್ತವ ।**
**ತಥಾಪಿ ಬಾಧಿತಾರ್ಥೈಕ್ಯವಾಕ್ಯೇಪ್ಯನ್ಯೋಽರ್ಥ ಈರ್ಯತಾಂ ॥ ೫೪ ॥**

**ಅರ್ಥ–** ಯಜಮಾನಃ = ಯಜ್ಞದ ಯಜಮಾನನು, ಪ್ರಸ್ತರಃ = ಧರ್ಭೆಯ ಮುಷ್ಟಿಯು, ಭವತಿ ಕಿಂ? = ಆಗುತ್ತಾನೇನು? ಮಾಣವಕಃ = ವಟುವು, ಅಗ್ನಿಃ = ಬೆಂಕಿಯು, ಭವತಿ ವಾ? = ಆಗುತ್ತಾನೇನು? ಯೋಷಿತ್ = ಸ್ತ್ರೀಯು, ಅಗ್ನಿಃ = ಬೆಂಕಿಯು, ಭವತಿ ಕಿಂ? = ಆಗುತ್ತಾಳೇನು? ಯೂಪಃ = ಪಶುಬಂಧನಸ್ತಂಭವು, ಆದಿತ್ಯಃ = ಸೂರ್ಯನು, ಭವತಿ ಕಿಂ = ಆಗುತ್ತದೇನು? ಅಂಧಃ = ಕುರುಡನು, ಮಣಿಂ = ಮಣಿಯನ್ನು ಈಕ್ಷತೇ ಕಿಂ = ನೋಡುತ್ತಾನೇನು? ಮೃತ್ = ಮಣ್ಣು, ಅಬ್ರವೀತ್ ಕಿಂ? = ಮಾತನಾಡಿತೇನು? ಗ್ರಾವಾ = ಕಲ್ಲು, ಪ್ಲವತೇ ಕಿಂ? = ತೇಲುತ್ತದೇನು? ಚ = ಮತ್ತು, ಅಪಾಂ = ನೀರಿಗೆ, ವಾಕ್ = ಮಾತು, ಅಸ್ತಿ ಕಿಂ? = ಇದೆಯೇನು? ಬುಧೈಃ =ಪಂಡಿತರಿಂದ, ಏತಾಸಾಂ ವಾಕ್ಯಾನಾಂ = ಈ ವಾಕ್ಯಗಳಿಗೆ, ಮುಖ್ಯಾರ್ಥಬಾಧೇ = ಮುಖ್ಯಾರ್ಥಕ್ಕೆ (ಶಕ್ಯಾರ್ಥಕ್ಕೆ) ಪ್ರತ್ಯಕ್ಷವಿರೋಧವು ಬಂದಾಗ, ಅನ್ಯಃ = ಪ್ರತ್ಯಕ್ಷಕ್ಕೆ ಹೊಂದುವ, ಅರ್ಥಃ = ಅರ್ಥವು, ಕಥ್ಯತೇ = ಹೇಳಲ್ಪಡುತ್ತದೆ. ಯಥಾ = ಯಾವರೀತಿಯಲ್ಲಿ ಬಾಧಿತಾರ್ಥಾನಾಂ = ಪ್ರತ್ಯಕ್ಷಬಾಧಿತವಾದ ಮುಖ್ಯಾರ್ಥವುಳ್ಳ, ಏತಾಸಾಂ = ಈ ವೇದವಾಕ್ಯಗಳಿಗೆ, ಅನ್ಯಃ = ಬೇರೆಯ, ಅರ್ಥಃ = ಅರ್ಥವು, ತವ = ನಿನಗೆ (ನಿನಗೂ ಕೂಡ) ಮತಃ = ಸಂಮತವಾಗಿದೆಯೋ, ತಥಾ ಅಪಿ = ಹಾಗೆಯೇ, ಬಾಧಿತಾರ್ಥೈಕ್ಯವಾಕ್ಯೇ = ಪ್ರತ್ಯಕ್ಷಬಾಧಿತಾದ ಅರ್ಥವುಳ್ಳ ಐಕ್ಯವನ್ನು ಹೇಳುವ ವಾಕ್ಯದಲ್ಲಿ, ಅಪಿ = ಕೂಡ, ಅನ್ಯಃ = ಮತ್ತೊಂದು, ಅರ್ಥಃ = ಅರ್ಥವು, ಈರ್ಯತಾಂ = ಹೇಳಲ್ಪಡಲಿ.

**ಅನುವಾದ–** ಮುಖ್ಯಾರ್ಥಕ್ಕೆ ಬಾಧವುಂಟಾದಾಗ ಮಾತ್ರ ವಿವೇಕಿಗಳು ವಾಕ್ಯಗಳಿಗೆ ಬೇರೆ ಅರ್ಥವನ್ನು ಹೇಳುತ್ತಾರೆ. ಪ್ರಸ್ತರವೇ ಯಜಮಾನವಾಗುತ್ತದೆಯೇ? ಅಥವಾ ಅಗ್ನಿಯೇ ಮಾಣವಕನಾಗುತ್ತಾನೆಯೇ? ವನಿತೆಯೇ ಅಗ್ನಿಯಾಗುತ್ತಾಳೆಯೇ?

ಯೂಪವೇ ಸೂರ್ಯನಾಗುತ್ತದೆಯೇ? ಅಂಧನು ಮಣಿಯನ್ನು ನೋಡು ತ್ತಾನೆಯೇ? ಮಣ್ಣು ಮಾತನಾಡುತ್ತದೆಯೇ? ಕಲ್ಲುಗಳು ತೇಲುತ್ತವೆಯೇ? ಜಲಕ್ಕೆ ಮಾತನಾಡುವ ಶಕ್ತಿಯಿದೆಯೇ? ಇಂತಹ ಬಾಧಿತಾರ್ಥವಾದ ವಾಕ್ಯಗಳಿಗೆ ಹೇಗೆ ನೀನು ಬೇರೆ ಅರ್ಥವನ್ನು ಹೇಳುತ್ತೀಯೋ, ಅದರಂತೆ ಬಾಧಿತಾರ್ಥವಾದ ಐಕ್ಯವಾಕ್ಯಕ್ಕೂ ಬೇರೆ ಅರ್ಥವನ್ನು ಹೇಳು.

**ಭಾವವಿಲಾಸಿನೀ**– ನನು ಲೋಕೇ ಯಥಾಕಥಂಚಿದಸ್ತು ವೇದೋಕ್ತಸ್ತು ಬಾಧಿತೋಽಪ್ಯರ್ಥಃ ತಥೈವ ಸಂಗ್ರಾಹ್ಯ ಇತಿ ಮಂದಾಶಂಕಾಮುಭಯವಾದಿಸಂಪ್ರತಿಪನ್ನವೈದಿಕಾನೇಕಲಾಕ್ಷಣಿಕ ಪ್ರಯೋಗಂ ಪ್ರದರ್ಶ್ಯ ದೂಷಯತಿ – **ಮುಖ್ಯಾರ್ಥಬಾಧ ಇತಿ** ॥ ವಾಕ್ಯಾನಾಂ ವೈದಿಕ-ವಾಕ್ಯಾನಾಮ್ । ಬುಧೈಃ ವೇದಾರ್ಥನಿಪುಣೈಃ । ಯಜಮಾನಃ ಪ್ರಸ್ತರಃ । ಅಗ್ನಿರ್ಮಾಣವಕಃ । ಯೋಷಿತಮಗ್ನಿಂ ಧ್ಯಾಯೀತ । ಆದಿತ್ಯೋ ವೈ ಯೂಪಃ । ಅಂಧೋ ಮಣಿಮವಿಂದತ್ । ಮೃದಬ್ರವೀತ್ । ಗ್ರಾವಾಣಃ ಪ್ಲವಂತೇ । ಆಪೋಽಬ್ರುವನ್ನಿತಿ ವಾಕ್ಯಾನಿ ಮನಸಿ ನಿಧಾಯ ಯಜಮಾನಃ ಪ್ರಸ್ತರಃ ಕಿಮಿತ್ಯಾದಿಕ ಮುಕ್ತಮಿತಿ ದ್ರಷ್ಟವ್ಯಮ್ ॥ ೫೯೨-೫೯೩॥

ಫಲಿತಮಾಹ – **ಏತಾಸಾಮಿತಿ** ॥ ೫೯೪ ॥

**ವಿವರಣೆ**– ಹಿಂದೆ ಹೇಳಿದ ಲೌಕಿಕ ಉದಾಹರಣೆಗಳಲ್ಲಿ ಭೇದವೇ ಇರಲಿ. ಆದರೆ ವೇದವು ಪರಮಪ್ರಮಾಣವಾದ್ದರಿಂದ ಅದರ ಅರ್ಥವು ಪ್ರತ್ಯಕ್ಷಬಾಧಿತವಾಗಿದ್ದರೂ ಅದನ್ನು ಯಥಾವತ್ ಆಗಿಯೇ ಸ್ವೀಕರಿಸಬೇಕು ಎಂಬ ಶಂಕೆಯನ್ನು ಈಗ ನಿವಾರಿಸುತ್ತಿದ್ದಾರೆ. ಅನೇಕ ವೇದವಾಕ್ಯಗಳಲ್ಲಿ ಮುಖ್ಯಾರ್ಥವನ್ನು ಬಿಟ್ಟು ಅಮುಖ್ಯ (ಲಾಕ್ಷಣಿಕ) ಅರ್ಥವನ್ನು ಪಂಡಿತರು ಸ್ವೀಕರಿಸಿರುವುದನ್ನು ನಾವಿಬ್ಬರೂ ಒಪ್ಪಿದ್ದೇವೆ. ಆ ವೇದವಾಕ್ಯಗಳು ಹೀಗಿವೆ-

ಯಜಮಾನಃ ಪ್ರಸ್ತರಃ - ಯಜಮಾನನು ದರ್ಭೆಯ ಮುಷ್ಟಿಯಾಗಿದ್ದಾನೆ. ಅಗ್ನಿರ್ಮಾಣವಕಃ - ವಟುವು ಬೆಂಕಿಯಾಗಿದ್ದಾನೆ, ಯೋಷಿತಮಗ್ನಿಂ ಧ್ಯಾಯೀತ - ಸ್ತ್ರೀಯನ್ನು ಬೆಂಕಿಯೆಂದು ತಿಳಿಯಬೇಕು, ಆದಿತ್ಯೋ ವೈ ಯೂಪಃ - ಯಜ್ಞದಲ್ಲಿ ಪಶುಗಳನ್ನು ಕಟ್ಟುವ ಸ್ತಂಭವು ಸೂರ್ಯನಾಗಿದ್ದಾನೆ. ಅಂಧೋ ಮಣಿಮವಿಂದತ್ - ಕುರುಡನು ಮಣಿಯನ್ನು ಪಡೆದುಕೊಂಡನು. ಮೃದಬ್ರವೀತ್ - ಮಣ್ಣು ಮಾತನಾಡಿತು, ಗ್ರಾವಾಣಃ ಪ್ಲವಂತೇ - ಕಲ್ಲುಗಳು ತೇಲುತ್ತವೆ, ಆಪಃ ಅಬ್ರುವನ್ - ನೀರು ಮಾತನಾಡಿತು.

ಈ ವೇದವಾಕ್ಯಗಳಿಂದ ತೋರುವ ಯಜಮಾನನು ದರ್ಭಮುಷ್ಟಿಯಾಗದ್ದಾನೆ ಇತ್ಯಾದಿ ಅರ್ಥಗಳು ಪ್ರತ್ಯಕ್ಷವಿರುದ್ಧಗಳಾಗಿವೆ. ಹಾಗಾಗಿ ಬಲ್ಲವರು ಇಲ್ಲಿ ತೋರುವ ಮುಖ್ಯಾರ್ಥಗಳನ್ನು ಬಿಟ್ಟು ಲಾಕ್ಷಣಿಕಾರ್ಥಗಳನ್ನು ಹೇಳುತ್ತಾರೆ.

ಯಜ್ಞದ ಸಂದರ್ಭದಲ್ಲಿ ದರ್ಭೆಮುಷ್ಟಿಯು ಯಜಮಾನನಿಗೆ ಪ್ರತಿನಿಧಿಯಾಗಿರುತ್ತದೆ. ವಟುವು ಬೆಂಕಿಯಂತೆ ತೇಜಸ್ವಿಯಾಗಿದ್ದಾನೆ. ಸ್ತ್ರೀಯನ್ನು ಬೆಂಕಿಗೆ ಸಮಾನಳೆಂದು ತಿಳಿಯಬೇಕು. ಯಜ್ಞಸ್ತಂಭವನ್ನು ಅಷ್ಟಕೋನಾಕಾರವಾಗಿ ಕೆತ್ತಿ ಸಿದ್ಧಪಡಿಸಿದರೆ ಅದು ಸೂರ್ಯನಂತೆ ಪ್ರಕಾಶಮಾನವಾಗಿರುತ್ತದೆ. ಅಂಧನು - ಜ್ಞಾನಹೀನನಾಗಿದ್ದ ಪುರುಷನು ಮಣಿಯನ್ನು - ಜ್ಞಾನವೆಂಬ ರತ್ನವನ್ನು ಪಡೆದುಕೊಂಡನು. ಮಣ್ಣಿನ ಅಭಿಮಾನಿದೇವತೆ ಮಾತನಾಡಿದನು. ಅಪಃ ಅಬ್ರುವನ್ - ನೀರಿನ ಅಭಿಮಾನಿದೇವತೆ ಮಾತನಾಡಿದನು.

ಮೇಲೆ ಹೇಳಿದ ಲಾಕ್ಷಣಿಕ ಅರ್ಥಗಳು ನಮಗಿಬ್ಬರಿಗೂ ಸಂಮತವಾಗಿದೆ. ಈ ವೇದವಾಕ್ಯಗಳಿಗೆ ಪ್ರತ್ಯಕ್ಷವಿರುದ್ಧವಾದ ಮುಖ್ಯಾರ್ಥವನ್ನು ಬಿಟ್ಟು ಲಾಕ್ಷಣಿಕಾರ್ಥವನ್ನು ಒಪ್ಪಲು ಸಿದ್ಧರಿರುವ ನೀವು ಅದರಂತೆಯೇ ಐಕ್ಯವಾಕ್ಯಗಳಾದ ತತ್ತ್ವಮಸಿ, ಸರ್ವಂ ಖಲ್ವಿದಂ ಬ್ರಹ್ಮ ಇತ್ಯಾದಿವಾಕ್ಯಗಳಿಗೂ ಪ್ರತ್ಯಕ್ಷಬಾಧಿತವಾದ ಮುಖ್ಯಾರ್ಥವನ್ನು ಬಿಟ್ಟು ಬೇರೆಯ ಅರ್ಥವನ್ನು ಏಕೆ ಹೇಳಬಾರದು?

**ದೃಷ್ಟಾರ್ಥಬಾಧೋ ವಾಚಾ ಸ್ಯಾತ್ ತಸ್ಯಾಃ ಸ್ವಾರ್ಥೇ ದೃಢೇ ಸತಿ ।**
**ಬಾಧಾಭಾವೇ ದೃಢೋऽರ್ಥಃ ಸ್ಯಾದಿತ್ಯನ್ಯೋನ್ಯಾಶ್ರಯೋ ನ ಚೇತ್ ॥೫೫॥**

**ಅರ್ಥ–** ನ ಚೇತ್ = ಈ ಹಿಂದೆ ನಾವು ಸಮರ್ಥಿಸಿದಂತೆ ಪ್ರತ್ಯಕ್ಷಬಾಧಿತಗಳಾದ ಐಕ್ಯವಾಕ್ಯಗಳಿಗೆ ಭೇದಪರವಾದ ಅರ್ಥಗಳನ್ನು ಹೇಳದಿದ್ದರೆ, ತಸ್ಯಾಃ = ಆ ಐಕ್ಯವಾಕ್ಯದ, ಸ್ವಾರ್ಥೇ = ಐಕ್ಯವೆಂಬ ತನ್ನ ಮುಖ್ಯಾರ್ಥವು, ದೃಢೇ ಸತಿ = ಸಮರ್ಥಿಸಲ್ಪಟ್ಟಾಗ, ವಾಚಾ = ಆ ಐಕ್ಯವಾಕ್ಯದಿಂದ, ದೃಷ್ಟಾರ್ಥಬಾಧಃ = ಪ್ರತ್ಯಕ್ಷದಿಂದ ದೃಷ್ಟವಾದ ಭೇದವೆಂಬ ಅರ್ಥಕ್ಕೆ ವಿರೋಧವು, ಸ್ಯಾತ್ = ಬಂದೀತು. ಬಾಧಾಭಾವೇ = ಭೇದವನ್ನು ತಿಳಿಸುವ ಪ್ರತ್ಯಕ್ಷದಿಂದ ವಿರೋಧವು ಆ ಐಕ್ಯವಾಕ್ಯಕ್ಕೆ ಬರದೇ ಇದ್ದಾಗಲೇ, ಅರ್ಥಃ = ಐಕ್ಯವೆಂಬ ಅರ್ಥವು, ದೃಢಃ = ದೃಢವಾಗಿ, ಸ್ಯಾತ್ = ಆಗುತ್ತದೆ. ಇತಿ = ಹೀಗೆ, ಅನ್ಯೋನ್ಯಾಶ್ರಯಃ = ಅನ್ಯೋನ್ಯಾಶ್ರಯದೋಷವು ಬರುತ್ತದೆ.

**ಅನುವಾದ–** ಐಕ್ಯವಾಕ್ಯವು ತನ್ನ ಅರ್ಥವನ್ನು ದೃಢವಾಗಿ ಪ್ರತಿಪಾದಿಸಿದರೆ ಭೇದಪ್ರತ್ಯಕ್ಷಕ್ಕೆ ಬಾಧವುಂಟಾಗುತ್ತದೆ. ಭೇದಪ್ರತ್ಯಕ್ಷಕ್ಕೆ ಬಾಧವುಂಟಾದರೆ ಮಾತ್ರ ಐಕ್ಯವಾಕ್ಯಕ್ಕೆ ಅದರ ವಿರೋಧವು ಇಲ್ಲದಿರುವುದರಿಂದ ಐಕ್ಯವಾಕ್ಯವು ತನ್ನ ಅರ್ಥವನ್ನು ದೃಢವಾಗಿ ಪ್ರತಿಪಾದನೆ ಮಾಡುತ್ತದೆ. ಹೀಗೆ ಲಾಕ್ಷಣಿಕ ಅರ್ಥವನ್ನು ಮಾಡದಿದ್ದರೆ ನಿನಗೆ ಅನ್ಯೋನ್ಯಾಶ್ರಯ ದೋಷವು ಬರುತ್ತದೆ.

**ಭಾವವಿಲಾಸಿನೀ–** ವಿಪಕ್ಷೇ ಬಾಧಕಮಾಹ–**ದೃಷ್ಟಾರ್ಥೇತಿ** ॥ ನಚೇತ್ ಬಾಧಿತವಾಕ್ಯಸ್ಯಾನ್ಯೋऽರ್ಥೋ ನಚೇತ್ । ವಾಕ್ಯಸ್ಯ ತದೇಕಾರ್ಥಕತ್ವೇ ಸಿದ್ಧೇ ತೇನ ಪ್ರತ್ಯಕ್ಷಬಾಧನಮ್ ।

ಬಾಧಕಪ್ರತ್ಯಕ್ಷಬಾಧೇ ಚ ಮುಖ್ಯಾರ್ಥ ಪರಿತ್ಯಾಗೇ ಕಾರಣಾಭಾವಾತ್ ತೂಷ್ಣೀ ವೃತ್ತ್ಯಂತರಾಶ್ರಯಣಸ್ಯಾನುಚಿತತ್ವಾಚ್ಚ ವಾಕ್ಯಸ್ಯ ತದೇಕಾರ್ಥತ್ವಮಿತ್ಯನ್ಯೋನ್ಯಾಶ್ರಯ ಇತಿ ಭಾವಃ ॥೫೫॥

**ವಿವರಣೆ–** ತತ್ತ್ವಮಸ್ಯಾದಿ ವಾಕ್ಯಗಳ ಮುಖ್ಯಾರ್ಥವು ಪ್ರತ್ಯಕ್ಷ ಬಾಧಿತವಾಗಿರುವುದರಿಂದ ಭೇದಪರಅರ್ಥಗಳನ್ನು ಹೇಳಬೇಕೆಂದು ಈ ಹಿಂದೆ ತೋರಿಸಲಾಯಿತು. ಹಾಗಿದ್ದರೂ ಅರ್ಥಾಂತರಗಳನ್ನು ಆ ವೇದವಾಕ್ಯಗಳಿಗೆ ಹೇಳದಿದ್ದರೆ ಅನ್ಯೋನ್ಯಾಶ್ರಯದೋಷ ಬರುತ್ತದೆ ಎಂದು ಈಗ ಹೇಳಲಾಗುತ್ತಿದೆ. ತತ್ತ್ವಮಸ್ಯಾದಿವಾಕ್ಯಗಳು ತಮ್ಮ ಮುಖ್ಯಾರ್ಥವಾದ ಐಕ್ಯವನ್ನೇ ಹೇಳುತ್ತವೆಂದು ಸಾಬೀತಾದರೆ ಮಾತ್ರವೇ ಆ ವಾಕ್ಯಗಳು ಪರಮಪ್ರಮಾಣಗಳಾದ್ದರಿಂದ ಪ್ರತ್ಯಕ್ಷದಿಂದ ಕಂಡ ಭೇದಕ್ಕೆ ವಿರೋಧವನ್ನೊಡ್ಡಬಲ್ಲವು. ಆದರೆ ಭೇದವನ್ನು ತಿಳಿಸುವ ಪ್ರತ್ಯಕ್ಷದಿಂದ ಆ ವಾಕ್ಯಗಳಿಗೆ ವಿರೋಧವು ಬರುವುದಿಲ್ಲ ವೆಂದು ನಿರ್ಣಯವಾದಾಗಲೇ ಅವುಗಳ ಮುಖ್ಯಾರ್ಥವಾದ ಐಕ್ಯವು ನಿರ್ಣಯವನ್ನು ಪಡೆಯುತ್ತದೆ. ಏಕೆಂದರೆ ವೇದವಾಕ್ಯಗಳಿಗೆ ಪ್ರತ್ಯಕ್ಷಕ್ಕೆ ಅವಿರುದ್ಧವಾದ ಅರ್ಥವನ್ನೇ ಹೇಳಬೇಕೆಂಬುದೇ ನಮ್ಮ ವಾದವಾಗಿದೆ. ಹೀಗೆ ಆ ವಾಕ್ಯಗಳ ಐಕ್ಯಾರ್ಥನಿರ್ಣಯವು ಭೇದಗ್ರಾಹಿಪ್ರತ್ಯಕ್ಷದಿಂದ (ವಿರೋಧ) ಬಾಧವು ಬರದಿರುವಿಕೆಯನ್ನು ಅವಲಂಬಿಸಿದೆ. ಈ ಬಾಧದ ಬರದಿರುವಿಕೆಯು ಐಕ್ಯಾರ್ಥ ನಿರ್ಣಯವನ್ನು ಅವಲಂಬಿಸಿದೆ. (ಭೇದಗ್ರಾಹಿಪ್ರತ್ಯಕ್ಷದಿಂದ ವೇದಕ್ಕೆ ಬಾಧಬರ ದಿರಬೇಕಾದರೆ ಆ ಪ್ರತ್ಯಕ್ಷವು ಸ್ವಯಂ ವೇದದಿಂದ ಬಾಧಿತವಾಗಬೇಕು. ವೇದದಿಂದ ಪ್ರತ್ಯಕ್ಷವು ಬಾಧಿತವಾದ ಬಳಿಕವೇ ಐಕ್ಯನಿರ್ಣಯ.) ಹೀಗೆ ಅನ್ಯೋನ್ಯಾಶ್ರಯ ಬರುವುದರಿಂದ ಐಕ್ಯವಾಕ್ಯಗಳಿಗೆ ಅರ್ಥಾಂತರಗಳನ್ನು ಹೇಳುವುದೇ ಸೂಕ್ತವಾಗಿದೆ.

**ಗಂಗಾಯಾಂ ಘೋಷ ಇತ್ಯುಕ್ತಿಃ ಕಿಂ ಬಾಧಂ ಬಾಧತೇ ಸ್ವಯಂ ।**
**ಬಾಧೇನ ಬಾಧಿತಾ ವಾ ಸ್ಯಾದನ್ಯಾರ್ಥೇತಿ ವಿಚಾರ್ಯತಾಮ್ ॥ ೫೬ ॥**

**ಅರ್ಥ–** ಗಂಗಾಯಾಂ = ಗಂಗಾನದಿಯಲ್ಲಿ, ಘೋಷಃ = ಗೊಲ್ಲರ ಹಳ್ಳಿಯು ಇದೆ, ಇತಿ = ಎಂಬ, ಉಕ್ತಿಃ = ಹೇಳಿಕೆಯೂ, ಬಾಧಂ = ಪ್ರವಾಹದಲ್ಲಿ ಗುಡಿಸಲು ಇಲ್ಲವೆಂದು ತಿಳಿಸುವ ಮೂಲಕ ಆ ಹೇಳಿಕೆಗೆ ತಡೆಯೊಡ್ಡುತ್ತಿರುವ ಪ್ರತ್ಯಕ್ಷವನ್ನು, ಸ್ವಯಂ = ತಾನೇ, ಬಾಧತೇ ಕಿಂ = ಬಾಧಿಸುತ್ತದೇನು? ವಾ = ಅಥವಾ, ಬಾಧೇನ = ಹಿಂದೆ ತಿಳಿಸಿದ ಬಾಧಕಪ್ರತ್ಯಕ್ಷದಿಂದಲೇ, ಬಾಧಿತಾ = ಬಾಧಿಸಲ್ಪಟ್ಟದ್ದಾಗಿ, ಅನ್ಯಾರ್ಥಾ = ಮುಖ್ಯಾರ್ಥವಾದ ಗ್ರಾಮಾಶ್ರಯತ್ವಕ್ಕಿಂತ ಬೇರೆಯದಾದ ಅರ್ಥವುಳ್ಳದ್ದಾಗಿ, ಸ್ಯಾತ್ = ಆಗುತ್ತದೋ, ಇತಿ = ಎಂದು, ವಿಚಾರ್ಯತಾಂ = ವಿಚಾರಮಾಡಲ್ಪಡಲಿ.

**ಅನುವಾದ–** 'ಗಂಗಾಯಾಂ ಘೋಷಃ' ಎಂಬ ವಾಕ್ಯವು ತಾನೇ ಪ್ರತ್ಯಕ್ಷವನ್ನು ಬಾಧಿಸುತ್ತದೆಯೇ? ಅಥವಾ ಪ್ರತ್ಯಕ್ಷವಿರೋಧವು ಇರುವುದರಿಂದ ತಾನು ಬಾಧಿತವಾಗಿ ಅನ್ಯಾರ್ಥವನ್ನು ಹೇಳುತ್ತದೆಯೇ? ಎಂದು ವಿಚಾರ ಮಾಡು.

**ಭಾವವಿಲಾಸಿನೀ–** ವಾಕ್ಯೇನೈವ ಬಾಧಕಪ್ರತ್ಯಕ್ಷಬಾಧನಂ ಕ್ವಾಪ್ಯದೃಷ್ಟಂ ಚೇತ್ಯಾಹ – **ಗಂಗೇತಿ** ॥ ಬಾಧೇನ ಬಾಧಿತಾಽನ್ಯಾರ್ಥಾ ವಾ ಸ್ಯಾದಿತಿ ಯೋಜನಾ ॥ ೫೯೬ ॥

**ವಿವರಣೆ–** ವಾಕ್ಯವೇ ಪ್ರತ್ಯಕ್ಷವನ್ನು ಬಾಧಿಸುವುದು ಎಲ್ಲೂ ಕಂಡರಿಯದ ಸಂಗತಿ ಎಂಬ ಮತ್ತೊಂದು ದೋಷವನ್ನು ಈಗ ಹೇಳುತ್ತಾರೆ. ಗಂಗೆಯಲ್ಲಿ ಗೊಲ್ಲರ ಹಳ್ಳಿ ಎಂಬ ಹೇಳಿಕೆಯು ಪ್ರತ್ಯಕ್ಷವಿರುದ್ಧವಾದ್ದರಿಂದ ಅದಕ್ಕೆ ಲಾಕ್ಷಣಿಕಅರ್ಥವನ್ನು ಹೇಳುವುದು ಕಂಡಿರುವ ಸಂಗತಿ. ತತ್ತ್ವಮಸಿ ಎಂಬ ವಾಕ್ಯವೇ ಪ್ರತ್ಯಕ್ಷವನ್ನು ಬಾಧಿಸುತ್ತದೆಂದು ಹೇಳಹೊರಟಿರುವ ನೀವು, ಅದರಂತೆಯೇ ಗಂಗೆಯಲ್ಲಿ ಹಳ್ಳಿ ಎಂಬ ಹೇಳಿಕೆಯೇ ಪ್ರತ್ಯಕ್ಷವನ್ನು ಬಾಧಿಸುವುದೋ ಅಥವಾ ಪ್ರತ್ಯಕ್ಷದಿಂದಲೇ ಬಾಧಕ್ಕೊಳಗಾಗಿ ಅನ್ಯಾರ್ಥವನ್ನು ಹೇಳುತ್ತದೆಯೋ ಎಂದು ವಿಚಾರ ಮಾಡು.

**ಯದ್ಯಾಪಾತಪ್ರತೀತೋಽಥೋ೯ ಬಾಧಿತೋಽಪಿ ಭವೇದ್ ಗಿರಾಮ್ ।**
**ತರ್ಹ್ಯಾಕಾಶಾದಿಶಬ್ದೇನ ಬ್ರಹ್ಮ ಮೀಮಾಂಸ್ಯತೇ ಕುತಃ ॥ ೫೯೭ ॥**

**ಅರ್ಥ–** ಆಪಾತಪ್ರತೀತಃ = ಮೇಲ್ನೋಟಕ್ಕೆ ತೋರಿದ, ಅರ್ಥಃ = ಅರ್ಥವು, ಬಾಧಿತಃ ಅಪಿ = ಪ್ರತ್ಯಕ್ಷದಿಂದ ಬಾಧಕ್ಕೊಳಗಾದರೂ, ಯದಿ = ಒಂದು ಪಕ್ಷದಲ್ಲಿ, ಗಿರಾಂ = ವಾಕ್ಯಗಳಿಗೆ, ಅರ್ಥಃ = ಅಭಿಪ್ರೇತಾರ್ಥವು, ಭವೇತ್ = ಆಗುವುದಾದರೆ, ತರ್ಹಿ = ಆ ಪಕ್ಷದಲ್ಲಿ, ಆಕಾಶಾದಿಶಬ್ದೇನ = ಆಕಾಶಮುಂತಾದ ಶಬ್ದಗಳ ವರ್ಗದಿಂದ, ಬ್ರಹ್ಮ = ಪರಬ್ರಹ್ಮನು, ಕುತಃ = ಏತಕ್ಕಾಗಿ, ಮೀಮಾಂಸ್ಯತೇ = ವಿಚಾರಮಾಡಲ್ಪಡುತ್ತಾನೆ?

**ಅನುವಾದ–** ಒಂದು ಪಕ್ಷ ಬಾಧಿತವಾದರೂ ಆಪಾತಪ್ರತೀತವಾದ ಅರ್ಥವೇ ವಾಕ್ಯಗಳ ತಾತ್ಪರ್ಯಾರ್ಥವಾಗುವುದಿದ್ದರೆ ಆಕಾಶ ಶಬ್ದದಿಂದ ನೀನು ಏಕೆ ಬ್ರಹ್ಮನ ಮೀಮಾಂಸೆಯನ್ನು ಮಾಡುತ್ತೀಯೇ?

**ಭಾವವಿಲಾಸಿನೀ–** ದೂಷಣಾನಂತರಮ್ ಚಾಹ – **ಯಾದೀತಿ** ॥ ಆದಿಪದೇನ ಪ್ರಾಣಾದಿಶಬ್ದಾ ಗೃಹ್ಯಂತೇ । ಬಾಧಿತೋಽಪ್ಯಾಪಾತಪ್ರತೀತಾರ್ಥೋಽಂಗೀಕಾರ್ಯಶ್ಚೇತ್ ಆಕಾಶಸ್ತಲ್ಲಿಂಗದಿತ್ಯಾ-ದ್ಯಧಿಕರಣೇಷ್ವಾಕಾಶಾದಿಶಬ್ದಾನಾಂ ಸರ್ವಜನೈರಾಪಾತತಃ ಪ್ರತೀತ ಭೂತಾಕಾಶಾದ್ಯರ್ಥಕತ್ವಂ ಅನಂತತ್ವಾದಿ ಬಾಧಕವಶಾತ್ತ್ಯಕತ್ವಾ ಪ್ರಸಿದ್ಧಬ್ರಹ್ಮಪರತ್ವ ಕಲ್ಪನಾರೂಪಾ ಮೀಮಾಂಸಾ ಭವದ್ಭಾಷ್ಯಸ್ಯಾಪಿ ಮೂಲಭೂತಾ ವ್ಯರ್ಥಾ ಸ್ಯಾದಿತಿ ಭಾವಃ ॥ ೫೯೭ ॥

**ವಿವರಣೆ–** ವಾಕ್ಯವೊಂದಕ್ಕೆ ಮೇಲ್ನೋಟಕ್ಕೆ ತೋರಿದ ಅರ್ಥವು ಪ್ರತ್ಯಕ್ಷದಿಂದ ಬಾಧಕ್ಕೊಳಗಾಗಿದ್ದರೂ ಅದೇ ಆ ವಾಕ್ಯದ ಅಭಿಪ್ರೇತಾರ್ಥವಾಗುತ್ತದೆಯೆಂದು ನೀವು ಅಭಿಪ್ರಾಯಪಟ್ಟಿದ್ದೀರಿ. ಹಾಗಾದರೆ ಆಕಾಶಸ್ತಲ್ಲಿಂಗಾತ್ ಇತ್ಯಾದಿ ಬ್ರಹ್ಮಸೂತ್ರಗಳಲ್ಲಿ ಆಕಾಶ, ಪ್ರಾಣ ಮುಂತಾದ ಶಬ್ದಗಳ ಮೇಲ್ನೋಟದ ಅರ್ಥಗಳಾದ ಭೂತಾಕಾಶ

ಮುಂತಾದ ಅರ್ಥಗಳೇ ಆ ಶಬ್ದಗಳ ಅಭಿಪ್ರೇತಾರ್ಥಗಳೆಂದಾಯಿತು. ಆದರೆ ನೀವೂ ಸೇರಿದಂತೆ ಎಲ್ಲಾ ಭಾಷ್ಯಕಾರರೂ ಆ ಭೂತಾಕಾಶಗಳಿಗೆ ಪರಬ್ರಹ್ಮನ ಧರ್ಮಗಳಾದ ಅನಂತತ್ವಾದಿಗಳು ಹೊಂದಲಾರವೆಂದು ವಿಮರ್ಶೆಮಾಡಿದ್ದಾರೆ; ಮತ್ತು ಆ ಶಬ್ದಗಳು ಪರಬ್ರಹ್ಮನನ್ನೇ ಹೇಳುತ್ತವೆ ಎಂಬ ಬ್ರಹ್ಮಮೀಮಾಂಸಾ ಮಾಡಿದ್ದಾರೆ. ಆಪಾತಾರ್ಥವೇ ಅಭಿಪ್ರೇತಾರ್ಥ ಆಗುವುದಾದರೆ ಇಂತಹ ಬ್ರಹ್ಮಮೀಮಾಂಸೆಯು ವ್ಯರ್ಥ ವಾಗುವುದಿಲ್ಲವೆ?

**ಶ್ರುತಬಾಧಿತಸಂತ್ಯಾಗೇ ಭಾಷ್ಯಂ ದುರ್ಭಾಷ್ಯಮೇವ ತೇ ।**
**ಶ್ರುತಬಾಧಿತಸಂವಾದೇ ಭಾಷ್ಯಂ ದುರ್ಭಾಷ್ಯಮೇವ ತೇ ॥ ೫೮ ॥**

**ಅರ್ಥ–** ಶ್ರುತಬಾಧಿತಸಂತ್ಯಾಗೇ = ಮೇಲ್ನೋಟಕ್ಕೆ ಶ್ರುತಿಯ ಅರ್ಥವೆಂದು ತೋರಿದ, ಆದರೆ ಪ್ರತ್ಯಕ್ಷಾದಿಪ್ರಮಾಣಗಳಿಂದ ಬಾಧಿತಗಳಾದ ಐಕ್ಯಮುಂತಾದ ಅರ್ಥಗಳನ್ನು ಸಮರ್ಥಿಸಲಾಗದೇ ಬಿಟ್ಟುಕೊಟ್ಟರೆ, ತೇ = ನಿನ್ನ ಭಾಷ್ಯಂ = ಬ್ರಹ್ಮಸೂತ್ರಭಾಷ್ಯವು, ದುರ್ಭಾಷ್ಯಂ ಏವ = ದುರ್ಭಾಷ್ಯವೇ ಆಗುತ್ತದೆ. ಶ್ರುತಬಾಧಿತಸಂವಾದೇ = ಮೇಲ್ನೋಟಕ್ಕೆ ಆಕಾಶಶಬ್ದದ ಅರ್ಥವೆಂದು ತೋರಿದ ಆದರೆ ಅನಂತತ್ವಾದಿಲಕ್ಷಣಗಳಿಲ್ಲದ ಪ್ರಯುಕ್ತವಾಗಿ ಬಾಧಿತವಾದ ಭೂತಾಕಾಶ ಎಂಬ ಅರ್ಥವನ್ನೇ ಒಪ್ಪಿದರೆ, ತೇ = ನಿನ್ನ ಭಾಷ್ಯಂ = ಆಕಾಶಾಧಿಕರಣವನ್ನು ವಿವರಿಸುವ ಭಾಷ್ಯದ ಭಾಗವು, ದುರ್ಭಾಷ್ಯಂ ಏವ = ದುರ್ಭಾಷ್ಯವೇ ಆಗುತ್ತದೆ.

**ಅನುವಾದ– ಶ್ರುತಿಯಿಂದ ಬಾಧಿತವಾದ ಅರ್ಥವನ್ನು ಪರಿತ್ಯಾಗ ಮಾಡಿದರೂ ಆಪಾತತಃ ಪ್ರತೀತವಾಗುವ ಪ್ರತ್ಯಕ್ಷಾದಿವಿರುದ್ಧವಾದ ಅರ್ಥವನ್ನು ಪರಿತ್ಯಾಗ ಮಾಡುವುದಾದರೆ ಐಕ್ಯವನ್ನೇ ಪರಿತ್ಯಾಗಮಾಡಬೇಕಾಗುವುದರಿಂದ ನಿನ್ನ ಭಾಷ್ಯವು ದುರ್ಭಾಷ್ಯವಾಗುತ್ತದೆ. ಆಪಾತತಃ ಶ್ರುತವಾದ, ಪ್ರತ್ಯಕ್ಷ ವಿರುದ್ಧವಾದ ಅರ್ಥದ ಸಂವಾದವನ್ನು ಒಪ್ಪಿದರೂ ನಿನ್ನ ಭಾಷ್ಯವು ದುರ್ಭಾಷ್ಯವೇ ಆಗುತ್ತದೆ.**

**ಭಾವವಿಲಾಸಿನೀ–** ಏವಂಚೋಭಯತಃ ಪಾಶಾರಜ್ಜುಃ ಪರಸ್ಯ ಗಲಂ ಬಧ್ನಾತೀತ್ಯಾಹ – **ಶ್ರುತಬಾಧಿತೇತಿ ॥** ಶ್ರುತಬಾಧಿತಸಂತ್ಯಾಗೇ ಶ್ರುತಸ್ಯಾऽಪಾತತಃ ಶ್ರುತ್ಯರ್ಥತಯಾ ಪ್ರತೀತಸ್ಯ ಬಾಧಿತಸ್ಯ ಪ್ರತ್ಯಕ್ಷಾದಿ ಪ್ರಮಾಣಬಾಧಿತಸ್ಯ ಚಾರ್ಥಸ್ಯ ಸಂತ್ಯಾಗೇ । ಈದೃಶೈಕ್ಯಮಿಥ್ಯಾತ್ವಾದೇರೇವ ತ್ಯಾಜ್ಯತ್ವ ಪ್ರಸಂಗೇನ ತತ್ ಪ್ರತಿಪಾದಕಭಾಷ್ಯಂ ದುರ್ಭಾಷ್ಯಂ ಸ್ಯಾದಿತ್ಯರ್ಥಃ । ಶ್ರುತಬಾಧಿತಸಂವಾದೇ ಆಪಾತತಃ ಶ್ರುತಸ್ಯ ಬಾಧಿತಸ್ಯ ಚಾರ್ಥಸ್ಯ ಸಂವಾದೇऽಂಗೀಕಾರೇ । ಭಾಷ್ಯಮ್ ಆಕಾಶಾದ್ಯಧಿಕರಣಾರ್ಥಪ್ರತಿಪಾದಕಭಾಷ್ಯಮ್ । ತತ್ರ ಶ್ರುತಬಾಧಿತ ಸಂತ್ಯಾಗಸ್ಯೈವ ತ್ವಯಾಪಿ ವಾಚ್ಯತ್ವಾತ್ । ಏವಂಚೋಭಯತಃ ಪಾಶಾರಜ್ಜುರಿತಿ ಭಾವಃ ॥ ೫೮ ॥

**ವಿವರಣೆ–** ಜೀವಬ್ರಹ್ಮೈಕ್ಯ, ಜಗನ್ಮಿಥ್ಯಾತ್ವ ಮುಂತಾದ ವಿಷಯಗಳೇ ವೇದಗಳ ಅರ್ಥಗಳೆಂದು ಮೇಲ್ನೋಟಕ್ಕೆ ತೋರುತ್ತದೆ. ಆದರೆ ಆ ವಿಷಯಗಳು ಭೇದವನ್ನು ಮತ್ತು

ಜಗತ್ಸತ್ಯತ್ವಗಳನ್ನು ಗ್ರಹಿಸುವ ಪ್ರತ್ಯಕ್ಷಗಳಿಂದ ಬಾಧಿತವಾಗಿವೆಯೆಂಬ ದೋಷ ಬಂದ ಕಾರಣ ನೀವು ಅದ್ವೈತಿಗಳು ನಿಮ್ಮ ಸಿದ್ಧಾಂತದ ಆ ವಿಷಯಗಳನ್ನು ಬಿಟ್ಟುಕೊಟ್ಟರೆ ಆ ವಿಷಯಗಳ ಸಮರ್ಥನೆಗೆ ಹೊರಟಿರುವ ನಿಮ್ಮ ಅದ್ವೈತಭಾಷ್ಯವು ದುರ್ಭಾಷ್ಯ ವಾಗಬೇಕಾದೀತು.

ಬ್ರಹ್ಮಸೂತ್ರಗಳ ಆಕಾಶಾದಿ ಅಧಿಕರಣಗಳಲ್ಲಿ ಆಕಾಶ ಶಬ್ದಕ್ಕೆ ಮೇಲ್ನೋಟಕ್ಕೆ ಭೂತಾಕಾಶವೇ ಅರ್ಥವೆಂದು ತೋರುತ್ತದೆ. ಆದರೆ ಆ ಅರ್ಥವು ಬಾಧಿತವಾಗಿದೆ. ಆಕಾಶಶಬ್ದಕ್ಕೆ ಬಾಧಿತವಾಗಿದ್ದರೂ ಭೂತಾಕಾಶ ಎಂದೇ ಅರ್ಥವನ್ನು ನೀವು ಒಪ್ಪಿದರೆ ಆ ಶಬ್ದಕ್ಕೆ ಬ್ರಹ್ಮ ಎಂಬ ಅರ್ಥವನ್ನು ಹೇಳುವ ನಿಮ್ಮ ಭಾಷ್ಯವು ದುರ್ಭಾಷ್ಯವಾದೀತು. ಹೀಗೆ ಎರಡೂ ಕಡೆ ಕುಣಿಕೆಯುಳ್ಳ ಹಗ್ಗದಲ್ಲಿ (ಹಗ್ಗದ ಬಲೆಯಲ್ಲಿ) ನೀವು ಸಿಲುಕಿದ್ದೀರಿ.

**ಯದೀಶ್ವರೋऽಸಮರ್ಥಃ ಸ್ಯಾತ್ ಕಥಂ ಸರ್ವಂ ಜಗದ್ ಭವೇತ್ ।**
**ಯದೀಶ್ವರಃ ಸಮರ್ಥಃ ಸ್ಯಾತ್ ಕಥಂ ಸರ್ವಂ ಜಗದ್ ಭವೇತ್ ॥ ೫೯॥**

**ಅರ್ಥ–** ಯದಿ = ಒಂದು ಪಕ್ಷದಲ್ಲಿ, ಈಶ್ವರಃ = ಪರಬ್ರಹ್ಮನು, ಅಸಮರ್ಥಃ = ಸಾಮರ್ಥ್ಯವೆಂಬ ಗುಣವಿಲ್ಲದವನು, ಸ್ಯಾತ್ = ಆಗಿದ್ದರೆ, ತರ್ಹಿ = ಆ ಪಕ್ಷದಲ್ಲಿ, ಸರ್ವಂ = ಎಲ್ಲ, ಜಗತ್ = ಪ್ರಪಂಚವು, ಕಥಂ = ಹೇಗೆ, ಸ್ಯಾತ್ = ಹುಟ್ಟುತ್ತದೆ? ಯದಿ = ಒಂದು ಪಕ್ಷದಲ್ಲಿ ಈಶ್ವರಃ = ಪರಮಾತ್ಮನು, ಸಮರ್ಥಃ= ಸಾಮರ್ಥ್ಯವಿದ್ದವನು, ಸ್ಯಾತ್ = ಆಗಿದ್ದರೆ, ತರ್ಹಿ = ಆ ಪಕ್ಷದಲ್ಲಿ ಸಃ = ಅವನು, ಸರ್ವಂ = ಎಲ್ಲ ಜಗತ್ = ಪ್ರಪಂಚದಿಂದ ಅಭಿನ್ನನಾಗಿ, ಕಥಂ = ಹೇಗೆ, ಭವೇತ್? = ಆಗುತ್ತಾನೆ?

**ಅನುವಾದ–** ಈಶ್ವರನು ಜಗತ್ತನ್ನು ಸೃಷ್ಟಿಸುವ ಸಾಮರ್ಥ್ಯವನ್ನು ಹೊಂದಿರದಿದ್ದರೆ ಎಲ್ಲ ಜಗತ್ತೂ ಹೇಗೆ ಉಂಟಾಗುತ್ತದೆ? ಈಶ್ವರನು ಸಮರ್ಥನಾದ ಪಕ್ಷದಲ್ಲಿ ಅವನೇ ಹೇಗೆ ಎಲ್ಲಾ ಜಗತ್ತೂ ಆಗುತ್ತಾನೆ?

**ಭಾವವಿಲಾಸಿನೀ–** ಬಹುಪಾಶಬದ್ಧಗಲತ್ವೇ ಪರಸ್ಯ ಮೂಕತ್ವೈವ ಸ್ಯಾದಿತ್ಯಾಶಯೇನ ಬಹ್ವೀರು- ಭಯತಃ ಪಾಶಾರಜ್ಜೂರಾಹ – ಯದೀಶ್ವರ ಇತ್ಯಾದಿನಾ ॥ ಸರ್ವಂ ಮಹದಾದಿಕಮ್ ॥ ಭವೇತ್ ಉತ್ಪದ್ಯೇತ । ಮಹಾಸಾಮರ್ಥ್ಯಾಭಾವೇ ಈಶ್ವರಸ್ಯ ಮಹೀಮಹೀಧರಾದಿ ಜಗತ್ಕರ್ತೃ- ತ್ವಾಯೋಗಾತ್ । ಕರ್ತುರಭಾವೇ ಚ ಕಾರ್ಯಾಯೋಗಾದಿತಿ ಭಾವಃ । ದ್ವಿತೀಯ- ಯೋಜನಿಕಾಯಾಂ ತರ್ಹಿ ಸ ಈಶ್ವರಃ ಸರ್ವಂ ಬ್ರಹ್ಮಾದಿಸಕಲ ಚೇತನಾಚೇತನಾತ್ಮಕಂ ಜಗತ್ ಕಥಂ ಭವೇತ್ । ತದಭಿನ್ನಃ ಕಥಂ ಸ್ಯಾದಿತ್ಯರ್ಥಃ । ಸಮರ್ಥಾಸಮರ್ಥಯೋಶ್ಚ ರಾಜ- ರಾಷ್ಟ್ರಯೋರಿವೈಕ್ಯಾಯೋಗಾದಿತಿ ಭಾವಃ ॥ ೫೯ ॥

**ವಿವರಣೆ–** ಅನೇಕ ಕುಣಿಕೆಗಳನ್ನು ಕುತ್ತಿಗೆಗೆ ಬಿಗಿದರೆ ಅದ್ವೈತಿಗಳು ಉತ್ತರಿಸಲಾಗದೆ ಮೂಕರಾಗಿ ಸೋಲನ್ನೊಪ್ಪುತ್ತಾರೆ ಎಂಬ ಉದ್ದೇಶದಿಂದ ಮತ್ತಷ್ಟು ಉಭಯತಃ

ಪಾಶಾರಜ್ಜುಗಳನ್ನು ಮೂಲಕಾರರು ಹೇಳುತ್ತಾರೆ. ಅದ್ವೈತಿಗಳು ಪರಬ್ರಹ್ಮನನ್ನು ನಿರ್ಗುಣನೆನ್ನುತ್ತಾರಾದ್ದರಿಂದ ಜಗತ್ತನ್ನು ಸೃಷ್ಟಿಮಾಡುವ ಸಾಮರ್ಥ್ಯವೆಂಬ ಗುಣವೂ ಆತನಿಗಿಲ್ಲ ಎಂದಂತಾಯಿತು. ಕರ್ತೃತ್ವವಿಶಿಷ್ಟನಾದ ಕರ್ತೃವೇ ಇಲ್ಲವೆಂದಾದರೆ ಮಹತ್ತತ್ವ ಮೊದಲಾದ ತತ್ವಗಳಿಂದ ಕೂಡಿದ ಈ ಜಗತ್ತು ಹೇಗೆ ಹುಟ್ಟಿತು? ಈ ಕುಣಿಕೆಯನ್ನು ತಪ್ಪಿಸಿಕೊಳ್ಳಲು ಪರಬ್ರಹ್ಮನು ಜಗತ್ಕರ್ತೃತ್ವಸಾಮರ್ಥ್ಯವುಳ್ಳವನು ಎಂದು ಅವರು ಒಪ್ಪಬೇಕಾಗುತ್ತದೆ. ಅಂತಹ ಮಹಾಸಾಮರ್ಥ್ಯವುಳ್ಳವನಾದ ಆ ಪರಮಾತ್ಮನು ಚತುರ್ಮುಖನೇ ಮೊದಲಾದ ಚೇತನಮತ್ತು ಅಚೇತನರೊಡಗೂಡಿದ ಕ್ಷುದ್ರವಾದ ಈ ಜಗತ್ತಿನಿಂದ ಅಭಿನ್ನ ಹೇಗಾಗುತ್ತಾನೆ? ಸಮರ್ಥವಾದ ಒಂದು ವಸ್ತು ಅಸಮರ್ಥವಾದ ಮತ್ತೊಂದು ವಸ್ತುವಿನೊಡನೆ ಐಕ್ಯ ಪಡೆಯಲಾರದು. ರಾಜನೂ ರಾಷ್ಟ್ರವೂ ಎಂದಾದರೂ ಅಭಿನ್ನರಾಗುವರೇ? ಮೊದಲ ಕುಣಿಕೆಯಿಂದ ತಪ್ಪಿಸಿಕೊಳ್ಳಲು ಪರಬ್ರಹ್ಮನನ್ನು ಸಮರ್ಥನೆಂದು ಒಪ್ಪಿದರೆ ಹೀಗೆ ಎರಡನೇ ಕುಣಿಕೆಗೆ ಕೊರಳೊಡ್ಡುವ ಅನಿವಾರ್ಯ ಸ್ಥಿತಿ ಅವರಿಗೆ ಬಂದೊದಗಿದೆ.

**ಯದೀಶ್ವರೋ ಮಹೇಶಃ ಸ್ಯಾದನೀಶತ್ವಂ ಕಥಂ ಭಜೇತ್ ।**
**ಯದೀಶ್ವರೋಽಪ್ಯನೀಶಃ ಸ್ಯಾದನೀಶ ತ್ವಂ ಕಥಂ ಭಜೇಃ ॥ ೬೦೦ ॥**

**ಅರ್ಥ–** ಯದಿ = ಒಂದು ಪಕ್ಷದಲ್ಲಿ, ಈಶ್ವರಃ = ಪರಬ್ರಹ್ಮನು, ಮಹೇಶಃ = ಎಲ್ಲರಿಗೂ ಒಡೆಯನ್ನು, ಸ್ಯಾತ್ = ಆಗಿದ್ದರೆ, ತರ್ಹಿ = ಆ ಪಕ್ಷದಲ್ಲಿ ಸಃ = ಅವನು, ಅನೀಶತ್ವಂ = ನೀಚಜೀವರಿಂದ ಅಭೇದವನ್ನು, ಕಥಂ = ಹೇಗೆ, ಭಜೇತ್ = ಹೊಂದುತ್ತಾನೆ? ಯದಿ = ಒಂದು ಪಕ್ಷದಲ್ಲಿ, ಈಶ್ವರಃ ಅಪಿ = ಪರಬ್ರಹ್ಮನೂ ಕೂಡ, ಅನೀಶಃ = ಯಾರಿಗೂ ಒಡೆಯನಲ್ಲದವನು ಅಶಕ್ತನು, ಸ್ಯಾತ್ = ಆಗುವುದಾದರೆ, ತರ್ಹಿ = ಆ ಪಕ್ಷದಲ್ಲಿ ಅನೀಶ = ಕ್ಷುದ್ರನಾದ ಜೀವನೇ, ತ್ವಂ = ನೀನು, ತಂ = ನಿನ್ನಂತಯೇ ಕ್ಷುದ್ರನಾದ ಆ ಪರಮಾತ್ಮನನ್ನು ಕಥಂ = ಹೇಗೆ (ಯಾವ ಪ್ರಯೋಜನಕ್ಕಾಗಿ), ಭಜೇಃ = ಸೇವಿಸುತ್ತೀಯೇ?

**ಅನುವಾದ–** ಈಶ್ವರನು ಮಹೇಶ್ವರನಾದರೆ ಅವನು ಅನೀಶನಾದ ಜೀವಭಾವವನ್ನು ಹೇಗೆ ಹೊಂದುತ್ತಾನೆ? ಒಂದು ಪಕ್ಷ ಈಶ್ವರನೂ ಅನೀಶನಾದರೆ ಅಂತಹ ಈಶ್ವರನನ್ನು ನೀನು ಹೇಗೆ ಭಜಿಸುತ್ತೀಯೇ?

**ಭಾವವಿಲಾಸಿನೀ–** ಮಹೇಶಸ್ಸರ್ವೇಶ್ವರಃ । ಅನೀಶತ್ವಂ ನೀಚಜೀವತ್ವಮ್ । ಭಜೇತ್ ಅಂಗೀಕುರ್ಯಾತ್ । ಉಚ್ಚಪದಮಪರಿತ್ಯಾಗೇನ ನೀಚಪದಮಸ್ವೀಕಾರಸ್ಯ ಕ್ವಾಪ್ಯದರ್ಶನಾದಿತಿ ಭಾವಃ । ದ್ವಿತೀಯ ಯೋಜನಿಕಾಯಾಮ್ । ಅನೀಶ ಹೇ ನೀಚಜೀವತ್ವಂ ತ್ವದ್ವದನೀಶಂತಂ ಕಥಮ್ ಭಜೇಃ । ಶ್ರವಣ ಮನನಾದ್ಯುಪಾಸನಯಾ ಪೂಜಯೇರಿತ್ಯರ್ಥಃ । ಸಮಾನ-ಯೋಗಕ್ಷೇಮಯೋಃ ಸೇವ್ಯಸೇವಕಭಾವಾಯೋಗಾದಿತಿ ಭಾವಃ ॥ ೬೦೦ ॥

**ವಿವರಣೆ–** ಪರಬ್ರಹ್ಮನು ಎಲ್ಲರಿಗೂ ಒಡೆಯನೂ, ಮಹಾಸಾಮರ್ಥ್ಯವುಳ್ಳವನೂ ಆಗಿದ್ದರೆ ಆತ ಕ್ಷುದ್ರವಾದ ಈ ಜಗತ್ತಿನಿಂದ ಅಭೇದವನ್ನೇಕೆ ಹೊಂದುತ್ತಾನೆ? ಉಚ್ಚಸ್ಥಾನದಲ್ಲಿರುವ ರಾಜರು, ಶ್ರೀಮಂತರು ಮೊದಲಾದವರು ನೀಚಸ್ಥಾನವನ್ನು ತಾವಾಗಿಯೇ ಸ್ವೀಕರಿಸುತ್ತಾರೇನು?

ಒಂದು ಪಕ್ಷದಲ್ಲಿ ಪರಮಾತ್ಮನೂ ಮಹಾಸಾಮರ್ಥ್ಯವುಳ್ಳವನಲ್ಲವೆಂದು ನೀವು ಹೇಳಿದರೆ ಕ್ಷುದ್ರರಾದ ನೀವಾದರೂ ನಿಮ್ಮಂತೆಯೇ ಕ್ಷುದ್ರನಾದ ಆ ಬ್ರಹ್ಮನನ್ನು ಏಕೆ ಸೇವಿಸುತ್ತೀರಿ? ಶ್ರವಣ, ಮನನಾದಿಗಳ ಮೂಲಕ ಆತನನ್ನು ಏಕೆ ಒಲಿಸಿಕೊಳ್ಳಲು ಯತ್ನಿಸುವಿರಿ? ಇಬ್ಬರೂ ಸಮಾನರೆಂದ ಮೇಲೆ ನೀವು ಸೇವಕರೂ ಆತ ಸೇವ್ಯನೂ ಆಗುವುದು ಹೇಗೆ? ಆತನಿಂದ ನಿಮಗೆ ಆಗುವ ಪ್ರಯೋಜನವಾದರೂ ಏನು?

**ಯದಿ ಸತ್ಯಾ ಹರೇರ್ಧರ್ಮಾಃ ಕಥಮೈಕ್ಯಂ ನ ಬಾಧಿತಂ ।**
**ಯದ್ಯಸತ್ಯಾ ಹರೇರ್ಧರ್ಮಾಃ ಕಥಮೈಕ್ಯಂ ನ ಬಾಧಿತಂ ॥ ೬೦೧ ॥**

**ಅರ್ಥ–** ಯದಿ = ಒಂದು ಪಕ್ಷದಲ್ಲಿ, ಹರೇಃ = ಭಗವಂತನ, ಧರ್ಮಾಃ = ಮಹಾಸಾಮರ್ಥ್ಯಮೊದಲಾದ ಗುಣಗಳು, ಸತ್ಯಾಃ ಸ್ಯುಃ = ಅಬಾಧಿತಗಳಾಗಿದ್ದರೆ, ತರ್ಹಿ = ಆಪಕ್ಷದಲ್ಲಿ ವಿರುದ್ಧಗುಣಗಳಿಗೆ ಐಕ್ಯವು ಕೂಡುವುದಿಲ್ಲವಾದ್ದರಿಂದ, ಐಕ್ಯಂ = ಜೀವೇಶ್ವರೈಕ್ಯವು, ಕಥಂ = ಹೇಗೆ, ಬಾಧಿತಂ = ಬಾಧಿತವಾಗಿದ್ದಾಗ್ಗಿ, ನ ಭವೇತ್ = ಆಗುವುದಿಲ್ಲ, ಯದಿ = ಒಂದು ಪಕ್ಷದಲ್ಲಿ, ಹರೇಃ = ಭಗವಂತನ, ಧರ್ಮಾಃ = ಗುಣಗಳು, ಅಸತ್ಯಾಃ ಸ್ಯುಃ = ಬಾಧಿತಗಳಾಗಿದ್ದರೆ, ತರ್ಹಿ = ಆ ಪಕ್ಷದಲ್ಲಿ ಐಕ್ಯವೂ ಕೂಡ ಧರ್ಮವೇ ಆದ್ದರಿಂದ, ಐಕ್ಯಂ ಅಪಿ = ಅಭೇದವೂ ಕೂಡ, ಕಥಂ = ಹೇಗೆ, ಬಾಧಿತಂ = ಬಾಧಿತವಾದದ್ದಾಗ್ಗಿ, ನ ಭವೇತ್ = ಆಗುವುದಿಲ್ಲ?

**ಅನುವಾದ–** ಹರಿಯ ಜಗತ್ಕರ್ತೃತ್ವಾದಿ ಧರ್ಮಗಳು ಸತ್ಯವಾದರೆ ಐಕ್ಯವು ಹೇಗೆ ಬಾಧಿತವಾಗುವುದಿಲ್ಲ? ಹರಿಯ ಧರ್ಮಗಳು ಅಸತ್ಯವಾಗುವುದಾದರೆ ಐಕ್ಯವೂ ಒಂದು ಧರ್ಮವಾದುದರಿಂದ ಐಕ್ಯವು ಹೇಗೆ ಬಾಧಿತವಾಗುವುದಿಲ್ಲ?

**ಭಾವವಿಲಾಸಿನೀ–** ನನು ಭಗವನ್ನಿಷ್ಠವಿರುದ್ಧಮಹೇಶತ್ವಾದಿಧರ್ಮಾಣಾಂ ಮಿಥ್ಯಾತ್ವಾದೈಕ್ಯಂ ಘಟತ ಇತ್ಯಾಶಂಕಾನಿರಾಸಾಯಾಹ – **ಯದಿ ಸತ್ಯಾ ಇತಿ** ॥ ಧರ್ಮಾಃ ಮಹಾಸಾಮರ್ಥ್ಯಮಹೇಶತ್ವ ಸಾರ್ವಜ್ಞಾದಯಃ । ಭಗವನ್ನಿಷ್ಠವಿರುದ್ಧಧರ್ಮಾಣಾಮಬಾಧಿತತ್ವೇ ಐಕ್ಯಬಾಧಾವಶ್ಯಂಭಾವಾದಿತಿ ಭಾವಃ । ದ್ವಿತೀಯಯೋಜನಿಕಾಯಾಂ ಹರಿಧರ್ಮಾಣಾಂ ಬಾಧಿತತ್ವೇ ಸರ್ವಜ್ಞಸ್ಯ ಭಾವಃ ಸಾರ್ವಜ್ಞ್ಯಮಿತಿವತ್ ಏಕಸ್ಯ ಭಾವ ಐಕ್ಯಮಿತಿ ವ್ಯುತ್ಪತ್ತೇಃ ಸಾಮ್ಯೇನ ತನ್ನಿಷ್ಠ ಜೀವೈಕ್ಯಸ್ಯಾಪಿ ಹರಿಧರ್ಮತ್ವಾವಿಶೇಷಾತ್ ತ್ವದ್ರೀತ್ಯಾ ಭಾವರೂಪಧರ್ಮನಿಷೇಧಕತ್ವಾಭಿಮತ ನಿರ್ಗುಣ-ಶ್ರುತೇರೈಕ್ಯೇಽಪಿ ಬಾಧಕತ್ವಾ ವಿಶೇಷಾತ್ಕಥಮೈಕ್ಯಂ ನ ಬಾಧಿತಮಿತ್ಯರ್ಥಃ ॥ ೬೦೧ ॥

**ವಿವರಣೆ**— ವಿರುದ್ಧಧರ್ಮಗಳಿರುವ ವಸ್ತುಗಳಿಗೆ ಐಕ್ಯವು ಇರವುದಿಲ್ಲವೆಂಬುದು ಸರಿಯೆ; ಆದರೆ ಭಗವಂತನ ಮಹಾಸಾಮರ್ಥ್ಯ ಮುಂತಾದ ಗುಣಗಳು ಮಿಥ್ಯಾ ಆದ್ದರಿಂದ ಆತನಿಗೂ ಜೀವರಿಗೂ ಐಕ್ಯಕೂಡುತ್ತದೆಂಬುದು ಅದ್ವೈತಿಗಳ ಶಂಕೆ. ಅದಕ್ಕೆ ಹೀಗೆ ಸಮಾಧಾನ-

ವೇದಾದಿಶಾಸ್ತ್ರಗಳು ಬಣ್ಣಿಸುವಂತೆ ಪರಮಪುರುಷನ ಗುಣಗಳನ್ನು ಸತ್ಯಗಳೆಂದು ನೀವು ಭಾವಿಸುವುದಾದರೆ ವಿರುದ್ಧಗುಣಗಳು ಇರುವ ಪ್ರಯುಕ್ತ ಐಕ್ಯವು ಇರಲಾರದು. ಆತನ ವಿಶಿಷ್ಟಗುಣಗಳು ಅಸತ್ಯಗಳಾದರೆ ಐಕ್ಯವೂ ಕೂಡ ಅವನ ಗುಣವೇ ಆದ ಪ್ರಯುಕ್ತ ಅದೂ ಅಸತ್ಯವೇ ಆಗಬೇಕು.

ಸರ್ವಜ್ಞನ ಗುಣ ಸರ್ವಜ್ಞತ್ವ ಹೇಗೋ ಹಾಗೆ ಏಕನ ಗುಣವೇ ಐಕ್ಯವಾದ್ದರಿಂದ ಜೀವೇಶೈಕ್ಯವೂ ಏಕನಾದ ಭಗವಂತನ ಗುಣವೇ ಆಗಿದೆ. ನೇಹ ನಾನಾಸ್ತಿ ಕಿಂಚನ ಎಂಬ ಶ್ರುತಿಗೆ ನೀವು ಭಗವಂತನಲ್ಲಿ ಭಾವರೂಪಧರ್ಮಗಳು ಯಾವವೂ ಇಲ್ಲವೆಂದು ಅರ್ಥಹೇಳುತ್ತೀರಿ. ಆದ್ದರಿಂದ ಆ ಶ್ರುತಿಯು ಭಗವಂತನ ಸರ್ವಜ್ಞತ್ವಾದಿಭಾವರೂಪ ಧರ್ಮಗಳನ್ನು ಅಸತ್ಯವೆಂದು ಹೇಳುತ್ತಿರುವಂತೆ ಭಾವರೂಪಧರ್ಮವಾದ ಐಕ್ಯವನ್ನು ಅಸತ್ಯವೆಂದು ಹೇಳುವುದರಿಂದ ಅದೂ ಬಾಧಿತವೇ ಆಗಬೇಕು.

**ಅಭೇದಾನ್ನೈಕ್ಯಬಾಧಶ್ಚೇತ್ ಕಥಂ ಧರ್ಮಸ್ಯ ಬಾಧನಮ್ ।**
**ಅಭಿನ್ನಧರ್ಮಬಾಧಶ್ಚೇತ್ ಕಥಂ ಧರ್ಮಸ್ಯ ಬಾಧನಮ್ ॥ ೬೦೨ ॥**

**ಅರ್ಥ**—ಅಭೇದಾತ್ = ಐಕ್ಯಕ್ಕೆ ಪರಮಾತ್ಮನೊಂದಿಗೆ ಅಭೇದವಿರುವುದರಿಂದ, ಐಕ್ಯಬಾಧಃ = ಐಕ್ಯಕ್ಕೆ ಶ್ರುತಿಯಿಂದ ಬಾಧವು, ನ ಚೇತ್ = ಇಲ್ಲವೆಂದಾದರೆ, ಧರ್ಮಸ್ಯ = ಪರಮಾತ್ಮನಿಂದ ಅಭಿನ್ನವಾದ, ಸರ್ವಜ್ಞತ್ವಕ್ಕೆ ಬಾಧನಂ = ಶ್ರುತಿಯಿಂದ ಬಾಧವು, ಕಥಂ = ಹೇಗೆ ಆಗುತ್ತದೆ? ಅಭಿನ್ನಧರ್ಮಬಾಧಃ ಚೇತ್ = ಪರಮಾತ್ಮನಿಂದ ಅಭಿನ್ನಗಳಾದ ಸರ್ವಜ್ಞತ್ವಾದಿಧರ್ಮಗಳಿಗೆ ಕೂಡ ಬಾಧವು ಇರುವುದಾದರೆ, ಧರ್ಮಸ್ಯ = ಸರ್ವಜ್ಞತ್ವಾದಿ ಧರ್ಮಗಳಿಗೆ ಮಾತ್ರ, ಬಾಧನಂ = ಬಾಧವು, ಕಥಂ = ಹೇಗೆ?

**ಅನುವಾದ**— ಬ್ರಹ್ಮನಿಗೂ ಮತ್ತು ಐಕ್ಯಕ್ಕೂ ಅಭೇದವಿರುವುದರಿಂದ ಐಕ್ಯಕ್ಕೆ ಬಾಧವಿಲ್ಲ ಎಂದು ಹೇಳುವುದಾದರೆ ಸರ್ವಜ್ಞತ್ವಾದಿ ಧರ್ಮಗಳಿಗೆ ಹೇಗೆ ಬಾಧವುಂಟಾಗುತ್ತದೆ? ಬ್ರಹ್ಮನಿಂದ ಅಭಿನ್ನವಾದ ಧರ್ಮಗಳಿಗೆ ಮಾತ್ರ ಬಾಧವೆಂದು ಹೇಳಿದರೆ ಅಭಿನ್ನವಾದ ಸರ್ವಜ್ಞತ್ವಾದಿ ಧರ್ಮಗಳಿಗೆ ಮಾತ್ರ ಹೇಗೆ ಬಾಧಿತವಾಗುತ್ತವೆ?

**ಭಾವವಿಲಾಸಿನೀ**— ನನು ನಿರ್ಗುಣಶ್ರುತ್ಯಾ ಭಿನ್ನಭಾವರೂಪಧರ್ಮಮಾತ್ರನಿಷೇಧೇನೈಕ್ಯಸ್ಯ ಚಾ-ಭೇದಾಂಗೀಕಾರಾತ್ ಕಥಂ ಬಾಧನಮಿತ್ಯಾಶಂಕ್ಯ ತರ್ಹಿ ಸಾರ್ವಜ್ಞಾದಿಧರ್ಮಾಣಾಮಪಿ । ನೇಹನಾನಾಸ್ತಿ ಕಿಂಚನ । ಏವಂ ಧರ್ಮಾನ್ ಪೃಥಕ್ಪಶ್ಯನ್ನಿತ್ಯಾದಿಶ್ರುತ್ಯಾಽಭೇದಾಂಗೀಕಾರಾತ್

**ಸಮಂ ಸಮಾಧಾನಮಿತ್ಯಾಹ – ಅಭೇದಾದಿತಿ ॥ ಧರ್ಮಸ್ಯ ಸಾರ್ವಜ್ಞಾದಿಧರ್ಮಸ್ಯ । ಜಾತ್ಯೇಕವಚನಮ್ । ಅಭಿನ್ನಧರ್ಮಬಾಧಶ್ಚೇತ್ । ಅಭಿನ್ನಾನಾಮಪಿ ಸಾರ್ವಜ್ಞಾದಿಧರ್ಮಾಣಾಂ ಬಾಧೋಽಂಗೀಕ್ರಿಯತೇ ಚೇತ್ । ಅತ್ರಾಪಿ ತದೇವೋತ್ತರಮಿತ್ಯಾಹ – ಕಥಂ ಧರ್ಮಸ್ಯೇತಿ ॥ ಧರ್ಮಸ್ಯ ಸಾರ್ವಜ್ಞಾದಿಧರ್ಮಸ್ಯೈವ । ಸರ್ವಂ ವಾಕ್ಯಂ ಸಾವಧಾರಣಮಿತಿ ನ್ಯಾಯಾತ್ ಕಥಂ ಬಾಧಾನವಮ್ । ಕಿಂತು ತ್ವದೈಕ್ಯಸ್ಯಾಪಿ ಬಾಧನಂ ಸ್ಯಾದಿತ್ಯರ್ಥಃ । ಅಭಿನ್ನಧರ್ಮಬಾಧಾಂಗೀಕಾರೇಽಭಿನ್ನಧರ್ಮತ್ವಾ ವಿಶೇಷಾತ್ ಸರ್ವಜ್ಞ್ಯವದ್ಭವದೈಕ್ಯಂ ಚ ಬಾಧಿತಂ ಸ್ಯಾದಿತಿ ಭಾವಃ । ಅಥವಾ ಕಥಂ ಧರ್ಮಸ್ಯೈವ ಬಾಧನಮ್ । ಅಭಿನ್ನಯೋರೇಕ ಬಾಧೇಽಪರಬಾಧಸ್ಯಾಪ್ಯಾವಶ್ಯಕತ್ವೇನ ಬಾಧಿತಧರ್ಮಾಭಿನ್ನಧರ್ಮಿಭೂತಬ್ರಹ್ಮಣೋಽಪಿ ಬಾಧನಂ ಸ್ಯಾದಿತ್ಯರ್ಥಃ ॥ ೬೦೨ ॥**

**ವಿವರಣೆ–** ನೇಹನಾನಾಸ್ತಿಕಿಂಚನ ಇತ್ಯಾದಿ ಶ್ರುತಿಗಳು ಪರಬ್ರಹ್ಮನಲ್ಲಿ ಆತನಿಗಿಂತ ಭಿನ್ನವಾದ ಯಾವ ಭಾವರೂಪಧರ್ಮವೂ ಇಲ್ಲ ಎಂದು ಮಾತ್ರ ಹೇಳುತ್ತದೆ. ಐಕ್ಯವು ಭಾವರೂಪಧರ್ಮವಾದರೂ ಅದು ಆತನಿಂದ ಭಿನ್ನವಾದ ಧರ್ಮವಲ್ಲ ಎಂದು ಅದ್ವೈತಿಗಳ ಶಂಕೆ. ಅದಕ್ಕೆ ಸಮಾಧಾನ - ನೇಹ ನಾನಾಸ್ತಿ ಕಿಂಚನ, ಏವಂ ಧರ್ಮಾನ್ ಪೃಥಕ್ ಪಶ್ಯನ್ ಇತ್ಯಾದಿ ವೇದವಾಕ್ಯಗಳು ಸರ್ವಜ್ಞತ್ವಾದಿಧರ್ಮಗಳನ್ನೂ ಪರಮಾತ್ಮನಿಂದ ಅಭಿನ್ನಗಳೆಂದೇ ವರ್ಣಿಸುತ್ತಿವೆ. ಆದ್ದರಿಂದ ಐಕ್ಯಕ್ಕೆ ಬಾಧವಿಲ್ಲವೆಂದಾದರೆ ಸರ್ವಜ್ಞತ್ವಾದಿಧರ್ಮಗಳಿಗಾದರೂ ಬಾಧೆ ಹೇಗೆ?

ಪರಬ್ರಹ್ಮನಿಂದ ಅಭಿನ್ನಗಳಾದರೂ ಸರ್ವಜ್ಞತ್ವಾದಿ ಧರ್ಮಗಳಿಗೆ ಬಾಧವಿದ್ದೇ ಇದೆಯೆಂದು ಅದ್ವೈತಿಗಳಿಗೆ ಆಗ್ರಹವಿರುವುದಾದರೆ ಸರ್ವಜ್ಞತ್ವಾದಿಧರ್ಮಗಳಿಗೆ ಮಾತ್ರವೇ ಆ ಬಾಧೆ ಏಕೆ ಎಂಬ ಪ್ರಶ್ನೆಗೆ ಉತ್ತರಿಸಬೇಕು. ಪರಮಾತ್ಮನಲ್ಲಿರುವ ಅಭಿನ್ನಧರ್ಮಗಳೆಲ್ಲದಕ್ಕೂ ಬಾಧೆ ಎಂದು ಒಪ್ಪಿದರೆ ಯಾವ ಯಾವ ಧರ್ಮವು ಅಭಿನ್ನವಾಗಿದೆಯೋ ಆ ಎಲ್ಲ ಧರ್ಮಕ್ಕೂ ಬಾಧೆಯೆಂಬುದು ಅನ್ವಯವಾಗಬೇಕು. ಆಗ ಐಕ್ಯಕ್ಕೂ ಬಾಧವು ಬರಲಿ ಎಂಬ ಆಪತ್ತಿ ಇದೆ.

ಅಥವಾ ಶ್ಲೋಕದ ಉತ್ತರಾರ್ಧವನ್ನು ಹೀಗೂ ವ್ಯಾಖ್ಯಾನಿಸಬಹುದು - ಅಭಿನ್ನಗಳಾದ ಎರಡು ವಸ್ತುಗಳಲ್ಲಿ ಒಂದಕ್ಕೆ ಬಾಧ ಬಂದರೆ ಮತ್ತೊಂದೂ ಬಾಧಿತವಾಗಲೇಬೇಕು. ಹಾಗಾಗಿ ಧರ್ಮವಾದ ಸರ್ವಜ್ಞತ್ವವು ಬಾಧಿತವಾದರೆ ಆ ಧರ್ಮದಿಂದ ಅಭಿನ್ನನಾದ ಧರ್ಮಿಯಾದ ಪರಬ್ರಹ್ಮನಿಗೂ ಬಾಧೆ ಬಂದೊದಗುವ ಪ್ರಸಂಗ ಬರುತ್ತದೆ.

**ಅಭೇದಾನ್ನ ಗುಣಾಶ್ಚೇತ್ ಸ್ಯುಃ ಕಥಮೈಕ್ಯಂ ಭವೇತ್ ತವ ।**
**ಅಭೇದೇಽಪಿ ಗುಣಾಶ್ಚೇತ್ ಸ್ಯುಃ ಕಥಮೈಕ್ಯಂ ಭವೇತ್ ತವ ॥ ೬೦೩ ॥**

**ಅರ್ಥ–** ಅಭೇದಾತ್ = ಸರ್ವಜ್ಞತ್ವಾದಿಗುಣಗಳು ಪರಬ್ರಹ್ಮನಿಂದ ಅಭಿನ್ನಗಳೆಂದು

ಒಪ್ಪುವುದರಿಂದ, ಗುಣಾಃ = ಸರ್ವಜ್ಞತ್ವಾದಿಗುಣಗಳು, ನ ಸ್ಯುಃ = ಇರುವುದೇ ಇಲ್ಲ, ಚೇತ್ = ಎಂದಾದರೆ, ತವ = ನಿನ್ನ ಐಕ್ಯಂ = ಐಕ್ಯವೂ ಬ್ರಹ್ಮಾಭಿನ್ನವೇ ಆದ್ದರಿಂದ, ಕಥಂ = ಹೇಗೆ, ಭವೇತ್ = ಇರುತ್ತದೆ? ಅಭೇದೇ ಅಪಿ = ಪರಮಾತ್ಮನಿಗೂ ಅವನ ಗುಣಗಳಾದ ಸರ್ವಜ್ಞತ್ವಾದಿಗಳಿಗೂ ಅಭೇದವೇ ಇದ್ದರೂ ಆ ಸರ್ವಜ್ಞತ್ವಾದಿಗಳು, ಗುಣಾಃ ಸ್ಯುಃ ಚೇತ್ = ಗುಣಗಳಾಗಿಯೇ ಇರುವವೆಂದಾದರೆ, ತವ = ನಿನ್ನ ಐಕ್ಯಂ = ಐಕ್ಯವೂ ಕೂಡ, ಕಥಂ = ಹೇಗೆ, ಭವೇತ್ = ಇರುತ್ತದೆ?

**ಅನುವಾದ–** ಧರ್ಮಧರ್ಮಿಗಳಿಗೆ ಅಭೇದವಿರುವುದರಿಂದ, ಗುಣಗಳು ಇಲ್ಲವೆಂದು ಹೇಳುವುದಾದರೆ ಐಕ್ಯವೂ ಒಂದು ಧರ್ಮವಾದುದರಿಂದ ಧರ್ಮವಾದ ಐಕ್ಯವನ್ನು ನೀನು ಹೇಗೆ ಒಪ್ಪುತ್ತೀಯೇ? ಅಭೇದವಿದ್ದರೂ ಗುಣಗಳು ಪ್ರತ್ಯೇಕವಾಗಿ ಇರುವುದಾದರೆ ನಿನ್ನ ಐಕ್ಯವಾದವು ಹೇಗೆ ಇರುತ್ತದೆ?

**ಭಾವವಿಲಾಸಿನೀ–** ಅಭೇದಾತ್ ಸರ್ವಜ್ಞಾದಿಗುಣಾನಾಂ ಬ್ರಹ್ಮಾಭೇದಾಂಗೀಕಾರಾತ್ । ಗುಣಾಃ ಸರ್ವಜ್ಞಾದಿಗುಣಾಃ । ನ ಸ್ಯುಃ ನ ಸ್ಯುರೇವ । ಅಭೇದಾಂಗೀಕಾರೇ ಏಕತರಮಾತ್ರಪರಿಶೇಷವಶ್ಯಂ-ಭಾವೇನ ಗುಣಾನಾಮಭಾವ ಏವ ಸ್ಯಾದಿತಿ ಚೇದಿತ್ಯರ್ಥಃ । ಉತ್ತರಮಾಹ – **ಕಥಮೈಕ್ಯಮಿತಿ** ॥ ಅಭೇದೇ ಏಕತರಮಾತ್ರ ಪರಿಶೇಷಪ್ರಸಂಗೇನ ಬ್ರಹ್ಮೈವಾಸ್ತಿ ನಾಪರಮಿತಿ ನ್ಯಾಯಸ್ಯ ಬ್ರಹ್ಮಾಭಿನ್ನ-ತಯಾಽಂಗೀಕೃತೇ ತ್ವದೈಕ್ಯೇಽಪಿ ಸಾಮ್ಯೇನ ತವೈಕ್ಯಂ ಕಥಂ ಭವೇದಿತ್ಯರ್ಥಃ । ಅಥವಾ ಗುಣಾಃ ಗುಣಭೂತಾಃ ಧರ್ಮಭೂತಾ ಇತ್ಯರ್ಥಃ । ನ ಸ್ಯುಃ । ಅಭಿನ್ನಯೋರ್ಧರ್ಮಧರ್ಮಿಭಾವಃ ಕಥಂ ಸ್ಯಾದಿತ್ಯರ್ಥಃ । ತರ್ಹಿ ತವೈಕ್ಯಮಪಿ ಕಥಂ ಸ್ಯಾತ್ । ಹರೇಃ ಸಾರ್ವಜ್ಞಮಿತಿವದ್ಧರೇರೈಕ್ಯಮಿತ್ಯ ಬಾಧಿತಧರ್ಮಧರ್ಮಿಭಾವವ್ಯವಹಾರಸ್ಯೋಭಯತ್ರ ಸಾಮ್ಯಾತ್ ಧರ್ಮಭೂತಮೈಕ್ಯಮಪಿ ಕಥಂ ಸ್ಯಾದಿತ್ಯರ್ಥಃ । ಧರ್ಮತಯಾ ಸಾರ್ವಜನೀನವ್ಯವಹಾರ ವಿಷಯಸ್ಯಾಪಿ ಧರ್ಮತ್ವಾಭಾವೇ ರೂಪರಸಾದೀನಾಮಪಿ ಧರ್ಮತ್ವಾ ಭಾವಪ್ರಸಂಗ ಇತಿ ಭಾವಃ । ಉಪಲಕ್ಷಣಂ ಚೈತತ್ । ಅತ್ಯಂತಂ ಭೇದಾಭಾವೇಽಭೇದೇಪಿ ಧರ್ಮಧರ್ಮಿಭಾವಾಖ್ಯವಿಶೇಷಾಭಾವೇ ಚ ಘಟಕಲಶಾದಿಶಬ್ದವತ್ ಬ್ರಹ್ಮೈಕ್ಯಾದಿ ಶಬ್ದಾನಾಮಪಿ ಪರ್ಯಾಯತ್ವ ಪ್ರಸಂಗ ಇತ್ಯಪಿ ದ್ರಷ್ಟವ್ಯಮ್ ॥ ೬೦೩ ॥

**ವಿವರಣೆ–** ಧರ್ಮಧರ್ಮಿಗಳಿಗೆ ಅಭೇದವನ್ನು ಒಪ್ಪಿದರೆ ಇಲ್ಲವೇ ಧರ್ಮಿ ಮಾತ್ರ ಇರಬೇಕು ಅಥವಾ ಧರ್ಮಮಾತ್ರ ಇರಬೇಕು. ನಾವು ಧರ್ಮಿಯಾದ ಬ್ರಹ್ಮನನ್ನು ಮಾತ್ರ ಒಪ್ಪುತ್ತೇವೆ, ಧರ್ಮವನ್ನು ಒಪ್ಪುವುದಿಲ್ಲ. ಆದ್ದರಿಂದ ಸರ್ವಜ್ಞತ್ವಾದಿ ಗುಣಗಳು ಇಲ್ಲ ಎಂದು ಹೇಳಿದರೆ ಐಕ್ಯವೂ ಒಂದು ಧರ್ಮವಾದ್ದರಿಂದ ಸರ್ವಜ್ಞತ್ವವನ್ನು ನಿರಾಕರಿಸಿದಂತೆ ಐಕ್ಯವನ್ನೂ ನಿರಾಕರಿಸು. ಧರ್ಮಧರ್ಮಿಗಳಿಗೆ ಅಭೇದವಿದ್ದರೂ ಧರ್ಮರೂಪವಾದ ಗುಣಗಳು ಇರುತ್ತವೆಂದು ಅಂಗೀಕರಿಸಿದರೆ ಜೀವವಿರುದ್ಧವಾದ ಸರ್ವಜ್ಞತ್ವಾದಿ ಗುಣಗಳು ಇರುವುದರಿಂದ ನೀನು ಐಕ್ಯವನ್ನು ಹೇಗೆ ಒಪ್ಪುತ್ತೀಯೆ ಎಂದು ಅಭಿಪ್ರಾಯ.

**ಶ್ರುತ್ಯುಕ್ತಂ ಯದಿ ತತ್ವಂ ಸ್ಯಾದದ್ವೈತಸ್ಯ ನ ತತ್ವತಾ ।**
**ಶ್ರುತ್ಯುಕ್ತಂ ಯದ್ಯತತ್ವಂ ಸ್ಯಾದದ್ವೈತಸ್ಯ ನ ತತ್ವತಾ ॥ ೬೦೪ ॥**

**ಅರ್ಥ–** ಯದಿ = ಒಂದು ಪಕ್ಷದಲ್ಲಿ, ಶ್ರುತ್ಯುಕ್ತಂ = ವೇದದಲ್ಲಿ ಹೇಳಲ್ಪಟ್ಟದ್ದೆಲ್ಲವೂ, ತತ್ವಂ = ಯಥಾರ್ಥವು, ಸ್ಯಾತ್ = ಆಗಿರುವುದಾದರೆ, ತರ್ಹಿ = ಆ ಪಕ್ಷದಲ್ಲಿ ವೇದೋಕ್ತಗಳಾದ ಸರ್ವಜ್ಞತ್ವಾದಿಗುಣಗಳೂ ಯಥಾರ್ಥಗಳಾಗಿರುವುದರಿಂದ, ಅದ್ವೈತಸ್ಯ = ಐಕ್ಯಕ್ಕೆ, ತತ್ವತಾ = ಯಥಾರ್ಥತ್ವವು, ನ ಸ್ಯಾತ್ = ಇರುವುದು ಸಾಧ್ಯವಿಲ್ಲ, ಯದಿ = ಒಂದು ವೇಳೆ, ಶ್ರುತ್ಯುಕ್ತಂ = ವೇದದಲ್ಲಿ ಹೇಳಿದ್ದೆಲ್ಲವೂ, ಅತತ್ವಂ = ಅಯಥಾರ್ಥವು, ಸ್ಯಾತ್ = ಆಗಿದ್ದರೆ, ತರ್ಹಿ = ಹಾಗಿದ್ದರೆ, ಅದ್ವೈತಸ್ಯ = ನಿರ್ಗುಣಶ್ರುತಿಯಿಂದ ಪ್ರತಿಪಾದಿತವಾದ ಅದ್ವೈತಕ್ಕೂ, ತತ್ವತಾ = ಯಾಥಾರ್ಥತ್ವವು, ನ ಸ್ಯಾತ್ = ಇರುವುದು ಸಾಧ್ಯವಿಲ್ಲ.

**ಅನುವಾದ–** ವೇದದಲ್ಲಿ ವರ್ಣಿತಗಳಾಗಿರುವ ವಿಷಯಗಳೆಲ್ಲವೂ ಸತ್ಯಗಳಾಗಿದ್ದರೆ ವೇದೋಕ್ತಗಳಾದ ಸರ್ವಜ್ಞತ್ವಾದಿ ಗುಣಗಳೂ ಸತ್ಯಗಳೇ ಆದ್ದರಿಂದ ವಿರುದ್ಧಗುಣ ಗಳುಳ್ಳ ಬ್ರಹ್ಮ -ಜೀವರಿಗೆ ಐಕ್ಯವೂ ಸತ್ಯವಾಗಲಾರದು.

ವೇದಗಳಲ್ಲಿ ಹೇಳಲ್ಪಟ್ಟ ಸಂಗತಿಗಳೆಲ್ಲವೂ ಅಸತ್ಯಗಳಾದರೆ ಐಕ್ಯವೂ ವೇದೋಕ್ತವೇ ಆಗಿದೆ ಮತ್ತು ಪರಮಾತ್ಮನಲ್ಲಿ ಯಾವುದೇ ಗುಣವಿಲ್ಲವೆಂದು ಹೇಳುವ ಶ್ರುತಿಯು ಸರ್ವಜ್ಞತ್ವಕ್ಕೂ ಐಕ್ಯಕ್ಕೂ ಸಮಾನವಾಗಿದೆ. ಹಾಗಾಗಿ ಅದ್ವೈತಕ್ಕೂ ಸತ್ಯತ್ವವಿಲ್ಲ ವೆಂದಾಯಿತು.

**ಭಾವವಿಲಾಸಿನೀ–** ಪೂರ್ವಮೈಕ್ಯಸ್ಯಾಪಿ ಬ್ರಹ್ಮಧರ್ಮತ್ವೇನ ತತ್ ಸಮಾನಯೋಗಕ್ಷೇಮತ್ವಾನ್ನ ಸಾರ್ವಜ್ಞಾದಿಧರ್ಮಾಣಾಂ ಮಿಥ್ಯಾತ್ವಮ್ । ಏವಂಚ ವಿರುದ್ಧಧರ್ಮಾಕ್ರಾಂತಯೋರ್ನ ಕದಾಪ್ಯೈಕ್ಯಮಿತಿ ಪ್ರತಿಬಂಧ್ಯಾ ಸಮರ್ಥಿತಮ್ । ಇದಾನೀಂ ಶ್ರುತಿಸಿದ್ಧತ್ವಾಚ್ಚ ನ ಸಾರ್ವಜ್ಞಾದಿ-ಧರ್ಮಮಿಥ್ಯಾತ್ವಮ್ । ಅತಶ್ಚ ನೈಕ್ಯಮಿತ್ಯಪಿ ತತ್‌ಪ್ರತಿಬಂಧ್ಯೈವ ಸಮರ್ಥಯತೇ ॥ **ಶ್ರುತ್ಯುಕ್ತಮಿತಿ** ॥ ಶ್ರುತ್ಯುಕ್ತಂ ಸರ್ವಂ ಯದಿ ತತ್ತ್ವಂ ಸ್ಯಾತ್ತದಾ ಶ್ರುತ್ಯುಕ್ತಸಾರ್ವಜ್ಞಾದೀನಾಮಪಿ ತತ್ವತಾಯಾ ಅವರ್ಜನೀಯತ್ವಾತ್ ವಿರುದ್ಧ ಧರ್ಮಾಕ್ರಾಂತಯೋರ್ಬ್ರಹ್ಮಜೀವಯೋರದ್ವೈತಸ್ಯ ನ ತತ್ವತಾ । ಶ್ರುತ್ಯುಕ್ತಂ ಸರ್ವಂ ಯದ್ಯತತ್ವಂ ಸ್ಯಾತ್ತದಾಽದ್ವೈತಸ್ಯಾಪಿ ಶ್ರುತ್ಯುಕ್ತತ್ವಾ- ವಿಶೇಷಾದ್ಧ-ರ್ಮಬಾಧಕತ್ವೇನಾಭಿಮತನಿರ್ಗುಣ ಶ್ರುತೇರುಕ್ತರೀತ್ಯೋಭಯತ್ರ ಸಾಮ್ಯಾತ್ ಶ್ರುತ್ಯುಕ್ತ-ತ್ವಾವಿಶೇಷೇಣ ನಿರ್ಗುಣತ್ವಸ್ಯಾಪ್ಯತತ್ವತಾ ಸಾಮ್ಯಾಚ್ಚಾದ್ವೈತಸ್ಯ ನ ತತ್ವತೇತಿ ಯೋಜನಾ । ಶ್ರುತ್ಯುಕ್ತಂ ಯತ್‌ಕಿಂಚದ್ಯದಿ ತತ್ವಂ ಸ್ಯಾತ್ತದಾ ಶ್ರುತ್ಯುಕ್ತತ್ವಾ ವಿಶೇಷಾದುಕ್ತರೀತ್ಯಾಬಾಧಕ ವಿಶೇಷಾಭಾವಾಚ್ಚ ಸಾರ್ವಜ್ಞಾದೀನಮಪಿ ತತ್ವತಾಽಪರಿಹಾರಾದದ್ವೈತಸ್ಯ ನ ತತ್ವತಾ । ಶ್ರುತ್ಯುಕ್ತಂ ಯತ್ ಕಿಂಚದ್ಯದ್ಯತತ್ವಂ ಸ್ಯಾತ್ತದಾ ಶ್ರುತ್ಯುಕ್ತತ್ವಾವಿಶೇಷಾತ್ ಬಾಧಕತ್ವೇನಾಭಿಮತಸ್ಯೋ ಭಯತ್ರ ಸಾಮ್ಯಾಚ್ಚದ್ವೈತಸ್ಯ ನ ತತ್ವತೇತಿ ವಾ ಯೋಜನಾ ॥ ೬೦೪ ॥

**ವಿವರಣೆ–** ಈ ಹಿಂದೆ ಐಕ್ಯ ಮತ್ತು ಸರ್ವಜ್ಞತ್ವಗಳೆರಡೂ ಬ್ರಹ್ಮನ ಧರ್ಮಗಳಾದ್ದರಿಂದ ಎರಡೂ ಸಮಾನಸ್ಥಿತಿ, ಗತಿಗಳನ್ನು ಹೊಂದಬೇಕಾದ್ದರಿಂದ ಸರ್ವಜ್ಞತ್ವಾದಿಗುಣಗಳು ಮಿಥ್ಯಾ ಅಲ್ಲ. ಹಾಗಾಗಿ ಪೂರ್ಣನಾದ ಈಶ್ವರನಿಗೂ ಅಲ್ಪರಾದ ಜೀವರಿಗೂ ಐಕ್ಯವಿಲ್ಲ ಎಂದು ಹೇಳಲಾಯಿತು.

ಅದ್ವೈತಿಗಳು ಒಪ್ಪಿದ ವಿಷಯವನ್ನೇ ಅವರಿಗೆ ಪ್ರತಿಬಂದಿ(ಪ್ರತ್ಯುತ್ತರ)ಯಾಗಿ ಹೇಳುತ್ತಿದ್ದಾರೆ-

ಟೀಕಾದಲ್ಲಿ ಶ್ರುತ್ಯುಕ್ತವಾದದ್ದು ಎಲ್ಲವೂ ಸತ್ಯವಾದರೂ ಅಸತ್ಯವಾದರೂ ಅದ್ವೈತವು ತತ್ವವಾಗಲಾರದು ಎಂದು ಹೇಳಲಾಗಿದೆ. ಅಲ್ಲಿ ಶ್ರುತ್ಯುಕ್ತಂ ಎಂಬ ಪದದ ಬಳಿಕ ಸರ್ವಂ ಎಂದು ಅಧ್ಯಾಹಾರಮಾಡಲಾಗದೆ. ಯತ್ ಕಿಂಚಿತ್ ಎಂದು ಅಧ್ಯಾಹಾರ ಮಾಡಿಯೂ ಇನ್ನೊಂದು ಅರ್ಥವನ್ನು ಹೇಳಬಹುದು.

ವೇದೋಕ್ತಗಳಾದ ಅನೇಕ ವಿಷಯಗಳಲ್ಲಿ ಕೆಲವಾದರೂ ಸತ್ಯಗಳಾಗಿದ್ದರೆ ಸರ್ವಜ್ಞತ್ವಾದಿಗುಣಗಳೂ ಶ್ರುತ್ಯುಕ್ತಗಳಾದ್ದರಿಂದ ಸತ್ಯಗಳಾಗಿರುವ ಸಾಧ್ಯತೆ ಇದೆ. ಅವುಗಳು ಸತ್ಯಗಳಲ್ಲ ಎಂದು ಹೇಳುವಂತಹ ನಿರ್ದಿಷ್ಟಶ್ರುತಿಯೂ (ಅಥವಾ ಬೇರೊಂದು ಪ್ರಮಾಣವೂ) ಇಲ್ಲ. ಹಾಗಾಗಿ ಈಶ್ವರನ ಸರ್ವಜ್ಞತ್ವಾದಿಗುಣಗಳು ಸತ್ಯಗಳಾಗುವುದನ್ನು ತಪ್ಪಿಸಲಾಗುವುದಿಲ್ಲವಾದ್ದರಿಂದ ವಿರುದ್ಧಗುಣಗಳುಳ್ಳ ಜೀವೇಶ್ವರರಿಗೆ ಐಕ್ಯವು ಇರಲಾರದು ಮತ್ತು ಅದು ತತ್ವವಾಗಲಾರದು.

ಇನ್ನು ವೇದೋಕ್ತಗಳಾದ ಅನೇಕವಿಷಯಗಳಲ್ಲಿ ಕೆಲವಾದರೂ ಅಸತ್ಯಗಳಾಗಿದ್ದರೆ ಐಕ್ಯವೂ ಶ್ರುತ್ಯುಕ್ತವಾದ್ದರಿಂದ ಅಸತ್ಯವಾಗುವ ಸಾಧ್ಯತೆಯಿದೆ. ಪರಮಾತ್ಮನಲ್ಲಿ ಯಾವುದೇ ಗುಣವಿಲ್ಲವೆಂದು ಹೇಳುವ ಶ್ರುತಿಯು ಐಕ್ಯಕ್ಕೂ ಸರ್ವಜ್ಞತ್ವಕ್ಕೂ ಸಮಾನವಾಗಿದೆ. ಹಾಗಾಗಿ ಜೀವೇಶ್ವರೈಕ್ಯವು ತತ್ವವಾಗಲಾರದು.

**ಯದಿ ಜ್ಞಾನಂ ಹರೇಃ ಸತ್ ಸ್ಯಾನ್ನ ಜ್ಞಾತಾಜ್ಞಾನವಾನಸೌ ।**
**ಯದಿ ಜ್ಞಾನಂ ಹರೇರ್ನಸ್ಯಾನ್ನ ಜ್ಞಾತಾಜ್ಞಾನವಾನಸೌ ॥ ೬೦೫ ॥**

**ಅರ್ಥ–** ಯದಿ = ಒಂದು ಪಕ್ಷದಲ್ಲಿ, ಹರೇಃ = ಪರಮಾತ್ಮನ, ಜ್ಞಾನಂ = ಜ್ಞಾನವು, ಸತ್ = (ಯಥಾರ್ಥವು) ವಾಸ್ತವವು, ಸ್ಯಾತ್ = ಆಗಿದ್ದರೆ, ತರ್ಹಿ = ಆ ಪಕ್ಷದಲ್ಲಿ, ಅಸೌ = ಈ ಹರಿಯು, ಜ್ಞಾತ ಅಜ್ಞಾನವಾನ್ = ತಿಳಿಯಲ್ಪಟ್ಟ ಎಲ್ಲ ವಸ್ತುಗಳ ಬಗ್ಗೆ ಅಜ್ಞಾನವುಳ್ಳವನು, ನ ಸ್ಯಾತ್ = ಆಗಲಾರನು. ಯದಿ = ಒಂದು ಪಕ್ಷದಲ್ಲಿ, ಹರೇಃ = ಪರಮಾತ್ಮನಿಗೆ, ಜ್ಞಾನಂ = ಜ್ಞಾನವು, ನ ಸ್ಯಾತ್ = ಇಲ್ಲದಿದ್ದರೆ, ಅಸೌ = ಅವನು, ಜ್ಞಾತ ಅಜ್ಞಾನವಾನ್ = ಪ್ರಾತೀತಿಕವಾದ ಅಜ್ಞಾನವುಳ್ಳವನು, ನ ಸ್ಯಾತ್ = ಆಗಲಾರನು.

**ಅನುವಾದ–** ಹರಿಯ ಜ್ಞಾನವು ಸತ್ಯವಾದರೆ ಅವನಿಗೆ ಅವನಿಂದ ತಿಳಿಯಲ್ಪಟ್ಟ ವಿಷಯದಲ್ಲಿ ಹೇಗೆ ಅಜ್ಞಾನವು ಇರುತ್ತದೆ. ಹರಿಗೆ ಜ್ಞಾನವು ಇಲ್ಲದಿದ್ದ ಪಕ್ಷದಲ್ಲಿ ಅವನಿಗೆ ಜ್ಞಾನಮಾತ್ರ ಸ್ವರೂಪವಾದ ಅಜ್ಞಾನವಾದರೂ ಹೇಗೆ ಸಿದ್ಧವಾಗುತ್ತದೆ?

**ಭಾವವಿಲಾಸಿನೀ–** ಇದಾನೀಂ ಪರಾಭಿಮತಾಜ್ಞಾನಖಂಡನಾಯೋಭಯತಃ ಪಾಶಾರಜ್ಜುಮಾಹ **– ಯದಿ ಜ್ಞಾನಮಿತಿ ॥** ಹರೇರ್ಜ್ಞಾನಂ ಯದಿ ಸತ್ಯಂ ಸ್ಯಾತ್ತದಾ ತಜ್ಜ್ಞಾನಸ್ಯ ಸರ್ವವಿಷಯತ್ವೇನ ಜ್ಞಾತೇಷು ಸರ್ವಪದಾರ್ಥೇಷು ಪುನರಜ್ಞಾನವಾನ್ನ । ಯದ್ಧಾತಂ ನ ತದಜ್ಞಾತಮಿತಿ ವದತಾ ತ್ವಯಾಽಪಿ ಜ್ಞಾತೇಽಜ್ಞಾನಾನಂಗೀಕಾರಾತ್ । ಹರೌ ಕಿಂಚಿತ್ ಜ್ಞಾನಸದ್ಭಾವೇ ತಸ್ಯ ಸರ್ವವಿಷಯತ್ವಾಪರಿಹಾರೇಣ ಪ್ರಥಮಪಕ್ಷಾಬಹಿರ್ಭಾವಾತ್ । ಜ್ಞಾನಮೇವ ನಾಸ್ತೀತಿ ದ್ವಿತೀಯಯೋಜನೀಕಾಯಾಂ ಜ್ಞಾತಮ್ । ಪ್ರಾತೀತಿಕಂ ಪ್ರತೀತಿಸಮಸಮಯವರ್ತೀತಿ ಯಾವತ್ । ಯದಜ್ಞಾನಂತದ್ವಾನಿತ್ಯರ್ಥಃ । ಸರ್ವಥಾ ಹರೇರ್ಜ್ಞಾನಾಭಾವೇಽಜ್ಞಾನಪ್ರತೀತೇರೇವ ತಸ್ಮಿನ್ನಯೋಗಾದಿತಿ ಭಾವಃ ॥ ೬೦೫ ॥

**ವಿವರಣೆ–** ಅದ್ವೈತಸಿದ್ಧಾಂತದಲ್ಲಿ ಜಗತ್ತನ್ನು ಪರಮಾತ್ಮನಲ್ಲಿ ಆರೋಪಿತವೆಂದು ಹೇಳಲಾಗಿದೆ. ಆ ಆರೋಪಕ್ಕೆ ಮೂಲವಾದ ಅಜ್ಞಾನವನ್ನು ಖಂಡಿಸಲು ಉಭಯತಃ ಪಾಶಾರಜ್ಜುಗಳನ್ನು ಈಗ ಹೇಳುತ್ತಿದ್ದಾರೆ -

ಹರಿಗೆ ಜ್ಞಾನವಿದೆಯೆನ್ನುವುದು ಸತ್ಯವಾಗಿದ್ದರೆ ಆ ಜ್ಞಾನವು ಎಲ್ಲವಿಷಯಗಳನ್ನೂ ವಿಷಯೀಕರಿಸುವಂತಹದ್ದಾಗಿರಬೇಕು. ಈಗಾಗಲೇ ತಿಳಿದ ಆ ವಿಷಯಗಳ ಬಗ್ಗೆ ಹರಿಗೆ ಅಜ್ಞಾನವಿರಲು ಸಾಧ್ಯವಿಲ್ಲ. ಯಾವುದು ತಿಳಿದವಿಷಯವಾಗಿದೆಯೋ ಅದು ಅಜ್ಞಾತವಾಗಿರಲು ಸಾಧ್ಯವಿಲ್ಲವೆಂದು ನೀವೂ ಕೂಡ ಈ ಸಂಗತಿಯನ್ನು ಒಪ್ಪಿದ್ದೀರಿ.

ಹರಿಗೆ ಜ್ಞಾನವಿದೆ ಆದರೆ ಸ್ವಲ್ಪವೇ ಇದೆ ಎಂದು ಅದ್ವೈತಿಗಳು ಒಪ್ಪಿದಲ್ಲಿ ಹೀಗೆ ಉತ್ತರಹೇಳಬೇಕು - ಹರಿಗೆ ಜ್ಞಾನವಿದ್ದರೆ ಅದು ಈ ವಿಷಯಕವಾಗಿದೆ, ಆ ವಿಷಯಕವಾಗಿಲ್ಲ ಎಂದು ಹೇಳಲು ಯಾವ ಆಧಾರವೂ ಇಲ್ಲ. ಹಾಗಾಗಿ ಹರಿಗೆ ಕಿಂಚಿತ್ ಜ್ಞಾನವೇ ಇದೆಯೆಂದು ಹೇಳುವುದು ಸರಿಯಲ್ಲವಾದ್ದರಿಂದ ಅದು ಸರ್ವವಿಷಯಕವೇ ಆಗಿರಬೇಕು. ಆದ್ದರಿಂದ ಹರಿಗೆ ಕಿಂಚಿತ್ಜ್ಞಾನವಿದೆಯೆಂಬ ಪಕ್ಷವೂ ಹರಿಗೆ ಜ್ಞಾನವಿದ್ದರೆ ಎಂಬ ಮೊದಲನೆಯ ಪಕ್ಷದಲ್ಲಿಯೇ ಸೇರುವುದರಿಂದ ಅಲ್ಲಿ ಬಂದ ದೋಷವೇ ಇದಕ್ಕೂ ಬರುತ್ತದೆ.

ಹರಿಗೆ ಜ್ಞಾನವೇ (ಪ್ರತೀತಿಯೇ) ಇಲ್ಲವೆಂದಾದರೆ ಕೂಡ ಆತನಿಗೆ ಅಜ್ಞಾನವು ಇರಲಾರದು. ಏಕೆಂದರೆ ಅದ್ವೈತಸಿದ್ಧಾಂತದಲ್ಲಿ ಅಜ್ಞಾನವನ್ನು ಸಾಧಿಸುವುದು ಅಜ್ಞಾನದ ಪ್ರತೀತಿಯಿಂದ. ಬ್ರಹ್ಮನಿಗೆ ಜ್ಞಾನವೇ ಇಲ್ಲವೆಂದರೆ ಅಜ್ಞಾನದ ಪ್ರತೀತಿಯೂ ಇಲ್ಲ. ಆದ್ದರಿಂದ ಅಜ್ಞಾನದ ಸಿದ್ಧಿಯೇ ಆಗುವುದಿಲ್ಲ.

**ಯದಿ ಜ್ಞಾನೇಽಪಿ ಚಾಜ್ಞಾನಂ ನ ಸಂಸಾರೋ ಹರೇರಯಮ್ ।**
**ಯದಿ ಜ್ಞಾನಂ ನ ಚಾಜ್ಞಾನಂ ನ ಸಂಸಾರೋ ಹರೇರಯಮ್ ॥ ೬೦೬ ॥**

**ಅರ್ಥ–** ಯದಿ = ಒಂದು ಪಕ್ಷದಲ್ಲಿ, ಹರೇಃ = ಭಗವಂತನಿಗೆ, ಜ್ಞಾನೇ ಸತ್ಯಪಿ = ಜ್ಞಾನವು ಇದ್ದಾಗಲೂ, ಅಜ್ಞಾನಂ ಚ = ಅಜ್ಞಾನವೂ ಕೂಡ, ಅಸ್ತಿ = ಇದೆಯೆಂದಾದರೆ, ತರ್ಹಿ = ಆ ಪಕ್ಷದಲ್ಲಿ, ಹರೇಃ = ಭಗವಂತನಿಗೆ, ಅಯಂ = ಈ ದುಃಖರೂಪವಾದ, ಸಂಸಾರಃ = ಸಂಸಾರವು, ನ = ಇಲ್ಲ. ಯದಿ = ಮತ್ತೊಂದು ಪಕ್ಷದಲ್ಲಿ, ಹರೇಃ = ಭಗವಂತನಿಗೆ, ಜ್ಞಾನೇ ಸತಿ = ಜ್ಞಾನವಿದ್ದಾಗ, ಅಜ್ಞಾನಂ ಚ = ಅಜ್ಞಾನವಾದರೂ, ನ = ಇಲ್ಲವೆಂದಾದರೆ, ತರ್ಹಿ = ಆ ಪಕ್ಷದಲ್ಲಿ, ಹರೇಃ = ಭಗವಂತನಿಗೆ, ಅಯಂ = ಈ, ಸಂಸಾರಃ = ಸಂಸಾರವು, ನ = ಇರಲಾರದು.

**ಅನುವಾದ–** ಹರಿಗೆ ಜ್ಞಾನವು ಇದ್ದರೂ ಅಜ್ಞಾನವು ಇರುವುದಾದರೆ ಆ ಅಜ್ಞಾನವು ಅವನ ಅಪರಿಚ್ಛಿನ್ನ ಆನಂದಾನುಭವರೂಪವಾದ ಜ್ಞಾನಕ್ಕೆ ವಿರೋಧಿ ಯಲ್ಲವಾದ್ದರಿಂದ ಹರಿಗೆ ಈ ಸಂಸಾರವಿಲ್ಲವೆಂದಾಯಿತು. ಒಂದು ಪಕ್ಷ ಹರಿಗೆ ಇರುವ ಜ್ಞಾನವು ಅವನ ಅಜ್ಞಾನವನ್ನು ನಾಶಮಾಡುವುದೆಂದು ಅಂಗೀಕರಿಸಿದರೆ ಆಗಲೂ ಹರಿಗೆ ಅಜ್ಞಾನವಿಲ್ಲದಿರುವುದರಿಂದ ಸಂಸಾರವು ಇಲ್ಲವೆಂದಾಯಿತು.

**ಭಾವವಿಲಾಸಿನೀ–** ಪೂರ್ವಂ ಯದ್ಜ್ಞಾತಂ ನ ತದಜ್ಞಾತಮಿತಿ ತತ್ ಪ್ರಕ್ರಿಯಾಮನು- ರುಧ್ಯೋಭಯತಃ ಪಾಶಾರಜ್ಜುರುಕ್ತಾ । ಇದಾನೀಂ ತತ್ ಪ್ರಕ್ರಿಯಾನನುಸರಣೇನಾಪ್ಯುಭಯತಃ ಪಾಶಾರಜ್ಜುಮಾಹ – **ಯದಿ ಜ್ಞಾನೇ ಇತಿ** ॥ ಜ್ಞಾನೇ ಸತ್ಯೇವಾಜ್ಞಾನಂ ಯದಿ ಹರಾವಂಗೀಕ್ರಿಯತೇ ತರ್ಹ್ಯನವಚ್ಛಿನ್ನಸ್ವ ಸ್ವರೂಪಾನಂದಾನುಭವಸ್ಯಾಪ್ಯವಿರೋಧೇನಾಯಮಾನಂದಾನುಭವಾದೀ- ನಾಮವಿರೋಧ್ಯಜ್ಞಾನಸಂಬಂಧಃ ಹರೇಃ ಸಂಸಾರೋ ನ । ಸಮವ್ಯಾಪ್ತಪ್ರಕೃತಿಸಂಬಂಧವತ್ ಜಡಸಂಬಂಧಮಾತ್ರತ್ವಾದದೋಷ ಇತಿ ಭಾವಃ । ದ್ವಿತೀಯಯೋಜನಿಕಾಯಾಂ ತು ಸರ್ವಜ್ಞೇ ಹರಾವಜ್ಞಾನಸ್ಯೈವಾಯೋಗಾದಜ್ಞಾನಸಂಬಂಧ ಏವ ನಾಭೂದಿತ್ಯರ್ಥಃ ॥ ೬೦೬ ॥

**ವಿವರಣೆ–** ಯಾವುದು ಜ್ಞಾತವಾಗಿದೆಯೋ ಅದು ಅಜ್ಞಾತವಾಗಿರಲಾರದು ಎಂಬ ಅದ್ವೈತಿಗಳ ಪ್ರಕ್ರಿಯೆಯನ್ನೇ ಅನುಸರಿಸಿ ಹಿಂದೆ ಉಭಯತಃ ಪಾಶಾರಜ್ಜುವನ್ನು ಹೇಳಲಾಗಿತ್ತು. ಈಗ ಅವರ ಪ್ರಕ್ರಿಯೆಯನ್ನು ಅವಲಂಬಿಸದೇ ಉಭಯತಃ ಪಾಶಾರಜ್ಜುವನ್ನು ಮೂಲಕಾರರು ಹೇಳುತ್ತಾರೆ.

ನೀವು ಹರಿಗೆ ಜ್ಞಾನದ ಸಂಗಡವೇ ಅಜ್ಞಾನವಿದೆ ಎನ್ನುವಿರೋ, ಅಥವಾ ಆತನಿಗೆ ಜ್ಞಾನವಿದ್ದಾಗ (ಇರುವುದರಿಂದ) ಅಜ್ಞಾನವಿಲ್ಲ ಎಂದು ಹೇಳುವಿರೋ ಎಂದು ಅದ್ವೈತಿಗಳನ್ನು ಕೇಳಬೇಕು. ಹರಿಗೆ ಜ್ಞಾನವಿದ್ದಾಗಲೇ ಅಜ್ಞಾನವಿದೆಯೆನ್ನುವ ಮೊದಲಪಕ್ಷದಲ್ಲಿ ಆ ಅಜ್ಞಾನವು ಹರಿಯ ಜ್ಞಾನಕ್ಕೆ, ಅನಂತವಾದ ಸ್ವರೂಪಾನಂದದ

ಅಜ್ಞಾನ ಸ್ವರೂಪೋ ಮೋಕ್ಷಃ ಸಾ ಸಂಸಾರ ಉದಾಹೃತಃ ॥

ಅನುಭವಕ್ಕೆ ವಿರೋಧಿಯಲ್ಲವೆಂದಾಯಿತು. ಹಾಗಾದರೆ ಹರಿಗೆ ಸಂಸಾರ ವಿಲ್ಲವೆಂದಾಯಿತು. ಏಕೆಂದರೆ ಸ್ವರೂಪಾನಂದವನ್ನು ಅನುಭವಿಸಲಾಗದೆ ದುಃಖದಲ್ಲಿ ತೊಳಲಾಡುವುದೇ ಸಂಸಾರವಲ್ಲವೇ? ಹರಿಗೆ ಸಂಸಾರವಿಲ್ಲವೆಂದರೆ ಮತ್ತಾರಿಗೆ ಸಂಸಾರ? ಜೀವಾತ್ಮರಂತೂ ಇಲ್ಲವೇ ಇಲ್ಲ. ಇರುವವನು ಪರಬ್ರಹ್ಮನಾದ ಹರಿಯೊಬ್ಬನೇ.

ಹರಿಗೆ ಜ್ಞಾನವಿದ್ದಾಗ (ಇರುವುದರಿಂದ) ಎಂಬ ಎರಡನೆಯ ಪಕ್ಷದಲ್ಲಿಯೂ ಸಂಸಾರವಿಲ್ಲವೆಂಬುದು ಸ್ಪಷ್ಟವಾಗಿದೆ.ಹರಿಗೆ ಜ್ಞಾನವಿದ್ದಾಗಲೇ ಅಜ್ಞಾನವೂ ಇದೆ ಎಂಬ ಮೊದಲನೆಯ ಪಕ್ಷದಲ್ಲಿ ಆ ಜಡವಾದ ಅಜ್ಞಾನದ ಸಂಬಂಧವು ಆತನಿಗೆ ಹಾನಿಕಾರಕವಲ್ಲ ಎಂದರ್ಥ. ಏಕೆಂದರೆ ಅಜ್ಞಾನದ ಸಂಬಂಧವಿರುವುದೇ ದೋಷವಲ್ಲ. ಆ ಅಜ್ಞಾನದ ದುಷ್ಪರಿಣಾಮಗಳಿಗೆ ಈಡಾಗುವುದೇ ದೋಷ. ಪರಮಾತ್ಮನಂತೆಯೇ ಎಲ್ಲಾ ದೇಶಕಾಲಗಳಲ್ಲಿಯೂ ಪ್ರಕೃತಿಯೂ ಇರುವುದರಿಂದ ಆತ ಅದರೊಂದಿಗೆ ಸಂಬಂಧ ಪಡೆದಿದ್ದಾನೆ. ಆದರೆ ಅದು ಆತನಿಗೆ ಯಾವ ಹಾನಿಯನ್ನೂ ತಂದೊಡ್ಡಿಲ್ಲ. ಅಂತೆಯೇ ಅಜ್ಞಾನಸಂಬಂಧವೂ ಅವನಿಗೆ ದೋಷಕರವಲ್ಲ. ಹೀಗೆ ಪರಮಾತ್ಮನಿಗೆ ಸಂಬಂಧಿಸಿದಂತೆ ಅಜ್ಞಾನವು ಜಡ (ನಿಷ್ಕ್ರಿಯ)ವಾಗಿರುವುದರಿಂದ ಜಡವಾದ ಅದರ, ಸಂಬಂಧವೂ ಆತನನ್ನು ಸಂಸಾರಕ್ಕೆ ಎಳೆದಿಲ್ಲ ಎಂದರ್ಥ.

**ಯದೀಶ್ವರೋ ಜಗದ್ವ್ಯಾಪೀ ಕಥಮೈಕ್ಯಂ ನ ಬಾಧಿತಮ್ ।**
**ಯದೀಶ್ವರೋ ನ ತದ್ವ್ಯಾಪೀ ಕಥಮೈಕ್ಯಂ ನ ಬಾಧಿತಮ್ ॥ ೬೦೭ ॥**

**ಅರ್ಥ–** ಯದಿ = ಒಂದು ಪಕ್ಷದಲ್ಲಿ, ಈಶ್ವರಃ = ಪರಮಾತ್ಮನು, ಜಗದ್ವ್ಯಾಪೀ = ಜಗತ್ತನ್ನು ವ್ಯಾಪಿಸಿಕೊಂಡು ಇದ್ದಾನೆಂದಾದರೆ, ತರ್ಹಿ = ಆ ಪಕ್ಷದಲ್ಲಿ, ಐಕ್ಯಂ = ಅಣುವಾದ ಜೀವನಿಗೆ ಪರಮಾತ್ಮನಿಂದ ಐಕ್ಯವು, ಬಾಧಿತಂ = ಪ್ರಮಾಣವಿರುದ್ಧವಾದದ್ದು, ಕಥಂ = ಹೇಗೆ, ನ ಸ್ಯಾತ್ = ಆಗಲಾರದು? ಯದಿ = ಮತ್ತೊಂದುಪಕ್ಷದಲ್ಲಿ, ಈಶ್ವರಃ = ಪರಮಾತ್ಮನು, ತದ್ವ್ಯಾಪೀ = ಜಗತ್ತನ್ನು ವ್ಯಾಪಿಸಿದವನು, ನ = ಅಲ್ಲವಾದರೆ, ತರ್ಹಿ = ಆ ಪಕ್ಷದಲ್ಲಿ, ಐಕ್ಯಂ = ಆತನಿಂದ ದೂರದಲ್ಲಿರುವ ಜೀವರಿಂದ ಐಕ್ಯವು, ಬಾಧಿತಂ = ಪ್ರಮಾಣವಿರುದ್ಧವು, ಕಥಂ = ಹೇಗೆ, ನ ಸ್ಯಾತ್ = ಆಗಲಾರದು?

**ಅನುವಾದ–** ಈಶ್ವರನು ಜಗತ್ತಿನಲ್ಲಿ ವ್ಯಾಪ್ತನಾಗಿದ್ದರೆ ಅಣುವಾದ ಜೀವನಿಗೆ ಅವನಿಂದ ಐಕ್ಯವು ಹೇಗೆ ಬಾಧಿತವಾಗುವುದಿಲ್ಲ? ಈಶ್ವರನು ಜಗದ್ವ್ಯಾಪಿ ಅಲ್ಲದಿದ್ದರೆ ಈಶ್ವರನು ಇಲ್ಲದಿದ್ದ ಕಡೆಯೂ ಜಗತ್ತು ಇದೆ ಎಂದು ಸಿದ್ಧವಾಗುವುದರಿಂದ ಆಗ ಐಕ್ಯವು ಏಕೆ ಬಾಧಿತ ವಾಗುವುದಿಲ್ಲ?

**ಭಾವವಿಲಾಸಿನೀ–** ಸಿಂಹಾವಲೋಕನನ್ಯಾಯೇನ ಪುನರಪ್ಯೈಕ್ಯಖಂಡನಾಯೋಭಯತಃ ಪಾಶಾರಜ್ಜುಮಾಹ – **ಯದೀಶ್ವರ ಇತಿ** ॥ ವ್ಯಾಪಕಸ್ಯ ಹರೇರಣುನಾ ಜೀವೇನೈಕ್ಯಾಯೋಗಾದಿತಿ

ಭಾವಃ ದ್ವಿತೀಯಯೋಜನಿಕಾಯಾಂತು । ಅವ್ಯಾಪಕಸ್ಯ ಹರೇರ್ವೈಕುಂಠೈಕದೇಶವಮಾತ್ರ-ವರ್ತಿತ್ವೇನ ವೈಕುಂಠತಿ ದೂರಸ್ಥಿತಭೂಲೋಕಗತಸ್ಯ ತ್ವದಾದೇರ್ಜೀವಸ್ಯೈಕ್ಯಂ ಕಥಂ ನ ಬಾಧಿತಮ್ । ಅಣೂನಾಮಪಿ ಜೀವಾನಾಂ ಪುಂಜೀಭೂಯಜಗದ್ವ್ಯಾಪಿತ್ವಾತ್ ತೈಃ ಸರ್ವೈಃ ಕಥಮೈಕ್ಯಂ ನ ಬಾಧಿತಮ್ । ವೈಕುಂಠಾಪರ ಭಾಗಸ್ಥಿತಮುಕ್ತಜೀವೈಶ್ಚ ಕಥಮೈಕ್ಯಂ ನ ಬಾಧಿತಮಿತಿ ಭಾವಃ ॥೬೦೭॥

**ವಿವರಣೆ–** ಪರಮಾತ್ಮನನ್ನು ಸರ್ವವ್ಯಾಪಕನೆಂದು ಒಪ್ಪಿದರೆ ಕೇವಲ ಅಣುಸ್ವರೂಪನಾದ ಜೀವರಿಗೆ ಆತನಿಂದ ಐಕ್ಯವಿರುವುದು ಸಾಧ್ಯವಿಲ್ಲ. ಪರಮಾತ್ಮನು ಸರ್ವವ್ಯಾಪಕನಾಗಿಲ್ಲದಿದ್ದರೆ ವೈಕುಂಠದಲ್ಲಿ ಮಾತ್ರ ಇರುವ ಆತನಿಂದ, ದೂರದ ಭೂಲೋಕದಲ್ಲಿರುವ ಜೀವರಿಗೆ ಐಕ್ಯವು ಹೇಗೆ ಸಾಧ್ಯ? ಜೀವರು ವೈಯಕ್ತಿಕವಾಗಿ ಅಣುಸ್ವರೂಪವುಳ್ಳವರಾದರೂ ಅವರ ಗುಂಪು ಸರ್ವಜಗದ್ವ್ಯಾಪಕವಾಗಿರುವುದರಿಂದ ಅವರೆಲ್ಲರೊಂದಿಗೆ ವಿಶ್ವದ ಮತ್ತೆಲ್ಲೋ ಇರುವ ಜೀವರ ಸಮಾಚಾರ ಅತ್ತ ಇರಲಿ, ವೈಕುಂಠ ಲೋಕದಲ್ಲಿಯೇ ಮತ್ತೊಂದೆಡೆ ಇರುವ ಮುಕ್ತಜೀವರಿಗಾದರೂ ವೈಕುಂಠದ ತನ್ನ ಭವನದಲ್ಲಿ ಮಾತ್ರ ಇರುವ ಈ ಪರಬ್ರಹ್ಮನೊಂದಿಗೆ ಐಕ್ಯ ಹೇಗೆ ಸಾಧ್ಯ?

ಋಜುಮಾರ್ಗೇ ಗತೋಽಪ್ಯಂಧೋ ಘಟ್ಟಕುಟ್ಯಾಂ ನಿಷೀದತಿ ।
ವಕ್ರಮಾರ್ಗೇ ಗತೋಽಪ್ಯಂಧೋ ಘಟ್ಟಕುಟ್ಯಾಂ ನಿಷೀದತಿ ॥ ೬೦೮ ॥

ಗತೇಽಪಿ ಪೃಷ್ಠತೋ ಗತ್ವಾ ಕಪೋಲೇ ತಾಡಯೇದ್ ಬಲೀ ।
ಆಗತಸ್ಯಾಪಿ ಮಂದಸ್ಯ ಕಪೋಲೇ ತಾಡಯೇದ್ ಬಲೀ ।
ಪಕ್ಷದ್ವಯೇಽಪ್ಯೇಕದೋಷಪ್ರಸಂಜನಮಪೀದೃಶಂ ॥ ೬೦೯ ॥

**ಅರ್ಥ–** ಅಂಧಃ = ಕುರುಡನು, ಋಜುಮಾರ್ಗೇ = ಸರಳವಾದ ಮಾರ್ಗದಲ್ಲಿ, ಗತಃ ಅಪಿ = ಹೋದರೂ ಕೂಡ, ಘಟ್ಟಕುಟ್ಯಾಂ = ಸುಂಕದಕಟ್ಟೆಯಲ್ಲಿ, ನಿಷೀದತಿ = ಸಿಲುಕಿ (ಕುಳಿತು)ಕೊಳ್ಳುತ್ತಾನೆ. ಅಂಧಃ = ಕುರುಡನು, ವಕ್ರಮಾರ್ಗೇ = ಬಳಸುದಾರಿಯಲ್ಲಿ, ಗತಃ ಅಪಿ = ಹೋದರೂ, ಘಟ್ಟಕುಟ್ಯಾಂ = ಸುಂಕದಕಟ್ಟೆಯಲ್ಲಿ, ನಿಷೀದತಿ = ಸಿಲುಕಿಬಿಡುತ್ತಾನೆ. ಅಂಧೇ = ಕುರುಡನು, ಗತೇ ಅಪಿ = ಸುಂಕದಕಟ್ಟೆಯನ್ನು ತಪ್ಪಿಸಿಕೊಂಡು ದಾಟಿಹೋದರೂ, ಬಲೀ = ಬಲಿಷ್ಠನಾದ ಸುಂಕದಕಟ್ಟೆಯ ಅಧಿಕಾರಿಯು, ಪೃಷ್ಠತಃ ಗತ್ವಾ = ಕುರುಡನನ್ನು ಹಿಂಬಾಲಿಸಿಕೊಂಡು ಹೋಗಿ, ಕಪೋಲೇ = ಅವನ ಕಪಾಳದಲ್ಲಿ (ಕಪಾಳಕ್ಕೆ) ತಾಡಯತಿ = ಹೊಡೆಯುತ್ತಾನೆ. ಬಲೀ = ಬಲಿಷ್ಠನಾದ ಸುಂಕದಕಟ್ಟೆಯ ಅಧಿಕಾರಿಯು, ಆಗತಸ್ಯ ಅಪಿ = ಸುಂಕದ ಕಟ್ಟೆಯಿಂದ ಮುಂದೆ ಹೋಗದಿದ್ದರೂ, ಮಂದಸ್ಯ = ಮೂರ್ಖನಾದ, ಅಂಧಸ್ಯ =ಕುರುಡನ, ಕಪೋಲೇ = ಕಪೋಲದಲ್ಲಿ, ತಾಡಯೇತ್ = ಹೊಡೆಯುತ್ತಾನೆ. ಪಕ್ಷದ್ವಯೇ

ಅಪಿ = ಎರಡು ಪಕ್ಷಗಳಲ್ಲಿಯೂ ಕೂಡ, ಏಕದೋಷಪ್ರಸಂಜನಂ = ಒಂದೇ ದೋಷದ ಸಾಧ್ಯತೆಯೂ ಕೂಡ, ಈದೃಶಂ = ಸುಂಕದಕಟ್ಟೆಗೆ ಬಂದ ಕುರುಡನ ಕಥೆಯಂತೆಯೇ ಇದೆ.

**ಅನುವಾದ–** ಕುರುಡನು ನೇರವಾದ ದಾರಿಯಲ್ಲಿ ಹೋದರೂ ಸುಂಕದಕಟ್ಟೆಯನ್ನೇ ತಲುಪುತ್ತಾನೆ. ಬಳಸು ದಾರಿಯಲ್ಲಿ ಹೋದರೂ ಸುಂಕದಕಟ್ಟೆಯನ್ನೇ ತಲುಪುತ್ತಾನೆ. ಕುರುಡನು ಸುಂಕದ ಕಟ್ಟೆಯಿಂದ ಮುಂದೆ ಹೋದರೂ ಅಧಿಕಾರಿಯು ಅವನನ್ನು ಹಿಂಬಾಲಿಸಿ ಬಂದು ಅವನ ಕೆನ್ನೆಗೆ ಹೊಡೆಯುತ್ತಾನೆ. ಕುರುಡನು ಆ ಸುಂಕದ ಕಟ್ಟೆಯಲ್ಲಿಯೇ ನಿಂತರೂ ಸಹ ಬಲಿಷ್ಠನಾದ ಅಧಿಕಾರಿಯು ದುರ್ಬಲನಾದ ಅವನ ಕೆನ್ನೆಗೆ ಹೊಡೆಯುತ್ತಾನೆ. ಎರಡು ಪಕ್ಷಗಳಲ್ಲಿಯೂ ಒಂದೇ ದೋಷವನ್ನು ಹೇಳುವುದು ಇಂತಹ ರೀತಿಯನ್ನೇ ಅವಲಂಬಿಸಿರುತ್ತದೆ.

**ಭಾವವಿಲಾಸಿನೀ–** ನನು ಪಕ್ಷದ್ವಯೇಽಪ್ಯೇಕೈನೈವ ದೂಷಣೇನ ಕಥಂ ಪರಸ್ಯ ಪಾತ ಇತ್ಯಾಶಂಕಾಯಾಂ ತಸ್ಯ ದೌರ್ಬಲ್ಯಾದಸ್ಮಾಕಂ ಪ್ರಾಬಲ್ಯಾಚ್ಚೇತಿ ವಕ್ತುಂ ತದುಪಯುಕ್ತಾಂ ನೀತಿಂ ಸಾರ್ಧಪದ್ಯದ್ವಯೇನಾಹ – **ಋಜುಮಾರ್ಗ ಇತಿ** ॥ ಘಟ್ಟಕುಟ್ಯಾಂ ಘಟ್ಟಸ್ಯ ವಿಷಮ-ಪ್ರದೇಶಸ್ಥಿತಗೇಹೇ ಶೌಲ್ಕಿಕಗೃಹ ಇತ್ಯರ್ಥಃ । ಅಂಧತ್ವದೋಷೇಣ ಯಥಾ ಮಾರ್ಗದ್ವಯಗ-ಮನೇಽಪ್ಯೇಕಸ್ಥಲೇ ಬಲಾತ್ ಪ್ರವೇಶಸ್ತಥಾ ಪರಸ್ಯ ಯುಕ್ತ್ಯಂಧತಯಾ ಪಕ್ಷದ್ವಯೇಽಪ್ಯೇಕ-ದೂಷಣಭಾಗಿತ್ವಮಿತಿ ಭಾವಃ । ದ್ವಿತೀಯಪದ್ಯೇ ತು ಭಾವಃ ಸ್ಪಷ್ಟ ಏವ ॥ ೬೦೮-೬೦೯ ॥

**ವಿವರಣೆ–** ಹಿಂದೆ ಹೇಳಿದ ಉಭಯತಃ ಪಾಶಾರಜ್ಜುವು ಅದ್ವೈತಿಗಳ ಸೋಲಿಗೆ ಕಾರಣವಾಗುವುದು ಹೇಗೆ? ಎರಡೂ ಪಕ್ಷಗಳಲ್ಲಿ ಒಂದೇ ದೋಷವನ್ನು ಹೇಳಲಾಗಿದೆಯಲ್ಲವೆ ಎಂದು ಶಂಕೆ.

ಅದಕ್ಕೆ ಉತ್ತರ ಹೀಗಿದೆ - ಅದ್ವೈತಿಗಳ ಪಕ್ಷ ದುರ್ಬಲವೂ, ನಮ್ಮ ಪಕ್ಷಪ್ರಬಲವೂ ಆಗಿರುವುದರಿಂದ, ಎರಡೂ ಪಕ್ಷಗಳಲ್ಲಿಯೂ ಒಂದೇ ದೋಷ ಹೇಳಿದರೂ ಅವರ ಸೋಲಿಗೆ ಕಾರಣವಾಗುತ್ತದೆ. ಇದಕ್ಕೆ ಒಂದು ನೀತಿಯುಕ್ತ ದೃಷ್ಟಾಂತವೂ ಇದೆ.

ಮೂರ್ಖನೂ, ಕುರುಡನೂ ಆದ ವ್ಯಾಪಾರಿಯೋರ್ವನು ತನ್ನ ಸರಕುಗಳಿಗೆ ಬೀಳಬಹುದಾದ ಸುಂಕವನ್ನು ತಪ್ಪಿಸಿಕೊಳ್ಳಲು ಯಾವ ಪ್ರಯತ್ನ ಮಾಡಿದರೂ ಸಫಲನಾಗಲಾರನು. ಆತನು ಹಿಡಿದ ಹಾದಿಯು ನೇರವಾಗಿ ಸುಂಕದಕಟ್ಟೆಗೆ ಹೋಗವಂತಹದಾಗಿದ್ದರೂ, ದೃಷ್ಟಿಹೀನನಾದ್ದರಿಂದ ಅದನ್ನು ವಕ್ರದಾರಿಎಂದು ತಿಳಿದು ಸುಂಕ ತಪ್ಪಿಸಿಕೊಳ್ಳಲು ಅದೇ ಹಾದಿ ಹಿಡಿದು ಬಂದು ಸಿಲುಕಿಕೊಳ್ಳುತ್ತಾನೆ. ಈತ ಸುಂಕತಪ್ಪಿಸಿಕೊಳ್ಳುವ ಪ್ರಯತ್ನದಲ್ಲಿದ್ದುದ್ದನ್ನು ಕಂಡಹಿಡಿದ ಬಲಿಷ್ಠನಾದ ಅಧಿಕಾರಿಯು ಆತನ ಕಪಾಲಕ್ಕೇ ಹೊಡೆಯುತ್ತಾನೆ. (ಬಲಾತ್ಕಾರದಿಂದ ಸುಂಕ ವಸೂಲಿ ಮಾಡುತ್ತಾನೆ.)

ಇನ್ನು ಕುರುಡನು ಕಟ್ಟೆಯನ್ನು ತಪ್ಪಿಸಿಕೊಳ್ಳಲು ಬಳಸುದಾರಿಯನ್ನು ಹಿಡಿದು ಕಟ್ಟೆಯನ್ನು ದಾಟಿಹೋದರೂ ಸ್ವಲ್ಪಹೊತ್ತಿನಲ್ಲಿಯೇ ಅಧಿಕಾರಿಗೆ ಅದು ಗೊತ್ತಾಗಿ ಆತ

ಕುರುಡನನ್ನು ಬೆನ್ನಟ್ಟಿ ಹೋಗಿ ಹಿಡಿಯುತ್ತಾನೆ; ಕಪಾಳಕ್ಕೆ ಹೊಡೆದು ಸುಂಕ ವಸೂಲಿ ಮಾಡುತ್ತಾನೆ.

ಹೀಗೆ ಸುಂಕದ ಅಧಿಕಾರಿಯ ಕೈಗೆ ಸಿಲುಕಿ ಸುಂಕ ತೆತ್ತ ಕುರುಡನ ಪಾಡಿನಂತೆಯೇ ಎರಡೂ ಪಕ್ಷಗಳಲ್ಲಿಯೂ ಒಂದೇ ದೋಷವನ್ನು ಎದುರಿಸುತ್ತಿರುವ ಅದ್ವೈತಿಗಳ ಪರಿಸ್ಥಿತಿಯೂ ಇದೆ.

**ಅಲ್ಪೋಽಲ್ಪವಿತ್ತೇಽಪ್ಯಾತ್ಮಾನಂ ವಿತ್ತೇಶಂ ಕಿಂ ನ ಮನ್ಯತೇ ।**
**ಸರ್ವಜ್ಞಬ್ರಹ್ಮತಾಽಲ್ಪಜ್ಞೇಷ್ವಪ್ಯೇವಂ ಹಿ ಕುವಾದಿನಾಮ್ ॥ ೬೧೦ ॥**

**ಅರ್ಥ–** ಅಲ್ಪಃ = ಕ್ಷುದ್ರನು, ಅಲ್ಪವಿತ್ತೇ ಅಪಿ = ತನ್ನ ಬಳಿ ಸ್ವಲ್ಪವೇ ಹಣವಿದ್ದರೂ, ಆತ್ಮಾನಂ = ತನ್ನನ್ನು, ವಿತ್ತೇಶಂ = ಕುಬೇರನೆಂದು, ನ ಮನ್ಯತೇ ಕಿಂ? = ಭಾವಿಸಿಕೊಳ್ಳುವುದಿಲ್ಲವೇನು? ಅಲ್ಪಜ್ಞೇಷು = ಅಲ್ಪಜ್ಞರಾದ ಜೀವರಲ್ಲಿ ಕುವಾದಿನಾಂ = ದುರ್ವಾದಿಗಳಾದ ಅದ್ವೈತಿಗಳ, ಸರ್ವಜ್ಞಬ್ರಹ್ಮತಾ = ಸರ್ವಜ್ಞನಾದ ಬ್ರಹ್ಮನ ಅಭೇದದ ಕಲ್ಪನೆಯು, ಅಪಿ = ಕೂಡ, ಏವಂ ಏವ ಹಿ = ಹೀಗೆಯೇ ಇದೆ.

**ಅನುವಾದ–** ಕ್ಷುದ್ರನಾದವನು ತನ್ನ ಬಳಿ ಸ್ವಲ್ಪವೇ ಧನವಿದ್ದರೂ ಕೂಡ ತನ್ನನ್ನು ಶ್ರೀಮಂತನೆಂದು ಭಾವಿಸುವುದಿಲ್ಲವೇ? ಕುವಾದಿಗಳು ಅಲ್ಪಜ್ಞರಾದ ತಮ್ಮಲ್ಲಿ ಸರ್ವಜ್ಞನಾದ ಬ್ರಹ್ಮನ ಅಭೇದವನ್ನು ಅಂಗೀಕರಿಸುವುದೂ ಸಹ ಇದರಂತೆಯೇ.

**ಭಾವವಿಲಾಸಿನೀ–** ಇದಾನೀಂ ದುರ್ನೀತಿಪರತ್ವಾದಪಿ ಮಾಯಿಮತಮಬದ್ಧಮಿತ್ಯಾಹ – ಅಲ್ಪ ಇತಿ ॥ ಅಲ್ಪಃ ನೀಚಃ । ಖಲ ಇತಿ ಯಾವತ್ ॥ ಕುವಾದಿನಾಂ ಮಾಯಾವಾದಿನಾಮ್ । ಅಲ್ಪಜ್ಞೇಷು ಜೀವೇಷು । ಸರ್ವಜ್ಞಬ್ರಹ್ಮತಾಪಿ ಸರ್ವಜ್ಞಬ್ರಹ್ಮತ್ವಭಾವನಾಪಿ । ಏವಂ ಹಿ ಪೂರ್ವೋಕ್ತ-ಲೌಕಿಕಖಲಸ್ಯ ಭಾವನಾವದ್ಧೀತಿ ಯೋಜನಾ ॥ ೬೧೦ ॥

**ವಿವರಣೆ–** ಕ್ಷುದ್ರನು ತನ್ನ ಬಳಿ ಸ್ವಲ್ಪವೇ ಹಣವಿದ್ದರೂ ತನ್ನನ್ನು ಕುಬೇರನೆಂದೇ ಭಾವಿಸಿಕೊಂಡು ಬೀಗುವುದಿಲ್ಲವೇ? ದುರ್ವಾದಿಗಳಾದ ಅದ್ವೈತಿಗಳು ಅಲ್ಪಜ್ಞರಾದ ಜೀವರಿಗೆ ಸರ್ವಜ್ಞನಾದ ಪರಮಾತ್ಮನಿಂದ ಅಭೇದವನ್ನು ಹೇಳುವುದೂ ಇದೇ ರೀತಿಯಾಗಿದೆ.

**ಅಹಂಕಾರೋ ಹಿ ಲೋಕಾನಾಂ ವಿಕಾರೋ ದುಸ್ತ್ಯಜೋ ಮಹಾನ್ ।**
**ಅಧಮಾದಧಮೋ ಜೀವೋ ಹ್ಯಧಿಕಾದಧಿಕಃ ಕಿಲ ॥ ೬೧೧ ॥**

**ಅರ್ಥ–** ಲೋಕಾನಾಂ = ಜನರ, ಅಹಂಕಾರಃ = ಅಹಂಕಾರವೆಂಬುದು, ದುಸ್ತ್ಯಜಃ = ಸುಲಭವಾಗಿ ಬಿಡಲಾಗದ, ಮಹಾನ್ = ದೊಡ್ಡ ವಿಕಾರಃ ಹಿ= ಮನೋವಿಕಾರ

ವಾಗಿದೆಯಷ್ಟೇ! ಅಧಮಾತ್ = ನೀಚನಿಗಿಂತ, ಅಧಮಃ = ನೀಚನಾದ, ಜೀವಃ =ಜೀವಾತ್ಮನು, ಅಧಿಕಾತ್ = ದೊಡ್ಡವನಿಗಿಂತ, ಅಧಿಕಃ ಕಿಲ = ದೊಡ್ಡವನಾದ ಪರಮಾತ್ಮನೇ ಆಗಿದ್ದಾನಷ್ಟೇ! ಹಿ = ಇದು ಅದ್ವೈತಮತದ ಅಭಿಪ್ರಾಯವಾಗಿದೆ.

**ಅನುವಾದ–** ಅಹಂಕಾರವೆಂಬುದು ಜನರಿಗೆ ಪರಿತ್ಯಜಿಸಲು ಸಾಧ್ಯವಿಲ್ಲದಂತಹ ದೊಡ್ಡ ಮನೋವಿಕಾರವಾಗಿದೆಯಷ್ಟೇ? ಅಧಮಾಧಮನಾದ ಜೀವನು ಉತ್ತಮೋತ್ತಮ ನಾದ ಬ್ರಹ್ಮನಾಗಿದ್ದಾನಷ್ಟೇ?

**ಭಾವವಿಲಾಸಿನೀ–** ಅಧಿಕಾದಧಿಕಃ ಉತ್ತಮೋತ್ತಮಃ। ಯಥಾಽಹಂಕಾರೀ ಸ್ವಸ್ಮಿನ್ನವಿದ್ಯಮಾನಮಪಿ ಮಹಿಮಾನಂ ಸಭಾಮಧ್ಯೇ ಖ್ಯಾಪಯತಿ ತಥಾಽಧಮಾಧಮಜೀವಸ್ಯೋತ್ತಮೋತ್ತಮ ನಾರಾಯಣತ್ವಸ್ಯ ಖ್ಯಾಪನಮಪೀತಿ ಭಾವಃ ॥ ೬೧೧ ॥

**ವಿವರಣೆ–** ಅಹಂಕಾರವೆಂಬುದು ಮನುಷ್ಯನ ಮನಸ್ಸಿನ ಸುಲಭವಾಗಿ ಹೋಗದಂತಹ ಕೆಟ್ಟ ವಿಕಾರವೇ ಆಗಿದೆ. ಈ ಅಹಂಕಾರದಿಂದಾಗಿಯೇ ವ್ಯಕ್ತಿಯು ತನ್ನಲ್ಲಿರದ ಮಹತ್ವವನ್ನು ಎಲ್ಲರೆದುರಿಗೆ ನಿರ್ಲಜ್ಜೆಯಿಂದ ಹೇಳಿಕೊಳ್ಳುವುದು. ನೀಚರಿಗಿಂತ ನೀಚನಾದ ಜೀವನನ್ನು ಅಧಿಕರಿಗಿಂತ ಅಧಿಕನಾದ ಪರಮಾತ್ಮನಿಂದ ಅಭಿನ್ನನೆಂದು ಹೇಳುವುದು ಇಂತಹ ಪ್ರಯತ್ನವೇ ಆಗಿದೆ.

**ಸತ್ಸು ಸ್ವದಾರೇಷು ಖಲಃ ಪರದಾರಾನಪೇಕ್ಷತೇ ।**
**ಲೋಕಮಾತೃಪತಿತ್ವೇ ಕಿಂ ನಾಶಾ ತೇಷಾಂ ತಮೋಜುಷಾಮ್ ॥ ೬೧೨ ॥**

**ಅರ್ಥ–** ಖಲಃ = ದುಷ್ಟನು, ಸ್ವದಾರೇಷು = ತನ್ನ ಪತ್ನಿಯು, ಸತ್ಸು = ಇರುತ್ತಿರಲು, ಪರದಾರಾನ್ = ಮತ್ತೊಬ್ಬರ (ದೊಡ್ಡವರ) ಪತ್ನಿಯನ್ನು ಅಪೇಕ್ಷತೇ = ಅಪೇಕ್ಷಿಸುತ್ತಾನೆ. ತಮೋಜುಷಾಂ = ಅಂಧಂತಮಸ್ಸಿಗೆ ಯೋಗ್ಯರಾದ, ತೇಷಾಂ = ಆ ಅದ್ವೈತಿಗಳಿಗೆ, ಲೋಕಮಾತೃಪತಿತ್ವೇ = ಸಮಸ್ತವಿಶ್ವಕ್ಕೆ ತಾಯಿಯಾದ ಲಕ್ಷ್ಮೀದೇವಿಗೆ ಗಂಡನಾಗುವುದರಲ್ಲಿ, ಆಶಾ = ಆಸೆಯು, ನ ಅಸ್ತಿ ಕಿಂ? = ಇಲ್ಲವೇನು?

**ಅನುವಾದ–** ಮನೆಯಲ್ಲಿ ಪತ್ನಿಯಿದ್ದರೂ ದುಷ್ಟನು ಮತ್ತೊಬ್ಬರ ಪತ್ನಿಯನ್ನು ಬಯಸುತ್ತಾನೆ. ತಮೋಯೋಗ್ಯರಾದ ಈ ಅದ್ವೈತಿಗಳಿಗೆ ಜಗನ್ಮಾತೆಯಾದ ಲಕ್ಷ್ಮೀದೇವಿಯ ಗಂಡನಾಗುವ ಹಂಬಲವಿಲ್ಲವೇನು?

**ಭಾವವಿಲಾಸಿನೀ–** ಪರದಾರಾನ್ ಪರೇಷಾಂ ಅನ್ಯೇಷಾಂ ದಾರಾನ್ । ಪರೇಷಾಮುತ್ತಮಾನಾಂ ಗುರ್ವಾದೀನಾಂ ದಾರಾನ್ವಾ। ಸ್ವಾಧಿಕಗುರ್ವಾದಿಪತ್ನೀಕಾಮಿತಾಯಾಂ ತು ಗುರುತಲ್ಪಗತ್ವಾಖ್ಯ ಮಹಾಪಾತಕಂ ಕಿಲ । ಏವಂ ಸತಿ ಸ್ವಾವರದಾರಾಪೇಕ್ಷಾಪಿ ಪಾಪಂಕಿಲ । ಉತ್ತಮೋತ್ತಮ ನಾರಾಯಣಸ್ಯ ಪತ್ನ್ಯಾಃ ಲಕ್ಷ್ಮ್ಯಾಃ ಲಕ್ಷ್ಮೀಪತಿ ರಹಂ ಭವಿಷ್ಯಮೀತಿ ಕಾಮನಾಯಾಂ

ಪಂಚಮಹಾಪಾತಕಾದಪ್ಯಧಿಕಪಾತಕಂ ಭವತ್ಯೇವೇತಿ ಕಿಮು ವಕ್ತವ್ಯಮ್ । ಅತ ಏವ ತಮೋಜುಷಮಿತ್ಯುಕ್ತಮ್ । ಲೋಕಮಾತೃಪದಪ್ರಯೋಗೇಣ ಮಾತೃಗಮನಾಖ್ಯದೋಷಶ್ಚ ಸ್ಯಾದಿತಿ ಸೂಚಿತಮ್ ॥ ೬೧೨ ॥

**ವಿವರಣೆ–** ಪರಸ್ತ್ರೀ ಎಂದರೆ, ಪರ - ಗುರುಹಿರಿಯರ ಪತ್ನಿ ಎಂದೂ ಅರ್ಥವಾಗಬಹುದು. ತನಗೆ ಸಮಾನರಾದವರ, ತನಗಿಂತ ಕಡಿಮೆಯಾದವರ ಪತ್ನಿಯನ್ನು ಬಯಸಿದರೂ ಪಾಪವೇ. ತನಗಿಂತ ಉತ್ತಮರ ಪತ್ನಿಯನ್ನು ಬಯಸಿದರೆ ಗುರುತಲ್ಪಗಾಮಿತ್ವ ಎಂಬ ದೊಡ್ಡ ಪಾಪವು ಬರುತ್ತದೆ. ಎಲ್ಲರಿಗಿಂತ ಉತ್ತಮನಾದ ನಾರಾಯಣನ ಪತ್ನಿಯನ್ನು ಬಯಸಿದರೆ (ನಾನು ಲಕ್ಷ್ಮೀಪತಿಯಾಗುವೆನೆಂದು ಕಾಮಿಸಿದರೆ) ಪಂಚಮಹಾಪಾತಕಗಳಿಗಿಂತ ದೊಡ್ಡ ಪಾಪ ಎಂದರ್ಥ.

ಮಾತೃಗಮನವೆಂಬ ಮತ್ತೊಂದು ದೋಷವೂ ಬರುತ್ತದೆಂದು ಲೋಕಮಾತೃ ಎಂಬ ಶಬ್ದದಿಂದ ಮೂಲಕಾರರು ತೋರಿಸಿದ್ದಾರೆ ಮತ್ತು ಹೀಗೆ ಮಹಾಪಾಪಭಾಜನರಾದ್ದರಿಂದಲೇ ಅದ್ವೈತಿಗಳನ್ನು ತಮೋಜುಷಾಂ ಎಂದು ಕರೆದಿದ್ದಾರೆ.

**ದೈವೇ ಗುರೌ ಚ ಯಸ್ಯಾಹಂಭಾವೋ ದೇವದ್ವಿಡೇವ ಸಃ ।**
**ರಮೋಮಾಕಾಂತತೋತ್ಕಂಠಾ ದಶಕಂಠಸ್ಯ ಕೇವಲಮ್ ॥ ೬೧೩ ॥**

**ಅರ್ಥ–** ಯಸ್ಯ = ಯಾವನಿಗೆ, ದೈವೇ = ದೇವರಲ್ಲಿ, ಗುರೌ ಚ = ಹಿರಿಯರಲ್ಲಿಯೂ, ಅಹಂಭಾವಃ = ನಾನೇ ದೇವರು, ನಾನೇ ಗುರುವೆಂಬ ಅಹಂಕಾರವು ಇರುತ್ತದೆಯೋ, ಸಃ = ಅವನು, ದೇವದ್ವಿಡ್ ಏವ = ದೇವದ್ರೋಹಿಯೇ ಸರಿ. ರಮೋಮಾಕಾಂತತೋತ್ಕಂಠಾ = ಲಕ್ಷ್ಮೀರೂಪಳಾದ ಸೀತೆಗೆ ಮತ್ತು ಪಾರ್ವತಿಗೆ ಗಂಡನಾಗಬೇಕೆಂಬ ಹಂಬಲವು, ಕೇವಲಂ ದಶಕಂಠಸ್ಯ = ರಾವಣನಿಗೆ ಮಾತ್ರವೇ, ಅಸ್ತಿ = ಇದೆ.

**ಅನುವಾದ–** ನಾನೇ ದೇವರು, ನಾನೇ ಗುರು ಎಂದು ಅಹಂಕಾರಪಡುವವನು ದೇವದ್ರೋಹಿಯೆನಿಸುತ್ತಾನೆ. ಇದಕ್ಕೆ ರಾವಣನೇ ನಿದರ್ಶನ. ಅವನು ಲಕ್ಷ್ಮೀರೂಪಳಾದ ಸೀತೆಯನ್ನು ಮತ್ತು ಪಾರ್ವತಿಯನ್ನು ಪಡೆಯಲು ಯತ್ನಿಸಿದನು.

**ಭಾವವಿಲಾಸಿನೀ–** ಅಹಂಭಾವಃ ಅಹಮೇವ ದೇವಃ ಅಹಮೇವ ಗುರುರಿತಿ ಗುರುದೇವೈಕ್ಯಭಾವನೇತ್ಯರ್ಥಃ। ಸಃ ಏವಂ ಭಾವಯನ್ । ದೇವದ್ವಿಟ್ ದೈತ್ಯಃ। ರಮೋಮಾಕಾಂತತೋತ್ಕಂಠಾ ರಮಾಯಾಸ್ಸೀತಾಯಾ ಉಮಾಯಾಶ್ಚ ಕಾಂತೋ ಭವಾಮೀತ್ಯುತ್ಕಂಠಾ । ರಾವಣಃ ರಮಾರೂಪಸೀತಾಯಾಂ ಉಮಾಯಾಂ ಚ ಕಾಮ ಕೃತವಾನಿತಿ ಪೌರಾಣಿಕೀ ಪ್ರಥಾ । ತಥಾ ರಮಾಕಾಂತೋಽಹಂ ಭವಾಮೀತ್ಯಾಶಯಾದೇವೇಽಹಂಭಾವೋಽಪಿ ರಾವಣಸ್ಯ ವಾ ರಾವಣಸದೃಶಸ್ಯಾಸುರಾಂತರಸ್ಯ ವಾ । ಉಮಾಕಾಂತೋಽಹಂ ಭವಮೀತ್ಯಾಶಯಾ ಜಗದ್ಗುರು–

ಪರುದ್ರೇऽಪ್ಯಹಂಭಾವಸ್ತಸ್ಯ ವಾ ತತ್ ಸದೃಶ್ಯಸ್ಯ ವಾ ಅನ್ಯಸ್ಯ ಸ್ಯಾತ್ । ಅತಃ ದೇವೇ ಗುರೌ ಚಾಹಂಭಾವವಾನ್ ದೇವದ್ವಿಡೇವೇತಿ ಪೂರ್ವೇಣ ಸಂಬಂಧಃ ॥ ೬೧೩ ॥

**ವಿವರಣೆ–** ರಾವಣನು ಸೀತೆಯನ್ನು ಮೋಹಿಸಿದ ಕಥೆ ರಾಮಾಯಣದಲ್ಲಿ ಪ್ರಸಿದ್ಧವಿದೆ. ಆತ ಉಮೆಯನ್ನು ಮೋಹಿಸಿದ ಮತ್ತು ವಿಷ್ಣು ಆಕೆಯನ್ನು ಪಾರುಮಾಡಿದ ಎಂಬ ಕಥೆ ಆನಂದರಾಮಾಯಣ (ಸಾರಕಾಂಡ - 13ನೇ ಸರ್ಗ)ದಲ್ಲಿ ಇದೆ. ಅಥವಾ ರಮೆಯನ್ನು ಕಾಮಿಸುವುದಾಗಲೀ ಉಮೆಯನ್ನು ಕಾಮಿಸುವುದಾಗಲೀ, ಆ ಮೂಲಕ ತಾನೇ ರುದ್ರನಾಗಬೇಕೆಂಬ ಹಂಬಲವಾಗಲೀ ರಾವಣನಿಗೆ ಅಥವಾ ರಾವಣಸದೃಶರಾದ ಶಂಬೂಕಾದಿಗಳಿಗೆ ಮಾತ್ರವೇ ಸಾಧ್ಯ ಎಂದು ಅರ್ಥ ಹೇಳಬಹುದು. ಶಂಬೂಕನು ರುದ್ರತ್ವವನ್ನು ಬಯಸಿದ್ದು ತಾತ್ಪರ್ಯನಿರ್ಣಯ (9ನೇ ಅ.21 ಶ್ಲೋಕ)ದಲ್ಲಿ ಸ್ಪಷ್ಟವೇ ಇದೆ. ಅದ್ವೈತಿಗಳು ತಾವು ಬ್ರಹ್ಮಾಭಿನ್ನರೆಂದು ಹೇಳಿಕೊಳ್ಳುತ್ತಿರುವದರಿಂದ ದೇವದ್ರೋಹ ನಿಮಿತ್ತದಿಂದ ಶಿಕ್ಷೆಯನ್ನು ಅನುಭವಿಸುತ್ತಾರೆ ಎಂದು ಅರ್ಥ.

**ಅನಿತ್ಯದೇಹಗೇಹಾದೌ ನಿತ್ಯತಾವಿಭ್ರಮೋ ನೃಣಾಮ್ ।**
**ದುಃಖಿನಃ ಸ್ವಸ್ಯ ನಿರ್ದುಃಖಬ್ರಹ್ಮಭಾವಭ್ರಮೋಪಮಃ ॥ ೬೧೪ ॥**

**ಅರ್ಥ–** ನೃಣಾಂ = ಜನರಿಗೆ, ಅನಿತ್ಯದೇಹಗೇಹಾದೌ = ಅನಿತ್ಯಗಳಾದ ಶರೀರಗಳು ಮತ್ತು ಮನೆಗಳು ಇತ್ಯಾದಿ ವಸ್ತುಗಳಲ್ಲಿ, ನಿತ್ಯತಾವಿಭ್ರಮಃ = ನಿತ್ಯಗಳೆಂಬ ಭ್ರಾಂತಿಯು, ದುಃಖಿನಃ = ದುಃಖವನ್ನು ಅನುಭವಿಸುತ್ತಿರುವ, ಸ್ವಸ್ಯ = ತನಗೆ, ನಿರ್ದುಃಖಬ್ರಹ್ಮಭಾವ ಭ್ರಮೋಪಮಃ = ದುಃಖರಹಿತನಾದ ಪರಬ್ರಹ್ಮನ ಸ್ವರೂಪವಿದೆಯೆಂಬ ಭ್ರಮೆಗೆ ಸದೃಶವಾಗಿದೆ.

**ಅನುವಾದ–** ಈ ಅದ್ವೈತಿಗಳು ಸಂಸಾರದುಃಖವನ್ನು ಅನುಭವಿಸುತ್ತಿರುವ ತಮ್ಮನ್ನು ಸಂಸಾರಾತೀತನೂ ನಿತ್ಯಸುಖಸ್ವರೂಪನೂ ಆದ ಪರಬ್ರಹ್ಮನಿಂದ ಅಭಿನ್ನರೆಂದು ಭ್ರಮಿಸಿದ್ದಾರೆ. ಅವರ ಈ ಭ್ರಾಂತಿಯು, ಅಜ್ಞರಾದ ಜನರಿಗೆ ಅನಿತ್ಯಗಳಾದ ಮನೆ, ಮಠ, ಶರೀರ ಮುಂತಾದ ವಸ್ತುಗಳಲ್ಲಿ ಇರುವ ಇವೆಲ್ಲವೂ ನಿತ್ಯಗಳಾಗಿವೆ ಎಂಬ ಅಭಿಮಾನದಿಂದ ಉಂಟಾದ ಭ್ರಾಂತಿಗೆ ಸದೃಶವಾಗಿದೆ.

**ಭಾವವಿಲಾಸಿನೀ–** ಅನಿತ್ಯ ಇತಿ ॥ ಯದ್ಯಸ್ಯ ವಹ್ನ್ಯಾದಿನಾಧ್ವಂ-ಸಾಖ್ಯವಿಶೇಷದರ್ಶನೇऽಪಿ ಯಥಾऽಭಿಮಾನವಶಾದ್ದೇಹಗೇಹಾದೌ ನಿತ್ಯತಾವಿಭ್ರಮಃ ತಥಾ ದುಃಖರೂಪ-ವಿಶೇಷದರ್ಶನೇऽಪಿ ಯಾ ನಿರ್ದುಃಖಬ್ರಹ್ಮತ್ವಭಾವನಾ ಮಾಯಾವಾದಿನಾಂ ಸಾऽಪಿ ದುರಾಗ್ರಹವಶಾದೇವೇತಿ ಭಾವಃ ॥ ೬೧೪ ॥

**ವಿವರಣೆ–** ಇಲ್ಲಿ ಅಜ್ಞಜನರಿಗೆ ಮನೆಮಠಗಳಲ್ಲಿ ಇರುವ ನಿತ್ಯತ್ವಭ್ರಾಂತಿಯು ದೃಷ್ಟಾಂತವಾಗಿದೆ; ಮತ್ತು ಅದ್ವೈತಿಗಳಿಗೆ ತಮ್ಮ ಬಗ್ಗೆ ಇರುವ ಐಕ್ಯಭ್ರಾಂತಿಯು

ದಾರ್ಷ್ಟಾಂತಿಕವಾಗಿದೆ. ಆದರೆ ಮೂಲಕಾರರು ಐಕ್ಯಭ್ರಾಂತಿಯನ್ನೇ ದೃಷ್ಟಾಂತವನ್ನಾಗಿ ಮಾಡಿ ನಿತ್ಯತ್ವಭ್ರಾಂತಿಯನ್ನು ದಾರ್ಷ್ಟಾಂತಿಕಸ್ಥಾನದಲ್ಲಿ ಇರಿಸಿದ್ದಾರೆ. ಎಲ್ಲ ಜೀವರೂ ತಾವು ದುಃಖವನ್ನು ಅನುಭವಿಸುತ್ತಿದ್ದೇವೆಂಬುದನ್ನೂ, ಆದ್ದರಿಂದಲೇ ನಿರ್ದುಃಖನಾದ ಪರಬ್ರಹ್ಮನಿಂದ ಭಿನ್ನರೇ ಆಗಿದ್ದೇವೆಂಬುದನ್ನೂ ಸಂಶಯಾತೀತವಾಗಿ ಪ್ರತ್ಯಕ್ಷ ಶ್ರುತಿ ಅನುವಾದ ಪ್ರಮಾಣಗಳಿಂದ ಅರಿತುಕೊಂಡಿರುವುದರಿಂದಲೇ ದಾರ್ಷ್ಟಾಂತಿಕವಾಗಬೇಕಿದ್ದ ಐಕ್ಯಭ್ರಾಂತಿಯನ್ನೇ ದೃಷ್ಟಾಂತವನ್ನಾಗಿ ಬಳಸಿಕೊಂಡು ನಿತ್ಯತ್ವಭ್ರಾಂತಿಯನ್ನು ಮೂಲಕಾರರು ಬರೆದಿದ್ದಾರೆ. (ಇಂಥದೊಂದು ವ್ಯತ್ಯಾಸವು 589 ನೆಯ ಶ್ಲೋಕದಲ್ಲಿಯೂ ಕಂಡುಬಂದಿದೆ.)

**ಬಿಭೇತಿ ಕುಮತಿಃ ಸದ್ಯಃ ಶಾಸ್ತುರ್ನ ಸಮಯಾಂತರೇ ।**
**ರಾಜಾಹಮಿತಿ ನ ಬ್ರೂತೇ ಬ್ರೂತೇ ದೇವೋऽಹಮಿತ್ಯಹೋ ॥ ೬೧೫ ॥**

**ಅರ್ಥ–** ಕುಮತಿಃ = ಮೂರ್ಖನು, ಸದ್ಯಃ = ಅಪರಾಧವೆಸಗಿದ ಕೂಡಲೇ, ಶಾಸ್ತುಃ = ಶಿಕ್ಷೆಕೊಡುವವನಿಂದ, ಬಿಭೇತಿ = ಭಯಪಡುತ್ತಾನೆ. ಕಿಂತು = ಆದರೆ, ಸಮಯಾಂತರೇ = ದೀರ್ಘಕಾಲದ ಬಳಿಕ, ಶಾಸ್ತುಃ = ಶಿಕ್ಷೆಕೊಡುವವನಿಂದ, ನ ಬಿಭೇತಿ = ಹೆದರುವುದಿಲ್ಲ. ಅತಃ = ಆದ್ದರಿಂದಲೇ, ಅಯಂ ಅಪಿ = ಈ ಅದ್ವೈತಿಯೂ ಕೂಡ, ಅಹಂ = ನಾನು, ರಾಜಾ = ಈ ಪ್ರಾಂತದ ರಾಜನು, ಇತಿ = ಎಂಬುದಾಗಿ, ನ ಬ್ರೂತೇ = ಹೇಳಿಕೊಳ್ಳುವುದಿಲ್ಲ. ಕಿಂತು = ಆದರೆ, ಅಹಂ = ನಾನು, ದೇವಃ ಇತಿ = ಪರಬ್ರಹ್ಮನೆಂದು, ಬ್ರೂತೇ = ಹೇಳಿಕೊಳ್ಳುತ್ತಾನೆ. ಅಹೋ = ಇದು ಆಶ್ಚರ್ಯಕರವಾಗಿದೆ.

**ಅನುವಾದ–** ಮೂರ್ಖನಾದವನು ತಕ್ಷಣದಲ್ಲಿ ಉಂಟಾಗುವ ಅನರ್ಥಕ್ಕೆ ಹೆದರುತ್ತಾನೆ. ಕಾಲಾಂತರದಲ್ಲಿ ಉಂಟಾಗುವ ಅನರ್ಥಕ್ಕೆ ಹೆದರುವುದಿಲ್ಲ. ನಾನು ರಾಜನೆಂದು ಹೇಳಿಕೊಳ್ಳುವುದಿಲ್ಲ. ಆದರೆ ನಾನು ದೇವನೆಂದು ಹೇಳಿಕೊಳ್ಳುತ್ತಾನೆ. ಎಂತಹ ಆಶ್ಚರ್ಯ!

**ಭಾವವಿಲಾಸಿನೀ–** ಸದ್ಯಃಶಾಸ್ತುಃ ತದಾನೀಮೇವಶಿಕ್ಷಾಕರ್ತುಃ ಸಪ್ರಾಗ್ನ್ಯಾದೇಸ್ಸಕಾಶಾತ್ । ಬಿಭೇತಿ ಸಮಯಾಂತರೇ ಶಿಕ್ಷಾಕರ್ತುಃ ಪಾಪಾದೇರ್ನ ಬಿಭೇತಿ । ತತ್ಕುತ್ರ ದೃಷ್ಟಮಿತ್ಯತ ಉಕ್ತಮ್ ॥ ರಾಜೇತಿ ॥ ಯಸ್ಮಾತ್ತದಾನೀಮೇವ ಶಿರಶ್ಛೇದನಂ ಕರೋತೀತಿ ಭೀತ್ಯಾ ರಾಷ್ಟ್ರೇ ಕೋऽಪಿ ರಾಜಾಹಮಿತಿ ನ ಬ್ರೂತೇ । ದೇವಸ್ತು ಕ್ಷಮಾಶೀಲಸ್ತದಾನೀಂ ಶಿರಶ್ಛೇದನಂ ನ ಕರೋತಿ । ತವೋೀಯಾತನಾ ತು ಸಮಯಾಂತರ ಇತ್ಯಭೀತೋ ದೇವೋऽಹಮಿತಿ ಸರ್ವದಾऽऽಘೋಷಯತಿ । ತಸ್ಮಾದುಕ್ತಂ ಸತ್ಯಮಿತಿ ಭಾವಃ ॥ ೬೧೫ ॥

**ವಿವರಣೆ–** ಜನರು ತಪ್ಪೆಸಗಿದ ಕೂಡಲೇ ದುಷ್ಪರಿಣಾಮವನ್ನುಂಟುಮಾಡುವ ವಸ್ತುಗಳಿಗೆ ಹೆದರುತ್ತಾರೆ ಮತ್ತು ಅಂತಹ ತಪ್ಪುಗಳನ್ನು ಮಾಡುವುದರಿಂದ

ದೂರವಿರುತ್ತಾರೆ. ಆದರೆ ದೀರ್ಘಕಾಲದ ಬಳಿಕವೇ ದುಷ್ಪರಿಣಾಮವನ್ನು ತೋರಿಸುವ ವಸ್ತುಗಳಿಗೆ ಅವರು ಹೆದರುವುದಿಲ್ಲ ಮತ್ತು ಅವುಗಳಿಗೆ ಸಂಬಂಧಿಸಿದಂತಹ ತಪ್ಪುಗಳಿಂದ ದೂರವುಳಿಯಲೂ ಆರರು. (ವಿಷಕುಡಿದರೆ ಸದ್ಯವೇ ಸಾಯುತ್ತೇವೆಂದು ಗೊತ್ತಿರುವುದರಿಂದ ಅವರು ವಿಷದ ಸನಿಹವೂ ಸುಳಿಯುವುದಿಲ್ಲ. ಆದರೆ ಮದ್ಯಪಾನ, ಧೂಮಪಾನ ಮುಂತಾದವು ದೀರ್ಘಕಾಲದ ಬಳಿಕವೇ ದುಷ್ಪರಿಣಾಮವನ್ನು ತೋರುವವಾದ್ದರಿಂದ ಆ ಚಟಗಳನ್ನು ಜನರು ಮುಂದುವರಿಸುತ್ತಲೇ ಹೋಗುತ್ತಾರೆ. - **ಅನುವಾದಕನ ಅಭಿಪ್ರಾಯ.**)

ಹಾಗೆಯೇ ಕೂಡಲೇ ಕೆರಳಿ ಪ್ರತಿಕ್ರಿಯಿಸುವವರಿಗೆ ಜನರು ಹೆದರುತ್ತಾರೆ; ಅದಕ್ಕೆ ವಿರುದ್ಧಸ್ವಬಾವವುಳ್ಳವರಿಗೆ ಹೆದರುವುದಿಲ್ಲ. ಇದು ಅವಿವೇಕಿಗಳ ಸ್ವಬಾವ.

ಈ ಸ್ವಭಾವವೇ ಅದ್ವೈತಿಗಳಲ್ಲಿಯೂ ಕಂಡಿದೆ. ಇವರು ನಾನೇ ರಾಜ ಎಂದು ಹೇಳಿಕೊಳ್ಳುತ್ತ ಹೋದರೆ ಆ ದೇಶದ ರಾಜನು ಇವರನ್ನು ಶಿಕ್ಷೆಗೆ ಒಳಪಡಿಸಿಯಾನು. ಹಾಗಾಗಿ ಇವರು ಆ ಸಾಹಸಕ್ಕೆ ಕೈ ಹಾಕಲಾರರು.

ದೇವರು ಇವರನ್ನು ಕೂಡಲೇ ಶಿಕ್ಷಿಸುವುದಿಲ್ಲವಾದ್ದರಿಂದ ಇವರು ನಾನೇ ದೇವರು ಎಂದು ಹೇಳಿಕೊಳ್ಳಲು ಹಿಂಜರಿಯುವುದಿಲ್ಲ.

ಆದರೆ ಕಾಲಾಂತರದಲ್ಲಿ ಅದ್ವೈತೋಪಾಸನೆಗೆ ದುರ್ಗತಿಯೇ ಕಾದಿದೆ, ಏಕೆಂದರೆ ಭಗವಂತನು ಸತ್ಯ, ಅಸತ್ಯಗಳನ್ನು ಕಾಣುತ್ತಾನೆ, ಆದರೆ ಕಾಯುತ್ತಾನೆ.

**ದುಷ್ಟೋಽಹಂಕುರುತೇ ತುಷ್ಟಃ ಕ್ಲಿಷ್ಟಃ ಕ್ಲೇಶಕರಂ ಭಜೇತ್ ।**
**ಶಿವೇಽಹಂಭಾವಧೀರ್ಭೋಗೇ ರೋಗೇ ಮೃತ್ಯುಂಜಯಾರ್ಚಕಃ ॥ ೬೧೬ ॥**

**ಅರ್ಥ–** ದುಷ್ಟಃ = ದುರುಳನು, ತುಷ್ಟಃ ಚೇತ್ = ಸಂಪತ್ತಿನಿಂದ ಸಂತುಷ್ಟನಾದರೆ, ಅಹಂಕುರುತೇ = ಅಹಂಕಾರಪಡುತ್ತಾನೆ. ಕ್ಲಿಷ್ಟಃ ಚೇತ್ = ಬಡತನ ಮುಂತಾದ ಸಂಕಟಗಳು ಬಂದಾಗ, ಕ್ಲೇಶಹರಂ = ದುಃಖನಿವಾರಕನಾದ ಭಗವಂತನ್ನು, ಧನಿಕನನ್ನು, ಭಜೇತ್ = ಸೇವಿಸುತ್ತಾನೆ. ಭೋಗೇ = ವಿಷಯಭೋಗಗಳನ್ನು ಅನುಭವಿಸುವ ಯೋಗವಿದ್ದಾಗ, ಅಸ್ಯ = ಈ ಅದ್ವೈತಿಗೆ, ಶಿವೇ = ಭಗವಂತನಲ್ಲಿ, ಅಹಂಭಾವಧೀಃ = ನಾನೇ ದೇವರು ಎಂಬ ಭಾವನೆಯು ಬರುತ್ತದೆ. ಆದರೆ ರೋಗೇ = ಹೊಟ್ಟೆನೋವು ಮುಂತಾದ ರೋಗಗಳು ಬಂದಾಗ, ಅಯಂ = ಈ ಅದ್ವೈತಿಯು, ಮೃತ್ಯುಂಜಯಾರ್ಚಕಃ = ಮೃತ್ಯುಂಜಯನಾದ ಶಿವನನ್ನು ಪೂಜಿಸುವವನು, ಭವೇತ್ = ಆಗುತ್ತಾನೆ.

**ಅನುವಾದ–** ದುಷ್ಟನಾದವನು ಸಂತೋಷದಲ್ಲಿರುವಾಗ ಅಹಂಕಾರಪಡುತ್ತಾನೆ. ಕ್ಲೇಶವುಂಟಾದಾಗ ಮಾತ್ರ ಕ್ಲೇಶಹಾರಕನಾದ ಭಗವಂತನನ್ನು ಅಥವಾ ಇನ್ನೊಬ್ಬ ಮನುಷ್ಯನನ್ನು ಭಜಿಸುತ್ತಾನೆ. ಮಾಯಾವಾದಿಯೂ ಸಹ ಭೋಗದ ಸಮಯದಲ್ಲಿ

ಶಿವೋಹಂ ಎಂಬ ಭಾವನೆಯನ್ನು ಹೊಂದುತ್ತಾನೆ. ವಿರೋಧ ಬಂದ ಕೂಡಲೇ ಮೃತ್ಯುಂಜಯನ ಅರ್ಚನೆಯನ್ನು ಮಾಡುತ್ತಾನೆ.

**ಭಾವವಿಲಾಸಿನೀ–** ದುಷ್ಟಃ ಧನಕನಕಾದಿನಾ ತುಷ್ಟಶ್ಚೇದಹಂಕುರುತೇ । ಕ್ಲಿಷ್ಟಃ ದಾರಿದ್ರ್ಯಾದಿನಾ ಕ್ಲೇಶವಾನ್ ಕ್ಲೇಶಹರಂ ಧನಿನಂ ಭಜೇತ್ । ಇದಮಪಿ ಮಾಯಾವಾದಿಷ್ವೇವ ದೃಷ್ಟಮಿತಿ ಭಾವವೇನೋಕ್ತಮ್ ॥ **ಶಿವೇಽಹಂಭಾವಧೀರಿತಿ** ॥ ಭೋಗೇ ಸ್ರಕಂದನವನಿತಾದಿ-ವಿಷಯಭೋಗೇ ಸತಿ ಶಿವೇಽಹಂಭಾವಧೀಃ ಶಿವೋಽಹಮಿತಿ ಭಾವಯನ್ನಿತ್ಯರ್ಥಃ । ರೋಗೇ ಉದರಶೂಲಾದಿರೋಗೇ ಸತಿ ಮೃತ್ಯುಂಜಯಾರ್ಚಕಃ । ಯಸ್ಮಿನ್ ಶಿವೇಽಹಂಭಾವಂಕರೋತಿ ತಸ್ಯೈವ ಮೃತ್ಯುಂಜಯಸ್ಯ ಹೋಮಾದಿನಾಽರ್ಚಕೋ ಭವತೀತ್ಯರ್ಥಃ ॥ ೬೧೬ ॥

**ವಿವರಣೆ–** ಸಂಪತ್ತಿನ ಸುಖದಲ್ಲಿ ಓಲಾಡುವ ಕಾಲದಲ್ಲಿ ದುಷ್ಟನು ನನ್ನ ಸಮ ಯಾರಿಹನು ಎಂದು ಅಹಂಕಾರ ಮಡುತ್ತಾನೆ. ಬಡತನ ಮುಂತಾದ ಸಂಕಟಗಳು ಬಂದಾಗ ಸಂಕಟಹರನಾದ ವೇಂಕಟರಮಣನನ್ನು ಶರಣು ಹೋಗುತ್ತಾನೆ (ಅಥವಾ ದುಡ್ಡಿನಾಸೆಗಾಗಿ ಶ್ರೀಮಂತರ ದಾಸ್ಯ ಮಾಡುತ್ತಾನೆ.) ಇದು ದುಷ್ಟರ ಹಾಗೂ ಅಜ್ಞಾನಿಗಳ ಸ್ವಭಾವ. ಈ ಸ್ವಭಾವವೇ ಮಾಯಾವಾದಿಗಳಲ್ಲಿಯೂ ಕಾಣುತ್ತಿದೆ ಎಂದು ಮೂಲಕಾರರು ಹೇಳುತ್ತಾರೆ. ಎಲ್ಲವೂ ಸುಗಮವಾಗಿದ್ದಾಗ, ಶಿವೋಽಹಂ ಎಂದು ಹೇಳುತ್ತ ಓಲಾ(ಡಾ)ಡುತ್ತಾರೆ ಇವರು. ದೈಹಿಕ, ಮಾನಸಿಕ ವ್ಯಾಧಿಗಳು ಬಂದರೆ ಅದೇ ಶಿವನ ಮೃತ್ಯುಂಜಯಮಂತ್ರವನ್ನು ಪಠಿಸುತ್ತಾ ಹೋಮ, ಅರ್ಚನೆಗಳಲ್ಲಿ ತೊಡಗುತ್ತಾರೆ.

**ವಾಚಾಽನ್ಯಜ್ಜಲ್ಪತಿ ಸ್ವಲ್ಪಃ ಕರ್ಮಣಾನ್ಯತ್ ಕರೋತಿ ಚ ।**
**ಯೋಽಚ್ಯುತೋಽಹಮಿತಿ ಬ್ರೂತೇ ಸ್ನಾತುಂ ಗಂಗಾಂ ಸ ಗಚ್ಛತಿ ॥ ೬೧೭ ॥**

**ಅರ್ಥ–** ಸ್ವಲ್ಪಃ = ನೀಚನು, ವಾಚಾ = ಮಾತಿನಿಂದ, ಅನ್ಯತ್ = ಒಂದು ವಿಷಯವನ್ನು ಜಲ್ಪತಿ = ಹೇಳುತ್ತಾನೆ. ಕರ್ಮಣಾ ಚ = ಕ್ರಿಯಯಿಂದಾದರೂ, ಅನ್ಯತ್ = ಮತ್ತೊಂದನ್ನು ಕರೋತಿ = ಮಾಡುತ್ತಾನೆ. ಯಃ = ಯಾವ ಮಾಯಾವಾದಿಯು, ಅಹಂ = ನಾನು, ಅಚ್ಯುತಃ = ಪರಬ್ರಹ್ಮನು ಎಂದು, ಬ್ರೂತೇ = ಹೇಳುತ್ತಾನೆಯೋ, ಸಃ = ಅವನೇ, ಸ್ನಾತುಂ = ಸ್ನಾನಮಾಡಲು, ಗಂಗಾಂ = ಗಂಗಾನದಿಯನ್ನು ಕುರಿತು, ಗಚ್ಛತಿ = ಹೋಗುತ್ತಾನೆ.

**ಅನುವಾದ–** ನೀಚನಾದವನು ಮಾತಿನಿಂದ ಬೇರೆಯದನ್ನೇ ಹೇಳುತ್ತಾನೆ, ಕೃತಿಯಿಂದ ಬೇರೆಯದನ್ನೇ ಮಾಡುತ್ತಾನೆ. ನಾನೇ ಅಚ್ಯುತನೆಂದು ಹೇಳುತ್ತಾನೆ ಮತ್ತು ಸ್ನಾನ ಮಾಡಲು ಗಂಗೆಗೆ ಹೋಗುತ್ತಾನೆ.

**ಭಾವವಿಲಾಸಿನೀ–** ಸ್ವಲ್ಪಃ ನೀಚಃ । ವಾಚಾಽನ್ಯಜ್ಜಲ್ಪತಿ । ಕರ್ಮಣಾಽನ್ಯತ್ಕರೋತಿ ಚ । ಸಮಾಯಾಂ ಬಹುಧನಂ ದಿಶಾಮೀತಿ ವದತಿ । ಗೃಹಂ ಪ್ರತ್ಯಾಗತೇ ತ್ವರ್ಧಚಂದ್ರಮೇವ ದದಾತೀತಿ

ಭಾವಃ । ಇದಮಪಿ ಸಭಾಯಾಮಚ್ಯುತೋಽಹಮಿತ್ಯಾಘೋಷ್ಯ ಕರ್ಮಣಾ ಗಂಗಾಸ್ನಾನಾರ್ಥಂ ಗಚ್ಛತಿ । ಮಾಯಾವಾದಿಷ್ವೇವ ದೃಷ್ಟಮಿತಿ ಭಾವೇನೋಕ್ತಮ್ ॥ ಯ ಇತಿ ॥ ೬೧೭ ॥

**ವಿವರಣೆ–** ಬಾಯಿಯಿಂದ ಹೇಳುವುದೊಂದು, ಮಾಡುವುದು ಮತ್ತೊಂದು ಎನ್ನುವುದೇ ನೀಚರ ಸ್ವಭಾವ. ಮನಗೆ ಬಾ, ನಿನಗೆ ದೊಡ್ಡ ಮೊತ್ತದ ಧನವನ್ನು ಕೊಡುತ್ತೇನೆ ಎಂದು ಇವರು ಬಡವರಿಗೆ ಎಲ್ಲರೆದುರು ಆಶ್ವಾಸನೆಕೊಡುತ್ತಾರೆ. ಆದರೆ ಆತ ಮನೆಗೆ ಬಂದರೆ ಕುತ್ತಿಗೆ ಹಿಡಿದು ಹೊರದಬ್ಬುತ್ತಾರೆ.

ಅದ್ವೈತಿಗಳಲ್ಲಿಯೂ ಇದೇ ಸ್ವಭಾವ ಕಂಡಿದೆ. ಇವರು ಸಭೆಯಲ್ಲಿ ನಾನೇ ನಿರ್ದೋಷನಾದ ಪರಬ್ರಹ್ಮ ಎಂದು ಘೋಷಿಸುತ್ತಾರೆ. ಗಂಗಾನದಿಯಲ್ಲಿ ಸ್ನಾನವನ್ನೂ ಮಾಡುತ್ತಾರೆ. ಇವರೇ ಪರಬ್ರಹ್ಮನಾಗಿದ್ದರೆ ದೋಷರಹಿತರಾಗಿರಬೇಕಲ್ಲವೇ? ಹಾಗಾದರೆ ಪಾವಿತ್ರ್ಯಕ್ಕಾಗಿ ಗಂಗಾನದಿಗೆ ಏಕೆ ಹೋಗುತ್ತಾರೆ?

**ಕಾಣಸ್ಯ ಚಕ್ಷುರೇಕತ್ರ ಸಾಮ್ಯೇಽಪ್ಯನ್ಯತ್ರ ನಾಪತೇತ್ ।**
**ಯಜ್ವಪ್ರಸ್ತರತೋಕ್ತ್ಯಧ್ವಾ ದೃಷ್ಟೋ ನಾತ್ಮೈಕ್ಯವಾಕ್ಪಥಃ ॥ ೬೧೮ ॥**

**ಅರ್ಥ–** ಕಾಣಸ್ಯ = ಒಕ್ಕಣ್ಣನ, ಚಕ್ಷುಃ = ಕಣ್ಣು , ಸಾಮ್ಯೇ ಅಪಿ = ಎರಡು ಭಿನ್ನಪ್ರದೇಶಗಳಲ್ಲಿರುವ ವಸ್ತುಗಳು ಸಮಾನ ಅಂತರ ಮತ್ತು ಬೆಳಕಿನಲ್ಲಿ ಇದ್ದರೂ ಕೂಡ, ಏಕತ್ರ= ಕಣ್ಣಿನ ಜೊತೆಗೆ ಸಂಬಂಧ ಪಡೆದ ಒಂದು ಜಾಗದಲ್ಲಿರುವ ಘಟದಲ್ಲಿ, ಪತತಿ = ಬೀಳುತ್ತದೆ. (ವಸ್ತುವನ್ನು ತೋರಿಸುತ್ತದೆ.) ಅನ್ಯತ್ರ = ಕಣ್ಣುಗುಡ್ಡೆ ಸರಿಯಾಗಿಲ್ಲದ ಕಣ್ಣಿನ ಜೊತೆಗೆ ಸಂಬಂಧಪಡೆದ ಇನ್ನೊಂದು ಜಾಗದಲ್ಲಿರುವ ಘಟದಲ್ಲಿ , ನ ಆಪತೇತ್ = ಬೀಳುವುದಿಲ್ಲ (ವಸ್ತುವನ್ನು ತೋರಿಸುವುದಿಲ್ಲ.) ಮಾಯಾವಾದಿನಾ ಅಪಿ = ಅದ್ವೈತಿಯಿಂದಲೂ ಕೂಡ, ಯಜ್ವಪ್ರಸ್ತರತೋಕ್ತ್ಯಧ್ವಾ = ಯಜಮಾನನಿಗೆ ಪ್ರಸ್ತರತ್ವವನ್ನು ಹೇಳುವ ವೇದವಾಕ್ಯಕ್ಕೆ ಲಕ್ಷಣಾವನ್ನು ಹೇಳಬೇಕೆಂಬ ಬುದ್ಧಿವಂತಿಕೆಯ ಮಾರ್ಗವು, ದೃಷ್ಟಃ = ಕಾಣಲ್ಪಟ್ಟಿತು. ಕಿಂತು = ಆದರೆ, ಆತ್ಮೈಕ್ಯವಾಕ್‌ಪಥಃ = ಜೀವಾತ್ಮರಿಗೆ ಪರಮಾತ್ಮನಿಂದ ಐಕ್ಯವನ್ನು ಹೇಳುವ ವೇದವಾಣಿಗೆ ಲಕ್ಷಣಾವನ್ನು ಹೇಳಬೇಕೆನ್ನುವ ವಿದ್ವನ್ಮಾರ್ಗವು, ನ ದೃಷ್ಟಃ = ಕಾಣಲ್ಪಡಲಿಲ್ಲ.

**ಅನುವಾದ–** ಒಂದು ಕಣ್ಣುಳ್ಳವನ ಕಣ್ಣು ಎರಡು ವಸ್ತುಗಳು ಸಮಾನವಾಗಿದ್ದರೂ ಕೂಡ ಒಂದೇ ಕಡೆಯಲ್ಲಿ ಪ್ರವೃತ್ತವಾಗುತ್ತದೆಯೇ ಹೊರತು ಇನ್ನೊಂದು ಕಡೆಯಲ್ಲಿ ಪ್ರವೃತ್ತವಾಗುವುದಿಲ್ಲ. 'ಯಜಮಾನ ಪ್ರಸ್ತರಃ' ಎಂಬ ವಾಕ್ಯದಲ್ಲಿ ತೋರಿದ ಮಾರ್ಗವು 'ಸರ್ವಂ ಖಲ್ವಿದಂ ಬ್ರಹ್ಮ' ಎಂಬ ವಾಕ್ಯದಲ್ಲಿ ತೋರುವುದಿಲ್ಲವಷ್ಟೇ?

**ಭಾವವಿಲಾಸಿನೀ–** ಕಾಣಸಾಮ್ಯಮಪಿ ಮಾಯಾವಾದಿಷ್ವೇವ ದೃಷ್ಟಮಿತಿ ಭಾವೇನಾಹ – **ಕಾಣಸ್ಯೇತಿ** ॥ ಕಾಣಸ್ಯ ಏಕಚಕ್ಷುಷಃ । ಏಕತ್ರ ಚಕ್ಷುರ್ಭಾಗೇ । ಸಾಮ್ಯೇಽಪಿ ಸಮೀಪಸ್ಥತ್ವ -

ಸಾಮ್ಯೇऽಪಿ । ಅನ್ಯತ್ರ ನೇತ್ರಾಭಾವಪ್ರದೇಶೇ । ಯಸ್ಮಿನ್ ಭಾಗೇ ಚಕ್ಷುರಸ್ತಿ ತತ್ರತ್ಯಘಟಾದಿಕಂ ಪಶ್ಯತಿ । ಯಸ್ಮಿಂಶ್ಚ ಭಾಗೇ ಚಕ್ಷುರ್ನಾಸ್ತಿ ತದ್ಭಾಗಸ್ಥಂ ತತ್ಸಮಾನಯೋಗಕ್ಷೇಮಮಪಿ ಘಟಾದಿಕಂ ನ ಪಶ್ಯತೀತಿ ಭಾವಃ । ಕಥಮಿದಂ ಮಾಯಾವಾದಿನ್ಯಸ್ತೀತ್ಯತ ಉಕ್ತಮ್ – ಯಜ್ವೇತಿ ॥ ಯತ್-ಪ್ರಸ್ತರತೋಕ್ತ್ಯಧ್ವಾ ಯಜಮಾನಃ ಪ್ರಸ್ತರ ಇತ್ಯುಕ್ತೇರ್ಮಾರ್ಗಃ । ಪ್ರತ್ಯಕ್ಷಬಾಧೇನ ಲಕ್ಷಣಾಂಗೀ-ಕಾರಾಖ್ಯೋ ವಿದ್ವನ್ಮಾರ್ಗ ಇತಿ ಯಾವತ್ । ಆತ್ಮೈಕ್ಯವಾಕ್ಪಥಃ ಆತ್ಮನಾ ಪರಮಾತ್ಮನೈಕ್ಯಂ ವದಂತೀ ಯಾ ವಾಕ್ತತ್ತ್ವಮಸ್ಯಾದಿರೂಪಾ ತಸ್ಯಾಃ ಪಂಥಾಃ ಮುಖ್ಯಾರ್ಥಬಾಧೇ ಲಕ್ಷಣಾಂಗೀ-ಕಾರಾಖ್ಯೋ ವಿದ್ವನ್ಮಾರ್ಗೋ ನ ದೃಷ್ಟಃ । ಸಮಾನಯೋಗಕ್ಷೇಮಯೋರ್ವಾಕ್ಯದ್ವಯಯೋರೇಕತ್ರ ಲಕ್ಷಣಾಮಂಗೀಕುರ್ವನ್ನನ್ಯತ್ರ ಚ ತಾಮಪಶ್ಯನ್ಕಾಣ ಏವೇತಿ ಭಾವಃ ॥ ೬೧೮ ॥

**ವಿವರಣೆ–** ಒಕ್ಕಣ್ಣನ ಎದುರಿಗೆ ಸಮಾನ ಅಂತರ ಮತ್ತು ಬೆಳಕಿನಲ್ಲಿ ಎಡಭಾಗದಲ್ಲಿ ಒಂದು ಘಟವೂ, ಬಲಭಾಗದಲ್ಲಿ ಮತ್ತೊಂದು ಘಟವೂ ಇರುವಾಗ ಆತನ ಕಣ್ಣುಗುಡ್ಡೆಸರಿಯಿರುವ ಕಣ್ಣು ಯಾವ ಭಾಗದ ಘಟದ ಮೇಲೆ ಬೀಳುವುದೋ ಅದನ್ನು ಆತ ನೋಡಬಲ್ಲ. ಆದರೆ ಕಣ್ಣುಗುಡ್ಡೆ ಸರಿಯಾಗಿಲ್ಲದ ಕಣ್ಣು ಮತ್ತೊಂದು ಭಾಗದ ಘಟದ ಮೇಲೆ ಬಿದ್ದರೂ ಅದನ್ನು ಆತನ ನೋಡಲಾರ.

ಇಂಥದೇ ದೌರ್ಬಲ್ಯವು ಮಾಯಾವಾದಿಗಳಲ್ಲಿಯೂ ಕಂಡಿದೆ. ಯಜ್ಞದ ಯಜಮಾನನನ್ನೇ ದರ್ಭೆಯಮುಷ್ಟಿ ಎಂದು ಹೇಳುವ ವೇದವಾಕ್ಯಕ್ಕೆ ಪ್ರತ್ಯಕ್ಷಬಾಧೆ ಬಂದಾಗ ಅಲ್ಲಿ ಯಜಮಾನನಿಗೆ ದರ್ಭಮುಷ್ಟಿಯು ಪ್ರತಿನಿಧಿ ಎಂಬುದಾಗಿ ಲಾಕ್ಷಣಿಕ ಅರ್ಥವನ್ನು ಹೇಳಬೇಕೆಂದು ಬುದ್ಧಿವಂತಿಕೆಯ ಮಾರ್ಗ ಅವರಿಗೆ ಸಿಕ್ಕಿತು. ಆದರೆ ಜೀವನನ್ನು ಬ್ರಹ್ಮನೆಂದು ಹೇಳುವ ವೇದವಾಕ್ಯಕ್ಕೂ ಪ್ರತ್ಯಕ್ಷಬಾಧೆ ಬಂದಾಗ ಅಲ್ಲಿಯೂ ಉಚಿತವಾದ ಲಾಕ್ಷಣಿಕಅರ್ಥವೊಂದನ್ನು ವಿವರಿಸಬೇಕೆಂಬ ವಿದ್ವನ್ಮಾರ್ಗವು ಅವರ ದೃಷ್ಟಿಗೆ ಗೋಚರವಾಗಲಿಲ್ಲ. ಹೀಗೆ ಸಮಾನಸ್ಥಿತಿಯಲ್ಲಿರುವ ಎರಡು ವೇದವಾಕ್ಯಗಳಲ್ಲಿ ಒಂದಕ್ಕೆ ಲಕ್ಷಣಾವನ್ನು ಒಪ್ಪಿ ಮತ್ತೊಂದಕ್ಕೆ ಅದನ್ನು ಒಪ್ಪಲು ಸಿದ್ಧರಾಗಿಲ್ಲದ ಇವರೂ ಒಕ್ಕಣ್ಣರೇ ಸರಿ.

**ಸತೀರತಿಕ್ರಮ್ಯ ಕಾಮೀ ಪತಿಃ ಸ್ಯಾದಸತೀಪತಿಃ ।**
**ಯಥೈಕ್ಯಶ್ರುತಿಮಾದತ್ತೇ ಭೇದಾದ್ಯರ್ಥಶ್ರುತೀಸ್ತ್ಯಜನ್ ॥ ೬೧೯ ॥**

**ಅರ್ಥ–** ಯಥಾ = ಹೇಗೆ, ಮಾಯಾವಾದೀ = ಅದ್ವೈತಿಯು, ಭೇದಾದಿ-ಅರ್ಥಶ್ರುತೀಃ = ಭೇದ, ಸತ್ಯತ್ವ ಮುಂತಾದ ಅರ್ಥವನ್ನು ಕೊಡುವ ವೇದವಾಕ್ಯಗಳನ್ನು, ತ್ಯಜನ್ = ಕಡೆಗಣಿಸುತ್ತಾ, ಐಕ್ಯಶ್ರುತಿಂ = ಐಕ್ಯವನ್ನು ಹೇಳುವ ವೇದವಾಕ್ಯವನ್ನು, ಆದತ್ತೇ = ಸ್ವೀಕರಿಸುವನೋ, ತಥಾ = ಹಾಗೆ, ಕಾಮೀ = ಕಾಮುಕನಾದ, ಪತಿಃ = ಗಂಡನು, ಸತೀಃ = ಗರತಿಯರನ್ನು ಅತಿಕ್ರಮ್ಯ = ಕಡೆಗಣಿಸಿ, ಅಸತೀರತಿಃ = ಕುಲಟೆಯಲ್ಲಿ ಆಸಕ್ತಿಯುಳ್ಳವನಾಗಿ, ಸ್ಯಾತ್ = ಆಗುತ್ತಾನೆ.

ಭಾವಃ । ಇದಮಪಿ ಸಭಾಯಾಮಚ್ಯುತೋಽಹಮಿತ್ಯಾಘೋಷ್ಯ ಕರ್ಮಣಾ ಗಂಗಾಸ್ನಾನಾರ್ಥಂ ಗಚ್ಛತಿ । ಮಾಯಾವಾದಿಷ್ವೇವ ದೃಷ್ಟಮಿತಿ ಭಾವೇನೋಕ್ತಮ್ ॥ ಯ ಇತಿ ॥ ೬೧೭ ॥

**ವಿವರಣೆ–** ಬಾಯಿಯಿಂದ ಹೇಳುವುದೊಂದು, ಮಾಡುವುದು ಮತ್ತೊಂದು ಎನ್ನುವುದೇ ನೀಚರ ಸ್ವಭಾವ. ಮನೆಗೆ ಬಾ, ನಿನಗೆ ದೊಡ್ಡ ಮೊತ್ತದ ಧನವನ್ನು ಕೊಡುತ್ತೇನೆ ಎಂದು ಇವರು ಬಡವರಿಗೆ ಎಲ್ಲರೆದುರು ಆಶ್ವಾಸನೆಕೊಡುತ್ತಾರೆ. ಆದರೆ ಆತ ಮನೆಗೆ ಬಂದರೆ ಕುತ್ತಿಗೆ ಹಿಡಿದು ಹೊರದಬ್ಬುತ್ತಾರೆ.

ಅದ್ವೈತಿಗಳಲ್ಲಿಯೂ ಇದೇ ಸ್ವಭಾವ ಕಂಡಿದೆ. ಇವರು ಸಭೆಯಲ್ಲಿ ನಾನೇ ನಿರ್ದೋಷನಾದ ಪರಬ್ರಹ್ಮ ಎಂದು ಘೋಷಿಸುತ್ತಾರೆ. ಗಂಗಾನದಿಯಲ್ಲಿ ಸ್ನಾನವನ್ನೂ ಮಾಡುತ್ತಾರೆ. ಇವರೇ ಪರಬ್ರಹ್ಮನಾಗಿದ್ದರೆ ದೋಷರಹಿತರಾಗಿರಬೇಕಲ್ಲವೇ? ಹಾಗಾದರೆ ಪಾವಿತ್ರ್ಯಕ್ಕಾಗಿ ಗಂಗಾನದಿಗೆ ಏಕೆ ಹೋಗುತ್ತಾರೆ?

**ಕಾಣಸ್ಯ ಚಕ್ಷುರೇಕತ್ರ ಸಾಮ್ಯೇಽಪ್ಯನ್ಯತ್ರ ನಾಪತೇತ್ ।**
**ಯಜ್ವಪ್ರಸ್ತರತೋಕ್ತ್ಯಧ್ವಾ ದೃಷ್ಟೋ ನಾತ್ಮೈಕ್ಯವಾಕ್ಪಥಃ ॥ ೬೧೮ ॥**

**ಅರ್ಥ–** ಕಾಣಸ್ಯ = ಒಕ್ಕಣ್ಣನ, ಚಕ್ಷುಃ = ಕಣ್ಣು , ಸಾಮ್ಯೇ ಅಪಿ = ಎರಡು ಭಿನ್ನಪ್ರದೇಶಗಳಲ್ಲಿರುವ ವಸ್ತುಗಳು ಸಮಾನ ಅಂತರ ಮತ್ತು ಬೆಳಕಿನಲ್ಲಿ ಇದ್ದರೂ ಕೂಡ, ಏಕತ್ರ= ಕಣ್ಣಿನ ಜೊತೆಗೆ ಸಂಬಂಧ ಪಡೆದ ಒಂದು ಜಾಗದಲ್ಲಿರುವ ಘಟದಲ್ಲಿ, ಪತತಿ = ಬೀಳುತ್ತದೆ. (ವಸ್ತುವನ್ನು ತೋರಿಸುತ್ತದೆ.) ಅನ್ಯತ್ರ = ಕಣ್ಣುಗುಡ್ಡೆ ಸರಿಯಾಗಿಲ್ಲದ ಕಣ್ಣಿನ ಜೊತೆಗೆ ಸಂಬಂಧಪಡೆದ ಇನ್ನೊಂದು ಜಾಗದಲ್ಲಿರುವ ಘಟದಲ್ಲಿ , ನ ಆಪತೇತ್ = ಬೀಳುವುದಿಲ್ಲ (ವಸ್ತುವನ್ನು ತೋರಿಸುವುದಿಲ್ಲ.) ಮಾಯಾವಾದಿನಾ ಅಪಿ = ಅದ್ವೈತಿಯಿಂದಲೂ ಕೂಡ, ಯಜ್ವಪ್ರಸ್ತರತೋಕ್ತ್ಯಧ್ವಾ = ಯಜಮಾನನಿಗೆ ಪ್ರಸ್ತರತ್ವವನ್ನು ಹೇಳುವ ವೇದವಾಕ್ಯಕ್ಕೆ ಲಕ್ಷಣಾವನ್ನು ಹೇಳಬೇಕೆಂಬ ಬುದ್ಧಿವಂತಿಕೆಯ ಮಾರ್ಗವು, ದೃಷ್ಟಃ = ಕಾಣಲ್ಪಟ್ಟಿತು. ಕಿಂತು = ಆದರೆ, ಆತ್ಮೈಕ್ಯವಾಕ್‌ಪಥಃ = ಜೀವಾತ್ಮರಿಗೆ ಪರಮಾತ್ಮನಿಂದ ಐಕ್ಯವನ್ನು ಹೇಳುವ ವೇದವಾಣಿಗೆ ಲಕ್ಷಣಾವನ್ನು ಹೇಳಬೇಕೆನ್ನುವ ವಿದ್ವನ್ಮಾರ್ಗವು, ನ ದೃಷ್ಟಃ = ಕಾಣಲ್ಪಡಲಿಲ್ಲ.

**ಅನುವಾದ–** ಒಂದು ಕಣ್ಣುಳ್ಳವನ ಕಣ್ಣು ಎರಡು ವಸ್ತುಗಳು ಸಮಾನವಾಗಿದ್ದರೂ ಕೂಡ ಒಂದೇ ಕಡೆಯಲ್ಲಿ ಪ್ರವೃತ್ತವಾಗುತ್ತದೆಯೇ ಹೊರತು ಇನ್ನೊಂದು ಕಡೆಯಲ್ಲಿ ಪ್ರವೃತ್ತವಾಗುವುದಿಲ್ಲ. 'ಯಜಮಾನ ಪ್ರಸ್ತರಃ' ಎಂಬ ವಾಕ್ಯದಲ್ಲಿ ತೋರಿದ ಮಾರ್ಗವು 'ಸರ್ವಂ ಖಲ್ವಿದಂ ಬ್ರಹ್ಮ' ಎಂಬ ವಾಕ್ಯದಲ್ಲಿ ತೋರುವುದಿಲ್ಲವಷ್ಟೇ?

**ಭಾವವಿಲಾಸಿನೀ–** ಕಾಣಸಾಮ್ಯಮಪಿ ಮಾಯಾವಾದಿಷ್ವೇವ ದೃಷ್ಟಮಿತಿ ಭಾವೇನಾಹ – **ಕಾಣಸ್ಯೇತಿ** ॥ ಕಾಣಸ್ಯ ಏಕಚಕ್ಷುಷಃ । ಏಕತ್ರ ಚಕ್ಷುರ್ಭಾಗೇ । ಸಾಮ್ಯೇಽಪಿ ಸಮೀಪಸ್ಥತ್ವ -

ಸಾಮ್ಯೇಽಪಿ । ಅನ್ಯತ್ರ ನೇತ್ರಾಭಾವಪ್ರದೇಶೇ । ಯಸ್ಮಿನ್ ಭಾಗೇ ಚಕ್ಷುರಸ್ತಿ ತತ್ರತ್ಯಘಟಾದಿಕಂ ಪಶ್ಯತಿ । ಯಸ್ಮಿಂಶ್ಚ ಭಾಗೇ ಚಕ್ಷುರ್ನಾಸ್ತಿ ತದ್ಭಾಗಸ್ಥಂ ತತ್ಸಮಾನಯೋಗಕ್ಷೇಮಮಪಿ ಘಟಾದಿಕಂ ನ ಪಶ್ಯತೀತಿ ಭಾವಃ । ಕಥಮಿದಂ ಮಾಯಾವಾದಿನ್ಯಸ್ತೀತ್ಯತ ಉಕ್ತಮ್ – ಯಜ್ವೇತಿ ॥ ಯತ್-ಪ್ರಸ್ತರತೋಕ್ಯ್ಯಧ್ವಾ ಯಜಮಾನಃ ಪ್ರಸ್ತರ ಇತ್ಯುಕ್ತೇರ್ಮಾರ್ಗಃ । ಪ್ರತ್ಯಕ್ಷಬಾಧೇನ ಲಕ್ಷಣಾಂಗೀ-ಕಾರಾಖ್ಯೋ ವಿದ್ವನ್ಮಾರ್ಗ ಇತಿ ಯಾವತ್ । ಆತ್ಮೈಕ್ಯವಾಕ್ಪಥಃ ಆತ್ಮನಾ ಪರಮಾತ್ಮನೈಕ್ಯಂ ವದಂತೀ ಯಾ ವಾಕ್ತತ್ತ್ವಮಸ್ಯಾದಿರೂಪಾ ತಸ್ಯಾಃ ಪಂಥಾಃ ಮುಖ್ಯಾರ್ಥಬಾಧೇ ಲಕ್ಷಣಾಂಗೀ-ಕಾರಾಖ್ಯೋ ವಿದ್ವನ್ಮಾರ್ಗೋ ನ ದೃಷ್ಟಃ। ಸಮಾನಯೋಗಕ್ಷೇಮಯೋರ್ವಾಕ್ಯದ್ವಯಯೋರೇಕತ್ರ ಲಕ್ಷಣಾಮಂಗೀಕುರ್ವನ್ನನ್ಯತ್ರ ಚ ತಾಮಪಶ್ಯನ್ಕಾಣ ಏವೇತಿ ಭಾವಃ ॥ ೬೧೮ ॥

**ವಿವರಣೆ–** ಒಕ್ಕಣ್ಣನ ಎದುರಿಗೆ ಸಮಾನ ಅಂತರ ಮತ್ತು ಬೆಳಕಿನಲ್ಲಿ ಎಡಭಾಗದಲ್ಲಿ ಒಂದು ಘಟವೂ, ಬಲಭಾಗದಲ್ಲಿ ಮತ್ತೊಂದು ಘಟವೂ ಇರುವಾಗ ಆತನ ಕಣ್ಣುಗುಡ್ಡೆಸರಿಯಿರುವ ಕಣ್ಣು ಯಾವ ಭಾಗದ ಘಟದ ಮೇಲೆ ಬೀಳುವುದೋ ಅದನ್ನು ಆತ ನೋಡಬಲ್ಲ. ಆದರೆ ಕಣ್ಣುಗುಡ್ಡೆ ಸರಿಯಾಗಿಲ್ಲದ ಕಣ್ಣು ಮತ್ತೊಂದು ಭಾಗದ ಘಟದ ಮೇಲೆ ಬಿದ್ದರೂ ಅದನ್ನು ಆತನ ನೋಡಲಾರ.

ಇಂಥದೇ ದೌರ್ಬಲ್ಯವು ಮಾಯಾವಾದಿಗಳಲ್ಲಿಯೂ ಕಂಡಿದೆ. ಯಜ್ಞದ ಯಜಮಾನನನ್ನೇ ದರ್ಭೆಯಮುಷ್ಟಿ ಎಂದು ಹೇಳುವ ವೇದವಾಕ್ಯಕ್ಕೆ ಪ್ರತ್ಯಕ್ಷಬಾಧೆ ಬಂದಾಗ ಅಲ್ಲಿ ಯಜಮಾನನಿಗೆ ದರ್ಭಮುಷ್ಟಿಯು ಪ್ರತಿನಿಧಿ ಎಂಬುದಾಗಿ ಲಾಕ್ಷಣಿಕ ಅರ್ಥವನ್ನು ಹೇಳಬೇಕೆಂದು ಬುದ್ಧಿವಂತಿಕೆಯ ಮಾರ್ಗ ಅವರಿಗೆ ಸಿಕ್ಕಿತು. ಆದರೆ ಜೀವನನ್ನು ಬ್ರಹ್ಮನೆಂದು ಹೇಳುವ ವೇದವಾಕ್ಯಕ್ಕೂ ಪ್ರತ್ಯಕ್ಷಬಾಧೆ ಬಂದಾಗ ಅಲ್ಲಿಯೂ ಉಚಿತವಾದ ಲಾಕ್ಷಣಿಕಅರ್ಥವೊಂದನ್ನು ವಿವರಿಸಬೇಕೆಂಬ ವಿದ್ವನ್ಮಾರ್ಗವು ಅವರ ದೃಷ್ಟಿಗೆ ಗೋಚರವಾಗಲಿಲ್ಲ. ಹೀಗೆ ಸಮಾನಸ್ಥಿತಿಯಲ್ಲಿರುವ ಎರಡು ವೇದವಾಕ್ಯಗಳಲ್ಲಿ ಒಂದಕ್ಕೆ ಲಕ್ಷಣಾವನ್ನು ಒಪ್ಪಿ ಮತ್ತೊಂದಕ್ಕೆ ಅದನ್ನು ಒಪ್ಪಲು ಸಿದ್ಧರಾಗಿಲ್ಲದ ಇವರೂ ಒಕ್ಕಣ್ಣರೇ ಸರಿ.

**ಸತೀರತಿಕ್ರಮ್ಯ ಕಾಮೀ ಪತಿಃ ಸ್ಯಾದಸತೀಪತಿಃ ।**
**ಯಥೈಕ್ಯಶ್ರುತಿಮಾದತ್ತೇ ಭೇದಾದ್ಯರ್ಥಶ್ರುತೀಸ್ತ್ಯಜನ್ ॥ ೬೧೯ ॥**

**ಅರ್ಥ–** ಯಥಾ = ಹೇಗೆ, ಮಾಯಾವಾದೀ = ಅದ್ವೈತಿಯು, ಭೇದಾದಿ–ಅರ್ಥಶ್ರುತೀಃ = ಭೇದ, ಸತ್ಯತ್ವ ಮುಂತಾದ ಅರ್ಥವನ್ನು ಕೊಡುವ ವೇದವಾಕ್ಯಗಳನ್ನು, ತ್ಯಜನ್ = ಕಡೆಗಣಿಸುತ್ತಾ, ಐಕ್ಯಶ್ರುತಿಂ = ಐಕ್ಯವನ್ನು ಹೇಳುವ ವೇದವಾಕ್ಯವನ್ನು, ಆದತ್ತೇ = ಸ್ವೀಕರಿಸುವನೋ, ತಥಾ = ಹಾಗೆ, ಕಾಮೀ = ಕಾಮುಕನಾದ, ಪತಿಃ = ಗಂಡನು, ಸತೀಃ = ಗರತಿಯರನ್ನು ಅತಿಕ್ರಮ್ಯ = ಕಡೆಗಣಿಸಿ, ಅಸತೀರತಿಃ = ಕುಲಟೆಯಲ್ಲಿ ಆಸಕ್ತಿಯುಳ್ಳವನಾಗಿ, ಸ್ಯಾತ್ = ಆಗುತ್ತಾನೆ.

**ಅನುವಾದ–** ಕಾಮಿಯಾದವನು ಶುದ್ಧಸ್ವಭಾವವುಳ್ಳ ಪತಿವ್ರತೆಯಾದ ಸತಿಯನ್ನು ಬಿಟ್ಟು ಅಸತಿಯನ್ನು ಸೇವಿಸುತ್ತಾನಷ್ಟೇ? ಹೇಗೆ ನಿರ್ದುಷ್ಟವಾದ ಭೇದ ಪ್ರತಿಪಾದಕವಾದ ಶ್ರುತಿಗಳನ್ನು ಬಿಟ್ಟು ಐಕ್ಯಶ್ರುತಿಯನ್ನು ಮಾಯಾವಾದಿಯು ಸ್ವೀಕರಿಸುತ್ತಾನೆಯೋ ಅದರಂತೆ.

**ಭಾವವಿಲಾಸಿನೀ–** ಕಾಮೀ ಕಾಮಾಂಧಃ ಪತಿಃ । ಸತೀಃ ಕುಲಜಾಃಪತ್ನೀರತಿಕ್ರಮ್ಯ । ಅಸತ್ಯಾಂ ದಾಸ್ಯಾಂ ವೇಶ್ಯಾಯಾಂ ವಾ ರತಿರ್ಯಸ್ಯ ಸ ತಥೋಕ್ತಃ ಸ್ಯಾತ್ । ಕಾಮಾಂಧಸ್ಯ ಪತ್ಯುಃ ಸತ್ಯತಿಕ್ರಮೋ ಸತೀಪರೀಗ್ರಹಶ್ಚ ಯುಕ್ತ ಏವೇತಿ ಭಾವಃ । ತತ್ಕುತ್ರ ದೃಷ್ಟಮಿತ್ಯತ ಆಹ – ಯಥೇತಿ ॥ ಭೇದಾದ್ಯರ್ಥಶ್ರುತೀಃ ಭೇದಸರ್ವೋತ್ತಮತ್ವಾದ್ಯರ್ಥಪ್ರತಿಪ್ರಾದಿಕಾಃ ದ್ವಾಸುಪರ್ಣೇತ್ಯಾದ್ಯಾಃ ಶ್ರುತೀಸ್ತ್ಯಜನ್ಮಾಯಾವಾದೀ ಯಥೈಕ್ಯಶ್ರುತಿಂ ಸರ್ವಂ ಖಲ್ವಿದಂ ಬ್ರಹ್ಮೇತ್ಯಾದಿ ಶ್ರುತಿಮಾದತ್ತೇ ತಥೇದಮಪಿ ಸ್ಯಾದಿತಿ ಪೂರ್ವೇಣಾನ್ವಯಃ । ಪ್ರತ್ಯಕ್ಷಬಾಧಾದಿ ದೋಷರಹಿತಾಯಾಃ ಸ್ವಾರ್ಥೇಽರ್ಥಾಂತರೇ ಚಾವಕಾಶಾಖ್ಯದೋಷರಹಿತಾಯಾಶ್ಚ ಸಹಜಸ್ತ್ರೀ ಸಮಾನಾಯಾಭೇದಶ್ರುತೇಃ ಪರಿತ್ಯಾಗಾತ್ ಪ್ರತ್ಯಕ್ಷಬಾಧಾದಿದೋಷದುಷ್ಟಾಯಾಃ ಸ್ವೈರಿಣೀವದರ್ಥಾಂತರೇಽಪ್ಯವಕಾಶಂ ದದತ್ಯಾ ಐಕ್ಯಶ್ರುತೇಃ ಪರಿಗ್ರಹಾಚ್ಚ ಕಾಮಾಂಧೋಪಮಾಪಿ ಮಾಯಿನ ಇತಿ ಭಾವಃ ॥ ೬೧೯ ॥

**ವಿವರಣೆ–** ಮಾಯಾವಾದಿಗಳು ಜೀವೇಶಭೇದ, ಜಗತ್ಸತ್ಯತ್ವ, ಹರಿಸರ್ವೋತ್ತಮತ್ವ ಮುಂತಾದ ವಿಷಯಗಳನ್ನು ಸಾರುವ ವೇದವಾಕ್ಯಗಳನ್ನು ಆದರಿಸದೇ ಐಕ್ಯ, ಮಿಥ್ಯಾತ್ವಗಳನ್ನು ಹೇಳುವಂತೆ ತೋರುವ ವೇದವಾಕ್ಯಗಳನ್ನೇ ಸ್ವೀಕರಿಸುತ್ತಾರೆ. ಅವರಿಗೆ ತಮ್ಮ ಸಿದ್ಧಾಂತವನ್ನು ಹೇಗಾದರೂ ಮಾಡಿ ಸಮರ್ಥಿಸುವ ಹಂಬಲ ಇರುವುದೇ ಹೊರತು, ವೇದದ ನಿಜವಾದ ತಾತ್ಪರ್ಯವನ್ನು ಅರಿಯುವುದರಲ್ಲಿ ಇಲ್ಲ. ಅದರಂತೆ ಕಾಮುಕರು ಪತಿವ್ರತೆಯರಾದ ತಮ್ಮ ಪತ್ನಿಯರ ಕಡೆ ಗಮನಹರಿಸದೇ, ದುಷ್ಟಸ್ತ್ರೀಯರ ಸಂಗಮಾಡುತ್ತಾರೆ. ಅವರಿಗೂ ತಮ್ಮ ಕಾಮವನ್ನು ತಣಿಸಿಕೊಳ್ಳುವ ಹಂಬಲ ಮಾತ್ರವೇ ಇರುತ್ತದೆ ಹೊರತು ಪತ್ನಿಯರ ಸುಖದ ಕಡೆಗಲ್ಲ.

ಈ ಹಿಂದೆ ಹೇಳಿದ ಅರ್ಥದಲ್ಲಿ ಅದ್ವೈತಿಗಳ ಮನೋಭಾವವನ್ನು ದೃಷ್ಟಾಂತ (ಉಪಮಾನ) ವನ್ನಾಗಿ ಮಾಡಿಕೊಂಡು ಕಾಮುಕರ ಸ್ವಭಾವವನ್ನು ದಾರ್ಷ್ಟಾಂತಿಕವನ್ನಾಗಿ (ಉಪಮೇಯವನ್ನಾಗಿ) ವರ್ಣಿಸಲಾಗಿದೆ. ಇದಕ್ಕೆ ವಿರುದ್ಧವಾಗಿ ಕಾಮುಕಸ್ವಭಾವವನ್ನೇ ದೃಷ್ಟಾಂತಮಾಡಿಕೊಂಡು ಅದ್ವೈತಿಗಳ ಮನೋಭಾವವನ್ನು ದಾರ್ಷ್ಟಾಂತಿಕವನ್ನಾಗಿ ವರ್ಣಿಸಲೂಬಹುದು. ಪತಿವ್ರತಾಸ್ತ್ರೀಗೂ ಮತ್ತು ಭೇದಶ್ರುತಿಗೆ ಹೋಲಿಕೆಯಿದೆ. ಪತಿವ್ರತಾಸ್ತ್ರೀ ತನ್ನ ಗಂಡನಿಗೆ ಮಾತ್ರ ನಿಷ್ಠಳಾಗಿರುವುದರಿಂದ ನಿರ್ದೋಷಳಾಗಿರುತ್ತಾಳೆ. ಅಂತೆಯೇ ಭೇದಶ್ರುತಿಯು ಪ್ರತ್ಯಕ್ಷಬಾಧಾದಿದೋಷಗಳಿಂದ ಮತ್ತು ಅರ್ಥಾಂತರಕ್ಕೆ ಅವಕಾಶವಿರುವಿಕೆಯೆಂಬ ದೋಷದಿಂದ ರಹಿತವಾಗಿರುತ್ತದೆ. (ಆ ಶ್ರುತಿಗೆ ಭೇದದ

ಅರ್ಥವನ್ನು ವರ್ಣಿಸುವುದರ ಹೊರತು ಗತ್ಯಂತರವಿಲ್ಲ) ಇಂತಹ ಭೇದಶ್ರುತಿಯನ್ನು ಅದ್ವೈತಿಗಳು ಪರಿತ್ಯಾಗಮಾಡಿದ್ದಾರೆ.

ಅವರು ಸ್ವೀಕಾರಮಾಡಿರುವ ಐಕ್ಯಶ್ರುತಿಯು ನಡತೆತಪ್ಪಿದ ಸ್ತ್ರೀಗೆ ಸಮಾನವಾಗಿದೆ. ಆ ಸ್ತ್ರೀಯು ಯಾವ ಒಬ್ಬ ಪುರುಷನಿಗೂ ನಿಷ್ಠಳಾಗಿರುವುದಿಲ್ಲ. ಅಂತೆಯೇ ಐಕ್ಯಶ್ರುತಿಯು ಐಕ್ಯವನ್ನು ಬಿಟ್ಟು ಬೇರೆ ಅರ್ಥಗಳಿಗೂ ಅವಕಾಶಕೊಡುವಂತಹದಾಗಿದೆ ಮತ್ತು ಪ್ರತ್ಯಕ್ಷಬಾಧಾದಿದೋಷಗಳಿಂದ ಕೂಡಿದೆ, ಹೀಗೆ ಅದ್ವೈತಿಗಳ ಮನೋಭಾವವು ಕಾಮುಕರ ಸ್ವಭಾವಕ್ಕೆ ಸಮಾನವಾಗಿದೆ.

**ಶಬ್ದಸಾಮ್ಯೇಽಪಿ ನಾರ್ಥೈಕ್ಯಂ ಯತ್ರ ಚಿತ್ರಚರಿತ್ರತಾ ।**
**ವೃತ್ತ್ಯಂಶವದ್ಧಿ ಜೀವೋಂಶೋ ಮತ್ಸ್ಯಾದ್ಯಂಶಾಸ್ತು ಮೂಲವತ್ ॥ ೬೨೦ ॥**

**ಅರ್ಥ–** ಯತ್ರ = ವಿಷ್ಣುಕಪ್ಪೆ ಮೊದಲಾದವುಗಳಲ್ಲಿ, ಚಿತ್ರಚರಿತ್ರತಾ = ವಿಷ್ಣುವಿನಲ್ಲಿ ಮಹಾಸಮಾರ್ಥ್ಯ, ಕಪ್ಪೆಯಲ್ಲಿ ಅಲ್ಪಸಾಮರ್ಥ್ಯಮುಂತಾದ ವಿರುದ್ಧಧರ್ಮಗಳು ಇವೆಯೋ, ತತ್ರ = ಅವುಗಳಲ್ಲಿ, ಶಬ್ದಸಾಮ್ಯೇಽಪಿ = ಹರಿ ಇತ್ಯಾದಿ ಒಂದೇ ಶಬ್ದದಿಂದ ವಾಚ್ಯತ್ವವೆಂಬ ಸಮಾನತೆಯಿದ್ದರೂ, ಅರ್ಥೈಕ್ಯಂ = ಆ ಶಬ್ದದ ಅರ್ಥಗಳಾದ ವಿಷ್ಣುಮತ್ತು ಕಪ್ಪೆ ಮುಂತಾದವುಗಳಲ್ಲಿ ಏಕತೆಯು, ನ = ಇಲ್ಲ. ಅದರಂತೆಯೇ, ವೃತ್ತ್ಯಂಶಜೀವಃ = ತಂದೆಯ ಒಂದೇ ವೃತ್ತಿಯನ್ನು ಹಂಚಿಕೊಳ್ಳುವ ಮಕ್ಕಳ ಅಂಶಗಳಂತೆ ಜೀವಾತ್ಮನು, ಪರಮಾತ್ಮನಃ = ಪರಮಾತ್ಮನ, ಅಂಶಃ = ಅಂಶನು. ಮತ್ಸ್ಯಾದ್ಯಂಶಾಃ ತು = ಮತ್ಸ್ಯಕೂರ್ಮಾದಿಅವತಾರರೂಪ ಅಂಶಗಳಾದರೂ, ಮೂಲವತ್ = ಮೂಲರೂಪವಾದ ನಾರಾಯಣನಂತೆಯೇ ಅತ್ಯಂತಾಭಿನ್ನಗಳಾಗಿವೆ. ಹಿ = ಇದು ಪುರಾಣಪ್ರಸಿದ್ಧವು.

**ಅನುವಾದ–** ಶಬ್ದಸಾಮ್ಯವಿದ್ದರೂ ಅರ್ಥದಲ್ಲಿ ಎಲ್ಲಿ ವೈಲಕ್ಷಣ್ಯವಿರುತ್ತದೆಯೋ, ಅಲ್ಲಿ ಅರ್ಥೈಕ್ಯವಿರುವುದಿಲ್ಲ. ಜೀವರು ಅಂಶರೆಂದರೆ ಒಂದು ಜೀವನ ವೃತ್ತಿಯ ಅಂಶಗಳಿದ್ದಂತೆ. ಆದರೆ ಮತ್ಸ್ಯಾದಿಗಳು ಅಂಶವೆಂದರೆ ಮೂಲರೂಪನಾದ ನಾರಾಯಣನಂತೆಯೇ.

**ಭಾವವಿಲಾಸಿನೀ–** ಅಧುನಾ ಭಿನ್ನಾಂಶಾನಾಂಭಿನ್ನಾಭಿನ್ನಾಂಶಾನಾಮ ಭಿನ್ನಾಂಶಾನಾಂ ಚ ಲೋಕವೇದಸಿದ್ಧತ್ವಾತ್ ಅಂಶಾಂಶಿಭಾವೇಽಪಿ ನ ಜೀವಬ್ರಹ್ಮಣೋರೈಕ್ಯಮಿತ್ಯಾಹ – **ಶಬ್ದೇತಿ** ॥ ಯತ್ರ ವಿಷ್ಣುಭೇಕಾದೌ ಚಿತ್ರಚರಿತ್ರತಾ ಮಹಾಸಾಮಾರ್ಥ್ಯಾಲ್ಪಸಾಮರ್ಥ್ಯಾಖ್ಯವಿಚಿತ್ರಚರಿತ್ರತಾ। ತತ್ರ ಶಬ್ದಸಾಮ್ಯೇಽಪಿ ಹರ್ಯಾದಿಶಬ್ದಸಾಮ್ಯೇಪಿ ಅರ್ಥೈಕ್ಯಂ ಅರ್ಥಭೂತಯೋರ್ವಿಷ್ಣು-ಭೇಕಯೋರೇಕಪ್ರಕಾರತಾ ನ । ತತ್ಕುತ್ರ ದೃಷ್ಟಮಿತ್ಯತ ಉಕ್ತಮ್ ॥ **ವೃತ್ತ್ಯಂಶವದಿತಿ** ॥ ವೃತ್ತೇರಂಶಃ ವೃತ್ತ್ಯಂಶಃ । ಯಥಾ ಬಹೂನಾಮೇಕವೃತ್ತಿಭೋಕ್ತೃತ್ವೇಽಯಮಸ್ಯಾಂಶೋಽಯಮಸ್ಯಾಂಶ ಇತ್ಯಂಶಾಂಶಿಭಾವವ್ಯವಹಾರೇಽಪಿ ನಾಂಶಿನಾಂ ಭೋಕ್ತೃಣಾಂ ತೈರಂಶೈರೈಕ್ಯಮ್ ಕಿಂತು

ತತ್ಸ್ವಾಮಿತ್ವಮೇವ । ತಥಾ ಜೀವಃ ಅಂಶಃ ಪರಮಾತ್ಮನೋಂऽಶಃ ಅಂಶತಯಾ ಪುರಾಣಾದಿಷು ವ್ಯವಹ್ರಿಯಮಾಣೋऽಪಿ ಜೀವಃ ಅಂಶಿನಃ ಪರಮಾತ್ಮನಃ ಪೃಥಗೇವ । ಕೇವಲಂ ಭಗವದ-ಧೀನತ್ವಾದ್ವಗತ್ಸ್ವಾಮಿಕತ್ವಾದ್ವಾ ತದಂಶ ಇತ್ಯರ್ಥಃ । ಮತ್ಸ್ಯಾದ್ಯಂಶಾಸ್ತು ಮೂಲವತ್ ಮೂಲ-ರೂಪನಾರಾಯಣವತ್ । ಅಂಶಪದಸಾಮ್ಯೇऽಪಿ ಜೀವಾನಾಮಲ್ಪಶಕ್ತಿತ್ವಾತ್ ಭಿನ್ನಾಂಶತ್ವಂ ಮತ್ಸ್ಯಾದೀನಾಮಂಶಿವದತಿ ಸಮರ್ಥತ್ವಾದಭಿನ್ನಾಂಶತ್ವಮಿತಿ ಭಾವ । ತಸ್ಮಾತ್ ವಿಚಿತ್ರ-ಚರಿತ್ರಯೋಃ ಶಬ್ದ ಸಾಮ್ಯೇऽಪಿ ನಾರ್ಥೈಕ್ಯಮಿತಿ ಭಾವಃ ॥ ೬೨೦ ॥

**ವಿವರಣೆ–** ಭಗವಂತನಾದ ವಿಷ್ಣುವು ಮಹಾಸಾಮರ್ಥ್ಯವುಳ್ಳವನಾಗಿದ್ದರೆ ಕಪ್ಪೆಯು ಅಲ್ಪಸಾಮರ್ಥ್ಯವುಳ್ಳದ್ದಾಗಿದೆ. ಆದರೆ ಅವರಿಬ್ಬರೂ ಹರಿ ಎಂಬ ಒಂದೇ ಶಬ್ದದಿಂದ ವಾಚ್ಯರಾಗಿದ್ದಾರೆ. ಹಾಗೆಂದು ಅವರಿಬ್ಬರಿಗೆ ಅಭೇದವೇನಿಲ್ಲ. ಅಂತೆಯೇ ಜೀವರೂ ಅಂಶಶಬ್ದವಾಚ್ಯರಾಗಿದ್ದಮಾತ್ರಕ್ಕೆ ಅವರು ಹರಿಯಿಂದ ಅತ್ಯಂತಾಭಿನ್ನರಾಗಬೇಕಿಲ್ಲ. ಏಕೆಂದರೆ ಹರಿಶಬ್ದವು ವಿಷ್ಣು ಮತ್ತು ಕಪ್ಪೆ ಎಂಬ ಎರಡು ಪ್ರತ್ಯೇಕ ಅರ್ಥಗಳನ್ನು ಹೇಳುವಂತೆ ಅಂಶ ಶಬ್ದವು ತನಗಿಂತ ಭಿನ್ನ ಆದರೆ ತನ್ನ ಅಧೀನ ಎಂಬ ಅರ್ಥವನ್ನು ಮತ್ತು ತನ್ನ ಎಲ್ಲ ಸಾಮರ್ಥ್ಯವನ್ನೂ ಪಡೆದ, ತನಗಿಂತ ಅತ್ಯಂತಾಭಿನ್ನ ಎಂಬ ಎರಡು ಅರ್ಥಗಳನ್ನು ಕೊಡುತ್ತದೆ.

ಉದಾಹರಣೆಗೆ ಒಂದು ತಂದೆಯ ಮಕ್ಕಳು ಉಪಜೀವನಕ್ಕಾಗಿ ಒಂದೇ ವೃತ್ತಿಯನ್ನು ಹಂಚಿಕೊಂಡಾಗ ಇವನಿಗೆ ವೃತ್ತಿಯ ಈ ಅಂಶ (ಪಾಲು) ಅವನಿಗೆ ವೃತ್ತಿಯ ಆ ಅಂಶ (ಪಾಲು) ಎಂದು ಗುಂಪಿನ ಎಲ್ಲ ಸದಸ್ಯರಿಗೂ ಕೆಲಸವನ್ನು ಹಂಚಿಕೊಡಲಾಗಿರುತ್ತದೆ. ಆಯಾ ಸದಸ್ಯರಿಗೂ ಅವರವರ ಅಂಶಗಳಿಗೂ (ಪಾಲಗಳಿಗೂ) ಇಲ್ಲಿ ಅಭೇದವೇನಿಲ್ಲ. ಆಯಾ ಸದಸ್ಯನು ತನ್ನ ತನ್ನ ಅಂಶಕ್ಕೆ (ಪಾಲಿಗೆ) ಯಜಮಾನನು ಮಾತ್ರವೇ ಆಗಿರುತ್ತಾನೆ. ಹಾಗೆಯೇ ಜೀವನನ್ನು ಭಗವಂತನ ಅಂಶವೆಂದು ಶಾಸ್ತ್ರಗಳಲ್ಲಿ ಹೇಳಲಾಗಿದ್ದರೂ ಆತನು ಪರಮಾತ್ಮನಿಗಿಂತ ಭಿನ್ನನೇ ಆಗಿರುತ್ತಾನೆ. ಆದರೂ ಭಗವದಧೀನನೂ, ಭಗವಂತನ ದಾಸನೂ ಎಂಬ ಅರ್ಥದಲ್ಲಿ ಮಾತ್ರ ಅವನನ್ನು ಅಂಶ ಎನ್ನಲಾಗುತ್ತದೆ.

ಮತ್ಸ್ಯಾದಿ ಅವತಾರಾಂಶಗಳನ್ನು ಭಗವಂತನ ಅಂಶ ಎನ್ನಲಾಗುತ್ತದೆ. ಆದರೆ ಅವು ಮೂಲರೂಪವಾದ ನಾರಾಯಣನಂತೆಯೇ ಮಹಾಸಾಮರ್ಥ್ಯವುಳ್ಳವುಗಳೂ, ಆತನಿಂದ ಅತ್ಯಂತಾಭಿನ್ನಗಳೂ ಆಗಿವೆ. ಹೀಗೆ ವೃತ್ತ್ಯಂಶಗಳೂ ಭಗವಂತನ ಅಂಶಗಳೂ ಎರಡೂ ಅಂಶಶಬ್ದವಾಚ್ಯಗಳೇ ಆಗಿದ್ದರೂ ಅವೆರಡಕ್ಕೂ ವ್ಯತ್ಯಾಸವಿದೆ.

ಹಾಗಾಗಿ ವಿಭಿನ್ನಧರ್ಮಗಳುಳ್ಳ ಎರಡು ವಸ್ತುಗಳು ಒಂದೇ ಶಬ್ದದಿಂದ ವಾಚ್ಯಗಳಾದರೂ ಅಭಿನ್ನಗಳಾಗಲಾರವು ಎಂದು ಅರ್ಥ.

ಸ್ವರೂಪಾಂಶೋऽಸ್ತಿ ಭಿನ್ನಾಂಶೋऽಪ್ಯಸ್ತಿ ಶಬ್ದವಿಶೇಷಣಾತ್ ।
ಏತೇ ಕಿಲ ಸ್ವಾಂಶಕಲಾ ಜೀವಾಃ ಸರ್ವೇ ಕಲಾಃ ಕಿಲ ॥ ೬೨೧ ॥

**ಅರ್ಥ**– ಶಬ್ದವಿಶೇಷಣಾತ್ = ಅಂಶವಾಚಕವಾದ ಕಲಾಶಬ್ದಕ್ಕೆ, ವಿಶೇಷಣಾತ್ = ಸ್ವಾಂಶ ಎಂಬ ವಿಶೇಷಣವನ್ನು ಕೊಟ್ಟಿದ್ದರಿಂದ, ಸ್ವರೂಪಾಂಶಃ = ಭಗವಂತನ ಸ್ವರೂಪಕ್ಕೆ ಅಭಿನ್ನವಾದ ಅವತಾರರೂಪವು, (ಅವತಾರರೂಪಗಳು) ಅಸ್ತಿ = ಇದೆ. ಭಿನ್ನಾಂಶಃ ಅಪಿ = ಭಗವಂತನ ಸ್ವರೂಪಕ್ಕಿಂತ ಭಿನ್ನವಾದ ಅಂಶವೂ (ಅಂಶರಾದ ಜೀವಿಗಳು) ಕೂಡ, ಅಸ್ತಿ = ಇದೆ. ಏತೇ = ಮತ್ಸ್ಯ, ಸನತ್ಕುಮಾರಾದಿ ಅವತಾರಗಳು, ಸ್ವಾಂಶಕಲಾಃ = ಭಗವಂತನ ಸ್ವರೂಪಾಂಶಗಳು, ಕಿಲ = ಆಗಿವೆಯಷ್ಟೇ! ಸರ್ವೇ = ಎಲ್ಲ ಜೀವಾಃ = ಜೀವಾತ್ಮರು, ಕಲಾಃ = ಕೇವಲ ಅಂಶಗಳ, ಕಿಲ = ಆಗಿದ್ದಾರಷ್ಟೇ!

**ಅನುವಾದ**– ಸ್ವರೂಪಾಂಶವೂ ಇದೆ ಮತ್ತು ಭಿನ್ನಾಂಶವೂ ಇದೆ. ಭಾಗವತಕಾರರಾದ ವೇದವ್ಯಾಸರು ಭಿನ್ನಾಂಶರಾದ ಜೀವರನ್ನು ಕೇವಲ ಕಲಾಃ ಎಂದು ಹೇಳಿ ಮತ್ಸ್ಯಾದಿಗಳನ್ನು ಸ್ವಾಂಶಕಲಾಃ ಎಂದು ಸ್ವಾಂಶ ಎಂಬ ವಿಶೇಷಣವನ್ನು ಕೊಟ್ಟು ಹೇಳಿದ್ದಾರಷ್ಟೇ?

**ಭಾವವಿಲಾಸಿನೀ**– ಮತ್ಸ್ಯಾದೀನಾಂ ಸ್ವರೂಪಾಂಶತ್ವೇ ಜೀವಾನಾಂ ಭಿನ್ನಾಂಶತ್ವೇ ಚ ಭಾಗವತೋಕ್ತಿಚಾತುರ್ಯಮೇವ ಪ್ರಮಾಣಮಿತಿ ಭಾವೇನಾಹ – **ಸ್ವರೂಪಾಂಶ ಇತಿ** ॥ ಶಬ್ದ-ವಿಶೇಷಣಾತ್ ಅಂಶವಾಚಕಕಲಶಬ್ದಸ್ಯ ಸ್ವಾಂಶಪದೇನ ವಿಶೇಷಣಾತ್ । ಉಪಲಕ್ಷಣಂ ಚೈತತ್ । ತೇನಾವಿಶೇಷಣಾದಿತ್ಯಾಪಿ ದ್ರಷ್ಟವ್ಯಮ್ । ಏತೇ ಕಿಲ ಸ್ವಾಂಶಕಲ ಇತ್ಯನೇನ ಏತೇ ಸ್ವಾಂಶಕಲಾಃ ಪುಂಸಃ ಕೃಷ್ಣಸ್ತು ಭಗವಾನ್ ಸ್ವಯಮಿತಿ ವಾಕ್ಯಂ ಸಂಗೃಹ್ಣಾತಿ । ಸ್ವಾಂಶಕಲಾಃ ಸ್ವರೂಪ ಭೂತಾಂಶ-ಕಲಾಃ । ಸ್ವಃ ಸ್ವರೂಪಭಾತಶ್ಚಾಸಾವಂಶಶ್ಚೇತಿ ಸ್ವಾಂಶಪದಸ್ಯ ಸ್ವರೂಪಾಂಶ ವಾಚಕತ್ವಾತ್ । ಪುಂಸಃ ಪುರುಷಸ್ಯ ನಾರಾಯಣಸ್ಯ ಸ್ವಾಂಶಕಲಾಃ ಸ್ವಾಂಶಕಲಾರೂಪಾಃ ಏತೇ ಮತ್ಸ್ಯಾದ್ಯಾಃ ಸ್ವಯಂ ಭಗವಾನ್ ಕೃಷ್ಣಃ ಶ್ವೇತದ್ವೀಪವಾಸೀ ನೀಲಮೇಘಶ್ಯಾಮಲಃ ಪದ್ಮನಾಭ ಏವ । ತುಶಬ್ದ ಏವಾರ್ಥೇ । ಅಸ್ಮಿನ್ಪದ್ಯೇ ಮತ್ಸ್ಯಾದೀನಾಂ ಸ್ವಾಂಶಕಲಾತ್ವೇನ ವ್ಯವಹಾರಾತ್ ಸ್ವರೂಪಾಂಶತ್ವಮಿತಿ ಭಾವಃ । ಜೀವಾಃಸರ್ವೇ ಕಲಾಃಕಿಲೇತ್ಯನೇನ ಕಲಾಸ್ಸರ್ವೇ ಹರೇರೇವ ಸಪ್ರಜಾಪತಯಃ ಸ್ಮೃತಾ ಇತ್ಯುತ್ತರವಾಕ್ಯಂ ಸಂಗೃಹ್ಣಾತಿ । ಅತ್ರ ಚ ಬ್ರಹ್ಮಾದಿಜೀವಾನಾಂ ಪ್ರಸ್ತುತಂ ಸ್ವಾಂಶಕಲಾತ್ವಂ ವಿಹಾಯ ಕಲಾ ಇತಿ ಕೇವಲಂ ಸ್ವಾಶಪದಾವಿಶೇಷಿತಿ ಕಲಾಪದೇನೈವೋಕ್ತೇರ್ನ ಮತ್ಸ್ಯಾದಿವತ್ ಸ್ವರೂಪಾಂಶತ್ವಂ ಕಿಂತು ಭಿನ್ನಾಂಶತ್ವಮೇವ । ಅತಃ ಶಬ್ದ ವಿಶೇಷಣಾತ್ ಸ್ವರೂಪಾಂಶೋಽಸ್ತಿ ಭಿನ್ನಾಂಶೋಽಪ್ಯಸ್ತೀತಿ ಪೂರ್ವೇಣ ಸಂಬಂಧಃ ॥ ೬೨೧ ॥

**ವಿವರಣೆ**– ಭಾಗವತಕಾರರು ಸ್ವಾಂಶ ಎಂಬ ವಿಶೇಷಣವನ್ನು ವಿಶೇಷ ಚತುರತೆಯಿಂದ ಪ್ರಯೋಗಿಸಿರುವುದೇ, ಭಗವಂತನಿಗೆ ಅಭಿನ್ನಾಂಶಗಳೂ, ಭಿನ್ನಾಂಶಗಳೂ ಇವೆ ಎಂಬುದಕ್ಕೆ ಪ್ರಮಾಣವಾಗಿದೆ.

ಭಾಗವತದ ಪ್ರಥಮಸ್ಕಂಧದ ಮೂರನೇ ಅಧ್ಯಾಯದ ಇಪ್ಪತ್ತೇಳನೇ ಶ್ಲೋಕ ಹೀಗಿದೆ-

**ಋಷಯೋ ಮನವೋ ದೇವಾಃ ಮನುಪುತ್ರಾ ಮಹೌಜಸಃ ।**
**ಕಲಾಃ ಸರ್ವೇ ಹರೇರೇವ ಸಪ್ರಜಾಪತಯಸ್ತಥಾ ॥**

ಋಷಿಗಳು, ಮನುಗಳು, ದೇವತೆಗಳು, ಮನುಪುತ್ರರು ಮತ್ತು ಪ್ರಜಾಪತಿಗಳು ಮುಂತಾದವರು ಹರಿಯ ಕಲೆಗಳೇ ಆಗಿದ್ದಾರೆ.

ಇಪ್ಪತ್ತೆಂಟನೆಯ ಶ್ಲೋಕದ ಪೂರ್ವಾರ್ಧ ಹೀಗಿದೆ -

**ಏತೇ ಸ್ವಾಂಶಕಲಾಃ ಪುಂಸಃ ಕೃಷ್ಣಸ್ತು ಭಗವಾನ್ ಸ್ವಯಂ ॥**

ಮತ್ಸ್ಯ, ಸನತ್ಕುಮಾರಾದಿರೂಪಗಳು ಭಗವಾನ್ ಕೃಷ್ಣನ ಸ್ವಾಂಶಕಲೆಗಳೇ ಆಗಿವೆ. ಮೊದಲ ಶ್ಲೋಕದಲ್ಲಿರುವ ಕಲಾ ಶಬ್ದಕ್ಕೆ ವ್ಯಾಸರು ಯಾವ ವಿಶೇಷಣವನ್ನೂ ಕೊಡದೆ, ಎರಡನೆಯ ಶ್ಲೋಕದಲ್ಲಿರುವ ಕಲಾ ಶಬ್ದಕ್ಕೆ ಸ್ವಾಂಶ ಎಂಬ ವಿಶೇಷಣಕೊಟ್ಟಿದ್ದಾರೆ. ಸ್ವಾಂಶ ಎಂದರೆ ಭಗವಂತನ ಸ್ವರೂಪಾಂಶ ಎಂದರ್ಥ. ಆ ಸ್ವರೂಪಾಂಶದ ವಿಭಿನ್ನ ರೂಪಗಳಾದ ಈ ಮತ್ಸ್ಯ, ಸನತ್ಕುಮಾರಾದಿಗಳು ಶ್ವೇತದ್ವೀಪವಾಸಿಯಾದ ನೀಲಮೇಘಶ್ಯಾಮನಾದ ಭಗವಾನ್ ಶ್ರೀಕೃಷ್ಣನಲ್ಲದೇ ಬೇರೆ ಯಾರೂ ಅಲ್ಲ.

ಭಗವಂತನ ಮತ್ಸ್ಯಾದಿರೂಪಗಳಿಗಿರುವ ಸ್ವರೂಪಾಂಶತ್ವವು (ಅತ್ಯಂತಾಭೇದವು) ಬ್ರಹ್ಮಾದಿಗಳಿಗೂ ಇದೆಯೋ ಎಂಬ ಸಂದೇಹ ಬರಬಹುದು. ಅದಕ್ಕಾಗಿಯೇ ಹಿಂದಿನ ಶ್ಲೋಕದಲ್ಲಿ ಸ್ವಾಂಶ ಎಂಬ ವಿಶೇಷಣವಿಲ್ಲದೇ ಎಲ್ಲ ಜೀವರೂ ಭಗವಂತನ ಕಲೆಗಳು ಮಾತ್ರ ಎಂದು ಹೇಳಿದ್ದಾರೆ. ಹಾಗಾಗಿ ಅವರು ಹರಿಯ ಭಿನ್ನಾಂಶರೆಂದೇ ಸಿದ್ಧವಾಗುತ್ತದೆ.

ಭಾಗವತದ ಅನೇಕ ವ್ಯಾಖ್ಯಾನಕಾರರು ಇಪ್ಪತ್ತೆಂಟನೇ ಶ್ಲೋಕದ ಪೂರ್ವಾರ್ಧ ಎರಡೂ ಪಾದಗಳನ್ನು ಪ್ರತ್ಯೇಕವಾಕ್ಯಗಳೆಂದು ಪರಿಗಣಿಸಿ, ಮತ್ಸ್ಯಾದಿರೂಪಗಳು ಭಗವಂತನ ಯತ್ ಕಿಂಚಿತ್ ಅಂಶಮಾತ್ರಗಳಾದ್ದರಿಂದ ಅಪೂರ್ಣಾವತಾರಗಳೆಂದು, ಕೃಷ್ಣನು ಸ್ವಯಂ ಭಗವಂತನೇ ಆದ್ದರಿಂದ ಪೂರ್ಣಾವತಾರನೆಂದೂ ವಿವರಿಸಿದ್ದಾರೆ.

ಆದರೆ ಆಚಾರ್ಯಮಧ್ವರು ಆ ಶ್ಲೋಕದ ಪೂರ್ವಾರ್ಧವನ್ನು ಒಂದೇ ವಾಕ್ಯವೆಂದು ಪರಿಗಣಿಸಬೇಕೆಂದು ಬ್ರಹ್ಮವೈವರ್ತಪುರಾಣದ ಉದಾಹರಣೆಯೊಂದಿಗೆ ತಿಳಿಸುತ್ತಿದ್ದಾರೆ.

**ಜೀವಾಸ್ತತ್ಪ್ರತಿಬಿಂಬಾಂಶಾಃ ವರಾಹಾದ್ಯಾಃ ಸ್ವಯಂ ಹರಿಃ ।**
**ದೃಶ್ಯಂತೇ ಬಹುಧಾ ವಿಷ್ಣುರೈಶ್ವರ್ಯಾದೇಕ ಏವ ಸಃ ॥**

**ಏತೇ ಪ್ರೋಕ್ತಾ ಅವತಾರಾ ಮೂಲರೂಪೀ ಕೃಷ್ಣಃ ಸ್ವಯಮೇವ ॥**
**- ಭಾಗವತ ತಾತ್ಪರ್ಯ ನಿರ್ಣಯ**

ಭಗವಂತನ ಎಲ್ಲ ಅವತಾರಗಳೂ ಮೂಲರೂಪವಾದ ಕೃಷ್ಣನಿಂದ ಅತ್ಯಂತಾಭಿನ್ನಗಳೇ ಆಗಿವೆ. ಹೀಗೆ ನಮ್ಮ ವ್ಯಾಖ್ಯಾನದಲ್ಲಿಯೇ ಸ್ವಾಂಶ ಎಂಬ ವಿಶೇಷಣಕ್ಕೆ ಸಾರ್ಥಕ್ಯ

ಇದೆಯೆಂಬುದನ್ನೂ ನಿರ್ಣಯದ ಬೆಳಕಿನಲ್ಲಿ ತೋರಿಸಿ, ಜೀವನು ಭಗವಂತನ ಅಂಶನೆಂದು ಶಾಸ್ತ್ರಗಳು ವರ್ಣಿಸಿದ್ದರೂ ಆತನು ಭಗವಂತನಿಂದ ಅತ್ಯಂತ ಭಿನ್ನನೆಂದೇ ಅರ್ಥಮಾಡಬೇಕೆಂದು ವಾದಿರಾಜರು ಹೇಳುತ್ತಾರೆ.

**ಅಲ್ಪೋಽಪಿ ಮಹತಃ ಸ್ವಾಂಶೋ ನಾಲ್ಪಃ ಸರ್ವತ್ರ ಸದ್ಗುಣೈಃ ।**
**ಲೇಶೋಽಪಿ ಯದ್ಧೃಷೀಕೇಶಕೇಶೋ ಲೋಕೇಶಶಾಸನಃ ॥ ೬೨೨ ॥**

**ಅರ್ಥ–** ಸರ್ವತ್ರ = ಎಲ್ಲೆಡೆ, ಮಹತಃ = ಮಹಾಪುರುಷನ, ಸ್ವಾಂಶಃ = ಸ್ವರೂಪಾಂಶವು, ಅಲ್ಪ ಅಪಿ = ಗಾತ್ರದೃಷ್ಟಿಯಿಂದ ಸಣ್ಣದಾಗಿದ್ದರೂ, ಸದ್ಗುಣೈಃ = ಶಕ್ತಿ,ಸಾಮರ್ಥ್ಯಗಳಿಂದ (ಆ ದೃಷ್ಟಿಯಿಂದ) ಅಲ್ಪಃ = ಸಣ್ಣದು, ನ = ಅಲ್ಲ, ಯತ್ = ಯಾವಕಾರಣದಿಂದ, ಲೇಶಃ ಅಪಿ = ಗಾತ್ರದ ದೃಷ್ಟಿಯಿಂದ ಸಣ್ಣದಾದರೂ, ಹೃಷೀಕೇಶಕೇಶಃ = ವಿಷ್ಣುವಿನ ಕೂದಲು (ಆ ಕೂದಲಿನ ಅವತಾರವಾದ ಕೃಷ್ಣನು) **ಲೋಕೇಶಶಾಸನಃ** = ಲೋಕಪಾಲಕರಾದ ಬ್ರಹ್ಮಾದಿದೇವತೆಗಳಿಗೂ ನಿಯಂತ್ರಕನಾಗಿದ್ದಾನೆ.

**ಅನುವಾದ–** ಮಹತ್ತಾದ ವಸ್ತುವಿನ ಅಲ್ಪವಾದ ಅಂಶವೂ ಸಹ ಎಲ್ಲ ಕಡೆಗಳಲ್ಲಿಯೂ ಸದ್ಗುಣಗಳಿಂದ ಪೂರ್ಣವಾಗಿರುವುದರಿಂದ ಗುಣಗಳಿಂದ ಅಲ್ಪವಲ್ಲ. ಏಕೆಂದರೆ ಅಲ್ಪವಾದ ಪದ್ಮನಾಭನ ಕೇಶವೂ ಸಹ ಲೋಕೇಶರಾದ ಬ್ರಹ್ಮಾದಿಗಳಿಗೆ ಶಾಸನವನ್ನು ಮಾಡಿತು.

**ಭಾವವಿಲಾಸಿನೀ–** ನನು ಜೀವಾನಾಂ ಸೂಕ್ಷ್ಮಾಂಶತ್ವಾದೇವ ನ ಮಹಾಸಾಮರ್ಥ್ಯಂ ದೃಶ್ಯತೇ ನತು ಭಿನ್ನಾಂಶತ್ವಾದಿತಿ ಶಂಕಾಂ ನಿರಾಕರೋತಿ ॥ **ಅಲ್ಪೋಽಪೀತಿ** ॥ ಮಹತಃ ಮಹಾಪುರುಷಸ್ಯ ಸ್ವಾಂಶಃ ಸ್ವರೂಪಾಂಶಃ ಸರ್ವತ್ರ ಸದ್ಗುಣೈಃ ಸಾಮರ್ಥ್ಯಾದಿಗುಣೈಃ ಅಲ್ಪೋ ನ। ಸ್ವರೂಪಾಂಶತ್ವೇಽಣೋರಪಿ ಜೀವಸ್ಯ ಮಹಾಸಮರ್ಥ್ಯಂ ದೃಶ್ಯೇತೈವೇತಿ ಭಾವಃ । ಯದ್ಯಸ್ಮಾತ್ ಲೇಶೋಽಪಿ ಅಲ್ಪೋಽಪಿ ಹೃಷೀಕೇಶಕೇಶಃ ಉದ್ಬಬರ್ಹಾತ್ಮನಃ ಕೇಶಾವಿತಿ ಸ್ಮೃತೇಃ ಪದ್ಮನಾಭಕೇಶಾತ್ಮಕಃ ಕೃಷ್ಣ ಇತ್ಯರ್ಥಃ। ಸ್ಥೂಲಕಾಯಾಪೇಕ್ಷಯಾ ಏಕಕೇಶಸ್ಯಾಲ್ಪತ್ವಾಲ್ಲೇಶ ಇತ್ಯುಕ್ತಮ್ । ಲೋಕೇಶ ಶಾಸನಃ ಲೋಕೇಶಾನಂ ಬ್ರಹ್ಮಾದೀನಾಂ ಶಾಸನಃ ಆಜ್ಞಾಪಕಃ ಸ್ವಾಮೀತ್ಯರ್ಥಃ। ತಸ್ಮಾದಣುರಪಿ ಭಗವತ್ ಸ್ವರೂಪಾಂಶಃ ಶಕ್ತ್ಯಾದಿಸದ್ಗುಣೈರಲ್ಪೋ ನೇತಿ ಪೂರ್ವೇಣಾನ್ವಯಃ ॥ ೬೨೨ ॥

**ವಿವರಣೆ–** ಜೀವರಲ್ಲಿ ಭಗವಂತನ ಮಹಾಸಾಮರ್ಥ್ಯಕಂಡುಬರದಿರುವುದು ಅವರು ಆತನಿಂದ ಭಿನ್ನರೆಂಬ ಕಾರಣಕ್ಕಾಗಿ ಅಲ್ಲ ; ಹೊರತಾಗಿ ಅವರು ಆ ಬ್ರಹ್ಮನ ಸ್ವರೂಪಾಂಶರೇ ಆಗಿದ್ದರೂ ಸೂಕ್ಷ್ಮಾಂಶರಾಗಿರುವುದೇ ಕಾರಣ ಎಂದು ಅದ್ವೈತಿಗಳ ಶಂಕೆ.

ಅದಕ್ಕೆ ಉತ್ತರ - ದೊಡ್ಡವಸ್ತುವೊಂದರ ಸ್ವರೂಪಾಂಶವಾದ ಸಣ್ಣದು, ದೊಡ್ಡದಕ್ಕೆ ಹೋಲಿಸಿದರೆ ಗಾತ್ರದದೃಷ್ಟಿಯಿಂದ ಸಣ್ಣದಾಗಿರಬಹುದು. ಆದರೆ ಶಕ್ತಿಸಾಮರ್ಥ್ಯಗಳ

ದೃಷ್ಟಿಯಿಂದಲ್ಲ. ಕೃಷ್ಣನ ಅವತಾರದ ಮೂಲವಾದ ಭಗವಂತನ ಕಪ್ಪುಕೂದಲು ಭಗವಂತನ ಪೂರ್ಣಶರೀರಕ್ಕೆ ಹೋಲಿಸಿದರೆ ಸಣ್ಣದಿರಬಹುದು. ಆದರೆ ಆ ಕೇಶಾತ್ಮನಾದ ಕೃಷ್ಣನು ಚತುರ್ಮುಖಾದಿಲೋಕಪಾಲಕರನ್ನು ನಿಯಂತ್ರಿಸುವ ಶಕ್ತಿವುಳ್ಳವನಾಗಿದ್ದನು. ಹಾಗಾಗಿ ಜೀವರು ಪರಮಾತ್ಮನ ಸ್ವರೂಪಾಂಶರಾಗಿರುವುದಾದರೆ ಆತನ ಮಹಾಸಾಮರ್ಥ್ಯ ಅವರಿಗೂ ಬರಲೇಬೇಕು.

ಉದ್ವಬರ್ಹಾತ್ಮನಃ ಕೇಶೌ ಎಂದು ಪುರಾಣವಾಕ್ಯವು ಬಣ್ಣಿಸುವಂತೆ ಭಗವಂತನು ತನ್ನ ಒಂದು ಬಿಳಿ ಮತ್ತು ಒಂದು ಕಪ್ಪು ಕೂದಲುಗಳನ್ನು ಕಿತ್ತು ಬಲರಾಮ ಮತ್ತು ಕೃಷ್ಣರನ್ನು ಸೃಷ್ಟಿಸಿದ. ಅವರೀರ್ವರಲ್ಲಿನ ವ್ಯತ್ಯಾಸ ಹೀಗಿದೆ - ಪರಮಾತ್ಮನ ಬಿಳಿಕೂದಲೇ ಬಲರಾಮನಲ್ಲ. ಹೊರತಾಗಿ ಬಲರಾಮನಲ್ಲಿ ಪರಮಾತ್ಮನ ಬಿಳಿಗೂದಲ ಸನ್ನಿಧಾನವಿದೆ.

ಆದರೆ ಪರಮಾತ್ಮನ ಕರಿಗೂದಲೇ ಶ್ರೀಕೃಷ್ಣನ ಅವತಾರ. ಈ ಕರಿಗೂದಲರೂಪದ ಶ್ರೀಕೃಷ್ಣನೂ, ಬಲರಾಮನಲ್ಲಿ ಸನ್ನಿಹಿತನಾದ ಬಿಳಿಗೂದಲರೂಪದ ಶ್ರೀಹರಿಯೂ ಇಬ್ಬರೂ ಬ್ರಹ್ಮರುದ್ರಾದಿಗಳಿಂದ ಕೂಡಿದ ಸಮಗ್ರಪ್ರಪಂಚಕ್ಕೆ ನಿಯಾಮಕರು. ಆದರೆ ಶೇಷಾವತಾರನಾದ ಬಲರಾಮನು ಜಗನ್ನಿಯಾಮಕನೂ ಅಲ್ಲ, ಪರಮಾತ್ಮನಿಂದ ಅಭಿನ್ನನೂ ಅಲ್ಲ.

**ಭಿನ್ನಾಂಶೇ ತು ತದೀಯತ್ವಂ ಭಿನ್ನಾಭಿನ್ನೇಽರ್ಧಸಾಮ್ಯತಾ ।**
**ಅಭಿನ್ನೇ ಸರ್ವಸಾಮ್ಯಂ ಸ್ಯಾದ್ಯಥಾ ಮತ್ಸ್ಯಾದಿಷು ಪ್ರಭೋಃ ॥ ೬೨೩ ॥**

**ಅರ್ಥ–** ಏಕಸ್ಯ = ಒಂದು ವಸ್ತುವಿಗೆ, ಅಪರಸ್ಯ = ಮತ್ತೊಂದು ವಸ್ತುವಿನ ಭಿನ್ನಾಂಶತ್ವವಿದ್ದಾಗ, ತದೀಯತ್ವಂ = ಒಂದನೆಯದಕ್ಕೆ ಆ ಮತ್ತೊಂದರ ಅಧೀನತ್ವವು ಇರುತ್ತದೆ. ಭಿನ್ನಾಭಿನ್ನವಸ್ತುನಿ = ಮತ್ತೊಂದರಿಂದ ಭಿನ್ನವೂ ಅಭಿನ್ನವೂ ಆದ ವಸ್ತುವಿನಲ್ಲಿ, ಅರ್ಧಸಾಮ್ಯತಾ = ಆ ಮತ್ತೊಂದರಿಂದ ಅರ್ಧಸಾದೃಶ್ಯವು ಇರುತ್ತದೆ. ಯಥಾ = ಯಾವರೀತಿಯಾಗಿ, ಮತ್ಸ್ಯಾದಿಷು = ಮತ್ಸ್ಯಾದಿಅವತಾರಗಳಲ್ಲಿ, ಪ್ರಭೋಃ = ನಾರಾಯಣನಿಗೆ, ಸರ್ವಸಾಮ್ಯಂ = ಸಂಪೂರ್ಣಸಮಾನತೆಯು ಇರುತ್ತದೆಯೋ, ತಥಾ = ಹಾಗೆ, ಅಭಿನ್ನೇ = ಮತ್ತೊಂದರಿಂದ ಅಭಿನ್ನವಾದ ಒಂದು ವಸ್ತುವಿನಲ್ಲಿ, ಸರ್ವಸಾಮ್ಯಂ = ಸಂಪೂರ್ಣಸಮಾನತೆಯು ಇರುತ್ತದೆ.

**ಅನುವಾದ–** ಭಿನ್ನಾಂಶದಲ್ಲಿ ಕೇವಲ ತದಧೀನತ್ವರೂಪವಾದ ತತ್‌ಸಂಬಂಧವಿರುತ್ತದೆ. ಭಿನ್ನಾಭಿನ್ನಾಂಶದಲ್ಲಿ ಅಂಶಿಯಿಂದ ಅರ್ಧಸಾಮ್ಯವು ಇರುತ್ತದೆ. ಅಭಿನ್ನವಾದ ಅಂಶದಲ್ಲಿ ಮಾತ್ರ ಪ್ರಭುವಾದ ಹರಿಯ ಮತ್ಸ್ಯಾದಿ ಅಂಶಗಳಲ್ಲಿದ್ದಂತೆ ಸರ್ವಸಾಮ್ಯವೇ ಇರುತ್ತದೆ.

**ಭಾವವಿಲಾಸಿನೀ–** ಅಂಶತ್ರೈವಿಧ್ಯಂ ಸಯುಕ್ತಿಕಮನುಭಾವಯತಿ ॥ ಭಿನ್ನಾಂಶ ಇತಿ ॥ ತದೀಯತ್ವಂ ತದಧೀನತ್ವಂ ತತ್ ಸ್ವಾಮಿಕತ್ವಂ ಚೇತ್ಯರ್ಥಃ । ಪಾದೋಽಸ್ಯ ವಿಶ್ವಾಭೂತಾನೀತಿ ಶ್ರುತೌ

ಜಡಾಜಡಾತ್ಮಕಸಕಲ ಪ್ರಪಂಚಸ್ಯಾಪಿ ಭಗವದಂಶತ್ವಕಥನಾತ್ತಸ್ಯ ಚ ತಸ್ಮಿನ್ನೇವ ಸೂಕ್ತೇ ಮುಖಾದಿಂದ್ರಶ್ಚಾಗ್ನಿಶ್ಚ ಪದ್ಭ್ಯಾಂ ಭೂಮಿರ್ದಿಶಃ ಶ್ರೋತ್ರಾದಿತ್ಯಾದಿನಾ । ಪ್ರಲಯಕಾಲೇಽವಿದ್ಯಮಾನಸ್ಯ ಸೃಷ್ಟಿಕಾಲೇ ಭಗವತಃ ಸಕಾಶಾತ್ ಸೃಷ್ಟ್ಯಾದಿಶ್ರವಣೇನ ಜಡತ್ವಾಸರ್ವಜ್ಞತ್ವಾದ್ಯನುಭವೇನ ಭಗವತೋಽನ್ಯಂತಭಿನ್ನತ್ವಾವಶ್ಯಂ ಭಾವಾನ್ನಖಾಂಗುಲ್ಯಾದಿ ಪಾದಾಕಾರಾದರ್ಶನೇನ ಸಾಕ್ಷಾತ್ಪಾದತ್ವಾಸಂಭವಾಚ್ಚ ತದಧೀನತ್ವದಿನೈವಾಂಶತ್ವಂ ವಕ್ತವ್ಯಮಿತಿ ಭಾವಃ । ಭಿನ್ನಾಭಿನ್ನೇ ತಂತುಪಟಾದೌ । ಅರ್ಧಂ ಸಾಮ್ಯಂ ಯಸ್ಯ ಸೋಽರ್ಧಸಾಮ್ಯಸ್ತಸ್ಯ ಭಾವೋಽರ್ಧಸಾಮ್ಯತಾ । ಸರ್ವಸಾಮ್ಯಂ ಜ್ಞಾನಶಕ್ತ್ಯಾದಿಸಕಲಗುಣಸಾಮ್ಯಮ್ । ಮತ್ಸ್ಯಾದಿಷು ಮತ್ಸ್ಯಕೂರ್ಮಾದ್ಯವತಾರೇಷು ॥ ೬೨೩ ॥

**ವಿವರಣೆ–** ಮೂರುಬಗೆಯ ಅಂಶಗಳಿವೆಯೆಂಬುದಕ್ಕೆ ಯುಕ್ತಿಗಳನ್ನು ತೋರಿಸುತ್ತಾರೆ-

1. ಒಂದು ವಸ್ತು ಮತ್ತೊಂದು ವಸ್ತುವಿನ ಭಿನ್ನಾಂಶವಾಗಿದ್ದರೆ ಅದು ಆ ಮತ್ತೊಂದಕ್ಕೆ ಅಧೀನವಾಗಿರುತ್ತದೆ.

2. ಒಂದು ಮತ್ತೊಂದರಿಂದ ಭಿನ್ನವೂ ಅಭಿನ್ನವೂ ಆದಿದ್ದರೆ ಅವೆರಡರ ನಡುವೆ ಕೇವಲ ಅರ್ಧಸಮಾನತೆ ಇರುತ್ತದೆ.

3. ಎರಡೂ ವಸ್ತುಗಳು ಅಭಿನ್ನಗಳೇ ಆಗಿದ್ದರೆ ಅವುಗಳ ನಡುವೆ ಸಂಪೂರ್ಣಸಮಾನತೆಯೇ ಇರುತ್ತದೆ.

ಮೊದಲನೆಯ ಉದಾಹರಣೆ - ಈ ಪ್ರಪಂಚವು ಭಗವಂತನ ಪಾದವೆಂದರೆ ಅದು ಆತನ ಭಿನ್ನಾಂಶ ಮಾತ್ರ ಎಂದು ಅರ್ಥ. ಹಾಗಾಗಿ ಅದು ಆತನ ಅಧೀನವಾಗಿರುತ್ತದೆ.

ಎರಡನೆಯ ಉದಾಹರಣೆ - ಬಟ್ಟೆಗೂ ಅದರ ನೂಲುಗಳಿಗೂ ಭೇದಾಭೇದವಿರುವುದರಿಂದ ಅವೆರಡಕ್ಕೂ ಅರ್ಧಸಮಾನತೆಯಷ್ಟೇ ಇರುತ್ತದೆ.

ಮೂರನೆಯ ಉದಾಹರಣೆ - ಮತ್ಸ್ಯ, ಸನತ್ಕುಮಾರಾದಿರೂಪಗಳಿಗೂ ಭಗವಂತನ ಮೂಲರೂಪಕ್ಕೂ ಅಭೇದವಿರುವುದರಿಂದ ಎರಡಕ್ಕೂ ಸಮಾನಶಕ್ತಿ ಸಾಮರ್ಥ್ಯಗಳಿರುತ್ತವೆ.

ಪುರುಷಸೂಕ್ತದಲ್ಲಿ ಪಾದೋಽಸ್ಯ ವಿಶ್ವಾ ಭೂತಾನಿ ಎಂಬ ವಾಕ್ಯವು ಸಮಸ್ತ ವಿಶ್ವವನ್ನೂ ಆತನ ಪಾದವೆಂದು ಬಣ್ಣಿಸುತ್ತದೆ. ಅದೇ ಸೂಕ್ತದಲ್ಲಿ ಚಂದ್ರಮಾ ಮನಸೋ ಜಾತಶ್ಚಕ್ಷೋಃ ಸೂರ್ಯ ಅಜಾಯತ । ಮುಖಾದಿಂದ್ರಶ್ಚಾಗ್ನಿಶ್ಚ ... ॥ ಎಂಬ ಭಾಗವು ಪ್ರಳಯಕಾಲದಲ್ಲಿ ಇರದಿದ್ದ ಸೂರ್ಯ, ಚಂದ್ರ, ಇಂದ್ರ, ಅಗ್ನಿ ಇವರನ್ನೊಳಗೊಂಡ ಸಮಸ್ತ ವಿಶ್ವವೂ ಆ ಪರಮಪುರುಷನ ಅಂಗಾಂಗಳಿಂದ ಸೃಷ್ಟಿಕಾಲದಲ್ಲಿ ಹುಟ್ಟಿತೆಂದು ವರ್ಣಿಸುತ್ತದೆ. ಈ ಪ್ರಪಂಚವು ಜಡವಾದ್ದರಿಂದ ಅದರಲ್ಲಿ ಭಗವಂತನ ವಿಶಿಷ್ಟಗುಣಗಳಾದ ಸರ್ವಜ್ಞತ್ವ

ಮುಂತಾದ ಗುಣಗಳು ಇಲ್ಲದಿರುವ ಪ್ರಯುಕ್ತ ಅದು ಆತನಿಂದ ಸಂಪೂರ್ಣಭಿನ್ನವೇ ಆಗಿದೆ.

ಆತನ ಶರೀರದ ಪಾದವೇ ಆಗಿರುವುದೂ ಸಾಧ್ಯವಿಲ್ಲ. ಏಕೆಂದರೆ ಪಾದವೊಂದಕ್ಕೆ ಇರಬೇಕಾದ ಬೆರಳು ಉಗುರು ಮುಂತಾದವೂ ಅದಕ್ಕಿಲ್ಲ. ಹಾಗಾಗಿ ಅದು ಆತನ ಅತ್ಯಂತ ಭಿನ್ನಾಂಶವೂ, ಆತನ ಅಧೀನವಾಗಿದೆಯೆಂದೂ ಅರ್ಥಹೇಳಬೇಕು.

**ಜೀವಾಸ್ತು ಬ್ರಹ್ಮಭಿನ್ನಾಂಶಾಃ ಸಾರ್ವಜ್ಞಾದೇರಭಾವತಃ ।**
**ಮತ್ಸ್ಯಾದಯಃ ಸ್ವರೂಪಾಂಶಾಃ ಸಾರ್ವಜ್ಞಾದೇಃ ಪ್ರಭಾವತಃ ॥ ೬೨೪ ॥**

**ಅರ್ಥ–** ಸಾರ್ವಜ್ಞಾದೇಃ = ಸರ್ವಜ್ಞತ್ವ ಮೊದಲಾದ ಗುಣಗಳ, ಅಭಾವತಃ = ಇಲ್ಲದಿರುವಿಕೆಯಿಂದ, ಜೀವಾಃ ತು = ಜೀವರಾದರೂ, ಬ್ರಹ್ಮಭಿನ್ನಾಂಶಾಃ = ಪರಬ್ರಹ್ಮನಿಂದ ಭಿನ್ನಗಳಾದ ಅಂಶಗಳು. ಸಾರ್ವಜ್ಞಾದೇಃ = ಸರ್ವಜ್ಞತ್ವ ಮೊದಲಾದ ಗುಣಗಳ, ಪ್ರಭಾವತಃ = ಮೂಲರೂಪದಂತೆ ಅವತಾರಗಳಲ್ಲೂ ಇರುವಿಕೆಯಿಂದ, ಮತ್ಸ್ಯಾದಯಃ = ಮತ್ಸ್ಯ, ಸನತ್ಕುಮಾರ ಮುಂತಾದ ಅವತಾರರೂಪಗಳು, ಸ್ವರೂಪಾಂಶಾಃ = ಭಗವಂತನ ಸ್ವರೂಪಾಂಶರು, ಸ್ವರೂಪಾಭಿನ್ನಗಳು ಆಗಿವೆ.

**ಅನುವಾದ–** **ಪರಮಾತ್ಮನಲ್ಲಿ ಸರ್ವಜ್ಞತ್ವಾದಿಗುಣಗಳಿವೆ, ಆದರೆ ಜೀವಾತ್ಮನಲ್ಲಿ ಆ ಗುಣಗಳಿಲ್ಲವಾದ್ದರಿಂದ ಅವರು ಆತನಿಂದ ಭಿನ್ನರಾದ ಅಂಶಗಳು. ಆದರೆ ಮತ್ಸ್ಯ, ಸನತ್ಕುಮಾರ ಮೊದಲಾದ ಭಗವದ್ರೂಪಗಳಲ್ಲಿ ಮೂಲರೂಪದಲ್ಲಿರುವಂತಹ ವಿಶಿಷ್ಟಗುಣಗಳೆಲ್ಲವೂ ಇರುವುದರಿಂದ ಅವು ಮೂಲರೂಪದ ಸ್ವರೂಪಾಂಶಗಳೇ (ಅಭಿನ್ನಾಂಶಗಳೇ) ಆಗಿವೆ.**

**ಭಾವವಿಲಾಸಿನೀ–** ಏತದೇವ ವಿಶಿನಷ್ಟಿ – **ಜೀವಾಸ್ತ್ವಿತಿ** ॥ ಸರ್ವಜ್ಞಾದೇಃ ಪ್ರಭಾವತಃ ಮೂಲರೂಪವದವತಾರರೂಪೇಷ್ವಪಿ ಸಾರ್ವಜ್ಞಾದಿಸದ್ಭಾವಾದಿತಿ ಭಾವಃ ॥ ೬೨೪ ॥

**ಭಿನ್ನಾಭಿನ್ನಾಃ ಪಟಾದ್ಯಂಶಾಸ್ತೇ ಜಡೇಷ್ವೇವ ನಾಜಡೇ ।**
**ಏಕಸತ್ವೇಽನ್ಯನಾಶಸ್ಯ ತದ್ಧೇತೋಃ ಸದಸತ್ವತಃ ॥ ೬೨೫ ॥**

**ಅರ್ಥ–** ತದ್ ಹೇತೋಃ = ಆ ಭೇದವೇ ಕಾರಣವಾಗಿವುಳ್ಳ, ಏಕಸತ್ವೇ = ಒಂದಕ್ಕೆ (ತಂತುವಿಗೆ) ಅಸ್ತಿತ್ವವಿದ್ದಾಗಲೂ, ಅನ್ಯನಾಶಸ್ಯ = ಮತ್ತೊಂದಕ್ಕೆ (ಪಟಕ್ಕೆ) ನಾಶದ, ಸದಸತ್ವತಃ = ಇರುವಿಕೆ ಮತ್ತು ಇಲ್ಲದಿರುವಿಕೆಗಳ ಕಾರಣದಿಂದಾಗಿ, ತೇ = ಆ, ಪಟಾದ್ಯಂಶಾಃ = ಬಟ್ಟೆ ಮೊದಲಾದ ಅಂಶಗಳು, ಜಡೇಷು ಏವ = ಜಡಗಳಿಗೆ ಸಂಬಂಧಿಸಿದಂತೆ ಮಾತ್ರ, ಭಿನ್ನಾಭಿನ್ನಾಃ = ಬಟ್ಟೆ ಮೊದಲಾದ ಅಂಶಗಳು, ಜಡೇಷು ಏವ = ಜಡಗಳಿಗೆ ಸಂಬಂಧಿಸಿದಂತೆ ಮಾತ್ರ, ಭಿನ್ನಾಭಿನ್ನಾಃ = ಭೇದಾಭೇದವುಳ್ಳವುಗಳು ಆಗಿವೆ. ಅಜಡೇ = ಚೇತನಗಳಿಗೆ

ಸಂಬಂಧಿಸಿದಂತೆ, ನ = ಭೇದಾಭೇದವುಳ್ಳವುಗಳು ಆಗಿಲ್ಲ.

**ಅನುವಾದ–** ಪಟದ ಅಂಶಗಳು ಭಿನ್ನಾಭಿನ್ನವಾಗಿವೆ. ಅಂತಹ ಭಿನ್ನಾಭಿನ್ನಾಂಶಗಳು ಜಡಗಳಲ್ಲಿ ಮಾತ್ರ ಇರುತ್ತವೆ. ಚೇತನದಲ್ಲಿ ಇರುವುದಿಲ್ಲ. ಏಕೆಂದರೆ ಭೇದಾಂಗೀಕಾರಕ್ಕೆ ಕಾರಣವಾದ ಒಂದು ವಸ್ತುವಿದ್ದಾಗಲೂ ಇನ್ನೊಂದು ವಸ್ತುವಿನ ನಾಶವೆಂಬ ಅಸಾಧಾರಣ ಕಾರ್ಯವು ಇಲ್ಲದಿರುವುದರಿಂದ ಚೇತನದಲ್ಲಿ ಕೇವಲ ಅಭೇದವನ್ನು ಒಪ್ಪುತ್ತೇವೆ. ಭೇದಾಭೇದವನ್ನು ಒಪ್ಪುವುದಿಲ್ಲ.

**ಭಾವವಿಲಾಸಿನೀ– ಕಸ್ತರ್ಹಿಂ ಭಿನ್ನಾಭಿನ್ನಾಂಶಃ ಕತಂ ಚ ತಸ್ಯಾರ್ಥಸಾಮ್ಯಮಿತ್ಯತಸ್ತದುಭಯಂ ವಿಶದಯತಿ – ಭಿನ್ನಾಭಿನ್ನಾ ಇತಿ ॥ ತೇ ಭಿನ್ನಾಭಿನ್ನಾಂಶಾಃ । ಏಕಸತ್ತ್ವೇ ತಂತುಸತ್ತ್ವೇ ಅನ್ಯನಾಶಸ್ಯ ಪಟನಾಶಸ್ಯ । ತದ್ದೇತೋಃ ಭೇದೇಽಪಿ ನಾಶಹೇತೋಃ ವಿಶೇಷಸ್ಯ ಸದಸತ್ತ್ವತಃ ಕಾರ್ಯೇಽಸತ್ತ್ವಾತ್ ಕಾರಣಾಸತ್ತ್ವಾಚ್ಚೇತ್ಯರ್ಥಃ ॥ ೬೨೫ ॥**

**ವಿವರಣೆ–** ನೂಲು, ಮಣ್ಣು ಮುಂತಾದ ಉಪಾದಾನಕಾರಣಗಳಿಂದ ಬಟ್ಟೆ ಗಡಿಗೆ ಮುಂತಾದ ಉಪಾದೇಯ ವಸ್ತುಗಳು ಹುಟ್ಟಿವೆ. ಉಪಾದೇಯಗಳಾದ ಬಟ್ಟೆ ಗಡಿಗೆ ಮುಂತಾದವುಗಳು ಕಾಲಕ್ರಮೇಣ ನಾಶಹೊಂದಿದರೂ ಉಪಾದಾನಗಳಾದ ಮಣ್ಣು ನೂಲು ಮುಂತಾದವು ನಾಶಹೊಂದುವುದಿಲ್ಲ. ಈ ವ್ಯತ್ಯಾಸವು ಜಡಗಳಲ್ಲಿ ಮಾತ್ರವೇ ಕಂಡಿದೆ ಮತ್ತು ಈ ವ್ಯತ್ಯಾಸಕ್ಕೆ ಉಪಾದಾನ ಉಪಾದೇಯಗಳಲ್ಲಿ ಇರುವ ಭೇದವೇ ಕಾರಣವಾಗಿದೆ. ಅಂತೆಯೇ ಉಪಾದೇಯಕ್ಕೆ ಉಪಾದಾನವನ್ನು ಬಿಟ್ಟು ಬೇರೆಯ ಅಸ್ತಿತ್ವವೇ ಇಲ್ಲವಾದ್ದರಿಂದ ಅಭೇದವೂ ಇದೆ.

ಹೀಗೆ ಉಪಾದೇಯವು ನಾಶಹೊಂದಿದಾಗ ಕೂಡ ಉಪಾದಾನಕ್ಕೆ ಅಸ್ತಿತ್ವವು ಇರುವ ಕಾರಣದಿಂದ ಪಟಮೊದಲಾದ ಅಂಶಿಗಳು ತಂತು ಮುಂತಾದ ಅಂಶಗಳಿಂದ ಭಿನ್ನಾಭಿನ್ನಗಳಾಗಿವೆ ಎಂಬ ವಿಶಿಷ್ಟತೆಯು ಜಡವಸ್ತುಗಳಲ್ಲಿ ಮಾತ್ರ ಕಂಡುಬರುತ್ತವೆ.

ಆದರೆ ಚೇತನಗಳಾದ ಮತ್ಸ್ಯ, ಸನತ್ಕುಮಾರಮುಂತಾದ ಭಗವದಂಶಗಳಿಗೆ ನಾಶವೇ ಇಲ್ಲವಾದ್ದರಿಂದ ಅಂಶನಾಶವಾದಾಗಲೂ ಅಂಶಿಯಾದ ಮೂಲರೂಪಕ್ಕೆ ಅಸ್ತಿತ್ವವಿದೆ ಎಂದು ಹೇಳಲು ಚೇತನಗಳಲ್ಲಿ ಅವಕಾಶವೇ ಇಲ್ಲ. ಹಾಗಾಗಿ ಇಲ್ಲಿ ಅಂಶಾಂಶಿಗಳಿಗೆ ಸವಿಶೇಷಾಭೇದವು ಇದೆಯೇ ಹೊರತು ಭೇದಾಭೇದವಲ್ಲ.

**ತಂತುಃ ಪಟೇನಾರ್ಥಸಮೋ ಭೇದಾಭೇದಸ್ತತಸ್ತಯೋಃ ।**
**ಅತಸ್ತ್ರೈವಿಧ್ಯಮಂಶೇಷು ದುರ್ವಾರಮಿತಿ ಮೇ ಮತಿಃ ॥ ೬೨೬ ॥**

**ಅರ್ಥ–** ತಂತುಃ = ನೂಲು, ಪಟೇನ = ಬಟ್ಟೆಯಿಂದ, ಅರ್ಥಸಮಃ = ಅರ್ಥಸದೃಶವಾಗಿರುತ್ತದೆ. ತತಃ = ಹೆಚ್ಚಿನ ಸಮಾನತೆಯಿರುವುದರಿಂದ ಬಟ್ಟೆಯು ನಾಶವಾದರೂ, ನೂಲು ನಾಶವಾಗದಿರುವುದರಿಂದ, ತಯೋಃ = ನೂಲು–ಬಟ್ಟೆಗಳಿಗೆ,

ಭೇದಾಭೇದಃ = ಭೇದಾಭೇದವು ಇದೆ. ಅತಃ = ಹೀಗೆ ಶಾಸ್ತ್ರ ಮತ್ತು ಯುಕ್ತಿಗಳ ಬೆಂಬಲ ಇರುವುದರಿಂದ, ಅಂಶೇಷು = ಅಂಶಗಳಲ್ಲಿ, ತ್ರೈವಿಧ್ಯಂ = ಮೂರುಪ್ರಭೇದಗಳನ್ನು ಹೊಂದಿರುವಿಕೆಯು, ದುರ್ವಾರಂ = ಬೇರೆ ಯಾವಕಾರಣದಿಂದಲೂ ನಿರಾಕರಿಸಲು ಅಸಾಧ್ಯವೆಂದು, ಮೇ = ನನ್ನ ಮತಿಃ = ಅಭಿಪ್ರಾಯವಾಗಿದೆ.

**ಅನುವಾದ– ತಂತುವು ಪಟಕ್ಕೆ ಅರ್ಧಸಮವಾಗಿದೆ. ಆದ್ದರಿಂದ ತಂತುವಿಗೂ ಮತ್ತು ಪಟಕ್ಕೂ ಭೇದಾಭೇದವಿದೆ. ಆದ್ದರಿಂದ ಅಂಶಗಳಲ್ಲಿ ಈ ಮೂರು ಪ್ರಕಾರಗಳನ್ನು ಯಾರೂ ನಿರಾಕರಣೆ ಮಾಡಲು ಸಾಧ್ಯವಿಲ್ಲವೆಂದು ನನ್ನ ಅಭಿಪ್ರಾಯ.**

**ಭಾವವಿಲಾಸಿನೀ–** ಪೃಥಿವೀತ್ವವ್ಯತ್ತ್ವತಂತುತ್ವಜಡತ್ವಾದಿನಾ ಉಪಾದಾನೋಪಾದೇಯ**ಯೋಸ್ಸಾಮ್ಯಾತ್** ನಾಶಾದಿನಾ ವೈಷಮ್ಯಾಚ್ಚ ತಂತುಃ ಪಟೇನಾರ್ಧಸಮ ಇತಿ ಭಾವಃ । **ತತಃ** ಬಹುಶಸ್ಸಾಮ್ಯಸದ್ಭಾವಾನ್ನಾಶಾದಿನಾ ವೈಷಮ್ಯಾತ್ತಸ್ಯ ಚ ಭೇದಾಸಾಧಾರಣ-**ಕಾರ್ಯತ್ವಾಚ್ಚೇತ್ಯರ್ಥಃ । ಉಪಲಕ್ಷಣಂ ಚೈತತ್ । ತಂತುರೇವ ಪಟ ಇತ್ಯಭೇದಪ್ರತ್ಯಕ್ಷಾಚ್ಚೇತ್ಯಪಿ ಜ್ಞೇಯತ್ । ತಯೋಃ ತಂತುಪಟಯೋಃ । ಅತಃ ಸ್ಮೃತಿಯುಕ್ತಿಸಿದ್ಧತ್ವಾತ್ ॥ ೬೨೬ ॥**

**ವಿವರಣೆ–** ಉಪಾದಾನ ಉಪಾದೇಯಗಳಾದ ನೂಲು ಮತ್ತು ಬಟ್ಟೆಗಳೆರಡೂ ಜಡಗಳಾಗಿವೆ ಇತ್ಯಾದಿಕಾರಣಗಳಿಂದ ಅವುಗಳಿಗೆ ಸಮಾನತೆ ಇದೆ. ಆದರೆ ಬಟ್ಟೆ ನಾಶವಾದರೂ ನೂಲು ನಾಶವಾಗುವುದಿಲ್ಲವಾದ್ದರಿಂದ ಆ ಸಮಾನತೆಯು ಕೇವಲ ಅರ್ಧವಾಗಿದೆ. ಒಂದು ನಾಶವಾದರೂ ಮತ್ತೊಂದು ನಾಶವಾಗುವುದಿಲ್ಲವೆಂಬ ವ್ಯತ್ಯಾಸಕ್ಕೆ ಭೇದವೇ ಕಾರಣ. ಹಾಗಾಗಿ ನೂಲು ಬಟ್ಟೆಗಳ ನಡುವೆ ಭೇದವಿದೆ, ಹೆಚ್ಚಿನ ಸಮಾನತೆಯಿರುವುದರಿಂದ ಮತ್ತು ತಂತುವೇ ಪಟ ಎಂಬ ಪ್ರತ್ಯಕ್ಷವೂ ಇರುವುದರಿಂದ ಅಭೇದವೂ ಇದೆ. ಹೀಗೆ ಮೂರು ಬಗೆಯ ಅಂಶಗಳಿವೆ ಎಂಬುದು ಶಾಸ್ತ್ರ ಮತ್ತು ಯುಕ್ತಿಗಳಿಂದ ಸಿದ್ಧವಾದ್ದರಿಂದ ಅದನ್ನು ನಿರಾಕರಿಸುವುದು ಅಸಾಧ್ಯವೆಂದು ನಮ್ಮ ಸಿದ್ದಾಂತವಾಗಿದೆ.

**ನ ಚೇದ್ ವೈಚಿತ್ರ್ಯಮೇತೇಷು ನಿರ್ನಿಮಿತ್ತಮಿದಂ ಭವೇತ್ ।**
**ಮತ್ತೋಽಪ್ಯಕಾರಣಂ ಕಾರ್ಯಂ ನ ವದೇತ್ ಕಿಮು ಶಾಸ್ತ್ರಕೃತ್॥ ೬೨೭ ॥**

**ಅರ್ಥ–** ನ ಚೇತ್ = ಮೂರುಬಗೆಯ ಅಂಶಗಳಿಲ್ಲದಿದ್ದರೆ, ಏತೇಷು = ಹಿಂದೆ ಹೇಳಿದ ಮೂರುಬಗೆಯ ವಸ್ತುಗಳಲ್ಲಿ, ಇದಂ = ಸಂಪೂರ್ಣವಿಸದೃಶತೆ, ಅರ್ಧಸದೃಶತೆ, ಮತ್ತು ಸಂಪೂರ್ಣಸದೃಶತೆಗಳೆಂಬ ಮೂರು ಬಗೆಯ ವ್ಯತ್ಯಾಸಗಳು, ನಿರ್ನಿಮಿತ್ತಂ = ಕಾರಣರಹಿತವು, ಭವೇತ್ = ಆಗಬೇಕಾದೀತು. ಮತ್ತಃ ಅಪಿ = ಉನ್ಮತ್ತನೂ ಕೂಡ, ಕಾರ್ಯಂ = ಕಾರ್ಯವೊಂದನ್ನು ಅಕಾರಣಂ = ಕಾರಣವಿಲ್ಲದೇ ಹುಟ್ಟಿದ್ದು ಎಂದು, ನ ವದೇತ್ = ಹೇಳಲಾರನು. ಶಾಸ್ತ್ರಕೃತ್ = ಶಾಸ್ತ್ರಕಾರನು, ವದೇತ್ ಕಿಮು = ಹಾಗೆ

ಹೇಳುತ್ತಾನೇನು?

**ಅನುವಾದ–** ಹಾಗಲ್ಲದಿದ್ದರೆ ಇವುಗಳಲ್ಲಿರುವ ವೈಚಿತ್ರ್ಯವು ನಿರ್ನಿಮಿತ್ತವೆಂದು ಅಂಗೀಕಾರ ಮಾಡಬೇಕಾಗುತ್ತದೆ. ಮತ್ತನಾದವನೂ ಕಾರಣವಿಲ್ಲದೆ ಕಾರ್ಯವುಂಟಾಯಿತು ಎಂದು ಹೇಳುವುದಿಲ್ಲ. ಇನ್ನು ಶಾಸ್ತ್ರಕಾರರು ಹಾಗೆ ಹೇಳುತ್ತಾರೆಯೇ?

**ಭಾವವಿಲಾಸಿನೀ–** ಇದಂ ಬಹುವೈಸಾದೃಶ್ಯಾರ್ಥಸಾದೃಶ್ಯ ಸರ್ವಸಾದೃಶ್ಯರೂಪವಮ್ । ನಿಮಿತ್ತಾಭಾವೇಽಪಿ ನೈಮಿತ್ತಿಕಮಸ್ತು ಕೋ ದೋಷ ಇತ್ಯತ ಆಹ – **ಮತ್ತೋಽಪೀತಿ** ॥೬೨೭॥

**ವಿವರಣೆ–** ನಾವು ಹೇಳಿದಂತೆ ಭಿನ್ನಾಂಶ, ಭಿನ್ನಾಭಿನ್ನಾಂಶ, ಅಭಿನ್ನಾಂಶಗಳೆಂಬ ವ್ಯವಸ್ಥೆಯನ್ನು ನೀವು ಒಪ್ಪದಿದ್ದರೆ ಜೀವರು ಮತ್ತು ಪರಮಾತ್ಮನಲ್ಲಿ ಸಂಪೂರ್ಣ ವಿಸದೃಶತೆ, ತಂತು ಮತ್ತು ಪಟಗಳಲ್ಲಿ ಭೇದಾಭೇದ ಹಾಗೂ ಪರಮಾತ್ಮನಿಗೆ ಮತ್ತು ಆತನ ಅವತಾರಗಳಿಗೆ ಸಂಪೂರ್ಣ ಸದೃಶತೆಯೆಂಬ ವ್ಯತ್ಯಾಸ (ವೈಲಕ್ಷಣ್ಯ) ಗಳಿಗೆ ಬೇರೆ ಏನು ಕಾರಣವಿರಲು ಸಾಧ್ಯ? ಕಾರಣವಿಲ್ಲದೇ ಕಾರ್ಯವೊಂದು ಹುಟ್ಟಿತೆಂದು ಉನ್ಮತ್ತನೂ ಹೇಳಲಾರ. ಹೀಗಿದ್ದಾಗ ಸರ್ವಜ್ಞರಾದ ಶಾಸ್ತ್ರಕಾರರು ಜೀವಾತ್ಮಪರಮಾತ್ಮರಲ್ಲಿ ಭೇದವಿಲ್ಲದಿದ್ದರೂ ಅವರಲ್ಲಿ ಅಲ್ಪಸಾಮರ್ಥ್ಯ ಮಹಾಸಾಮರ್ಥ್ಯಗಳೆಂಬ ಗುಣಗಳಿವೆ ಎಂದು ಹೇಳುವರೆ?

**ಅದಃ ಪೂರ್ಣಮಿದಂ ಪೂರ್ಣಂ ಪೂರ್ಣಾತ್ಪೂರ್ಣಮುದಚ್ಯತೇ ।**
**ಇತ್ಯಾಹೇತಾನ್ ಶ್ರುತಿಸ್ತ್ವನ್ಯದೇತಸ್ಮಿನ್ನೇತದಾತತಮ್ ॥ ೬೨೮ ॥**

**ಅರ್ಥ–** ಅದಃ = ಭಗವಂತನ ಮೂಲರೂಪವು, ಪೂರ್ಣಂ = ಪೂರ್ಣವಾಗಿದೆ. ಇದಂ = ಭಗವಂತನ ಅವತಾರರೂಪವೂ ಕೂಡ, ಪೂರ್ಣಂ = ಪೂರ್ಣವಾಗಿದೆ. ಪೂರ್ಣಾತ್ = ಪೂರ್ಣವಾದ ಮೂಲರೂಪದಿಂದ, ಪೂರ್ಣಂ = ಪೂರ್ಣವೇ ಆದ ಅವತಾರರೂಪವು, ಉದಚ್ಯತೇ = ಹೊರಗೆ ಬರುತ್ತದೆ. ಇತಿ = ಎಂಬ, ಶ್ರುತಿಃ = ವೇದವಾಕ್ಯವು, ಏತಾನ್ = ಈ ಮತ್ಸ್ಯಾದಿ ಅವತಾರಗಳನ್ನು, ಪೂರ್ಣಾತ್ = ಪೂರ್ಣಗಳೆಂದು, ಆಹ = ಹೇಳುತ್ತಿದೆ. ಚ = ಮತ್ತು, ಏತಸ್ಮಿನ್ = ಈ ಪರಮಾತ್ಮನಲ್ಲಿ, ಏತತ್ = ಈ ಜಗತ್ತು, ಆತತಂ = ಆಶ್ರಿತವಾಗಿದೆ, ಇತಿ = ಎಂಬ, ಶ್ರುತಿಃ = ವೇದವಾಕ್ಯವು, ಅನ್ಯತ್ ತು = ಪರಮಾತ್ಮನಿಗಿಂತ ಭಿನ್ನವಾದ ಜಗತ್ತನ್ನಾದರೂ, ಅಪೂರ್ಣಂ = ಅಪೂರ್ಣವೆಂದು, ಆಹ = ಹೇಳುತ್ತದೆ. (ಮುದ್ರಿತ ಪುಸ್ತಕದಲ್ಲಿ ಈ ಶ್ಲೋಕವೇ ಲುಪ್ತವಾಗಿದೆ).

**ಅನುವಾದ– ಪೂರ್ಣಮದಃ ಪೂರ್ಣಮಿದಂ ಎಂಬ ವೇದವಾಕ್ಯವು ಪೂರ್ಣವಾದ ಮೂಲರೂಪದಿಂದ ಪೂರ್ಣಗಳೇ ಆದ ಮತ್ಸ್ಯಾದ್ಯವತಾರಗಳು ಹುಟ್ಟಿವೆಯೆಂದು ಹೇಳುತ್ತದೆ. ಅಲ್ಲದೇ ಏತಸ್ಮಿನ್ನೇತದಾತತಂ ಎಂಬ ಶ್ರುತಿಯು ಈ ಜಗತ್ತು**

ಪರಮಾತ್ಮನಲ್ಲಿ ಆಶ್ರಿತವಾಗಿದೆಯೆಂದು, ಹಾಗಾಗಿ ಅಪೂರ್ಣವಾಗಿದೆಯೆಂದು ಹೇಳುತ್ತದೆ.

**ಭಾವವಿಲಾಸಿನೀ–** ಉಕ್ತಭಿನ್ನಾಭಿನ್ನಾಂಶಸ್ಯೋಭಯವಾದಿಸಂಪ್ರತಿಪನ್ನತ್ವಾನ್ಮತ್ಸ್ಯಾದಿ ಸ್ವರೂಪಾಂಶೋ ಜೀವಾದಿಭಿನ್ನಾಂಶೇ ಚಾಭೇದಂ ಭೇದಮಭೇದೋಪಯುಕ್ತ- ಸರ್ವಸಾಮ್ಯಂ ಚ ಶ್ರುತ್ಯಾ ದರ್ಶಯತಿ ॥ **ಅದಃಪೂರ್ಣಮಿತಿ** ॥ ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ಪೂರ್ಣಮುದಚ್ಯತ ಇತಿ ಶ್ರುತಿಂ ಗೃಹ್ಣಾತಿ। ಅದಃ ಮೂಲರೂಪಮ್। ಇದಮವತಾರ-ರೂಪಮ್ । ಉದಚ್ಯತೇ ಉದ್ರಿಕ್ತಮವತೀರ್ಣಂ ಭವತೀತ್ಯರ್ಥಃ । ಏತಾನ್ ಮತ್ಸ್ಯಾದ್ಯ-ವತಾರಾನ್ । ಅನ್ಯದ್ಭಿನ್ನಂ ಜಗತ್ । ಏತಸ್ಮಿನ್ನೇತದಾತತಮಿತ್ಯಾಹೇತಿ ಸಂಬಂಧಃ ॥ ೬೨೮ ॥

**ವಿವರಣೆ–** ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ಪೂರ್ಣಮುದಚ್ಯತೇ ಎಂಬ ವೇದವಾಕ್ಯವು ಶಾಂತಿಮಂತ್ರವಾಗಿದೆ.

ಯದ್ಧ್ಯೆಷಾ ಪುರುಷೇ ಛಾಯ್ಯೆತಸ್ಮಿನ್ನೇತದಾತತಂ ಎಂಬ ವೇದವಾಕ್ಯವು ಷಟ್ಪ್ರಶ್ನೋಪನಿಷತ್ತಿನ ತೃತೀಯಪ್ರಶ್ನದ ಮೂರನೇ ಶ್ಲೋಕವಾಗಿದೆ.

**ವಿಷ್ಣೂದ್ರಿಕ್ತಾಂಶರಾಮಾಂಘ್ರಿಪಾದುಕಾರಾಜ್ಯನಿರ್ವೃತಃ ।**
**ಇತ್ಯುದ್ರಿಕ್ತಾಂಶತಾ ರಾಮಸ್ಯೋಕ್ತಾ ಸಾ ಕಾ ವಿಚಾರ್ಯತಾಮ್ ॥ ೬೨೯ ॥**

**ಅರ್ಥ–** ವಿಷ್ಣೂದ್ರಿಕ್ತಾಂಶರಾಮಾಂಘ್ರಿಪಾದುಕಾರಾಜ್ಯನಿರ್ವೃತಃ ಇತಿ = ಈ ರೀತಿಯಾದ ವಾಕ್ಯದಿಂದ, ರಾಮಸ್ಯ = ರಾಮನಿಗೆ, ಉಕ್ತಾ= ಹೇಳಲ್ಪಟ್ಟಿರುವ, ಉದ್ರಿಕ್ತಾಂಶತಾ = ವಿಷ್ಣುವಿನ ಉದ್ರಿಕ್ತಾಂಶತ್ವವು, ಸಾ = ಆ ಉದ್ರಿಕ್ತಾಂಶತ್ವವು, ಕಾ = ಅಭಿನ್ನಾಂಶತ್ವವೋ, ಭಿನ್ನಾಂಶತ್ವವೋ, ಇತಿ = ಎಂಬುದಾಗಿ, ವಿಚಾರ್ಯತಾಂ = ವಿಚಾರಮಾಡಲ್ಪಡಲಿ.

**ಅನುವಾದ–** ವಿಷ್ಣೂದ್ರಿಕ್ತಾಂಶರಾಮಾಂಘ್ರಿಪಾದುಕಾರಾಜ್ಯನಿರ್ವೃತಃ ಎಂಬ ವಾಸುದೇವ ಸಹಸ್ರನಾಮದ ಒಂಧುನಾಮವು ರಾಮನು ವಿಷ್ಣುವಿನ ಉದ್ರಿಕ್ತಾಂಶನೆಂದು ಹೇಳುತ್ತದೆ. ಇಲ್ಲಿ ಉದ್ರಿಕ್ತಾಂಶವೆಂದರೆ ವಿಷ್ಣುವಿನ ಅಭಿನ್ನಾಂಶವೆಂದು ಅರ್ಥವೋ ಅಥವಾ ಭಿನ್ನಾಂಶನೆಂದು ಅರ್ಥವೋ ನೀವೇ ವಿಚಾರಮಾಡಿರಿ.

**ಭಾವವಿಲಾಸಿನೀ–** ಪ್ರಮಾಣಾಂತರೇಣಾಪ್ಯಂಶದ್ವೈವಿಧ್ಯಂ ಸಾಧಯತಿ – **ವಿಷ್ಣೂದ್ರಿಕ್ತೇತಿ** ॥ ಸಾ ವಿಷ್ಣೋರುದ್ರಿಕ್ತಾಂಶೋ ಯೋ ರಾಮಸ್ತಸ್ಯ ಪಾದುಕಾಯಾ ಅಧೀನರಾಜ್ಯೇನ ನಿವೃತ್ತ ಇತ್ಯತ್ರೋಕ್ತಾ ರಾಮಸ್ಯೋದ್ರಿಕ್ತಾಂಶತಾ ॥ ೬೨೯ ॥

ಉದ್ರಿಕ್ತತ್ವಂ ಸ್ವರೂಪತ್ವಮನುದ್ರೇಕಸ್ತತೋಽಪರಃ ।
ಅತೋಂಶಯೋರ್ದ್ವಿತ್ವೈವೋಕ್ತಾ ಸ್ಪಷ್ಟಂ ನಾಮಸಹಸ್ರಕೇ ॥ ೬೩೦ ॥

**ಅರ್ಥ–** ಉದ್ರಿಕ್ತತ್ವಂ = ಅನುದ್ರಿಕ್ತರಾದ ಇತರ ಜೀವರಿಗಿಂತ ಭಿನ್ನವಾಗಿರುವಿಕೆಯು, ಸ್ವರೂಪತ್ವಂ = ಪರಮಾತ್ಮನ ಅಭಿನ್ನಾಂಶವೆನಿಸುತ್ತದೆ, ಅನುದ್ರೇಕಃ = (ಪರಮಾತ್ಮನ ಉದ್ರಿಕ್ತಾಂಶಕ್ಕಿಂತ ಭಿನ್ನವಾಗಿರುವಿಕೆಯು) ಅನುದ್ರಿಕ್ತಾಂಶತ್ವವೆಂಬುದು, ತತಃ = ಸ್ವರೂಪಾಂಶಕ್ಕಿಂತ, ಅಪರಃ = ಭಿನ್ನವಾಗಿದೆ. ಅತಃ = ಆದ್ದರಿಂದ, ನಾಮಸಹಸ್ರಕೇ = ವಾಸುದೇವಸಹಸ್ರನಾಮದಲ್ಲಿ ಅಂಶಯೋಃ = ಅಂಶಗಳ, ದ್ವಿತಾ ಏವ = ದ್ವೈವಿಧ್ಯವೇ, ಸ್ಪಷ್ಟಂ = ಸ್ಪಷ್ಟವಾಗಿ ಹೇಳಲ್ಪಟ್ಟಿದೆ.

**ಅನುವಾದ–** ಉದ್ರಿಕ್ತವೆಂದರೆ ಸ್ವರೂಪವೆಂದು ಅರ್ಥ. ಅನುದ್ರೇಕವು ಅದಕ್ಕಿಂತ ಭಿನ್ನವಾದುದು. ಆದ್ದರಿಂದ ವಾಸುದೇವ ಸಹಸ್ರನಾಮದಲ್ಲಿ ಸ್ಪಷ್ಟವಾಗಿ ಅಂಶದ್ವೈವಿಧ್ಯವೇ ಹೇಳಲ್ಪಟ್ಟಿದೆ.

**ಭಾವವಿಲಾಸಿನೀ–** ಉದ್ರಿಕ್ತತ್ವಂ ಅನುದ್ರಿಕ್ತಜೀವಾಂಶೇಭ್ಯೋಽತಿಶಯಿತ್ವಮ್ । ಸ್ವರೂಪತ್ವಂ ಸ್ವರೂಪಾಂಶತ್ವಮ್ । ಉಕ್ತಂ ರಾಮಾಂಶಸ್ಯೋದ್ರಿಕ್ತತ್ವಮ್ । ಮನುಷ್ಯಾವತಾರತಯಾ ದೃಶ್ಯಮಾನಸರ್ವ ಪ್ರಕಾರೈರ್ಮನುಷ್ಯೋಪಮತ್ವೇನ ಪ್ರಕಾರಾಂತರಾಸಂಭವಾತ್ ವಿಷ್ಣು-ಸ್ವರೂಪಾಂಶತ್ವ ಏವ ಪರ್ಯವಸ್ಯತೀತಿ ಭಾವಃ । ಉದ್ರಿಕ್ತೇತಿ ವಿಶೇಷಣಂ ದದತಾಽನು-ದ್ರಿಕ್ತಾಂಶಸ್ಯಾಪಿ ಸೂಚಿತತ್ವಾದನುದ್ರೇಕಸ್ತತೋಽಪರ ಇತ್ಯುಕ್ತಮ್ । ತತಃ ಸ್ವರೂಪಾಂಶತ್ವಾತ್ । ಅಪರಃ ಭಿನ್ನಾಂಶತ್ವರೂಪಃ । ಅತಃ ಏಕಸ್ಯ ಸಾಕ್ಷಾದುಕ್ತತ್ವಾದಪರಸ್ಯ ಸೂಚಿತತ್ವಾಚ್ಚ । ದ್ವಿತಾ ದ್ವಿಪ್ರಕಾರತಾ । ನಾಮ ಸಹಸ್ರಕೇ ವಾಸುದೇವನಾಮಸಹಸ್ರಕೇ ॥ ೬೩೦ ॥

**ವಿವರಣೆ–** ಉದ್ರಿಕ್ತಾಂಶವೆಂದರೆ ಸ್ವರೂಪಾಂಶವೆಂದು ಮತ್ತು ಅನುದ್ರಿಕ್ತಾಂಶವೆಂದರೆ ಮೂಲದ ಭಿನ್ನಾಂಶವೆಂದೂ ಅರ್ಥವಾಗಿದೆ. ಮನುಷ್ಯನಾಗಿ ಜನಿಸಿದ ಮನುಷ್ಯರನ್ನೇ ಹೋಲುವ ರಾಮನನ್ನು ವಿಷ್ಣುವಿನ ಉದ್ರಿಕ್ತಾಂಶನೆಂದು ವರ್ಣಿಸಿದ ಪುರಾಣವಾಕ್ಯಕ್ಕೆ ರಾಮನು ವಿಷ್ಣುವಿನ ಅಭಿನ್ನಾಂಶನೆಂದು ಅರ್ಥಮಾಡದೇ ಬೇರೆ ಮಾರ್ಗವಿಲ್ಲ. ಪದ್ಮಪುರಾಣದ ವಾಸುದೇವಸಹಸ್ರನಾಮದಲ್ಲಿ ಉದ್ರಿಕ್ತಾಂಶ ಎಂಬ ಪದದಲ್ಲಿ ಅಂಶ ಎಂಬ ಪದಕ್ಕೆ ಉದ್ರಿಕ್ತ ಎಂಬ ವಿಶೇಷಣಕೊಟ್ಟಿದ್ದರಿಂದ ಭಗವಂತನಿಗೆ ಉದ್ರಿಕ್ತಾಂಶವೂ ಇದೆಯೆಂದು ಸೂಚಿಸಲಾಗಿದೆ. ಹೀಗೆ ವಾಸುದೇವ ಸಹಸ್ರನಾಮದ ಆಧಾರದಿಂದ ಭಗವಂತನಿಗೆ ಎರಡು ರೀತಿಯ ಅಂಶಗಳಿವೆಯೆಂಬುದನ್ನು ಸಂಶಯಾತೀತವಾಗಿ ತಿಳಿಯಬಹುದಾಗಿದೆ.

ಬಲಜ್ಞಾನಸುಖಾದ್ಯೈಶ್ಚ ಮತ್ಸ್ಯಾದ್ಯಂಶಾ ಹರೇಃ ಸಮಾಃ ।
ಜೀವಾಂಶಾಸ್ತ್ವತಥಾಭೂತಾ ಕಥಂ ನಾಂಶೇ ದ್ವಿರೂಪತಾ ॥ ೬೩೧ ॥

**ಅರ್ಥ–** ಮತ್ಸ್ಯಾದ್ಯಂಶಾಃ ಚ = ಮತ್ಸ್ಯ ಮೊದಲಾದ ಭಗವಂತನ ಅವತಾರಾಂಶಗಳಾದರೂ, ಬಲಜ್ಞಾನಸುಖಾದ್ಯೈಃ = ಶಕ್ತಿ, ಜ್ಞಾನ, ಸುಖ ಇತ್ಯಾದಿ ಸಮಾನಗುಣಗಳಿರುವ ಕಾರಣದಿಂದಾಗಿ, ಹರೇಃ = ಭಗವಂತನ ಮೂಲರೂಪಕ್ಕೆ, ಸಮಾಃ = ಸಮಾನಗಳಾಗಿವೆ (ಅಭಿನ್ನಗಳಾಗಿವೆ.) ಜೀವಾಂಶಾಃ ತು = ಜೀವಾತ್ಮರ ಅಂಶಗಳಾದರೂ, ಅತಥಾಭೂತಾಃ = ಶಕ್ತ್ಯಾದಿಗಳಿಂದ ಹರಿಗೆ ಸದೃಶರಲ್ಲ, ಅತಃ = ಆದ್ದರಿಂದ, ಅಂಶೇ = ಅಂಶದಲ್ಲಿ, ದ್ವಿರೂಪತಾ = ಎರಡು ಬಗೆಯ ಅಸ್ತಿತ್ವವು, ಕಥಂ = ಹೇಗೆ, ನ = ಇಲ್ಲ?

**ಅನುವಾದ–** ಮತ್ಸ್ಯ ಮೊದಲಾದ ಅವತಾರರೂಪಗಳಲ್ಲಿ ಮತ್ತು ಹರಿಯ ಮೂಲರೂಪದಲ್ಲಿ ಸಮಾನವಾಗಿಯೇ ಶಕ್ತಿ, ಜ್ಞಾನ, ಸುಖ ಮುಂತಾದ ವಿಶಿಷ್ಟಗುಣಗಳಿವೆ. ಆದರೆ ಜೀವಾತ್ಮರು ಪರಮಾತ್ಮನಿಗೆ ಆ ಗುಣಗಳಿಂದ ಸಮರಲ್ಲ. ಆದ್ದರಿಂದ ಭಿನ್ನಾಂಶ ಮತ್ತು ಅಭಿನ್ನಾಂಶಗಳೆಂಬ ಎರಡು ಬಗೆಯ ಅಂಶಗಳನ್ನು ಒಪ್ಪಲೇಬೇಕು.

**ಭಾವವಿಲಾಸಿನೀ–** ಯುಕ್ತ್ಯಾಪ್ಯಂಶದ್ವೈವಿಧ್ಯಮುಪಪಾದಯತಿ ॥ ಬಲೇತಿ ॥ ಅತಥಾಭೂತಾಃ ಬಲಜ್ಞಾನಸುಖದ್ಯೈರ್ಹರೇರಸಮಾಃ । ಅತಃ ಕಥಂ ನಾಂಶೇ ದ್ವಿರೂಪತೇತಿ ಯೋಜನಾ ॥೬೩೧॥

ಬಲಜ್ಞಾನಸುಖೋದ್ರೇಕಾದುದ್ರಿಕ್ತಾಂಶಾಸ್ತು ತೇ ಹರೇಃ ।
ಸ್ವಲ್ಪಜ್ಞಾನಬಲೋ ಜೀವಸ್ತ್ವನುದ್ರಿಕ್ತಾಂಶ ಉಚ್ಯತೇ ॥ ೬೩೨ ॥

**ಅರ್ಥ--** ತೇ ತು = ಆ ಮತ್ಸ್ಯಾದಿ ಅವತಾರಗಳಾದರೂ, ಬಲಜ್ಞಾನಸುಖೋದ್ರೇಕಾತ್ = ಶಕ್ತಿ, ಜ್ಞಾನ, ಸುಖ ಇವುಗಳಿಂದ ಪೂರ್ಣಗಳಾಗಿರುವುದರಿಂದ, ಹರೇಃ = ವಿಷ್ಣುವಿನ, ಉದ್ರಿಕ್ತಾಂಶಾಃ = ಪೂರ್ಣಾವತಾರಗಳು ಆಗಿವೆ. ಸ್ವಲ್ಪಜ್ಞಾನಬಲಃ = ಸ್ವಲ್ಪಜ್ಞಾನ, ಸ್ವಲ್ಪಶಕ್ತಿಗಳುಳ್ಳ, ಜೀವಃ ತು = ಜೀವನಾದರೂ, ಹರೇಃ = ವಿಷ್ಣುವಿನ, ಅನುದ್ರಿಕ್ತಾಂಶಃ = ಭಿನ್ನಾಂಶನೆಂದು, ಉಚ್ಯತೇ = ಹೇಳಲ್ಪಡುತ್ತಾನೆ.

**ಅನುವಾದ–** ಹರಿಯ ಅವತಾರಗಳಾದ ಮತ್ಸ್ಯ, ಸನತ್ಕುಮಾರಾದಿಗಳೂ ಅವನಂತೆಯೇ ಶಕ್ತಿ, ಜ್ಞಾನ, ಸುಖಗಳಿಂದ ಕೂಡಿವೆ. ಹಾಗಾಗಿ ಅವು ಆತನ ಉದ್ರಿಕ್ತಾಂಶ (ಸ್ವರೂಪಾಂಶ) ಎನಿಸಿಕೊಳ್ಳುತ್ತವೆ. ಆದರೆ ಜೀವನ ಜ್ಞಾನ ಮತ್ತು ಶಕ್ತಿಗಳು ಸೀಮಿತಗಳಾಗಿರುವುದರಿಂದ ಆತ ಭಗವಂತನ ಅನುದ್ರಿಕ್ತಾಂಶ, ಭಿನ್ನಾಂಶ ಎನಿಸಿಕೊಳ್ಳುತ್ತಾನೆ. ಹಾಗಾಗಿ ಉದ್ರಿಕ್ತಾಂಶವೆಂದರೆ ಸ್ವರೂಪಾಂಶ ಮತ್ತು ಅನುದ್ರಿಕ್ತಾಂಶ ಎಂದರೆ ಭಿನ್ನಾಂಶ.

**ಭಾವವಿಲಾಸಿನೀ–** ಪ್ರಾಗುದ್ರಿಕ್ತಾಂಶತ್ವಂ ಸ್ವರೂಪಾಂಶತ್ವಮ್ ಅನುದ್ರಿಕ್ತಾಂಶತ್ವಂ ಚ ಭಿನ್ನಾಂಶತ್ವ-ಮಿತ್ಯುಕ್ತಮ್ । ತತ್ಕುತ ಇತ್ಯತಃ ಉದ್ರೇಕಾನುದ್ರೇಕೌ ವಿವೇಚಯತಿ – ಬಲಜ್ಞಾನ-

**ಸುಖೋದ್ರೇಕಾದಿತಿ ॥** ತೇ ಮತ್ಸ್ಯಾದ್ಯಾಃ। ಬಲಜ್ಞಾನಾದಿಪೂರ್ಣತ್ವಮುದ್ರಿಕ್ತತ್ವಂ ತದಪೂರ್ಣತ್ವಂ ಚಾನುದ್ರಿಕ್ತತ್ವಮ್ । ತಚ್ಚ ಮತ್ಸ್ಯಾದೀನಾಂ ಭಗವದ್ರೂಪತ್ವೇ ಜೀವಾನಾಂ ಚ ತದ್ಭಿನ್ನತ್ವ ಏವ ಸಂಭವತಿ । ತಸ್ಮಾದುದ್ರಿಕ್ತಾಂಶತ್ವಂ ಸ್ವರೂಪಾಂಶತ್ವಂ, ಅನುದ್ರಿಕ್ತಾಂಶತ್ವಂ ಚ ಭಿನ್ನಾಂಶತ್ವಮಿತಿ ಭಾವಃ ॥ ೬೩೨ ॥

**ಅತೋಽತಿಭಿನ್ನ ಏವಾಯಂ ಜೀವಾಖ್ಯಾಂಶೋ ಭವೇದ್ ಧ್ರುವಮ್ ।**
**ವಿರುದ್ಧಧರ್ಮಾಕ್ರಾಂತತ್ವೇ ಭೇದಂ ಕೋ ನ ವದೇದ್ ಬುಧಃ॥ ೬೩೩ ॥**

**ಅರ್ಥ–** ಅತಃ = ಆದ್ದರಿಂದ, ಅಯಂ = ಈ, ಜೀವಾಖ್ಯಾಂಶಃ = ಜೀವನೆಂಬ ಪರಮಾತ್ಮನ ಅಂಶನು, ಹರೇಃ = ವಿಷ್ಣುವಿನಿಂದ, ಅತಿಭಿನ್ನ ಏವ = ಅತ್ಯಂತ ಭಿನ್ನನೇ, ಧ್ರುವಂ = ನಿಶ್ಚಿತವಾಗಿಯೂ, ಭವೇತ್ = ಆಗುತ್ತಾನೆ. (ವಸ್ತುನೋಃ = ಎರಡು ವಸ್ತುಗಳಿಗೆ) ವಿರುದ್ಧಧರ್ಮಾಕ್ರಾಂತತ್ವೇ = ವಿರುದ್ಧಧರ್ಮಾಶ್ರಯತ್ವವು ಇರುವಾಗ, ಕಃ = ಯಾವ, ಬುಧಃ = ಪಂಡಿತನು, ಭೇದಂ = ಭೇದವನ್ನು, ನ ವದೇತ್ = ಹೇಳಲಾರನು?

**ಅನುವಾದ–** ಆದ್ದರಿಂದ ಈ ಜೀವನೆಂಬ ಅಂಶವು ನಿಶ್ಚಯವಾಗಿ ವಿಷ್ಣುವಿನಿಂದ ಭಿನ್ನನೇ ಆಗಿದ್ದಾನೆ. ವಿರುದ್ಧ ಧರ್ಮಾದಿಕರಣತ್ವವು ಇರುವಾಗ ಯಾವ ವಿವೇಕಿಯು ತಾನೇ ಭೇದವನ್ನು ಹೇಳುವುದಿಲ್ಲ?

**ಭಾವವಿಲಾಸಿನೀ–** ಅತಃ ಅನುದ್ರಿಕ್ತಾಂಶತ್ವಸ್ಯ ಭೇದಾವಿನಾಭೂತತ್ವಾತ್ । ಅವಿನಾಭಾವಮೇವೋಪಪಾದಯತಿ ॥ ವಿರುದ್ಧೇತಿ ॥ ೬೩೩ ॥

**ವಿವರಣೆ–** ಜೀವಪರಮಾತ್ಮರಲ್ಲಿ ಭೇದವಿಲ್ಲದಿದ್ದರೆ ಜೀವಾತ್ಮನಿಗೆ ಅನುದ್ರಿಕ್ತತ್ವವು (ಅಪೂರ್ಣತ್ವವು) ಕೂಡಲಾರದು. ಆದ್ದರಿಂದ ಅವನು ಪೂರ್ಣನಾದ ಹರಿಯಿಂದ ಅತ್ಯಂತ ಭಿನ್ನನೇ ಆಗಿದ್ದಾನೆ. ಎರಡು ವಸ್ತುಗಳು ಅಥವಾ ವ್ಯಕ್ತಿಗಳು ವಿರುದ್ಧಧರ್ಮಗಳನ್ನು ಹೊಂದಿದ್ದರೆ, ಅವುಗಳಿಗೆ ಪಂಡಿತರು ಭೇದವನ್ನು ಹೇಳಿಯೇ ಹೇಳುತ್ತಾರೆ.

**ಮಮಾಂಶಸ್ಯೈವ ಜೀವಸ್ಯೇತ್ಯುಕ್ತ್ವಾ ಭಾಗವತೇ ಹರಿಃ ॥ ೬೩೪ ॥**

**ಸಖಾಯೌ ಸಯುಜೌ ಚೇತಿ ಸ್ಪಷ್ಟಮಾಹ ಪುನರ್ಭಿದಾಮ್ ।**
**ತಸ್ಮಾದ್ ಭಿನ್ನಾಂಶವಾದೋಽಯಂ ಕಸ್ಯ ಮೋದಾಯ ನೇಷ್ಯತೇ॥ ೬೩೫ ॥**

**ಅರ್ಥ–** ಹರಿಃ = ಶ್ರೀಕೃಷ್ಣನು, ಭಾಗವತೇ = ಭಾಗವತದಲ್ಲಿ, ಏಕಸ್ಯೈವ ಮಮಾಂಶಸ್ಯ ಜೀವಸ್ಯೈವಂ ಮಹಾಮತೇ ಇತಿ = ಹೀಗೆ, ಉಕ್ತ್ವಾ = ಹೇಳಿ, ಪುನಃ = ಮತ್ತೊಮ್ಮೆ ಸುಪರ್ಣಾವೇತೌ ಸಯುಜೌ ಸಖಾಯೌ ಇತಿ ಚ = ಹೀಗೆ ಕೂಡ, ಭಿದಾಂ = ಭೇದವನ್ನು

ಸ್ಪಷ್ಟಂ = ಸಂಶಯಾತೀತವಾಗಿ, ಆಹ = ಹೇಳುತ್ತಾನೆ. ತಸ್ಮಾತ್ = ಆದ್ದರಿಂದ, ಅಯಂ = ನಾವು ಹೇಳಿದ ಈ ಯಾವ, ಭಿನ್ನಾಂಶವಾದಃ = ಜೀವನು ಪರಮಾತ್ಮನ ಭಿನ್ನಾಂಶವೆಂಬ ಸಿದ್ಧಾಂತವು, ಕಸ್ಯ = ಯಾರ, ಮೋದಾಯ = ಸಂತೋಷಕ್ಕಾಗಿ, ನ ಇಷ್ಯತೇ = ಮೆಚ್ಚಲ್ಪಡುವುದಿಲ್ಲ?

**ಅನುವಾದ–** **ಶ್ರೀಕೃಷ್ಣನು ಭಾಗವತದಲ್ಲಿ ಉದ್ಧವನನ್ನು ಕುರಿತು ಏಕಸ್ಯೈವ ಮಮಾಂಶಸ್ಯ ಎಂಬ ಶ್ಲೋಕದಿಂದ ಮತ್ತು ಸುಪರ್ಣಾವೇತೌ ಸಯುಜೌ ಎಂಬ ಶ್ಲೋಕದಿಂದಲೂ ಜೀವೇಶ್ವರರ ಅಂಶಾಂಶಿತ್ವ ಮತ್ತು ಭೇದವನ್ನು ಸ್ಪಷ್ಟವಾಗಿ ಹೇಳುತ್ತಾನೆ. ಹೀಗೆ ನಾವು ಹೇಳುವ ಭಿನ್ನಾಂಶವಾದವು ಎಲ್ಲರ ಮೆಚ್ಚುಗೆಗೂ ಪಾತ್ರವಾಗಿದೆ.**

**ಭಾವವಿಲಾಸಿನೀ–** ಸ್ಪಷ್ಟಂ ಭಿನ್ನಾಂಶಸದ್ಭಾವೇ ಪ್ರಮಾಣಮಾಹ – **ಮಮಾಂಶಸ್ಯೈವೇತಿ** ॥ ಮಮಾಂಶಸ್ಯೈವ ಜೀವಸ್ಯೇತ್ಯನೇನ ಏಕಸ್ಯೈವ ಮಮಾಂಶಸ್ಯ ಜೀವಸ್ಯೈವಂ ಮಹಾಮತೇ । ಬಂಧೋ ಸ್ಯಾವಿದ್ಯಯಾನಾದಿರ್ವಿದ್ಯಯಾ ಚ ತಥೇತರ ಇತಿ ಪದ್ಯಂ ಸಖಾಯೌ ಸಯುಜೌ ಚೇತನ್ಯನೇನ ಸುಪರ್ಣಾವೇತೌ ಸಯುಜೌ ಸಖಾಯೌ ಚೇತಿ ಪದ್ಯಂ ಚ ಸಂಗೃಹ್ಣಾತಿ । ಉಭಯೋರಪಿ ಭಗವದ್ವಾಕ್ಯತ್ವಾದ್ಧರಿರಿತ್ಯುಕ್ತಮ್ । ಏವಕಾರಸಂಬಂಧಪ್ರದರ್ಶನಾಯ ಮಮಾಂಶಸ್ಯೈವೇತ್ಯುಕ್ತಮ್ । ತೇನ ಚಾಂಶಾಂಶಿಭಾವಂ ಮುಕ್ತಾವಪ್ಯನುವರ್ತಮಾನಂ ಸೂಚಯತಿ। ತಚ್ಚ ಭೇದಸ್ಯ ಮುಕ್ತಿಕಾಲೀನತಯಾ ಪಾರಮಾರ್ಥಿಕತ್ವಸೂಚನಾರ್ಥಮ್। ಏವಂಚ ವಾಕ್ಯದ್ವಯಾರ್ಥಪರ್ಯಾಲೋಚನಯಾ ನ ಕಥಂ ಜೀವಸ್ಯ ಭಿನ್ನಾಂಶತ್ವ ಸಿದ್ಧಿರಿತಿ ಭಾವಃ । ತಸ್ಮಾದಂಶಾಂಶಿನೇರೇವ ಸ್ಪಷ್ಟಂ ಭೇದಕಥನಾತ್ ॥ ೬೩೪-೩೫ ॥

**ವಿವರಣೆ–** ಜೀವನು ಪರಮಾತ್ಮನ ಭಿನ್ನಾಂಶನು ಎಂಬುದಕ್ಕೆ ಶ್ರೀಕೃಷ್ಣನ ಮಾತೇ ಪ್ರಮಾಣವಾಗಿದೆ. ಭಾಗವತದ (ಏಕಾದಶಸ್ಕಂಧದ ಹನ್ನೊಂದರನೆಯ ಅಧ್ಯಾಯ) ಉದ್ಧವಗೀತೆಯಲ್ಲಿ ಶ್ರೀಕೃಷ್ಣನು ಉದ್ಧವನಿಗೆ ಹೀಗೆ ಹೇಳುತ್ತಾನೆ.

ಏಕಸ್ಯೈವ ಮಮಾಂಶಸ್ಯ ಜೀವಸ್ಯೈವಂ ಮಹಾಮತೇ ।
ಬಂಧೋಸ್ಯಾವಿದ್ಯಯಾऽನಾದಿರ್ವಿದ್ಯಯಾ ಚ ತಥೇತರತ್ ॥೪॥

ಪ್ರಾಜ್ಞನಾದ ಉದ್ಧವನೇ! ಏಕಮೇವಾದ್ವಿತೀಯನಾದ ನನ್ನ ಅಂಶವೇ ಯಾವಾಗಲೂ ಆಗಿರುವ ಈ ಜೀವನಿಗೆ ಅವಿದ್ಯೆಯ ಕಾರಣದಿಂದಾಗಿ ಅನಾದಿಯಾದ ಬಂಧನವಿದೆ, ವಿದ್ಯೆಯಿಂದಾಗಿ ಆ ಬಂಧವು ಹೋಗಿ ಮೋಕ್ಷವು ಅವನಿಗೆ ದೊರೆಯುತ್ತದೆ.

ಜೀವನು ಪರಮಾತ್ಮನ ಅಭಿನ್ನಾಂಶವಾಗಿದ್ದರೆ ಜೀವನಿಗೆ ಅಜ್ಞಾನದಿಂದಾಗಿ ಸಂಸಾರಬಂದರೆ ಪರಮಾತ್ಮನಿಗೂ ಅದು ಬರಬೇಕಾದೀತು. ಹಾಗಾಗಿ ಜೀವನು ಪರಮಾತ್ಮನ ಭಿನ್ನಾಂಶನೆಂಬುದು ಕೃಷ್ಣನ ಅಭಿಪ್ರಾಯ ಎಂದು ತಿಳಿಯುತ್ತದೆ. ಏವಕಾರವನ್ನು ಮಮಾಂಶಸ್ಯ ಎಂಬುದರ ಜೊತೆಗೆ ಸೇರಿಸುವ ಮೂಲಕ ವಾದಿರಾಜರು ಜೀವಪರಮಾತ್ಮರ ಅಂಶಾಂಶಿಭಾವವು ಸಂಸಾರದಲ್ಲಿರುವಂತೆ ಮುಕ್ತಿಯಲ್ಲೂ

ಮುಂದುವರಿಯುತ್ತದೆ ಎಂದು ಸೂಚಿಸಿದ್ದಾರೆ. ಮುಕ್ತಿಯಲ್ಲಿಯೂ ಅಂಶಾಂಶಿಭಾವವು ಇರಬೇಕಾದರೆ ಅಲ್ಲಿಯೂ ಪರಮಾತ್ಮನು ಜೀವನಿಂದ ಪಾರಮಾರ್ಥಿಕವಾಗಿ ಭಿನ್ನನಾಗಿರುವನೆಂದು ಸೂಚಿಸಿದಂತಾಯಿತು.

**ಸುಪರ್ಣಾವೇತೌ ಸದೃಶೌ ಸಖಾಯೌ**
**ಯದೃಚ್ಛಯೈತೌ ಕೃತನೀಡೌ ಚ ವೃಕ್ಷೇ ।**
**ಏಕಸ್ತಯೋಃ ಖಾದತಿ ಪಿಪ್ಪಲಾನ್ನಂ**
**ಅನ್ಯೋ ನಿರನ್ನೋಽಪಿ ಬಲೇನ ಭೂಯಾನ್ ॥೬॥**

-ಭಾಗವತ ಏಕಾದಶಸ್ಕಂಧ, ಹನ್ನೊಂದನೆಯ ಅಧ್ಯಾಯ.

ಈ ಶ್ಲೋಕವು ದ್ವಾಸುಪರ್ಣಾ ಎಂಬ ಶ್ರುತಿಯ ಅನುವಾದರೂಪವಾಗಿದೆ.

ಸುಂದರವಾದ ರೆಕ್ಕೆಗಳನ್ನು ಹೊಂದಿರುವ, ಪರಸ್ಪರ ಸದೃಶರೂ, ಸ್ನೇಹಿತರೂ ಆಗಿರುವ ಈ ಜೀವ - ಈಶ್ವರರೆಂಬ ಹಕ್ಕಿಗಳು ದೇಹವೆಂಬ ಅಶ್ವತ್ಥವೃಕ್ಷದಲ್ಲಿ ನೆಲೆಮಾಡಿಕೊಂಡಿವೆ. ಅವುಗಳಲ್ಲಿ ಒಂದಾದ ಜೀವನೆಂಬ ಹಕ್ಕಿಯು ತನ್ನ ಕರ್ಮಫಲವೆಂಬ ಅಶ್ವತ್ಥದ ಹಣ್ಣನ್ನು ತಿನ್ನುತ್ತಿದೆ. ಈಶ್ವರನೆಂಬ ಹಕ್ಕಿಯು ಏನನ್ನೂ ತಿನ್ನದೇ ತನ್ನ ಸಹಜಸಾಮರ್ಥ್ಯದಿಂದ ಬಲಿಷ್ಠವಾಗಿದೆ. ಹೀಗೆ ಇವೆರಡೂ ಭಾಗವತದ ಶ್ಲೋಕಗಳನ್ನು ವಿಮರ್ಶಿಸಿದಾಗ ಜೀವನು ಪರಮಾತ್ಮನ ಭಿನ್ನಾಂಶನೆಂದು ಸಿದ್ಧವಾಗುತ್ತದೆ.

**ನಚೇದಂಶಂ ಕಥಂ ನಾನಾವ್ಯಪದೇಶಾತ್ಸಸೂತ್ರಕೃತ್ ।**
**ಅಸೂತ್ರಯದಿಮಂ ಜೀವಂ ತತ್ಸಂಬಂಧಾತ್ತದಂಶತಾ ।**
**ಸರ್ವಸ್ಯ ಜೀವಜಾತಸ್ಯ ಯತ್ಪುತ್ರೋಽಪ್ಯಂಶ ಉಚ್ಯತೇ ॥ ೬೩೬ ॥**

**ಅರ್ಥ–** ನಚೇತ್= ಜೀವನೆಂಬ ಅಂಶನು ಭಿನ್ನನಾಗಿರದಿದ್ದರೆ, ಸಸೂತ್ರಕೃತ್= ಆ ಸೂತ್ರಕಾರರು, ನಾನಾವ್ಯಪದೇಶಾತ್= ನಾನಾವ್ಯಪದೇಶವೆಂಬ ಹೇತುವಿನಿಂದ, ಇಮಂ ಜೀವಂ= ಈ ಜೀವನನ್ನು, ಕಥಂ ಅಸೂತ್ರಯತ್= ಹೇಗೆ ಅಂಶವೆಂದು ಹೇಳಿದರು? ತತ್ಸಂಬಂಧಾತ್= ಪರಮಾತ್ಮನ ಸಂಬಂಧದಿಂದಲೇ, ಸರ್ವಸ್ಯ ಜೀವಜಾತಸ್ಯ= ಎಲ್ಲ ಜೀವಸಮೂಹಕ್ಕೆ, ತದಂಶತಾ= ಪರಮಾತ್ಮನ ಅಂಶತ್ವವು ಉಂಟಾಗುವುದಷ್ಟೆ? ಯತ್= ಏಕೆಂದರೆ, ಪುತ್ರೋಽಪಿ= ಪುತ್ರನೂ ಕೂಡ, ಅಂಶಃ= ತಂದೆಯ ಅಂಶವೆಂದು, ಉಚ್ಯತೇ= ಹೇಳಲ್ಪಡುತ್ತಾನೆ.

**ಅನುವಾದ–** ಜೀವನು ಭಿನ್ನನಾದ ಅಂಶನಾಗಿರದಿದ್ದರೆ ಸೂತ್ರಕಾರರು ನಾನಾವ್ಯಪದೇಶಾತ್ ಎಂಬ ಹೇತುವಿನಿಂದ ಹೇಗೆ ಜೀವನನ್ನು ಅಂಶನೆಂದು ಹೇಳುತ್ತಾರೆ? ಪರಮಾತ್ಮನ ಸಂಬಂಧದಿಂದಲೇ ಎಲ್ಲಾ ಜೀವಸಮೂಹಕ್ಕೆ

ಪರಮಾತ್ಮನ ಅಂಶತ್ವವಷ್ಟೆ? ಏಕೆಂದರೆ ಪುತ್ರನೂ ಸಹ ತಂದೆಯ ಅಂಶನೆಂದು ಹೇಳಲ್ಪಡುತ್ತಾನೆ.

**ಭಾವವಿಲಾಸಿನೀ–** ನಿರ್ಣಾಯಕಸೂತ್ರೇಣಾಪಿ ಜೀವಾಖ್ಯಾಂಶಸ್ಯ ಭೇದಂ ಸಾಧಯತಿ ॥ **ನ ಚೇದಿತಿ** ॥ ನ ಚೇತ್ ಜೀವಾಖ್ಯಾಂಶೋ ಭಿನ್ನೋ ನಚೇತ್ । ಸೂತ್ರಕೃದಿಮಂ ಜೀವಂ ನಾನಾವ್ಯಪದೇಶಾತ್ ಅಂಶಂ ಕಥಮಸೂತ್ರಯತ್ । ಭೇದವ್ಯಪದೇಶಾಪರಪರ್ಯಾಯಂ ನಾನಾವ್ಯಪದೇಶಂ ಹೇತೂಕೃತ್ಯಾಂಶತ್ವಂ ಕಥಮಸಾಧಯದಿತಿ ಭಾವಃ । ನನು ಅನ್ಯಥಾ ಚಾಪಿ ದಾಶಕಿತವಾದಿತ್ವಮಧೀಯತ ಏಕ ಇತಿ ಸೂತ್ರಶೇಷೇ ಅಭೇದವ್ಯಪದೇಶಸ್ಯಾಪಿ ಸೂತ್ರಿತತ್ವಾತ್ ಕಥಂ ನಾನಾವ್ಯಪದೇಶಾದೇವಾಂಶತ್ವಮಸಾಧಯದಿತಿ ಚೇತ್ । ಸತ್ಯಮ್ । ಸೋಽಪ್ಯೇಕಃ ಪಂಡಿತ ಇತ್ಯಾದಾವಿವಾನ್ಯಥಾಪ್ಯಧೀಯತ ಇತಿ ಗರ್ಹಾವಾಚಕಾಪಿಪದೇನಾಭೇದವ್ಯಪದೇಶಸ್ಯೋಪಚರಿತತ್ವಸೂಚನಾತ್ । ಮುಖ್ಯಾಭೇದಸ್ಯ ನಾಂಶತ್ವಹೇತುತಾ । ತಥಾ ಸತಿ ಮುಖ್ಯಾಭೇದಪ್ರಯುಕ್ತಪೂರ್ಣಬಲಜ್ಞಾನಾದಿನಾ ಭಗವತ್ ಸಾದೃಶ್ಯಸ್ಯ ಮತ್ಸ್ಯಾದಿಷ್ವಿವ ಜೀವೇಷ್ವಪ್ಯುಪಲಂಭಪ್ರಸಂಗಾತ್ । ನಚ ವಾಚ್ಯಂ ಪೂರ್ವೋಕ್ತಹೇತು ಸಮುಚ್ಚಾಯಕೋಽಪಿ ಶಬ್ದ ಇತಿ । ಸಮುಚ್ಚಯಸ್ಯ ಚಶಬ್ದೇನ ಕೃತತ್ವಾತ್ ಪುನರಸ್ಯಾಪಿ ಸಮುಚ್ಚಾಯಕತ್ವೇ ಪೌನರುಕ್ತ್ಯಾತ್ । ಅತೋಽಸ್ವರಸಸೂಚಕಮೇವೇದಮಪಿಪದಮ್ । ಏವಂಚ ರಾಜಾರಾಷ್ಟ್ರಮಿತಿವತ್ತದಧೀನತ್ವಾದಿ ಬ್ರಹ್ಮಸಂಬಂಧೇನೈವ ತದಭೇದವ್ಯಪದೇಶ ಇತಿ ಸೂತ್ರಕೃತೋ ಹೃದಯಮ್ । ತದಪ್ಯನ್ಯೋನ್ಯನಿರಪೇಕ್ಷತಯಾ ಭಿನ್ನಯೋರ್ಘಟಪಟಯೋರಂಶಾಂಶಿಭಾವವ್ಯಪದೇಶಾದರ್ಶನೇನ ಭಿನ್ನಯೋರೇವ ಜೀವಪರಮಯೋರಂಶಾಂಶಿ ಭಾವಘಟನಾರ್ಥಮ್ । ತಥಾ ಚ ಬ್ರಹ್ಮಭಿನ್ನತ್ವೇ ಸತಿ ಬ್ರಹ್ಮಸಂಬಂಧಿತ್ವಾಜ್ಜೀವೋ ಬ್ರಹ್ಮಾಂಶ ಇತಿ ಸೂತ್ರಕೃತೋಽಭಿಸಂಧಿಃ। ಗ್ರಂಥಕೃತ್ತು ತತ್ಸಂಬಂಧವ್ಯಪದೇಶಸ್ಯಾಪ್ಯಂತತೋ ಭೇದವ್ಯಪದೇಶತ್ವಾತ್ತಮೇವ ಹೇತೂಕೃತವಾನ್ । ಏತದೇವ ವಿಶದಯತಿ ॥ **ತತ್ ಸಂಬಂಧಾದಿತ್ಯಾದಿನಾ ನ ಹೀಂದ್ರಸ್ಯ ಸ್ವರೂಪಾಂಶಾವಾಲಿ ಪಾರ್ಥಾದಯೋಽಸಮಾ** ಇತ್ಯಂತೇನ ಗ್ರಂಥೇನ । ವ್ಯಾಖ್ಯಾತಪ್ರಾಯಮಿದಂ ಸರ್ವಮ್ ॥ ೬೩೬ ॥

**ವಿವರಣೆ–** ಅಂಶವು ನಾನಾವ್ಯಪದೇಶಾತ್ ಎಂಬಲ್ಲಿ ನಾನಾ ಶಬ್ದಕ್ಕೆ ಭೇದವೆಂದು ಅರ್ಥ. ಆದ್ದರಿಂದ ಸೂತ್ರಕಾರರು ಭೇದವ್ಯಪದೇಶವನ್ನು ಹೇತುವನ್ನಾಗಿಮಾಡಿ ಜೀವನಿಗೆ ಅಂಶತ್ವವನ್ನು ಸಾಧಿಸಿರುವುದರಿಂದ ಜೀವರನ್ನು ಪರಮಾತ್ಮನ ಭಿನ್ನಾಂಶರೆಂದು ಒಪ್ಪಬೇಕು. ಯದ್ಯಪಿ ಆ ಸೂತ್ರದಲ್ಲಿಯೇ ಅನ್ಯಥಾ ಚಾಪಿ ದಾಶಕಿತವಾದಿತ್ವಮಧೀಯತ 'ಏಕ' ಎಂಬ ಭಾಗದಿಂದ ಅಭೇದವ್ಯಪದೇಶವನ್ನು ಹೇಳಿದ್ದಾರೆ. ಆದರೆ ಅಭೇದವ್ಯಪದೇಶವು ನೀಚವಾದುದು ಎಂದು ಅಪಿಶಬ್ದವು ಸೂಚಿಸುತ್ತದೆ. ಅವನೂ ಒಬ್ಬ ಪಂಡಿತ (ಸೋಽಪ್ಯೇಕಃ ಪಂಡಿತಃ) ಎಂಬಲ್ಲಿ ಅಪಿ ಶಬ್ದವು ಹೇಗೆ ನೀಚಪಾಂಡಿತ್ಯವನ್ನು ಹೇಳುತ್ತದೆಯೋ ಅದರಂತೆ ಅನ್ಯಥಾ ಚಾಪಿ ಎಂಬಲ್ಲಿ ಹೇಳುವ ಅಭೇದವು ನೀಚವಾದುದು ಎಂದು ತಿಳಿಯುತ್ತದೆ. ಅಲ್ಲಿ ಅಪಿಶಬ್ದವು ಸಮುಚ್ಚಯಾರ್ಥಕವಾಗುವುದಿಲ್ಲ. ಏಕೆಂದರೆ ಚಶಬ್ದದಿಂದಲೇ ಸಮುಚ್ಚಯವು ಹೇಳಲ್ಪಡುತ್ತದೆ. ಆದ್ದರಿಂದ ತಂದೆಗಿಂತ

ಭಿನ್ನನಾದರೂ ಕೇವಲ ತಂದೆಯ ಸಂಬಂಧದಿಂದ ಹೇಗೆ ಪುತ್ರನು ಅಂಶನೆನಿಸುತ್ತಾನೆಯೋ ಅದರಂತೆ ಪರಮಾತ್ಮನಿಂದ ಭಿನ್ನರಾದರೂ ಪರಮಾತ್ಮನ ಸಂಬಂಧವಿರುವುದರಿಂದ ಎಲ್ಲ ಜೀವರೂ ಪರಮಾತ್ಮನ ಅಂಶರೆನಿಸುತ್ತಾರೆ ಎಂದು ಅಭಿಪ್ರಾಯ.

**ಮತ್ಸ್ಯಾದ್ಯಾಸ್ತು ಸ್ವರೂಪಾಂಶಾಃ ಬಲಜ್ಞಾನಸುಖಾದಿಭಿಃ ।**
**ಯನ್ಮೂಲರೂಪಸದೃಶಾಃ ಸರ್ವೇ ಸರ್ವತ್ರ ಸರ್ವದಾ ॥ ೬೩೭ ॥**

**ಅರ್ಥ–** ಯತ್ = ಯಾವಕಾರಣದಿಂದ, ಮತ್ಸ್ಯಾದ್ಯಾಃ = ಮತ್ಸ್ಯಮೊದಲಾದ, ಸರ್ವೇ = ಎಲ್ಲ ಅಂಶಾಃ ತು = ಅಂಶಗಳಾದರೂ, ಸರ್ವತ್ರ = ಎಲ್ಲೆಡೆಯೂ, ಸರ್ವದಾ = ಯಾವಾಗಲೂ, ಬಲಜ್ಞಾನಸುಖಾದಿಭಿಃ = ಶಕ್ತಿ, ಜ್ಞಾನ, ಸುಖ ಮುಂತಾದ ಎಲ್ಲ ಗುಣಗಳಿಂದ, ಮೂಲರೂಪಸದೃಶಾಃ = ಮೂಲರೂಪವಾದ ನಾರಾಯಣನಿಗೆ ಸದೃಶಗಳಾಗಿವೆಯೋ, ತತ್ = ಆ ಕಾರಣದಿಂದ, ತೇ = ಆ ಅಂಶಗಳು, ಸ್ವರೂಪಾಂಶಾಃ = ಮೂಲರೂಪದ ಅಭಿನ್ನಾಂಶಗಳಾಗಿವೆ.

**ಅನುವಾದ– ಎಲ್ಲ ಕಾಲದಲ್ಲಿಯೂ, ಎಲ್ಲ ಪ್ರದೇಶಗಳಲ್ಲಿಯೂ ಮತ್ಸ್ಯಮೊದಲಾದ ಅಂಶಗಳು ಸಾಮರ್ಥ್ಯ, ಜ್ಞಾನ, ಸುಖ ಮುಂತಾದ ಎಲ್ಲ ಗುಣಗಳಿಂದ ಮೂಲರೂಪನಾದ ನಾರಾಯಣನಿಗೆ ಸದೃಶಗಳಾಗಿವೆ. ಆದ್ದರಿಂದ ಆ ರೂಪಗಳು ಮೂಲರೂಪದ ಅಭಿನ್ನಾಂಶಗಳೇ ಆಗಿವೆ.**

**ಯದ್ಯನ್ಯೇಽಪಿ ಸ್ವರೂಪಾಂಶಾಃ ಕಿಂ ನ ಸ್ಯುರ್ಮತ್ಸ್ಯಕೂರ್ಮವತ್ ।**
**ಬಲಜ್ಞಾನಸುಖಾದ್ಯೈಶ್ಚ ಸದಾ ವಿಷ್ಣೂಪಮಾಸ್ತದಾ ॥ ೬೩೮ ॥**

**ಅರ್ಥ–** ಯದಿ = ಒಂದು ಪಕ್ಷದಲ್ಲಿ, ಅನ್ಯೇ ಅಪಿ = ಬ್ರಹ್ಮಾದಿ ಇತರ ಜೀವರೂ, ಮತ್ಸ್ಯಕೂರ್ಮವತ್ = ಮತ್ಸ್ಯಕೂರ್ಮಮೊದಲಾದ ಭಗವದವತಾರಗಳಂತೆ, ಸ್ವರೂಪಾಂಶಾಃ = ಭಗವಂತನ ಅಭಿನ್ನಾಂಶಗಳೇ, ಸ್ಯುಃ = ಆಗಿದ್ದರೆ, ತದಾ = ಆ ಪಕ್ಷದಲ್ಲಿ, ತೇ = ಆ ಜೀವಾತ್ಮರು, ಬಲಜ್ಞಾನಸುಖಾದ್ಯೈಃ ಚ = ಸಾಮರ್ಥ್ಯ, ಜ್ಞಾನ, ಸುಖ ಮುಂತಾದ ಎಲ್ಲ ಗುಣಗಳಿಂದಲೂ, ಸದಾ = ಯಾವಾಗಲೂ, ವಿಷ್ಣೂಪಮಾಃ = ವಿಷ್ಣುವಿಗೆ ಸದೃಶರು, ನ ಸ್ಯುಃ ಕಿಂ = ಆಗಲಾರರೇನು?

**ಅನುವಾದ– ಬ್ರಹ್ಮಮೊದಲಾದ ಇತರ ಜೀವಾತ್ಮರೂ ಭಗವದವತಾರಗಳಾದ ಮತ್ಸ್ಯಕೂರ್ಮಾದಿಗಳಂತೆ ಭಗವಂತನ ಅಭಿನ್ನಾಂಶಗಳಾಗಿದ್ದರೆ, ಆ ಜೀವಾತ್ಮರು ಶಕ್ತಿ, ಜ್ಞಾನ, ಸುಖ ಮುಂತಾದ ಗುಣಗಳಿಂದ ವಿಷ್ಣುವಿಗೆ ಯಾವಾಗಲೂ ಪೂರ್ಣವಾಗಿ ಸದೃಶರಾಗಬೇಕಾಗಿದ್ದಿತು. ಅವರು ವಿಷ್ಣುವಿಗೆ ಸದೃಶರಲ್ಲರಾದ್ದರಿಂದ ಆತನ ಭಿನ್ನಾಂಶಗಳೇ ಆಗಿದ್ದಾರೆ.**

**ನಿರ್ವಿಶೇಷಂ ಹಿ ತೇ ಬ್ರಹ್ಮ ಕುತೋಽಂಶೇಷು ವಿಚಿತ್ರತಾ ॥ ೬೩೯ ॥**

**ಅರ್ಥ–** ತೇ = ನಿನ್ನ (ಸಿದ್ಧಾಂತದಲ್ಲಿ) ಬ್ರಹ್ಮ = ಪರಬ್ರಹ್ಮನು, ನಿರ್ವಿಶೇಷಂ ಹಿ = ಯಾವುದೇ ವಿಶೇಷಗುಣವೂ ಇಲ್ಲದವನಷ್ಟೇ! ಹಾಗಿದ್ದಲ್ಲಿ ಅಂಶೇಷು = ಆತನ ಅಂಶಗಳೇ ಆದ ಜೀವಾತ್ಮರಲ್ಲಿ, ವಿಚಿತ್ರತಾ = ವಿಭಿನ್ನಗುಣಧರ್ಮಗಳ ಇರುವಿಕೆಯು, ಕುತಃ? = ಹೇಗೆ?

**ಅನುವಾದ–** ನೀನು ಅಂಗೀಕರಿಸುವ ಬ್ರಹ್ಮನು ನಿರ್ವಿಶೇಷನಾದವನು. ಆದ್ದರಿಂದ ಅಂಶಗಳಲ್ಲಿ ಹೇಗೆ ವೈಚಿತ್ರ್ಯವು ಉಂಟಾಗುತ್ತದೆ?

**ವಿವರಣೆ–** ನೀವು ಜೀವಾತ್ಮರನ್ನು ಪರಮಾತ್ಮನ ಅಭಿನ್ನಾಂಶಗಳೆಂದು ಹೇಳುತ್ತೀರಿ. ಆ ಅಂಶಗಳಲ್ಲಿ (ಪರಸ್ಪರ) ವಿಭಿನ್ನಗುಣಧರ್ಮಗಳು ಕಂಡುಬರುತ್ತವೆ. ಅಭಿನ್ನ ಅಂಶಿಗಳಲ್ಲಿ ಆ ಗುಣಗಳಿರಬೇಕು. ನೂಲಿನಲ್ಲಿ ಇರುವ ಬಿಳಿಬಣ್ಣ , ಮಾರ್ದವ ಮುಂತಾದ ಗುಣಗಳೇ ಬಟ್ಟೆಯಲ್ಲೂ ಕಾಣಿಸಿಕೊಳ್ಳುತ್ತವೆ. ಆದರೆ ಅಂಶಿಯಾದ ಪರಬ್ರಹ್ಮನನ್ನು ನೀವು ನಿರ್ಗುಣ, ನಿರ್ವಿಶೇಷನೆಂದು ವರ್ಣಿಸುತ್ತೀರಿ. ಆತನಲ್ಲಿ ಇಲ್ಲದ ಗುಣಗಳು ಆತನ ಅಭಿನ್ನಾಂಶರೆನಿಸಿದ ಜೀವರಲ್ಲಿ ಬರುವುದು ಹೇಗೆ?

ಹಾಗಾಗಿ ಜೀವನನ್ನು ಪರಮಾತ್ಮನ ಅಭಿನ್ನಾಂಶ ಎಂದು ಹೇಳದೇ, ಆತನ ಭಿನ್ನಾಂಶವೆಂದೇ ಹೇಳಬೇಕು. ಪ್ರತಿಯೋರ್ವರಜೀವನ ವಿಭಿನ್ನಸ್ವಭಾವವು ಅನಾದಿಯಾಗಿರುವುದರಿಂದ ಮತ್ತು ಆತನು ಪರಮಾತ್ಮನ ಭಿನ್ನಾಂಶ, ಅಧೀನಾಂಶನಾಗಿರುವುದರಿಂದ ಆತನಲ್ಲಿ ಪರಮಾತ್ಮನಲ್ಲಿಲ್ಲದ ಗುಣಗಳು ಕಂಡುಬರುತ್ತವೆ.

**ಅಂಶವೈಚಿತ್ರ್ಯತಃ ಸಿದ್ಧಾ ಭಿದೈಕತ್ರಾಭಿದಾ ಪರೇ ।**
**ನಹೀಂದ್ರಸ್ಯ ಸ್ವರೂಪಾಂಶಾ ವಾಲಿಪಾರ್ಥಾದಯೋಽಸಮಾಃ ॥ ೬೪೦ ॥**

**ಅರ್ಥ–** ಅಂಶವೈಚಿತ್ರ್ಯತಃ = ಭಗವಂತನ ಅಂಶಗಳಾದ ಜೀವಾತ್ಮರಿಗೂ ಹಾಗೂ ಭಗವಂತನ ಅವತಾರಗಳಾದ ಮತ್ಸ್ಯಾದಿ ಅಂಶಗಳಿಗೂ ವ್ಯತ್ಯಾಸವಿರುವುದರಿಂದ, ಏಕತ್ರ = ಪರಮಾತ್ಮ ಮತ್ತು ಜೀವಾತ್ಮರಿಗೆ, ಭಿದಾ = ಭೇದವು, ಅಪರೇ = ಪರಮಾತ್ಮ ಮತ್ತು ಆತನ ಅವತಾರಗಳಿಗೆ, ಅಭಿದಾ = ಅಭೇದವು, ಸಿದ್ಧಾ = ಸಿದ್ಧವಾಗಿದೆ. ಇಂದ್ರಸ್ಯ = ದೇವರಾಜನಾದ ಇಂದ್ರನ, ಸ್ವರೂಪಾಂಶಾಃ = ಅಭಿನ್ನಾಂಶಗಳಾದ, ವಾಲಿಪಾರ್ಥಾದಯಃ = ವಾಲಿ, ಅರ್ಜುನ ಮೊದಲಾದವರು, ತಸ್ಯ = ಇಂದ್ರನಿಗೆ, ಅಸಮಾಃ = ಶಕ್ತಿ,ಜ್ಞಾನಾದಿಗುಣಗಳಿಂದ ಸದೃಶರಲ್ಲದವರು, ನಹಿ = ಅಲ್ಲವಷ್ಟೇ (ಸದೃಶರೇ ಆಗಿದ್ದಾರೆ)

**ಅನುವಾದ–** ಅಂಶವೈಚಿತ್ರ್ಯದಿಂದ ಒಂದು ಕಡೆ ಎಂದರೆ ಜೀವರ ಸ್ಥಳದಲ್ಲಿ ಭೇದವು ಇನ್ನೊಂದು ಕಡೆ ಎಂದರೆ ಮತ್ಸ್ಯಾದಿ ಸ್ಥಳದಲ್ಲಿ ಅಭೇದವು ಸಿದ್ಧವಾಗುತ್ತದೆ. ಇಂದ್ರನ ಸ್ವರೂಪಾಂಶರಾದ ವಾಲಿ, ಅರ್ಜುನರು ಇಂದ್ರನಿಗೆ ಅಸಮಾನರಲ್ಲವಷ್ಟೇ?

ಅತೋ ವಿಷ್ಣುಸಮಜ್ಞಾನಬಲಾದೀನಾಮಭಾವತಃ ।
ನ ಜೀವಸ್ತತ್ಸ್ವರೂಪಾಂಶೋ ಯಥಾ ಜಡಮಿದಂ ಜಗತ್ ॥ ೬೪೧ ॥

**ಅರ್ಥ–** ಅತಃ = ಭಗವದವತಾರಗಳಾದ ಮತ್ಸ್ಯಾದಿಗಳಿಗೆ ಮತ್ತು ಇಂದ್ರನ ಅವತಾರಗಳಾದ ವಾಲಿಮುಂತಾದವರಿಗೆ ತಮ್ಮ ಮೂಲರೂಪದಿಂದ ಅಸಮತೆ ಕಂಡಿಲ್ಲವಾದ್ದರಿಂದ, ಯಥಾ = ಹೇಗೆ, ಇದಂ = ಈ, ಜಡಂ = ಪ್ರಪಂಚವು, ವಿಷ್ಣುಸಮಬಲಜ್ಞಾನಬಲಾದೀನಾಂ = ಹರಿಗೆ ಸಮವಾದ ಜ್ಞಾನ, ಶಕ್ತಿ ಮುಂತಾದ ಗುಣಗಳ, ಅಭಾವತಃ = ಇಲ್ಲದಿರುವಿಕೆಯಿಂದಾಗಿ, ತತ್ = ಆ ಹರಿಯ ಸ್ವರೂಪಾಂಶವು = ಅಭಿನ್ನಾಂಶವು, ನ = ಅಲ್ಲವೋ, ತಥಾ ಜೀವಃ ಅಪಿ = ಜೀವನೂ ಕೂಡ, ತತ ಏವ = ಹರಿಗೆ ಸಮಾನವಾಗಿ ಬಲಜ್ಞಾನಶಕ್ತ್ಯಾದಿಗಳು ಇಲ್ಲದಿರುವುದರಿಂದಲೇ, ನ ತತ್‌ಸ್ವರೂಪಾಂಶಃ = ಆಭಗವಂತನ ಅಭಿನ್ನಾಂಶನಲ್ಲ.

**ಅನುವಾದ–** ಜೀವನು ವಿಷ್ಣುವಿನ ಸ್ವರೂಪಾಂಶವಲ್ಲ. ವಿಷ್ಣುವಿಗೆ ಸಮಾನವಾದ ಬಲಜ್ಞಾನಾದಿಗಳು ಇಲ್ಲದಿರುವುದರಿಂದ. ಜಡವಾದ ಈ ಜಗತ್ತಿನಂತೆ ಎಂಬ ಅನುಮಾನವು ಜೀವನಿಗೆ ಭಿನ್ನಾಂಶತ್ವವನ್ನು ಸಾಧಿಸುತ್ತದೆ.

**ಭಾವವಿಲಾಸಿನೀ–** ಏವಂಚ ಯುಕ್ತ್ಯಾಪಿ ಜೀವಾಯಾಂ ಭಿನ್ನಾಂಶತ್ವಂ ಸಿದ್ಧಮಿತ್ಯಾಹ – **ಅತ ಇತಿ** ॥ ಅತಃ ಭಗವತ್ ಸ್ವರೂಪಾಂಶಾನಾಂ ಮತ್ಸ್ಯಾದೀನಾಂ ಇಂದ್ರಾದ್ಯಂಶಾನಾಂ ವಾಲ್ಯಾದೀನಾಂಚ ಬಲಜ್ಞಾನಾದಿನಾ ವೈಸಾದೃಶ್ಯಾದರ್ಶನಾತ್ । ವ್ಯತಿರೇಕೇಣ ವ್ಯತಿರೇಕವ್ಯಾಪ್ತ್ಯಾ । ದ್ವಿವಿಧಾ ವ್ಯಾಪ್ತಿಃ ಪೂರ್ವಭೇವ ಸಮರ್ಥಿತಾ ॥ ೬೪೧ ॥

**ವಿವರಣೆ–** ಭಗವಂತನ ಅಂಶಗಳಾದ ಜೀವಾತ್ಮರಿಗೂ ಹಾಗೂ ಭಗವಂತನ ಅವತಾರಗಲಾದ ಮತ್ಸ್ಯಾದಿ ರೂಪಗಳಿಗೂ ಅಂಶಿಯಾದ ಪರಮಾತ್ಮನ ಪೂರ್ಣಸಾಮರ್ಥ್ಯ ಇಲ್ಲದಿರುವಿಕೆ ಹಾಗೂ ಇರುವಿಕೆಯೆಂಬ ವ್ಯತ್ಯಾಸವಿದೆ. ಈ ವ್ಯತ್ಯಾಸದಿಂದಾಗಿ ಪರಮಾತ್ಮ ಮತ್ತು ಜೀವಾತ್ಮರಿಗೆ ಭೇದವು ಸಿದ್ಧವಾಗುತ್ತದೆ. ಹಾಗೂ ಪರಮಾತ್ಮ ಮತ್ತು ಆತನ ಅವತಾರಗಳಿಗೆ ಅಭೇದವು ಸಿದ್ಧವಾಗುತ್ತದೆ.

ಜೀವಾತ್ಮರು ಪರಮಾತ್ಮನಿಗೆ ಶಕ್ತಿಜ್ಞಾನಗಳಿಂದ ಸಮರಲ್ಲವಾದ್ದರಿಂದ ಅವರಿಬ್ಬರೂ ಭಿನ್ನರಾಗಿದ್ದಾರೆ. ಆದರೆ ಇಂದ್ರನ ಅವತಾರಗಳಾದ ವಾಲಿ, ಅರ್ಜನ ಮುಂತಾದವರು ಇಂದ್ರನಿಗೆ ಅಸಮರೇನಲ್ಲ.

ಜೀವರು (ಪಕ್ಷ) ಪರಮಾತ್ಮನ ಸ್ವರೂಪಾಂಶರಲ್ಲ (ಸಾಧ್ಯ) ಆತನಿಗೆ ಬಲಜ್ಞಾನಾದಿಗಳಿಂದ ಅಸಮರಾದ್ದರಿಂದ(ಹೇತು) ಎಂಬ ಅನುಮಾನವನ್ನು ಮತ್ತು ಅದಕ್ಕೆ ಬೇಕಾದ ವ್ಯತಿರೇಕದೃಷ್ಟಾಂತವನ್ನು ಮೂಲಕಾರರು ಈ ಶ್ಲೋಕದಲ್ಲಿ ಸೂಚಿಸಿದ್ದಾರೆ.

ಯಾರು ಸ್ವರೂಪಾಂಶರೇ ಆಗಿದ್ದಾರೋ (ಸಾಧ್ಯಾಭಾವ) ಅವರು ಬಲಜ್ಞಾನಾದಿಗಳಿಂದ ಮೂಲರೂಪಕ್ಕೆ ಸಮರಾಗಿರುತ್ತಾರೆ (ಹೇತ್ವಭಾವ), ವಾಲಿ, ಅರ್ಜುನಾದಿಗಳು ಇಂದ್ರನ ಸ್ವರೂಪಾಂಶರಾಗಿದ್ದಾರೆ ಮತ್ತು ಬಲಜ್ಞಾನಾದಿಗಳಿಂದ ಇಂದ್ರನಿಗೆ ಸಮರೇ ಆಗಿದ್ದಾರೆ.

ಆದರೆ ಜೀವರು ಬಲಜ್ಞಾನಾದಿಗಳಿಂದ ಪರಮಾತ್ಮನಿಗೆ ಸಮರಲ್ಲರಾದ್ದರಿಂದ ಆತನ ಸ್ವರೂಪಾಂಶರೂ ಅಲ್ಲವೆಂದು ತಾತ್ಪರ್ಯ.

ಪರಮಾತ್ಮನಿಗೆ ಮತ್ತು ಆತನ ಅವತಾರಗಳಿಗೆ ಯಾವಾಗಲೂ ಎಲ್ಲೆಡೆಯೂ ಬಲಜ್ಞಾನಾದಿಗಳಿಂದ ಸಮಾನತೆಯಿದೆ. ಆದರೆ ಇಂದ್ರಾದಿದೇವತೆಗಳಿಗೂ ಅವರ ಅವತಾರರೂಪಗಳಿಗೂ ಯಾವಾಗಲೂ ಎಲ್ಲೆಡೆಯೂ ಕಂಡುಬರುವಂತಹ ಸಮಾನತೆಯಿಲ್ಲ. ಆದರೂ ಇಂದ್ರಾದಿಗಳಿಗೂ ಅವರ ಅವತಾರಗಳಿಗೂ ಅಭೇದಕ್ಕೆ ಕಾರಣವಾಗುವಷ್ಟರ ಮಟ್ಟಿಗೆ ಸಮಾನತೆಯಂತೂ ಇದ್ದೇ ಇದೆ ಎಂದು ಅರ್ಥ.

**ಅತ್ಯಂತಾಭೇದವಾದಾಖ್ಯಃ ಶಾಸ್ತ್ರಸ್ಯಾಂಶೋ ಗತಸ್ತವ ॥ ೬೪೨ ॥**

**ಅರ್ಥ–** ತವ = ನಿನ್ನ , ಅತ್ಯಂತಾಭೇದವಾದಾಖ್ಯಃ = ಜೀವಬ್ರಹ್ಮರಿಗೆ ಅತ್ಯಂತಾಭೇದವಿದೆಯೆಂಬ, ಶಾಸ್ತ್ರಸ್ಯ = ಅದ್ವೈತಶಾಸ್ತ್ರದ, ಅಂಶಃ = ಭಾಗವು, ಗತಃ = ನಷ್ಟವಾಯಿತು.

**ಅನುವಾದ–** ಆದ್ದರಿಂದ ನಿನ್ನ ಶಾಸ್ತ್ರದಿಂದ ಜೀವಬ್ರಹ್ಮರಿಗೆ ಅತ್ಯಂತಾಭೇದವೆಂಬ ಒಂದು ವಾದದ ಅಂಶವೇ ಹೊರಟು ಹೋಯಿತು.

**ಭಾವವಿಲಾಸಿನೀ–** ಇದಾನೀಮಂಶಾಂಶಿಭಾವಮಂಗೀಕುರ್ವತಃ ಪರಸ್ಯ ಪ್ರಕ್ರಿಯಯೈವ ದೂಷಣಮಾಹ – **ಅತ್ಯಂತಾಭೇದೇತಿ** ॥ ತವ ಮತೇ ಭೇದಾಭೇದಪ್ರಾಪಕಾಂಶಾಂಶಿಭಾವಾಂಗೀಕಾರಃ ಜೀವಬ್ರಹ್ಮಣೋರತ್ಯಂತ ಭೇದಪ್ರತಿಪಾದಕಶಾಸ್ತ್ರಭಾಗವಿರೋಧೀತ್ಯರ್ಥಃ । ಏಕತ್ರಾಂಶರಕ್ಷಣೇಽಪರತ್ರಾಂಶ ವಿನಾಶ ಇತಿ ವಿನೋದೋಕ್ತಿಶ್ಚ । ಅತ್ಯಂತಾಭೇದೇ ಹ್ಯುಭಯೋರಂಶಿತ್ವೈವ ಸ್ಯಾತ್ । ಏಕಸ್ಯಾಂಶತ್ವಮ ಪರಸ್ಯಾಂಶಿತ್ವಮಿತ್ಯೇತದ್ವೈಲಕ್ಷಣ್ಯಂತವ ಮತೇ ಭೇದಸಹಿತಾಭೇದಂ ವಿನಾ ನೈವ ಘಟತೇ । ಮಮಾಪಿ ಮತೇ ಭೇದೇನ ವಾ ಭೇದಪ್ರತಿನಿಧಿನಾ ವಿಶೇಷೇಣ ವಾ ನಿರ್ವಾಹ್ಯಃ । ಕೇವಲಾಭೇದೇಂऽಶಾಂಶಿತ್ವಾಖ್ಯವೈಲಕ್ಷಣ್ಯಸ್ಯ ನಿರ್ನಿಮಿತ್ತತ್ವಾಪಾತಾದಿತಿ ಭಾವಃ ॥ ೬೪೨ ॥

**ವಿವರಣೆ** – ಹಿಂದಿನ ಶ್ಲೋಕದಲ್ಲಿ ಇಂದ್ರಾವತಾರಗಳ ದೃಷ್ಟಾಂತದಿಂದ ಭಗವದವತಾರಗಳಿಗೆ ಭಗವಂತನಿಂದ ಅಭೇದವನ್ನು ಸಾಧಿಸಿದಂತಾಯಿತು. ಆ ಮೂಲಕ ಜೀವರಿಗೆ ಪರಮಾತ್ಮನಿಂದ ಭೇದವನ್ನು ಸಾಧಿಸಲು ಮತ್ತೊಂದು ಅನುಮಾನವನ್ನು ಮತ್ತು ಆ ಅನುಮಾನದ ಅನ್ವಯವ್ಯಾಪ್ತಿ ಮತ್ತು ವ್ಯತಿರೇಕವ್ಯಾಪ್ತಿಗಳನ್ನು ಈ ಶ್ಲೋಕದಲ್ಲಿ ಮೂಲಕಾರರು ಸೂಚಿಸುತ್ತಿದ್ದಾರೆ.

ಅನುಮಾನ - ಜೀವರು (ಪಕ್ಷ) ಭಗವಂತನ ಸ್ವರೂಪಾಂಶರಲ್ಲ (ಸಾಧ್ಯ) ವಿಷ್ಣುವಿಗೆ ಸಮಾನವಾದಿ ಶಕ್ತಿ ಜ್ಞಾನಾದಿಗಳು ಇಲ್ಲದಿರುವುದರಿಂದ (ಹೇತು). ಈ ಜಡವಾದ ಪ್ರಪಂಚದಂತೆ (ಅನ್ವಯದೃಷ್ಟಾಂತ) ಮತ್ಸ್ಯಾದಿಅವತಾರಗಳಂತೆ (ವ್ಯತಿರೇಕದೃಷ್ಟಾಂತ) ಅನ್ವಯದೃಷ್ಟಾಂತವಾದ ಜಡಪ್ರಪಂಚವೂ ವಿಷ್ಣುವಿಗೆ ಸಮಾನಗಳಾದ ಜ್ಞಾನಶಕ್ತ್ಯಾದಿಗಳನ್ನು ಪಡೆದಿಲ್ಲ (ಹೇತು) ಆತನ ಸ್ವರೂಪಾಂಶವಾಗಿಲ್ಲ (ಸಾಧ್ಯ) ವ್ಯತಿರೇಕದೃಷ್ಟಾಂತಗಳಾದ ಭಗವದವತಾರಗಳು ಭಗವಂತನ ಸ್ವರೂಪಾಂಶರು ಅಲ್ಲವೆಂದಲ್ಲ (ಸಾಧ್ಯಾಭಾವ). ಶಕ್ತಿಜ್ಞಾನಗಳಿಂದ ಆತನಿಗೆ ಅಸಮರು ಅಲ್ಲ (ಹೇತ್ವಭಾವ)

**ಯದಿ ಮೋಕ್ಷೇ ಭಿದಾ ನಾಸ್ತಿ ಗತಾ ತೇಽಂಶಾಂಶಿತಾ ತಯೋಃ ।**
**ಯದಿ ಮೋಕ್ಷೇ ಭಿದಾಪ್ಯಸ್ತಿ ಭೇದೋಽಭೂತ್ ಪರಮಾರ್ಥಸನ್॥ ೬೪೩॥**

**ಅರ್ಥ–** ಯದಿ = ಒಂದು ಪಕ್ಷದಲ್ಲಿ, ಮೋಕ್ಷೇ = ಮೋಕ್ಷದಲ್ಲಿ, ಭಿದಾ = ಜೀವೇಶ್ವರರಿಗೆ ಭೇದವು, ನ ಅಸ್ತಿ = ಇಲ್ಲವಾದರೆ, ತರ್ಹಿ = ಆ ಪಕ್ಷದಲ್ಲಿ, ತೇ = ನಿನ್ನ (ನೀನು ಒಪ್ಪಿರುವ) ತಯೋಃ = ಆ ಜೀವಬ್ರಹ್ಮರ, ಅಂಶಾಂಶಿತಾ = ಅಂಶಾಂಶಿತ್ವಸಂಬಂಧವು, ಗತಾ = ನಷ್ಟವಾಯಿತು. ಯದಿ = ಮತ್ತೊಂದು ಪಕ್ಷದಲ್ಲಿ, ಮೋಕ್ಷೇ ಅಪಿ = ಮೋಕ್ಷದಲ್ಲಿಯೂ, ಭಿದಾ = ಜೀವೇಶ್ವರಭೇದವು, ಅಸ್ತಿ = ಇರುವುದಾದರೆ, ತರ್ಹಿ = ಆ ಪಕ್ಷದಲ್ಲಿ, ತಯೋಃ = ಅವರೀರ್ವರ, ಭೇದಃ = ಭೇದವು, ಪರಮಾರ್ಥಸನ್ = ಪಾರಮಾರ್ಥಿಕಸತ್ಯವು, ಅಭೂತ್ = ಆಯಿತು.

**ಅನುವಾದ–** ಮೋಕ್ಷದಲ್ಲಿ ಭೇದವಿಲ್ಲದಿದ್ದರೆ ಜೀವಬ್ರಹ್ಮರಿಗೆ ಅಂಶಾಂಶಿಭಾವವು ಹೊರಟು ಹೋಯಿತು. ಮೋಕ್ಷದಲ್ಲಿ ಭೇದವೂ ಇರುವುದಾದರೆ ಆಗ ಭೇದವು ಪಾರಮಾರ್ಥಿಕ ಸತ್ಯವಾಯಿತು.

**ಭಾವವಿಲಾಸಿನೀ–** ದೂಷಾಂತರಂ ಚಾಹ – ಯದಿ ಮೋಕ್ಷ ಇತಿ ॥ ತಯೋರ್ಜೀವ-ಬ್ರಹ್ಮಣೋಃ । ಯದಿ ಚಾಂಶಾಂಶಿ ಭಾವರಕ್ಷಣಾಯ ಭಿದಾಪ್ಯಸ್ತಿ । ಮಹಾಮೋಕ್ಷಕಾಲೀನತಯಾ ಸ ಭೇದಃ ಬ್ರಹ್ಮವತ್ಪಾರಮಾರ್ಥಿಕಸ್ಸ್ಯಾತ್ । ತಥಾ ಚ ಭೇದೋ ಮಿಥ್ಯಾ ಭೇದತ್ವಾದಿತ್ಯಾದಿ ಶಾಸ್ತ್ರಭಾಗವಿರೋಧ ಇತಿ ಭಾವಃ ॥ ೬೪೩ ॥

**ವಿವರಣೆ–** ನೀವು ಅದ್ವೈತಿಗಳು ಜೀವಬ್ರಹ್ಮರನ್ನು ಅಂಶಾಂಶಿಗಳೆಂದು ಅಂಗೀಕರಿಸಿದ್ದೀರಿ. ಅವರೀರ್ವರಲ್ಲಿ ಅಂಶಾಂಶಿತ್ವವು ಇರಬೇಕಾದರೆ ಬೇದಾಭೇದಗಳೂ ಇರಲೇಬೇಕು. ಹೀಗೆ ಭೇದಾಭೇದಗಳನ್ನು ಒಪ್ಪಿದರೆ ಜೀವನು ಪರಮಾತ್ಮನಿಂದ ಅತ್ಯಂತಾಭಿನ್ನನೆಂದು ನಿಮ್ಮ ಶಾಸ್ತ್ರದಲ್ಲಿ ಮತ್ತೊಂದೆಡೆ ನೀವು ಸಿದ್ಧಾಂತಿಸಿರುವುದಕ್ಕೆ ವಿರೋಧ ಬರುತ್ತದೆ.

ಹೀಗೆ ಇದು ಅದ್ವೈತಿಗಳ ಪ್ರಕ್ರಿಯೆಗೆ ಅನುಗುಣವಾದ ದೋಷವೇ ಆಗಿದೆ. ಒಂದು ಕಡೆ ಜೀವನಿಗೆ ಪರಮಾತ್ಮನ ಅಂಶತ್ವವನ್ನು ರಕ್ಷಿಸಲು ಪ್ರಯತ್ನಿಸಿದರೆ, ಮತ್ತೊಂದು ಕಡೆ ಅಂಶವು (ಜೀವನು) ಪರಮಾತ್ಮನಿಂದ ಅತ್ಯಂತಾಭಿನ್ನನೆಂಬ ನಿಮ್ಮ ಶಾಸ್ತ್ರದ ಅಂಶವು ನಷ್ಟವಾಯಿತು ಎಂಬ ಹಾಸ್ಯವು ಕೂಡ ಇಲ್ಲಿದೆ. ಅತ್ಯಂತಾಭೇದವಿದ್ದರೆ ಜೀವಬ್ರಹ್ಮರಿಬ್ಬರೂ ಅಂಶಿಗಳೇ ಆಗಿರಬೇಕು. ಜೀವನು ಅಂಶ, ಪರಮಾತ್ಮನು ಅಂಶಿಯಾಗಬೇಕಾದರೆ, ನಿಮ್ಮ ಮತದಲ್ಲಿ ಅವರ ನಡುವೆ ಭೇದಾಭೇದವು ಇರಬೇಕಾಗುತ್ತದೆ. ನಮ್ಮ ಮತದಲ್ಲಿ ಅಂಶಾಂಶಿತ್ವವಿರಬೇಕಾದರೆ ಭೇದವೋ ಅಥವಾ ಭೇದಪ್ರತಿನಿಧಿಯಾದ ವಿಶೇಷವೋ ಇರಬೇಕಾಗುತ್ತದೆ. ಕೇವಲ ಅಭೇದವಿದ್ದರೆ ಈ ಅಂಶಾಂಶಿತ್ವವೆಂಬ ವೈಲಕ್ಷಣ್ಯಕ್ಕೆ ಯೋಗ್ಯವಾದ ಕಾರಣವಿಲ್ಲದಂತಾದೀತು.

**ಭೇದಾಭೇದಾವಿನಾಭೂತಾ ಸರ್ವತ್ರಾಂಶಾಂಶಿತಾ ತವ ।**
**ನಿರ್ವಿಶೇಷಬ್ರಹ್ಮವಾದೇ ಯತ್ಸಾ ತತ್ಸಹಚಾರಿಣೀ ॥ ೬೪೪ ॥**

**ಅರ್ಥ–** ಯತ್ = ಯಾವ ಕಾರಣದಿಂದ, ಅಂಶಾಂಶಿತಾ = ಅಂಶಾಂಶಿತ್ವ ಸಂಬಂಧವು, ಸರ್ವತ್ರ = ಎಲ್ಲೆಡೆಯೂ, ಭೇದಾಭೇದಾವಿನಾಭೂತಾ = ಭೇದಾಭೇದಗಳನ್ನು ಬಿಟ್ಟು ಇರಲಾರದ್ದು ಅಸ್ತಿ = ಆಗಿದೆಯೋ, ತತ್ = ಆ ಕಾರಣದಿಂದ, ಸಾ = ಆ ಅಂಶಾಂಶಿತ್ವಸಂಬಂಧವು, ತವ = ನಿನ್ನ ನಿರ್ವಿಶೇಷಬ್ರಹ್ಮವಾದೇ ಅಪಿ = ಪರಬ್ರಹ್ಮನು ನಿರ್ಗುಣನು, ನಿರ್ವಿಶೇಷನು ಎಂಬ ಅದ್ವೈತಸಿದ್ಧಾಂತದಲ್ಲಿ ಕೂಡ, ತತ್ಸಹಚಾರಿಣೀ = ಆ ಭೇದಾಭೇದದ ಜೊತೆಗಾರಿಕೆಯುಳ್ಳದ್ದು ಆಗಿದೆ.

– ಅಥವಾ –

ಯತ್ = ಯಾವ ಕಾರಣದಿಂದ, ನಿರ್ವಿಶೇಷಬ್ರಹ್ಮವಾದೇ = ಪರಬ್ರಹ್ಮನು, ನಿರ್ವಿಶೇಷನು ಎಂಬ ಅದ್ವೈತಸಿದ್ಧಾಂತದಲ್ಲಿ, ಅಂಶಾಂಶಿತಾ = ಅಂಶಾಂಶಿತ್ವ ಸಂಬಂಧವು, ತತ್ಸಹಚಾರಿಣೀ ಅಸ್ತಿ = ಆ ಭೇದದ ಜೊತೆಗಾರಿಕೆಯುಳ್ಳದ್ದು ಆಗಿದೆಯೋ, ತತ್ = ಆ ಕಾರಣದಿಂದ, ತವ = ನಿನ್ನ, ಸಾ = ಆ ಅಂಶಾಂಶಿತ್ವಸಂಬಂಧವು, ಸರ್ವತ್ರ = ಸಂಸಾರ ಮತ್ತು ಮೋಕ್ಷಗಳೆರಡರಲ್ಲಿಯೂ, ಭೇದಾಭೇದಾವಿನಾಭೂತಾ = ಭೇದಾಭೇದಗಳನ್ನು ಬಿಟ್ಟು ಇರಲಾರದ್ದು ಆಗಿದೆ.

**ಅನುವಾದ–** ನಿನ್ನ ರೀತಿಯಲ್ಲಿಯೂ ಸಹ ಸರ್ವಸ್ಥಳಗಳಲ್ಲಿ ಅಂಶಾಂಶಿಭಾವವು ಭೇದಾಭೇದದ ಜೊತೆಯಲ್ಲಿಯೇ ಇರುತ್ತದೆ. ಏಕೆಂದರೆ ನಿರ್ವಿಶೇಷ ಬ್ರಹ್ಮವಾದ ರೂಪವಾದ ಅದ್ವೈತ ವಾದದಲ್ಲಿಯೂ ಸಹ ಅಂಶಾಂಶಿಭಾವವು ಭೇದಾಭೇದದ ಜೊತೆಯಲ್ಲಿಯೇ ಇರುತ್ತದೆ.

**ಭಾವವಿಲಾಸಿನೀ–** ನನು ಮುಕ್ತಾವಂಶಾಶಿತಾ ಭೇದಾಭೇದೌ ವಿನೈವ ಘಟತ ಇತ್ಯತ ಆಹ – ಭೇದಾಭೇದ ಇತಿ ॥ ಯದ್ಯಸ್ಮಾತ್ । ತತ್ ಸಹಚಾರಿಣೀ ಭೇದಸಹಚಾರಿಣೀ ।

ನಿರ್ವಿಶೇಷಬ್ರಹ್ಮವಾದ ಇತಿ ವದತಾ ಸವಿಶೇಷಬ್ರಹ್ಮವಾದಿನಾಮಸ್ಮಾಕಂ ಮತ್ಸ್ಯಕೂರ್ಮಾದ್ಯ-ವತಾರೇಷು ಭೇದಾಭಾವೇಽಪಿ ಭೇದಪ್ರತಿನಿಧಿನಾ ವಿಶೇಷಣಾಂಶಾಂಶಿಭಾವೇ ಘಟತ ಇತಿ ಸೂಚಿತಮ್ ॥ ೬೪೪ ॥

**ವಿವರಣೆ–** ಅಂಶಾಂಶಿತ್ವಕ್ಕೆ ಭೇದವು ಅವಶ್ಯಕವಾದ್ದರಿಂದ, ಮೋಕ್ಷದಲ್ಲಿ ಜೀವೇಶ್ವರರಿಗೆ ಭೇದವು ಇಲ್ಲವೆಂದಾದರೆ ಅವರೀರ್ವರಿಗೆ ಅಂಶಾಂಶಿತ್ವವೂ ಇರಲು ಸಾಧ್ಯವಿಲ್ಲ. ಅಂಶಾಂಶಿತ್ವನ್ನು ಮೋಕ್ಷದಲ್ಲಿಯೂ ಉಳಿಸಿಕೊಳ್ಳಲಿಕ್ಕಾಗಿ ಅವರೀರ್ವರಿಗೆ ಮೋಕ್ಷದಲ್ಲಿಯೂ ಭೇದವಿದೆಯೆಂದು ಒಪ್ಪಿದರೆ ಮೋಕ್ಷಕಾಲದಲ್ಲಿ ಇರುವುದೆಲ್ಲವೂ ಸತ್ಯವಾದ್ದರಿಂದ ಬ್ರಹ್ಮನಂತೆ ಭೇದವೂ ಪಾರಮಾರ್ಥಿಕಸತ್ಯವಾಗಬೇಕಾದೀತು. ಹಾಗಾದಲ್ಲಿ ಭೇದವು (ಪಕ್ಷ) ಮಿಥ್ಯಾ ಆಗಿದೆ (ಸಾಧ್ಯ) ಭೇದವಾಗಿರುವುದರಿಂದ (ಹೇತು) ಇತ್ಯಾದಿ ಅನುಮಾನ ಮುಂತಾದ ಪ್ರಮಾಣಗಳಿಂದ ಭೇದವನ್ನು ಮಿಥ್ಯಾ ಎಂದು ಸಾಧಿಸಲು ಪ್ರಯತ್ನಿಸುವ ನಿಮ್ಮ ಶಾಸ್ತ್ರದ ಕೆಲವು ಭಾಗಗಳಿಗೆ ವಿರೋಧ ಬರುತ್ತದೆ.

**ವಿಯುಕ್ತತಂತುವದ್ ದೇಹೈರ್ವಿಯುಕ್ತಾನಾಂ ಪುನರ್ಭವೇ ।**
**ಅಂಶಾಂಶಿತ್ವೇ ಯೋಗ್ಯತಾ ತೇ ತದ್ವ್ಯಕ್ತಿಸ್ತ್ವಪುನರ್ಭವೇ ॥ ೬೪೫ ॥**

**ಅರ್ಥ–** ಪುನರ್ಭವೇ = ಸಂಸಾರದಲ್ಲಿ, ದೇಹೈಃ = ದೇಹಗಳೆಂಬ ಉಪಾಧಿಗಳ ನಿಮಿತ್ತದಿಂದಾಗಿ, ವಿಯುಕ್ತಾನಾಂ = ಬ್ರಹ್ಮನಿಂದ ಬೇರ್ಪಟ್ಟ ಜೀವಾನಾಂ = ಜೀವಾತ್ಮರಿಗೆ, ವಿಯುಕ್ತತಂತುವತ್ = ಬಟ್ಟೆ ಸಿದ್ಧವಾಗುವತನಕ ಅತ್ತಿತ್ತ ಹರಡಿದ ನೂಲುಗಳಂತೆ, ಅಂಶಾಂಶಿತ್ವೇ = ಅಂಶಾಂಶಿಸಂಬಂಧಪಡೆಯಲು, (ಅಂಶಿಯಾದ ಪರಬ್ರಹ್ಮನ ಅಂಶವಾಗಲು) ಯೋಗ್ಯತಾ ಏವ = ಯೋಗ್ಯತೆಯು ಮಾತ್ರವೇ ಇರುತ್ತದೆ. ತೇ = ನಿನ್ನ ಮತೇ = ಸಿದ್ಧಾಂತದಲ್ಲಿ, ತದ್‌ವ್ಯಕ್ತಿಃ ತು = ಆ ಅಂಶಾಂಶಿಭಾವದ ಅಭಿವ್ಯಕ್ತಿಯಾದರೂ, ಅಪುನರ್ಭವೇ ಏವ = ಮೋಕ್ಷದಲ್ಲಿಯೇ ಆಗುತ್ತದೆ.

**ಅನುವಾದ–** ಬೇರೆ ಬೇರೆ ತಂತುಗಳಂತೆ ವಿಯುಕ್ತರಾದ ಜೀವರಿಗೆ ಸಂಸಾರಾವಸ್ಥೆಯಲ್ಲಿ ಬ್ರಹ್ಮನ ಅಂಶತ್ವ ಯೋಗ್ಯತೆಯು ಮಾತ್ರ ಇರುತ್ತದೆ. ಮೋಕ್ಷದಲ್ಲಿ ಮಾತ್ರ ಬ್ರಹ್ಮನ ಅಂಶತ್ವವು ಸ್ಪಷ್ಟವಾಗಿ ಅಭಿವ್ಯಕ್ತವಾಗುತ್ತದೆ.

**ಭಾವವಿಲಾಸಿನೀ–** ನನು ಮುಕ್ತಾವಂಶಾಂಶಿತ್ವೈವ ನಾಸ್ತೀತ್ಯತ ಆಹ – **ವಿಯುಕ್ತತಂತುವದಿತಿ** ॥ ಪಟೋತ್ಪತ್ತೇಃಪ್ರಾಕ್ತತ್ರ ತತ್ರ ವಿಭಕ್ತತಂತುವದಿತ್ಯರ್ಥಃ । ಪುನರ್ಭವೇ ಸಂಸಾರೇ । ತೇ ಮತೇ ತದ್ವ್ಯಕ್ತಿಃ ಅಂಶಾಂಶಿಭಾವವ್ಯಕ್ತಿಃ । ಸಂಸಾರೇ ದೇಹಾಖ್ಯೋಪಾಧಿಭಿರ್ಬ್ರಹ್ಮಣಾ ವಿಭಕ್ತಜೀವಾನಾಂ ತತ್ರ ತತ್ರಸ್ಥಿತತಂತುವದಂಶತ್ವಯೋಗ್ಯತೈವ । ಮುಕ್ತೌ ತು ದೇಹೋಪಾಧ್ಯಪಗಮನೇ ಬ್ರಹ್ಮಚಿತಿ ಸಮ್ಯಕ್ ಸಮ್ಮಿಶ್ರಣಾತ್ ಆತಾನವಿತಾನಾತ್ಮಕತಯಾ ಪಟಾಕಾರೇಣ ವಿಕೃತತಂತುವನ್ಮುಕ್ತಾವೇವಾಂಶಾಶಿತ್ವವ್ಯಕ್ತಿರ್ವಕ್ತವ್ಯೇತಿ ಭಾವಃ ॥ ೬೪೫ ॥

**ವಿವರಣೆ**– 1. ಅಂಶಾಂಶಿತ್ವವಿರುವ ಎಲ್ಲೆಡೆಯೂ ಭೇದಾಭೇದಗಳಿರುವುದು ಕಂಡಿದೆ. ಹಾಗಾಗಿ ಬ್ರಹ್ಮನು ನಿರ್ಗುಣ, ನಿರ್ವಿಶೇಷ ಎಂಬ ಅದ್ವೈತಸಿದ್ಧಾಂತದಲ್ಲಿಯೂ ಜೀವಬ್ರಹ್ಮರಲ್ಲಿ ಅಂಶಾಂಶಿತ್ವದ ಸಂಗಡ (ಅಭೇದದೊಂದಿಗೆ) ಭೇದವೂ ಇರಲೇ ಬೇಕು.

2. ಮುಕ್ತಿಯಲ್ಲಿಯೂ ಅಂಶಾಂಶಿತ್ವವಿರಬೇಕಾದರೆ ಭೇದವೂ ಇರಲೇಬೇಕು ಮತ್ತು ಆ ಭೇದವು ಪಾರಮಾರ್ಥಿಕಸತ್ಯವೂ ಆಗಿರಬೇಕು ಎಂದು ಹಿಂದಿನ ಶ್ಲೋಕದಲ್ಲಿ ಹೇಳಲಾಯಿತು. ಅದರ ಬಗ್ಗೆ ಅದ್ವೈತಿಗಳ ಆಕ್ಷೇಪ ಹೀಗಿದೆ -

ಮುಕ್ತಿಯಲ್ಲಿ ಅಂಶಾಂಶಿತ್ವವು ಬೇದಾಭೇದಗಳಿಲ್ಲದೆಯೂ ಇರಬಾರದೇಕೆ?

ಅದಕ್ಕೆ ಉತ್ತರ ಹೀಗಿದೆ - ನಿರ್ವಿಶೇಷ ಬ್ರಹ್ಮನನ್ನು ನೀವು ಅಂಶಿಯೆಂದೂ, ಜೀವನನ್ನು ಅಂಶನೆಂದೂ ಒಪ್ಪುತ್ತೀರಿ. ಆ ಅಂಶಾಂಶಿಭಾವಕ್ಕೆ ನಿರ್ವಾಹಕವಾಗಿ ವಿಶೇಷನಾದ ಬ್ರಹ್ಮನಲ್ಲಿ ಬೇರಾವುದೂ ಇಲ್ಲವಾದ್ದರಿಂದ ಆ ಅಂಶಾಂಶಿಭಾವವು ಭೇದ (ಬೇದಾಭೇದ)ದ ಜೊತೆಗೆ ಇರುತ್ತದೆ. ಹಾಗಾಗಿ ಸಂಸಾರದಲ್ಲಿ ಮತ್ತು ಮೋಕ್ಷದಲ್ಲಿಯೂ ಕೂಡ ಆ ಅಂಶಾಂಶಿಭಾವವು ಭೇದಾಭೇದವಿಲ್ಲದೆ ಇರಲಾರದು.

ಅದ್ವೈತಿಗಳ ಶಂಕೆ - ಮುಕ್ತಿಯಲ್ಲಿ ಜೀವಾತ್ಮ ಪರಮಾತ್ಮರಿಗೆ ಅಂಶಾಂಶಿಭಾವವೇ ಇರುವುದಿಲ್ಲ. ಹಾಗೆಂದ ಮೇಲೆ ಅದಕ್ಕೆ ಬೇಕಾದ ಭೇದವು ಮುಕ್ತಿಯಲ್ಲಿ ಇರಬೇಕಾಗಿಲ್ಲ.

ಉತ್ತರ - ಸಂಸಾರದಲ್ಲಿ ಜೀವರಿಗೆ ಪರಬ್ರಹ್ಮನ ಅಂಶವಾಗುವ ಯೋಗ್ಯತೆಯು ಮಾತ್ರವೇ ಇರುತ್ತದೆ. ನೀವು ಹೇಳುವಂತಹ ಅಂಶಾಂಶಿತ್ವವು ಪ್ರಕಟವಾಗುವುದು ಮೋಕ್ಷದಲ್ಲಿಯೇ. ಏಕೆಂದರೆ ಸಂಸಾರದಲ್ಲಿ ದೇಹಗಳೆಂಬ ಉಪಾಧಿಗಳು ಜೀವರನ್ನು ಪರಬ್ರಹ್ಮನಿಂದ ಬೇರ್ಪಡಿಸುತ್ತವೆ. ಬಟ್ಟೆ ಹುಟ್ಟುವುದಕ್ಕಿಂತ ಮುಂಚೆ ಅತ್ತಿತ್ತ ಹರಡಿಹೋಗಿರುವ ನೂಲುಗಳಂತೆ ಜೀವರೂ ಬ್ರಹ್ಮನಿಂದ ಪ್ರತ್ಯೇಕವಾಗಿ ಚದುರಿಹೋಗಿರುತ್ತಾರೆ. ಆಗ ಅವರಿಗೆ ಅಂಶಿಯಾದ ಪರಬ್ರಹ್ಮನ ಅಂಶವಾಗುವ ಯೋಗ್ಯತೆಯು ಮಾತ್ರವೇ ಇರುತ್ತದೆ, ಹೊರತು ಅವರು ಆತನ ಅಂಶಗಳಾಗಿರುವುದಿಲ್ಲ.

ಮೋಕ್ಷದಲ್ಲಿ ದೇಹಗಳೆಂಬ ಉಪಾಧಿಗಳು ಇರುವುದಿಲ್ಲವಾದ್ದರಿಂದ ಆ ಜೀವರು ಬ್ರಹ್ಮನ ಸ್ವರೂಪದಲ್ಲಿ ಪೂರ್ಣವಾಗಿ ಬೆರೆತುಹೋಗುತ್ತಾರೆ. ನೂಲುಗಳನ್ನು ಉದ್ದ ಅಗಲ ರೂಪದಿಂದ ಪೂರ್ಣವಾಗಿ ನೇಯ್ದಾಗಲೇ ಬಟ್ಟೆಯು ಹುಟ್ಟಿ ನೂಲಿಗೂ ಬಟ್ಟೆಗೂ ಅಂಶಾಂಶಿಸಂಬಂಧ ವ್ಯಕ್ತವಾಗುತ್ತದೆ. ಅಂತೆಯೇ ಜೀವರಿಗೂ ಪರಬ್ರಹ್ಮನ ಅಂಶವಾಗುವಿಕೆಯು ಮೋಕ್ಷದಲ್ಲಿಯೇ ಅಭಿವ್ಯಕ್ತವಾಗುವುದರಿಂದ ಆ ಅಂಶಾಂಶಿಸಂಬಂಧಕ್ಕಾಗಿ ಭೇದವೂ ಬೇಕು.

ಅತಸ್ತ್ವದ್ಗೇಹಕಲಹಾದಭೂತದತ್ಯಂತಸಂಕಟಂ ।
ಜಾಯಾ ವಾ ಕುಪಿತಾ ಗಚ್ಛೇತ್ ತ್ವಂ ವಾ ಪ್ರವ್ರಜಿತೋ ಭವೇಃ ॥ ೬೪೬ ॥

**ಅರ್ಥ–** ಅತಃ = ಮೋಕ್ಷದಲ್ಲಿಯೂ ಅಂಶಾಂಶಿಭಾವಕ್ಕಾಗಿ ಭೇದವು ಇರಬೇಕಾಗುತ್ತದೆ ಯಾದ್ದರಿಂದ, ತ್ವದ್ಗೇಹಕಲಹಾತ್ = ನಿನ್ನ ಮನೆಯಲ್ಲಿನ, ಮತ್ತು ಮನೆಯಂತಿರುವ ನಿನ್ನ ಸಿದ್ಧಾಂತದ ಅಂಶಾಂಶಿಭಾವ ಮತ್ತು ಅತ್ಯಂತಭೇದಗಳೆಂಬ ಪ್ರಮೇಯಗಳ ನಡುವೆ ಹೊಂದಾಣಿಕೆಯಿಲ್ಲವಾದ್ದರಿಂದ, ಅತ್ಯಂತಸಂಕಟಂ = ದೊಡ್ಡಕಷ್ಟವು, ಅಭೂತ್ = ಬಂದೊದಗಿತು. ಕುಪಿತಾ = ಕೋಪಗೊಂಡ, ಜಾಯಾ ವಾ = ಇಬ್ಬರು ಹೆಂಡತಿಯರಲ್ಲಿ ಒಬ್ಬಳಾದರೂ , ಗಚ್ಛೇತ್ = ಹೊರಟುಹೋದಾಳು, ವಾ = ಅಥವಾ, ತ್ವಂ = ಯಜಮಾನನಾದ ನೀನು, ಪ್ರವ್ರಜಿತಃ = ಸಂಸಾರವನ್ನು ತ್ಯಾಗಮಾಡಿದವನಾಗಿ, ಭವೇಃ = ಆಗುವಿ.

**ಅನುವಾದ– ಆದ್ದರಿಂದ ನಿನ್ನ ಮನೆಯ ಜಗಳದಿಂದ ನಿನಗೆ ದೊಡ್ಡ ಕಷ್ಟವು ಪ್ರಾಪ್ತವಾಯಿತು. ಹೆಂಡತಿಯಾದರೂ ಕೋಪದಿಂದ ಹೊರಟು ಹೋಗುತ್ತಾಳೆ. ಅಥವಾ ನೀನಾದರೂ ಸಂನ್ಯಾಸವನ್ನು ಸ್ವೀಕಾರ ಮಾಡಿ ಹೊರಟು ಹೋಗುತ್ತೀಯೆ.**

**ಭಾವವಿಲಾಸಿನೀ– ಅತಃ ಅಂಶಾಂಶಿಭಾವೇನ ಮುಕ್ತಾವಪಿ ಭೇದಪ್ರಾಪ್ತೇಃ । ತ್ವದ್ಗೇಹಕಲಹಾತ್ ತವ ಗೇಹೋಪಮಶಾಸ್ತ್ರೇ ಸ್ಥಿತಾಂಶಾಂಶಿಭಾವಾತ್ಯಂತಾಭೇದಾಖ್ಯ ಪ್ರಮೇಯಯೋಃ ಪರಸ್ಪರ ವಿರೋಧಾದಿತ್ಯರ್ಥಃ । ಅತ್ಯಂತಸಂಕಟಮೇವಾನ್ಯಾಪದೇಶೇನ ದರ್ಶಯತಿ– ಜಾಯಾ ವೇತಿ ॥ ಯಥಾ ಗೃಹಸ್ಥಸ್ಯ ತವ ಗೇಹೇ ಜಾಯಾದ್ವಯಕಲಹೇ ತವೈಕತ್ರ ಚ ಪಕ್ಷಪಾತೇ ಜಾಯಾ ವಾ ಕುಪಿತಾ ಗಚ್ಛೇತ್ತ್ವಂ ವಾ ಪ್ರವ್ರಜಿತೋ ಭವೇಃ । ತಥಾ ಸ್ತ್ರೀಲಿಂಗತಯಾ ಜಾಯೋಪಮಾ ಅಂಶಾಂಶಿತಾಽತ್ಯಂತಾಭಿನ್ನತಾ ವಾ ಏಕತ್ರ ಪಕ್ಷಪಾತೇಽಪರಾ ವಾ ಗಚ್ಛೇತ್ । ತ್ವಂ ವಾ ತಯೋಃ ಕಲಹಾನ್ನಿತಮಿದಂ ತ್ಯಕ್ತ್ವಾ ಗಚ್ಛೇಃ । ವಿರುದ್ಧಯೋರನಯೋಃ ಪ್ರಮೇಯಯೋಃ ಸಹಸ್ಥಿತಿರ್ನ ಘಟತ ಇತಿ ಭಾವಃ ॥ ೬೪೬ ॥**

**ವಿವರಣೆ–** ಮೋಕ್ಷದಲ್ಲಿಯೂ ಅಂಶಾಂಶಿಭಾವವಿರಬೇಕಾದರೆ ಭೇದವೂ ಇರಬೇಕು ಮತ್ತು ಅದು ಪಾರಮಾರ್ಥಿಕಸತ್ಯವಾಗಬೇಕಾದೀತು. ಹಾಗಾಗಿ ಅದ್ವೈತಿಗಳ ಸ್ಥಿತಿಯು ಇಬ್ಬರು ಹೆಂಡಿರಕಲಹದಲ್ಲಿ ಸಿಲುಕಿದ ಯಜಮಾನನಂತಾಗಿದೆ.

ಇಬ್ಬರು ಹೆಂಡತಿಯರನ್ನು ಕಟ್ಟಿಕೊಂಡ ಯಜಮಾನನೊಬ್ಬನು ಅವರಿಬ್ಬರ ನಡುವಣ ಜಗಳವನ್ನು ಬಗೆಹರಿಸುವಲ್ಲಿ ಸೋಲುತ್ತಾನೆ. ಆಗ ಒಬ್ಬ ಹೆಂಡತಿಯು ಮುನಿದು ತವರಿನ ಹಾದಿ ಹಿಡಿಯುತ್ತಾಳೆ. ಅಥವಾ ಈ ಗಂಡನೇ ಬೇಸತ್ತು ಸಂಸಾರ ತೊರೆದು ಸಂನ್ಯಾಸಿಯಾಗುತ್ತಾನೆ.

ಅಂತಯೇ ಅದ್ವೈಗಳಿಗೆ ಮನೆಯಂತಿರುವ ಅದ್ವೈತಸಿದ್ಧಾಂತದಲ್ಲಿಯೂ, ಅಂಶಾಂಶಿತಾ ಮತ್ತು ಅತ್ಯಂತಭಿನ್ನತಾ ಎಂಬ ಎರಡು ಪ್ರಮೇಯಗಳೆಂಬ ಪತ್ನಿಯರ ನಡುವಣ ಹೊಂದಾಣಿಕೆಯೂ ತಪ್ಪಿಹೋಗಿದೆ. ಮನೆಯ ಯಜಮಾನನಾದ ಅದ್ವೈತಿಯು ಹೊಂದಾಣಿಕೆಯನ್ನು ಮೂಡಿಸುವುದರಲ್ಲಿ ಕೈಚೆಲ್ಲಿದ್ದಾನೆ. ಹಾಗಾಗಿ ಎರಡು

ಪ್ರಮೇಯಗಳೆಂಬ ಪತ್ನಿಯರಲ್ಲಿ ಒಬ್ಬಳನ್ನು ಓಲೈಸಿದರೆ ಮತ್ತೊಬ್ಬಳು ಮುನಿದು ಮನೆ ತೊರೆಯುತ್ತಾಳೆ. ಅಥವಾ ಈತನೇ ತನ್ನ ಸಿದ್ಧಾಂತವೆಂಬ ಮನೆಯನ್ನು ತೊರೆಯಬೇಕಾಗುತ್ತದೆ. ಎರಡಕ್ಕೂ ಹೊಂದಾಣಿಕೆಯಂತೂ ಸಾಧ್ಯವಿಲ್ಲ. ಅಂಶಾಂಶಿತಾ ಮತ್ತು ಅತ್ಯಂತಭಿನ್ನತಾಗಳೆರಡೂ ಸ್ತ್ರೀಲಿಂಗದಲ್ಲಿ ಇರುವುದರಿಂದ ಗಂಡನಾದ ಅದ್ವೈತಿಯ ಹೆಂಡಂದಿರಂತಿವೆ. ಅವೆರಡರ ನಡುವೆ ಹೊಂದಾಣಿಕೆಯನ್ನು ಮೂಡಿಸುವಲ್ಲಿ ಆತ ಸೋತಿದ್ದರಿಂದ ತನ್ನ ಸಿದ್ಧಾಂತವನ್ನು ತೊರೆಯಬೇಕಾಗುತ್ತದೆ.

**ತಸ್ಮಾದಂಶಾಂಶಿಭಾವೇನ ಜೀವಾಭೇದಪ್ರಸಾಧನಂ ।**
**ಅಪ್ರಸಾಧನಮೇವೇತ್ಥಂ ಕುರ್ಯಾದ್ಧೇತುರಯಂ ಮಮ ॥ ೬೪೭ ॥**

**ಅರ್ಥ–** ತಸ್ಮಾತ್= ಆದ್ದರಿಂದ, ಇತ್ಥಂ= ಈ ರೀತಿಯಾಗಿ, ಅಯಂ ಮಮ ಹೇತುಃ= ಈ ನನ್ನ ಹೇತುವು, ಅಂಶಾಂಶಿಭಾವೇನ= ಅಂಶಾಂಶಿಭಾವದಿಂದ, ಜೀವಾಭೇದಪ್ರಸಾಧನಂ= ಬ್ರಹ್ಮನಿಗೆ ಜೀವಾಭೇದವನ್ನು ಸಾಧಿಸುವುದನ್ನು, ಅಪ್ರಸಾಧನಮೇವ= ಅಲಂಕಾರಾಭಾವ ರೂಪವನ್ನಾಗಿಯೇ, ಕುರ್ಯಾತ್= ಮಾಡುತ್ತದೆ.

**ಅನುವಾದ–** **ಆದ್ದರಿಂದ ಈ ನನ್ನ ಹೇತುವು ಅಂಶಾಂಶಿಭಾವದಿಂದ ನೀನು ಜೀವಬ್ರಹ್ಮರಿಗೆ ಅಭೇದವನ್ನು ಸಾಧನೆಮಾಡುವುದನ್ನು ಈ ರೀತಿಯಾಗಿ ಅಲಂಕಾರ ಇಲ್ಲದ್ದನ್ನಾಗಿಯೇ ಮಾಡುತ್ತದೆ.**

**ಭಾವವಿಲಾಸಿನೀ–** ಉಕ್ತಮರ್ಥಂ ಸಾಹಿತ್ಯಮುದ್ರಯೋಪಸಂಹರತಿ ॥ **ತಸ್ಮಾದಿತಿ** ॥ ಅಪ್ರಸಾಧನಂ ಪ್ರಸಾಧನಮಲಂಕಾರಸ್ತದಭಾವಮಿತ್ಯರ್ಥಃ ॥ ೬೪೭ ॥

**ವಿವರಣೆ–** ಜೀವಃ ಅಭಿನ್ನಃ ಅಂಶತ್ವಾತ್ ಎಂಬುದು ಪರರ ಅನುಮಾನ. ಜೀವಃ ಭಿನ್ನಃ ತದಹೀನತ್ವರೂಪತದಂಶತ್ವಾತ್ ಎನ್ನುವುದು ನಮ್ಮ ಅನುಮಾನ. ನನ್ನ ಅನುಮಾನವು ಪ್ರಬಲವಾದುದರಿಂದ ನಿನ್ನ ಅನುಮಾನವನ್ನು ಬಾಧಿಸುತ್ತದೆ. ಆದ್ದರಿಂದ ನಿನ್ನ ಅನುಮಾನವು ನಿನಗೆ ಅಲಂಕಾರರೂಪವಾಗುವುದಿಲ್ಲ ಎಂದು ಅಭಿಪ್ರಾಯ.

**ಬಹುಜೀವಮತೇ ಜೀವಾ ದೇಹೇ ದೇಹೇ ಪೃಥಕ್ ಪೃಥಕ್ ।**
**ಯೋನಿಭೇದಾತ್ ಕರ್ಮಭೇದಾತ್ ಗತಿಭೇದಾಚ್ಚ ಸಂಸೃತೌ ॥ ೬೪೮ ॥**

**ಆಮೋಕ್ಷಂ ತದ್ವಿಭಾಗಸ್ಯ ನ ವ್ಯತ್ಯಾಸೋऽಸ್ತಿ ತೇ ಮತೇ ।**
**ಅತೋ ಮಿಥಸ್ತದೈಕ್ಯಸ್ಯ ನಾಧುನಾऽವಸರಸ್ತಥಾ ॥ ೬೪೯ ॥**

**ಅರ್ಥ–** ಬಹುಜೀವಮತೇ= ಬಹುಜೀವವಾದದಲ್ಲಿ, ದೇಹೇದೇಹೇ= ಪ್ರತಿಯೊಂದು ದೇಹದಲ್ಲಿಯೂ, ಜೀವಾಃ= ಜೀವರು, ಸಂಸೃತೌ= ಸಂಸಾರಾವಸ್ಥೆಯಲ್ಲಿ, ಯೋನಿ

ಭೇದಾತ್= ಯೋನಿ ಭೇದದ ಕಾರಣದಿಂದ, ಕರ್ಮಭೇದಾತ್= ಪುಣ್ಯಪಾಪ ರೂಪ ಕರ್ಮಭೇದದ ಕಾರಣದಿಂದ, ಗತಿಭೇದಾತ್= ಸ್ವರ್ಗ ನರಕಾದಿ ಗತಿಭೇದದ ಕಾರಣದಿಂದ, ಪೃಥಕ್ ಪೃಥಕ್= ಭಿನ್ನ ಭಿನ್ನರಾಗಿಯೇ ಇದ್ದಾರೆ, ತೇ ಮತೇ= ನಿನ್ನ ಮತದಲ್ಲಿ, ಆಮೋಕ್ಷಂ= ಮೋಕ್ಷದವರೆಗೆ, ತದ್ವಿಭಾಗಸ್ಯ= ಈ ಜೀವ ವಿಭಾಗಕ್ಕೆ, ವ್ಯತ್ಯಾಸ= ವ್ಯತ್ಯಾಸವು, ನ ಅಸ್ತಿ= ಇರುವುದಿಲ್ಲ, ಅತಃ= ಆ ಕಾರಣದಿಂದ, ಅ ಮಿಥಸ್ತದೈಕ್ಯಸ್ಯ= ಪರಸ್ಪರವಾಗಿ ಜೀವರ ಅಭೇದಕ್ಕೆ, ತವ= ನಿನ್ನ ರೀತಿಯಲ್ಲಿ, ಅಧುನಾ= ಈ ಸಂಸಾರಾವಸ್ಥೆಯಲ್ಲಿ, ನ ಅವಸರಃ= ಅವಕಾಶವಿಲ್ಲ.

**ಅನುವಾದ–** ಬಹುಜೀವವಾದ ಮತದಲ್ಲಿ ಸಂಸಾರಾವಸ್ಥೆಯಲ್ಲಿ ಜೀವರುಗಳಿಗೆ ಯೋನಿಭೇದವೂ, ಕರ್ಮಭೇದವೂ ಮತ್ತು ಗತಿಭೇದವೂ ಇರುವ ಕಾರಣದಿಂದ ಪ್ರತಿಯೊಂದು ದೇಹದಲ್ಲಿರುವ ಜೀವರು ಭಿನ್ನಭಿನ್ನರು. ನಿನ್ನ ಮತದಲ್ಲಿ ಮೋಕ್ಷದವರೆಗೆ ಈ ವಿಭಾಗಕ್ಕೆ ವ್ಯತ್ಯಾಸವಿಲ್ಲ. ಆದ್ದರಿಂದ ನಿನ್ನ ಮತದಂತೆ ಈಗ ಸಂಸಾರಾವಸ್ಥೆಯಲ್ಲಿ ಎಲ್ಲಾ ಜೀವರ ಪರಸ್ಪರ ಐಕ್ಯಕ್ಕೆ ಅವಕಾಶವೇ ಇಲ್ಲ.

**ಭಾವವಿಲಾಸಿನೀ–** ಬಹುಜೀವವಾದಿಮತೇ ಯಜ್ಜೀವಾನಾಂ ಪರಸ್ಪರೈಕ್ಯಂ ಮಾಯಾವಾದಿನೋಚ್ಯತೇ ತತ್‌ಸಂಸಾರೇ ಮೋಕ್ಷೇ ಚ ತದ್ರೀತ್ಯೈವ ನ ಘಟತ ಇತ್ಯಾಹ – **ಬಹುಜೀವಮತ ಇತಿ ॥** ಗತಿಭೇದಾತ್ ಸ್ವರ್ಗನರಕಾದಿ- ಗತಿಭೇದಾತ್ । ಏಕಸ್ಯ ಪೂರ್ವತೋ ಗಮನಮಪರಸ್ಯ ಪಶ್ಚಿಮತೋ ಗಮನಮಿತ್ಯಾದಿಗತಿಭೇದಾದ್ವಾ ॥ ತದ್ವಿಭಾಗಸ್ಯ ತೇಷಾಮುಕ್ತ-ವಿಧಯಾ ನಾನಾವಿಧಜೀವಾನಾಂ ವಿಭಾಗಸ್ಯ । ತದೈಕ್ಯಸ್ಯ ಜೀವಾನಾಂ ಪರಸ್ಪರೈಕ್ಯಸ್ಯ । ಅಧುನಾ ಸಂಸಾರೇ ॥ ೬೪೮-೬೪೯ ॥

**ವಿವರಣೆ–** ಅದ್ವೈತಿಗಳು ಏಕಜೀವವಾದ ಮತ್ತು ಬಹುಜೀವವಾದ ಎಂದು ಎರಡು ವಾದಗಳನ್ನು ಒಪ್ಪುತ್ತಾರೆ. ಅದರಲ್ಲಿ ಈಗ ಬಹುಜೀವವಾದ ಪಕ್ಷಕ್ಕೆ ದೋಷವನ್ನು ಹೇಳುತ್ತಿದ್ದಾರೆ. ಬಹುಜೀವವಾದದಲ್ಲಿ ಮಾಯಾವಾದಿಗಳಿಗೆ ಅಭಿಪ್ರೇತವಾದ ಪರಸ್ಪರ ಐಕ್ಯವು ಸಂಸಾರವಸ್ಥೆಯಲ್ಲಿ ಉಂಟಾಗುತ್ತದೆಯೋ, ಮೋಕ್ಷಾವಸ್ಥೆಯಲ್ಲಿ ಉಂಟಾಗುತ್ತದೆಯೋ ಎಂದು ವಿಕಲ್ಪ ಮಾಡಿ ಎರಡು ರೀತಿಯಲ್ಲಿಯೂ ಕೂಡುವುದಿಲ್ಲವೆಂದು ಉಪಪಾದನೆಯನ್ನು ಮಾಡುತ್ತಾರೆ. ಯೋನಿಭೇದವೆಂದರೆ ಮನುಷ್ಯ ಪಶುಪಕ್ಷ್ಯಾದಿ ನಾನಾ ಯೋನಿಭೇದಗಳು. ಕರ್ಮಭೇದ ಎಂದರೆ ಒಬ್ಬೊಬ್ಬ ಜೀವನ ಸುಖ ದುಃಖಗಳಿಗೆ ಕಾರಣವಾದ ವಿಚಿತ್ರವಾದ ಪುಣ್ಯಪಾಪ ರೂಪ ಕರ್ಮಗಳ ಭೇದ. ಗತಿಭೇದವೆಂದರೆ ಒಬ್ಬನಿಗೆ ಸ್ವರ್ಗಗಮನ, ಒಬ್ಬನಿಗೆ ನರಕಗಮನ, ಅಥವಾ ಒಬ್ಬನಿಗೆ ಪೂರ್ವದಿಕ್ಕಿಗೆ ಗಮನ, ಒಬ್ಬನಿಗೆ ಪಶ್ಚಿಮ ದಿಕ್ಕಿಗೆ ಗಮನ. ಇಂತಹ ವಿರುದ್ಧ ಧರ್ಮಗಳೇ ಸಂಸಾರವಸ್ಥೆಯಲ್ಲಿ ಇರುವುದರಿಂದ ಸಂಸಾರಾವಸ್ಥೆಯಲ್ಲಂತೂ ಜೀವರಿಗೆ ಪರಸ್ಪರ ಐಕ್ಯದ ಪ್ರಸಕ್ತಿ ಇಲ್ಲ ಎಂದು ಹೇಳುತ್ತಾರೆ.

**ಮುಕ್ತೌ ತು ಬ್ರಹ್ಮಣೈಕ್ಯಂ ಸ್ಯಾನ್ಮಿಥಸ್ತ್ವೈಕ್ಯಂ ಕದಾ ವದ ।**
**ಅಂಶಿನ್ಯೈಕ್ಯೇಽಪಿ ತಂತೂನಾಮಂಶಾನಾಮೇಕತಾಸ್ತಿ ಕಿಂ ॥ ೬೫೦ ॥**

**ಅರ್ಥ–** ಮುಕ್ತೌ ತು= ಮೋಕ್ಷದಲ್ಲಾದರೆ, ಬ್ರಹ್ಮಣೈಕ್ಯಂ ಸ್ಯಾತ್= ಬ್ರಹ್ಮನಿಂದ ಏಕತ್ವವು ಉಂಟಾದೀತು, ಮಿಥಃ ಐಕ್ಯಂತು= ಜೀವರ ಪರಸ್ಪರ ಐಕ್ಯವಾದರೋ, ಕದಾ= ಯಾವಾಗ ಉಂಟಾಗುತ್ತದೆ ಎಂದು, ವದಾ= ಹೇಳು, ತಂತೂನಾಂ= ತಂತುಗಳಿಗೆ, ಅಂಶಿನಾ ಐಕ್ಯೇಪಿ= ಪಟದಿಂದ ಐಕ್ಯವಿದ್ದರೂ, ಅಂಶಾನಾಂ= ಅಂಶವಾದ ತಂತುಗಳಿಗೆ, ಏಕತಾಸ್ತಿ ಕಿಂ= ಐಕ್ಯವು ಇದೆಯೇ?

**ಅನುವಾದ–** ಮೋಕ್ಷದಲ್ಲಿ ಬ್ರಹ್ಮನಿಂದ ಐಕ್ಯ ಉಂಟಾದೀತು. ಜೀವರಿಗೆ ಪರಸ್ಪರ ಐಕ್ಯವು ಯಾವಾಗ ಎಂದು ಹೇಳು. ಪಟಕ್ಕೂ ಮತ್ತು ತಂತುಗಳಿಗೂ ಐಕ್ಯವಿದ್ದರೂ ಪಟದ ಬೇರೆ ಬೇರೆ ಅಂಶಗಳಾದ ತಂತುಗಳಿಗೆ ಐಕ್ಯವಿದೆಯೇ?

**ಭಾವವಿಲಾಸಿನೀ–** ಜೀವಾನಾಂ ಮುಕ್ತೌ ಬ್ರಹ್ಮಣ್ಯೈಕ್ಯೇಽಪಿ ಪರಸ್ಪರೈಕ್ಯಂ ನಾಸ್ತೀತ್ಯತ್ರ ದೃಷ್ಟಾಂತಮಾಹ – **ಅಂಶಿನೇತಿ** ॥ ಅಂಶಿನಾ ಪಟೇನ ॥ ೬೫೦ ॥

**ಬ್ರಹ್ಮೈಕ್ಯೇ ಜೀವಭಾವಸ್ಯೈವಾಭಾವಾತ್ ಕಿಂ ಮಿಥೋಽಭಿದಾ ॥ ೬೫೧ ॥**

**ಅರ್ಥ–** ಬ್ರಹ್ಮೈಕ್ಯೇ= ಬ್ರಹ್ಮನಲ್ಲಿ ಐಕ್ಯವನ್ನು ಹೊಂದಿದಾಗ, ಜೀವಭಾವಸ್ಯೈವ ಅಭಾವಾತ್= ಜೀವಭಾವವೇ ಇಲ್ಲದಿರುವಾಗ, ಮಿಥೋಽಭಿದಾ= ಜೀವರ ಪರಸ್ಪರ ಐಕ್ಯವು, ಕಿಂ= ಹೇಗೆ ಉಂಟಾಗುತ್ತದೆ?

**ಅನುವಾದ–** ಬ್ರಹ್ಮನಲ್ಲಿ ಐಕ್ಯ ಉಂಟಾದಾಗ, ಜೀವಭಾವವೇ ಇಲ್ಲದಿರುವಾಗ ಮೋಕ್ಷದಲ್ಲಿ ಜೀವರಿಗೆ ಪರಸ್ಪರ ಐಕ್ಯ ಎಂದು ಹೇಗೆ ಹೇಳುವುದು?

**ಭಾವವಿಲಾಸಿನೀ–** ಮುಕ್ತೌ ಬ್ರಹ್ಮಭಾವೇಽಪಿ ಜೀವಾನಾಂ ಪರಸ್ಪರೈಕ್ಯಾಭಾವೇ ಯುಕ್ತ್ಯಂತರಂ ಚಾಹ – **ಬ್ರಹ್ಮೈಕ್ಯ ಇತಿ** ॥ ಮಿಥೋಽಭಿದಾ ಜೀವಾನಾಂ ಪರಸ್ಪರಾಭೇದಃ । ಯದಾ ಜೀವಭಾವೋಽಸ್ತಿ ಸಂಸಾರೇ ತದಾ ನೈಕ್ಯಮ್ । ಯದಾ ಚ ಮೋಕ್ಷೇ ಐಕ್ಯಾಶಾ ತದಾ ಜೀವಭಾವ ಏವ ನ । ತಥಾ ಚ ಜೀವಾನಾಂ ಪರಸ್ಪರೈಕ್ಯಂ ಕದಾಪಿ ವಕ್ತುಂ ನ ಶಕ್ಯಮಿತಿ ಭಾವಃ । ನನು ಸಂಸಾರೇ ವಿದ್ಯಮಾನೋಽಪಿ ಜೀವಾನಾಂ ಭೇದಃ ಮಿಥ್ಯೇತಿ ಚೇನ್ಮುಕ್ತೌ ಜೀವಾನಾಂ ಪರಸ್ಪರಾಭೇದೇ ಸತಿ ಹಿ ಸಾಂಸಾರಿಕಭೇದಸ್ಯ ಮಿಥ್ಯಾತ್ವಂ ಸ್ಯಾತ್ । ಉಕ್ತವಿಧಯಾ ತದಭಾವೇ ಚ ನಿರ್ನಿಮಿತ್ತಂ ಭೇದಮಿಥ್ಯಾತ್ವಾಯೋಗಾತ್ । ಮುಕ್ತಾವಂಶಾನಾಂ ಜೀವಾನಾಮಂಶಿನಾ ಬ್ರಹ್ಮಣೈಕ್ಯೇಽಪ್ಯಂಶಾನಾಂ ಪರಸ್ಪರಮೈಕ್ಯಸ್ಯ ಲೋಕೇ ಅದೃಷ್ಟತ್ವಾತ್ ಅಯುಕ್ತತ್ವಾಚ್ಚ ॥೬೫೧॥

**ವಿವರಣೆ–** ಮುಕ್ತಿಯಲ್ಲಿ ಜೀವರಿಗೆ ಬ್ರಹ್ಮಭಾವವನ್ನು ಒಪ್ಪಿದರೂ, ಜೀವರಲ್ಲಿ ಪರಸ್ಪರ ಐಕ್ಯವಿಲ್ಲವೆಂದು ಸಮರ್ಥನೆ ಮಾಡಲು ಇಲ್ಲಿ ಇನ್ನೊಂದು ಯುಕ್ತಿಯನ್ನು ಹೇಳುತ್ತಾರೆ.

ಸಂಸಾರದಲ್ಲಿ ಜೀವಭಾವವಿದೆ. ಆದರೆ ಐಕ್ಯವಿಲ್ಲ ಎಂದು ನೀನೂ ಒಪ್ಪುತ್ತೀಯೆ. ಮೋಕ್ಷದಲ್ಲಿ ಬ್ರಹ್ಮಭಾವವಿದೆ, ಆದರೆ ಜೀವಭಾವವು ನಿವೃತ್ತವಾಗಿದೆ. ಆದ್ದರಿಂದ ಮೋಕ್ಷದಲ್ಲಿ ಜೀವರಿಗೆ ಪರಸ್ಪರ ಐಕ್ಯ ಉಂಟಾಗುತ್ತದೆ ಎಂದು ಹೇಳುವ ಮಾತಿಗೆ ಏನೂ ಅರ್ಥವಿಲ್ಲ. ಸಂಸಾರದಲ್ಲಿ ಭೇದವಿದ್ದರೂ ಅದು ಮಿಥ್ಯೆಯಾದುದರಿಂದ ಮೋಕ್ಷದಲ್ಲಿ ಜೀವರಿಗೆ ಪರಸ್ಪರ ಅಭೇದವು ಸಿದ್ಧವಾಗುತ್ತದೆ ಎಂದು ಹೇಳಲು ಸಾಧ್ಯವಿಲ್ಲ. ಮೋಕ್ಷದಲ್ಲಿ ಜೀವರಿಗೆ ಪಾರಮಾರ್ಥಿಕವಾದ ಅಭೇದವು ಸಿದ್ಧವಾದರೆ ಸಂಸಾರದಲ್ಲಿ ತೋರುವ ಆ ಅಭೇದಕ್ಕೆ ವಿರುದ್ಧವಾದ ಭೇದವು ಮಿಥ್ಯೆ ಎಂದು ಹೇಳಬಹುದು. ಆದರೆ ಮೋಕ್ಷದಲ್ಲಿ ಜೀವರಿಗೆ ಅಭೇದವೇ ಉಪಪನ್ನವಾಗುವುದಿಲ್ಲ ಎಂದು ಹೇಳಿದ ಮೇಲೆ ಸಂಸಾರದಲ್ಲಿ ತೋರುವ ಭೇದವು ಮಿಥ್ಯೆ ಎಂದು ಹೇಳುವುದಕ್ಕೆ ಯಾವ ಕಾರಣವೂ ಇಲ್ಲ. ಮೋಕ್ಷದಲ್ಲಿ ಅಂಶಗಳಾದ ಜೀವರಿಗೆ ಬ್ರಹ್ಮನಿಂದ ಐಕ್ಯವುಂಟಾದರೂ, ಅಂಶಗಳಿಗೇ ಪರಸ್ಪರ ಐಕ್ಯವುಂಟಾಗುವ ವಿಷಯದಲ್ಲಿ ಲೋಕದಲ್ಲಿ ದೃಷ್ಟಾಂತವೂ ಇಲ್ಲ ಮತ್ತು ಅದು ಯುಕ್ತಿಯುಕ್ತವೂ ಅಲ್ಲ.

ತತ್ರ ತತ್ರ ಹಿ ತೇ ತೇಽಂಶಾಃ ಸ್ವಸ್ವಾಜ್ಞಾನಕ್ಷಯೇ ಸತಿ ।
ಬ್ರಹ್ಮತ್ವಂ ಯಾಂತಿ ಸರ್ವೇಽಪಿ ನ ತ್ವಂಶಾಂತರಭೂಮಿಷು ॥ ೬೫೨ ॥

ಅತೋಂಽಶಾನಾಂ ಸಮಸ್ತಾನಾಂ ಮಿಥಸ್ತ್ವೈಕ್ಯಂ ಕದಾ ವದ ।
ವಿಚಾರ್ಯಮಾಣೇ ಯನ್ನಾಸೀನ್ನ ಭವೇ ನಾಪುನರ್ಭವೇ ॥ ೬೫೩ ॥

**ಅರ್ಥ**– ಸರ್ವೇಽಪಿ= ಎಲ್ಲಾ, ತೇ ತೇ ಅಂಶಾಃ= ಆಯಾ ಅಂಶಗಳು, ಸ್ವಸ್ವಾಜ್ಞಾನಕ್ಷಯೇ ಸತಿ= ತಮ್ಮ ತಮ್ಮ ಅಜ್ಞಾನವು ನಾಶವನ್ನು ಹೊಂದುತ್ತಿರಲು, ತತ್ರ ತತ್ರ= ಅಲ್ಲಲ್ಲಿ, ಬ್ರಹ್ಮತ್ವಂ ಯಾಂತಿ= ಬ್ರಹ್ಮಭಾವವನ್ನು ಹೊಂದುತ್ತವೆ, ನ ತು ಅಂಶಾಂತರಭೂಮಿಷು= ಅಂಶಾಂತರ ಪ್ರದೇಶದಲ್ಲಿ ಬ್ರಹ್ಮಭಾವವನ್ನು ಹೊಂದುವುದಿಲ್ಲ, ಅತಃ= ಆ ಕಾರಣದಿಂದ, ಸಮಸ್ತಾನಾಂ ಅಂಶಾನಾಂ= ಎಲ್ಲ ಅಂಶಗಳಿಗೆ, ಮಿಥಸ್ಯೈಕ್ಯಂ ತು= ಪರಸ್ಪರ ಐಕ್ಯವಾದರೂ, ಕದಾ= ಯಾವಾಗ, ವದ= ಹೇಳು, ವಿಚಾರ್ಯಮಾಣೇ= ವಿಚಾರ ಮಾಡಿದರೆ, ಯತ್= ಆ ಐಕ್ಯವು, ಭವೇ= ಸಂಸಾರದಲ್ಲಿ, ನಾಸ್ತಿ= ಇಲ್ಲ, ಅಪುನರ್ಭವೇ= ಮೋಕ್ಷದಲ್ಲಿಯೂ ಕೂಡ, ನ= ಇಲ್ಲ.

**ಅನುವಾದ**– ಆ ಎಲ್ಲಾ ಭಿನ್ನ ಭಿನ್ನ ಅಂಶಗಳೂ ಸಹ ತಮ್ಮ ತಮ್ಮ ಅಜ್ಞಾನವು ನಾಶವನ್ನು ಹೊಂದುತ್ತಿರಲು ಅಲ್ಲಲ್ಲಿ ಬ್ರಹ್ಮಭಾವವನ್ನು ಹೊಂದುತ್ತವೆ. ಒಂದು ಅಂಶವು ಇನ್ನೊಂದು ಅಂಶದ ಪ್ರದೇಶದಲ್ಲಿ ಬ್ರಹ್ಮಭಾವವನ್ನು ಹೊಂದುವುದಿಲ್ಲ. ಆದ್ದರಿಂದ ಎಲ್ಲ ಅಂಶಗಳಿಗೂ ಪರಸ್ಪರ ಐಕ್ಯವು ಯಾವಾಗ ಉಂಟಾಗುವುದು ಎಂದು ಹೇಳು. ವಿಚಾರ ಮಾಡಿ ನೋಡಿದರೆ ಅದು ಈಗ ಸಂಸಾರಾವಸ್ಥೆಯಲ್ಲಿ ಇಲ್ಲ ಮುಂದೆ ಮೋಕ್ಷದಲ್ಲಿಯೂ ಇರುವುದಿಲ್ಲ.

**ಭಾವವಿಲಾಸಿನೀ–** ಅಯುಕ್ತಾತಾಮೇವೋಪಪಾದಯತಿ – **ತತ್ರ ತತ್ರೇತಿ** ॥ ಯಸ್ಮಿನ್ ಯಸ್ಮಿನ್ನಂಶೇಽಜ್ಞಾನಾವರಣೇ ಸತಿ ಸ್ವಯಂ ಜೀವಭಾವಂ ಪ್ರಾಪ್ತವಾನ್ ತತ್ರ ತತ್ರ ॥ ಅತಃ ಸ್ವಾಂಶಭಾಗ ಏವ ಏಕೀಭಾವಾತ್ । ಯದೈಕ್ಯಂ ತದೈಕ್ಯಂ ಕದಾ ವದೇತಿ ಪೂರ್ವೇಣಾನ್ವಯಃ ॥ ೬೫೨-೬೫೩॥

**ವಿವರಣೆ–** ಪರಸ್ಪರ ಐಕ್ಯವು ಅಯುಕ್ತವೆಂಬುದನ್ನೇ ಇಲ್ಲಿ ಉಪಪಾದನೆ ಮಾಡುತ್ತಾರೆ. ಯಾವ ಅಂಶದಲ್ಲಿ ಅಜ್ಞಾನಾವರಣವು ನಾಶವಾಗುತ್ತದೆಯೋ, ಆ ಅಂಶವು ಬ್ರಹ್ಮಭಾವವನ್ನು ಹೊಂದುತ್ತದೆ. ಅಜ್ಞಾನಾವರಣವು ನಾಶವಾಗದಿರುವ ಇನ್ನೊಂದು ಅಂಶವು ಹಾಗೆಯೇ ಇದೆ. ಏಕೆಂದರೆ ಬಹುಜೀವವಾದದಲ್ಲಿ ಎಲ್ಲರಿಗೂ ಒಟ್ಟಿಗೆ ಮೋಕ್ಷವನ್ನು ಅಂಗೀಕರಿಸುವುದಿಲ್ಲ. ಆದ್ದರಿಂದ ಕೆಲವು ಜೀವರು ಮುಕ್ತರಾದರೂ, ಮುಕ್ತರಾದ ಆ ಜೀವರಿಗೂ ಪರಸ್ಪರ ಐಕ್ಯವಿಲ್ಲ ಎಂಬುದು ಒಂದು ದೋಷ. ಇನ್ನೂ ಕೆಲವು ಜೀವರು ಸಂಸಾರದಲ್ಲಿಯೇ ಇರುವುದರಿಂದ ಸಂಸಾರದಲ್ಲಿರುವ ಜೀವರಿಗೂ ಮುಕ್ತ ಜೀವರಿಗೂ ಐಕ್ಯವಿಲ್ಲದಿರುವ ಕಾರಣ ಸಮಸ್ತ ಜೀವರಿಗೂ ಐಕ್ಯವಿಲ್ಲ ಎಂಬುದು ಇನ್ನೊಂದು ದೋಷ.

**ಅನ್ಯೋನ್ಯಂ ಸುಖದುಃಖಾದೇರ್ಭೋಕ್ತೃತ್ವಂ ಯೋಗಿನೋಂಶವತ್ ।**
**ಹಸ್ತಪಾದಾದ್ಯಂಶವಚ್ಚ ವಾಕ್ಯಂ ನೋ ಚೇದ್ ವೃಥೈವ ತತ್ ॥ ೬೫೪ ॥**

**ಅರ್ಥ–** ಯೋಗಿನಃ ಅಂಶವತ್= ಯೋಗಿಯ ಅನೇಕ ಶರೀರಗಳಂತೆ, ಹಸ್ತಪಾದಾದ್ಯಂಶವಚ್ಚ= ಹಸ್ತ, ಪಾದ ಮೊದಲಾದ ಅಂಶಗಳಂತೆ, ಅನ್ಯೋನ್ಯಂ= ಪರಸ್ಪರವಾಗಿ, ಸುಖದುಃಖಾದೇಃ= ಸುಖದುಃಖಾದಿಗಳ, ಭೋಕ್ತೃತ್ವಂ= ಅನುಸಂಧಾನವು, ಉಂಟಾಗ ಬೇಕಾದೀತು, ನೋ ಚೇತ್= ಇಲ್ಲದಿದ್ದರೆ, ತತ್ ವಾಕ್ಯಂ= ಎಲ್ಲ ಜೀವರಿಗೆ ಪರಸ್ಪರ ಐಕ್ಯ ಎಂಬ ಆ ಮಾತು, ವೃಥೈವ= ವ್ಯರ್ಥವೇ ಆಗುತ್ತವೆ.

**ಅನುವಾದ–** ಸಮಸ್ತ ಜೀವರಿಗೂ ಐಕ್ಯವಿದ್ದರೆ ಅನೇಕ ಶರೀರಗಳನ್ನು ಧರಿಸಿದ ಯೋಗಿಗೆ ಇರುವಂತೆ ಒಂದೇ ಶರೀರದಲ್ಲಿರುವ ಹಸ್ತ ಪಾದದ್ಯವಚ್ಛಿನ್ನವಾದ ಚೈತನ್ಯಕ್ಕಿರುವಂತೆ ಪರಸ್ಪರ ಸುಖ ದುಃಖಾದಿ ಅನುಸಂಧಾನವು ಉಂಟಾಗಬೇಕಾದೀತು. ಪರಸ್ಪರಾನು ಸಂಧಾನವನ್ನು ಒಪ್ಪದಿದ್ದರೆ ಎಲ್ಲ ಜೀವರಿಗೂ ಪರಸ್ಪರ ಐಕ್ಯವೆಂಬ ಮಾತು ವ್ಯರ್ಥವಾಗುತ್ತದೆ.

**ಭಾವವಿಲಾಸಿನೀ–** ಪ್ರಾಕ್‌ಜೀವಾನಾಂ ಪರಸ್ಪರೈಕ್ಯಮೇವ ನ ಘಟತ ಇತ್ಯುಕ್ತಮ್ । ಅಂಗೀಕೃತ್ಯಾಪಿ ದೂಷಣಮಾಹ – **ಅನ್ಯೋನ್ಯಮಿತಿ** ॥ ಯೋಗಿನಃ ಸೌಭರ್ಯಾದೇಃ । ತತ್ ಪರಸ್ಪರೈಕ್ಯಮ್ । ಅನ್ಯೋನ್ಯಂ ಸುಖದುಃಖಭೋಗಾಭಾವೇ ಪರಸ್ಪರೈಕ್ಯಂ ವಾರ್ತಾಮಾತ್ರಮಿತಿ ಭಾವಃ ॥೬೫೪॥

**ವಿವರಣೆ–** ಹಿಂದಿನ ಶ್ಲೋಕದಲ್ಲಿ ಪರಸ್ಪರ ಐಕ್ಯವೇ ಕೂಡುವುದಿಲ್ಲ ಎಂದು ಉಪಪಾದನೆ ಮಾಡಿದರು. ಈಗ ಐಕ್ಯವನ್ನು ಒಪ್ಪಿದರೂ ದೋಷಾಂತರವನ್ನು ಹೇಳುತ್ತಾರೆ. ಸೌಭರ್ಯಾದಿ ಯೋಗಿಗಳಿಗೆ ಅನೇಕ ದೇಹಗಳಿದ್ದವು. ಆ ಎಲ್ಲ ದೇಹಗಳಲ್ಲಿ ಉಂಟಾಗುವ ಸುಖದುಃಖಗಳ ಅನುಸಂಧಾನವು ಯೋಗಿಗಳಾದ ಸೌಭರಿ ಋಷಿಗಳಿಗೆ ಇದ್ದಿತು. ಹಾಗೆಯೇ ಶರೀರದಲ್ಲಿ ಇರುವ ಒಬ್ಬ ಚೇತನನಿಗೆ ಹಸ್ತಪಾದಾದಿಗಳು ಅವಚ್ಛೇದಕವಾಗಿವೆ. ಆದರೂ ಪಾದಾವಚ್ಛಿನ್ನ ಚೇತನಕ್ಕೆ ಉಂಟಾದ ದುಃಖದ ಅನುಸಂಧಾನವು ಹಸ್ತಾವಚ್ಛಿನ್ನಕ್ಕೆ ಬರುತ್ತದೆ. ಆದ್ದರಿಂದಲೇ ಕಾಲಿನ ಮುಳ್ಳನ್ನು ತೆಗೆಯಲು ಹಸ್ತವು ಪ್ರಯತ್ನ ಮಾಡುತ್ತದೆ. ಅದರಂತೆ ಎಲ್ಲ ಜೀವರಿಗೂ ಪರಸ್ಪರ ಐಕ್ಯವಿದ್ದರೆ ಎಲ್ಲ ಜೀವಗಳಿಗೆ ಉಂಟಾಗುವ ಸುಖದುಃಖದ ಅನುಸಂಧಾನವು ಪ್ರತಿಯೊಬ್ಬ ಜೀವನಿಗೂ ಬರಬೇಕಾಗುತ್ತದೆ ಎಂಬ ಆಪತ್ತಿಯನ್ನು ಇಲ್ಲಿ ಕೊಡುತ್ತಾರೆ.

**ಯದ್ಯನ್ಯೋನ್ಯಮಭಿನ್ನಾಃ ಸ್ಯುಃ ಜೀವಾಃ ಸರ್ವೇಽಪಿ ಸರ್ವದಾ ।**
**ತರ್ಹಿ ಸ್ಯಾಜ್ಜಾತಿಭೇದಸ್ಯೈವಾಭಾವಾತ್ ಸರ್ವಸಂಕರಃ ॥ ೬೫೫ ॥**

**ಅರ್ಥ–** ಯದಿ= ಒಂದು ಪಕ್ಷ, ಸರ್ವೇಽಪಿ ಜೀವಾಃ= ಎಲ್ಲ ಜೀವರು, ಅನ್ಯೋನ್ಯಂ= ಪರಸ್ಪರವಾಗಿ, ಸರ್ವದಾ= ಯಾವಾಗಲೂ, ಅಭಿನ್ನಾಃ ಸ್ಯುಃ= ಅಭಿನ್ನರಾಗಿಯೇ ಇರುವುದಾದರೇ, ತರ್ಹಿ= ಆಗ, ಜಾತಿಭೇದಸ್ಯೈವಾಭಾವಾತ್= ಜಾತಿಭೇದವೇ ಇಲ್ಲದಿರುವುದರಿಂದ, ಸರ್ವಸಂಕರಃ= ಸರ್ವಸಂಕರವು, ಸ್ಯಾತ್= ಉಂಟಾಗುತ್ತದೆ.

**ಅನುವಾದ–** ಎಲ್ಲ ಜೀವರೂ ಯಾವಾಗಲೂ ಪರಸ್ಪರವಾಗಿ ಅಭಿನ್ನರೇ ಆದರೆ, ಜಾತಿಭೇದವೇ ಇಲ್ಲದಿರುವ ಕಾರಣದಿಂದ ಸರ್ವಸಂಕರವು ಉಂಟಾಗುತ್ತದೆ.

**ಭಾವವಿಲಾಸಿನೀ–** ಜೀವಾನಾಂ ಪರಸ್ಪರೈಕ್ಯೇ ದೂಷಣಾಂತರಂ ಚಾಹ – **ಯದೀತಿ** ॥ ೬೫೫ ॥

**ವಿವರಣೆ–** ಜೀವರಿಗೆ ಪರಸ್ಪರ ಐಕ್ಯವನ್ನು ಒಪ್ಪಿದರೆ ಇಲ್ಲಿ ದೋಷಾಂತರವನ್ನು ಹೇಳುತ್ತಾರೆ. ಪರಸ್ಪರ ಐಕ್ಯವಿದ್ದರೆ ಒಬ್ಬ ಜೀವನೇ ಒಂದೇ ಕ್ಷಣದಲ್ಲಿಯೇ ಬ್ರಾಹ್ಮಣನೂ, ಕ್ಷತ್ರಿಯನೂ, ವೈಶ್ಯನೂ, ಶೂದ್ರನೂ, ಚಂಡಾಲನೂ ಆಗುವುದರಿಂದ ಜಾತಿಭೇದವೇ ಇಲ್ಲವೆಂದಾದೀತು ಎಂಬ ಆಪಾದನೆಯನ್ನು ಇಲ್ಲಿ ಮಾಡುತ್ತಾರೆ.

**ಸ್ನುಷಾ ಚ ಭಾರ್ಯಾ ಭಾರ್ಯಾ ಚ ಮಾತಾ ಗೌಶ್ಚ ಶುನೀ ಬುಧಃ ।**
**ಮತ್ತ ಏವೇತಿ ತಚ್ಛಾಸ್ತ್ರಂ ಸ್ಯಾದುನ್ಮತ್ತಸ್ಯ ಜಲ್ಪಿತಂ ॥ ೬೫೬ ॥**

**ಗಮ್ಯಾಗಮ್ಯವಿಭಾಗಶ್ಚ ಸ್ವರೂಪೈಕ್ಯೇ ಕಥಂ ವದ ॥ ೬೫೭ ॥**

**ಅರ್ಥ–** ಸ್ನುಷಾ ಚ ಭಾರ್ಯಾ= ಸೊಸೆಯು ಹೆಂಡತಿ, ಮಾತಾ ಚ ಭಾರ್ಯಾ= ತಾಯಿಯೂ ಹೆಂಡತಿ, ಗೌಶ್ಚ ಶುನೀ= ಹಸುವು ಒಂದು ನಾಯಿ, ಬುಧಃ ಮತ್ತ ಏವ= ವಿವೇಕಿಯಾದವನು ಮತ್ತನಾದವನೇ, ಇತಿ= ಎಂದು, ತಚ್ಛಾಸ್ತ್ರಂ= ಆ ಶಾಸ್ತ್ರವು, ಉನ್ಮತ್ತಸ್ಯ

ಜಲ್ಪಿತಂ= ಹುಚ್ಚರ ಪ್ರಲಾಪವಾಗಿ, ಸ್ಯಾತ್= ಆದೀತು, ಸ್ವರೂಪೈಕ್ಯೇ= ಸ್ವರೂಪೈಕ್ಯವಿದ್ದರೆ, ಗಮ್ಯಾಗಮ್ಯವಿಭಾಗಶ್ಚ= ಇವಳು ಗಮ್ಯಳು, ಇವಳು ಗಮ್ಯಳಲ್ಲ ಎಂಬ ವಿಭಾಗವು, ಕಥಂ= ಹೇಗೆ ಉಂಟಾಗುತ್ತದೆ ಎಂದು, ವದ= ಹೇಳು.

**ಅನುವಾದ–** **ಸೊಸೆಯೂ ಹೆಂಡತಿ, ತಾಯಿಯೂ ಹೆಂಡತಿ (ಹೆಂಡತಿಯು ತಾಯಿ) ಹಸುವು ಒಂದು ಹೆಣ್ಣು ನಾಯಿ, ವಿವೇಕಿಯಾದವನೂ ಒಬ್ಬ ಪಾನಮತ್ತನೇ ಎಂದಾಗುವುದರಿಂದ ಆ ಶಾಸ್ತ್ರವು ಹುಚ್ಚರ ಪ್ರಲಾಪದಂತೆ ಆಗುತ್ತದೆ. ಸ್ವರೂಪೈಕ್ಯವಿದ್ದರೆ ಇವಳು ಗಮ್ಯಳು, ಇವಳು ಅಗಮ್ಯಳು ಎಂಬ ವಿಭಾಗವು ಹೇಗೆ ಉಂಟಾಗುತ್ತದೆ ಎಂದು ಹೇಳು.**

**ಭಾವವಿಲಾಸಿನೀ–** ಸರ್ವಸಂಕರಮೇವ ದರ್ಶಯತಿ ॥ **ಸ್ನುಷಾ ಚೇತ್ಯಾದಿನಾ** ॥ ತಚ್ಛಾಸ್ತ್ರಂ ಮಾಯಾವಾದಿಶಾಸ್ತ್ರಮ್ । ಶಾಸ್ತ್ರಕರ್ತುರೇವ ಮತ್ತಾಭಿನ್ನತ್ವಾದಿತಿ ಭಾವಃ ॥ ೬೫೬-೬೫೭ ॥

**ವಿವರಣೆ–** ಹಿಂದಿನ ಶ್ಲೋಕದಲ್ಲಿ ಹೇಳಿದ ಸರ್ವಸಂಕರವನ್ನೇ ಈ ಶ್ಲೋಕದಲ್ಲಿಯೂ ಮತ್ತು ಮುಂದಿನ ಶ್ಲೋಕದಲ್ಲಿಯೂ ಸ್ಪಷ್ಟಪಡಿಸಿದ್ದಾರೆ.

**ಶಾಸ್ಯಾಶಾಸ್ಯವಿಭಾಗಶ್ಚ ವಧ್ಯಘಾತಕತಾ ತಥಾ ।**
**ಸ್ಪೃಶ್ಯಾಸ್ಪೃಶ್ಯವಿಭಾಗಾದಿ ಸರ್ವೈಕ್ಯೇ ನೈವ ಶೋಭತೇ ॥ ೬೫೮ ॥**

**ಅರ್ಥ–** ಸರ್ವೈಕ್ಯೇ= ಸರ್ವೈಕ್ಯವನ್ನು ಅಂಗೀಕರಿಸಿದರೆ, ಶಾಸ್ಯಾಶಾಸ್ಯವಿಭಾಗಶ್ಚ= ಇವನು ಶಿಷ್ಯ, ಇವನು ಗುರು ಎಂಬ ವಿಭಾಗವೂ, ತಥಾ= ಹಾಗೆಯೇ, ವಧ್ಯಘಾತಕತಾ= ಇವನು ಘಾತಕ, ಇವನು ವಧ್ಯ ಎಂಬ ವಿಭಾಗವೂ, ಸ್ಪೃಶ್ಯಾಸ್ಪೃಶ್ಯವಿಭಾಗಾದಿಃ= ಇದು ಸ್ಪೃಶ್ಯ, ಇದು ಅಸ್ಪೃಶ್ಯ ಎಂಬ ವಿಭಾಗಾದಿಗಳೂ, ನೈವ ಶೋಭತೇ= ಶೋಭಿಸುವುದಿಲ್ಲ.

**ಅನುವಾದ–** **ಸರ್ವೈಕ್ಯವನ್ನು ಅಂಗೀಕರಿಸಿದರೆ ಇವನು ಶಿಷ್ಯ, ಇವನು ಗುರು ಎಂಬ ವಿಭಾಗವಾಗಲೀ, ಇವನು ಕೊಲ್ಲಲ್ಪಡುವವನು, ಇವನು ಕೊಲ್ಲುವವನು ಎಂಬ ವಿಭಾಗವಾಗಲೀ, ಇದನ್ನು ಮುಟ್ಟಬಹುದು, ಇದನ್ನು ಮುಟ್ಟಬಾರದು ಎಂಬುದಾಗಲೀ ಯಾವುದೂ ಉಪಪನ್ನವಾಗುವುದಿಲ್ಲ.**

**ಭಾವವಿಲಾಸಿನೀ–** ಶಾಸ್ಯಂ ಶಿಕ್ಷ್ಯಮ್ । ಅಶಾಸ್ಯಂ ರಕ್ಷ್ಯಮ್ ॥ ೬೫೮ ॥

**ದೇಹಾಂತಃಕರಣಾದೀನಾಂ ಭೇದಾಭೇದೋ ಯದೀಷ್ಯತೇ ।**
**ಸುಪ್ತೌ ಸರ್ವಲಯಾತ್ ತರ್ಹಿ ಪ್ರಬುದ್ಧೋನ್ಯೋ ಭವೇತ್ ತವ॥ ೬೫೯॥**

**ಅತಃ ಪೂರ್ವಾನುಸಂಧಾನಂ ತಸ್ಯ ನ ಸ್ಯಾದ್ಧಿ ಕಿಂಚನ ।**
**ಸ್ಯಾಚ್ಚೇತ್ ಸರ್ವತ್ರ ಸರ್ವಸ್ಯಾಪ್ಯನುಸಂಧಾನಮಾಪತೇತ್ ॥ ೬೬೦ ॥**

**ಅರ್ಥ–** ಯದಿ= ಒಂದು ಪಕ್ಷ, ದೇಹಾಂತಃಕರಣಾದೀನಾಂ= ದೇಹ ಅಂತಕರಣ ಮೊದಲಾದವುಗಳಿಗೆ, ಭೇದಾಭೇದಃ= ಭೇದಾಭೇದಗಳು, ಇಷ್ಯತೇ= ಅಂಗೀಕರಿಸಲ್ಪಡುವುದಾದರೆ, ತರ್ಹಿ= ಆಗ, ಸುಪ್ತೌ= ಸುಷುಪ್ತಿಯಲ್ಲಿ, ಸರ್ವಲಯಾತ್= ದೇಹಾಂತ-ಕರಣಗಳ ಲಯ ಉಂಟಾಗುವುದರಿಂದ, ತವ= ನಿನ್ನ ರೀತಿಯಲ್ಲಿ, ಪ್ರಬುದ್ಧಃ= ಎಚ್ಚರಗೊಂಡವನು, ಅನ್ಯೋಭವೇತ್= ಇನ್ನೊಬ್ಬನೇ ಆಗಬೇಕು, ಅತಃ= ಆದ್ದರಿಂದ, ತಸ್ಯ= ಅವನಿಗೆ, ಪೂರ್ವಾನುಸಂಧಾನಂ= ತಾನು ಹಿಂದಿನ ದಿನದಲ್ಲಿ ಮಾಡಿದ ಕಾರ್ಯಗಳ ಅನುಸಂಧಾನವು, ಕಿಂಚನ= ಯಾವುದೂ ಸಹ, ನಸ್ಯಾದ್ಧಿ= ಇರಬಾರದಷ್ಟೇ, ಸ್ಯಾಚ್ಚೇತ್= ಹಿಂದಿನ ದಿನದ ಅನುಸಂಧಾನವಿರುವುದಾದರೆ, ಸರ್ವಸ್ಯಾಪಿ= ಎಲ್ಲರಿಗೂ, ಸರ್ವಸ್ಯ= ಎಲ್ಲರ, ಅನುಸಂಧಾನಂ= ಅನುಸಂಧಾನವು, ಆಪತೇತ್= ಉಂಟಾಗಲಿ ಎಂಬ ಆಪತ್ತಿಯು ಬರುತ್ತದೆ.

**ಅನುವಾದ–** ಒಂದು ಪಕ್ಷ ದೇಹಾಂತಕರಣಾದಿಗಳಿಗೆ ಭೇದಾಭೇದವನ್ನು ಒಪ್ಪುವುದಾದರೆ ಸುಷುಪ್ತಿಯಲ್ಲಿ ದೇಹಾಂತಕರಣಗಳಿಗೆ ಲಯವನ್ನು ಅಂಗೀಕರಿಸುವುದರಿಂದ ಸುಷುಪ್ತಿಯಿಂದ ಎಚ್ಚರಗೊಂಡವನು ಇನ್ನೊಬ್ಬನೇ ಆಗಬೇಕು. ಆದ್ದರಿಂದ ಅವನಿಗೆ ತಾನು ಹಿಂದೆ ಮಾಡಿದ ಯಾವ ಕಾರ್ಯದ ಅನುಸಂಧಾನವೂ ಇರಬಾರದಷ್ಟೇ? ಆವನಿಗೆ ಹಿಂದಿನ ಕಾರ್ಯದ ಅನುಸಂಧಾನವಿರುವುದಾದರೆ ಎಲ್ಲರಿಗೂ ಎಲ್ಲರ ಸುಖದುಃಖದ ಅನುಸಂಧಾನವು ಬರಲಿ ಎಂಬ ಆಪತ್ತಿಯು ಇದ್ದೇ ಇದೆ.

**ಭಾವವಿಲಾಸಿನೀ– ಶಂಕತೇ – ದೇಹಾಂತಃಕರಣೇತಿ ॥ ಉತ್ತರಮಾಹ – ಸುಪ್ತಾವಿತಿ ॥** ಸರ್ವಲಯಾತ್ ಸರ್ವೇಷಾಂ ಪೂರ್ವದೇಹಾಂತಃಕರಣಾದೀನಾಂ ಲಯಾತ್ । ಉಪಲಕ್ಷಣಂ ಚೈತತ್ । ಪುನಃ ಪ್ರಬೋಧೇ ದೇಹಾಂತರೋತ್ಪತ್ತೇರಿತ್ಯಪಿ ದ್ರಷ್ಟವ್ಯಮ್ । ತವ ಮತೇ ॥ ತಸ್ಯ ಪ್ರಬುದ್ಧಸ್ಯ । ಸ್ಯಾಚ್ಚೇತ್ ಪ್ರಬುದ್ಧಸ್ಯಾನುಸಂಧಾನಂ ಸ್ಯಾಚ್ಚೇತ್ । ಸರ್ವಸ್ಯ ಚಂಡಾಲ- ಪಶು-ಪಕ್ಷ್ಯಾದೇಃ । ಸರ್ವತ್ರ ಸರ್ವದೇಹೇಷು । ಅನುಸಂಧಾನಂ ಸುಖದುಃಖಾದ್ಯನುಸಂಧಾನಮ್ । ಉಪಲಕ್ಷಣಂ ಚೈತತ್ । ಪ್ರಾಗುಕ್ತೋ ಜಾತಿಸಂಕರಶ್ಚ ಸ್ಯಾದಿತಿ ದ್ರಷ್ಟವ್ಯಮ್ । ದೇಹಭೇದೇನ ಜಾತಿಭೇದೇ ಮಾಯಾವಾದಿಮತೇ ಸುಪ್ತೌ ಪೂರ್ವದೇಹವಿಲಯೇನ ಪ್ರಬೋಧೇ ದೇಹಾಂತರೋತ್ಪತ್ತ್ಯಾ ಚ ಪೂರ್ವದೇಹಕೃತಕಾರ್ಯಾದ್ಯನುಸಂಧಾನಂ ತದ್ದೇಹೇ ಸತಿ ಕೃತೋ-ಪನಯನಾದಿಸಂಸ್ಕಾರಶ್ಚ ಪ್ರಬೋಧೇ ದೇಹಾಂತರವತೋ ಜೀವಸ್ಯ ನ ಸ್ಯಾತ್ । ಅತಃ ಸ್ವರೂಪಾ-ಭೇದೇ ದೇಹಭೇದೋಽಕಿಂಚಿತ್ಕರ ಇತಿ ತತ್ರ ಪರೇಣ ವಕ್ತವ್ಯಮ್ । ಏವಂ ಸತಿ ಸ್ವರೂಪೈಕ್ಯೇ ದೇಹಭೇದಸ್ಯಾಪ್ರಯೋಜಕತ್ವಾತ್ ಸರ್ವಸ್ಯಾಪ್ಯನ್ಯೋನ್ಯಮನುಭೂಯಮಾನ ಸುಖದುಃಖಾದ್ಯ-ನುಸಂಧಾನಂ ಪೂರ್ವೋಕ್ತಜಾತಿ ಸಂಕರಶ್ಚ ಕಥಂ ನ ಸ್ಯಾದಿತಿ ಭಾವಃ ॥ ೬೫-೬೬॥

**ವಿವರಣೆ–** ಪರಸ್ಪರೈಕ್ಯವನ್ನು ಒಪ್ಪಿದರೆ ಇಲ್ಲಿ ದೋಷಾಂತರವನ್ನು ಹೇಳುತ್ತಾರೆ. ಅದ್ವೈತಿಗಳ ಮತದಂತೆ ಸುಷುಪ್ತ್ಯವಸ್ಥೆಯಲ್ಲಿ ಅವಿದ್ಯೆಯು ನಾಶವಾಗುವುದಿಲ್ಲ. ಆದರೆ

ದೇಹಾಂತಕರಣಗಳು ನಾಶವನ್ನು ಹೊಂದುತ್ತವೆ. ಆದ್ದರಿಂದ ಎಚ್ಚರಗೊಂಡವನಿಗೆ ಬರುವ ದೇಹ ಅಂತಕರಣಾದಿಗಳು ಮಲಗುವ ಮುಂಚೆ ಇದ್ದ ದೇಹಾಂತಕರಣಾದಿಗಳಲ್ಲ. ಆದ್ದರಿಂದ ಇಲ್ಲಿ ದೇಹಾಂತಕರಣಾದಿಗಳ ಭೇದವಿದೆ. ಪರಸ್ಪರ ಅನುಸಂಧಾನದ ಆಪತ್ತಿಯನ್ನು ಪರಿಹಾರ ಮಾಡಲು ಚೈತ್ರ ಮೈತ್ರಾದಿ ಜೀವರಿಗೆ ದೇಹಾಂತಕರಣಾದಿಭೇದವಿರುವುದರಿಂದ ಅನುಸಂಧಾನವು ಬರುವುದಿಲ್ಲ ಎಂದು ಹೇಳುವುದಕ್ಕಾಗಿ ಮಾಯಾವಾದಿಗಳು ದೇಹಾಂತಃಕರಣಾದಿ ಭೇದವನ್ನು ಅಂಗೀಕಾರ ಮಾಡಿದ್ದಾರೆ. ಆದರೆ ಇಲ್ಲಿ ಒಬ್ಬನೇ ಜೀವನಿಗೆ ಮೊದಲಿನ ದೇಹಾಂತಕರಣಾದಿಗಳು, ಅನಂತರದ ದೇಹಾಂತಕರಣಾದಿಗಳು ಭಿನ್ನವಾಗಿದ್ದರೂ ಸಹ ಅನುಸಂಧಾನವು ಬರುವುದು ಸಿದ್ಧವಾಗಿದೆ. ಆದ್ದರಿಂದ ಅಂತಹ ಅನುಸಂಧಾನವು ಬರದೇ ಹೋಗಲಿ ಎಂಬ ಆಪತ್ತಿಯನ್ನು ನಾವು ಕೊಡುತ್ತೇವೆ. ಅವನಿಗೆ ಅನುಸಂಧಾನವು ಬರುತ್ತದೆ ಎಂದು ಒಪ್ಪಿದರೆ, ದೇಹಾಂತಕರಣಾದಿಭೇದವಿದ್ದರೂ ಅನುಸಂಧಾನವು ಬರುತ್ತದೆ ಎಂದು ಒಪ್ಪಿದಂತಾಯಿತು. ಆದ್ದರಿಂದ ನಾವು ಮೊದಲು ಹೇಳಿದ ಎಲ್ಲ ಜೀವರಿಗೂ, ಎಲ್ಲರ ಸುಖದುಃಖ ಭೋಗಾಸಂಧಾನವೂ ಬರಲಿ ಎಂಬ ಆಪತ್ತಿಯು ಇದ್ದೇ ಇದೆ. ಏಕೆಂದರೆ ದೇಹಾಂತಕರಣಾದಿ ಭೇದವು ಅಪ್ರಯೋಜಕವಾದುದು ಎಂದು ಅಭಿಪ್ರಾಯ.

**ಪೂರ್ವೇಜನ್ಮನಿ ಚಂಡಾಲೋಪ್ಯನ್ಯಸ್ಮಿನ್ ವಿಪ್ರತಾಮಿಯಾತ್ ।**
**ಅತೋ ಜಾತಿವಿಭೇದೋಽಪಿ ಸ್ವರೂಪೈಕ್ಯೇ ನ ಭೇದಕೃತ್ ॥ ೬೬೧ ॥**

**ಅರ್ಥ–** ಪೂರ್ವೇಜನ್ಮನಿ= ಹಿಂದಿನ ಜನ್ಮದಲ್ಲಿ, ಚಂಡಾಲೋಪಿ= ಚಂಡಾಲನಾದವನೂ ಸಹ, ಅನ್ಯಸ್ಮಿನ್= ಇನ್ನೊಂದು ಜನ್ಮದಲ್ಲಿ, ವಿಪ್ರತಾಮಿಯಾತ್= ಬ್ರಾಹ್ಮಣನಾಗುತ್ತಾನೆ, ಅತಃ= ಆದ್ದರಿಂದ, ಸ್ವರೂಪೈಕ್ಯೇ= ಸ್ವರೂಪೈಕ್ಯವಿದ್ದರೆ, ಜಾತಿವಿಭೇದೋಪಿ= ಜಾತಿಭೇದವೂ ಸಹ, ನ ಭೇದಕೃತ್= ಭೇದವನ್ನು ಉಂಟುಮಾಡುವುದಿಲ್ಲ.

**ಅನುವಾದ–** ಹಿಂದಿನ ಜನ್ಮದಲ್ಲಿ ಯಾವನು ಚಂಡಾಲನಾಗಿರುತ್ತಾನೆಯೋ ಅವನೇ ಮುಂದಿನ ಜನ್ಮದಲ್ಲಿ ಬ್ರಾಹ್ಮಣನಾಗಬಹುದು. ಆದ್ದರಿಂದ ಜಾತಿಭೇದವೂ ಸಹ ಪರಸ್ಪರ ಭೇದವನ್ನು ಉಂಟುಮಾಡುವುದಿಲ್ಲ.

**ಭಾವವಿಲಾಸಿನೀ–** ಪ್ರಕಾರಾಂತೇಣಾಪಿ ಸ್ವರೂಪೈಕ್ಯೇ ದೇಹಭೇದೋಽಕಿಂಚಿತ್ಕರ ಇತ್ಯಾಹ – **ಪೂರ್ವೇತಿ ॥** ಯಥಾ ದೇಹಭೇದಸದ್ಭಾವೇಽಪಿ ಸ್ವರೂಪೈಕ್ಯಸತ್ತ್ವಾತ್ ಯ ಏವ ಪೂರ್ವಜನ್ಮನಿ ಚಂಡಾಲಃ ಸ ಏವಾಪರಜನ್ಮನಿ ವಿಪ್ರ ಇತ್ಯುಚ್ಯತೇ । ಏವಮೇಕಸ್ಮಿನ್‌ಜನ್ಮನ್ಯಪಿ ಸ್ವರೂಪೈಕ್ಯೇ ಸತಿ ದೇಹಭೇದಸ್ಯಾಕಿಂಚಿತ್ಕರತ್ವಾತ್ ಜಾತಿಭೇದೋಽಪಿ ನ ಸ್ಯಾತ್ । ಕಿಂತು ಯ ಏವ ಚಂಡಾಲಃ ಸ ಏವ ವಿಪ್ರ ಇತಿ ವ್ಯಪದೇಶಸ್ಸ್ಯಾದಿತಿ ಭಾವಃ ॥ ೬೬೧ ॥

**ವಿವರಣೆ–** ಸ್ವರೂಪೈಕ್ಯವನ್ನು ಒಪ್ಪಿದರೆ ದೋಷಾಂತರವನ್ನು ಹೇಳುತ್ತಾರೆ. ಸ್ವರೂಪೈಕ್ಯವಿದ್ದರೆ ಪರಸ್ಪರ ಅನುಸಂಧಾನವು ಬರುವುದಕ್ಕೆ ದೇಹಭೇದವು

ಪ್ರಯೋಜಕವಾಗುವುದಿಲ್ಲ ಎಂಬ ಅಂಶವನ್ನು ಇಲ್ಲಿ ಇನ್ನೊಂದು ರೀತಿಯಲ್ಲಿ ಉಪಪಾದನೆ ಮಾಡುತ್ತಾರೆ. ಒಬ್ಬನೇ ಜೀವನಿಗೆ ಒಂದು ಜನ್ಮದಲ್ಲಿ ಚಂಡಾಲಶರೀರವೂ, ಇನ್ನೊಂದು ಜನ್ಮದಲ್ಲಿ ಬ್ರಾಹ್ಮಣ ಶರೀರವೂ ಬರುತ್ತದೆ. ಆ ಶರೀರ ಭೇದವಿದ್ದರೂ ಅಲ್ಲಿ ಜೀವಭೇದವಿಲ್ಲ. ಎರಡೂ ಶರೀರಗಳಲ್ಲಿ ಉಂಟಾಗುವ ಸುಖದುಃಖದ ಅನುಸಂಧಾನವು ಆ ಒಬ್ಬ ಜೀವನಿಗೆ ಇದ್ದೇ ಇದೆ. ಒಂದೇ ಕಾಲದಲ್ಲಿ ಅನುಸಂಧಾನ ಬರಲಿ ಎಂದು ನಮ್ಮದೇನೂ ಆಪತ್ತಿಯಿಲ್ಲ. ಅದರಂತೆ ಎಲ್ಲ ಜೀವರಿಗೂ ಪರಸ್ಪರ ಐಕ್ಯವಿದ್ದರೆ, ದೇಹಭೇದ, ಅಂತಃಕರಣಭೇದ ಮೊದಲಾದವುಗಳು ಅಪ್ರಯೋಜಕವಾದುದರಿಂದ ಪರಸ್ಪರ ಸುಖದುಃಖಾದಿ ಅನುಸಂಧಾನವು ಬರಲಿ ಎಂಬ ನಮ್ಮ ಆಪತ್ತಿಯು ಹಾಗೆಯೇ ಉಳಿಯುತ್ತದೆ.

**ದೇಹಮಾತ್ರವಿಭೇದೋಯಮಕಿಂಚಿತ್ಕರ ಏವ ಹಿ ।**
**ದೇಹಭೇದಸ್ಯ ವೈಫಲ್ಯೇ ಕರ್ಮಭೇದೇನ ಕಿಂ ಫಲಂ ।**
**ದೇಹೋ ಹಿ ಕರ್ಮಣಾಂ ಮೂಲಂ ಛಿನ್ನಮೂಲತರುರ್ಹ್ಯಯಂ ॥ ೬೬೨॥**

**ಅರ್ಥ–** ಅಯಂ ದೇಹಮಾತ್ರವಿಭೇದಃ= ಈ ಕೇವಲ ದೇಹದ ಭೇದವು, ಅಕಿಂಚಿತ್ಕರ ಏವ ಹಿ= ಅಪ್ರಯೋಜಕವೇ ಆಗಿದೆಯಷ್ಟೇ, ದೇಹಭೇದಸ್ಯ ವೈಫಲ್ಯೇ= ದೇಹಭೇದವೇ ವ್ಯರ್ಥವಾದಾಗ, ಕರ್ಮಭೇದೇನ= ಕರ್ಮಭೇದದಿಂದ, ಕಿಂ ಫಲಂ= ಏನು ಪ್ರಯೋಜನ, ದೇಹಃ= ದೇಹವೇ, ಕರ್ಮಣಾಂ ಮೂಲಂ ಹಿ= ಕರ್ಮಗಳಿಗೆ ಮೂಲವಷ್ಟೇ, ಅಯಂ= ಈ ಕರ್ಮಭೇದವು, ಛಿನ್ನಮೂಲತರುರ್ಹಿ= ಬುಡವನ್ನು ಕತ್ತರಿಸಿದ ವೃಕ್ಷವಷ್ಟೇ.

**ಅನುವಾದ–** ಕೇವಲ ದೇಹಭೇದವು ಅನುಸಂಧಾನ ಬರದಂತೆ ಮಾಡಲು ಅಸಮರ್ಥವಾದುದರಿಂದ ಅಪ್ರಯೋಜಕವಾಗಿದೆಯಷ್ಟೇ? ದೇಹಭೇದವೇ ವ್ಯರ್ಥವಾದಾಗ ಕರ್ಮದಿಂದ ಏನು ಪ್ರಯೋಜನ? ದೇಹವೇ ಕರ್ಮಗಳಿಗೆ ಮೂಲವಷ್ಟೇ? ಈ ಕರ್ಮಭೇದವೆಂಬುದು ಬುಡವನ್ನು ಕಡಿದ ವೃಕ್ಷವಿದ್ದಂತೆ.

**ಭಾವವಿಲಾಸಿನೀ–** ಕರ್ಮಭೇದಾದ್ಭೇದೋ ಭವತೀತಿ ಪಕ್ಷಮಪಿ ಪರಿಹರತಿ – **ದೇಹಭೇದಸ್ಯೇತಿ** ॥ ಸರ್ವೋಽಪಿ ದೇಹಃ ಸರ್ವಸ್ಯ ಚೇತ್ ತತ್ತದ್ದೇಹಕೃತಕರ್ಮಾಪಿ ಕಥಂ ನ ಸರ್ವಸ್ಯ ಸ್ಯಾದಿತಿ ಭಾವಃ । ತದೇವ ದರ್ಶಯತಿ – **ದೇಹೋ ಹೀತಿ** ॥ ಮೂಲೀಭೂತದೇಹಭೇದಸ್ಯೈವ ವ್ಯರ್ಥೀಕರಣಾಚ್ಛಿನ್ನ ಮೂಲತರುರಿತ್ಯುಕ್ತಮ್ । ಅಯಂ ಕರ್ಮಭೇದಃ ॥ ೬೬೨ ॥

**ವಿವರಣೆ–** ಕರ್ಮಭೇದವಿರುವುದರಿಂದ ಪರಸ್ಪರ ಅನನುಸಂಧಾನ ಉಂಟಾಗುತ್ತದೆ ಎಂಬ ಪಕ್ಷವನ್ನು ಇಲ್ಲಿ ದೂಷಿಸುತ್ತಾರೆ. ದೇಹಭೇದವು ಅಪ್ರಯೋಜಕವಾದಾಗ ಆ ದೇಹದಿಂದ ಉಂಟಾಗುವ ಕರ್ಮವೂ ಅಪ್ರಯೋಜಕವಾಗುತ್ತದೆ. ಸ್ವರೂಪೈಕ್ಯವಿದ್ದಾಗ ಹೇಗೆ ಎಲ್ಲ ದೇಹಗಳೂ ಒಂದೇ ಜೀವನಿಗೆ ಸೇರಿದವಾಗುತ್ತವೆಯೋ, ಅದರಂತೆ ಎಲ್ಲ

ಕರ್ಮಗಳೂ ಒಬ್ಬನೇ ಜೀವನಿಗೆ ಸಂಬಂಧಿಸಿದವುಗಳಾಗುತ್ತವೆ. ಆದ್ದರಿಂದ ಆ ಎಲ್ಲಾ ಕರ್ಮಫಲವಾದ ಎಲ್ಲ ಸುಖದುಃಖದ ಅನುಸಂಧಾನವು ಒಬ್ಬನೇ ಜೀವನಿಗೆ ಬರಲಿ ಎಂಬ ಆಪತ್ತಿಯು ಇದ್ದೇ ಇದೆ.

**ಶಿಷ್ಯಪಾಪಂ ಗುರೋಶ್ಚ ಸ್ಯಾತ್ ತತ್ಪುಣ್ಯಂ ಚ ಗುರೋರ್ಭವೇತ್ ।**
**ಅಪಿ ಸಂಬಂಧಮಾತ್ರೇಣ ಸ್ವರೂಪೈಕ್ಯೇ ಕಥಂ ನ ತತ್ ॥ ೬೬೩ ॥**

**ಅರ್ಥ–** ಅಪಿ ಸಂಬಂಧಮಾತ್ರೇಣ= ಕೇವಲ ಗುರುಶಿಷ್ಯಭಾವರೂಪವಾದ ಸಂಬಂಧ ಇರುವುದರಿಂದ, ಶಿಷ್ಯಪಾಪಂ= ಶಿಷ್ಯನ ಪಾಪವು, ಗುರೋಶ್ಚ= ಗುರುವಿಗೂ ಸಹ, ಸ್ಯಾತ್= ಉಂಟಾಗುತ್ತದೆ, ತತ್ಪುಣ್ಯಂ ಚ= ಶಿಷ್ಯನ ಪುಣ್ಯವೂ ಸಹ, ಗುರೋಃ= ಗುರುವಿಗೆ, ಭವೇತ್= ಉಂಟಾಗುತ್ತದೆ, ಸ್ವರೂಪೈಕ್ಯೇ= ಸ್ವರೂಪೈಕ್ಯವೇ ಇದ್ದರೆ, ತತ್= ಕರ್ಮಸಾಂಕರ್ಯವು, ಕಥಂ ನ= ಹೇಗೆ ಇರುವುದಿಲ್ಲ.

**ಅನುವಾದ–** **ಕೇವಲ ಗುರುಶಿಷ್ಯಭಾವರೂಪವಾದ ಸಂಬಂಧ ಇರುವುದರಿಂದ, ಶಿಷ್ಯನ ಪಾಪವೂ ಗುರುವಿಗೆ ಉಂಟಾಗುತ್ತದೆ ಮತ್ತು ಶಿಷ್ಯನ ಪುಣ್ಯವೂ ಗುರುವಿಗೆ ಉಂಟಾಗುತ್ತದೆ. ಹೀಗಿರುವ ಸ್ವರೂಪೈಕ್ಯವೇ ಇದ್ದರೆ, ಕರ್ಮಸಾಂಕರ್ಯವು ಹೇಗೆ ಬರದೇ ಇರಲು ಸಾಧ್ಯ?**

**ಭಾವವಿಲಾಸಿನೀ– ಯುಕ್ತ್ಯಂತರೇಣಾಪಿ ಕರ್ಮಸಾಂಕರ್ಯಮುಪಪಾದಯತಿ– ಶಿಷ್ಯೇತಿ ॥** ತತ್ಪುಣ್ಯಂ ಶಿಷ್ಯಪುಣ್ಯಮ್ । ಅಪಿಸಂಬಂಧಮಾತ್ರೇಣ ಗುರುಶಿಷ್ಯಭಾವಾಖ್ಯ- ಸಂಬಂಧ- ಮಾತ್ರೇಣಾಪೀತ್ಯರ್ಥಃ । ತತ್ಪುಣ್ಯಪಾಪಾದಿಕಮ್ । ಗುರುಶಿಷ್ಯಭಾವಾದಿ ಸಂಬಂಧ- ಮಾತ್ರೇಣಾಪ್ಯೇಕಸ್ಯ ಪಾಪಾದಿಕಮನ್ಯಸ್ಯ ಭವತೀತಿ ಶಿಷ್ಯಪಾಪಂ ಗುರೋರಪೀತ್ಯಾದಿಶಾಸ್ತ್ರೇ ಶ್ರೂಯತೇ । ಏವಂ ಸತಿ ಸ್ವರೂಪೈಕ್ಯೇ ಏಕಸ್ಯ ಕರ್ಮಾಪರಸ್ಯ ಕಥಂ ನ ಸ್ಯಾದಿತಿ ಭಾವಃ ॥೬೬೩॥

**ವಿವರಣೆ–** ಇನ್ನೊಂದು ಯುಕ್ತಿಯಿಂದಲೂ ಇಲ್ಲಿ ಕರ್ಮಸಾಂಕರ್ಯವನ್ನು ಉಪಪಾದನೆ ಮಾಡುತ್ತಾರೆ. ಲೋಕದ ಅನುಭವದಂತೆ ಗುರುಶಿಷ್ಯರು ಭಿನ್ನರು. ಆದ್ದರಿಂದ ಅವರಿಗೆ ಗುರುಶಿಷ್ಯಭಾವಸಂಬಂಧ ಮಾತ್ರ ಇದೆ. ಸ್ವರೂಪೈಕ್ಯವಿಲ್ಲ. ಆದರೂ ಶಿಷ್ಯನ ಪಾಪಪುಣ್ಯಗಳು ಗುರುವಿಗೆ ಉಂಟಾಗುತ್ತವೆ ಎಂಬುದು ಶಾಸ್ತ್ರಸಿದ್ಧವಾದುದು. ಹೀಗೆ ಚೈತನ್ಯಭೇದವಿದ್ದರೂ ಸಂಬಂಧಮಾತ್ರದಿಂದ ಪಾಪಪುಣ್ಯರೂಪವಾದ ಕರ್ಮಗಳ ಸಾಂಕರ್ಯವಿರುವಾಗ ಸ್ವರೂಪೈಕ್ಯವೇ ಇದ್ದರೆ ಕರ್ಮಸಾಂಕರ್ಯವು ಉಂಟಾಗುವುದಿಲ್ಲವೇನು?

**ಸ್ವರೂಪೈಕ್ಯಂ ಹಿ ಬಲವದ್ ಬಾಹ್ಯಭೇದೋಹಿ ದುರ್ಬಲಃ ।**
**ಜ್ವಲಜ್ಜ್ವಲನಮಧ್ಯಸ್ಥತೃಣತೂಲವಿಭೇದವತ್ ॥ ೬೬೪ ॥**

**ಅರ್ಥ–** ಸ್ವರೂಪೈಕ್ಯಂ= ಸ್ವರೂಪೈಕ್ಯವು, ಬಲವದ್ ಹಿ= ಪ್ರಬಲವಷ್ಟೇ, ಬಾಹ್ಯಭೇದಃ= ಮಿಥ್ಯಭೂತವಾದ ಭೇದವು, ಜ್ವಲಜ್ವ್ವಲನಮಧ್ಯಸ್ಥತೃಣತೂಲವಿಭೇದವತ್= ಉರಿಯುವ ಅಗ್ನಿಯ ಮಧ್ಯದಲ್ಲಿರುವ ತೃಣ ಮತ್ತು ಹತ್ತಿಗಳ ಭೇದದಂತೆ, ದುರ್ಬಲಃ ಹಿ= ದುರ್ಬಲವಷ್ಟೇ?

**ಅನುವಾದ–** ಸ್ವರೂಪೈಕ್ಯವು ಪ್ರಬಲವಷ್ಟೇ? ಮಿಥ್ಯಾಭೂತವಾದ ಭೇದವು ಉರಿಯುವ ಅಗ್ನಿಯ ಮಧ್ಯದಲ್ಲಿರುವ ತೃಣ ಮತ್ತು ಹತ್ತಿಗಳ ವಿಭಾಗದಂತೆ ದುರ್ಬಲವಷ್ಟೇ?

**ಭಾವವಿಲಾಸಿನೀ–** ತದೇವೋಪಪಾದಯತಿ– **ಸ್ವರೂಪೈಕ್ಯಮಿತಿ** ॥ ಬಲವತ್ ಪರಮಾರ್ಥಿಕತ್ವಾತ್ । ಬ್ರಹ್ಮಭೇದಃ ಮಿಥ್ಯಾಭೂತಭೇದಃ। ತತ್ರ ದೃಷ್ಟಾಂತಮಾಹ – **ಜ್ವಲಜ್ಜ್ವಲನೇತಿ** ॥ ಯಥಾ ಬಾಧಿತಜ್ವಲನ ಮಧ್ಯಸ್ಥಿತಬಾಧ್ಯಮಾನತೃಣತೂಲಾದಿಭೇದಸ್ಯಾಕಿಂಚಿತ್ಕಾರಮ್ । ಇದಂ ತೂಲಮಿದಂ ತೃಣಮಿತಿ ತತ್ರ ಯಥಾ ಭೇದೇನ ವ್ಯವಹಾರೋ ನ ಜಾಯತೇ ತಥೇತ್ಯರ್ಥಃ । ಉಪಲಕ್ಷಣಂ ಚೈತತ್ । ಅನಾರೋಪಿತ ಶುಕ್ತೇಃ ಕಾರ್ಯಕಾರಿತ್ವವತ್ತತ್ರಾರೋಪಿತರಜತಸ್ಯ ಕಾರ್ಯಕಾರಿತ್ವಾದರ್ಶನಾಚ್ಚೇತ್ಯಪಿ ದ್ರಷ್ಟವ್ಯಮ್ ॥ ೬೬೪ ॥

**ವಿವರಣೆ–** ಹಿಂದಿನ ಶ್ಲೋಕದಲ್ಲಿ ಹೇಳಿದುದನ್ನೇ ಇಲ್ಲಿ ಉಪಪಾದನೆ ಮಾಡುತ್ತಾರೆ. ಸ್ವರೂಪೈಕ್ಯವು ಪ್ರಬಲ ಎಂದರೆ ಪಾರಮಾರ್ಥಿಕ ಎಂದು ಅರ್ಥ. ಉರಿಯುವ ಅಗ್ನಿಯು ಬಾಧಕವಾಗಿದೆ. ಅದು ತೃಣ ಮತ್ತು ಹತ್ತಿ ಎರಡನ್ನೂ ಸುಡುವುದರಿಂದ ಬಾಧಿಸುತ್ತದೆ. ಆ ಅಗ್ನಿಯ ಮಧ್ಯದಲ್ಲಿ ಇರುವ ಹುಲ್ಲು ಮತ್ತು ಹತ್ತಿಗಳಿಗೆ ಸುಟ್ಟು ಬೂದಿಯಾಗುವುದರಲ್ಲಿ ಏನೂ ವ್ಯತ್ಯಾಸವಿಲ್ಲ. ಅಲ್ಲಿ ಹೇಗೆ ಬಾಧ್ಯಮಾನವಾದ ವಸ್ತುವಿನ ಭೇದವು ಅಪ್ರಯೋಜಕವೋ ಅದರಂತೆ ಸ್ವರೂಪೈಕ್ಯವು ಇದ್ದರೆ ಬಾಧ್ಯಮಾನವಾದ ಚೈತನ್ಯಭೇದವು ಅಪ್ರಯೋಜಕವಾದ ಕಾರಣದಿಂದ ಪರಸ್ಪರಾನುಸಂಧಾನವು ಮತ್ತು ಕರ್ಮ ಸಾಂಕರ್ಯವು ಉಂಟಾಗಬೇಕಾಗುತ್ತದೆ. ಶುಕ್ತಿಯಲ್ಲಿ ರಜತವನ್ನು ಆರೋಪ ಮಾಡಿದಾಗ ಅಬಾಧಿತವಾದ ಶುಕ್ತಿಯ ಕಾರ್ಯವು ಉಂಟಾಗುತ್ತದೆಯೇ ಹೊರತು ಬಾಧಿತವಾದ ರಜತಕಾರ್ಯವು ಉಂಟಾಗುವುದಿಲ್ಲವಷ್ಟೇ? ಆದ್ದರಿಂದ ಅಬಾಧಿತವಾದ ಸ್ವರೂಪೈಕ್ಯದ ಕಾರ್ಯವೇ ಉಂಟಾಗಲಿ ಎಂದು ಅಭಿಪ್ರಾಯ.

**ನ ಚೇದಧಿಷ್ಠಾನದೃಶಾ ಜೀವೋ ಜ್ಞಾನೀ ಕಥಂ ವದ ॥ ೬೬೫ ॥**

**ಅರ್ಥ–** ನ ಚೇತ್= ಸ್ವರೂಪೈಕ್ಯವು ಪ್ರಬಲವಾಗದಿದ್ದರೆ, ಅಧಿಷ್ಠಾನದೃಶಾ= ಅಧಿಷ್ಠಾನ ಚೈತನ್ಯದಿಂದ, ಜೀವಃ= ಜ್ಞಾತೃಚೈತನ್ಯವು, ಜ್ಞಾನೀ= ಜ್ಞಾನಿಯಾಗುವುದು, ಕಥಂ= ಹೇಗೆ ಎಂದು, ವದ= ಹೇಳು.

**ಅನುವಾದ–** ಸ್ವರೂಪೈಕ್ಯವೇ ಪ್ರಬಲವಾಗದಿದ್ದರೆ ಅಧಿಷ್ಠಾನಚೈತನ್ಯದಿಂದ ಜೀವಚೈತನ್ಯವು ಜ್ಞಾನಿಯಾಗುವುದು ಹೇಗೆ ಎಂದು ಹೇಳು.

**ಭಾವವಿಲಾಸಿನೀ–** ಉಪಾಧಿಭೇದಸದ್ಭಾವೇಽಪಿ ಸ್ವರೂಪೈಕ್ಯಸಾಮರ್ಥ್ಯೇನ ಕಾರ್ಯ-ಸಂಕರಾನಂಗೀಕಾರೇ ಪರಪ್ರಕ್ರಿಯಯೈವ ಬಾಧಕಮಾಹ–**ನ ಚೇದಿತಿ** ॥ ನ ಚೇತ್ಸ್ವರೂಪೈಕ್ಯಬಲೇನ ಕಾರ್ಯಂ ನಚೇತ್ । ಅಧಿಷ್ಠಾನದೃಶಾ ಗಟಾದ್ಯಾರೋಪಾಧಿಷ್ಠಾನಚೈತನ್ಯಜ್ಞಾನೇನ । ಜೀವಃ ದೇಹಾಧಿಷ್ಠಾತಾ ದೇವದತ್ತಾದಿಜೀವಃ । ಮಾಯಾವಾದಿನೋ ಹಿ ತತ್ರ ತತ್ರಾರೋಪಿತ-ಘಟಾದೇಸ್ತತ್ತದಧಿಷ್ಠಾನಚೈತನ್ಯಮೇವ ಜ್ಞಾನವಮ್ । ತದಭಿನ್ನತ್ವಾದ್ಘಟದೇಹಾದ್ಯುಪಾಧಿ ಭೇದಸದ್ಭಾವೇಽಪಿ ತೇನೈವ ಜ್ಞಾನೇನ ದೇವದತ್ತಾದೇರಪಿ ಜ್ಞಾನಿತ್ವಮಿತಿ ವದಂತಿ । ಉಪಾಧಿ ಭೇದೇಽಪಿ ಸ್ವರೂಪೈಕ್ಯಸಾಮರ್ಥ್ಯೇನ ನಾನಾಜಾತಿಕೃತಕಾರ್ಯಸಂಕರೋ ನಚೇತ್ ಅಯಮಪಿ ಜ್ಞಾನಸಂಕರೋ ನ ಸ್ಯಾತ್ । ಅಸ್ತಿ ಚಾಯಂ ಜ್ಞಾನಸಂಕರೋ ಮಾಯಿಮತೇ । ಅತಃ ಸಮಾನಾನ್ಯಾಯತ್ವಾತ್ ಜಾತಿಸಂಕರೋಽಪ್ಯಪರಿಹಾರ್ಯ ಇತಿ ಭಾವಃ ॥ ೬೬೫ ॥

**ವಿವರಣೆ–** ಉಪಾದಿಭೇದವಿದ್ದರೂ ಸ್ವರೂಪೈಕ್ಯದ ಬಲದಿಂದ ಕಾರ್ಯಸಂಕರವನ್ನು ಒಪ್ಪದಿದ್ದರೆ ಇಲ್ಲಿ ಪರರೀತಿಯಿಂದಲೇ ಬಾಧಕವನ್ನು ಹೇಳುತ್ತಾರೆ. ಅದ್ವೈತ ಮತದ ಪ್ರಕ್ರಿಯೆಯಂತೆ ಘಟಜ್ಞಾನವೆಂದರೆ ಘಟಾಧಿಷ್ಠಾನಚೈತನ್ಯ. ಜೀವ ಎಂದರೆ ಜ್ಞಾತೃಚೈತನ್ಯ, ಅದು ಅಂತಕರಣಾವಚ್ಛಿನ್ನ ಚೈತನ್ಯ. ಅಧಿಷ್ಠಾನಚೈತನ್ಯಕ್ಕೆ ಘಟವು ಉಪಾಧಿ, ಜ್ಞಾತೃಚೈತನ್ಯಕ್ಕೆ ಅಂತಕರಣವು ಉಪಾಧಿ. ಹೀಗೆ ಉಪಾಧಿಭೇದವಿದ್ದರೂ ಅಧಿಷ್ಠಾನ ಚೈತನ್ಯಕ್ಕೂ ಮತ್ತು ಜ್ಞಾತೃ ಚೈತನ್ಯಕ್ಕೂ ಅಭೇದವಿರುವ ಕಾರಣದಿಂದ ಅಧಿಷ್ಠಾನ ಚೈತನ್ಯವು ಅಭಿವ್ಯಕ್ತವಾದ ನಂತರ ಜ್ಞಾತೃ ಚೈತನ್ಯಕ್ಕೆ ಅಹಂ ಜ್ಞಾನೀ, ಮಯಾ ಜ್ಞಾತೋ ಘಟಃ ಎಂದು ಅನುಸಂಧಾನವು ಬರುತ್ತದೆ ಎಂದು ಹೇಳುತ್ತಾರೆ. ಇಲ್ಲಿ ಈ ಅನುಸಂಧಾನವನ್ನು ಕುರಿತು ಉಪಾಧಿ ಭೇದವಿದ್ದರೂ ಸ್ವರೂಪೈಕ್ಯವೇ ಹೇಗೆ ಪ್ರಯೋಜಕವೋ ಅದರಂತೆ ಸ್ವರೂಪೈಕ್ಯವನ್ನು ಒಪ್ಪಿದರೆ ಪರಸ್ಪರ ಅನುಸಂಧಾನವೂ ಕರ್ಮಸಂಕರವೂ ಬಂದೇ ಬರುತ್ತದೆ ಎಂದು ಅಭಿಪ್ರಾಯ.

ತಸ್ಮಾತ್ ಪೂರ್ವೋಕ್ತಮಾರ್ಗೇಣ ಜೀವಚೈತನ್ಯಮೇವ ತತ್ ।
ಭಿನ್ನಭಿನ್ನಮನಂತಂ ಚ ಭೋಗಭೇದಾಯ ಚೇಷ್ಯತೇ ॥ ೬೬೬ ॥

**ಅರ್ಥ–** ತಸ್ಮಾತ್= ಆದ್ದರಿಂದ, ಪೂರ್ವೋಕ್ತಮಾರ್ಗೇಣ= ಹಿಂದೆ ಹೇಳಿದ ಯೋನಿಭೇದಾದಿ ಪ್ರಕಾರಗಳಿಂದ, ಭಿನ್ನಭಿನ್ನಂ= ಭಿನ್ನಭಿನ್ನವಾದ, ಅನಂತಂ ಚ= ಮತ್ತು ಅನಂತವಾದ, ತತ್ ಜೀವಚೈತನ್ಯಮೇವ= ಆ ಜೀವಚೈತನ್ಯವೇ, ಭೋಗಭೇದಾಯ ಚ= ಭೋಗಭೇದ ರೂಪಕಾರ್ಯದಿಂದಲೂ ಸಹ, ಇಷ್ಯತೇ= ಸ್ವೀಕರಿಸಲ್ಪಡುತ್ತವೆ.

**ಅನುವಾದ–** ಆದ್ದರಿಂದ ಹಿಂದೆ ಹೇಳಿದ ಯೋನಿಭೇದಾದಿ ಪ್ರಕಾರದಿಂದ ಭಿನ್ನಭಿನ್ನವೂ ಮತ್ತು ಅನಂತವೂ ಆದ ಆ ಜೀವಚೈತನ್ಯವೇ ಭೋಗಭೇದರೂಪವಾದ ಕಾರ್ಯದ ಬಲದಿಂದಲೂ ಭಿನ್ನ ಭಿನ್ನ ಮತ್ತು ಅನಂತ ಎಂದು ಅಂಗೀಕರಿಸಲ್ಪಡಬೇಕಾಗುತ್ತದೆ.

**ಭಾವವಿಲಾಸಿನೀ**– ಉಪಸಂಹರತಿ – **ತಸ್ಮಾದಿತಿ** ॥ ಪೂರ್ವೋಕ್ತಮಾರ್ಗೇಣ ಯೋನಿಭೇದಾದಿ-ತ್ಯಾದಿಪೂರ್ವೋಕ್ತಮಾರ್ಗೇಣ ತಜ್ಜೀವಚೈತನ್ಯಮೇವೇತಿ ಸಂಬಂಧಃ । ಯಥಾ ಯೋನ್ಯಾದಿ-ಭೇದಾತ್ ಜೀವಾನಾಂ ಭೇದಸ್ತಥಾ ಭೋಗಭೇದಾಯ ಚ ಜೀವಭೇದೋ ವಕ್ತವ್ಯ ಇತಿ ಭಾವಃ ॥ ೬೬೬ ॥

**ವಿವರಣೆ**– ಇದುವರೆಗೆ ಹೇಳಿದ ಜೀವಭೇದವನ್ನು ಇಲ್ಲಿ ಉಪಸಂಹಾರ ಮಾಡುತ್ತಿದ್ದಾರೆ.

ಭೋಕ್ತೃಜೀವವಿಭೇದೇನ ಭೋಗಭೇದೋ ನ ಚಾನ್ಯಥಾ ।
ನ ಚೇದ್ ಗ್ರಹಗ್ರಸ್ತದೇಹಭವೋ ಭೋಗಃ ಕಥಂ ದ್ವಯೋಃ ॥ ೬೬೭ ॥

**ಅರ್ಥ**– ಭೋಕ್ತೃಜೀವವಿಭೇದೇನ= ಭೋಕ್ತೃಗಳಾದ ಜೀವರ ಭೇದದಿಂದಲೇ, ಭೋಗಭೇದಃ= ಭೋಗಭೇದವು ಉಂಟಾಗುತ್ತದೆ, ನ ಚಾನ್ಯಥಾ= ಬೇರೆ ರೀತಿಯಲ್ಲಿ ಉಂಟಾಗುವುದಿಲ್ಲ, ನ ಚೇತ್= ಹಾಗಲ್ಲದಿದ್ದರೆ, ಗ್ರಹಗ್ರಸ್ತದೇಹಭವಃ= ಪಿಶಾಚಗ್ರಸ್ತವಾದ ದೇಹದಲ್ಲಿ ಉಂಟಾದ, ಭೋಗಃ= ಭೋಗವು, ದ್ವಯೋಃ= ಇಬ್ಬರಿಗೆ, ಕಥಂ= ಹೇಗೆ ಉಂಟಾಗುತ್ತದೆ.

**ಅನುವಾದ**– ಭೋಕ್ತೃಗಳಾದ ಜೀವರ ಭೇದದಿಂದಲೇ ಭೋಗಭೇದವನ್ನು ಹೇಳಬೇಕು. ಬೇರೆ ರೀತಿಯಿಂದ ಹೇಳಲು ಸಾಧ್ಯವಿಲ್ಲ. ಹಾಗಿಲ್ಲದಿದ್ದರೆ ಪಿಶಾಚಗ್ರಸ್ತವಾದ ದೇಹದಲ್ಲಿ ಉಂಟಾಗುವ ಭೋಗವು ಹೇಗೆ ಇಬ್ಬರಿಗೆ ಉಂಟಾಗುತ್ತದೆ?

**ಭಾವವಿಲಾಸಿನೀ**– ಚೈತನ್ಯಭೇದೇನೈವ ಭೋಗಭೇದೋ ವಕ್ತವ್ಯೋ ನತು ದೇಹಭೇದಾದಿನೇತ್ಯತ್ರ ಸರ್ವಾನುಭವಸಿದ್ಧಂ ಯುಕ್ತ್ಯಂತರಂ ಚಾಹ – **ನ ಚೇತ್ ಗ್ರಹಗ್ರಸ್ತೇತಿ** ॥ ದ್ವಯೋರ್ಗ್ರಹಾವೇಶೇ ಸತಿ ಗ್ರಹಸ್ಯೈವ ಅನ್ಯದಾದೇಹಸ್ಥಿತಜೀವಸ್ಯೇತಿ ವ್ಯವಸ್ಥಾಭೇದೇನ ದ್ವಯೇರಿತ್ಯರ್ಥಃ । ಅತಃ ಚೈತನ್ಯಭೇದ ನಿಮಿತ್ತ ಏವ ಭೋಗಭೇದೋ ನ ದೇಹಭೇದನಿಮಿತ್ತ ಇತಿ ಭಾವಃ ॥ ೬೬೭ ॥

**ವಿವರಣೆ**– ಭೋಗಭೇದವನ್ನು ಕುರಿತು ಚೈತನ್ಯಭೇದವೇ ಪ್ರಯೋಜಕವೇ ಹೊರತು ದೇಹಭೇದವು ಪ್ರಯೋಜಕವಲ್ಲ ಎಂಬ ವಿಷಯದಲ್ಲಿ ಸರ್ವಾನುಭವಸಿದ್ಧವಾದ ಯುಕ್ತಿಯನ್ನು ಇಲ್ಲಿ ಹೇಳುತ್ತಾರೆ. ಪಿಶಾಚಿಗ್ರಸ್ತವಾದ ದೇಹದಲ್ಲಿ ಪಿಶಾಚಿ ಮತ್ತು ಜೀವ ಇಬ್ಬರೂ ಇದ್ದಾರೆ. ಆ ದೇಹದಲ್ಲಿ ಉಂಟಾಗುವ ಭೋಗವು ಕೆಲವು ಬಾರಿ ಪಿಶಾಚಕ್ಕೂ, ಕೆಲವು ಬಾರಿ ಆ ಜೀವಕ್ಕೂ ಉಂಟಾಗುತ್ತದೆ. ಇಲ್ಲಿ ಉಪಾಧಿಯಾದ ದೇಹದ ಭೇದವಿಲ್ಲದಿರುವುದರಿಂದ ಭೋಗದ ಭೇದವು ಹೇಗೆ ಉಂಟಾಯಿತು ಎಂದು ಆಕ್ಷೇಪವನ್ನು ಮಾಡಿ ಸ್ವರೂಪೈಕ್ಯವೇ ಭೋಗ ಪ್ರಯೋಜಕ ಎಂದು ಉಪಪಾದಿಸುತ್ತಾರೆ.

ಯದ್ಯಪ್ಯಸ್ತಿ ಪಿಶಾಚಸ್ಯ ದೇಹೋನ್ಯಃ ಸ ತು ನಿಷ್ಫಲಃ ।
ತಸ್ಮಿನ್ ದೇಹೇ ತದಕ್ಷೇಣ ತಚ್ಚಿತ್ತೇನ ಹಿ ತತ್ಸುಖಂ ॥ ೬೬೮ ॥

**ಅರ್ಥ–** ಯದ್ಯಪಿ= ಯದ್ಯಪಿ, ಪಿಶಾಚಸ್ಯ= ಪಿಶಾಚಿಗೆ, ಅನ್ಯಃ ದೇಹಃ ಅಸ್ತಿ= ಇನ್ನೊಂದು ದೇಹವಿದೆ, ಸ ತು= ಆದರೂ ಅದು, ನಿಷ್ಫಲಃ= ಅಪ್ರಯೋಜಕವಾದುದು, ಏಕೆಂದರೆ, ತಸ್ಮಿನ್ ದೇಹೇ= ಆ ದೇಹದಲ್ಲಿ, ತದಕ್ಷೇಣ= ಆ ಜೀವನ ಇಂದ್ರಿಯದಿಂದ, ತಚ್ಚಿತ್ತೇನ= ಆ ಜೀವನ ಅಂತಃಕರಣದಿಂದ, ತತ್ಸುಖಂ ಹಿ= ಆ ಪಿಶಾಚಿಗೆ ಸುಖವುಂಟಾಗುವುದಷ್ಟೇ.

**ಅನುವಾದ–** ಯದ್ಯಪಿ ಪಿಶಾಚಿಗೆ ಇನ್ನೊಂದು ದೇಹವಿದೆ. ಆದರೆ ಆ ದೇಹವು ನಿಷ್ಪ್ರಯೋಜಕ. ಏಕೆಂದರೆ ಆ ದೇಹದಲ್ಲಿ ಇರುವ ಜೀವನ ಇಂದ್ರಿಯ ಮತ್ತು ಅಂತಃಕರಣದಿಂದಲೇ ಅದು ಸುಖವನ್ನು ಅನುಭವಿಸುತ್ತದೆ.

**ಭಾವವಿಲಾಸಿನೀ–** ನನು ಪಿಶಾಚಸ್ಯ ಪೈಶಾಚೋ ದೇಹೋಽಸ್ತಿ ಕಥಂ ಜೀವಭೇದೇನ ಭೋಗ ಇತ್ಯತ ಆಹ – **ಯದ್ಯಪೀತಿ** ॥ ಸ್ವೇನ ದೇಹೇನ ಭೋಕ್ತುಮಸಾಮರ್ಥ್ಯಾದೇವ ಹಿ ಪಿಶಾಚಃ ಪರದೇಹಂ ಪ್ರವಿಶ್ಯ ಭುಂಕ್ತೇ । ಅತಃ ಸ್ವದೇಹಸ್ತತ್ರ ವ್ಯರ್ಥ ಇತ್ಯರ್ಥಃ । ಕಥಂ ತರ್ಹಿ ಭೋಗ ಇತ್ಯತ ಆಹ – **ತಸ್ಮಿನ್‌ದೇಹ ಇತಿ** ॥ ತಸ್ಮಿನ್‌ದೇಹೇ ಜೀವದೇಹೇ । ತದಕ್ಷೇಣ ಜೀವಚಕ್ಷು-ರಾದೀಂದ್ರಿಯೇಣ । ತಚ್ಚಿತ್ತೇನ ತಜ್ಜೀವಮನಸಾ। ತತ್ ಸುಖಂ ಪಿಶಾಚೇನಾನು ಭೂಯಮಾನ-ಸುಖಂ ಭವತೀತಿ ಯೋಜನಾ । ಅನ್ಯಥಾ ತದ್ದೇಹೇನಭೋಜನರಮಣಾದಿಕಂ ವ್ಯರ್ಥಂ ಸ್ಯಾತ್ । ಅತಸ್ತದ್ದೇಹೇ ತದಿಂದ್ರಿಯೇಣ ತಚ್ಚಿತ್ತೇ ಜಾತಮೇವ ತತ್ ಸುಖಮಿತಿ ಭಾವಃ ॥ ೬೬೮ ॥

**ವಿವರಣೆ–** ಪಿಶಾಚಿಯ ದೇಹವು ಬೇರೆ ಮತ್ತು ಜೀವನ ದೇಹವು ಬೇರೆ ಇರುವಾಗ ಇಲ್ಲಿ ಉಪಾದಿಭೇದವು ಏಕಿಲ್ಲ ಎಂಬ ಶಂಕೆಗೆ ಇಲ್ಲಿ ಉತ್ತರವನ್ನು ಹೇಳುತ್ತಾರೆ. ಯದ್ಯಪಿ ಪಿಶಾಚಿಗೆ ಜೀವನ ದೇಹಕ್ಕಿಂತ ಭಿನ್ನವಾದ ಒಂದು ವಾಯುಶರೀರವಿದೆ. ಆದರೆ ಆ ಶರೀರದಿಂದ ಅದು ಭೋಗವನ್ನು ಪಡೆಯಲಾರದು. ಯಾವ ಜೀವನನ್ನು ಪ್ರವೇಶಿಸುತ್ತದೆಯೋ, ಆ ಜೀವನ ದೇಹದಲ್ಲಿ ಉಂಟಾದ ಭೋಗವನ್ನೇ ಆ ಜೀವನ ಇಂದ್ರಿಯ ಮತ್ತು ಅಂತಃಕರಣಗಳ ಮೂಲಕ ಅದು ಭೋಗಿಸುತ್ತದೆ. ಆದ್ದರಿಂದ ಪಿಶಾಚಿಗೆ ಇರುವ ಇನ್ನೊಂದು ಶರೀರವು ಅಪ್ರಯೋಜಕ. ಇಲ್ಲಿ ಉಪಾದಿ ಭೇದವು ಇಲ್ಲ ಎಂದೇ ಅಭಿಪ್ರಾಯ.

ಅನ್ಯದೇಹೇಽನ್ಯಕರಣೈರನ್ಯಚಿತ್ತಸ್ಥಿತಂ ಸುಖಂ ।
ಪಿಶಾಚೋ ಹ್ಯನುಸಂಧತ್ತೇ ಸಾಕ್ಷಿಣಾ ಸ್ವೇನ ನಾಪರಃ ॥ ೬೬೯ ॥

**ಅರ್ಥ–** ಅನ್ಯದೇಹೇ= ಇನ್ನೊಬ್ಬನ ದೇಹದಲ್ಲಿ, ಅನ್ಯಕರಣೈಃ= ಇನ್ನೊಬ್ಬನ ಇಂದ್ರಿಯಗಳಿಂದ ಉಂಟಾದ, ಅನ್ಯಚಿತ್ತಸ್ಥಿತಂ= ಇನ್ನೊಬ್ಬನ ಅಂತಃಕರಣದಲ್ಲಿರುವ, ಸುಖಂ= ಸುಖವನ್ನು, ಪಿಶಾಚಃ= ಪಿಶಾಚಿಯು, ಸ್ವೇನ ಸಾಕ್ಷಿಣಾ= ತನ್ನ ಸಾಕ್ಷಿಯಿಂದ, ಅನುಸಂಧತ್ತೇಃ= ಅನುಸಂಧಾನ ಮಾಡುವುದಷ್ಟೇ, ಅಪರಃ= ಆ ಇನ್ನೊಬ್ಬ ಜೀವನು, ನ ಅನುಸಂಧತ್ತೇ ಹಿ= ಅನುಸಂಧಾನ ಮಾಡುವುದಿಲ್ಲವಷ್ಟೇ.

**ಅನುವಾದ–** ಪಿಶಾಚಿಯು ಯಾವ ಜೀವನ ಶರೀರವನ್ನು ಪ್ರವೇಶಿಸುತ್ತದೆಯೋ ಆ ಜೀವನ ದೇಹದಲ್ಲಿ ಅವನ ಇಂದ್ರಿಯಗಳಿಂದ, ಅವನ ಅಂತಃಕರಣದಲ್ಲಿ ಉಂಟಾದ ಅಂತಃಕರಣ ಪರಿಣಾಮರೂಪವಾದ ಸುಖವನ್ನು ತನ್ನ ಸಾಕ್ಷಿಯಿಂದ ತನ್ನದೆಂದು ಅನುಸಂಧಾನ ಮಾಡುತ್ತದೆ. ಆ ಜೀವನು ಮಾತ್ರ ಅನುಸಂಧಾನ ಮಾಡುವುದಿಲ್ಲ.

**ಭಾವವಿಲಾಸಿನೀ–** ಅಸ್ತ್ವೇವಂ ಪ್ರಕೃತಂ ಕಿಮಿತ್ಯತ ಆಹ – **ಅನ್ಯದೇಹ ಇತಿ** ॥ ಸ್ವೇನ ಸಾಕ್ಷಿಣಾ ಪಿಶಾಚಃ ಅನ್ಯಚಿತ್ತಸ್ಥಿತಂ ಸುಖಮನುಸಂಧತ್ತೇ । ಅಪರೋ ಜೀವಃ ನಾನುಸಂಧತ್ತೇ ಹಿ ॥ ೬೭೯ ॥

**ಪಿಶಾಚಾಪಗಮೇ ತಜ್ಜಂ ಸುಖಂ ಜೀವೋತ್ತಿ ನೇತರಃ ।**
**ತದ್ದ್ರಷ್ಟೃಸಾಕ್ಷಿಣೋರ್ಭೇದಾತ್ ಸಿದ್ಧಾ ಭೋಗವಿಚಿತ್ರತಾ ॥ ೬೮೦ ॥**

**ಅರ್ಥ–** ಪಿಶಾಚಾಪಗಮೇ= ಪಿಶಾಚಿಯು ಹೊರಟು ಹೋದ ಮೇಲೆ, ತಜ್ಜಂ ಸುಖಂ= ಆ ದೇಹದಲ್ಲಿ ಉಂಟಾದ ಸುಖವನ್ನು, ಜೀವೋತ್ತಿ= ಜೀವನು ಅನುಭವಿಸುತ್ತಾನೆ, ಇತರಃ ನ= ಪಿಶಾಚಿಯು ಅನುಭವಿಸುವುದಿಲ್ಲ, ತತ್= ಆದ್ದರಿಂದ, ದ್ರಷ್ಟೃಸಾಕ್ಷಿಣೋಃ ಭೇದಾತ್= ನೋಡುವವನಿಗೆ ಮತ್ತು ಸಾಕ್ಷಿಗೆ ಭೇದವಿರುವುದರಿಂದ, ಭೋಗವಿಚಿತ್ರತಾ= ಭೋಗಭೇದವು, ಸಿದ್ಧಾ= ಸಿದ್ಧವಾಯಿತು.

**ಅನುವಾದ–** ಪಿಶಾಚಿಯು ಹೊರಟು ಹೋದಮೇಲೆ ಆ ದೇಹದಲ್ಲಿ ಉಂಟಾಗುವ ಸುಖವನ್ನು ಜೀವನು ತನ್ನದೆಂದು ಅನುಭವಿಸುತ್ತಾನೆ. ಪಿಶಾಚಿಯು ಅನುಭವಿಸುವುದಿಲ್ಲ. ಹೀಗೆ ದ್ರಷ್ಟೃ ಮತ್ತು ಸಾಕ್ಷಿಗಳಿಗೆ ಭೇದವಿರುವುದರಿಂದ ಭೋಗವೈಚಿತ್ರ್ಯವು ಎಂದರೆ ಭೋಗಭೇದವು ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ತಜ್ಜಂ ದೇಹಜಮ್ । ಇತರಃ ಪಿಶಾಚಃ । ತತ್ತಸ್ಮಾತ್ । ದೇಹಾಂತಃಕರಣಾದೇರ್ಭೇದಾಭಾವಾತ್ । ಭೋಗವಿಚಿತ್ರತಾ ಸಿದ್ಧೇತಿ ಸಂಬಂಧಃ । ಏಕದೇಹಸ್ಥಿತಯೋರುಭಯೋರ್ಮಧ್ಯೇ ತದ್ದೇಹಾಂತಃಕರಣಜಂ ಸುಖಮೇಕೋಽನುಭವತಿ ಅಪರೋ ನಾನುಭವತೀತ್ಯೇತದ್ಭೇದಕಾಂತರಾಭಾವಾಚ್ಚೈತನ್ಯಭೇದಾದೇವೇತಿ ವಕ್ತವ್ಯಮಿತಿ ಭಾವಃ ॥೬೮೦॥

**ವಿವರಣೆ–** ದೇಹದಲ್ಲಿ ಪಿಶಾಚಿ ಇರುವಾಗ ಉಂಟಾಗುವ ಸುಖವನ್ನು ಪಿಶಾಚಿಯೇ ಅನುಭವಿಸುತ್ತದೆ. ಜೀವನು ಮೂಕನಾಗಿ ನೋಡುತ್ತಿರುತ್ತಾನೆ. ಪಿಶಾಚಿಯು ಹೊರಗೆ ಹೋದಮೇಲೆ ಆ ಸುಖವನ್ನು ಜೀವನು ಅನುಭವಿಸುತ್ತಾನೆ, ಪಿಶಾಚಿಯು ಹೊರಗಿನಿಂದ ಸುಮ್ಮನೆ ನೋಡುತ್ತಿರುತ್ತದೆ. ಹೀಗೆ ಒಂದೇ ದೇಹದಲ್ಲಿ ಉಂಟಾದ ಸುಖವನ್ನು ನೋಡುವವರು ಬೇರೆ, ಅನುಭವಿಸುವವರು ಬೇರೆ ಇರುವುದರಿಂದ ಒಂದೇ ದೇಹದಲ್ಲಿ ಭೋಗಭೇದವು ಸಿದ್ಧವಾಗುತ್ತದೆ.

**ಅತಃ ಸರ್ವಶರೀರೇಷು ಭಿದ್ಯಂತೇ ಭೋಗಸಾಕ್ಷಿಣಃ ।**
**ಸಾಕ್ಷೀ ಚೈತನ್ಯಮೇವೇತಿ ಜೀವಭೇದಸ್ತನೌ ಸ್ತನೌ ॥ ೬೮೧ ॥**

**ಅರ್ಥ–** ಅತಃ= ಆದ್ದರಿಂದ, ಸರ್ವಶರೀರೇಷು= ಎಲ್ಲ ಶರೀರಗಳಲ್ಲಿಯೂ, ಭೋಗಸಾಕ್ಷಿಣಃ= ಭೋಗವನ್ನು ಅನುಸಂಧಾನ ಮಾಡುವವರು, ಭಿದ್ಯಂತೇ= ಭಿನ್ನಭಿನ್ನರಾಗಿರುತ್ತಾರೆ, ಸಾಕ್ಷೀ= ಭೋಗವನ್ನು ಅನುಸಂಧಾನ ಮಾಡುವುದು, ಚೈತನ್ಯಮೇವೇತಿ= ಚೈತನ್ಯವೇ ಎಂಬ ಕಾರಣದಿಂದ, ತನೌ ತನೌ= ಬೇರೆ ಬೇರೆ ಶರೀರಗಳಲ್ಲಿ, ಜೀವಭೇದಃ= ಜೀವಭೇದವು ಸಿದ್ಧವಾಗುತ್ತದೆ.

**ಅನುವಾದ–** ಆದ್ದರಿಂದ ಪ್ರತಿಯೊಂದು ಶರೀರದಲ್ಲಿಯೂ ಭೋಗವನ್ನು ನನ್ನದು ಎಂದು ಅನುಸಂಧಾನ ಮಾಡುವವರು ಭಿನ್ನಭಿನ್ನರಾಗಿದ್ದಾರೆ. ಭೋಗಸಾಕ್ಷಿಯು ಎಂದರೆ ಭೋಗವನ್ನು ನನ್ನದು ಎಂದು ಅನುಸಂಧಾನ ಮಾಡುವ ವಸ್ತುವು ಚೈತನ್ಯವೇ ಆದ ಕಾರಣದಿಂದ ಬೇರೆ ಬೇರೆ ಶರೀರದಲ್ಲಿರುವ ಜೀವರು ಭಿನ್ನ ಭಿನ್ನರೆಂದು ಸಿದ್ಧವಾಗುತ್ತದೆ.

**ಭಾವವಿಲಾಸಿನೀ– ಅತಃ ಸಾಕ್ಷಿಭೇದಾದೇವ ಭೋಗಭೇದಸ್ಯ ದೃಷ್ಟತ್ವಾತ್ । ಸಾಕ್ಷೀ ಭೋಗಸಾಕ್ಷೀ । ಇತಿ ಹೇತೋಃ ॥ ೬೭೧ ॥**

**ವಿವರಣೆ–** ಸಾಕ್ಷಿಭೇದದಿಂದಲೇ ಭೋಗಭೇದವು ಉಂಟಾಗುವುದರಿಂದ ಸಾಕ್ಷಿ ಎಂದರೆ ಜೀವನೇ ಆಗುವುದರಿಂದ ಬೇರೆ ಬೇರೆ ಶರೀರದಲ್ಲಿರುವ ಜೀವರು ಭಿನ್ನ ಭಿನ್ನರಾದವರು ಎಂದು ತಾತ್ಪರ್ಯ.

**ಭಿನ್ನಭಿನ್ನಸ್ವಭಾವಾನಾಂ ವಾಕ್ಯಮಾತ್ರೇಣ ನಾಭಿದಾ ।**
**ಕಿಂ ಸಿಂಹೋ ದೇವದತ್ತಃ ಸ್ಯಾದಗ್ನಿರ್ಮಾಣವಕೋಽಪಿ ವಾ ॥ ೬೭೨ ॥**

**ಅರ್ಥ–** ಭಿನ್ನಭಿನ್ನಸ್ವಭಾವಾನಾಂ= ಭಿನ್ನ ಭಿನ್ನ ಸ್ವಭಾವವಿರುವ ಜೀವರಿಗೆ, ವಾಕ್ಯಮಾತ್ರೇಣ= ಕೇವಲ ವಾಕ್ಯದಿಂದ, ಅಭಿದಾ ನ= ಅಭೇದವು ಉಂಟಾಗುವುದಿಲ್ಲ, ಸಿಂಹಃ= ಸಿಂಹವು, ದೇವದತ್ತಃ ಕಿಂ ಸ್ಯಾತ್= ದೇವದತ್ತನಾಗುತ್ತದೆಯೇ, ಅಪಿ= ಮತ್ತು, ಅಗ್ನಿಃ= ಅಗ್ನಿಯು, ಮಾಣವಕಃ, ಸ್ಯಾತ್= ಮಾಣವಕನಾಗುತ್ತದೆಯೇ?

**ಅನುವಾದ–** ಭಿನ್ನ ಭಿನ್ನ ಸ್ವಭಾವವುಳ್ಳ ಚೇತನರಿಗೆ ಕೇವಲ ವಾಕ್ಯದ ಬಲದಿಂದ ಅಭೇದವು ಉಂಟಾಗುವುದಿಲ್ಲ. ಸಿಂಹವು ದೇವದತ್ತನಾಗುತ್ತದೆಯೇ ಮತ್ತು ಅಗ್ನಿಯು ಬ್ರಹ್ಮಚಾರಿಯಾಗುತ್ತದೆಯೇ?

**ಭಾವವಿಲಾಸಿನೀ–** ನನ್ವೇವಂ ಭಿನ್ನತಯಾಽನುಭೂಯಮಾನಾನಾಮಪಿ ಜೀವಾನಾಮೈಕ್ಯವಾಕ್ಯಬಲಾದಭೇದೋಽಂಗೀಕ್ರಿಯತ ಇತ್ಯತ ಆಹ – **ಭಿನ್ನಭಿನ್ನೇತಿ** ॥ ೬೭೨ ॥

**ವಿವರಣೆ–** ಅನುಭವಸಿದ್ಧವಾದ ಭೇದವಿರುವಾಗ ವಾಕ್ಯದ ಬಲದಿಂದ ಅಭೇದವು ಉಂಟಾಗುವುದಿಲ್ಲ ಎಂಬ ವಿಷಯದಲ್ಲಿ ಲೋಕಸಿದ್ಧವಾದ ಎರಡು ದೃಷ್ಟಾಂತಗಳನ್ನು

ಹೇಳುತ್ತಾರೆ. ಸಿಂಹೋ ದೇವದತ್ತಃ ಎಂಬ ಪ್ರಯೋಗವಿದೆ. ಆ ವಾಕ್ಯಕ್ಕೆ ಯಾರೂ ಸಿಂಹವು ದೇವದತ್ತ ಎಂದು ಅರ್ಥವನ್ನು ಹೇಳುವುದಿಲ್ಲ. ದೇವದತ್ತನು ಸಿಂಹಸದೃಶ ಎಂಬ ಅರ್ಥವನ್ನೇ ಹೇಳುತ್ತಾರೆ. ಹಾಗೆಯೇ ಅಗ್ನಿರ್ಮಾಣವಕಃ ಎಂಬ ವಾಕ್ಯಕ್ಕೂ ಅಗ್ನಿಯೇ ಮಾಣವಕ ಎಂಬ ಅರ್ಥವನ್ನು ಮಾಡುವುದಿಲ್ಲ. ಮಾಣವಕನು ಅಗ್ನಿ ಸದೃಶ ಎಂದೇ ಅರ್ಥವನ್ನು ಮಾಡುತ್ತಾರೆ. ಆದ್ದರಿಂದ ಭೇದವು ಸಿದ್ಧವಾಗಿರುವಾಗ ಅಭೇದವನ್ನು ಹೇಳುವ ವಾಕ್ಯವು ಭೇದವನ್ನು ನಿಷೇಧಿಸುವುದಿಲ್ಲ, ಗೌಣವಾದ ಅಭೇದವನ್ನು ಹೇಳುತ್ತದೆ ಎಂದು ಹೇಳಬೇಕು ಎಂದು ತಾತ್ಪರ್ಯ.

**ಹಂತ್ಯೇಕೋ ಹನ್ಯತೇ ಚಾನ್ಯೋ ಹಸತ್ಯೇಕಃ ಪ್ರರೋದಿತಿ ।**
**ದರಿದ್ರಾತಿ ಚ ನಿದ್ರಾತಿ ಧನೀ ಜಾಗರ್ತಿ ಚಾಪರಃ ॥ ೬೭೩ ॥**

**ಅರ್ಥ–** ಏಕಃ ಹಂತಿ= ಒಬ್ಬನು ಕೊಲ್ಲುತ್ತಾನೆ, ಅನ್ಯಶ್ಚ ಹನ್ಯತೇ= ಇನ್ನೊಬ್ಬನು ಕೊಲ್ಲಲ್ಪಡುತ್ತಾನೆ, ಏಕಃ ಹಸತಿ= ಒಬ್ಬನು ನಗುತ್ತಾನೆ, ಏಕಃ ಪ್ರರೋದಿತಿ= ಇನ್ನೊಬ್ಬನು ಅಳುತ್ತಾನೆ, ದರಿದ್ರಾತಿ ಚ ನಿದ್ರಾತಿ= ದರಿದ್ರನಾದ ಒಬ್ಬನು ನಿದ್ದೆಯನ್ನು ಮಾಡುತ್ತಾನೆ, ಅಪರಃ ಧನೀ ಜಾಗರ್ತಿ ಚ= ಇನ್ನೊಬ್ಬ ಧನಿಕನು ನಿದ್ದೆ ಇಲ್ಲದೇ ಎಚ್ಚರವಾಗಿರುತ್ತಾನೆ.

**ಅನುವಾದ–** ಒಬ್ಬನು ಕೊಲ್ಲುತ್ತಾನೆ ಇನ್ನೊಬ್ಬನು ಕೊಲ್ಲಲ್ಪಡುತ್ತಾನೆ. ಒಬ್ಬನು ನಗುತ್ತಾನೆ ಇನ್ನೊಬ್ಬನು ಅಳುತ್ತಾನೆ. ದರಿದ್ರನಾದ ಒಬ್ಬನು ಮಲಗಿ ನಿದ್ದೆಯನ್ನು ಮಾಡುತ್ತಾನೆ, ಧನಿಕನಾದ ಇನ್ನೊಬ್ಬನು ನಿದ್ದೆ ಇಲ್ಲದೇ ಎಚ್ಚರದಿಂದಲೇ ಇರುತ್ತಾನೆ.

**ಭಾವವಿಲಾಸಿನೀ–** ಜೀವನಾಮಪಿ ಭಿನ್ನಸ್ವಭಾಂವತ್ವಂ ದರ್ಶಯತಿ – **ಹಂತ್ಯೇಕ ಇತಿ** ॥ ಏಕಃ ದರಿದ್ರಾತಿ । ಏಕಃ ಧನೀ । ಏಕಃ ನಿದ್ರಾತಿ । ಅಪರಃ ಜಾಗರ್ತೀತಿ ಯೋಜನಾ । ತಸ್ಮಾದ್ಬಾಧಿತಾರ್ಥಂ ವಾಕ್ಯಮೇವಾನ್ಯಥಾ ಯೋಜನೀಯಮಿತಿ ಭಾವಃ ॥ ೬೭೩ ॥

**ವಿವರಣೆ–** ಹೀಗೆ ಸ್ವಭಾವ ಭೇದವು ಅನುಭವ ಸಿದ್ಧವಾಗಿರುವುದರಿಂದ ಐಕ್ಯವನ್ನು ಹೇಳುವ ವಾಕ್ಯಕ್ಕೆ ಬೇರೆ ರೀತಿಯಿಂದಲೇ ಯೋಜನೆಯನ್ನು ಮಾಡಬೇಕೆಂದು ಹೇಳುತ್ತಾರೆ.

**ಸರ್ವಂ ಬ್ರಹ್ಮೇತಿ ವಾಕ್ಯಾದ್ಧಿ ಕಿಂ ಸ್ಯಾದ್ಘಟಪಟಾಭಿದಾ ॥ ೬೭೪ ॥**

**ಅರ್ಥ–** ಹಿ= ಏಕೆಂದರೆ, ಸರ್ವಂ ಬ್ರಹ್ಮೇತಿ ವಾಕ್ಯಾತ್= ಸರ್ವಂ ಬ್ರಹ್ಮ ಎಂಬ ವಾಕ್ಯದಿಂದ, ಘಟಪಟಾಭಿದಾ= ಘಟಪಟಗಳಿಗೆ ಅಭೇದವು, ಕಿಂ ಸ್ಯಾತ್= ಆಗುತ್ತದೆಯೇ?

**ಅನುವಾದ–** ಏಕೆಂದರೆ 'ಸರ್ವಂ ಖಲ್ವಿದಂ ಬ್ರಹ್ಮ' ಎಂಬ ವಾಕ್ಯದಿಂದ ಘಟಪಟಗಳಿಗೆ ಅಭೇದ ಉಂಟಾಗುತ್ತದೆಯೇ?

**ಭಾವವಿಲಾಸಿನೀ–** ತ್ವಯಾಪ್ಯೈಕ್ಯವಾಕ್ಯಸ್ಯ ಬಾಧೇ ಸತ್ಯರ್ಥಾಂತರಮುಚ್ಯತ ಇತಿ ಪ್ರಾಗುಕ್ತ-ಮೇವಾರ್ಥಂ ಸ್ಮಾರಯತಿ – **ಸರ್ವಮಿತಿ** ॥ ಸರ್ವಶಬ್ದಸ್ಯಬಾಧಿತಜಡಾದಿವ ಬಾಧಿತಚೇತನಾದಪಿ ಸಂಕೋಚಂ ಕೃತ್ವಾಬಾಧಿತಭಗವದವತಾರಪರತ್ವೈವ ಕರ್ತವ್ಯೇತಿ ಭಾವಃ ॥ ೬೭೪ ॥

**ವಿವರಣೆ–** ನೀನೂ ಸಹ ಭೇದವು ಸಿದ್ಧವಾಗಿ ಐಕ್ಯವು ಬಾಧಿತವಾಗುವ ಸ್ಥಳದಲ್ಲಿ ಐಕ್ಯವನ್ನು ಹೇಳುವ ವಾಕ್ಯಕ್ಕೆ ಬೇರೆ ರೀತಿಯಲ್ಲಿ ಯೋಜನೆಯನ್ನು ಮಾಡುತ್ತೀಯೆ ಎಂಬುದನ್ನು ಪರವಾದಿಗೆ ಸ್ಮರಣೆಗೆ ತಂದುಕೊಡುತ್ತಾರೆ. ಸರ್ವಂ ಖಲ್ವಿದಂ ಬ್ರಹ್ಮ ಎಂಬ ವಾಕ್ಯವು ಎಲ್ಲ ಪದಾರ್ಥಕ್ಕೂ ಬ್ರಹ್ಮನಿಂದ ಐಕ್ಯವನ್ನು ಹೇಳಿದರೂ ಘಟಪಟಗಳಿಗೆ ಭೇದವು ಸಿದ್ಧವಾಗಿರುವುದರಿಂದ ಘಟಪಟಗಳಿಗೆ ಐಕ್ಯವನ್ನು ಹೇಳದೇ ಅಥವಾ ಘಟಪಟಕ್ಕೂ ಬ್ರಹ್ಮನಿಗೂ ಐಕ್ಯವನ್ನು ಹೇಳದೆ ಇಲ್ಲಿ ಐಕ್ಯವೆಂದರೆ ತದ್ವ್ಯತಿರೇಕೇಣ ಅಸತ್ವ ಎಂಬ ಅರ್ಥಾಂತರವನ್ನು ನೀನು ಮಾಡುತ್ತೀಯಷ್ಟೇ. ಅದರಂತೆ ಪ್ರಕೃತದಲ್ಲಿಯೂ ಅಭೇದವನ್ನು ಹೇಳುವ ವಾಕ್ಯಕ್ಕೆ ಅರ್ಥಾಂತರವನ್ನು ಹೇಳಬೇಕು ಎಂದು ತಾತ್ಪರ್ಯ.

**ಗುರುರೇವ ಗುರುರ್ಲೋಕೇ ಶಿಷ್ಯಃ ಶಿಷ್ಯಃ ಸ ಕಿಂ ಗುರುಃ ।**
**ಯದಿ ತಸ್ಯಾಪಿ ಗುರುತಾ ಸಾಪಿ ಶಿಷ್ಯಾಂತರಂ ಪ್ರತಿ ॥ ೬೭೫ ॥**

**ಅರ್ಥ–** ಲೋಕೇ= ಲೋಕದಲ್ಲಿ, ಗುರುರೇವ= ಗುರುವೇ, ಗುರುಃ= ಗುರುವಾಗುತ್ತಾನೆ, ಶಿಷ್ಯಃ= ಶಿಷ್ಯನು, ಶಿಷ್ಯಃ= ಶಿಷ್ಯನೇ ಆಗುತ್ತಾನೆ, ಸಃ= ಆ ಶಿಷ್ಯನು, ಗುರುಃ ಕಿಂ= ಗುರುವಾಗುತ್ತಾನೆಯೇ, ಯದಿ= ಒಂದು ಪಕ್ಷ, ತಸ್ಯಾಪಿ= ಆ ಶಿಷ್ಯನಿಗೂ ಕೂಡ, ಗುರುತಾ= ಗುರುತ್ವವಿರುವುದಾದರೆ, ಸಾಪಿ= ಆ ಗುರುತ್ವವೂ ಕೂಡ, ಶಿಷ್ಯಾಂತರಂ ಪ್ರತಿ= ಇನ್ನೊಬ್ಬ ಶಿಷ್ಯನನ್ನು ಕುರಿತು ಇರುತ್ತದೆ.

**ಅನುವಾದ–** ಲೋಕದಲ್ಲಿ ಗುರುವು ಗುರುವೇ ಶಿಷ್ಯನು ಶಿಷ್ಯನೇ. ಶಿಷ್ಯನು ಗುರುವಾಗುತ್ತಾನೆಯೇ? ಒಂದು ಪಕ್ಷ ಶಿಷ್ಯನು ಗುರುವಾದರೆ ಆ ಗುರುತ್ವವು ಇನ್ನೊಬ್ಬ ಶಿಷ್ಯನನ್ನು ಕುರಿತೇ ಇರುತ್ತದೆ.

**ಭಾವವಿಲಾಸಿನೀ–** ಶಬ್ದಸಾಮ್ಯೇऽಪಿ ಬಾಧಿತಮೈಕ್ಯಂ ನೈವೋಚ್ಯತ ಇತ್ಯತ್ರ ಲೌಕಿಕದೃಷ್ಟಾಂತಮಾಹ – **ಗುರುರೇವೇತಿ** ॥ ಕೇನಚಿಚ್ಛಿಷ್ಯಂ ಪ್ರತ್ಯಯಮಪಿ ಗುರುರಿತ್ಯುಕ್ತೇ ನಹಿ ತಸ್ಯ ಬಾಧಿತಂ ಸ್ವಗುರುಣೈವೈಕ್ಯಂ ಜ್ಞಾಯತೇ । ಕಿಂ ತ್ವಬಾಧಿತಾ ಸ್ವಶಿಷ್ಯಾಂತರಂ ಪ್ರತ್ಯೇವ ಗುರುತಾ ॥೬೭೫॥

**ವಿವರಣೆ–** ಶಬ್ದಸಾಮ್ಯದಿಂದ ಅರ್ಥದಲ್ಲಿ ಅಭೇದವು ಉಂಟಾಗುವುದಿಲ್ಲವೆಂದು ಇಲ್ಲಿ ಇನ್ನೊಂದು ದೃಷ್ಟಾಂತದಿಂದ ಉಪಪಾದನೆ ಮಾಡುತ್ತಾರೆ. ಒಬ್ಬ ಗುರುವು ತನ್ನ ಶಿಷ್ಯನನ್ನು ಗುರು ಎಂದು ಹೇಳಿದರೆ ಆ ಶಿಷ್ಯನು ಆ ಗುರುವಿನ ಗುರುವಾಗುವುದಿಲ್ಲವಷ್ಟೇ? ಅಥವಾ ಆ ಗುರುವೇ ಆಗುವುದಿಲ್ಲವಷ್ಟೇ? ಮತ್ತೇನೆಂದರೆ ಇನ್ನೊಬ್ಬ ಶಿಷ್ಯನನ್ನು ಕುರಿತು

ಅವನು ಗುರುವಾಗಿರುತ್ತಾನೆ ಎಂದೇ ಅರ್ಥ. ಆದ್ದರಿಂದ ಗುರುವೆಂಬ ಒಂದೇ ಶಬ್ದದ ಪ್ರಯೋಗವಿರುವ ಕಾರಣದಿಂದ ಶಿಷ್ಯನಿಗೆ ಹೇಗೆ ಗುರುವಿನಿಂದ ಅಭೇದವು ಬರುವುದಿಲ್ಲವೋ ಅದರಂತೆ ಪ್ರಕೃತದಲ್ಲಿಯೂ ತಿಳಿಯಬೇಕು.

**ಮಹಿಷೀ ಮಹಿಷೀ ಕಿಂ ಸ್ಯಾತ್ ಅಜಃ ಕಿಂ ಸ್ಯಾತ್ ಸ ಪದ್ಮಜಃ ।**
**ಬಲಿರ್ಬಲಿದ್ವಿಡಿಂದ್ರಃ ಕಿಂ ಸ್ವರ್ಗತೋ ನಿರ್ಗತೋऽಪಿ ವಾ ॥ ೬೭೬ ॥**

**ಅರ್ಥ–** ಮಹಿಷೀ= ಎಮ್ಮೆಯು, ಮಹಿಷೀ ಸ್ಯಾತ್ ಕಿಂ= ರಾಣಿಯಾಗುತ್ತದೆಯೇ, ಅಜಃ= ಹೋತವು, ಸಪದ್ಮಜಃ ಸ್ಯಾತ್ ಕಿಂ= ಬ್ರಹ್ಮನಾಗುತ್ತದೆಯೇ, ಸ್ವರ್ಗತಃ= ಸ್ವರ್ಗವನ್ನು ಪ್ರವೇಶಿಸಿದ, ನಿರ್ಗತೋऽಪಿ ವಾ= ಸ್ವರ್ಗದಿಂದ ಹೊರಗೆ ಬಂದ, ಬಲಿಃ= ಬಲಿಯು, ಬಲಿದ್ವಿಡಿಂದ್ರಃ ಕಿಂ= ಬಲಿಯ ವೈರಿಯಾದ ಇಂದ್ರನಾಗುತ್ತಾನೆಯೇ?

**ಅನುವಾದ–** ಮಹಿಷಿ ಎಂಬ ಒಂದೇ ಶಬ್ದವಿರುವುದರಿಂದ ಎಮ್ಮೆಯು ರಾಣಿಯಾಗುತ್ತದೆಯೇ? ಅಜ ಎಂಬ ಒಂದೇ ಶಬ್ದವಿರುವುದರಿಂದ ಹೋತವು ಆ ಬ್ರಹ್ಮನಾಗುತ್ತದೆಯೇ? ಸ್ವರ್ಗತಃ ಅಥವಾ ಸ್ವರ್ಗತಃ ನಿರ್ಗತಃ ಎಂಬ ಒಂದೇ ಶಬ್ದವಿರುವುದರಿಂದ ಬಲಿಯು, ಬಲಿಯ ವೈರಿಯಾದ ಇಂದ್ರನಾಗುತ್ತಾನೆಯೇ?

**ಭಾವವಿಲಾಸಿನೀ–** ಮಹಿಷೀ ರಾಜ್ಞೀ । ಮಹಿಷೀಶಬ್ದಮಾತ್ರೇಣ ಮಹಿಷೀ ಪಶುವಿಶೇಷಃ ಕಿಂ ನ ಸ್ಯಾದಿತ್ಯರ್ಥಃ । ಅಜಃ ಛಾಗಃ । ಸ್ವಸ್ವರ್ಗಂ ಗತಃ ಸ್ವಸ್ವರ್ಗಾನ್ನಿರ್ಗತಃ । ಬಲಿದ್ವಿಡಿಂದ್ರಃ ಬಲಿಃ ಕಿಮ್ ನ ಸ್ಯಾದಿತಿ ಸಂಬಂಧಃ । ಕದಾಚಿದಿಂದ್ರೋऽಪಿ ಸ್ವರ್ಗತೋ ಭವತಿ । ಕದಾಚಿದ್ಬಲಿರಪಿ ಸ್ವರ್ಗತೋ ಭವತಿ । ಕದಾಚಿದುಭಾವಪಿ ಸ್ವರ್ಗಾನ್ನಿರ್ಗತೌ ಭವತಃ । ಏವಂಚ ಸ್ವರ್ಗತನಿರ್ಗತ-ಶಬ್ದಸಾಮ್ಯೇನ ಬಲೀಂದ್ರಯೋರೈಕ್ಯಂ ಸ್ಯಾತ್ ಕಿಮ್ । ಬಲೀಂದ್ರಯೋರ್ವಿರುದ್ಧಧರ್ಮ-ಸ್ಫೋರಣಾಯ ಬಲಿಜಾತಿದ್ವಿಡಿತ್ಯುಕ್ತಮ್ । ಅನೇನ ಬೃಹಜಾತಿಜೀವಕಮಲಾಸನಶಬ್ದರಾಶಿಷ್ವಿತಿ ಬ್ರಹ್ಮಶಬ್ದಸ್ಯ ಜೀವೇಷ್ವಪ್ಯನುಶಾಸನಾತ್ ತದಭಿಪ್ರಾಯೇಣ ಸರ್ವಂ ಖಲ್ವಿದಂ ಬ್ರಹ್ಮೇತಿ ಶ್ರುತ್ಯಾ ಸರ್ವಮಿದಂ ಜೀವಜಾತಂ ಬ್ರಹ್ಮಶಬ್ದವಾಚ್ಯಮಿತ್ಯುಕ್ತೇ ಪರಬ್ರಹ್ಮಣೈಕ್ಯಕಥನಮಸಂಗತಮಿತ್ಯುಕ್ತಂ ಭವತಿ ॥ ೬೭೬ ॥

**ವಿವರಣೆ–** ಶಬ್ದಸಾಮ್ಯದಿಂದ ಅರ್ಥಾಭೇದವು ಸಿದ್ಧಿಸುವುದಿಲ್ಲ ಎಂಬುದನ್ನು ಅನೇಕ ದೃಷ್ಟಾಂತಗಳಿಂದ ಇಲ್ಲಿ ಉಪಪಾದನೆ ಮಾಡುತ್ತಾರೆ. ಮಹಿಷಿ ಎಂಬ ಶಬ್ದವು ಎಮ್ಮೆಯಲ್ಲೂ ಮತ್ತು ರಾಣಿಯಲ್ಲೂ ಪ್ರಯೋಗಿಸಲ್ಪಡುತ್ತದೆ. ಆದರೆ ಎಮ್ಮೆಯಲ್ಲಿ ಪ್ರಯೋಗ ಮಾಡಿದ ಮಹಿಷಿ ಶಬ್ದಕ್ಕೆ ರಾಣಿ ಎಂದು ಅರ್ಥವಾಗುವುದಿಲ್ಲ. ಎಮ್ಮೆಗೆ ರಾಣಿಯ ಅಭೇದವು ಬರುವುದಿಲ್ಲ. ಅದರಂತೆ ಅಜ ಶಬ್ದವು ಹೋತದಲ್ಲಿಯೂ ಮತ್ತು ಚತುರ್ಮುಖ ಬ್ರಹ್ಮನಲ್ಲಿಯೂ ಪ್ರಯೋಗಿಸಲ್ಪಡುತ್ತದೆ. ಅವರಿಬ್ಬರಿಗೂ ಅಭೇದವಿಲ್ಲ. ಸ್ವರ್ಗತಃ= ಸ್ವರ್ಗವನ್ನು ಪ್ರವೇಶಿಸಿದವನು, ಸ್ವರ್ಗಾತ್ ನಿರ್ಗತಃ= ಸ್ವರ್ಗದಿಂದ ಹೊರಗೆ

ಬಂದವನು ಎಂಬ ಶಬ್ದಗಳು ಬಲಿಯಲ್ಲಿಯೂ ಮತ್ತು ಇಂದ್ರನಲ್ಲಿಯೂ ಪ್ರಯೋಗಿಸಲ್ಪಡುತ್ತವೆ. ಆ ಕಾರಣದಿಂದ ಬಲಿಯು ಇಂದ್ರನಾಗುವುದಿಲ್ಲ. ಇಂದ್ರನು ಕೇವಲ ಬಲಿಗಷ್ಟೇ ವೈರಿಯಲ್ಲ, ಬಲಿಯ ಜಾತಿಗೇ ವೈರಿ. ಆದ್ದರಿಂದ ಅವರಿಗೆ ಅಭೇದವಿಲ್ಲ ಎನ್ನುವುದು ಇನ್ನೂ ದೃಢವಾಗುತ್ತದೆ. ಆದ್ದರಿಂದ ಶಬ್ದಸಾಮ್ಯದಿಂದ ಅರ್ಥದ ಅಭೇದವನ್ನು ಹೇಳಬಾರದು ಎಂದು ಅಭಿಪ್ರಾಯ.

**ಅಸ್ತಿ ಸರ್ವೋಽಪಿ ಸಂಪತ್ತೌ ವಿಪತ್ತೌ ತು ನ ಕಶ್ಚನ ।**
**ಅನ್ಯೋನ್ಯೈಕ್ಯಕಥಾ ಸಖ್ಯೇ ದುಃಖ್ಯನ್ಯೋ ನ ಸ್ವಯಂ ಕಿಲ ॥ ೬೭೭ ॥**

**ಅರ್ಥ–** ಸಂಪತ್ತೌ= ಸಂಪತ್ತು ಇರುವಾಗ, ಸರ್ವೋಽಪಿ= ಎಲ್ಲರೂ, ಅಸ್ತಿ= ಇರುತ್ತಾರೆ, ವಿಪತ್ತೌ ತು= ವಿಪತ್ತು ಒದಗಿದರೆ ಮಾತ್ರ, ಕಶ್ಚನ ನ= ಯಾರೂ ಇರುವುದಿಲ್ಲ, ಸಖ್ಯೇ= ಸ್ನೇಹವಿದ್ದಾಗ, ಅನ್ಯೋನ್ಯೈಕ್ಯ ಕಥಾ= ಪರಸ್ಪರವಾಗಿ ಅಭೇದದ ಮಾತುಗಳು ಇರುತ್ತವೆ, ದುಃಖೀ= ದುಃಖಬಂದಾಗ ಮಾತ್ರ ದುಃಖಿಯಾದವನು, ಅನ್ಯಃ= ಇನ್ನೊಬ್ಬನು ಹೊರತು, ಸ್ವಯಂ ನ ಕಿಲ= ತಾನೇ ಅಲ್ಲವಷ್ಟೇ.

**ಅನುವಾದ– ಸಂಪತ್ತು ಇದ್ದಾಗ ಎಲ್ಲರೂ ಜೊತೆಯಲ್ಲಿರುತ್ತಾರೆ. ವಿಪತ್ತು ಒದಗಿದಾಗ ಯಾರೂ ಇರುವುದಿಲ್ಲ. ಸ್ನೇಹವಿದ್ದಾಗ ನಾನೇ ನೀನು, ನೀನೇ ನಾನು ಎಂಬ ಅಭೇದದ ಮಾತುಗಳು ಉಂಟಾಗುತ್ತವೆ. ಮಾತೃಮರಣಾದಿ ದುಃಖವುಂಟಾದಾಗ ಮಾತ್ರ ದುಃಖವನ್ನು ಪಡುವವನು ಬೇರೆಯೇ ವ್ಯಕ್ತಿ, ಮೊದಲು ಮಾತನಾಡಿದವರು ಬೇರೆಯೇ ವ್ಯಕ್ತಿಯಾಗಿರುತ್ತಾರೆ.**

**ಭಾವವಿಲಾಸಿನೀ–** ನೀತಿವಿರುದ್ಧಂ ಚ ಜೀವಾನಾಂ ಪರಸ್ಪರೈಕ್ಯಕಥನಮಿತ್ಯಾಹ – **ಅಸ್ತೀತಿ ॥** ಮಾತೃಮರಣಾದೌ ಜಾತೇ ಸತ್ಯನ್ಯೋ ದುಃಖೀ ಕಿಲ । ಸ್ವಯಂ ನ ಕಿಲ । ತಸ್ಮಾತ್ಸಂಪತ್ತೌ ಸಖ್ಯವಾರ್ತಾವಜ್ಜೀವಾನಾಂ ಪರಸ್ಪರೈಕ್ಯಕಥನಮಪಿ ವಾರ್ತಾಮಾತ್ರಮಿತಿ ಭಾವಃ ॥ ೬೭೭ ॥

**ವಿವರಣೆ–** ಜೀವರಿಗೆ ಪರಸ್ಪರ ಐಕ್ಯವನ್ನು ಹೇಳುವುದು ಲೋಕ ನೀತಿಗೆ ವಿರುದ್ಧವಾದುದು ಎಂದು ಇಲ್ಲಿ ಹೇಳುತ್ತಾರೆ. ಸಂಪತ್ತು ಇದ್ದಾಗ ಎಲ್ಲರೂ ಹತ್ತಿರ ಬಂದು ತಮ್ಮ ಸಖ್ಯವನ್ನು ಹೇಳಿಕೊಂಡು ನಾನೂ ನೀನೂ ಒಂದೇ ಎಂಬ ಮಾತನ್ನು ಆಡುತ್ತಾರೆ. ದುಃಖ ಬಂದಾಗ ಮಾತ್ರ ಆ ಮಾತನ್ನು ಆಡುವವರು ಯಾರೂ ಇರುವುದಿಲ್ಲ. ಆದ್ದರಿಂದ ಸಂಪತ್ತು ದೊರಕಿದಾಗ ಉಂಟಾಗುವ ಸಖ್ಯವಾರ್ತೆಯಾಗಲೀ ಅಥವಾ ಐಕ್ಯವಾರ್ತೆಯಾಗಲೀ ಹೇಗೆ ಕೇವಲ ವಾರ್ತಾಮಾತ್ರವೋ, ವಸ್ತುಸ್ಥಿತಿಯಲ್ಲಿ ಇಲ್ಲವೋ ಅದರಂತೆ ಜೀವರ ಪರಸ್ಪರ ಐಕ್ಯವಾರ್ತೆಯೂ ಸಹ ಕೇವಲ ವಾರ್ತಾಮಾತ್ರವಾದುದು ಎಂದು ಅಭಿಪ್ರಾಯ.

ಶಿರಸ್ಯರ್ಧೇ ಜರೇತ್ಯದ್ಧಾ ಪರದಂ ಧನಕೃದ್ ವದೇತ್ ।
ದೇಹೀ ದೇಹಾಂತರೇನಾತ್ತಿ ದೇಹವ್ಯೂಹೇ ಕಿಲಾತ್ತಿ ತತ್ ॥ ೬೭೮ ॥

**ಅರ್ಥ–** ಪರದಂಧನಕೃತ್= ಇನ್ನೊಬ್ಬನಿಗೆ ಮೋಸವನ್ನು ಮಾಡುವವನು, ಅರ್ಧೇ ಶಿರಸಿ ಜರಾ= ಅರ್ಧತಲೆಯಲ್ಲಿ ಮುಪ್ಪಿದೆ, ಇತಿ= ಎಂದು, ಅದ್ಧಾ= ಚೆನ್ನಾಗಿ (ನಿಸ್ಸಂಕೋಚವಾಗಿ), ವದೇತ್= ಹೇಳುತ್ತಾನೆ, ದೇಹೀ= ಜೀವನು, ದೇಹಾಂತರೇ= ಇನ್ನೊಂದು ದೇಹದಲ್ಲಿ, ನ ಅತ್ತಿ= ಭೋಗವನ್ನು ಅನುಭವಿಸುವುದಿಲ್ಲ, ದೇಹವ್ಯೂಹೇ= ದೇಹವ್ಯೂಹವನ್ನು ಹೊಂದಿದ ಯೋಗಿಯು, ತತ್= ಆ ಭೋಗವನ್ನು, ಅತ್ತಿ ಕಿಲ= ಭೋಗಿಸುತ್ತಾನಷ್ಟೇ.

**ಅನುವಾದ–** ಇನ್ನೊಬ್ಬನಿಗೆ ಮೋಸ ಮಾಡುವವನು ಮಾತ್ರ ಅರ್ಧತಲೆಯಲ್ಲಿ ಮುಪ್ಪುಬಂದಿದೆ ಎಂದು ನಿಸ್ಸಂಕೋಚವಾಗಿ ಹೇಳುತ್ತಾನೆ. ಸಾಮಾನ್ಯ ಜೀವರು ತನ್ನ ದೇಹವನ್ನು ಬಿಟ್ಟು ಬೇರೆ ದೇಹದಲ್ಲಿ ಉಂಟಾಗುವ ಭೋಗವನ್ನು ಅನುಭವಿಸುವುದಿಲ್ಲ. ಯೋಗಿಗಳು ಮಾತ್ರ ಅಂತಹ ಭೋಗವನ್ನು ಅನುಭವಿಸುತ್ತಾರಷ್ಟೇ?

**ಭಾವವಿಲಾಸಿನೀ–** ಅರ್ಧೇ ಶಿರಸಿ ಜರೇತಿ ಸಂಬಂಧಃ । ಕುತ ಇತ್ಯತ ಆಹ – **ದೇಹೀತಿ** ॥ ಸರ್ವಜೀವಾನಾಮೈಕ್ಯಸಾಮ್ಯೇಽಪಿ ದೇಹೀ ಯಜ್ಞದತ್ತಾದಿಃ ದೇಹಾಂತರೇ ದೇವದತ್ತಾದಿ-ದೇಹಾಂತರೇ ॥ ನಾತ್ತಿ ಕಿಲ ತದ್ಗತಭೋಗಾದಿಕಂ ನ ಭುಂಕ್ತೇ ಇತ್ಯರ್ಥಃ । ದೇಹವ್ಯೂಹೀ ಕಾಯವ್ಯೂಹಂ ಸಂಪಾದ್ಯ ಸ್ವಪ್ರಾರಬ್ಧ ಬಹುತರಕರ್ಮ ಸಕೃದೇವ ಭುಂಜಾನಃ ಸೌಭರ್ಯಾದಿಸ್ತದ್ದೇಹಾಂತರಗತಸುಖಮ್ । ಐಕ್ಯಸಾಮ್ಯೇಽಪಿ ದೇಹವ್ಯೂಹೀ ದೇಹಾಂತರಸುಖಂ ಭುಂಕ್ತೇ । ಅನ್ಯೋ ದೇಹೀ ದೇಹಾಂತಸುಖಂ ನ ಭುಂಕ್ತೇ ಇತ್ಯೇತದರ್ಧೇ ಶಿರಸಿ ಜರೇತಿ ಧಂಧನವಾಕ್ಯಸಮಾನಮಿತಿ ಭಾವಃ ॥ ೬೭೮ ॥

**ವಿವರಣೆ–** ಎಲ್ಲ ಜೀವರಿಗೂ ಐಕ್ಯವಿರುವಾಗ ಯೋಗಿಗೆ ದೇಹಾಂತರ ಭೋಗದ ಅನುಸಂಧಾನ ಬಂದಂತೆ ಚೈತ್ರಮೈತ್ರರಿಗೂ ಅಭೇದವಿರುವುದರಿಂದ ಚೈತ್ರನಿಗೆ ಮೈತ್ರದೇಹದಲ್ಲಿ ಉಂಟಾಗುವ ಭೋಗದ ಅನುಸಂಧಾನವು ಬರಬೇಕು. ಆದರೆ ಅದ್ವೈತಿಗಳು ಚೈತ್ರಮೈತ್ರರಿಗೆ ಅಂತಹ ಅನುಸಂಧಾನವನ್ನು ಒಪ್ಪುವುದಿಲ್ಲ, ಯೋಗಿಗೆ ಮಾತ್ರ ಅಂತಹ ಅನುಸಂಧಾನವನ್ನು ಒಪ್ಪುತ್ತಾರೆ. ಇದು ವಂಚನೆ. ಮುಪ್ಪು ಬಂದಾಗ ದೇಹದಲ್ಲಿ ಪೂರ್ಣವಾಗಿ ಬಂದಿರುತ್ತದೆ. ಅರ್ಧದೇಹದಲ್ಲಿ ಮುಪ್ಪು ಅರ್ಧದೇಹದಲ್ಲಿ ಯೌವನ ಎಂಬುದು ಸಾಧ್ಯವಿಲ್ಲವಷ್ಟೇ ಎಂದು ಅಭಿಪ್ರಾಯ.

ಖಲ ಏವ ಖಲೋ ಲೋಕೇ ನಾಸುರಾ ವೈರಿವೈರಿಣಃ ।
ಏಕೋ ಜೀವಃ ಸ ನಿದ್ರಾತಿ ತಸ್ಯ ಸ್ವಪ್ನಃ ಕಿಲಾಖಿಲಂ ॥ ೬೭೯ ॥

**ಅರ್ಥ–** ಲೋಕೇ= ಲೋಕದಲ್ಲಿ, ಖಲಹ ಏವ= ದುರ್ಜನನೇ, ಖಲಃ= ದುರ್ಜನನಾದವನು, ವೈರಿವ್ವೈರಿಣಃ= ಶತ್ರುಗಳಲ್ಲಿ ಮಾತ್ರ ವೈರ ಮಾಡುವ, ಅಸುರಾಃ= ಅಸುರರು, ನ= ಖಲರಲ್ಲ, ಸಃ ಏಕೋ ಜೀವಃ= ಆ ಒಬ್ಬ ಜೀವನು, ನಿದ್ರಾತಿ= ನಿದ್ರಿಸುತ್ತಿದ್ದಾನೆ, ಅಖಿಲಂ= ಈ ಜಗತ್ತೆಲ್ಲವೂ, ತಸ್ಯ ಸ್ವಪ್ನಃ ಕಿಲ= ಅವನ ಸ್ವಪ್ನವಷ್ಟೇ.

**ಅನುವಾದ– ಲೋಕದಲ್ಲಿ ಖಲನೇ ದುರ್ಜನನಾದವನು. ಕೇವಲ ಶತ್ರುಗಳನ್ನು ದ್ವೇಷ ಮಾಡುವ ಅಸುರರು ದುರ್ಜನರಲ್ಲ. ಆ ಒಬ್ಬ ಜೀವನು ಮಲಗಿ ನಿದ್ರಿಸುತ್ತಿದ್ದಾನೆ, ಈ ಜಗತ್ತೆಲ್ಲವೂ ಅವನ ಸ್ವಪ್ನವಷ್ಟೇ?**

**ಭಾವವಿಲಾಸಿನೀ–** ಏವಂ ಬಹುಜೀವವಾದಂ ನಿರಾಕೃತ್ಯೈಕಜೀವವಾದಂ ನಿರಾಕರ್ತುಂ ದುರ್ನೀತಿವಿಷಯತಯಾ ಪ್ರಸ್ತಾವಯತಿ – **ಖಲ ಏವೇತಿ ॥** ವೈರಿಷ್ವೇವ ವೈರಿಣಃ ಖಲಾ ನ ದುರ್ಜನವತ್ಖಲಾ ನೇತ್ಯರ್ಥಃ। ದುರ್ಜನೇನ ಕಿಮಧಿಕಮಾಚರಿತಮಿತ್ಯತ ಆಹ – **ಏಕ ಇತಿ ॥** ಏಕ ಏವೇತ್ಯರ್ಥಃ। ಸ ಏಕಜೀವಃ। ನಿದ್ರಾತಿ ಸರ್ವದಾ ನಿದ್ರಾಂಕರೋತಿ ಕಿಲ। ತಸ್ಯ ಏಕಜೀವಸ್ಯ। ಅಖಿಲಂ ಚೇತನಾಚೇತನಾತ್ಮಕಂ ಜಗತ್। ಅಸುರೋಽಪಿ ಸ್ವವಿರೋಧಿಸುರಾನೇವ ದ್ವೇಷ್ಟಿ ನತು ಸಕಲಂ ಜಗತ್। ಅಯಂ ತು ನಿರ್ನಿಮಿತ್ತಂ ಏಕಜೀವವ್ಯತಿರಿಕ್ತಸಕಲಜಗತಃ ಸ್ವಾಪ್ನಪದಾರ್ಥ ಸಮತಯಾಽಭಾವಂ ವದನ್ ಜಗತ್‌ಕ್ಷಯಕಾರಿತ್ವಾತ್ ಅಸುರಾದಪ್ಯಧಿಕಃ ಖಲ ಇತಿ ಭಾವಃ ॥೬೭೯॥

**ವಿವರಣೆ–** ಹೀಗೆ ಬಹುಜೀವವಾದವನ್ನು ನಿರಾಕರಿಸಿ ಏಕಜೀವವಾದವನ್ನು ನಿರಾಕರಿಸಲು ಏಕಜೀವವಾದಿಗಳ ದುರ್ನೀತಿಯನ್ನು ಮೊದಲು ನಿರೂಪಿಸುತ್ತಾರೆ. ಅಸುರರು ತಮ್ಮ ವೈರಿಗಳಾದ ದೇವತೆಗಳನ್ನು ಮಾತ್ರ ದ್ವೇಷಿಸುತ್ತಾರೆ. ಸಮಸ್ತವಾದ ಜಗತ್ತನ್ನು ದ್ವೇಷಿಸುವುದಿಲ್ಲ. ಖಲರು ಮಾತ್ರ ಸಮಸ್ತವಾದ ಜಗತ್ತನ್ನು ದ್ವೇಷಿಸುತ್ತಾರೆ. ಏಕ ಜೀವವಾದದಲ್ಲಿ ಮಲಗಿರುವ ಒಬ್ಬ ಜೀವನನ್ನು ಬಿಟ್ಟು ಉಳಿದ ಎಲ್ಲಾ ಜೀವರೂ ಮತ್ತು ಜಡವೂ ಸ್ವಪ್ನ ಸದೃಶವಾದುದು ಎಂದು ಹೇಳಿ ಇಡೀ ಜಗತ್ತನ್ನು ನಿರ್ನಿಮಿತ್ತವಾಗಿ ದ್ವೇಷ ಮಾಡುವುದರಿಂದ ಇಂತಹ ಏಕಜೀವವಾದಿಗಳು ಅಸುರರಿಗಿಂತ ನೀಚರು ಎಂದು ಅಭಿಪ್ರಾಯ.

**ಅಹರ್ನಿಶೇತಿ ಚ ಪ್ರಾಯೋ ನ ವಿದುರ್ಮೋಹಿದೇಹಿನಃ ।**
**ಕಾಲಃ ಕಿಲಾಯಂ ಸರ್ವೋಽಪಿ ಸ್ವಪ್ನಃ ಸುಪ್ತಸ್ಯ ಕಸ್ಯಚಿತ್ ॥ ೬೮೦ ॥**

**ಅರ್ಥ–** ಮೋಹಿದೇಹಿನಃ= ವಿಷಯ ಲಂಪಟರಾದವರು, ಪ್ರಾಯಃ= ಹೆಚ್ಚಾಗಿ, ಅಹರ್ನಿಶೇತಿ ಚ= ಇದು ಹಗಲು ಇದು ರಾತ್ರಿ ಎಂದು, ನ ವಿದುಃ= ತಿಳಿಯುವುದಿಲ್ಲ, ಅಯಂ ಸರ್ವೋಽಪಿ ಕಾಲಃ= ಈ ಎಲ್ಲ ಕಾಲವೂ, ಕಸ್ಯಚಿತ್ ಸುಪ್ತಸ್ಯ= ಯಾವನೋ ಒಬ್ಬ ಮಲಗಿದವನ, ಸ್ವಪ್ನಃ ಕಿಲ= ಸ್ವಪ್ನವಷ್ಟೇ.

**ಅನುವಾದ–** ವಿಷಯ ಲಂಪಟರಾದವರು ಹೆಚ್ಚಾಗಿ ಹಗಲು ರಾತ್ರಿಗಳ ವ್ಯತ್ಯಾಸವನ್ನು ತಿಳಿಯುವುದಿಲ್ಲ. ಎಲ್ಲ ಜಗತ್ತಿಗೆ ನಡೆಯುತ್ತಿರುವ ಈ ಎಚ್ಚರಿಕೆಯ ಕಾಲವು ಮಲಗಿರುವ ಯಾವನೋ ಒಬ್ಬ ಜೀವನ ಸ್ವಪ್ನವಷ್ಟೇ?

**ಭಾವವಿಲಾಸಿನೀ–** ಮೋಹಿದೇದಿನಃ ವಿಷಯಲಂಪಟಾಃ । ಇದಮಪ್ಯೇಕಜೀವವಾದೇ ದೃಷ್ಟಮಿತ್ಯಾಹ – **ಕಾಲ ಇತಿ** ॥ ಅಯಂ ಸರ್ವೈರ್ಜನೈರಹಸ್ತ್ವೇನಾನುಭೂಯಮಾನಃ । ಸರ್ವೇಷಾಮಹರಿದಂ ನಿದ್ರಿತೈಕಜೀವವಾದೀ ನಿಶಾಂ ವಕ್ತಿ । ಏವಂಚ ವಿದ್ವಾನಪ್ಯಹರ್ನಿಶೇತಿ ನ ಜಾನಾತಿ ಚೇತ್ ಕಾಮೀಜನಃ ಕಥಂ ಜಾನೀಯದಿತಿ ಭಾವಃ ॥ ೬೮೦ ॥

**ವಿವರಣೆ–** ಏಕಜೀವವಾದಿಗಳ ದುರ್ನೀತಿಯನ್ನೇ ಇಲ್ಲಿ ಪರಿಹಾಸ ಮಾಡುತ್ತಾರೆ. ಈಗ ಜಗತ್ತೆಲ್ಲವೂ ಎಚ್ಚರವಾಗಿದೆ, ಹಗಲಾಗಿದೆ. ಇದು ಅನುಭವಸಿದ್ಧ. ಇದನ್ನು ಒಬ್ಬ ಜೀವನಿಗೆ ರಾತ್ರಿಯ ಕಾಲದಲ್ಲಿ ಬೀಳುವ ಸ್ವಪ್ನಕ್ಕೆ ಸದೃಶವೆಂದು ಹೇಳಿದರೆ ವಿಷಯ ಲಂಪಟರಿಗೆ ಹಗಲು ರಾತ್ರಿಗಳ ಭೇದವು ತಿಳಿಯದಂತೆ ಏಕಜೀವವಾದಿಗಳಿಗೂ ಹಗಲು ರಾತ್ರಿಗಳ ವ್ಯತ್ಯಾಸವು ತಿಳಿಯುವುದಿಲ್ಲವೆಂದು ಪರಿಹಾಸ ಮಾಡುತ್ತಾರೆ.

**ಕರಸ್ಥದಂಡಪಿಂಡಾಭ್ಯಾಂ ಶವಬುದ್ಧಿಂ ಜಹೌ ಶಿವಾ ।**
**ಚರಂತಃ ಸಂಸರಂತಶ್ಚ ಶವಾ ಜೀವಾಃ ಕಿಲಾಖಿಲಾಃ ॥ ೬೮೧ ॥**

**ಅರ್ಥ–** ಶಿವಾ= ನರಿಯು, ಕರಸ್ಥದಂಡಪಿಂಡಾಭ್ಯಾಂ= ಕೈಯಲ್ಲಿದ್ದ ಕೋಲು ಮತ್ತು ಅನ್ನವನ್ನು ನೋಡಿ, ಶವಬುದ್ಧಿಂ ಜಹೌ= ಇದು ಶವ ಎಂಬ ಬುದ್ಧಿಯನ್ನು ಪರಿತ್ಯಜಿಸಿತು, ಚರಂತಃ= ತಿರುಗಾಡುತ್ತಿರುವ ಅಥವಾ ಭೋಜನ ಮಾಡುತ್ತಿರುವ, ಸಂಸರಂತಶ್ಚ= ಸಂಸಾರದಲ್ಲಿರುವ ಅಖಿಲಾ ಜೀವಾಃ= ಎಲ್ಲ ಜೀವರೂ, ಶವಾಃ ಕಿಲ= ಶವವಷ್ಟೇ.

**ಅನುವಾದ–** ನರಿಯು ಕೈಯಲ್ಲಿ ದಂಡ ಮತ್ತು ಅನ್ನವನ್ನು ಹಿಡಿದು ಮಲಗಿದ್ದ ವ್ಯಕ್ತಿಯನ್ನು ನೋಡಿ ಇದು ಶವವಲ್ಲ ಎಂದು ಓಡಿತು. ಏಕಜೀವವಾದಿಗಳಿಗೆ ಸಂಸಾರದಲ್ಲಿ ತಿರುಗಾಡುತ್ತಿರುವ ಭೋಜನಾದಿಗಳನ್ನು ಮಾಡುತ್ತಿರುವ ಸಮಸ್ತ ಜೀವರೂ ಶವಗಳಷ್ಟೇ?

**ಭಾವವಿಲಾಸಿನೀ–** ಮೃಗಧೂರ್ತಕಸದೃಶವಿವೇಕೋಽಪ್ಯೇಕಜೀವವಾದಿನೋ ನಾಸ್ತೀತ್ಯಾಹ – **ಕರಸ್ಥೇತಿ** ॥ ಆಶ್ಚರ್ಯಮರಣಂ ದೃಷ್ಟಂ ಹಸ್ತೇ ದಂಡಕಪಿಂಡಕೌ । ಗ್ರಾಮೇ ಕಲಕಲೋ ನಾಸ್ತಿ ಶೀಘ್ರ ಬುದ್ಧಿಃ ಪಲಾಯನಮಿತಿ ಪಂಚತತ್ರಿಕಾವಚನಾತ್ ಕರಸ್ಥದಂಡಪಿಂಡಾಭ್ಯಾಂ ಕಲಕಲಾ-ಭಾವೇನ ಚ ಶವವನ್ನಿಶ್ಚೇಷ್ಟತಯಾ ಶಯಾನೇಽಪಿ ಪುರುಷೇ ಶಿವಾ ಶವಬುದ್ಧಿಂ ಜಹೌ । ಚರಂತಃ ಇತಸ್ತತಃ ಸಂಚರಂತಃ ಸಂಸರಂತಃ ಭೋಜನಾಭ್ಯಂಗಸ್ನಾನಪಾನಾದಿಸಂಸಾರವ್ಯಾಪಾರಂ ಕುರ್ವಂತಃ ಅಖಿಲಾಃ ಜೀವಾಃ ದೇವದತ್ತಯಜ್ಞದತ್ತಾದಿಸಕಲಜೀವಾಃ ಶವಾಃ ಜೀವಚೈತನ್ಯರಹಿತ

ತಯಾ ಜೀವಾಪಾಯೇ ಪತಿತಶರೀಖಚ್ಛವಾಃ ಕಿಲ । ಸರ್ವವ್ಯಾಪಾರದರ್ಶನೇಽಪಿ ಶವಬುದ್ಧೇರತ್ಯಾಗಾತ್ ಶಿವಾತೋಽಪ್ಯ ಪ್ರಬುದ್ಧೋಽಯಂ ವಾದೀತಿ ಭಾವಃ ॥ ೬೮೧ ॥

**ವಿವರಣೆ–** ಏಕಜೀವವಾದಿಗಳಿಗೆ ಪಂಚತಂತ್ರದ ಕಥೆಯಲ್ಲಿ ಬರುವ ನರಿಯ ವಿವೇಕವೂ ಇಲ್ಲವೆಂದು ಇಲ್ಲಿ ಪರಿಹಾಸ ಮಾಡುತ್ತಾರೆ. ಕೈಯಲ್ಲಿ ದಂಡಪಿಂಡಗಳನ್ನು ಹಿಡಿದು ನಿಶ್ಚೇಷ್ಟನಾಗಿ ಮಲಗಿದವ್ಯಕ್ತಿಯನ್ನು ನೋಡಿ ಇದು ಶವವಲ್ಲವೆಂದು ನಿರ್ಧರಿಸಿ ನರಿಯು ಓಡಿಹೋಗುವ ಕಥೆಯು ಪಂಚತಂತ್ರದಲ್ಲಿ ಬರುತ್ತದೆ. ನಿಶ್ಚೇಷ್ಟನಾದ ದೇಹವನ್ನು ನೋಡಿದರೂ ನರಿಯು ಶವವಲ್ಲವೆಂದು ತಿಳಿಯಿತು. ಆದರೆ ಸಕಲ ಚೇಷ್ಟೆಗಳಿರುವ ದೇಹವನ್ನು ನೋಡಿ ಏಕಜೀವವಾದಿಗಳು ಅವುಗಳನ್ನು ನಿರ್ಜೀವವಾದ ಶವಕ್ಕೆ ಸಮಾನವೆಂದು ತಿಳಿಯುತ್ತಾರೆ ಎಂಬುದು ಆಶ್ಚರ್ಯಕರವಾದ ಸಂಗತಿ!

**ಹಸತಿ ಸ್ವೈರಿಣೀ ಸ್ವೈರಮಪರಾಂ ಸ್ವೈರಿಣೀಮಹೋ ।**
**ಕಿಂ ನ ನಿರ್ಜೀವದೇಹಾತ್ಮವಾದೀ ಚಾರ್ವಾಕಹಾಸಕೃತ್ ॥ ೬೮೨ ॥**

**ಅರ್ಥ–** ಸ್ವೈರಿಣೀ= ಒಬ್ಬ ವೇಶ್ಯೆಯು, ಅಪರಾಂ ಸ್ವೈರಿಣೀಂ= ಇನ್ನೊಬ್ಬ ವೇಶ್ಯೆಯನ್ನು, ಸ್ವೈರಂ= ತನ್ನ ಮನಸ್ಸಿಗೆ ಬಂದಂತೆ, ಹಸತಿ= ಅಪಹಾಸ ಮಾಡುತ್ತಾಳೆ, ಅಹೋ= ಆಶ್ಚರ್ಯವು, ನಿರ್ಜೀವದೇಹಾತ್ಮವಾದೀ= ನಿರ್ಜೀವವಾದ ದೇಹಗಳನ್ನೇ ಆತ್ಮಗಳೆಂದು ಕರೆಯುವ ಏಕಜೀವವಾದಿಯು, ಚಾರ್ವಾಕಹಾಸಕೃತ್ ಕಿಂ ನ= ಚಾರ್ವಾಕನನ್ನು ಅಪಹಾಸ ಮಾಡುವುದಿಲ್ಲವೇ?

**ಅನುವಾದ–** ಒಬ್ಬ ವೇಶ್ಯೆಯು ಇನ್ನೊಬ್ಬ ವೇಶ್ಯೆಯನ್ನು ನೋಡಿ ವೇಶ್ಯಾವೃತ್ತಿಯ ಕಾರಣದಿಂದಾಗಿ ಅವಳನ್ನು ಮನಸ್ಸಿಗೆ ಬಂದಂತೆ ಅಪಹಾಸ ಮಾಡುತ್ತಾಳೆ! ಇದು ಆಶ್ಚರ್ಯ. ನಿರ್ಜೀವವಾದ ದೇಹವನ್ನೇ ಆತ್ಮಗಳೆಂದು ಹೇಳುವ ಏಕಜೀವವಾದಿಯು ಚಾರ್ವಾಕನನ್ನು ಅಪಹಾಸ ಮಾಡುವುದಿಲ್ಲವೇ?

**ಭಾವವಿಲಾಸಿನೀ–** ಹಸತೀತಿ ವಾಕ್ಯೋಕ್ತದುರ್ನೀತಿರಪ್ಯೇಕಜೀವವಾದ್ಯೇವ ಪಾತ್ರಮಿತ್ಯಾಹ – ಕಿಂ ನೇತಿ ॥ ನಿರ್ಜೀವದೇಹಾತ್ಮವಾದೀ ಜೀವರಹಿತದೇಹಾನಾಮೇವ ಜೀವತ್ವಂ ವದನ್ನೇಕಜೀವವಾದೀ ಚಾರ್ವಾಕಸ್ಯ ನಿರ್ಜೀವದೇಹಾತ್ಮವಾದಿನಃ ಚಾರ್ವಕಸ್ಯ ಹಾಸಕೃತ್ ನ ಕಿಮ್ । ಯಥಾ ಸ್ವೈರಿಣೀ ಸ್ವೈರಿಣ್ಯಂತರಹಾಸಂ ಕುರ್ವತೀ । ಅಕುಶಲಾ ಏವಂ ಚಾರ್ವಾಕಂ ದೂಷಯನ್ನೇಕಜೀವವಾದೀ ಜಡದೇಹಜೀವಭಾವವಾದಸ್ಯ ಸ್ವಮತೇಽಪಿ ಸದ್ಭಾವಾದಕುಶಲ ಇತಿ ಭಾವಃ ॥ ೬೮೨ ॥

**ವಿವರಣೆ–** ಚಾರ್ವಾಕರು ದೇಹದಲ್ಲಿ ದೇಹಾತಿರಿಕ್ತನಾದ ಆತ್ಮನಿಲ್ಲವೆಂದು ಹೇಳುತ್ತಾರೆ. ಏಕಜೀವವಾದಿಗಳೂ ಸಹ ನಮ್ಮ ಕಣ್ಣಿಗೆ ಕಾಣುವ ದೇಹಗಳಲ್ಲಿ ಆತ್ಮನು ಇಲ್ಲ ಎಂದೇ

ಹೇಳುತ್ತಾರೆ. ಹಾಗಿದ್ದರೂ ನಾವು ಚಾರ್ವಾಕರನ್ನು ನಿರಾಕರಣೆ ಮಾಡುತ್ತೇವೆ ಎಂದು ಹೇಳುವ ಏಕಜೀವವಾದಿಗಳ ವಾದವು ಹಾಸ್ಯಾಸ್ಪದವಾದುದು ಎಂದು ಅಭಿಪ್ರಾಯ.

**ಏಕಾಶಾಖಂಡನೇ ಲೋಕಾ ದೋಷಮಾಘೋಷಯಂತ್ಯಹೋ ।**
**ಶುಕಾದ್ಯಾಃ ಕಿಲ ಸರ್ವೇಽಪಿ ನ ಮೋಕ್ಷ್ಯಂತೇ ಮುಮುಕ್ಷವಃ ॥ ೬೮೩ ॥**

**ಅರ್ಥ–** ಏಕಾಶಾಖಂಡನೇ= ಒಬ್ಬನ ಆಸೆಯನ್ನು ಭೇದಿಸಿದರೆ, ಲೋಕಾಃ= ಜನರು, ದೋಷಂ= ದೋಷವನ್ನು, ಆಘೋಷಯಂತಿ= ಘೋಷಿಸುತ್ತಾರೆ, ಅಹೋ= ಇದು ಆಶ್ಚರ್ಯ, ಶುಕಾದ್ಯಾಃ ಸರ್ವೇಽಪಿ= ಶುಕ ಮೊದಲಾದ ಎಲ್ಲಾ, ಮುಮುಕ್ಷವಃ= ಮೋಕ್ಷಾಪೇಕ್ಷಿಗಳು, ನ ಮೋಕ್ಷ್ಯಂತೇ ಕಿಲ= ಮೋಕ್ಷವನ್ನು ಪಡೆಯುವುದಿಲ್ಲವಷ್ಟೇ.

**ಅನುವಾದ– ಲೋಕದಲ್ಲಿ ಒಬ್ಬನ ಆಸೆಯನ್ನು ಕತ್ತರಿಸಿದರೂ ಅದನ್ನು ದೊಡ್ಡ ದೋಷವೆಂದು ಹೇಳುತ್ತಾರೆ. ಇದು ಆಶ್ಚರ್ಯ. ಮೋಕ್ಷ ಅಪೇಕ್ಷಿಗಳಾದ ಶುಕಾದಿ ಎಲ್ಲ ಜೀವರೂ ಮೋಕ್ಷವನ್ನು ಪಡೆಯುವುದಿಲ್ಲವಷ್ಟೇ?**

**ಭಾವವಿಲಾಸಿನೀ– ಏಕದಶಾಖಂಡನೇ । ಏಕಸ್ಯ ಪುರುಷಸ್ಯಾಭೀಪ್ಸಿತಫಲಾಪ್ರದಾನೇ ನಾಶಾಯಾ-ವ್ಯರ್ಥತಾಕರಣೇ । ಏವಂ ಸತಿ ಶುಕೋ ಮುಕ್ತೋ ವಾಮದೇವೋಽಪಿ ಮುಕ್ತ ಇತ್ಯಾದಿವಾಕ್ಯಾ-ನಾಮರ್ಥವಾದತಾಂ ವದತಃ ಸಕಲಮುಮುಕ್ಷೂಣಾಂ ಮೋಕ್ಷಾಭಾವಪ್ರತಿಪಾದನೇನಾಶಾಂ ಛಿಂದತ ಏಕಜೀವವಾದಿನೋ ದೋಷಃ ಸುತರಾಮಾಘೋಷಣೀಯ ಇತಿ ಭಾವಃ ॥ ೬೮೧ ॥**

**ವಿವರಣೆ–** ಲೋಕದಲ್ಲಿ ಒಬ್ಬನ ಆಸೆಯನ್ನು ಭೇದಿಸಿದರೂ ಮಹಾದೋಷ ಉಂಟಾಗುತ್ತದೆ. ಶುಕಾದಿ ಸಕಲ ಮುಮುಕ್ಷುಗಳಿಗೆ ಮೋಕ್ಷವಿಲ್ಲವೆಂದು ಹೇಳಿ ಅವರ ಮೋಕ್ಷಾಶೆಯನ್ನು ಭೇದಿಸಿದರೆ ಎಂತಹ ದೋಷವು ಉಂಟಾಗುತ್ತದೆ! ಇದರ ಮುಂದೆ ಅಲ್ಪವಾದ ಒಬ್ಬ ಮನುಷ್ಯನ ಅಲ್ಪವಾದ ಒಂದು ಆಸೆಯನ್ನು ಭೇದಿಸಿದರೆ ಯಾವ ಮಹಾದೋಷವು ಉಂಟಾದೀತು ಎಂದು ಅಭಿಪ್ರಾಯ.

**ಯಜನಾಧ್ಯಯನಾದೀನಿ ಮನನಶ್ರವಣಾದಿ ಚ ।**
**ದಾನಸ್ನಾನಾದಿಕಂ ಸರ್ವಂ ದಶಾ ಸ್ವಾಪ್ನೀ ಕಿಲಾಫಲಾ ॥ ೬೮೪ ॥**

**ಅರ್ಥ–** ಯಜನಾಧ್ಯಯನಾದೀನಿ= ಯಜನ ಅಧ್ಯಯನ ಮೊದಲಾದವುಗಳೂ, ಮನನ ಶ್ರವಣಾದಿ ಚ= ಶ್ರವಣ ಮನನಾದಿಗಳೂ, ದಾನಸ್ನಾನಾದಿಕಂ= ದಾನಸ್ನಾನಾದಿಗಳೂ, ಸರ್ವಂ= ಎಲ್ಲವೂ, ಅಫಲಾ= ನಿಷ್ಪ್ರಯೋಜನವಾದ, ಸ್ವಾಪ್ನೀ ದಶಾ ಕಿಲ= ಸ್ವಪ್ನದ ಅವಸ್ಥೆಗಳಷ್ಟೇ.

**ಅನುವಾದ– ಯಜನಾಧ್ಯಯನ ಮೊದಲಾದ ಮತ್ತು ಶ್ರವಣ ಮನನ ಮೊದಲಾದ ಮತ್ತು ದಾನ ಸ್ನಾನ ಮೊದಲಾದ ಎಲ್ಲವೂ ನಿಷ್ಫಲವಾದ ಸ್ವಪ್ನಾವಸ್ಥೆಯೇ ಅಷ್ಟೇ?**

**ಭಾವವಿಲಾಸಿನೀ–** ಏಕಜೀವವಾದಿಮತೇಽಯಮಪಿ ದೋಷ ಇತ್ಯಾಹ – **ಯಜನೇತಿ** ॥ ಅಫಲಾ ಸ್ವಾಪ್ನೀ ದಶಾ ಕಿಲೇತಿ ಸಂಬಂಧಃ । ಶ್ರುತಿಃಸ್ಮೃತ್ಯುಕ್ತಸಕಲಸತ್ಕರ್ಮಣಾಂ ವೈಫಲ್ಯ ಕಥನಾದ-ಪ್ರಾಮಾಣಿಕೋಽಯಂ ವಾದ ಇತಿ ಭಾವಃ ॥ ೬೮೪ ॥

**ವಿವರಣೆ–** ಏಕಜೀವವಾದದಲ್ಲಿ ಶ್ರುತಿಸ್ಮೃತಿಗಳು ವಿಧಿಸಿದ ಸಕಲ ಸತ್ಕರ್ಮಗಳನ್ನೂ ನಿಷ್ಫಲವೆಂದು ಹೇಳುವುದರಿಂದ ಆ ಮತವು ಅತ್ಯಂತ ಅಪ್ರಾಮಾಣಿಕವಾದುದು ಎಂದು ಅಭಿಪ್ರಾಯ.

ಬ್ರಹ್ಮಾಪಿ ನಿರ್ಮಮೇ ಸಮ್ಯಕ್ತಪಸೋದ್ಬುದ್ಧಶುದ್ಧದೃಕ್ ।
ಅಸ್ರಾಕ್ಷೀನ್ನಿದ್ರಿತಸ್ತ್ರ್ಯಕ್ಷಸಹಸ್ರಾಕ್ಷಾದಿಕಾನ್ ಕಿಲ ॥ ೬೮೫ ॥

**ಅರ್ಥ–** ಬ್ರಹ್ಮಾಪಿ= ಬ್ರಹ್ಮದೇವರೂ ಕೂಡ, ಸಮ್ಯಕ್ತಪಸಾ= ಸಮೀಚೀನವಾದ ತಪಸ್ಸಿನಿಂದ, ಉದ್ಬುದ್ಧಶುದ್ಧದೃಕ್= ಉಂಟಾದ ಶುದ್ಧವಾದ ಜ್ಞಾನವುಳ್ಳವರಾಗಿ, ನಿರ್ಮಮೇ= ಜಗತ್ತನ್ನು ಸೃಷ್ಟಿಸಿದರು, ನಿದ್ರಿತಃ= ನಿದ್ರೆಮಾಡುತ್ತಿರುವ ಒಬ್ಬ ಜೀವನು, ತ್ರ್ಯಕ್ಷಸಹಸ್ರಾಕ್ಷಾದಿಕಾನ್= ರುದ್ರ ಇಂದ್ರ ಮೊದಲಾದವರನ್ನು, ಅಸ್ರಾಕ್ಷೀತ್ ಕಿಲ= ಸೃಷ್ಟಿಮಾಡಿದನಷ್ಟೇ!

**ಅನುವಾದ–** ಬ್ರಹ್ಮದೇವರೂ ಸಹ ಸಮೀಚೀನವಾದ ತಪಸ್ಸಿನಿಂದ ಉದ್ಬುದ್ಧ ಜ್ಞಾನವುಳ್ಳವರಾಗಿ ಜಗತ್ತನ್ನು ನಿರ್ಮಾಣ ಮಾಡಿದರು. (ಹೀಗಿರುವಾಗ ನಿನ್ನ ರೀತಿಯಲ್ಲಿ) ನಿದ್ರಿತನಾದ ಒಬ್ಬ ಜೀವನು ಮೂರು ಕಣ್ಣುಳ್ಳ ರುದ್ರನನ್ನೂ ಸಹಸ್ರಾಕ್ಷನಾದ ಇಂದ್ರನನ್ನೂ ಸೃಷ್ಟಿ ಮಾಡಿದನಷ್ಟೇ!

**ಭಾವವಿಲಾಸಿನೀ–** ಪುರಾಣಪ್ರಕ್ರಿಯಾವಿರುದ್ಧಂ ಚೇದಂ ಮತಮಿತ್ಯಾಹ – **ಬ್ರಹ್ಮಾಪೀತಿ** ॥ ನಿದ್ರಿತಃ ಏಕಜೀವವಾದಿನೋ ಜೀವಃ । ಭಾಗವತಪುರಾಣೇ ಬ್ರಹ್ಮಣಾಪಿ ಶತವರ್ಷಂ ತಪಸ್ತಪ್ತ್ವಾ ಹರೇಃ ಪ್ರಸಾದೇನ ಜ್ಞಾನದೃಷ್ಟಿಂ ಪ್ರಾಪ್ಯ ಜಗತ್ಸೃಷ್ಟಮಿತ್ಯುಚ್ಯತೇ । ಏಕಜೀವವಾದೀ ತು ನಿದ್ರಿತೋ ಜೀವ ಏವ ಬ್ರಹ್ಮವಿಷ್ಣುಶಿವೇಂದ್ರಾದಿಕಂ ಚೇತನಾಚೇತನಾತ್ಮಕಂ ಸಕಲಜಗತ್ಸೃಜತೀತಿ ವಕ್ತಿ । ಅತಃ ಪುರಾಣಪ್ರಕ್ರಿಯಾವಿರುದ್ಧತ್ವಾತ್ ಅಪ್ರಾಮಾಣಿಕೋ ವಾದ ಇತಿ ಭಾವಃ ॥೬೮೫॥

**ವಿವರಣೆ–** ಈ ನಿನ್ನ ಪ್ರಕ್ರಿಯೆಯು ಪುರಾಣ ಪ್ರಕ್ರಿಯೆಗೆ ವಿರುದ್ಧವಾದುದು ಎಂದು ಹೇಳುತ್ತಾರೆ. ಭಾಗವತ ಪುರಾಣದಲ್ಲಿ ಬ್ರಹ್ಮದೇವರೂ ಕೂಡ ನೂರು ವರ್ಷ ತಪಸ್ಸನ್ನು ಮಾಡಿ ಹರಿಯ ಅನುಗ್ರಹದಿಂದ ದಿವ್ಯಜ್ಞಾನವನ್ನು ಪಡೆದು ಅನಂತರ ಸೃಷ್ಟಿಯನ್ನು ಮಾಡಿದರು ಎಂದು ಹೇಳಲ್ಪಡುತ್ತದೆ. ಏಕಜೀವವಾದಿಯಾದರೋ ನಿದ್ರೆಯಲ್ಲಿರುವ ಒಬ್ಬ ಜೀವನು ಬ್ರಹ್ಮ-ವಿಷ್ಣು-ಮಹೇಶ್ವರಾದಿ ಸಮಸ್ತ ಚೇತನಾಚೇತನಾತ್ಮಕವಾದ ಜಗತ್ತನ್ನು ಸೃಷ್ಟಿ ಮಾಡುತ್ತಾನೆಂದು ಹೇಳುತ್ತಾನೆ. ಆದ್ದರಿಂದ ಪುರಾಣ ಪ್ರಕ್ರಿಯೆಗೆ ವಿರುದ್ಧವಾಗಿ ರುವುದರಿಂದ ಈ ಮತವು ಅಪ್ರಾಮಾಣಿಕ ಎಂದು ಅಭಿಪ್ರಾಯ.

**ಅನಾದಿಕಾಲತೋ ಯಸ್ಯ ನಿದ್ರಾ ಸ ಕಿಲ ಕಲ್ಪಕಃ ।**
**ಅನಿದ್ರಾ ವೇದವೇದಾಂತಕರ್ತಾರಃ ಕಿಲ ಕಲ್ಪಿತಾಃ ॥ ೬೮೬ ॥**

**ಅರ್ಥ–** ಯಸ್ಯ= ಯಾವನಿಗೆ, ಅನಾದಿಕಾಲತಃ= ಅನಾದಿಕಾಲದಿಂದಲೂ, ನಿದ್ರಾ= ನಿದ್ರೆಯಿದೆಯೋ, ಸಃ= ಅವನು, ಕಲ್ಪಕಃ ಕಿಲ= ಕಲ್ಪಕನಷ್ಟೇ, ಅನಿದ್ರಾಃ= ನಿದ್ರಾ ರಹಿತರಾದ, ವೇದವೇದಾಂತಕರ್ತಾರಃ= ವೇದವೇದಾಂತಕರ್ತೃಗಳು, ಕಲ್ಪಿತಾಃ ಕಿಲ= ಕಲ್ಪಿತರಾಗಿರುವವರಷ್ಟೇ.

**ಅನುವಾದ– ಯಾವ ಜೀವನಿಗೆ ಅನಾದಿಕಾಲದಿಂದಲೂ ನಿದ್ರೆಯಿದೆಯೋ ಅವನು ಕಲ್ಪಕನಷ್ಟೇ? ನಿದ್ರಾರಹಿತರಾಗಿ ವೇದವೇದಾಂತಗಳನ್ನು ಪ್ರವರ್ತಿಸುವ ಮತ್ತು ಸೃಷ್ಟಿಸುವರೆಲ್ಲರೂ ಕಲ್ಪಿತರಾದವರಷ್ಟೇ!**

**ಭಾವವಿಲಾಸಿನೀ–** ಇತಶ್ಚಾತಿಪರಿಹಾಸ್ಯೋಽಯಂ ವಾದ ಇತ್ಯಾಹ – **ಅನಾದೀತಿ** ॥ ಯಸ್ಯ ಏಕಜೀವಸ್ಯ । ಸಃ ಏಕಜೀವಃ । ಅನಿದ್ರಾಃಸರ್ವಜ್ಞಾ ವೇದವೇದಾಂತಕರ್ತಾರಃ ನಾರಾಯಣ-ವೇದವ್ಯಾಸಪ್ರಭೃತಯಃ । ಇದಂ ಚಾಂದಶ್ಚರಯತಿ ಚಕ್ಷುಷ್ಮಾಂಶ್ಚರತಿ । ಮೂಕೋ ವಕ್ತಿ ವಾಗ್ಮೀ ಶೃಣೋತೀತ್ಯಾದಿವತ್ಕಥಂ ನ ಪರಿಹಾಸ್ಯಮಿತಿ ಭಾವಃ ॥ ೬೮೬ ॥

**ವಿವರಣೆ–** ಈ ಮತವು ಪರಿಹಾಸಕ್ಕೆ ಆಸ್ಪದವಾದುದು ಎಂಬ ವಿಷಯದಲ್ಲಿ ಇಲ್ಲಿ ಇನ್ನೊಂದು ಯುಕ್ತಿಯನ್ನು ಹೇಳುತ್ತಾರೆ. ಅನಾದಿಕಾಲದಿಂದಲೂ ಯಾವ ಪ್ರವೃತ್ತಿಯನ್ನೂ ಮಾಡದೆ ನಿದ್ರೆಯನ್ನು ಮಾಡುತ್ತಿರುವವನು ಅವನು ಜಗತ್ತಿನ ಸೃಷ್ಟಿಕರ್ತ. ಯಾವಾಗಲೂ ವೇದವೇದಾಂತ ಅಧ್ಯಯನದಲ್ಲಿ ತೊಡಗಿ ನಿದ್ರೆಯನ್ನು ಬಿಟ್ಟು ಚಿಂತನೆಯನ್ನು ಮಾಡುವವರು ಕಲ್ಪಿತರು ಎಂಬುದು ಹಾಸ್ಯಾಸ್ಪದವಾದ ಸಂಗತಿ ಎಂದು ಅಭಿಪ್ರಾಯ.

**ಹೃತಾ ಯೈರಾರ್ಯಮರ್ಯಾದಾ ವೃಥಾ ತೇಷಾಂ ಕಥಾಪಿ ನಃ ।**
**ಅಚೇತನೋ ಗುರುರ್ವಕ್ತಿ ನಿದ್ರಿತಃ ಶೃಣುತೇ ಕಿಲ ॥ ೬೮೭ ॥**

**ಅರ್ಥ–** ಯೈಃ= ಯಾರಿಂದ, ಆರ್ಯಮರ್ಯಾದಾ= ಆರ್ಯರ ಮರ್ಯಾದೆಯು, ಹೃತಾ= ನಾಶಮಾಡಲ್ಪಡುತ್ತದೆಯೋ, ತೇಷಾಂ= ಅಂತಹವರ, ಕಥಾಪಿ= ವಾರ್ತೆಯೂ ಕೂಡ, ನಃ= ನಮಗೆ, ವೃಥಾ= ವ್ಯರ್ಥವಾದುದು, ಅಚೇತನೋ ಗುರುಃ= ಅಚೇತನನಾದ ಗುರುವು, ವಕ್ತಿ= ಮಾತನಾಡುತ್ತಾನೆ, ನಿದ್ರಿತಃ= ನಿದ್ರಿತನಾದ ಶಿಷ್ಯನು, ಶೃಣುತೇ ಕಿಲ= ಕೇಳುತ್ತಾನಷ್ಟೇ.

**ಅನುವಾದ– ಯಾರು ಆರ್ಯಮರ್ಯಾದೆಯನ್ನು ನಾಶಮಾಡುತ್ತಾರೆಯೋ ಅಂತಹವರ ವಾರ್ತೆಯೂ ಸಹ ನಮಗೆ ವ್ಯರ್ಥವಾದುದು. ಅಚೇತನನಾದ ಗುರುವು ಉಪದೇಶ ಮಾಡುತ್ತಾನೆ, ನಿದ್ರಿತನಾದ ಶಿಷ್ಯನು ಕೇಳುತ್ತಾನಷ್ಟೇ!**

**ಭಾವವಿಲಾಸಿನೀ–** ಇದಂ ತ್ವೇಕಜೀವವಾದಮತಂ ವಿದ್ವತ್ಸಭಾಯಾಂ ಕಥಾಯೋಗ್ಯಮಪಿ ನೇತ್ಯಾಹ – **ಕೃತಾ ಯ್ಯಿತ್ಯಾದಿನಾ** ॥ ನಃ ತೇಷಾಂ ಕಥಾಪಿ ವೃಥೇತ್ಯನ್ವಯಃ । ಕಥಮಾರ್ಯ ಮರ್ಯಾದಾಭೇದ ಇತ್ಯತ ಉಕ್ತಮ್ ॥ **ಅಚೇತನ ಇತಿ** ॥ ಅಚೇತನಃ ಜೀವರಹಿತಃ ಕಲ್ಪಿತಜೀವ ಇತ್ಯರ್ಥಃ । ಗುರುಃ ಉಪದೇಷ್ಟಾ। ವಕ್ತಿ ತತ್ವಂ ನಿರೂಪಯತಿ । ನಿದ್ರಿತಃ ಏಕಜೀವಃ ಶೃಣುತೇ ಕಿಲ ॥ ೬೮೭ ॥

**ವಿವರಣೆ–** ಈ ಏಕಜೀವವಾದವು ವಿದ್ವದ್ಸಭೆಯಲ್ಲಿ ಮಾತನಾಡಲು ಅರ್ಹವಾದುದಲ್ಲ ಎಂದು ಇಲ್ಲಿ ಹೇಳುತ್ತಾರೆ. ಅಚೇತನನಾದವನು ಉಪದೇಶ ಮಾಡುತ್ತಾನೆ ಎನ್ನುವುದು ನಿದ್ರಿತನಾದವನು ಶ್ರವಣ ಮಾಡುತ್ತಾನೆಂಬುದು ಎಲ್ಲಾ ಲೌಕಿಕರ ಮತ್ತು ಶಾಸ್ತ್ರಕಾರರ ಮರ್ಯಾದೆಯನ್ನು ಮೀರಿ ಹೇಳುವ ಅಂಶ. ಹಾಗೆ ಮಾತನಾಡುವವರ ವಾರ್ತೆಯೂ ಸಹ ವ್ಯರ್ಥವಾದುದು. ಅದು ವಿದ್ವತ್ಸಭೆಗೆ ಯೋಗ್ಯವಲ್ಲ ಎಂದು ಅಭಿಪ್ರಾಯ.

ಸ್ವಶಿಷ್ಯಾಜ್ಞಾನಜಗುರೋರ್ವಿದ್ಯಾಪಿ ತದವಿದ್ಯಯಾ ।
ಸ ಭೇದಜ್ಞೋಽಯಮೈಕ್ಯಜ್ಞೋ ನಂಕ್ಷ್ಯತ್ಯೇಷ ಸ ಮೋಕ್ಷ್ಯತೇ ॥ ೬೮೮ ॥

**ಅರ್ಥ–** ಸ್ವಶಿಷ್ಯಾಜ್ಞಾನಜಗುರೋಃ= ತನ್ನ ಶಿಷ್ಯನ ಅಜ್ಞಾನದಿಂದ ಕಲ್ಪಿತನಾದ ಗುರುವಿನ, ವಿದ್ಯಾಪಿ= ವಿದ್ಯೆಯೂ ಕೂಡ, ತದವಿದ್ಯಯಾ= ಶಿಷ್ಯನ ಅಜ್ಞಾನದಿಂದಲೇ ಕಲ್ಪಿತವಾದುದು, ಸಃ= ಆ ಗುರುವು, ಭೇದಜ್ಞಃ= ಭೇದವನ್ನು ತಿಳಿದವನು, ಅಯಂ= ಈ ಶಿಷ್ಯನು, ಐಕ್ಯಜ್ಞಃ= ಐಕ್ಯವನ್ನು ತಿಳಿದವನು, ಏಷಃ= ಈ ಗುರುವು, ನಂಕ್ಷ್ಯತಿ= ನಾಶವನ್ನು ಹೊಂದುವನು, ಸಃ= ಆ ಶಿಷ್ಯನು, ಮೋಕ್ಷ್ಯತೇ= ಮೋಕ್ಷವನ್ನು ಪಡೆಯುತ್ತಾನೆ.

**ಅನುವಾದ–** ತನ್ನ ಶಿಷ್ಯನ ಅಜ್ಞಾನದಿಂದ ಕಲ್ಪಿತನಾದ ಗುರುವಿನ ವಿದ್ಯೆಯೂ ಸಹ ಶಿಷ್ಯನ ಅವಿದ್ಯೆಯಿಂದಲೇ ಕಲ್ಪಿತವಾದುದು. ಗುರುವು ಭೇದಜ್ಞಾನಿಯಾದವನು. ಶಿಷ್ಯನು ಮಾತ್ರ ಐಕ್ಯಜ್ಞಾನಿಯು. ಗುರುವು ನಾಶವನ್ನು ಹೊಂದುತ್ತಾನೆ. ಶಿಷ್ಯನು ಮೋಕ್ಷವನ್ನು ಪಡೆಯುತ್ತಾನೆ!

**ಭಾವವಿಲಾಸಿನೀ–** ತದವಿದ್ಯಯಾ ಶಿಷ್ಯಾವಿದ್ಯಯಾ । ಸಃ ಕಲ್ಪಕಃ ಜೀವಃ । ಅಯಂ ಕಲ್ಪ್ಯೋ ಜೀವಃ । ಅನೇನ ಕಲ್ಪಕಜೀವಸ್ಯ ಭೇದಜ್ಞಾನಿತ್ವಾದುಪದೇಷ್ಟರಿ ಕಲ್ಪ್ಯೇ ಜೀವೇ ಐಕ್ಯಜ್ಞಾನಂ ನಿರ್ನಿಮಿತ್ತಮ್ । ಕಲ್ಪಕಾವಿದ್ಯಯಾ ಚೇತ್ ತಸ್ಯೈವ ಕುತೋ ನಾಭೂತ್ । ಅತ ಇದಂ ಚ ಯುಕ್ತಿವಿರುದ್ಧಮಿತಿ ಸೂಚಯತಿ। ಏಷಃ ಉಪದೇಷ್ಟಾ ನಂಕ್ಷ್ಯತಿ ಸ್ವರೂಪತ ಏವ ನಾಶಂ ಪ್ರಾಪ್ಸ್ಯತಿ । ಸಃ ಉಪದೇಶ್ಯಃ ಏಕಜೀವಃ । ಅನೇನ ಗುರೋರ್ನ ಮೋಕ್ಷಃ ಶಿಷ್ಯಸ್ಯ ಮೋಕ್ಷ ಇತ್ಯೇತದಪಿ ಯುಕ್ತಿವಿರುದ್ಧಮಿತಿ ಸೂಚಯತಿ । ಅಚೇತನಸ್ಯ ವಕ್ತೃತ್ವಂ ನಿರ್ದಿತಸ್ಯ ಶ್ರೋತೃತ್ವಂ ಶಿಷ್ಯಸ್ಯ ಕಲ್ಪಕತ್ವಮ್ । ಗುರೋಃ ಕಲ್ಪ್ಯತ್ವಂ ಚ । ವಿದ್ಯಾಯಾ ಅವಿದ್ಯಾಜಾತತ್ವಂ ಸಕಲವೇದ-ಶಾಸ್ತ್ರಾದಿಪ್ರಣೇತುಃ ಶಿಷ್ಯತ್ವಂ ತತ್ಕಲ್ಪ್ಯಸ್ಯ ಗುರುತ್ವಂ ಗುರೋರಮೋಕ್ಷಃ ಶಿಷ್ಯಸ್ಯ ಮೋಕ್ಷಶ್ಚೇತ್ಯಾದಿಕಂ ಯೋ ವಕ್ತಿ ಸೋಽಯಮುನ್ಮತ್ತಃ ಕಥಮಾರ್ಯಾನುಸಾರೀತಿ ಭಾವಃ ॥ ೬೮೮ ॥

**ವಿವರಣೆ–** ಜಗತ್ತೆಲ್ಲವೂ ಮಲಗಿರುವವನ ಅಜ್ಞಾನದಿಂದಲೇ ಕಲ್ಪಿತವಾದ್ದರಿಂದ ಅವನೇ ಶಿಷ್ಯ, ಅವನ ಅಜ್ಞಾನಕಲ್ಪಿತನಾದ ಗುರುವೂ ಮತ್ತು ಗುರುವಿನ ವಿದ್ಯೆಯೂ ಸಹ ಜಗತ್ತಿನಲ್ಲಿ ಸೇರಿದೆ. ಆದ್ದರಿಂದ ಅವೂ ಅಜ್ಞಾನಕಲ್ಪಿತವಾದುವು. ಗುರುವು ಉಪದೇಶ ಮಾಡುವುದರಿಂದ ಶಿಷ್ಯನು ತನಗಿಂತ ಭಿನ್ನನೆಂದು ತಿಳಿದು ಭೇದಜ್ಞಾನಿಯಾಗಿದ್ದಾನೆ. ಶಿಷ್ಯನಾದರೆ ಮೋಕ್ಷವನ್ನು ಪಡೆಯುವ ಕಾರಣದಿಂದ, ಐಕ್ಯಜ್ಞಾನದಿಂದಲೇ ಮೋಕ್ಷವಾಗುವ ಕಾರಣದಿಂದ ಅವನು ಐಕ್ಯಜ್ಞಾನಿಯಾಗಿದ್ದಾನೆ. ಗುರುವು ಕಲ್ಪಿತನಾದ್ದರಿಂದ ನಾಶವನ್ನು ಹೊಂದುತ್ತಾನೆ. ಶಿಷ್ಯನು ಕಲ್ಪಕನಾದ್ದರಿಂದ ಮೋಕ್ಷವನ್ನು ಪಡೆಯುತ್ತಾನೆ. ಹೀಗೆ ಎಲ್ಲವೂ ಆರ್ಯಮರ್ಯಾದೆಗೆ ವಿರುದ್ಧವಾದವು. ಅದರಲ್ಲಿಯೂ ಗುರುವಿನ ವಿದ್ಯೆಯು ಶಿಷ್ಯನ ಅವಿದ್ಯೆಯಿಂದ ಕಲ್ಪಿತ ಎಂದು ಹೇಳಿದರೆ ವಿದ್ಯೆ ಮತ್ತು ಅವಿದ್ಯೆಗಳಿಗಿರುವ ವಿರೋಧವೇ ಇಲ್ಲವೆಂದಾಗುತ್ತದೆ. ಇದು ಅತ್ಯಂತ ಅಪ್ರಾಮಾಣಿಕವಾದುದು. ಆದ್ದರಿಂದ ಏಕಜೀವವಾದಿಗಳು ಹೇಳುವ ಪ್ರತಿಯೊಂದು ಅಂಶವೂ ಆರ್ಯಮರ್ಯಾದೆಯನ್ನು ಮೀರಿದುದು ಎಂದು ಅಭಿಪ್ರಾಯ.

**ಯೋಽಚೀಕ್ಲೃಪಜ್ಜಗತ್ ಸರ್ವಂ ಶಾಸ್ತ್ರಸ್ತುತಿಸಮನ್ವಿತಮ್ ।**
**ಸ ಜೀವಃ ಕಿಲ ಶಿಷ್ಯೋಽಭೂತ್ ಕಲ್ಪ್ಯಃ ಕೋಽಪಿ ಗುರುಃ ಕಿಲ ॥ ೬೮೯ ॥**

**ಅರ್ಥ–** ಯಃ ಜೀವಃ= ಯಾವ ಜೀವನು, ಶಾಸ್ತ್ರಸ್ತುತಿಸಮನ್ವಿತಂ= ಶಾಸ್ತ್ರ ಮತ್ತು ಸ್ತೋತ್ರ ಸಹಿತವಾದ, ಸರ್ವಂ ಜಗತ್= ಎಲ್ಲ ಜಗತ್ತನ್ನು, ಅಚೀಕ್ಲೃಪತ್= ಕಲ್ಪಿಸಿದನೋ (ಸೃಷ್ಟಿಸಿದನೋ), ಸಃ= ಅವನು, ಶಿಷ್ಯಃ ಅಭೂತ್ ಕಿಲ= ಶಿಷ್ಯನಾದನಷ್ಟೇ, ಕಲ್ಪ್ಯಃ= ಕಲ್ಪಿತನಾದ, ಕೋಽಪಿ= ಯಾವನೋ ಒಬ್ಬನು, ಗುರುಃ ಅಭೂತ್ ಕಿಲ= ಗುರುವಾದನಷ್ಟೇ!

**ಅನುವಾದ–** ಯಾವ ಜೀವನು ಶಾಸ್ತ್ರಸ್ತೋತ್ರ ಸಹಿತವಾದ ಸಮಸ್ತ ಜಗತ್ತನ್ನು ಸೃಷ್ಟಿ ಮಾಡುತ್ತಾನೆಯೋ ಅವನು ಶಿಷ್ಯನಾದನು. ಕಲ್ಪಿತನಾದ ಯಾವನೋ ಇನ್ನೊಬ್ಬನು ಗುರುವಾದನಷ್ಟೇ!

**ವಿವರಣೆ–** ಎಲ್ಲವನ್ನೂ ಸೃಷ್ಟಿಸುವ ಸಾಮರ್ಥ್ಯವನ್ನು ಹೊಂದಿರುವ ಅದರಲ್ಲೂ ವಿಶೇಷವಾಗಿ ಜ್ಞಾನಪ್ರದವಾದ ಶಾಸ್ತ್ರಸ್ತೋತ್ರಗಳನ್ನು ಸೃಷ್ಟಿಸುವ ಸಾಮರ್ಥ್ಯವನ್ನು ಹೊಂದಿರುವವನು ಶಿಷ್ಯ. ನಿರ್ಜೀವನಾದ ಶವದಂತೆ ಇರುವವನು ಗುರು ಎಂಬುದು ಎಲ್ಲ ಶಾಸ್ತ್ರ ಮರ್ಯಾದೆಯನ್ನು ಮೀರಿದ ವಿಷಯ ಎಂದು ಅಭಿಪ್ರಾಯ.

**ಯದ್ಯೈಕ್ಯಮಾ ಪ್ರಮಾ ವಕ್ತುಸ್ತರ್ಹಿ ಸ್ವಪ್ನೋಽಪಿ ನ ಭ್ರಮಃ ।**
**ಗೌರವಾದಪ್ರಸಿದ್ಧ್ಯಾದೇರ್ನ ಸ್ವಪ್ನಸ್ಯ ದ್ವಿರೂಪತಾ ॥ ೬೯೦ ॥**

**ಅರ್ಥ–** ಯದಿ= ಒಂದು ಪಕ್ಷ, ವಕ್ತುಃ= ಉಪದೇಶ ಮಾಡುವ ಗುರುವಿನ, ಐಕ್ಯಮಾ= ಐಕ್ಯ ಜ್ಞಾನವು, ಪ್ರಮಾ= ಪ್ರಮಾ ಎಂದಾದರೆ, ತರ್ಹಿ= ಆಗ, ಸ್ವಪ್ನೋಽಪಿ= ಸ್ವಪ್ನವೂ ಕೂಡ,

ಭ್ರಮೋ ನ= ಭ್ರಮವಲ್ಲ, ಗೌರವಾತ್= ಗೌರವದೋಷದಿಂದಲೂ, ಅಪ್ರಸಿದ್ಧ್ಯಾದೇಹಃ= ಮತ್ತು ಅಪ್ರಸಿದ್ಧವಾದ ಕಾರಣದಿಂದಲೂ, ಸ್ವಪ್ನಸ್ಯ= ಸ್ವಪ್ನಕ್ಕೆ, ದ್ವಿರೂಪತಾ= ಎರಡು ಪ್ರಕಾರಗಳನ್ನು, ನ= ಅಂಗೀಕರಿಸಬಾರದು.

**ಅನುವಾದ–** ಉಪದೇಶ ಮಾಡುವ ಗುರುವಿನ ಐಕ್ಯ ಜ್ಞಾನವು ಪ್ರಮಾಣವೆಂದಾದರೆ ಆಗ ಸ್ವಪ್ನವೂ ಭ್ರಮವಲ್ಲ ಎಂದಾಗುತ್ತದೆ. ಕೆಲವು ಸ್ವಪ್ನಗಳು ಭ್ರಮ, ಕೆಲವು ಸ್ವಪ್ನಗಳು ಪ್ರಮಾ ಎಂದು ಅಂಗೀಕರಿಸಿದರೆ ಗೌರವದೋಷವೂ, ಅಪ್ರಸಿದ್ಧ್ಯಾದಿ ದೋಷಗಳೂ ಬರುವುದರಿಂದ ಸ್ವಪ್ನಕ್ಕೆ ಹಾಗೆ ಎರಡು ಪ್ರಕಾರಗಳನ್ನು ಅಂಗೀಕರಿಸಬಾರದು.

**ಭಾವವಿಲಾಸಿನೀ– ದೋಷಾಂತರಂ ಚಾಹ – ಯದೀತಿ ॥ ವಕ್ತುಃ ಸ್ವಪ್ನೇ ಕಲ್ಪಿತಸ್ಯ ಗುರೋಃ । ಐಕ್ಯಮಾ ಐಕ್ಯಜ್ಞಾನಮ್ । ಯದಿ ಪ್ರಮಾ ತರ್ಹಿ ಸ್ವಪ್ನಸ್ಸರ್ವೋಽಪಿ ಭ್ರಮಃ ಭ್ರರೂಪೋಽನ । ಸ್ವಪ್ನಸರ್ವೋಽಪಿ ಭ್ರಾಂತಿರೇವೇತಿ ಮತಂ ಗತಮಿತಿ ಭಾವಃ । ನನು ಕಶ್ಚಿತ್ ಸ್ವಪ್ನಃ ಪ್ರಮಾ-ರೂಪೋಽಪ್ಯಸ್ತೀತ್ಯತ ಆಹ – ಗೌರವಾದಿತಿ ॥ ಆದಿಪದೇನಾಪಸಿದ್ಧಾಂತಂ ಪ್ರಮಾಣಾಭಾವಂ ಚ ಸಂಗೃಹ್ಣಾತಿ ॥ ೬೯೦ ॥**

**ವಿವರಣೆ–** ಏಕಜೀವವಾದಕ್ಕೆ ಇಲ್ಲಿ ದೋಷಾಂತರವನ್ನು ಹೇಳುತ್ತಾರೆ. ಉಪದೇಶಕನಾದ ಗುರುವಿನ ಐಕ್ಯಜ್ಞಾನವು ಪ್ರಮಾಣವೋ ಅಥವಾ ಭ್ರಮವೋ? ಪ್ರಮಾಣವೆಂದು ಅಂಗೀಕರಿಸಿದರೆ ಸ್ವಪ್ನ ಪದಾರ್ಥವು ಸತ್ಯ ಎಂದಾಗುವುದರಿಂದ ಎಲ್ಲ ಸ್ವಪ್ನವೂ ಭ್ರಾಂತಿ ಎಂಬ ಮತವು ಬಿದ್ದುಹೋಗುತ್ತದೆ. ಸ್ವಪ್ನದಲ್ಲಿ ಕಾಣುವ ಐಕ್ಯಜ್ಞಾನ ಮಾತ್ರ ಪ್ರಮಾರೂಪವಾದುದು, ಉಳಿದ ಜ್ಞಾನಗಳು ಭ್ರಮರೂಪವಾದವು ಎಂದು ಅಂಗೀಕರಿಸಿದರೆ, ಎರಡು ಪ್ರಕಾರಗಳನ್ನು ಅಂಗೀಕರಿಸುವುದರಿಂದ ಗೌರವ ದೋಷವೂ, ಲೋಕದಲ್ಲಿ ಅಂತಹ ಎರಡು ಪ್ರಕಾರಗಳನ್ನು ಕಾಣದಿರುವುದರಿಂದ ಅಪ್ರಸಿದ್ಧಿಯೂ, ಸ್ವಪ್ನ ಪದಾರ್ಥಗಳ ಸತ್ಯತ್ವವನ್ನು ಒಪ್ಪದಿರುವ ನಿನಗೆ ಅಪಸಿದ್ಧಾಂತವೂ ಉಂಟಾಗುತ್ತದೆ ಮತ್ತು ಎರಡು ಪ್ರಕಾರಗಳನ್ನು ಒಪ್ಪುವುದಕ್ಕೆ ಪ್ರಮಾಣವೂ ಇಲ್ಲ ಎಂದು ಅಭಿಪ್ರಾಯ.

ಸ್ವಪ್ನೋ ನ ಚೇನ್ನ ಜೀವೈಕ್ಯಂ ತತ್ರೈವ ದ್ರಷ್ಟುರೇಕತಾ ॥ ೬೯೧ ॥

**ಅರ್ಥ–** ಸ್ವಪ್ನೋ ನ ಚೇತ್= ಆ ಗುರುವಿನ ಉಪದೇಶವು ಸ್ವಪ್ನವಲ್ಲ ಎಂದು ಹೇಳುವುದಾದರೆ, ಜೀವೈಕ್ಯಂ ನ= ಜೀವರ ಐಕ್ಯವು ಸಿದ್ಧವಾಗುವುದಿಲ್ಲ, ಏಕೆಂದರೆ, ತತ್ರೈವ= ಸ್ವಪ್ನದಲ್ಲಿ ಮಾತ್ರ, ದ್ರಷ್ಟುರೇಕತಾ= ನೋಡುವ ಜೀವನು ಒಬ್ಬನೇ ಇರುತ್ತಾನಷ್ಟೇ.

**ಅನುವಾದ–** ಆ ಗುರುವಿನ ಉಪದೇಶವು ಸ್ವಪ್ನವಲ್ಲ ಅದು ಜಾಗ್ರದವಸ್ಥೆಯೇ ಎಂದು ಅಂಗೀಕರಿಸಿದರೆ ಹಾಗಾದರೆ ಜೀವೈಕ್ಯವು ಸಿದ್ಧವಾಗುವುದಿಲ್ಲ. ಏಕೆಂದರೆ ಸ್ವಪ್ನದಲ್ಲಿ ಮಾತ್ರ ದ್ರಷ್ಟುವಾದ ಜೀವನ ಐಕ್ಯವು ಇರುವುದಷ್ಟೇ!

**ಭಾವವಿಲಾಸಿನೀ–** ತರ್ಹಿ ಸ್ವಪ್ನೋಮಾಸ್ತು ಜಾಗ್ರದ್ದಶೈವಾಸ್ತು ಕೋ ದೋಷ ಇತ್ಯತ ಆಹ –**ಸ್ವಪ್ನೋ ನ ಚೇದಿತಿ** ॥ ಜೀವೈಕ್ಯಂ ಜೀವಸ್ಯೈಕತಾ । ತತ್ರೈವ ಸ್ವಪ್ನ ಏವ । ದ್ರಷ್ಟುರ್ಜೀವಸ್ಯ । ಏಕ ಏವ ದ್ರಷ್ಟಾ । ಅನ್ಯತ್ಸರ್ವಂ ತದ್ಭ್ರಮಕಲ್ಪಿತಮಿತಿ ಸ್ವಪ್ನ ಏವ ಶಂಕಿತುಂ ಯೋಗ್ಯಂ, ಜಾಗ್ರದವಸ್ಥಾಯಾಂ ದ್ರಷ್ಟುರೇಕತಾ ಸರ್ವಸ್ಯಾಪ್ಯನಭಿಮತೈವೇತಿ ಭಾವಃ । ಉಪಲಕ್ಷಣಂ ಚೈತತ್ । ಸ್ವಪ್ನಾದನ್ಯತ್ರ ದೃಶ್ಯಮಾನಬಹುಜೀವಾನಾಂ ಏಕಜೀವಕಲ್ಪಿತತ್ವಾ ಸಂಭವೇನ । ಬಹುಜೀವವಾದಾಪಾತಾತ್ । ಸ್ವಪ್ನಾದನ್ಯತ್ರ ಮಹೀಮಹೀಧರಾದೇರೇಕಜೀವಕೃತತ್ವಾಯೋಗಾಚ್ಚ ॥ ೬೧ ॥

**ವಿವರಣೆ–** ನಾವು ಈ ಜಗತ್ತಿನ ವ್ಯವಸ್ಥೆಯನ್ನು ಸ್ವಪ್ನ ಎಂದು ಹೇಳುವುದಿಲ್ಲ ಜಾಗ್ರದವಸ್ಥೆಯೇ ಎಂದು ಹೇಳುತ್ತೇವೆ ಎಂದರೆ ಅದಕ್ಕೆ ಇಲ್ಲಿ ದೋಷವನ್ನು ಹೇಳುತ್ತಾರೆ. ಸ್ವಪ್ನಾವಸ್ಥೆ ಎಂದು ಅಂಗೀಕರಿಸಿದರೆ, ಸ್ವಪ್ನದಲ್ಲಿ ಒಬ್ಬನೇ ಜೀವನು ದ್ರಷ್ಟುವಾಗಿರುವುದರಿಂದ ಏಕಜೀವವಾದವನ್ನು ಹೇಳಬೇಕು, ಜಾಗ್ರದವಸ್ಥೆ ಎಂದು ಅಂಗೀಕರಿಸಿದರೆ, ಜಾಗ್ರದವಸ್ಥೆಯಲ್ಲಿ ಅನೇಕ ಜೀವರು ಅನುಭವ ಸಿದ್ಧರಾಗಿರುವುದರಿಂದ ನಿನ್ನ ಏಕಜೀವವಾದವು ಬಿದ್ದು ಹೋಗುತ್ತದೆ. ಈ ದೋಷವನ್ನು ಉಪಲಕ್ಷಣವೆಂದು ಇಟ್ಟುಕೊಳ್ಳಬೇಕು. ಸ್ವಪ್ನವನ್ನು ಬಿಟ್ಟು ಬೇರೆ ಕಡೆಯಲ್ಲಿ ಕಾಣುವ ಬಹುಜೀವರು ಏಕಜೀವ ಕಲ್ಪಿತರಲ್ಲವಾದ ಕಾರಣ ಮತ್ತು ಜಾಗ್ರದವಸ್ಥೆಯಲ್ಲಿ ಕಾಣುವ ಮಹಿ ಮಹೀಧರಾದಿಗಳೆಲ್ಲವೂ ಏಕಜೀವ ಕಲ್ಪಿತವಲ್ಲದ ಕಾರಣ, ಎಲ್ಲ ಜಗತ್ತೂ ಏಕಜೀವದಿಂದ ಕಲ್ಪಿತ ಎಂಬ ವಾದವು ಬಿದ್ದುಹೋಗುತ್ತದೆ ಎಂದು ಅಭಿಪ್ರಾಯ.

**ಜಾಗ್ರದ್ದಶೈವ ಸ್ವಪ್ನಸ್ಯ ಸಾಮ್ಯಾದ್ ಯದಿ ಚ ತಾದೃಶೀ ।**
**ಸರ್ವಸಾಮ್ಯೇ ಸ ಏವ ಸ್ಯಾತ್ ಕಿಂಚಿತ್ಸಾಮ್ಯೇ ನ ಕಿಂಚನ ॥ ೬೨ ॥**

**ಅರ್ಥ–** ಯದಿ= ಒಂದು ಪಕ್ಷ, ಜಾಗ್ರದ್ದಶೈವ= ಜಾಗ್ರದವಸ್ಥೆಯೇ, ಸ್ವಪ್ನಸ್ಯ ಸಾಮ್ಯಾತ್= ಸ್ವಪ್ನದ ಸಾಮ್ಯವು ಇರುವ ಕಾರಣದಿಂದ, ತಾದೃಶೀ= ಏಕಜೀವ ಉಳ್ಳದ್ದು ಎಂದು ಹೇಳಿದರೆ, ಆಗ, ಸರ್ವಸಾಮ್ಯೇ= ಎಲ್ಲ ರೀತಿಯ ಸಾಮ್ಯವು ಇದ್ದರೆ, ಸ ಏವ ಸ್ಯಾತ್= ಅದು ಸ್ವಪ್ನವೇ ಆಗುತ್ತದೆ, ಕಿಂಚಿತ್ಸಾಮ್ಯೇ= ಅಲ್ಪಸಾಮ್ಯವಿದ್ದರೆ, ನ ಕಿಂಚನ= ಏನೂ ಸಾಧಿಸಲು ಬರುವುದಿಲ್ಲ (ಎಂದು ಉತ್ತರವನ್ನು ಹೇಳುತ್ತೇವೆ).

**ಅನುವಾದ–** ಜಾಗ್ರದವಸ್ಥೆಯಲ್ಲಿಯೇ ಸ್ವಪ್ನಸಾಮ್ಯವಿರುವುದರಿಂದ ಜೀವೈಕ್ಯವಿದೆ ಎಂದು ಹೇಳುವುದಾದರೆ ಸ್ವಪ್ನಸಾಮ್ಯವು ಸರ್ವಪ್ರಕಾರದಿಂದ ಸಾಮ್ಯವೋ ಅಥವಾ ಅಲ್ಪಸಾಮ್ಯವೋ ಎಂದು ನಾವು ಕೇಳುತ್ತೇವೆ. ಸರ್ವಪ್ರಕಾರದಿಂದ ಸಾಮ್ಯವಿದ್ದರೆ ಅದು ಸ್ವಪ್ನಾವಸ್ಥೆಯೇ ಆಗುತ್ತದೆ. ಅಲ್ಪಸಾಮ್ಯವಿದ್ದರೆ ಅದರಿಂದ ಏನನ್ನೂ ಸಾಧಿಸಲು ಬರುವುದಿಲ್ಲ (ಎಂದು ನಮ್ಮ ಉತ್ತರ).

**ಭಾವವಿಲಾಸಿನೀ–** ನನು ಜಾಗ್ರದ್ದಶಾಮೇವ ಪಕ್ಷೀಕೃತ್ಯ ಸ್ವಪ್ನಸಮತ್ವೇನ ಹೇತುನಾ ದ್ರಷ್ಟ್ರೈಕ್ಯಂ ಸಾಧ್ಯತ ಇತ್ಯತ ಆಹ – **ಜಾಗ್ರದ್ದಶೈವೇತಿ** ॥ ತಾದೃಶೀ ಸ್ವಪ್ನವತ್ ದ್ರಷ್ಟುರೇಕತ್ವವತೀ । ಸರ್ವಸಾಮ್ಯಂ ವಾ

**ಕಿಂಚಿತ್ ಸಾಮ್ಯಂ ವೇತಿ ಹೇತುಂ ವಿಕಲ್ಪ್ಯ ದೂಷಯತಿ ॥ ಸರ್ವೇತಿ ॥ ಸ ಏವ ಸ್ವಪ್ನ ಏವ । ತಥಾ ಚ ಹೇತೋರಸಿದ್ಧಿಃಸ್ಯಾದಿತಿ ಭಾವಃ । ಕಿಂಚಿತ್ ಸಾಮ್ಯಮಪಿ ವಸ್ತುತ್ವಾದಿನಾ ಸಾಮ್ಯಂ ವಾऽವಸ್ಥಾತ್ವೇನ ವಾ ಸಾಧ್ಯೇನ ತದ್ವ್ಯಾಪ್ಯೇನ ವೇತಿ ವಿಕಲ್ಪ್ಯ ಕ್ರಮೇಣ ದೂಷಯತಿ ॥ ಕಿಂಚಿತ್ ಸಾಮ್ಯ ಇತಿ ॥ ಕಿಂಚ ನ ಕಿಮಪಿ ನ । ಕಿಂಚಿತ್ ಸ್ವಪ್ನಸಾಮ್ಯೇನ ದ್ರಷ್ಟ್ರೈಕ್ಯಂ ಸಾಧಯಿತುಂ ನ ಶಂಕ್ಯತೇ । ತಥಾ ಸತಿ ದ್ರವ್ಯತ್ವೇನ ಘಟವತ್‌ಪಟಸ್ಯಾಪಿ ಜಲಾಹರಣೋಪಯೋಗಿತ್ವ ಸಾಧನ ಪ್ರಸಂಗಂ ಇತಿ ಭಾವಃ ॥ ೬೨ ॥**

**ವಿವರಣೆ–** ನಾವು ಜಾಗ್ರದವಸ್ಥೆಯನ್ನೇ ಪಕ್ಷವನ್ನಾಗಿ ಮಾಡಿ ಸ್ವಪ್ನ ಸಮತ್ವರೂಪವಾದ ಹೇತುವಿನಿಂದ ದ್ರಷ್ಟೃವಿನ ಏಕತ್ವವನ್ನು ಸಾಧಿಸುತ್ತೇವೆ ಎಂದು ಶಂಕೆ ಮಾಡಿದರೆ (ಜಾಗ್ರದವಸ್ಥಾ ದ್ರಷ್ಟೃ ಏಕತ್ವವತೀ ಸ್ವಪ್ನಸಾಮ್ಯಾತ್ ಸ್ವಪ್ನವತ್ ಜಾಗ್ರದವಸ್ಥೆಯು ದ್ರಷ್ಟೃವಾದ ಒಂದೇ ಜೀವವನ್ನು ಹೊಂದಿದ್ದಾಗಿದೆ, ಸ್ವಪ್ನಸಾಮ್ಯವಿರುವುದರಿಂದ ಸ್ವಪ್ನಾವಸ್ಥೆಯಂತೆ) ಅದಕ್ಕೆ ಇಲ್ಲಿ ಉತ್ತರವನ್ನು ಹೇಳುತ್ತಾರೆ. ಜಾಗ್ರತ್ ದೆಶೆಯಲ್ಲಿ ಸರ್ವಪ್ರಕಾರದಿಂದ ಸ್ವಪ್ನಸಾಮ್ಯವಿದ್ದರೆ ಅದನ್ನು ಸ್ವಪ್ನಾವಸ್ಥೆಯೆಂದೇ ಕರೆಯಬೇಕು. ಆಗ ಸ್ವಪ್ನಸಾಮ್ಯ ಎಂಬ ಹೇತುವಿಗೆ ಅಸಿದ್ಧಿಯು ಉಂಟಾಗುತ್ತದೆ. ಅಲ್ಪ ಸಾಮ್ಯವನ್ನು ಅಂಗೀಕರಿಸಿದರೆ ಅದು ವಸ್ತುತ್ವೇನ ಸಾಮ್ಯವೋ ಅಥವಾ ಸಾಧ್ಯವತ್ತ್ವೇನ ಸಾಮ್ಯವೋ ಅಥವಾ ಸಾಧ್ಯವ್ಯಾಪ್ಯೇನ ಧರ್ಮೇಣ ಸಾಮ್ಯವೋ ಎಂದು ನಮ್ಮ ಪ್ರಶ್ನೆ. ವಸ್ತುತ್ವೇನ ಸಾಮ್ಯ ಎಂದರೆ ಅದರಿಂದ ಏನೂ ಸಾಧಿಸಲು ಬರುವುದಿಲ್ಲ. ಇಲ್ಲದಿದ್ದರೆ ಅತಿಪ್ರಸಂಗವು ಬರುತ್ತದೆ. ಪಟಃ ಜಲಾಹರಣ ಯೋಗ್ಯಃ ವಸ್ತುತ್ವಾತ್ ಘಟವತ್= ಪಟವು ನೀರನ್ನು ತರಲು ಯೋಗ್ಯವಾಗಿದೆ ವಸ್ತುವಾದ್ದರಿಂದ ಘಟದಂತೆ ಎಂಬ ಅನುಮಾನದಿಂದ ಪಟಕ್ಕೂ ಜಲಾಹರಣ ಯೋಗ್ಯತೆಯನ್ನು ಸಾಧನೆ ಮಾಡಬಹುದು. ಆದ್ದರಿಂದ ವಸ್ತುತ್ವೇನ ಸಾಮ್ಯವು ಅಪ್ರಯೋಜಕವಾದುದು ಎಂದು ಅಭಿಪ್ರಾಯ.

**ದಶಾತ್ವಸಾಮ್ಯೇ ತೇನೈವ ಸ್ವಪ್ನೋಪ್ಯೇತಾದೃಶೋ ಭವೇತ್ ।**
**ಸಾಧ್ಯೇನ ಸಾಮ್ಯಂ ನಾಸಿದ್ಧೇರ್ವ್ಯಾಪ್ಯೇನ ಸಮತಾಪಿ ನ ॥ ೬೩ ॥**

**ಅರ್ಥ–** ದಶಾತ್ವಸಾಮ್ಯೇ= ದಶಾತ್ವರೂಪಧರ್ಮದಿಂದ ಸಾಮ್ಯವನ್ನು ಹೇಳುವುದಾದರೆ, ತೇನೈವ= ಅದೇ ಹೇತುವಿನಿಂದ, ಸ್ವಪ್ನೋಪಿ= ಸ್ವಪ್ನವೂ ಕೂಡ, ಏತಾದೃಶಃ= ಬಹು ಜೀವವುಳ್ಳದ್ದಾಗಿಯೇ, ಭವೇತ್= ಆಗುತ್ತವೆ, ಅಸಿದ್ಧೇಃ= ಪರವಾದಿಗಳಾದ ನಾವು ಅಂಗೀಕರಿಸದಿರುವುದರಿಂದ, ಸಾಧ್ಯೇನ= ಸಾಧ್ಯದಿಂದ, ಸಾಮ್ಯಂ= ಸಾಮ್ಯವಾಗಲೀ, ವ್ಯಾಪ್ಯೇನ= ವ್ಯಾಪ್ಯಧರ್ಮದಿಂದ, ಸಮತಾಪಿ= ಸಾಮ್ಯವಾಗಲೀ, ನ= ಇಲ್ಲ.

**ಅನುವಾದ–** ಅವಸ್ಥಾತ್ವೇನ ಸಾಮ್ಯವನ್ನು ಹೇಳಿದರೆ ಅದೇ ಹೇತುವಿನಿಂದ ಸ್ವಪ್ನವೂ ಸಹ ಜಾಗ್ರದವಸ್ಥೆಯಂತೆ ಬಹುಜೀವವುಳ್ಳದ್ದೇ ಆಗುತ್ತದೆ. ಪ್ರತಿವಾದಿಗಳಾದ ನಾವು

ಅಂಗೀಕರಿಸದಿರುವುದರಿಂದ ಸಾಧ್ಯದಿಂದಾಗಲೀ ಅಥವಾ ಸಾಧ್ಯವ್ಯಾಪ್ಯ ಧರ್ಮದಿಂದಾಗಲೀ ಸಾಮ್ಯವಿಲ್ಲ.

**ಭಾವವಿಲಾಸಿನೀ–** ತೇನೈವ ದಶಾತ್ವೇನೈವ । ಏತಾದೃಶಃ ಜಾಗ್ರದವಸ್ಥಾವದ್ದ್ರಷ್ಟುರನೇಕತ್ವವಾನ್ । ಸಾಧ್ಯೇನ ದ್ರಷ್ಟುರೇಕತ್ವೇನ । ಅಸಿದ್ಧೇಃ ಪ್ರತಿವಾದಿನಃ ಜಾಗ್ರದವಸ್ಥಾಯಾಂ ದ್ರಷ್ಟುರೇಕತ್ವಾಸಿದ್ಧ್ಯಾಽನ್ಯತರಾಸಿದ್ಧೇಃ॥ ವ್ಯಾಪ್ಯೇನ ಸಮತಾಽಪ್ಯಸಿದ್ಧೇರ್ನೇತಿ ಸಂಬಂಧಃ ॥ ೬೯೩ ॥

**ವಿವರಣೆ–** ಅವಸ್ಥಾತ್ವದಿಂದ ಸಾಮ್ಯವೆಂದು ಹೇಳಿದರೆ ಜಾಗ್ರದ್ದಶಾ, ಏಕಜೀವವತೀ, ಅವಸ್ಥಾತ್ವಾತ್, ಸ್ವಪ್ನವತ್ ಜಾಗ್ರದವಸ್ಥೆಯು ಏಕಜೀವದಿಂದ ಕೂಡಿದ ಅವಸ್ಥೆಯಾಗಿರುವುದರಿಂದ ಸ್ವಪ್ನಾವಸ್ಥೆಯಂತೆ ಎಂದು ಅನುಮಾನವನ್ನು ಪ್ರಯೋಗ ಮಾಡಿದಂತಾಯಿತು. ಇದಕ್ಕೆ ಪ್ರತಿಯಾಗಿ ನಾವು ಸ್ವಪ್ನಾವಸ್ಥಾ ಬಹುಜೀವವತೀ ಅವಸ್ಥಾತ್ವಾತ್ ಜಾಗ್ರದವಸ್ಥಾವತ್ : ಸ್ವಪ್ನಾವಸ್ಥೆಯು ಬಹುಜೀವರಿಂದ ಕೂಡಿದ್ದಾಗಿದೆ, ಅವಸ್ಥೆಯಾದ್ದರಿಂದ ಜಾಗ್ರದವಸ್ಥೆಯಂತೆ ಎಂದು ಪ್ರತ್ಯನುಮಾನವನ್ನು ಪ್ರಯೋಗಿಸಲು ಬರುವುದರಿಂದ ಅವಸ್ಥಾತ್ವದಿಂದ ಸಾಮ್ಯವನ್ನು ಹೇಳಲು ಸಾಧ್ಯವಿಲ್ಲ. ಇನ್ನು ಸಾಧ್ಯದಿಂದ ಸಾಮ್ಯ ಎಂದರೆ ಏಕಜೀವವತ್ವೇನ ಸಾಮ್ಯ ಎಂದು ಅರ್ಥ. ಏಕೆಂದರೆ ಇಲ್ಲಿ ಸಾಧ್ಯವಾದುದು ಏಕಜೀವವತ್ತ್ವ. ಸಾಧ್ಯವ್ಯಾಪ್ಯಧರ್ಮದಿಂದ ಸಾಮ್ಯ ಎಂದರೆ ಏಕಜೀವವತ್ವ ವ್ಯಾಪ್ಯಧರ್ಮದಿಂದ ಸಾಮ್ಯ ಎಂದು ಅರ್ಥ. ಪ್ರತಿವಾದಿಗಳಾದ ನಾವು ಏಕಜೀವವತ್ತ್ವವನ್ನು ಒಪ್ಪದಿರುವುದರಿಂದ ಏಕಜೀವವತ್ವೇನ ಸಾಮ್ಯವೂ ಇಲ್ಲ. ಅದೇ ಕಾರಣದಿಂದಲೇ ಏಕಜೀವವತ್ವ ವ್ಯಾಪ್ಯಧರ್ಮವನ್ನೂ ಒಪ್ಪದೇ ಇರುವುದರಿಂದ, ಸಾಧ್ಯವ್ಯಾಪ್ಯ ಧರ್ಮದಿಂದ ಸಾಮ್ಯವೂ ಇರುವುದಿಲ್ಲ. ಆದ್ದರಿಂದ ವಸ್ತುತ್ವದಿಂದಾಗಲೀ, ಅವಸ್ಥಾತ್ವದಿಂದಾಗಲೀ, ಸಾಧ್ಯಧರ್ಮದಿಂದಾಗಲೀ, ಸಾಧ್ಯವ್ಯಾಪ್ಯಧರ್ಮದಿಂದಾಗಲೀ ಸಾಮ್ಯವನ್ನು ಹೇತುವನ್ನಾಗಿ ಮಾಡಲು ಬರುವುದಿಲ್ಲ ಎಂದು ಅಭಿಪ್ರಾಯ.

**ಬಾಹ್ಯಾಕ್ಷೋಪರಮಶ್ಚಾತ್ರ ನ ಚೇತ್ ಕಿಂ ನಾನುಮೀಯತೇ ।**
**ಜಾಗ್ರತ್ತ್ವಾತ್ ಸ ನ ಚೇದೇಕಜೀವತಾಪ್ಯತ ಏವ ನ ॥ ೬೯೪ ॥**

**ಯದಿ ಸೋಽಪಿ ತದಾ ಶ್ರೋತ್ರಾಭಾವಾನ್ನ ಶ್ರೋತೃತಾಸ್ಯ ಹಿ ।**
**ಶ್ರೋತಾ ನ ಚೇನ್ನ ಪ್ರಬೋಧೋದ್ಧಾ ತತಃ ಶಾಸ್ತ್ರಮನರ್ಥಕಂ ॥ ೬೯೫ ॥**

**ಅರ್ಥ–** ನ ಚೇತ್= ದ್ರಷ್ಟೃವಿಗೆ ಏಕತ್ವವಿದೆ ಎಂಬ ಅನುಮಾನವನ್ನು ನೀನು ಪರಿತ್ಯಜಿಸುವುದಿಲ್ಲವಾದರೆ, ಅತ್ರ= ಜಾಗ್ರದವಸ್ಥೆಯಲ್ಲಿ, ಬಾಹ್ಯಾಕ್ಷೋಪರಮಶ್ಚ= ಬಾಹ್ಯೇಂದ್ರಿಯದ ಉಪರಮವನ್ನು, ಕಿಂ ನಾನುಮೀಯತೇ= ಏಕೆ ಅನುಮಾನವನ್ನು ಮಾಡುವುದಿಲ್ಲ, ಜಾಗ್ರತ್ತ್ವಾತ್= ಜಾಗ್ರದವಸ್ಥೆಯಾದುದರಿಂದ, ಸಃ= ಬಾಹ್ಯೇಂದ್ರಿಯ ಉಪರಮವು, ನ ಚೇತ್= ಇಲ್ಲವೆಂದು ಹೇಳುವುದಾದರೆ, ಅತ ಏವ= ಅದೇ

ಕಾರಣದಿಂದಲೇ, ಏಕಜೀವತಾಪಿ= ಏಕಜೀವತ್ವವೂ ಕೂಡ, ನ= ಇಲ್ಲ, ಯದಿ= ಒಂದು ಪಕ್ಷ, ಸೋಪಿ= ಬಾಹ್ಯೇಂದ್ರಿಯ ಉಪರಮವನ್ನೂ ಅಂಗೀಕರಿಸುವುದಾದರೆ, ತದಾ= ಆಗ, ಶ್ರೋತ್ರಾಭಾವಾತ್= ಶ್ರೋತ್ರೇಂದ್ರಿಯವೇ ಇಲ್ಲದಿರುವುದರಿಂದ, ಅಸ್ಯ= ಈ ಶಿಷ್ಯಜೀವನಿಗೆ, ಶ್ರೋತೃತಾ ನಹಿ= ಶ್ರೋತೃತ್ವವೇ ಇರುವುದಿಲ್ಲ, ಶ್ರೋತಾ ನ ಚೇತ್= ಶ್ರೋತೃವೇ ಇಲ್ಲವೆಂದಾದರೆ, ಪ್ರಬೋದ್ಧಾ ನ= ಶಾಸ್ತ್ರದಿಂದ ಜ್ಞಾನವನ್ನು ಪಡೆಯುವವನೂ ಇರುವುದಿಲ್ಲ, ತತಃ= ಆ ಕಾರಣದಿಂದ, ಶಾಸ್ತ್ರಂ= ಶಾಸ್ತ್ರವು, ಅನರ್ಥಕಂ= ವ್ಯರ್ಥವಾಗುತ್ತದೆ.

**ಅನುವಾದ–** ಸ್ವಪ್ನಸಾಮ್ಯದಿಂದ ಜಾಗ್ರದವಸ್ಥೆಯಲ್ಲಿ ಏಕಜೀವವನ್ನೇ ಸಾಧಿಸುತ್ತೇನೆ ಎಂದು ಹಠವನ್ನು ಹಿಡಿದರೆ ಹಾಗಾದರೆ ಅದೇ ಸ್ವಪ್ನಸಾಮ್ಯದಿಂದ ಬಾಹ್ಯೇಂದ್ರಿಯ ಉಪರಮವನ್ನೂ ಏಕೆ ಸಾಧಿಸುವುದಿಲ್ಲ? ಅದನ್ನೂ ಸಾಧಿಸು ಎಂದು ನಮ್ಮ ಆಕ್ಷೇಪ. ಜಾಗ್ರದವಸ್ಥೆಯಾದುದರಿಂದ ಬಾಹ್ಯೇಂದ್ರಿಯ ಉಪರಮವು ಇಲ್ಲವೆಂದು ಹೇಳಿದರೆ ಅದೇ ಕಾರಣದಿಂದ ಜಾಗ್ರದವಸ್ಥೆಯಂತೆಯೇ ಜೀವೈಕ್ಯವೂ ಇಲ್ಲ ಎಂದೇ ಸಿದ್ಧವಾಗುತ್ತದೆ. ಒಂದು ಪಕ್ಷ ಸ್ವಪ್ನದಂತೆ ಜಾಗ್ರದವಸ್ಥೆಯಲ್ಲಿಯೂ ಬಾಹ್ಯೇಂದ್ರಿಯದ ಉಪರಮವನ್ನು ಅಂಗೀಕರಿಸುತ್ತೇನೆ ಎಂದು ಹೇಳಿದರೆ ಶಿಷ್ಯನಿಗೆ ಶ್ರೋತ್ರೇಂದ್ರಿಯವೇ ನಿರ್ವ್ಯಾಪಾರವಾಗಿರುವುದರಿಂದ ಆಗ ಶ್ರೋತೃವೇ ಇಲ್ಲವೆಂದಾಗುತ್ತದೆ. ಶ್ರೋತೃವೇ ಇಲ್ಲವೆಂದಾದರೆ ಶಾಸ್ತ್ರದಿಂದ ಜ್ಞಾನ ಪಡೆದು ಉದ್ಬುದ್ಧನಾಗುವವನಿಲ್ಲ ಎಂದಾಯಿತು. ಆದ್ದರಿಂದ ಶಾಸ್ತ್ರವು ವ್ಯರ್ಥವಾಗುತ್ತದೆ.

**ಭಾವವಿಲಾಸಿನೀ–** ವಿಪಕ್ಷೇ ಬಾಧಕಮಾಹ – **ಬಾಹ್ಯೇತಿ** ॥ ಅತ್ರ ಜಾಗ್ರದವಸ್ಥಾಯಾಮ್ । ನಚೇತ್ ದ್ರಷ್ಟುರೇಕತ್ವಾನುಮಾನಂ ನ ತ್ಯಜಸಿ ಚೇತ್ ಸ್ವಪ್ನವತ್ ಜಾಗ್ರದವಸ್ಥಾಯಾಂ ದ್ರಷ್ಟುರೇಕತ್ವಂ ಸಾಧ್ಯತೇಚೇತ್ । ಸಮಾನನ್ಯಾಯತ್ವಾತ್ ಬಾಹ್ಯಾಕ್ಷೋಪರಮೋಽಪಿ ಸಾಧ್ಯಃಸ್ಯಾತ್ । ಬಾಧಾನ್ನ ಚೇತ್ ತದಪಿ ನ ಸ್ಯಾದಿತಿ ಭಾವಃ । ಸಃ ಬಾಹ್ಯಾಕ್ಷೋಪರಮಃ । ಅತ ಏವ ಜಾಗ್ರತ್ತ್ವಾದೇವ ॥ ಸೋಽಪಿ ಬಾಹ್ಯಾಕ್ಷೋಪರಮೋಽಪಿ । ಅಂಗೀಕ್ರಿಯತ ಇತ್ಯರ್ಥಃ । ಅಸ್ಯೈಕಜೀವಸ್ಯ । ಪ್ರಬೋದ್ಧಾ ಐಕ್ಯಪ್ರಮಾವಾನ್ । ತತಃ ಪ್ರಬೋದ್ಧುರಭಾವಾತ್ । ಬಾಹ್ಯಾಕ್ಷೋಪ-ರಮಾಂಗೀಕಾರೇ ತನ್ಮಧ್ಯಪತಿತ ಶ್ರೋತ್ರಸ್ಯಾಪ್ಯಭಾವಪ್ರಸಂಗೇನೈಕಜೀವಸ್ಯ ಶ್ರವಣಜನ್ಯಾ-ಪರೋಕ್ಷಜ್ಞಾನಸ್ಯಾಪ್ಯಭಾವಾನ್ಮೋಕ್ಷಾಭಾವ ಪ್ರಸಂಗ ಇತಿ ಭಾವಃ ॥ ೬೯ ॥

**ವಿವರಣೆ–** ಹಠವನ್ನು ಹಿಡಿದು ಸ್ವಪ್ನಾವಸ್ಥೆಯಂತೆ ಜಾಗ್ರದವಸ್ಥೆಯಲ್ಲಿ ಏಕಜೀವವನ್ನೇ ಸಾಧನೆ ಮಾಡುತ್ತೇವೆ ಎಂದು ಹೇಳಿದರೆ ಈ ಅನುಮಾನಕ್ಕೆ ಆಭಾಸಸಮಾನ ಯೋಗಕ್ಷೇಮವು ಮತ್ತು ಬಾಧವು ಉಂಟಾಗುತ್ತದೆ ಎಂದು ಈ ಶ್ಲೋಕಗಳಲ್ಲಿ ಹೇಳುತ್ತಾರೆ. ಜಾಗ್ರದವಸ್ಥಾ ಬಾಹ್ಯೇಂದ್ರಿಯೋಪರಮವತೀ ಅವಸ್ಥಾತ್ವಾತ್ ಸ್ವಪ್ನಾವಸ್ಥಾವತ್ ಎಂಬ ಅನುಮಾನದಿಂದ ಜಾಗ್ರದವಸ್ಥೆಯಲ್ಲಿಯೂ ಬಾಹ್ಯೇಂದ್ರಿಯೋ ಪರಮವನ್ನು ಅಂಗೀಕರಿಸಬೇಕಾದ ಪ್ರಸಂಗವು ಬರುತ್ತದೆ. ಹಾಗೆ ಅಂಗೀಕರಿಸಿದರೆ ಶಿಷ್ಯನಿಗೆ ಎಲ್ಲ

ಇಂದ್ರಿಯಗಳು ನಿರ್ವ್ಯಾಪಾರವಾಗಿರುವುದರಿಂದ ಅವನಿಂದ ಶಾಸ್ತ್ರ ಶ್ರವಣವಾಗಲೀ, ಶಾಸ್ತ್ರ ಶ್ರವಣದಿಂದ ಜ್ಞಾನವಾಗಲೀ ಯಾವುದೂ ಉಂಟಾಗುವುದಿಲ್ಲ. ಆದ್ದರಿಂದ ಶಾಸ್ತ್ರವು ವ್ಯರ್ಥವಾಗುತ್ತದೆ ಎಂಬ ಬಾಧಕವಿದೆ. ಆದ್ದರಿಂದ ಏಕಜೀವವಾದವನ್ನು ಅಂಗೀಕರಿಸಬಾರದು ಎಂದು ಅಭಿಪ್ರಾಯ.

ಕಿಂಚ ಸ್ವಪ್ನಸ್ಯ ಸರ್ವಸ್ಯ ನ ದ್ರಷ್ಟೈಕೋ ಗೃಹೇ ಗೃಹೇ ।
ಅತಸ್ತದ್ದ್ರಷ್ಟೃಬಾಹುಲ್ಯಸ್ಯೈವಾಪ್ತೇಃ ಕ್ವಚ ತೇ ಮತಂ ॥ ೬೯೬ ॥

**ಅರ್ಥ–** ಕಿಂಚ= ಮತ್ತು, ಗೃಹೇ ಗೃಹೇ= ಮನೆ ಮನೆಗಳಲ್ಲಿಯೂ, ಸರ್ವಸ್ಯ ಸ್ವಪ್ನಸ್ಯ= ಎಲ್ಲ ಸ್ವಪ್ನಗಳನ್ನೂ, ದ್ರಷ್ಟಾ= ನೋಡುವವನು, ಏಕೋ ನ= ಒಬ್ಬನೇ ಅಲ್ಲ, ತದ್ವತ್= ಅದರಂತೆ, ದ್ರಷ್ಟೃಬಾಹುಲ್ಯಸ್ಯೈವ= ದ್ರಷ್ಟೃಬಹುತ್ವವೇ, ಆಪ್ತೇಃ= ಸಿದ್ಧವಾಗುವುದರಿಂದ, ತೇ ಮತಂ= ನಿನ್ನ ಮತವು, ಕ್ವ= ಎಲ್ಲಿ ಹೋಯಿತು.

**ಅನುವಾದ–** ಮತ್ತು ಮನೆ ಮನೆಗಳಲ್ಲಿ ಸ್ವಪ್ನವನ್ನು ನೋಡುವವರು ಒಬ್ಬನೇ ಅಲ್ಲ ಭಿನ್ನ ಭಿನ್ನರಾಗಿಯೇ ಇದ್ದಾರೆ. ಆದ್ದರಿಂದ ಸ್ವಪ್ನದೃಷ್ಟಾಂತದಿಂದ ದ್ರಷ್ಟೃಬಹುತ್ವವೇ ಸಿದ್ಧವಾಗುತ್ತದೆ. ನಿನ್ನ ಏಕಜೀವವಾದವು ಎಲ್ಲಿ ಹೋಯಿತು?

**ಭಾವವಿಲಾಸಿನೀ–** ದೂಷಣಾಂತರಂ ಚಾಹ – **ಕಿಂಚೇತಿ** ॥ ತದ್ವತ್ ಸ್ವಪ್ನವತ್ । ತೇ ಮತಂ ದ್ರಷ್ಟೈಕ್ಯಮತಮ್ । ಸ್ವಪ್ನಸಾಮ್ಯೇನ ಹಿ ಪರೇಣ ದ್ರಷ್ಟೈಕ್ಯಂ ಸಿಷಾಧಯಿಷಿತಮ್ । ಸ್ವಪ್ನದ್ರಷ್ಟಾರಶ್ಚ ಗೃಹೇ ಗೃಹೇ ಬಹವೋ ದೃಶ್ಯಂತೇ । ಅತಃ ಸ್ವಪ್ನಸಾಮ್ಯೇನಾಪಿ ದ್ರಷ್ಟೃಬಾಹುಲ್ಯಸ್ಯೈವ ಸಿದ್ಧೇಃಏಕಜೀವಮತಂ ಗತಮಿತಿ ಭಾವಃ ॥ ೬೯೬ ॥

**ವಿವರಣೆ–** ಅನುಭವಕ್ಕೆ ಅನುಸಾರವಾಗಿ ಶಾಸ್ತ್ರಪ್ರಮೇಯವನ್ನು ಸಾಧನೆ ಮಾಡಬೇಕು. ಅನುಭವವಂತೂ ಪ್ರತಿಯೊಂದು ಮನೆಯಲ್ಲಿಯೂ ಸ್ವಪ್ನಗಳನ್ನು ನೋಡುವ ಜನರು ಅನೇಕರೇ ಇದ್ದಾರೆ ಎಂದು ತೋರಿಸುತ್ತದೆ. ಹೀಗಿರುವಾಗ ಸ್ವಪ್ನಸಾಮ್ಯದಿಂದ ಏಕಜೀವವಾದವು ಹೇಗೆ ಸಿದ್ಧವಾಗುತ್ತದೆ? ಪ್ರತ್ಯುತ ಅದಕ್ಕೆ ವಿರುದ್ಧವಾಗಿ ಜೀವಬಹುತ್ವವೇ ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

ನ ಸಂತೀಮೇ ಯದಿ ಸ್ವಪ್ನನಿದರ್ಶನಮದರ್ಶನಂ ।
ಪ್ರಾಪ್ನೋತಿ ತೇಽನುಮಾನಸ್ಯ ನಾದೃಷ್ಟೋ ದೃಷ್ಟಖಂಡನೇ ॥ ೬೯೭ ॥

ಯದ್ಯೇತೇಷಾಮಪಿ ದ್ರಷ್ಟಾ ಸ ಏವೇತಿ ಮತಂ ತವ ।
ನ ತನ್ಮಮ ಮತಂ ತೇನ ಸ್ವದರ್ಶನನಿದರ್ಶನಂ ॥ ೬೯೮ ॥

**ಅರ್ಥ–** ಇಮೇ ಸ್ವಪ್ನಾಃ= ಈ ಸ್ವಪ್ನಗಳು, ಯದಿ =ಒಂದು ಪಕ್ಷ, ನ ಸಂತಿ= ಇಲ್ಲವೆಂದು ಹೇಳುವುದಾದರೆ, ತೇ= ನಿನ್ನ, ಅನುಮಾನಸ್ಯ= ಅನುಮಾನದ, ನಿದರ್ಶನಂ= ದೃಷ್ಟಾಂತವು,

ಆದರ್ಶನಂ ಪ್ರಾಪ್ನೋತಿ= ನಾಶವನ್ನು ಹೊಂದುತ್ತದೆ, ದೃಷ್ಟಖಂಡನೇ= ಅನುಭವಸಿದ್ಧವಾದ ಸ್ವಪ್ನದಲ್ಲಿ ಜೀವಬಹುತ್ವವನ್ನು ನಿರಾಕರಣೆ ಮಾಡುವುದಕ್ಕೆ, ಅದೃಷ್ಟಃ= ಯಾರ ಅನುಭವಕ್ಕೂ ಬರದಿರುವ ಏಕಜೀವವಾದವು, ನ= ಸಮರ್ಥವಾಗುವುದಿಲ್ಲ, ಯದಿ= ಒಂದು ಪಕ್ಷ, ಏತೇಷಾಮಪಿ= ಈ ಮನೆಮನೆಗಳಲ್ಲಿ ಬೀಳುವ ಸ್ವಪ್ನಗಳಿಗೂ, ಸ ಏವ= ಆ ಕಲ್ಪಕನಾದ ಜೀವನೇ, ದ್ರಷ್ಟಾ= ನೋಡುವವನು ಎಂದು, ತವ ಮತಂ= ನಿನ್ನ ಅಭಿಪ್ರಾಯವಾದರೆ, ತತ್= ಅದು, ನ ಮಮ ಮತಂ= ನನ್ನ ಮತವಲ್ಲ, ತೇನ= ಆ ಕಾರಣದಿಂದ, ಸ್ವದರ್ಶನನಿದರ್ಶನಂ= ನಿನ್ನ ಮತದಿಂದ ಮಾತ್ರ ಹೇಳಿದ ದೃಷ್ಟಾಂತ ಎಂದಾಗುತ್ತದೆ.

**ಅನುವಾದ–** ಮನೆಮನೆಗಳಲ್ಲಿ ಬೀಳುವ ಈ ಸ್ವಪ್ನಗಳು ಇಲ್ಲವೇ ಇಲ್ಲ ಎಂದು ಹೇಳುವುದಾದರೆ ನಿನ್ನ ಅನುಮಾನಕ್ಕೆ ದೃಷ್ಟಾಂತವಾಗಿ ನೀಡಿದ ಸ್ವಪ್ನವು ಇಲ್ಲವೆಂದಾಯಿತು. ಸರ್ವಾನುಭವಸಿದ್ಧವಾದ ಸ್ವಪ್ನದ್ರಷ್ಟೃಬಹುತ್ವವನ್ನು ಏಕಜೀವವಾದವು ನಿರಾಕರಣೆ ಮಾಡಲು ಸಮರ್ಥವಾಗುವುದಿಲ್ಲ. ಈ ಮನೆಮನೆಗಳಲ್ಲಿ ಬೀಳುವ ಸ್ವಪ್ನಕ್ಕೂ ಕಲ್ಪಕನಾದ ಜೀವನೇ ದ್ರಷ್ಟಾ ಎಂದು ಹೇಳುವುದಾದರೆ ಅದು ನಿನ್ನ ಮತವಾಯಿತು, ನನ್ನ ಮತವಲ್ಲ. ಆದ್ದರಿಂದ ದೃಷ್ಟಾಂತವು ನಿನಗೆ ಮಾತ್ರ ಸಮ್ಮತವಾಯಿತು.

**ಭಾವವಿಲಾಸಿನೀ–** ಪರಾಭಿಪ್ರಾಯಮುದ್ಘಾಟ್ಯ ದೂಷಯತಿ ॥ **ನೇತಿ** ॥ ಏಕಜೀವಸ್ಯ ಸ್ವತ ಏವ ಮುಖ್ಯಸ್ವಪ್ನಃ । ಇಮೇ ತು ಸ್ವಪ್ನಾಃ ತದೀಯಸ್ವಾಪ್ನಸ್ವಪ್ನತ್ವಾತ್ಸ್ವಪ್ನಾ ಏವ ನ ಭವಂತಿ । ಅತಃ ಸ್ವಪ್ನೇ ದ್ರಷ್ಟೃಬಾಹುಲ್ಯಂ ಕುತ್ರ ಸಿದ್ಧಮಿತಿ ಯದಿ ಮನ್ಯಸೇ ತದಾ ಸನ್ಯಸೇರ್ಜಾಗ್ರದ್ದಶಾತ್ವ ಪಕ್ಷಮ್ । ಕಿಂಚ ತೇಽನುಮಾನಸ್ಯ ವಿಮತೋ ಜಗತ್‌ಸ್ವಪ್ನಃ ಏಕಜೀವವಾನ್ । ಸ್ವಪ್ನತ್ವಾತ್ ಸಂಪ್ರತಿಪನ್ನಸ್ವಪ್ನವದಿತ್ಯನುಮಾನಸ್ಯ । ನಿದರ್ಶನಂ ದೃಷ್ಟಾಂತಃ ಅದರ್ಶನಂ ಲೋಪಂ ಪ್ರಾಪ್ನೋತೀತಿಯೋಜನಾ । ಸರ್ವಜನಸಂಪ್ರತಿಪನ್ನಸ್ವಪ್ನಾನಾಂ ಸರ್ವಥಾಽಸ್ವಪ್ನತ್ವೇಽನುಮಾನಸ್ಯ ದೃಷ್ಟಾಂತ ಏವ ನಾಸ್ತಿ । ಸ್ವಪ್ನತ್ವೇ ಚ ತದ್ವತ್ ದ್ರಷ್ಟೃಬಾಹುಲ್ಯಸಿದ್ಧಿರಿತ್ಯುಭಯತಃಪಾಶಾರಜ್ಜುರಿತಿ ಭಾವಃ । ದೂಷಣಾಂತರಂ ಚಾಹ – **ನಾದೃಷ್ಟ ಇತಿ** ॥ ದೃಷ್ಟಖಂಡನೇ ದೃಷ್ಟಾನಾಂ ಸರ್ವಜನ-ಸಂಪ್ರತಿಪನ್ನಾನಾಮೇಷಾಂ ಸ್ವಪ್ನಾನಾಂ ಖಂಡನೇ । ಅದೃಷ್ಟಃ ಸರ್ವೈರನನುಭೂಯ-ಮಾನಸ್ತವೈಕಜೀವಸ್ವಪ್ನಃ ನ ನ ಸಿದ್ಧ್ಯೇತ್ । ತತಶ್ಚ ತವಾನುಮಾನಸ್ಯಾಽಶ್ರಯಾಸಿದ್ಧಿರಪಿ ಸ್ಯಾದಿತಿ ಭಾವಃ ॥ **ಶಂಕತೇ – ಯದೀತಿ** ॥ ಏಕಜೀವವಾದಿಮತೇ ದೇಹಾಂತರೇ ಚೇತನಾಂತರಾಭಾವಾತ್ ಗೃಹೇ ಗೃಹೇ ದೃಶ್ಯಮಾನಸ್ವಪ್ನಾನಾಮಪಿ ಸ ಏವ ಏಕಜೀವ ಏವ ದ್ರಷ್ಟೇತಿ ಮತಮ್ । ತತ್ ಸರ್ವಸ್ವಪ್ನಾನಾಂ ತ್ವದಭಿಮತೈಕಜೀವದ್ರಷ್ಟೃಕತ್ವಮ್ । ತೇನ ಮಮಾಸಂಮತತ್ವೇನ । ಸ್ವದರ್ಶನ ನಿದರ್ಶನಂ ಸ್ವದರ್ಶನೇನಸ್ವಸಿದ್ಧಾಂತೇನೈವ ನಿದರ್ಶನಂ ದೃಷ್ಟಾಂತೋ ನತು ಮದ್ದರ್ಶನರೀತ್ಯಾ । ಮಯಾ ತೇಷಾಂ ತೇಷಾಂ ಸ್ವಪ್ನಾನಾಂತತ್ತಜ್ಜೀವದ್ರಷ್ಟೃಕತ್ವಾಂಗೀಕಾರಾತ್ । ತತಶ್ಚ ಮದ್ರೀತ್ಯಾ ದೃಷ್ಟಾಂತಸ್ಯ ಸಾಧ್ಯವೈಕಲ್ಯಮಿತಿ ಭಾವಃ ॥ ೬೯೭-೬೯೮ ॥

**ವಿವರಣೆ–** ಅನುಭವಕ್ಕೆ ಬರುತ್ತಿರುವ ಸ್ವಪ್ನಗಳು ಮಲಗಿ ನಿದ್ರಿಸುತ್ತಿರುವ ಜೀವನ ಸ್ವಪ್ನದಲ್ಲಿ ಬೀಳುತ್ತಿರುವ ಸ್ವಪ್ನಗಳು. ಆದ್ದರಿಂದ ಇವು ಸ್ವಪ್ನಗಳೇ ಅಲ್ಲ ಎಂದರೆ ಆಗ ನಿನ್ನ ಅನುಮಾನಕ್ಕೆ ದೃಷ್ಟಾಂತವೇ ಇಲ್ಲವೆಂದಾಯಿತು. ಏಕೆಂದರೆ ನಿನ್ನ ಅನುಮಾನವು ಜಾಗ್ರತ್ ಕಾಲೀನವಾದ ಈ ಸ್ವಪ್ನವು ಏಕಜೀವವುಳ್ಳದ್ದಾಗಿದೆ ಸ್ವಪ್ನವಾದ್ದರಿಂದ. ಸಮ್ಮತವಾದ ಸ್ವಪ್ನದಂತೆ ಎಂದಿದೆಯಷ್ಟೇ. ಈಗ ಸ್ವಪ್ನಗಳೆಲ್ಲವೂ ಸ್ವಪ್ನಗಳೇ ಅಲ್ಲ ಎಂದು ಹೇಳಿದ ಮೇಲೆ ಸಮ್ಮತವಾದ ಸ್ವಪ್ನಗಳೇ ಇಲ್ಲದಿರುವುದರಿಂದ ಅನುಮಾನಕ್ಕೆ ದೃಷ್ಟಾಂತವೇ ಇಲ್ಲವೆಂದಾಯಿತು. ಇನ್ನು ಈಗ ನಮ್ಮ ಅನುಭವಕ್ಕೆ ಬರುತ್ತಿರುವ ಸ್ವಪ್ನಗಳೂ ಸಹ ನಮ್ಮ ಸ್ವಪ್ನಗಳಲ್ಲ ಅದು ಮಲಗಿ ನಿದ್ರಿಸುತ್ತಿರುವ ಆ ಕಲ್ಪಕನಾದ ಏಕಜೀವನ ಸ್ವಪ್ನಗಳು ಎಂದು ಹೇಳುವುದಾದರೆ ನಮ್ಮ ಮತದಲ್ಲಿ ಅಂತಹ ಸ್ವಪ್ನವನ್ನು ಅಂಗೀಕರಿಸುವುದಿಲ್ಲವಾದ ಕಾರಣ ಸ್ವಪ್ನವತ್ ಎಂಬ ನಿನ್ನ ದೃಷ್ಟಾಂತವು ನಿನಗೆ ಮಾತ್ರ ಸಮ್ಮತ, ನಮಗೆ ಸಮ್ಮತವಲ್ಲವಾದ್ದರಿಂದ ನಿನ್ನ ದೃಷ್ಟಾಂತಕ್ಕೆ ಸಾಧ್ಯವೈಕಲ್ಯರೂಪದೋಷವು ಬರುತ್ತದೆ ಎಂದು ಅಭಿಪ್ರಾಯ.

ಸಂಧ್ಯೇ ಸೃಷ್ಟಿರಿತಿ ಪ್ರೋಕ್ತೇಃ ಸ್ವಾಪ್ನವ್ಯಾಘ್ರಗಜಾದಯಃ ।
ಸರ್ವೇ ಸತ್ಯಾಶ್ಚೇತನಾಶ್ಚ ತತ್ಸ್ವಪ್ನೋಽನಲ್ಪಜೀವವಾನ್ ॥ ೬೯ ॥

**ಅರ್ಥ–** ಸಂಧ್ಯೇ ಸೃಷ್ಟಿರಿತಿ ಪ್ರೋಕ್ತೇಃ= ಸಂಧ್ಯೇ ಸೃಷ್ಟಿರಾಹಹಿ ಎಂದು ಬ್ರಹ್ಮಸೂತ್ರದಲ್ಲಿ ಹೇಳಿರುವುದರಿಂದ, ಸ್ವಾಪ್ನವ್ಯಾಘ್ರಗಜಾದಯಃ ಸರ್ವೇ= ಸ್ವಪ್ನದಲ್ಲಿ ಕಾಣುವ ವ್ಯಾಘ್ರ ಗಜ ಮೊದಲಾದವು ಎಲ್ಲವೂ, ಸತ್ಯಾಶ್ಚೇತನಾಶ್ಚ= ಸತ್ಯವೂ ಮತ್ತು ಚೇತನವೂ ಆಗಿವೆ, ತತ್= ಆ ಕಾರಣದಿಂದ, ಸ್ವಪ್ನಃ= ಸ್ವಪ್ನವು, ಅನಲ್ಪಜೀವವಾನ್= ಬಹುಜೀವರನ್ನು ಉಳ್ಳದ್ದಾಗಿದೆ.

**ಅನುವಾದ–** ಸಂಧ್ಯೇ ಸೃಷ್ಟಿರಾಹ ಹಿ ಎಂದು ಬ್ರಹ್ಮಸೂತ್ರದಿಂದ ಸ್ವಪ್ನದಲ್ಲಿ ಕಾಣುವ ವ್ಯಾಘ್ರಗಜಾದಿಗಳೆಲ್ಲವೂ ಸತ್ಯ ಮತ್ತು ಚೇತನಗಳೆಂದು ಸಿದ್ಧವಾಗುತ್ತದೆ. ಆದ್ದರಿಂದ ಸ್ವಪ್ನವೂ ಸಹ ಬಹುಜೀವರನ್ನು ಹೊಂದಿದ್ದೇ ಆಗಿದೆ.

**ಭಾವವಿಲಾಸಿನೀ–** ಪ್ರಕಾರಾಂತರೇಣಾಪ್ಯೇಕಜೀವವಾದೇ ದೃಷ್ಟಾಂತಾಭಾವ- ಮುಪಪಾದಯತಿ – ಸಂಧ್ಯ ಇತಿ ॥ ಸಂಧ್ಯೇ ಸುಷುಪ್ತಿಜಾಗ್ರದವಸ್ಥಯೋಃಸಂಧೌ ವಿದ್ಯಮಾನೇ ಸ್ವಪ್ನ ಇತ್ಯರ್ಥಃ । ಸಂಧ್ಯೇ ಸೃಷ್ಟಿರಾಹ ಹೀತಿ ಸೂತ್ರೇ ಅಥ ರಥಾನ್ ರಥಯೋಗಾನ್ಪಥಃ ಸೃಜತ ಇತಿ ಸೂತ್ರ- ಖಂಡೋದಿತಶ್ರುತ್ಯಾ ಸ್ವಾಪ್ನಪದಾರ್ಥಾನಾಂ ಸೃಷ್ಟಿಪ್ರೋಕ್ತೇರಿತ್ಯರ್ಥಃ । ಚೇತನಾಃ ಪ್ರತ್ಯೇಕಂ ಚೇತನಭರಿತಾಃ । ಯಥಾ ಜಾಗ್ರದವಸ್ಥಾಯಾಂ ಸೃಷ್ಟಾ ಗಜಾದಯಶ್ಚೇತನಾಸ್ತಥಾ ಸ್ವಾಪ್ನಗಜಾದಯೋಽಪಿ ಭಗವತ್ ಸೃಷ್ಟತ್ವಾಚ್ಚೇತನಾ ಏವ । ಇಯಾಂಸ್ತು ವಿಶೇಷಃ । ಏತೇ ಸ್ವಸ್ವಕಾರಣಜನಿತಾ ಬಹುಕಾಲಾವಸ್ಥಾಯಿನಶ್ಚ । ಸ್ವಾಪ್ನಾಸ್ತು ವಾಸನೋಪಾದಾನಾಃ ಆಶುತರವಿನಾಶಿನಶ್ಚೇತಿ । ತತ್ತಸ್ಮಾತ್ ಸ್ವಾಪ್ನಗಜಾದೀನಾಮಪಿ ಪ್ರತ್ಯೇಕಂ ಚೇತನಾತ್ಮಕತ್ವಾತ್ । ಅನಲ್ಪಜೀವವಾನ್ ಬಹುಜೀವವಾನ್ ॥ ೬೯ ॥

**ವಿವರಣೆ–** ಏಕಜೀವವಾದದಲ್ಲಿ ದೃಷ್ಟಾಂತವಿಲ್ಲವೆಂದು ಇಲ್ಲಿ ಇನ್ನೊಂದು ಪ್ರಕಾರದಿಂದ ಉಪಪಾದನೆ ಮಾಡುತ್ತಾರೆ. ಸಂಧ್ಯೇ ಸೃಷ್ಟಿರಾಹಹಿ ಎಂಬ ಬ್ರಹ್ಮಸೂತ್ರದಲ್ಲಿ ಜಾಗ್ರದವಸ್ಥೆ ಮತ್ತು ಸುಷುಪ್ತ್ಯವಸ್ಥೆಯ ಸಂಧಿಯಲ್ಲಿರುವ ಸ್ವಪ್ನದಲ್ಲಿ ಭಗವಂತನಿಂದ ಸೃಷ್ಟಿಯು ಹೇಳಲ್ಪಟ್ಟಿದೆ. ಅಲ್ಲಿ ವಿಷಯವಾಕ್ಯ ಅಥ ರಥಾನ್ ರಥಯೋಗಾನ್ ಪಥಃ ಸೃಜತೇ ಎಂಬುದು. ಅಲ್ಲಿ ಅಶ್ವಾದಿ ಸೃಷ್ಟಿಯನ್ನು ಹೇಳಿದ್ದಾರೆ. ಮಿಥ್ಯಾ ಪದಾರ್ಥಕ್ಕೆ ಸೃಷ್ಟಿ ಇಲ್ಲ, ಶುಕ್ತಿರಜತಕ್ಕೆ ಎಂದೂ ಸೃಷ್ಟಿ ಇಲ್ಲ. ಸೃಷ್ಟಿಯನ್ನು ಹೊಂದುವ ಪದಾರ್ಥವು ಎಂದೂ ಸತ್ಯವೇ ಆಗಿರಬೇಕು. ಅಶ್ವಾದಿಗಳಿಗೆ ಭಗವಂತನಿಂದ ಸೃಷ್ಟಿಯನ್ನು ಹೇಳಿರುವುದರಿಂದ ಅವು ಸತ್ಯವೇ ಮತ್ತು ಚೇತನವೇ. ಆದ್ದರಿಂದ ಸ್ವಪ್ನದಲ್ಲಿಯೂ ಕೂಡ ಸ್ವಪ್ನವನ್ನು ನೋಡುವವನು ಒಬ್ಬ ಚೇತನ, ಹಯಗಜಾದಿಗಳು ಬೇರೆ ಚೇತನಗಳು. ಹೀಗಾಗಿ ಅಲ್ಲಿಯೂ ಜೀವ ಬಹುತ್ವವೇ ಇದೆ. ಹೀಗಿರುವಾಗ ಜೀವೈಕ್ಯವನ್ನು ಹೇಳಲು ನಿನಗೆ ಸ್ವಪ್ನದೃಷ್ಟಾಂತವು ಅನುಕೂಲವಾಗುವುದಿಲ್ಲ ಎಂದು ಅಭಿಪ್ರಾಯ.

**ಅತಸ್ತತ್ರೈಕಜೀವತ್ವಂ ಪ್ರತಿವಾದೀ ನ ಮನ್ಯತೇ ।**
**ತತ್ ಸಪಕ್ಷೋ ವಿಪಕ್ಷೋಽಸ್ಯ ಸಾಧನಂ ಚಾಪ್ಯಸಾಧನಂ ॥ ೭೦೦ ॥**

**ಅರ್ಥ–** ಅತಃ= ಆ ಕಾರಣದಿಂದ, ತತ್ರ= ಸ್ವಪ್ನದಲ್ಲಿ, ಪ್ರತಿವಾದೀ= ಪ್ರತಿವಾದಿಯಾದ ತತ್ತ್ವವಾದಿಯು, ಏಕಜೀವತ್ವಂ= ಏಕಜೀವತ್ವವನ್ನು, ನ ಮನ್ಯತೇ= ಅಂಗೀಕರಿಸುವುದಿಲ್ಲ, ತತ್= ಆದ್ದರಿಂದ, ಅಸ್ಯ= ಈ ಏಕಜೀವವಾದಿಯ, ಸಪಕ್ಷಃ= ಸಪಕ್ಷವು, ವಿಪಕ್ಷಃ= ವಿಪಕ್ಷವಾಯಿತು, ಸಾಧನಂ ಚಾಪಿ= ಹೇತುವು, ಅಸಾಧನಂ= ಸಾಧ್ಯವನ್ನು ಸಾಧಿಸುವಲ್ಲಿ ಅಸಮರ್ಥವಾಯಿತು.

**ಅನುವಾದ–** ಆದ್ದರಿಂದ ಸ್ವಪ್ನದಲ್ಲಿ ಏಕಜೀವತ್ವವನ್ನು ಪ್ರತಿವಾದಿಯಾದ ತತ್ತ್ವವಾದಿಯು ಅಂಗೀಕರಿಸುವುದಿಲ್ಲ. ಆದ್ದರಿಂದ ನಿನಗೆ ಸಪಕ್ಷವು ವಿಪಕ್ಷವೇ ಆಯಿತು. ಹೇತುವು ಸಾಧ್ಯಸಾಧಕವಾಗುವುದಿಲ್ಲ.

**ಭಾವವಿಲಾಸಿನೀ–** ಅತಃ ಬಹುಜೀವವತ್ತ್ವಾತ್ । ಪ್ರತಿವಾದಿ ತತ್ವವಾದೀ । ತತ್ತಸ್ಮಾತ್ ಸ್ವಪ್ನಸ್ಯ ಬಹುಜೀವವತ್ತ್ವಾತ್ । ಅಸ್ಯ ಪರಾನುಮಾನಸ್ಯ । ಸಾಧನಂ ಸ್ವಪ್ನತ್ವಾದಿತಿ ಸಾಧನಮ್ । ಅಸಾಧನಂ ಪರಾಭಿಲಷಿತೈಕಜೀವವತ್ತ್ವಾಖ್ಯಸಾಧ್ಯಾಸಾಧನಮ್ । ಕಿಂತು ಬಹುಜೀವವತ್ತ್ವಸ್ಯೈವ ಸಾಧನಮಭೂದಿತ್ಯರ್ಥಃ ॥ ೭೦೦ ॥

**ವಿವರಣೆ–** ಏಕಜೀವವಾದಿಗಳಿಗೆ ಸ್ವಪ್ನವು ದೃಷ್ಟಾಂತ. ದೃಷ್ಟಾಂತವೆಂದರೆ ನಿಶ್ಚಿತವಾದ ಸಾಧ್ಯವುಳ್ಳ ಧರ್ಮಿ ಎಂದು ಅರ್ಥ. ಇಲ್ಲಿ ಏಕಜೀವವತ್ತ್ವವು ಸಾಧ್ಯ. ಆದರೆ ಸ್ವಪ್ನದಲ್ಲಿ ನಾವು ಉಪಪಾದನೆ ಮಾಡಿದಂತೆ ಏಕಜೀವವತ್ತ್ವವು ಇಲ್ಲದಿರುವುದರಿಂದ ಅಲ್ಲಿ ಸಾಧ್ಯವೇ ಬರಲಿಲ್ಲ. ಸಾಧ್ಯಬರದಿದ್ದರೆ ಅದು ಸಪಕ್ಷವಾಗುವುದಿಲ್ಲ, ವಿಪಕ್ಷವಾಗುತ್ತದೆ.

ಇನ್ನು ಹೇತುವಿಗೆ ವ್ಯಾಪ್ತಿಯ ಬಲಬೇಕು. ವ್ಯಾಪ್ತಿಯು ದೃಷ್ಟಾಂತದಿಂದ ಗೃಹೀತವಾಗಬೇಕು. ಆದರೆ ದೃಷ್ಟಾಂತವು ವಿಪಕ್ಷವಾದಾಗ ವ್ಯಾಪ್ತಿಗ್ರಹವೇ ಉಂಟಾಗುವುದಿಲ್ಲ. ಆದ್ದರಿಂದ ಹೇತುವು ಸಾಧ್ಯಸಾಧಕವಾಗುವುದಿಲ್ಲ ಎಂದು ಅಭಿಪ್ರಾಯ.

**ತಸ್ಯೈವಾಯಂ ಯದಿ ಸ್ವಪ್ನಃ ಕಸ್ಯ ಜಾಗರಣಂ ವದ ।**
**ತಚ್ಚ ತಸ್ಯೈವ ಚೇದೇತೇ ವಿರುದ್ಧೇ ಕಥಮೇಕದಾ ॥ ೭೦೦ ॥**

**ಅರ್ಥ–** ಅಯಂ ಸ್ವಪ್ನಃ= ಈ ನಮ್ಮ ಅನುಭವಕ್ಕೆ ಬರುವ ಸ್ವಪ್ನವು, ಯದಿ= ಒಂದು ಪಕ್ಷ, ತಸ್ಯೈವ= ಆ ಕಲ್ಪಕನಾದ ಜೀವನಿಗೇ ಎಂದು ಹೇಳಿದರೆ, ಜಾಗರಣಂ= ಜಾಗ್ರದವಸ್ಥೆಯು, ಕಸ್ಯ= ಯಾರಿಗೆ ಎಂದು, ವದ= ಹೇಳು, ತಚ್ಚ= ಅದೂ ಸಹ, ತಸ್ಯೈವ ಚೇತ್= ಅವನಿಗೇ ಎಂದು ಹೇಳಿದರೆ, ವಿರುದ್ಧೇ ಏತೇ= ವಿರುದ್ಧವಾದ ಈ ಎರಡು ಅವಸ್ಥೆಗಳು, ಏಕದಾ= ಏಕಕಾಲದಲ್ಲಿ, ಕಥಂ= ಹೇಗೆ ಉಂಟಾಗುತ್ತವೆ.

**ಅನುವಾದ–** ನಮ್ಮ ಅನುಭವಕ್ಕೆ ಬರುತ್ತಿರುವ ಸ್ವಪ್ನವು ಆ ಕಲ್ಪಿತನಾದ ಜೀವನದೇ ಸ್ವಪ್ನ ಎಂದು ಹೇಳುವುದಾದರೆ, ಹಾಗಾದರೆ ಜಾಗ್ರದವಸ್ಥೆಯು ಯಾರಿಗೆ ಎಂದು ಹೇಳು. ಅದೂ ಕಲ್ಪಕನಾದ ಜೀವನಿಗೆ ಎಂದು ಹೇಳುವುದಾದರೆ, ವಿರುದ್ಧವಾದ ಜಾಗ್ರದವಸ್ಥೆ ಮತ್ತು ಸ್ವಪ್ನಾವಸ್ಥೆಗಳು ಒಂದೇ ಕಾಲದಲ್ಲಿ ಒಬ್ಬನಿಗೇ ಹೇಗೆ ಬರಲು ಸಾಧ್ಯ?

**ಭಾವವಿಲಾಸಿನೀ–** ದೂಷಣಾಂತರಂ ಚಾಹ – **ತಸ್ಯೇತಿ** ॥ ತಸ್ಯ ಏಕಜೀವಸ್ಯ । ಅಯಂ ಗೃಹೇ ಗೃಹೇ ಪರಿದೃಶ್ಯಮಾನಃ । ತರ್ಹಿ ಜಾಗರಣಂ ಪುರುಷಾಂತರೇ ಪರಿದೃಶ್ಯಮಾನಂ ಜಾಗರಣಂ ಕಸ್ಯ । ತಚ್ಚ ಜಾಗರಣಂ ಚ । ತಸ್ಯ ಸ್ವಪ್ನದ್ರಷ್ಟುರೇಕಜೀವಸ್ಯ । ಏತೇ ಸ್ವಪ್ನಜಾಗರಣೇ । ಏಕಸ್ಯೈವ ಪುಂಸಃ ಯದಾ ಸ್ವಪ್ನಃ ತದೈವ ತಸ್ಯ ಜಾಗರಣಂ ಚ ವಿರುದ್ಧಮಿತಿ ಭಾವಃ ॥ ೭೦೦ ॥

**ವಿವರಣೆ–** ಏಕಜೀವವಾದಕ್ಕೆ ಇಲ್ಲಿ ಬೇರೆ ದೋಷವನ್ನು ಹೇಳುತ್ತಾರೆ. ನಮಗೆ ಕಾಣುವ ಸ್ವಪ್ನವೆಲ್ಲವೂ ಕಲ್ಪಕನಾದ ಜೀವನದೇ ಸ್ವಪ್ನ ಎಂದು ಹೇಳಿದರೆ, ನಮ್ಮ ಅನುಭವಕ್ಕೆ ಬರುವ ಜಾಗ್ರದವಸ್ಥೆಯು ಯಾರಿಗೆ ಎಂದು ನಿಷ್ಕರ್ಷೆ ಮಾಡಬೇಕು. ನಮ್ಮ ದೇಹಗಳಲ್ಲಂತೂ ಏಕವಾದಿಮತದಂತೆ ಜೀವವೇ ಇಲ್ಲದಿರುವುದರಿಂದ ಈ ಜಾಗ್ರದ-ವಸ್ಥೆಯೂ ಸಹ ಆ ಕಲ್ಪಕನಾದ ಜೀವನಿಗೇ ಇದೆ ಎಂದು ಹೇಳಬೇಕು. ಆದ್ದರಿಂದ ಒಂದೇ ಕಾಲದಲ್ಲಿ ಆಕಲ್ಪಕವಾದ ಜೀವನು ಸ್ವಪ್ನವನ್ನೂ ನೋಡುತ್ತಿದ್ದಾನೆ, ಜಾಗ್ರದ-ವಸ್ಥೆಯೂ ಇದೆ ಎಂದು ಅಂಗೀಕಾರ ಮಾಡಿದಂತಾಯಿತು. ಇದು ಅತ್ಯಂತ ವಿರುದ್ಧ ವಾದುದು. ಆದ್ದರಿಂದ ಏಕಜೀವವಾದವು ಅನುಪಪನ್ನವಾದುದು ಎಂದು ಅಭಿಪ್ರಾಯ.

**ಸ್ವಾಪ್ನಜಾಗರಿತಾವಸ್ಥಾ ಸ್ವಾಪ್ನಸ್ವಪ್ನವಿರೋಧಿನೀ ।**
**ಅಸ್ವಾಪ್ನೌ ತೌ ಚ ನೈಕತ್ರೇತ್ಯವಿವಾದಂ ಹಿ ವಾದಿನಾಂ ॥ ೭೦೨ ॥**

**ಅರ್ಥ–** ಸ್ವಾಪ್ನಜಾಗರಿತಾವಸ್ಥಾ= ಸ್ವಪ್ನದಲ್ಲಿ ಕಾಣುವ ಜಾಗ್ರದವಸ್ಥೆಯು, ಸ್ವಾಪ್ನಸ್ವಪ್ನವಿರೋಧಿನೀ= ಸ್ವಪ್ನದಲ್ಲಿ ಕಾಣುವ ಸ್ವಪ್ನಾವಸ್ಥೆಗೆ ವಿರುದ್ಧವಾದುದು, ಹೀಗಿರುವಾಗ, ಅಸ್ವಾಪ್ನೌ= ಸ್ವಾಪ್ನವಲ್ಲದ, ತೌ ಚ= ಆ ಎರಡು ಅವಸ್ಥೆಗಳು, ಏಕತ್ರ ನ= ಒಂದೇ ಕಡೆಯಲ್ಲಿ ಇರುವುದಿಲ್ಲ, ಇತಿ= ಎಂಬ ವಿಷಯದಲ್ಲಿ, ವಾದಿನಾಂ= ವಾದಿಗಳಿಗೆ, ಅವಿವಾದಂ ಹಿ= ವಿವಾದವಿಲ್ಲವಷ್ಟೇ.

**ಅನುವಾದ–** ಸ್ವಪ್ನದಲ್ಲಿ ಕಾಣುವ ಜಾಗ್ರದವಸ್ಥೆಯು ಸ್ವಪ್ನದಲ್ಲಿ ಕಾಣುವ ಸ್ವಪ್ನಕ್ಕೆ ವಿರೋಧಿಯಾದುದು. ಆದ್ದರಿಂದ ಸ್ವಾಪ್ನಭಿನ್ನವಾದ ಜಾಗ್ರದವಸ್ಥೆ ಮತ್ತು ಸ್ವಪ್ನಾವಸ್ಥೆಗಳು ಒಂದೇ ಕಡೆಯಲ್ಲಿ ಒಂದೇ ಕಾಲದಲ್ಲಿ ಇರುವುದಿಲ್ಲ ಎಂಬ ವಿಷಯದಲ್ಲಿ ವಾದಿಗಳಿಗೆ ವಿವಾದವೇ ಇಲ್ಲ.

**ಭಾವವಿಲಾಸಿನೀ–** ಸ್ವಪ್ನಜಾಗರಣಯೋರ್ವಿರೋಧಮುಪಪಾದಯತಿ ॥ ಸ್ವಾಪ್ನೇತಿ ॥ ಸ್ವಾಪ್ನಜಾಗರಿತಾವಸ್ಥಾ ಸ್ವಪ್ನೇ ಇತಸ್ತತೋ ಗಚ್ಛಾಮೀತಿ ಯಾ ಜಾಗರಿತಾವಸ್ಥಾ ಸೇತ್ಯರ್ಥಃ। ಸ್ವಾಪ್ನಸ್ವಪ್ನವಿರೋಧಿನೀ ಸ್ವಪ್ನೇ ವಿದ್ಯಮಾನೋ ಯಃಸ್ವಪ್ನಸ್ತಸ್ಯ ವಿರೋಧಿನೀ । ಸ್ವಾಪ್ನಜಾಗರಣದಶಾಯಾಂ ಸ್ವಾಪ್ನಸ್ವಪ್ನೋಽಪಿ ನ ಸ್ವಾಪ್ನಸ್ವಪ್ನ ದಶಾಯಾಂ ಚ ನ ಸ್ವಾಪ್ನಜಾಗರಣಮ್ । ಅತಸ್ತತ್ರಾಪಿ ತಯೋರ್ವಿರೋಧ ಏವ । ಅಸ್ವಾಪ್ನೋಜಾಗ್ರದ್ದಶಾಯಾಮೇವ ವಿದ್ಯಮಾನಂ ಯಜ್ಜಾಗರಣಂ ನಿದ್ರಾಕಾಲೇ ವಿದ್ಯಮಾನೋ ಯಃಸ್ವಪ್ನಸ್ತಾವಸ್ವಾಪ್ನೌ । ತೌ ಜಗಾರಣಸ್ವಪ್ನೌ । ಅತಃ ಸ್ವಾಪ್ನಾವಸ್ವಾಪ್ನೌ ಚ ಜಾಗರಣಸ್ವಪ್ನೌ ನೈಕಸ್ಯೈಕದಾ ಸಂಭವತಃ । ಏವಂಚ ಸ್ವಪ್ನದ್ರಷ್ಟುರೇಕಜೀವಸ್ಯ ಗೃಹೇ ಗೃಹೇಽನುಭೂಯಮಾನಃ ಸ್ವಾಪ್ನಃ ಸ್ವಾಪ್ನಜಾಗರಣಂ ಚ ಕಥಮೇಕದೈವ ಭವತ ಇತಿ ಭಾವಃ ॥ ೭೦೨ ॥

**ವಿವರಣೆ–** ಸ್ವಪ್ನಾವಸ್ಥೆ ಮತ್ತು ಜಾಗ್ರದವಸ್ಥೆಗಳಿಗೆ ಇಲ್ಲಿ ವಿರೋಧವನ್ನು ಉಪಪಾದನೆ ಮಾಡುತ್ತಿದ್ದಾರೆ. ಸ್ವಪ್ನದಲ್ಲಿ ಕಾಣುವ ಜಾಗ್ರದವಸ್ಥೆ ಮತ್ತು ಸ್ವಪ್ನಾವಸ್ಥೆಗಳು ಪರಸ್ಪರ ವಿರುದ್ಧವಾಗಿವೆ. ಸ್ವಪ್ನದಲ್ಲಿ ಜಾಗ್ರದವಸ್ಥೆಯು ಅನುಭವಕ್ಕೆ ಬರುತ್ತಿರುವಾಗ ಸ್ವಪ್ನಾವಸ್ಥೆಯು ಅನುಭವಕ್ಕೆ ಬರುವುದಿಲ್ಲ. ಸ್ವಪ್ನದಲ್ಲಿ ಸ್ವಪ್ನಾವಸ್ಥೆಯ ಅನುಭವವಿರುವಾಗ, ಜಾಗ್ರದವಸ್ಥೆಯ ಅನುಭವವಿರುವುದಿಲ್ಲ. ಹೀಗೆ ಈ ಎರಡು ಅವಸ್ಥೆಗಳು ಸ್ವಪ್ನದಲ್ಲೇ ಕಾಣುವುದಾದರೂ ಅವುಗಳಿಗೆ ಪರಸ್ಪರ ವಿರೋಧವಿದೆ. ಇನ್ನು ಸ್ವಾಪ್ನವಲ್ಲದ ಎಂದರೆ ನಮ್ಮ ಅನುಭವಕ್ಕೆ ಬರುವ ಜಾಗ್ರದವಸ್ಥೆ ಮತ್ತು ಸ್ವಪ್ನಾವಸ್ಥೆಗಳಲ್ಲಿ ಸುತರಾಂ ವಿರೋಧವಿರುತ್ತದೆ. ಆದ್ದರಿಂದ ಅವೆರಡೂ ಅವಸ್ಥೆಗಳನ್ನು ಒಬ್ಬನೇ ಜೀವನಿಗೆ ಒಂದೇ ಕಾಲದಲ್ಲಿ ಅಂಗೀಕರಿಸುವುದು ಸರ್ವವಾದಿವಿರುದ್ಧವಾದುದು ಎಂದು ಅಭಿಪ್ರಾಯ.

ಯದಿ ಜಾಗ್ರದವಸ್ಥಾದಿಃ ತಸ್ಯ ನಾನ್ಯಸ್ಯ ಕಸ್ಯಚಿತ್ ।
ಸ್ವಯಮೇವ ಸ್ವೋಪದೇಷ್ಟೇತ್ಯಾಯಾದಾಯಾಸಭೂಸ್ತವ ॥ ೭೦೩ ॥

**ಅರ್ಥ–** ಯದಿ= ಒಂದು ಪಕ್ಷ, ಜಾಗ್ರದವಸ್ಥಾದಿಃ= ಜಾಗ್ರತ್ ಮೊದಲಾದ ಅವಸ್ಥೆಗಳು, ತಸ್ಯ= ಆ ಕಲ್ಪಕನಾದ ಜೀವನದ್ದೇ, ಕಸ್ಯಚಿತ್ ಅನ್ಯಸ್ಯ ನ= ಬೇರೆಯವನಿಗೆ ಅಲ್ಲ ಎಂದು ಹೇಳುವುದಾದರೆ, ಸ್ವಯಮೇವ= ತಾನೇ, ಸ್ವೋಪದೇಷ್ಟಾ= ತನಗೆ ಉಪದೇಶ ಮಾಡುವವನು, ಇತಿ= ಎಂದು, ತವ= ನಿನಗೆ, ಆಯಾಸಭೂಃ= ದುಃಖಕ್ಕೆ ಕಾರಣವು, ಅಭೂತ್= ಉಂಟಾಯಿತು.

**ಅನುವಾದ–** ಜಾಗ್ರದಾದಿ ಅವಸ್ಥೆಗಳು ಆ ಕಲ್ಪಕನಾದ ಜೀವನೊಬ್ಬನಿಗೇ ಹೊರತು ಬೇರೆಯವರಿಗಲ್ಲ ಎಂದು ಹೇಳಿದರೆ ತನಗೆ ತಾನೇ ಉಪದೇಶ ಮಾಡುವನೆಂದು ಅಂಗೀಕರಿಸಬೇಕಾಗುವುದರಿಂದ ಅದು ನಿನ್ನ ಸಂಕಟಕ್ಕೆ ಕಾರಣವಾಯಿತು.

**ಭಾವವಿಲಾಸಿನೀ–** ದೋಷಾಂತರಂ ಚಾಹ – ಯದೀತಿ ॥ ತಸ್ಯ ಏಕಜೀವಸ್ಯ । ಅನ್ಯಸ್ಯ ಕಸ್ಯಚಿನ್ನ । ಯತ್ರ ಕ್ವಚಿದ್ವಿದ್ಯಮಾನಂ ಜಾಗರಣಂ ಸ್ವಪ್ನಾದಿಕಂ ಚ ತಸ್ಯೈವ ನಾನ್ಯಸ್ಯೇತ್ಯರ್ಥಃ। ತರ್ಹಿ ಸ್ವಯಮೇವ ಸ್ವೋಪದೇಷ್ಟೇತಿ ಆಯಾಸಭೂಃ ತವಾಽಯಾದಿತಿ ಯೋಜನಾ । ಜಾಗ್ರದವಸ್ಥಾಪನ್ನೋ ಹಿ ಗುರುಸ್ತಮೇಕ ಜೀವಂ ಬೋಧಯೇತ್ । ಜಾಗ್ರದವಸ್ಥಾ ಸರ್ವಾಪಿ ತಸ್ಯೈವ ಚೇತ್ ಸ್ವಯಮೇವ ಸ್ವಸ್ಯ ಬೋಧಕ ಇತಿ ಪ್ರಾಪ್ತಮ್ । ತಥಾ ಚಾತ್ಮಾಶ್ರಯಪ್ರಸಂಗಃ । ಅತಃ ಸರ್ವಥಾ ಜಾಗರಣಂ ತತ್ ಸಮಾನಾಧಿಕರಣಸ್ವಪ್ನಶ್ಚಾನ್ಯಸ್ಯೈವೇತಿ ವಕ್ತವ್ಯಮ್ । ಏವಂಚ ಸ್ವಪ್ನೇ ಪ್ರಾಗುಕ್ತ-ಬಹುದ್ರಷ್ಟೃಕತ್ವಮಪರಿಹಾರ್ಯಮೇವೇತಿ ಭಾವಃ ॥ ೭೦೦ ॥

**ವಿವರಣೆ–** ಏಕಜೀವವಾದಕ್ಕೆ ದೋಷಾಂತರವನ್ನು ಇಲ್ಲಿ ಹೇಳುತ್ತಾರೆ. ಕಲ್ಪಕನಾದ ನಿದ್ರಿಸುವ ಆ ಜೀವನಿಗೇ ಜಾಗ್ರದವಸ್ಥೆಯೆಂದು ಹೇಳಿದರೆ, ಜಾಗ್ರದವಸ್ಥೆಯಲ್ಲಿರುವವನು ಉಪದೇಶ ಮಾಡುವುದರಿಂದ, ಉಪದೇಶಕನೂ ಅವನೇ ಮತ್ತು ಶಿಷ್ಯನೂ ಅವನೇ ಎಂದು ನಿನಗೆ ಆತ್ಮಾಶ್ರಯ ದೋಷವು ಪ್ರಾಪ್ತವಾಗುತ್ತದೆ. ಆದ್ದರಿಂದ ಜಾಗ್ರದವಸ್ಥೆಯು ಮಲಗಿರುವ ಕಲ್ಪಕನಾದ ಚೇತನನನ್ನು ಬಿಟ್ಟು ಇನ್ನೊಬ್ಬನಿಗೆ ಎಂದು ಹೇಳಬೇಕು. ಆಗ ಜೀವಬಹುತ್ವವು ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

**ಅತಃ ಸ್ವಪ್ನೇ ನ ಚೇಜ್ಜೀವೋ ನೈಕಜೀವಮತಂ ತವ ।**
**ಸ್ವಪ್ನೇಷು ಸಂತಿ ಚೇಜ್ಜೀವಾ ನೈಕಜೀವಮತಂ ತವ ॥ ೭೦೧ ॥**

**ಅರ್ಥ–** ಅತಃ= ಆದ್ದರಿಂದ, ಸ್ವಪ್ನೇ= ಸ್ವಪ್ನದಲ್ಲಿ, ಜೀವೋ ನ ಚೇತ್= ಜೀವನು ಇಲ್ಲವೇದಾದರೆ, ತವ= ನಿನ್ನ, ಏಕಜೀವಮತಂ= ಏಕಜೀವಮತವು, ನ= ಇಲ್ಲವೆಂದಾಗುತ್ತದೆ, ಸ್ವಪ್ನೇಷು= ಸ್ವಪ್ನಗಳಲ್ಲಿ, ಜೀವಾಃ= ಜೀವರು, ಸಂತಿಚೇತ್= ಇರುವರೆಂದಾದರೆ, ತವ= ನಿನ್ನ, ಏಕಜೀವಮತಂ= ಏಕಜೀವಮತವು, ನ= ಹೊರಟು ಹೋಗುತ್ತದೆ.

**ಅರ್ಥ–** ಸ್ವಾಪ್ನಜಾಗರಿತಾವಸ್ಥಾ= ಸ್ವಪ್ನದಲ್ಲಿ ಕಾಣುವ ಜಾಗೃದವಸ್ಥೆಯು, ಸ್ವಾಪ್ನಸ್ವಪ್ನವಿರೋಧಿನೀ= ಸ್ವಪ್ನದಲ್ಲಿ ಕಾಣುವ ಸ್ವಪ್ನಾವಸ್ಥೆಗೆ ವಿರುದ್ಧವಾದುದು, ಹೀಗಿರುವಾಗ, ಅಸ್ವಾಪ್ನೌ= ಸ್ವಾಪ್ನವಲ್ಲದ, ತೌ ಚ= ಆ ಎರಡು ಅವಸ್ಥೆಗಳು, ಏಕತ್ರ ನ= ಒಂದೇ ಕಡೆಯಲ್ಲಿ ಇರುವುದಿಲ್ಲ, ಇತಿ= ಎಂಬ ವಿಷಯದಲ್ಲಿ, ವಾದಿನಾಂ= ವಾದಿಗಳಿಗೆ, ಅವಿವಾದಂ ಹಿ= ವಿವಾದವಿಲ್ಲವಷ್ಟೇ.

**ಅನುವಾದ–** ಸ್ವಪ್ನದಲ್ಲಿ ಕಾಣುವ ಜಾಗ್ರದವಸ್ಥೆಯು ಸ್ವಪ್ನದಲ್ಲಿ ಕಾಣುವ ಸ್ವಪ್ನಕ್ಕೆ ವಿರೋಧಿಯಾದುದು. ಆದ್ದರಿಂದ ಸ್ವಾಪ್ನಭಿನ್ನವಾದ ಜಾಗ್ರದವಸ್ಥೆ ಮತ್ತು ಸ್ವಪ್ನಾವಸ್ಥೆಗಳು ಒಂದೇ ಕಡೆಯಲ್ಲಿ ಒಂದೇ ಕಾಲದಲ್ಲಿ ಇರುವುದಿಲ್ಲ ಎಂಬ ವಿಷಯದಲ್ಲಿ ವಾದಿಗಳಿಗೆ ವಿವಾದವೇ ಇಲ್ಲ.

**ಭಾವವಿಲಾಸಿನೀ–** ಸ್ವಪ್ನಜಾಗರಣಯೋರ್ವಿರೋಧಮುಪಪಾದಯತಿ ॥ **ಸ್ವಾಪ್ನೇತಿ** ॥ ಸ್ವಾಪ್ನಜಾಗರಿತಾವಸ್ಥಾ ಸ್ವಪ್ನೇ ಇತಸ್ತತೋ ಗಚ್ಛಾಮೀತಿ ಯಾ ಜಾಗರಿತಾವಸ್ಥಾ ಸೇತ್ಯರ್ಥಃ । ಸ್ವಾಪ್ನಸ್ವಪ್ನವಿರೋಧಿನೀ ಸ್ವಪ್ನೇ ವಿದ್ಯಮಾನೋ ಯಃಸ್ವಪ್ನಸ್ತಸ್ಯ ವಿರೋಧಿನೀ । ಸ್ವಾಪ್ನಜಾಗರಣದಶಾಯಾಂ ಸ್ವಾಪ್ನಸ್ವಪ್ನೋಽಪಿ ನ ಸ್ವಾಪ್ನಸ್ವಪ್ನ ದಶಾಯಾಂ ಚ ನ ಸ್ವಾಪ್ನಜಾಗರಣಮ್ । ಅತಸ್ತತ್ರಾಪಿ ತಯೋರ್ವಿರೋಧ ಏವ । ಅಸ್ವಾಪ್ನೋಜಾಗ್ರದ್ದಶಾಯಾಮೇವ ವಿದ್ಯಮಾನಂ ಯಜ್ಜಾಗರಣಂ ನಿದ್ರಾಕಾಲೇ ವಿದ್ಯಮಾನೋ ಯಃಸ್ವಪ್ನಸ್ತಾವಸ್ವಾಪ್ನೌ । ತೌ ಜಗಾರಣಸ್ವಪ್ನೌ । ಅತಃ ಸ್ವಾಪ್ನಾವಸ್ವಾಪ್ನೌ ಚ ಜಾಗರಣಸ್ವಪ್ನೌ ನೈಕಸ್ಯೈಕದಾ ಸಂಭವತಃ । ಏವಂಚ ಸ್ವಪ್ನದ್ರಷ್ಟುರೇಕಜೀವಸ್ಯ ಗೃಹೇ ಗೃಹೇಽನುಭೂಯಮಾನಃ ಸ್ವಾಪ್ನಃ ಸ್ವಾಪ್ನಜಾಗರಣಂ ಚ ಕಥಮೇಕದೈವ ಭವತ ಇತಿ ಭಾವಃ ॥ ೭೦೨ ॥

**ವಿವರಣೆ–** ಸ್ವಪ್ನಾವಸ್ಥೆ ಮತ್ತು ಜಾಗ್ರದವಸ್ಥೆಗಳಿಗೆ ಇಲ್ಲಿ ವಿರೋಧವನ್ನು ಉಪಪಾದನೆ ಮಾಡುತ್ತಿದ್ದಾರೆ. ಸ್ವಪ್ನದಲ್ಲಿ ಕಾಣುವ ಜಾಗ್ರದವಸ್ಥೆ ಮತ್ತು ಸ್ವಪ್ನಾವಸ್ಥೆಗಳು ಪರಸ್ಪರ ವಿರುದ್ಧವಾಗಿವೆ. ಸ್ವಪ್ನದಲ್ಲಿ ಜಾಗ್ರದವಸ್ಥೆಯು ಅನುಭವಕ್ಕೆ ಬರುತ್ತಿರುವಾಗ ಸ್ವಪ್ನಾವಸ್ಥೆಯು ಅನುಭವಕ್ಕೆ ಬರುವುದಿಲ್ಲ. ಸ್ವಪ್ನದಲ್ಲಿ ಸ್ವಪ್ನಾವಸ್ಥೆಯ ಅನುಭವವಿರುವಾಗ, ಜಾಗ್ರದವಸ್ಥೆಯ ಅನುಭವವಿರುವುದಿಲ್ಲ. ಹೀಗೆ ಈ ಎರಡು ಅವಸ್ಥೆಗಳು ಸ್ವಪ್ನದಲ್ಲೇ ಕಾಣುವುದಾದರೂ ಅವುಗಳಿಗೆ ಪರಸ್ಪರ ವಿರೋಧವಿದೆ. ಇನ್ನು ಸ್ವಾಪ್ನವಲ್ಲದ ಎಂದರೆ ನಮ್ಮ ಅನುಭವಕ್ಕೆ ಬರುವ ಜಾಗ್ರದವಸ್ಥೆ ಮತ್ತು ಸ್ವಪ್ನಾವಸ್ಥೆಗಳಲ್ಲಿ ಸುತರಾಂ ವಿರೋಧವಿರುತ್ತದೆ. ಆದ್ದರಿಂದ ಅವೆರಡೂ ಅವಸ್ಥೆಗಳನ್ನು ಒಬ್ಬನೇ ಜೀವನಿಗೆ ಒಂದೇ ಕಾಲದಲ್ಲಿ ಅಂಗೀಕರಿಸುವುದು ಸರ್ವವಾದಿವಿರುದ್ಧವಾದುದು ಎಂದು ಅಭಿಪ್ರಾಯ.

ಯದಿ ಜಾಗ್ರದವಸ್ಥಾದಿಃ ತಸ್ಯ ನಾನ್ಯಸ್ಯ ಕಸ್ಯಚಿತ್ ।
ಸ್ವಯಮೇವ ಸ್ವೋಪದೇಷ್ಟೇತ್ಯಾಯಾದಾಯಾಸಭೂಸ್ತವ ॥ ೭೦೩ ॥

**ಅರ್ಥ–** ಯದಿ= ಒಂದು ಪಕ್ಷ, ಜಾಗ್ರದವಸ್ಥಾದಿಃ= ಜಾಗ್ರತ್ ಮೊದಲಾದ ಅವಸ್ಥೆಗಳು, ತಸ್ಯ= ಆ ಕಲ್ಪಕನಾದ ಜೀವನದ್ದೇ, ಕಸ್ಯಚಿತ್ ಅನ್ಯಸ್ಯ ನ= ಬೇರೆಯವನಿಗೆ ಅಲ್ಲ ಎಂದು ಹೇಳುವುದಾದರೆ, ಸ್ವಯಮೇವ= ತಾನೇ, ಸ್ವೋಪದೇಷ್ಟಾ= ತನಗೆ ಉಪದೇಶ ಮಾಡುವವನು, ಇತಿ= ಎಂದು, ತವ= ನಿನಗೆ, ಆಯಾಸಭೂಃ= ದುಃಖಕ್ಕೆ ಕಾರಣವು, ಅಭೂತ್= ಉಂಟಾಯಿತು.

**ಅನುವಾದ-** ಜಾಗ್ರದಾದಿ ಅವಸ್ಥೆಗಳು ಆ ಕಲ್ಪಕನಾದ ಜೀವನೊಬ್ಬನಿಗೇ ಹೊರತು ಬೇರೆಯವರಿಗಲ್ಲ ಎಂದು ಹೇಳಿದರೆ ತನಗೆ ತಾನೇ ಉಪದೇಶ ಮಾಡುವನೆಂದು ಅಂಗೀಕರಿಸಬೇಕಾಗುವುದರಿಂದ ಅದು ನಿನ್ನ ಸಂಕಟಕ್ಕೆ ಕಾರಣವಾಯಿತು.

**ಭಾವವಿಲಾಸಿನೀ–** ದೋಷಾಂತರಂ ಚಾಹ – ಯದೀತಿ ॥ ತಸ್ಯ ಏಕಜೀವಸ್ಯ । ಅನ್ಯಸ್ಯ ಕಸ್ಯಚಿನ್ನ । ಯತ್ರ ಕ್ವಚಿದ್ವಿದ್ಯಮಾನಂ ಜಾಗರಣಂ ಸ್ವಪ್ನಾದಿಕಂ ಚ ತಸ್ಯೈವ ನಾನ್ಯಸ್ಯೇತ್ಯರ್ಥಃ। ತರ್ಹಿ ಸ್ವಯಮೇವ ಸ್ವೋಪದೇಷ್ಟೇತಿ ಆಯಾಸಭೂಃ ತವಾಽಯಾದಿತಿ ಯೋಜನಾ । ಜಾಗ್ರದವಸ್ಥಾಪನ್ನೋ ಹಿ ಗುರುಸ್ತಮೇಕ ಜೀವಂ ಬೋಧಯೇತ್ । ಜಾಗ್ರದವಸ್ಥಾ ಸರ್ವಾಪಿ ತಸ್ಯೈವ ಚೇತ್ ಸ್ವಯಮೇವ ಸ್ವಸ್ಯ ಬೋಧಕ ಇತಿ ಪ್ರಾಪ್ತಮ್ । ತಥಾ ಚಾತ್ಮಾಶ್ರಯಪ್ರಸಂಗಃ । ಅತಃ ಸರ್ವಥಾ ಜಾಗರಣಂ ತತ್ ಸಮಾನಾಧಿಕರಣಸ್ವಪ್ನಶ್ಚಾನ್ಯಸ್ಯೈವೇತಿ ವಕ್ತವ್ಯಮ್ । ಏವಂಚ ಸ್ವಪ್ನೇ ಪ್ರಾಗುಕ್ತ-ಬಹುದ್ರಷ್ಟೃಕತ್ವಮಪರಿಹಾರ್ಯಮೇವೇತಿ ಭಾವಃ ॥ ೭೦೦ ॥

**ವಿವರಣೆ–** ಏಕಜೀವವಾದಕ್ಕೆ ದೋಷಾಂತರವನ್ನು ಇಲ್ಲಿ ಹೇಳುತ್ತಾರೆ. ಕಲ್ಪಕನಾದ ನಿದ್ರಿಸುವ ಆ ಜೀವನಿಗೇ ಜಾಗ್ರದವಸ್ಥೆಯೆಂದು ಹೇಳಿದರೆ, ಜಾಗ್ರದವಸ್ಥೆಯಲ್ಲಿರುವವನು ಉಪದೇಶ ಮಾಡುವುದರಿಂದ, ಉಪದೇಶಕನೂ ಅವನೇ ಮತ್ತು ಶಿಷ್ಯನೂ ಅವನೇ ಎಂದು ನಿನಗೆ ಆತ್ಮಾಶ್ರಯ ದೋಷವು ಪ್ರಾಪ್ತವಾಗುತ್ತದೆ. ಆದ್ದರಿಂದ ಜಾಗ್ರದವಸ್ಥೆಯು ಮಲಗಿರುವ ಕಲ್ಪಕನಾದ ಚೇತನನನ್ನು ಬಿಟ್ಟು ಇನ್ನೊಬ್ಬನಿಗೆ ಎಂದು ಹೇಳಬೇಕು. ಆಗ ಜೀವಬಹುತ್ವವು ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

**ಅತಃ ಸ್ವಪ್ನೇ ನ ಚೇಜ್ಜೀವೋ ನೈಕಜೀವಮತಂ ತವ ।**
**ಸ್ವಪ್ನೇಷು ಸಂತಿ ಚೇಜ್ಜೀವಾ ನೈಕಜೀವಮತಂ ತವ ॥ ೭೦೧ ॥**

**ಅರ್ಥ–** ಅತಃ= ಆದ್ದರಿಂದ, ಸ್ವಪ್ನೇ= ಸ್ವಪ್ನದಲ್ಲಿ, ಜೀವೋ ನ ಚೇತ್= ಜೀವನು ಇಲ್ಲವೆಂದಾದರೆ, ತವ= ನಿನ್ನ, ಏಕಜೀವಮತಂ= ಏಕಜೀವಮತವು, ನ= ಇಲ್ಲವೆಂದಾಗುತ್ತದೆ, ಸ್ವಪ್ನೇಷು= ಸ್ವಪ್ನಗಳಲ್ಲಿ, ಜೀವಾಃ= ಜೀವರು, ಸಂತಿಚೇತ್= ಇರುವರೆಂದಾದರೆ, ತವ= ನಿನ್ನ, ಏಕಜೀವಮತಂ= ಏಕಜೀವಮತವು, ನ= ಹೊರಟು ಹೋಗುತ್ತದೆ.

**ಅನುವಾದ-** ಸ್ವಪ್ನದಲ್ಲಿ ಜೀವನು ಇಲ್ಲವೆಂದಾದರೆ ನಿನ್ನ ಏಕಜೀವಮತವು ಹೊರಟು ಹೋಗುತ್ತದೆ. ಸ್ವಪ್ನದಲ್ಲಿ ಜೀವರು ಇದ್ದಾರೆ ಎಂದು ಅಂಗೀಕರಿಸಿದರೂ ನಿನ್ನ ಏಕಜೀವಮತವು ಹೊರಟು ಹೋಗುತ್ತದೆ.

**ಭಾವವಿಲಾಸಿನೀ-** ದೂಷಣಾಂತರಂ ಸೂಚಯನ್ನುಭಯತಃ ಪಾಶರಜ್ಜ್ವಾ ಬಧ್ನಾತಿ- ಅತ ಇತಿ ॥ ಅತಃ ಜಾಗರಣಸ್ಯ ಸ್ವಪ್ನಸಮಾನಕಾಲೀನಸ್ಯ ತ್ವದಭಿಲಷಿತೈಕಜೀವ ದ್ರಷ್ಟೃಕತ್ವಾಯೋಗೇ ದ್ರಷ್ಟೃನಿರಪೇಕ್ಷ ತತ್ ಸಮಾನಯೋಗಕ್ಷೇಮಸ್ವಪ್ನಸ್ಯಾಪಿ ತದ್ದ್ರಷ್ಟೃಕತ್ವಾಯೋಗಾತ್ । ಸ್ವಪ್ನೇ ಜೀವೋ ನಚೇತ್ ತದತಿರಿಕ್ತಜೀವೋ ನಚೇತ್ । ನಿರ್ಜೀವೈತತ್ ಸ್ವಪ್ನವದೇಕಜೀವಸ್ವಪ್ನಸ್ಯಾಪಿ ನಿರ್ಜೀವತ್ವಸಂಭವೇನ ತವೈಕಜೀವಮತಂ ಏಕೋ ಜೀವೋಽಸ್ತೀತಿಮತಂ ನ ನಾಭೂದಿತ್ಯರ್ಥಃ । ಅಥವಾ । ಅತಃ ಸ್ವಪ್ನಾದುತ್ಥಿತಸ್ಯಾಸ್ಯೈವಾಹಮದ್ರಾಕ್ಷಮಿತಿ ಪರಾಮರ್ಶದರ್ಶನಾತ್ । ತಸ್ಯ ಚ ಜೀವಾಂತರನಿಮಿತ್ತತ್ವೇ ಪ್ರಮಾಣಾಭಾವಾತ್ । ಸ್ವಪ್ನೇ ಏತಸ್ಯ ಸ್ವಪ್ನೇ ಜೀವನೇ ಚೇತ್ ಸರ್ವಸ್ಯಾಪಿ ಸ್ವಪ್ನಸ್ಯ ನಿರ್ಜೀವತ್ವಸಂಭವಾತ್ ಭವದಭಿಮತಸ್ವಪ್ನದ್ರಷ್ಟೃದೇಹೇಽಪಿ ಜೀವಾಸಿದ್ಧ್ಯಾ ತವೈಕಜೀವ-ಮತಂ ನೇತಿ ಯೋಜನಾ । ಇತ ಸ್ಪಷ್ಟಮ್ ॥ ೭೦೪ ॥

**ವಿವರಣೆ-** ಇಲ್ಲಿ ದೂಷಣಾಂತರವನ್ನು ಹೇಳುತ್ತಾ ಏಕಜೀವವಾದಿಯನ್ನು ಉಭಯ ಪಾಶಾರಜ್ಜುವಿನಿಂದ ಬಂಧಿಸುತ್ತಾರೆ. ನಮಗೆ ಅನುಭವಕ್ಕೆ ಬರುವ ಸ್ವಪ್ನದಲ್ಲಿ ಏಕಜೀವವಾದಿಯು ಹೇಳುವಂತೆ ಜೀವನೇ ಇಲ್ಲವೆಂದಾದರೆ ಆಗ ನಮಗೆ ಜೀವವಿಲ್ಲದೆ ಸ್ವಪ್ನವು ತೋರುವಂತೆ ಕಲ್ಪಕನಾದ ಏಕಜೀವನ ಸ್ವಪ್ನದಲ್ಲಿಯೂ ಸಹ ಜೀವವು ಇಲ್ಲದೆಯೇ ಸ್ವಪ್ನವು ತೋರಬಹುದಾದ್ದರಿಂದ ಏಕಜೀವಮತವು ಬಿದ್ದುಹೋಗುತ್ತದೆ. ಸ್ವಪ್ನದಲ್ಲಿ ಸ್ವಪ್ನವನ್ನು ನೋಡುವ ಅನೇಕ ಜೀವರನ್ನು ಅಂಗೀಕರಿಸಿದರೂ ಸಹ ಏಕಜೀವ ವಾದವು ಸ್ಪಷ್ಟವಾಗಿ ಬಿದ್ದುಹೋಗುತ್ತದೆ ಎಂದು ಅಭಿಪ್ರಾಯ.

ಯದಿ ದೇಹೇಷು ಜೀವಾಃ ಸ್ಯುರ್ನೈಕಜೀವಮತಂ ತವ ।
ಯದಿ ದೇಹೇಷು ತೇ ನ ಸ್ಯುರ್ನೈಕಜೀವಮತಂ ತವ ॥ ೭೦೫ ॥

**ಅರ್ಥ-** ಯದಿ= ಒಂದು ಪಕ್ಷ, ದೇಹೇಷು= ದೇಹಗಳಲ್ಲಿ, ಜೀವಾಃ= ಜೀವರು, ಸ್ಯುಃ= ಇರುವುದಾದರೆ, ತವ= ನಿನ್ನ, ಏಕಜೀವಮತಂ= ಏಕಜೀವಮತವು, ನ= ಇರುವುದಿಲ್ಲ, ಯದಿ= ಒಂದು ಪಕ್ಷ, ದೇಹೇಷು= ದೇಹಗಳಲ್ಲಿ, ತೇ= ಆ ಜೀವರು, ನ ಸ್ಯುಃ= ಇರುವುದಿಲ್ಲವೆಂದಾದರೆ, ತವ= ನಿನ್ನ, ಏಕಜೀವಮತಂ= ಏಕಜೀವಮತವು, ನ= ಹೊರಟು ಹೋಗುತ್ತದೆ.

**ಅನುವಾದ-** ನಮ್ಮ ಕಣ್ಣಿಗೆ ಕಾಣುವ ದೇಹಗಳಲ್ಲಿ ಜೀವರು ಇರುವುದಾದರೆ ಏಕಜೀವಮತವು ನಿರಾಕೃತವಾಗುತ್ತದೆ. ಆ ದೇಹಗಳಲ್ಲಿ ಜೀವರು ಇಲ್ಲವೆಂದಾದರೂ ನಿನ್ನ ಏಕಜೀವ ಮತವು ಬಿದ್ದುಹೋಗುತ್ತದೆ.

**ಭಾವವಿಲಾಸಿನೀ–** ಪ್ರಕಾರಾಂತರೇಣಾಪ್ಯುಭಯತಃ ಪಾಶಾರಜ್ಜುಮಾಹ – ಯದೀತಿ ॥ ದೇಹೇಷು ದೃಶ್ಯಾನದೇಹೇಷು । ತೇ ಜೀವಾಃ । ಜೀವಸಕಲವ್ಯಾಪಾರವತಾ ದೇಹಾನಾಂ ನಿರ್ಜೀವತ್ವೇ ಈದೃಶೈಕಜೀವದೇಹಸ್ಯಾಪಿ ನಿಜೀವತ್ವಸಂಭವಾದಿತಿ ಭಾವಃ ॥ ೭೦೫ ॥

**ವಿವರಣೆ–** ಪ್ರಕಾರಾಂತರದಿಂದ ಇಲ್ಲಿ ಉಭಯ ಪಾಶಾರಜ್ಜುವನ್ನು ಹೇಳುತ್ತಾರೆ. ದೇಹಗಳಲ್ಲಿ ಜೀವರಿದ್ದಾರೆಂದು ಅಂಗೀಕರಿಸಿದರೆ, ದೇಹಗಳು ಅನೇಕ, ಅವುಗಳಲ್ಲಿರುವ ಜೀವರೂ ಅನೇಕರೆಂದು ಜೀವಬಹುತ್ವ ಸಿದ್ಧವಾಗುತ್ತದೆ. ಆದರಿಂಬ ಏಕಜೀವವಾದವು ಹೊರಟು ಹೋಗುತ್ತದೆ. ದೇಹದಲ್ಲಿ ಜೀವವಿಲ್ಲವೆಂದಾದರೆ, ಜೀವವಿಲ್ಲದೆಯೇ ಈ ದೇಹಗಳು ಎಲ್ಲಾ ವ್ಯಾಪಾರ ಮಾಡುವಂತೆ ಏಕಜೀವನ ದೇಹದಲ್ಲಿಯೂ ಸಹ ಜೀವವಿಲ್ಲದೆಯೇ ಸಕಲ ವ್ಯಾಪಾರಗಳು ಉಂಟಾಗಬಹುದಾದ್ದರಿಂದ ಆ ಕಲ್ಪಕ ಜೀವನೂ ಸಿದ್ಧನಾಗದೆ ಏಕಜೀವವಾದವು ಬಿದ್ದುಹೋಗುತ್ತದೆ ಎಂದು ಅಭಿಪ್ರಾಯ.

**ದೇಹೇಷು ಘಟವೈಶೇಷ್ಯೇ ನೈಕಜೀವಮತಂ ತವ ।**
**ದೇಹೇಷು ತದವೈಶೇಷ್ಯೇ ಕಿಂ ನಾಹಂಕುರುತೇ ಘಟಃ ॥ ೭೦೬ ॥**

**ಅರ್ಥ–** ದೇಹೇಷು= ದೇಹಗಳಲ್ಲಿ, ಘಟವೈಶೇಷ್ಯೇ= ಘಟದಿಂದ ವೈಲಕ್ಷಣ್ಯವಿದ್ದರೆ, ತವ= ನಿನ್ನ, ಏಕಜೀವ ಮತಂ= ಏಕಜೀವ ವಾದವು, ನ= ಹೊರಟುಹೋಗುತ್ತದೆ, ದೇಹೇಷು= ದೇಹಗಳಲ್ಲಿ, ತದವೈಶೇಷ್ಯೇ= ಘಟದಿಂದ ವೈಲಕ್ಷಣ್ಯವು ಇಲ್ಲದಿದ್ದರೆ, ಘಟಃ= ಘಟವು, ಕಿಂ ನಾಹಂಕುರುತೇ= ಅಹಂ ಕರೋಮಿ ಎಂಬ ಅನುಸಂಧಾನವನ್ನು ಏಕೆ ಮಾಡುವುದಿಲ್ಲ?

**ಅನುವಾದ-** ದೇಹಗಳಲ್ಲಿ ಘಟವೈಲಕ್ಷಣ್ಯವಿರುವುದಾದರೆ ನಿನ್ನ ಏಕಜೀವಮತವು ಹೊರಟು ಹೋಗುತ್ತದೆ. ದೇಹಗಳಲ್ಲಿ ಘಟವೈಲಕ್ಷಣ್ಯವಿಲ್ಲವೆಂದಾದರೆ ಘಟಕ್ಕೆ ಏಕೆ ನಾನು ಮಾಡುತ್ತೇನೆ ಎಂಬ ಅನುಸಂಧಾನವು ಬರುವುದಿಲ್ಲ?

**ಭಾವವಿಲಾಸಿನೀ–** ಯುಕ್ತ್ಯಂತರಂ ಚಾಹ – ದೇಹೇಷ್ವಿತಿ ॥ ಏಕಜೀವದೇಹವ್ಯತಿರಿಕ್ತ ದೇಹೇಷ್ವಿತ್ಯರ್ಥಃ । ಘಟವೈಶೇಷ್ಯೇ ಘಟಾಜ್ಜೀವಸಾಹಿತ್ಯಾಖ್ಯವೈಶೇಷ್ಯೇ । ದ್ವಿತೀಯೇ ದೇಹ-ಘಟಯೋರುಭಯೋರಪಿ ನಿರ್ಜೀವತ್ವಸಾಮ್ಯೇ ಘಟೋಽಪ್ಯಹಂಕರೋಮೀತಿ ಕಿಂ ನಾಹಂಕುರುತ ಇತ್ಯರ್ಥಃ । ಕಿಂಚಾನಾದಿಮಾಯಯಾ ಸುಪ್ತೋ ಯದಾ ಜೀವಃ ಪ್ರಬುದ್ಧ್ಯತ ಇತಿ ಶ್ರುತ್ಯಾ ಜೀವಸ್ಯ ಸುಪ್ತಿರೇವ ಶ್ರೂಯತೇ ನತು ಸ್ವಪ್ನಃ । ಸುಪ್ತಸ್ಯ ಚ ಮನಆದಿ-ಸಕಲೇಂದ್ರಿಯೋಪರಮೇನ ಕಲ್ಪಕತ್ವಾಯೋಗಾದಕಲ್ಪಿತಮೇವ ಜಗತ್ ಸಿದ್ಧಮ್ । ಅನಾದಿಕಾಲಮಾರಭ್ಯ ತವೈಕಜೀವಸ್ಯ ಸ್ವಪ್ನೈಕದ್ರಷ್ಟೃತ್ವೇ ಸುಪ್ತಿಜಾಗ್ರದಾಖ್ಯಾವಸ್ಥಾದ್ವಯಸ್ಯ ವಿಲೋಪಪ್ರಸಂಗಶ್ಚ । ಸ್ವಾಪ್ನಭೋಗಸ್ಯ ದೇಹಪೋಷಕತ್ವಾಸಂಭವೇನಾನಾದಿಕಾಲಮಾರಭ್ಯ ಜಗತ್ ಕಲ್ಪಕಸ್ವಪ್ನಂ ಪಶ್ಯತಃ ಭೋಗಾಂತರಾಭಾವೇನ ಮೃತೇರಾವಶ್ಯಕತ್ವಾತ್ ತನ್ಮರಣೇಽಪಿ ದೃಶ್ಯಮಾನಂ ಜಗದಕಲ್ಪಿತಮೇವಾಭೂತ್ । ಅತೋ ಯತ್ಕಿಂಚಿದೇತತ್ ॥ ೭೦೬ ॥

**ವಿವರಣೆ–** ಇಲ್ಲಿ ಇನ್ನೊಂದು ಯುಕ್ತಿಯನ್ನು ಹೇಳುತ್ತಾರೆ. ದೇಹಗಳಲ್ಲಿ ಘಟದಿಂದ ವೈಲಕ್ಷಣ್ಯವನ್ನು ಹೇಳಬೇಕಾದರೆ ಚೇತನ ಸಂಬಂಧದಿಂದಲೇ ವೈಲಕ್ಷಣ್ಯವನ್ನು ಹೇಳಬೇಕಾಗುವುದರಿಂದ ಪ್ರತಿಯೊಂದು ದೇಹದಲ್ಲಿಯೂ ಚೇತನವಿದೆ ಎಂದು ಒಪ್ಪಿದರೆ ಬಹುಜೀವವಾದವೇ ಸಿದ್ಧವಾಗುತ್ತದೆ. ದೇಹಗಳಲ್ಲಿ ಘಟದಿಂದ ವೈಲಕ್ಷಣ್ಯವಿಲ್ಲದಿದ್ದರೆ ದೇಹದಲ್ಲಿದ್ದ ಜೀವನಿಗೆ ಹೇಗೆ ಅಹಂ ಕರೋಮಿ= ನಾನು ಮಾಡುತ್ತೇನೆ ಎಂಬ ಅನುಸಂಧಾನ ಬರುತ್ತದೆಯೋ, ಹಾಗೆಯೇ ಘಟಕ್ಕೂ ಕೂಡ ಅನುಸಂಧಾನ ಬರಲಿ ಎಂಬ ಆಪತ್ತಿ ಇದೆ. ಮತ್ತು 'ಅನಾದಿಮಾಯಯಾಸುಪ್ತಃ' ಎಂಬ ಶ್ರುತಿಯು ಜೀವನಿಗೆ ಸುಪ್ತಿಯನ್ನು ಹೇಳುತ್ತಿದೆಯೇ ಹೊರತಾಗಿ ಸ್ವಪ್ನವನ್ನು ಹೇಳುತ್ತಿಲ್ಲ. ಸುಪ್ತನಾದವನಿಗೆ ಮನಸ್ಸು ಮೊದಲಾದ ಎಲ್ಲ ಇಂದ್ರಿಯಗಳೂ ಉಪರತವಾಗಿರುವುದರಿಂದ ಅವನು ಕಲ್ಪಕನಾಗಲು ಸಾಧ್ಯವಿಲ್ಲ. ಆದ್ದರಿಂದ ಜಗತ್ತು ಅಕಲ್ಪಿತವೆಂದೇ ಸಿದ್ಧವಾಗುತ್ತದೆ ಮತ್ತು ಅನಾದಿಕಾಲದಿಂದಲೂ ಆ ಏಕಜೀವನು ಸ್ವಪ್ನವನ್ನು ಮಾತ್ರ ನೋಡುತ್ತಿರುವುದರಿಂದ ಜಗತ್ತಿನಲ್ಲಿ ಸುಪ್ತ್ಯವಸ್ಥೆ ಮತ್ತು ಜಾಗ್ರದವಸ್ಥೆಗಳೇ ಇಲ್ಲವೆಂದಾಗುವ ಪ್ರಸಂಗ ಬರುತ್ತವೆ. ಅನಾದಿಕಾಲದಿಂದಲೂ ನಿದ್ರಿಸಿ ಸ್ವಪ್ನವನ್ನು ನೋಡುತ್ತಿರುವ ಅವನಿಗೆ ಬೇರೆ ಭೋಗವಿಲ್ಲವಾದ್ದರಿಂದ ಮತ್ತು ಸ್ವಾಪ್ನಭೋಗವು ದೇಹಪೋಷಣೆಯನ್ನು ಮಾಡುವುದಿಲ್ಲವಾದ್ದರಿಂದ ಮರಣವೇ ಉಂಟಾಗಬೇಕಾಗುತ್ತದೆ. ಅವನ ಮರಣವು ಉಂಟಾದ ಮೇಲೂ ಕಾಣುವ ಜಗತ್ತು ಅಕಲ್ಪಿತವೆಂದೇ ಸಿದ್ಧವಾಗುತ್ತದೆ. ಮೊದಲಾದ ಅನೇಕ ದೋಷಗಳನ್ನು ಊಹಿಸಿಕೊಳ್ಳಬೇಕೆಂದು ಅಭಿಪ್ರಾಯ.

**ದೇಹೇನ ಸಹ ಸರ್ವೇಷು ದೇಹೇಷ್ವೇಕೋ ನ ಗಚ್ಛತಿ ।**
**ದೇಹಂ ವಿಸೃಜ್ಯ ಗಚ್ಛೇಚ್ಚೇನ್ಮೃತಸ್ಯ ಸ್ಯಾತ್ ಪುನರ್ಭವಃ ॥ ೭೦೭ ॥**

**ಅರ್ಥ–** ಸರ್ವೇಷು ದೇಹೇಷು= ಎಲ್ಲ ದೇಹಗಳಲ್ಲಿಯೂ, ಏಕಃ= ಒಬ್ಬನೇ ಜೀವನು, ದೇಹೇನ ಸಹ= ದೇಹದ ಜೊತೆಯಲ್ಲಿ, ನ ಗಚ್ಛತಿ= ಹೋಗುವುದಿಲ್ಲ (ಪ್ರವೇಶಿಸುವುದಿಲ್ಲ), ದೇಹಂ ವಿಸೃಜ್ಯ= ದೇಹವನ್ನು ಬಿಟ್ಟು, ಗಚ್ಛೇತ್= ಹೋಗುತ್ತಾನೆ ಎಂದು ಅಂಗೀಕರಿಸಿದರೆ, ಮೃತಸ್ಯ= ಮೊದಲಿನ ದೇಹದಲ್ಲಿ ಮೃತನಾದವನಿಗೆ, ಪುನರ್ಭವಃ= ಉತ್ತರ ದೇಹದಲ್ಲಿ ಪುನರ್ಜನ್ಮವು, ಸ್ಯಾತ್= ಉಂಟಾದೀತು.

**ಅನುವಾದ-** ಒಬ್ಬ ಜೀವನು ಅನೇಕ ದೇಹಗಳಲ್ಲಿ ದೇಹಸಹಿತನಾಗಿಯೇ ಪ್ರವೇಶಿಸುವುದಿಲ್ಲ. ದೇಹವನ್ನು ಬಿಟ್ಟು ಪ್ರವೇಶಿಸುತ್ತಾನೆ ಎಂದು ಒಪ್ಪಿದರೆ ಹಿಂದಿನ ದೇಹದಲ್ಲಿ ಮರಣವೂ, ಮುಂದಿನ ದೇಹದಲ್ಲಿ ಜನನವೂ ಉಂಟಾಗಬೇಕಾಗುತ್ತದೆ.

**ಭಾವವಿಲಾಸಿನೀ–** ನನು ವಿಮತಾನಿ ಶರೀರಾಣಿ ಮದ್ಭೋಗಾಯತನಾನಿ ಶರೀರತ್ವಾನ್ಮಚ್ಛರೀರವದಿತ್ಯನುಮಾನಾತ್ ಸಕಲಶರೀರಗತಭೋಗಾನಾಂ ಏಕಜೀವೇನೈವ ಭುಕ್ತಿಸಿದ್ಧೇಃ

**ಕಥಮನೇಕಜೀವತ್ವಮಿತಿ ಚೇತ್ । ತತ್ರಾಹ – ದೇಹೇನೇತಿ ॥ ಸಕಲದೇಹಗತಭೋಗಾನುಭವಃ ಜೀವಕಲಾಪ್ರವೇಶಂ ವಿನಾ ನ ಘಟತೇ । ಜೀವಕಲಾಪ್ರವೇಶಶ್ಚ ದೇಹೇನ ಸಹ ಸರ್ವದೇಹೇಷ್ವ-ಸಂಭಾವಿತಃ । ದೇಹಂ ವಿಹಾಯ ಗಮನೇ ಪೂರ್ವದೇಹೇ ಮರಣಮುತ್ತರದೇಹೇ ಜನನಂ ಚ ಸ್ಯಾದಿತಿ ಭಾವಃ ॥ ೭೦೭ ॥**

**ವಿವರಣೆ–** 'ವಿಮತಾನಿ ಶರೀರಾಣಿ ಮದ್ಭೋಗಾಯತನಾನಿ ಶರೀರತ್ವಾತ್ ಮಚ್ಛರೀರವತ್' ಎಲ್ಲ ಶರೀರಗಳು ನನ್ನ ಭೋಗಕ್ಕೆ ಸಾಧನಗಳು ಭೋಗಸಾಧನವಾದ್ದರಿಂದ ನನ್ನ ಶರೀರದಂತೆ ಎಂಬ ಅನುಮಾನದಿಂದ ಎಲ್ಲ ದೇಹಗಳಲ್ಲಿ ಉಂಟಾಗುವ ಭೋಗವು ಒಬ್ಬನಿಗೇ ಅನುಭವಕ್ಕೆ ಬರುತ್ತದೆ ಎಂದು ಹೇಳಿದರೆ ಅದಕ್ಕೆ ಇಲ್ಲಿ ದೋಷವನ್ನು ಹೇಳುತ್ತಾರೆ. ಒಬ್ಬನೇ ಜೀವನಿಗೆ ಅನೇಕ ದೇಹದ ಭೋಗಗಳು ಅನುಭವಕ್ಕೆ ಬರುವುದಾದರೆ, ಆ ಜೀವನು ಆ ದೇಹವನ್ನು ಪ್ರವೇಶಿಸಬೇಕಷ್ಟೇ? ಪ್ರವೇಶಿಸುವ ಜೀವನು ದೇಹದ ಸಹಿತವಾಗಿ ಪ್ರವೇಶಿಸುತ್ತಾನೆಯೋ, ಅಥವಾ ದೇಹವನ್ನು ಬಿಟ್ಟು ಪ್ರವೇಶಿಸುತ್ತಾನೆಯೋ? ದೇಹ ಸಹಿತನಾಗಿ ಪ್ರವೇಶಿಸುವುದಿಲ್ಲ. ಏಕೆಂದರೆ ಅಲ್ಲಿ ಒಂದು ದೇಹವು ಇದ್ದೇ ಇದೆ. ದೇಹವನ್ನು ಬಿಟ್ಟು ಪ್ರವೇಶಿಸುವುದಾದರೆ, ಪೂರ್ವದೇಹದಲ್ಲಿ ಜೀವಸಂಬಂಧವು ನಾಶವಾಗುವುದರಿಂದ, ಪೂರ್ವ ದೇಹದಲ್ಲಿ ಮರಣವೂ, ಉತ್ತರ ದೇಹದಲ್ಲಿ ದೇಹಸಂಬಂಧ ಉಂಟಾಗುವುದರಿಂದ ಉತ್ತರ ದೇಹದಲ್ಲಿ ಜನನವೂ ಅಂಗೀಕರಿಸಲ್ಪಡಬೇಕಾಗುತ್ತದೆಂದು ಇಲ್ಲಿ ದೋಷವನ್ನು ಹೇಳುತ್ತಾರೆ.

**ದೇಹಂ ಪ್ರವಿಶ್ಯ ಭೋಗಶ್ಚೇತ್ ಪ್ರಾಗುಕ್ತಂ ದೂಷಣಂ ಸ್ಮರ ।**
**ಅಪ್ರವಿಶ್ಯೈವ ಭುಙ್ಕ್ತೇ ಚೇದೇಕದೇಹೇಪ್ಯಸೌ ಕುತಃ ॥ ೭೦೮ ॥**

**ಅರ್ಥ–** ದೇಹಂ ಪ್ರವಿಶ್ಯ= ದೇಹವನ್ನು ಪ್ರವೇಶಿಸಿ, ಭೋಗಶ್ಚೇತ್= ಭೋಗವನ್ನು ಅನುಭವಿಸುವುದಾದರೆ, ಪ್ರಾಗುಕ್ತಂ= ಹಿಂದಿನ ಶ್ಲೋಕದಲ್ಲಿ ಹೇಳಿದ, ದೂಷಣಂ= ದೂಷಣವನ್ನು, ಸ್ಮರ= ಜ್ಞಾಪಿಸಿಕೋ, ಅಪ್ರವಿಶ್ಯೈವ ಭುಙ್ಕ್ತೇ ಚೇತ್= ದೇಹವನ್ನು ಪ್ರವೇಶಿಸದೇ ಭೋಗವನ್ನು ಅನುಭವಿಸುವುದಾದರೆ, ಏಕದೇಹೇಪಿ= ಆ ಕಲ್ಪಕ ಜೀವನ ದೇಹದಲ್ಲಿಯೂ ಕೂಡ, ಅಸೌ= ಈ ಜೀವನ ಸನ್ನಿಧಾನವು, ಕುತಃ= ಏಕೆ?

**ಅನುವಾದ– ದೇಹವನ್ನು ಪ್ರವೇಶಿಸಿ ಜೀವನು ಭೋಗವನ್ನು ಅನುಭವಿಸುತ್ತಾನೆ ಎಂದು ಹೇಳಿದರೆ ಹಿಂದಿನ ಶ್ಲೋಕದಲ್ಲಿ ಹೇಳಿದ ದೂಷಣವನ್ನೇ ಸ್ಮರಿಸಿಕೋ. ದೇಹವನ್ನು ಪ್ರವೇಶಿಸದೇ ಜೀವನು ಭೋಗವನ್ನು ಅನುಭವಿಸುವುದಾದರೆ ಕಲ್ಪಕನಾದ ಆ ಏಕಜೀವನ ಶರೀರದಲ್ಲಿಯೂ ಜೀವನು ಪ್ರವೇಶಿಸದೇ ಭೋಗವನ್ನು ಅನುಭವಿಸುವ ಸಾಧ್ಯತೆ ಇರುವ ಕಾರಣದಿಂದ ಅಲ್ಲಾದರೂ ಒಬ್ಬ ಜೀವನನ್ನು ಏಕೆ ಒಪ್ಪಬೇಕು?**

**ಭಾವವಿಲಾಸಿನೀ–** ನನು ದೇಹಪ್ರವೇಶಂ ವಿನೈವ ಭೋಗೋऽಸ್ತು ಕೋ ದೋಷ ಇತ್ಯತ ಆಹ – **ದೇಹಂ ಪ್ರವಿಶ್ಯೇತಿ** ॥ ಪ್ರಾಗುಕ್ತಂ ಪೂರ್ವಪದ್ಯೋಕ್ತಮ್ । ಅಪ್ರವಿಶ್ಯ ದೇಹಮಪ್ರವಿಶ್ಯ । ಏಕಜೀವ-ದೇಹೇऽಸೌ ಪ್ರವೇಶಃ । ತಸ್ಮಿನ್ನಪಿ ದೇಹೇऽಪ್ರವಿಶ್ಯೈವ ಭೋಗಸಂಭವಾದಿತಿ ಭಾವಃ ॥೭೦೮॥

ಯದ್ಯೇಕಸ್ಯಾಖಿಲಾ ಭೋಗಾಃ ಕಲಹಃ ಕಿಂನಿಬಂಧನಃ ।
ಯದ್ಯನೇಕೇಪಿ ಭೋಕ್ತಾರಃ ಕಲಹಃ ಕಿಂನಿಬಂಧನಃ ॥ ೭೦೯ ॥

**ಅರ್ಥ–** ಯದಿ= ಒಂದು ಪಕ್ಷ, ಅಖಿಲಾ ಭೋಗಾಃ= ಪ್ರಪಂಚದಲ್ಲಿ ಉಂಟಾಗುವ ಎಲ್ಲ ಭೋಗವೂ, ಏಕಸ್ಯ= ಒಬ್ಬನಿಗೇ ಅನುಭವಕ್ಕೆ ಬರುತ್ತದೆ ಎಂದಾದರೆ, ಕಲಹಃ= ವಿವಾದವು, ಕಿಂ ನಿಬಂಧನಃ= ಯಾವ ಕಾರಣದಿಂದ ಉಂಟಾಗುತ್ತದೆ, ಯದಿ= ಒಂದು ಪಕ್ಷ, ಭೋಕ್ತಾರಃ= ಭೋಗವನ್ನು ಅನುಭವಿಸುವವರು, ಅನೇಕೇ= ಅನೇಕರು ಇರುತ್ತಾರೆ ಎಂದಾದರೆ, ಕಲಹಃ= ಬಹುಜೀವವಾದಿಗಳ ಜೊತೆಯಲ್ಲಿ ಕಲಹವು, ಕಿಂ ನಿಬಂಧನಃ= ಯಾವ ಕಾರಣದಿಂದ ಉಂಟಾಗುತ್ತದೆ.

**ಅನುವಾದ–** ಪ್ರಪಂಚದಲ್ಲಿ ಉಂಟಾಗುವ ಭೋಗಗಳೆಲ್ಲವೂ ಒಬ್ಬನೇ ಜೀವನಿಗೆ ಉಂಟಾಗುತ್ತದೆ ಎಂದಾದರೆ, ಪ್ರಪಂಚದಲ್ಲಿ ಉಂಟಾಗುವ ವಿವಾದಗಳು ಯಾವ ಕಾರಣದಿಂದ ಉಂಟಾಗುತ್ತವೆ? (ನಿಷ್ಕಾರಣವಾಗುತ್ತವೆ). ಭೋಕ್ತೃಗಳು ಅನೇಕರೆಂದು ಅಂಗೀಕರಿಸಿದರೆ ಬಹುಜೀವವಾದಿಗಳಾದ ನಮ್ಮ ಜೊತೆಯಲ್ಲಿ ಕಲಹವನ್ನು ಮಾಡುವುದಕ್ಕೆ ಏನು ಕಾರಣ?

**ಭಾವವಿಲಾಸಿನೀ– ಯುಕ್ತ್ಯಂತರಮಾಹ – ಯದೀತಿ** ॥ ಅಖಿಲಾ ಭೋಗಾಃ ಸಕಲಜೀವಶರೀರೇಷು ವಿದ್ಯಮಾನಾ ಭೋಗಾಃ । ಕಲಹಃ ಸ ಏವ ಭುಂಕ್ತೇ ನಾಹಮಿತಿ ಕಲಹಃ । ದ್ವಿತೀಯಪಕ್ಷೇ ಜೀವಬಾಹುಲ್ಯಸಿದ್ಧೇಸ್ತತ್ವಾದಿನಂ ಪ್ರತಿ ಕಲಹಃ ॥ ೭೦೯ ॥

**ವಿವರಣೆ–** ಏಕಜೀವವಾದವನ್ನು ನಿರಾಕರಿಸಲು ಇಲ್ಲಿ ಇನ್ನೊಂದು ಯುಕ್ತಿಯನ್ನು ಹೇಳುತ್ತಾರೆ. ಏಕಜೀವವಾದವನ್ನು ಅಂಗೀಕರಿಸಿದರೆ ಪ್ರಪಂಚದಲ್ಲಿ ಉಂಟಾಗುವ ಭೋಗವೆಲ್ಲವೂ ಒಬ್ಬನಿಗೇ ಇರುವುದರಿಂದ ಈ ಸುಖವು ಅವನಿಗಿದೆ, ನನಗಿಲ್ಲ ಎಂಬ ಕಾರಣದಿಂದ ಪ್ರಪಂಚದಲ್ಲಿ ಉಂಟಾಗುವ ವಿವಾದಗಳೆಲ್ಲವೂ ನಿಷ್ಕಾರಣವಾಗಬೇಕಾದ ಪ್ರಸಂಗವು ಬರುತ್ತದೆ. ಅನೇಕ ಭೋಕ್ತೃಗಳನ್ನು ಒಪ್ಪಿದರಂತೂ, ಪ್ರತಿವಾದಿಗಳಾದ ನಾವೂ ಅನೇಕ ಜೀವರನ್ನು ಒಪ್ಪುವುದರಿಂದ ನಮ್ಮ ಜೊತೆಯಲ್ಲಿ ಏಕೆ ವಿವಾದವನ್ನು ಮಾಡುತ್ತೀಯೆ ಎಂದು ಅಭಿಪ್ರಾಯ.

ಯದ್ಯಶುದ್ಧಂ ಚ ಶುದ್ಧಂ ಚ ಭುಂಕ್ತೇ ಸರ್ವತ್ರ ಸರ್ವದಾ ।
ಪ್ರಾಯಶ್ಚಿತ್ತವಿಧಿಸ್ತಸ್ಯ ವ್ಯರ್ಥಃ ಕುಂಜರಶೌಚವತ್ ॥ ೭೧೦ ॥

**ಅರ್ಥ–** ಯದಿ= ಒಂದು ಪಕ್ಷ, ಸರ್ವತ್ರ= ಎಲ್ಲ ಕಡೆಗಳಲ್ಲಿಯೂ, ಸರ್ವದಾ= ಯಾವಾಗಲೂ, ಆ ಏಕಜೀವನು, ಶುದ್ಧಂ ಚ ಅಶುದ್ಧಂ ಚ= ಶುದ್ಧವಾದುದನ್ನು ಮತ್ತು ಅಶುದ್ಧವಾದುದನ್ನು, ಭುಙ್ಕ್ತೇ= ಭೋಗಿಸುತ್ತಾನೆ ಎಂದಾದರೆ, ತಸ್ಯ= ಅವನಿಗೆ, ಪ್ರಾಯಶ್ಚಿತ್ತ ವಿಧೀಃ= ಶಾಸ್ತ್ರದಲ್ಲಿ ಹೇಳಿದ ಪ್ರಾಯಶ್ಚಿತ್ತವಿಧಿಯು, ಕುಂಜರಶೌಚವತ್= ಗಜಸ್ನಾನದಂತೆ, ವ್ಯರ್ಥಃ= ವ್ಯರ್ಥವಾಗುತ್ತದೆ.

**ಅನುವಾದ-** ಆ ಏಕಜೀವನೇ ಯಾವಾಗಲೂ ಮತ್ತು ಎಲ್ಲ ಕಡೆಗಳಲ್ಲಿಯೂ ಶುದ್ಧವಾದುದನ್ನೂ ಮತ್ತು ಅಶುದ್ಧವಾದುದನ್ನೂ ಭೋಗಿಸುತ್ತಾನೆ ಎಂದಾದರೆ, ಶಾಸ್ತ್ರವು ವಿಧಾನಮಾಡುವ ಪ್ರಾಯಶ್ಚಿತ್ತ ಕರ್ಮಗಳು ಗಜಸ್ನಾನದಂತೆ ವ್ಯರ್ಥವಾಗುತ್ತದೆ.

**ಭಾವವಿಲಾಸಿನೀ– ದೋಷಾಂತರಮಾಹ – ಯದೀತಿ ॥ ಅಶುದ್ಧಂ ಮಾಂಸಾದಿಕಮ್ । ಶುದ್ಧಮನ್ನಾದಿಕಮ್ । ತಸ್ಯ ಏಕಜೀವಸ್ಯ । ಏಕದಿನೇ ಪ್ರಾಯಶ್ಚಿತ್ತಂ ಕೃತ್ವಾಪಿ ಪುನಃಪರದಿನೇ ತೇನೈವ ತಸ್ಯಾಶುದ್ಧಸ್ಯೈವ ಭುಜ್ಯಮಾನತ್ವಾತ್ ಕುಂಜರಶೌಚವದಿತ್ಯುಕ್ತಮ್ ॥ ೭೦೦ ॥**

**ವಿವರಣೆ–** ಜೀವನು ಒಬ್ಬನೇ ಆದ್ದರಿಂದ ಶುದ್ಧವಾದುದನ್ನೂ ಅವನು ಭೋಗಿಸುತ್ತಾನೆ, ಅಶುದ್ಧವಾದುದನ್ನೂ ಭೋಗಿಸುತ್ತಾನೆ. ಒಂದೆಡೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುತ್ತಾನೆ, ಇನ್ನೊಂದೆಡೆ ಅಶುದ್ಧವಾದುದನ್ನು ಭೋಗಿಸುತ್ತಲೇ ಇರುತ್ತಾನೆ. ಆ ಕಾರಣದಿಂದ ಶಾಸ್ತ್ರಗಳಲ್ಲಿ ಹೇಳುವ ಪ್ರಾಯಶ್ಚಿತ್ತ ವಿಧಿಯು ವ್ಯರ್ಥವಾಗುತ್ತದೆ ಎಂಬ ದೋಷವನ್ನು ಇಲ್ಲಿ ಹೇಳುತ್ತಾರೆ.

**ಅತೋ ನಾತ್ರಾನುಮಾ ಮಾನಮಕ್ಷಂ ರೂಕ್ಷಂ ದಿಧಕ್ಷತಿ ।**
**ಸುಖದುಃಖಾದಿಕಾಧ್ಯಕ್ಷಾನ್ ಬಹೂನ್ ಸಾಕ್ಷಾದ್ಯದೀಕ್ಷತೇ ॥ ೭೦೧ ॥**

**ಅರ್ಥ–** ಅತಃ= ಆದ್ದರಿಂದ, ಅತ್ರ= ಈ ಏಕಜೀವ ವಿಷಯದಲ್ಲಿ, ಅನುಮಾನಂ= ನಿನ್ನ ಅನುಮಾನವು, ಯತ್= ಯಾವ ಪ್ರತ್ಯಕ್ಷವು, ಬಹೂನ್= ಅನೇಕವಾದ, ಸುಖದುಃಖಾದಿಕಾಧ್ಯಕ್ಷಾನ್= ಸುಖದುಃಖಾದಿ ಜ್ಞಾನಗಳನ್ನು, ಸಾಕ್ಷಾತ್= ನೇರವಾಗಿ, ಈಕ್ಷತೇ= ವಿಷಯೀಕರಿಸುತ್ತದೆಯೋ, ಅಂತಹ, ರೂಕ್ಷಂ= ಕ್ರೂರವಾದ, ಮಾನಂ= ಪ್ರಮಾಣವಾದ, ಅಕ್ಷಂ= ಪ್ರತ್ಯಕ್ಷವನ್ನು, ನ ದಿಧಕ್ಷತಿ= ದಹಿಸುವುದಿಲ್ಲ( ಬಾಧಿಸುವುದಿಲ್ಲ).

**ಅನುವಾದ-** ಆದ್ದರಿಂದ ಏಕಜೀವವಾದ ವಿಷಯದಲ್ಲಿ ನಿನ್ನ ಅನುಮಾನವು ಸುಖದುಃಖಾದಿ ಅನೇಕ ವಿಷಯಗಳನ್ನು ನೇರವಾಗಿ ವಿಷಯೀಕರಿಸುವ ಕ್ರೂರವಾದ ಪ್ರಮಾಣವಾದ ಸಾಕ್ಷಿಯನ್ನು ದಹಿಸಲಾರದು (ಬಾಧಿಸುವುದಿಲ್ಲ).

**ಭಾವವಿಲಾಸಿನೀ–** ಅತಃ ಯುಕ್ತಿವಿರುದ್ಧತ್ವಾತ್ । ಅತ್ರ ಏಕಜೀವತ್ವೇ । ಯತ್ ಸಾಕ್ಷಿರೂಪ ಪ್ರತ್ಯಕ್ಷಮ್ ॥ ೭೦೧ ॥

**ವಿವರಣೆ–** ಎಲ್ಲ ಶರೀರಗಳೂ ಸ್ವಪ್ನದಲ್ಲಿ ಕಾಣುವ ಶರೀರದಂತೆ ನಿರ್ಜೀವವಾದುವು ಎಂಬ ನಿನ್ನ ಅನುಮಾನಕ್ಕಿಂತ ಸುಖದುಃಖಾದಿ ಪ್ರತ್ಯಕ್ಷರೂಪವಾದ ಸಾಕ್ಷಿಯು ಪ್ರಬಲವಾಗಿರುವುದರಿಂದ ಅಂತಹ ಸಾಕ್ಷಿಯಿಂದ ಸಿದ್ಧವಾದ ಜೀವಬಹುತ್ವವು ಪ್ರಬಲವಾದುದು. ನಿನ್ನ ದುರ್ಬಲವಾದ ಅನುಮಾನವು ಆ ಸಾಕ್ಷಿಯನ್ನು ಬಾಧಿಸುವುದಿಲ್ಲ. ಆದ್ದರಿಂದ ಜೀವಬಹುತ್ವವೇ ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

**ಯದ್ಯೇಕವಚನಾಂತೋಕ್ತ್ಯಾ ಜೀವೈಕ್ಯಂ ಸ್ಯಾದ್ ಭವೇತ್ ತದಾ ।**
**ಅನಾದಿಮಾಯಯಾ ಸುಪ್ತ ಇತ್ಯುಕ್ತ್ಯಾ ಸುಪ್ತ ಏವ ಸಃ ॥ ೭೧೨ ॥**

**ಅರ್ಥ–** ಯದಿ= ಒಂದು ಪಕ್ಷ, ಏಕವಚನಾಂತೋಕ್ತ್ಯಾ= ಜೀವಃ ಎಂದು ಏಕವಚನವಿರುವುದರಿಂದ, ಜೀವೈಕ್ಯಂ ಸ್ಯಾತ್= ಒಬ್ಬನೇ ಜೀವನೆಂದು ಅಂಗೀಕರಿಸುವುದಾದರೆ, ತದಾ= ಆಗ, ಅನಾದಿಮಾಯಯಾ= ಅನಾದಿಯಾದ ಅಜ್ಞಾನದಿಂದ, ಸುಪ್ತಃ= ಸುಷುಪ್ತ್ಯವಸ್ಥೆಯಲ್ಲಿರುವವನು, ಇತ್ಯುಕ್ತ್ಯಾ= ಎಂದು ಹೇಳುವುದರಿಂದ, ಸಃ= ಅವನು, ಸುಪ್ತ ಏವ ಭವೇತ್= ಸುಪ್ತನೇ ಆಗುತ್ತಾನೆ.

**ಅನುವಾದ–** 'ಯದಾ ಜೀವಃ ಪ್ರಬುಧ್ಯತೇ' ಎಂದು ಜೀವಃ ಎಂಬಲ್ಲಿ ಏಕವಚನವನ್ನು ಉಪಯೋಗಿಸಿರುವುದರಿಂದ ಒಬ್ಬನೇ ಜೀವನೆಂದು ಹೇಳುವುದಾದರೆ, ಅಲ್ಲಿಯೇ 'ಅನಾದಿಮಾಯಯಾ ಸುಪ್ತಃ' ಎಂದು ಹೇಳಿರುವುದರಿಂದ ಆ ಜೀವನು ಸುಷುಪ್ತಿಯ ಅವಸ್ಥೆಯಲ್ಲಿಯೇ ಇದ್ದಾನೆಂದು ಅಂಗೀಕರಿಸಬೇಕಾಗುತ್ತದೆ.

**ಭಾವವಿಲಾಸಿನೀ–** ಯದಾ ಜೀವಃ ಪ್ರಬುಧ್ಯತ ಇತಿ ಶ್ರುತೌ ಜೀವ ಇತ್ಯೇಕವಚನಾಂತೋಕ್ತ್ಯಾ ಜೀವೈಕ್ಯಮ್ ಜೀವಸ್ಯೈಕತ್ವಮ್ । ಸುಪ್ತ ಏವ ನಿದ್ರಾಂಕುರ್ವನ್ನೇವ ನತು ಸ್ವಪ್ನಮನುಭವನ್ನಿತ್ಯರ್ಥಃ । ಸಃ ಏಕಜೀವಃ ತಥಾ ಚ ಜಗತಃ ಸ್ವಪ್ನಕಲ್ಪಿತತ್ವಾಸಿದ್ಧಿರಿತಿ ಭಾವಃ ॥ ೭೧೨ ॥

**ವಿವರಣೆ–** ಆ ಏಕಜೀವನ ಸ್ವಪ್ನಕಲ್ಪಿತವಾದುದು ಈ ಜಗತ್ತು ಎಂದು ಏಕಜೀವವಾದಿಗಳ ಅಭಿಪ್ರಾಯ. ಜೀವನು ಒಬ್ಬನು ಎಂದು ಹೇಗೆ ಸಿದ್ಧವಾಗುತ್ತದೆ ಎಂಬುದಕ್ಕೆ ಅವರ ಉತ್ತರ ಶ್ರುತಿಯಲ್ಲಿ ಜೀವಃ ಎಂದು ಏಕವಚನವಿದೆ ಎಂದು. ಅದಕ್ಕೆ ನಮ್ಮ ಉತ್ತರ ಅಲ್ಲಿಯೇ ಸುಪ್ತಃ ಎಂಬಲ್ಲಿ ಅವನು ಸುಷುಪ್ತಿಯ ಅವಸ್ಥೆಯಲ್ಲಿದ್ದಾನೆ ಎಂದು ಹೇಳಿದೆ. ಸುಷುಪ್ತಿಯ ಅವಸ್ಥೆ ಬೇರೆ, ಸ್ವಪ್ನಾವಸ್ಥೆಯು ಬೇರೆ. ಅಲ್ಲಿ ಸ್ವಪ್ನಾವಸ್ಥೆಯನ್ನು ಹೇಳದೇ ಇರುವುದರಿಂದ ಆ ಜೀವನ ಸ್ವಪ್ನವೇ ಸಕಲವಾದ ಜಗತ್ತು ಎಂದು ಹೇಳುವುದಕ್ಕೆ ಏನೂ ಕಾರಣವಿಲ್ಲ ಎಂಬುದು. ಇದು ನಮ್ಮ ಉತ್ತರ.

**ಧರ್ಮಂ ಚರೇತಿ ವಚನಾದ್ ಧರ್ಮೈಕ್ಯಂ ಕಿಂ ನ ವರ್ಣ್ಯತೇ ।**
**ಅಜಾಮಜೋಽಶ್ನುತೇಽಜೋಽನ್ಯೋ ಜಹಾತೀತಿ ವಚಃ ಸ್ಮರ ॥ ೭೧೩ ॥**

**ಅರ್ಥ–** ಧರ್ಮಂ ಚರೇತಿ ವಚನಾತ್= ಧರ್ಮಂ ಚರ ಎಂಬ ವಚನದಿಂದ, ಧರ್ಮೈಕ್ಯಂ= ಒಂದೇ ಧರ್ಮವೆಂದು, ಕಿಂ ನ ವರ್ಣ್ಯತೇ= ಏಕೆ ಹೇಳುವುದಿಲ್ಲ, ಅಜಾಂ= ಪ್ರಕೃತಿಯನ್ನು, ಅಜಃ= ಒಬ್ಬ ಜೀವನು, ಅಶ್ನುತೇ= ಹೊಂದುತ್ತಾನೆ, ಅನ್ಯಃ ಅಜಃ= ಇನ್ನೊಬ್ಬ ಜೀವನು, ಜಹಾತಿ= ಪರಿತ್ಯಜಿಸುತ್ತಾನೆ, ಇತಿ ವಚಃ= ಎಂಬ ಮಾತನ್ನು, ಸ್ಮರ= ಸ್ಮರಿಸಿಕೋ.

**ಅನುವಾದ-** ಧರ್ಮಂ ಚರ ಎಂಬ ವಚನದಲ್ಲಿ ಧರ್ಮಂ ಎಂದು ಏಕವಚನವಿರುವುದರಿಂದ ಒಂದೇ ಧರ್ಮವೆಂದು ಏಕೆ ಹೇಳುವುದಿಲ್ಲ? ಒಬ್ಬ ಜೀವನು ಪ್ರಕೃತಿಯನ್ನು ಸೇವಿಸುತ್ತಾನೆ, ಇನ್ನೊಬ್ಬ ಜೀವನು ಪ್ರಕೃತಿಯನ್ನು ಪರಿತ್ಯಜಿಸುತ್ತಾನೆ ಎಂಬ ವಾಕ್ಯವನ್ನು ಸ್ಮರಿಸಿಕೋ.

**ಭಾವವಿಲಾಸಿನೀ–** ಏಕವಚನಾಂತಪದದಮಹಿಮ್ನಾ ವಸ್ತುನೋऽಪ್ಯೇಕತ್ವಾಂಗೀಕಾರೇऽತಿ ಪ್ರಸಂಗಮಾಹ – **ಧರ್ಮಮಿತಿ ॥** ಅತ್ರ ಜಾತ್ಯೇಕವಚನತ್ವೇ ತತ್ರಾಪಿ ತಥಾ ಸ್ಯಾದಿತಿ ಭಾವಃ। ಜೀವನಾನಾತ್ವೇ ಸ್ಪಷ್ಟಾಂಚ ಶ್ರುತಿಂ ದರ್ಶಯತಿ ॥ **ಅಜಾಮಿತಿ ॥** ಅನೇನ ಅಜೋಹ್ಯೇಕೋ ಜುಷಮಾಣೋऽನುಶೇತೇ ಜಹಾತ್ಯೇನಾಂ ಭುಕ್ತಭೋಗಾಮಜೋऽನ್ಯಃ ಇತಿ ಶ್ರುತಿಂ ಸಂಗೃಹ್ಣಾತಿ। ತತ್ರ ಹಿ ಪ್ರಕೃತಿಬದ್ಧತಯಾ ಧ್ವಸ್ತಬಂಧತಯಾ ಚಾಜಪದೋಕ್ತೌ ದ್ವೌ ಜೀವೌ ಸ್ಪಷ್ಟಂ ಪ್ರತೀಯೇತೇ । ಭುಕ್ತಭೋಗಾಂ ಜಹಾತೀತ್ಯಸ್ಯ ನಿತ್ಯಮುಕ್ತೇ ಪರಮಾತ್ಮನಿ ಅಯೋಗಾತ್ತದನ್ಯಜೀವಸ್ಯೈವ ಗ್ರಾಹ್ಯತ್ವಾದಿತಿಭಾವಃ। ಚೇತನಶ್ಚೇತನಾನಾಮೇಕೋ ಬಹೂನಾಂ ಯೇನುಪಶ್ಯಂತಿ ಧೀರಾಸ್ತೇಷಾಂ ಶಾಶ್ವತಮಿತಿ ಚ ವಿಸ್ಪಷ್ಟಂ ಬಹುಜೀವವಾದಿನೀ ಶ್ರುತಿರಪ್ಯನುಸಂಧೇಯಾ ॥ ೭೧೧ ॥

**ವಿವರಣೆ–** 'ಯದಾ ಜೀವಃ ಪ್ರಬುದ್ಧ್ಯತೇ' ಎಂಬಲ್ಲಿ ಜೀವಃ ಎಂಬಲ್ಲಿ ಏಕವಚನವಿರುವುದರಿಂದ ಒಬ್ಬನೇ ಜೀವ ಎಂದು ಅಂಗೀಕರಿಸುವುದಾದರೆ, ಧರ್ಮಂ ಚರ ಎಂಬ ವಾಕ್ಯದಲ್ಲಿಯೂ ಧರ್ಮಂ ಎಂದು ಏಕವಚನವಿರುವುದರಿಂದ ಒಂದೇ ಧರ್ಮವೆಂದು ಅಂಗೀಕರಿಸು. ಅಜೋಹ್ಯೇಕೋ ಜುಷಮಾಣೋನು ಶೇತೇ ಜಹಾತ್ಯೇನಾಂ ಎಂಬಲ್ಲಿ ಸ್ಪಷ್ಟವಾಗಿ ಒಬ್ಬ ಜೀವನು ಪ್ರಕೃತಿಯನ್ನು ಸೇವಿಸುತ್ತಾನೆ, ಇನ್ನೊಬ್ಬ ಜೀವನು ಪ್ರಕೃತಿಯನ್ನು ಪರಿತ್ಯಜಿಸುತ್ತಾನೆ ಎಂದು ಹೇಳಿರುವುದರಿಂದ ಆ ವಾಕ್ಯದ ಬಲದಿಂದ ಜೀವಭೇದವೇ ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

**ಅಂತರ್ಬಹಿಸ್ತ್ರಿಲೋಕೀಂ ಯಃ ಪಶ್ಯೇತ್ ಸರ್ವತ್ರ ಚಕ್ಷುಷಾ ।**
**ತಂ ಸರ್ವಸಾಕ್ಷಿಣಂ ಸುಪ್ತಂ ಕಥಮಾಹ ಶ್ರುತಿರ್ಬಲಾತ್ ॥ ೭೧೪ ॥**

**ಅರ್ಥ–** ಯಃ= ಯಾವ ನಿನ್ನ ಕಲ್ಪಕನಾದ ಏಕಜೀವನು, ಸರ್ವತ್ರ= ಎಲ್ಲ ಕಡೆಯಲ್ಲಿಯೂ, ಚಕ್ಷುಷಾ= ತನ್ನ ಚಕ್ಷುಸ್ಸಿನಿಂದ, ತ್ರಿಲೋಕೀಂ= ಮೂರು ಲೋಕಗಳನ್ನು, ಅಂತರ್ಬಹಿಃ= ಒಳಗೆ ಮತ್ತು ಹೊರಗೆ, ಪಶ್ಯೇತ್= ನೋಡುತ್ತಾನೆಯೋ, ತಂ= ಅಂತಹ,

ಸರ್ವಸಾಕ್ಷಿಣಂ= ಎಲ್ಲವನ್ನು ನೇರವಾಗಿ ನೋಡುವ ಅವನನ್ನು, ಶ್ರುತಿಃ= ಶ್ರುತಿಯು, ಬಲಾತ್= ಬಲಾತ್ಕಾರದಿಂದ, ಕಥಂ= ಹೇಗೆ, ಸುಪ್ತಂ ಆಹ= ಸುಪ್ತನೆಂದು ಹೇಳುತ್ತದೆ.

**ಅನುವಾದ-** ಯಾವ ಕಲ್ಪಕನಾದ ಜೀವನು ತನ್ನ ಚಕ್ಷುಸ್ಸಿನಿಂದ ಮೂರು ಲೋಕಗಳನ್ನು ಒಳಗೂ ಮತ್ತು ಹೊರಗೂ ನೋಡುತ್ತಾನೆಯೋ ಅಂತಹ ಸರ್ವಸಾಕ್ಷಿಯಾದ ಜೀವನನ್ನು ಶ್ರುತಿಯು ಹೇಗೆ ಬಲಾತ್ಕಾರದಿಂದ ಸುಪ್ತನೆಂದು ಹೇಳುತ್ತದೆ?

**ಭಾವವಿಲಾಸಿನೀ–** ಯೋ ಜಗತ್ಕಲ್ಪಕಸ್ತವೈಕೋ ಜೀವಃ। ಚಕ್ಷುಷೇತ್ಯುಪಲಕ್ಷಣಂ ಸ್ವಪ್ನೇ ಚೇನ್ಮನಸೇತ್ಯಪಿ ದ್ರಷ್ಟವ್ಯಮ್ । ಸ್ವಪ್ನೇ ಚೇದಂತಃ । ಜಾಗ್ರತಿ ಚೇದ್ಬಹಿಃ । ಅಂಡಾಂತರ್ಬಹಿರ್ವಾ । ಸಾಕ್ಷಿಣಂ ಕಲ್ಪಕತಯಾ ದ್ರಷ್ಟಾರಮ್ । ತಂ ಸುಪ್ತಂಬಾಹ್ಯಜ್ಞಾನಮಾತ್ರವಿಧುರಸುಷುಪ್ತ್ಯವಸ್ಥಾಪನ್ನಮ್ । ತ್ವತ್‌ಪ್ರಕ್ರಿಯಾಯಾಃ ಶ್ರುತೇಶ್ಚ ಬಹುದೂರಮಿತಿ ಭಾವಃ ॥ ೭೧೪ ॥

**ವಿವರಣೆ–** ಏಕಜೀವವಾದ ಪ್ರಕ್ರಿಯೆಯು ಅತ್ಯಂತ ವಿರುದ್ಧವಾದುದು ಎಂದು ಇಲ್ಲಿ ಹೇಳುತ್ತಾರೆ. ಕಲ್ಪಕನಾದ ಏಕಜೀವನು ಜಗತ್ತಿನ ಎಲ್ಲಾ ಪದಾರ್ಥಗಳನ್ನೂ ನೋಡುತ್ತಾನಷ್ಟೇ? ಇಲ್ಲದಿದ್ದರೆ ಅವನಿಗೆ ಕಲ್ಪಕತ್ವವು ಹೇಗೆ? ಆದ್ದರಿಂದ ಬಾಹ್ಯ ಜಗತ್ತಿನ ಸರ್ವಜ್ಞಾನವೂ ಇದೆ ಎಂದಂತಾಯಿತು. ಅವನನ್ನು ಸುಪ್ತನೆಂದು ಹೇಳಿದರೆ ಸುಪ್ತಿಯಲ್ಲಿ ಬಾಹ್ಯಜ್ಞಾನವಿಲ್ಲದಿರುವುದರಿಂದ ಅವನಿಗೆ ಬಾಹ್ಯಜ್ಞಾನವಿಲ್ಲವೆಂದು ಸಿದ್ಧವಾಗುತ್ತದೆ. ಆದ್ದರಿಂದ ಇದು ಪರಸ್ಪರ ವಿರುದ್ಧವಾಯಿತು. ಆದ್ದರಿಂದ ನಿನ್ನ ಪ್ರಕ್ರಿಯೆಗೂ ಶ್ರುತಿಯ ತಾತ್ಪರ್ಯಕ್ಕೂ ಬಹಳ ದೂರವಿದೆ ಎಂದು ಅಭಿಪ್ರಾಯ.

**ಜೀವೈಕ್ಯೇ ಯುಗಪದ್ ಭ್ರಾಂತಿಪ್ರಮಿತೀ ಕಸ್ಯ ಕಾ ಮೃತಿಃ ।**
**ಕಿಂ ಜನ್ಮ ತಸ್ಯ ನಿದ್ರಾಯಾಂ ನ ಸ್ಯಾಜ್ಜಗದಿದಂ ಮಹತ್ ॥ ೭೧೫ ॥**

**ಅರ್ಥ–** ಜೀವೈಕ್ಯೇ= ಜಾಗ್ರದವಸ್ಥೆಯಲ್ಲಿರುವ ಜೀವರಿಗೆ ಐಕ್ಯವಿದ್ದರೆ, ಯುಗಪದ್ಭ್ರಾಂತಿಪ್ರಮಿತೀ= ಒಂದೇ ಕಾಲದಲ್ಲಿ ಒಂದೇ ವಸ್ತುವಿಷಯಕವಾದ ಭ್ರಾಂತಿ ಮತ್ತು ಪ್ರಮಾದಗಳನ್ನು ಒಪ್ಪಬೇಕಾಗಿ ಬರುತ್ತದೆ, ಕಸ್ಯ= ಯಾರಿಗೆ, ಮೃತಿಃ ಕಾ= ಮರಣವು ಯಾವುದು, ಜನ್ಮ ಕಿಂ= ಜನ್ಮವು ಯಾವುದು, ತಸ್ಯ ನಿದ್ರಾಯಾಂ= ಜಾಗ್ರದವಸ್ಥೆಯಲ್ಲಿರುವ ಕಲ್ಪಕನಾದ ಆ ಜೀವನು ನಿದ್ರೆಯನ್ನು ಮಾಡಿದರೆ, ಇದಂ ಮಹತ್ ಜಗತ್= ಈ ದೊಡ್ಡ ಜಗತ್ತು, ನ ಸ್ಯಾತ್= ಇಲ್ಲವೆಂದಾಗುತ್ತದೆ.

**ಅನುವಾದ-** ಜಾಗ್ರದವಸ್ಥೆಯಲ್ಲೇ ಜೀವೈಕ್ಯವನ್ನು ಒಪ್ಪುವುದಾದರೆ ಒಬ್ಬನಿಗೇ ಒಂದೇ ವಿಷಯದ ಭ್ರಾಂತಿ ಮತ್ತು ಪ್ರಮಾದಗಳನ್ನು ಏಕಕಾಲದಲ್ಲಿ ಒಪ್ಪಬೇಕಾಗುತ್ತದೆ. ಆಗ ಮರಣವೆಂದರೇನು, ಜನ್ಮವೆಂದರೇನು? ಕಲ್ಪಕನಾದ ಏಕಜೀವನು ಜಾಗ್ರದವಸ್ಥೆಯಿಂದ ನಿದ್ರಾವಸ್ಥೆಗೆ ಹೋದರೆ ಆಗ ಈ ಮಹತ್ತಾದ ಜಗತ್ತೇ ಇಲ್ಲವೆಂದಾಗುತ್ತದೆ.

**ಭಾವವಿಲಾಸಿನೀ–** ನನು ಸುಪ್ತಪದೇನ ಲಕ್ಷಣಯಾऽಜ್ಞಾನಶಬಲಜಾಗ್ರದವಸ್ಥೈವೋಚ್ಯತೇ । ಅತೋ ನ ವಿರೋಧ ಇತ್ಯತ ಆಹ – **ಜೀವೈಕ್ಯ ಇತಿ** ॥ ಜಾಗ್ರದವಸ್ಥಾಪನ್ನ ಜೀವೈಕ್ಯ ಇತ್ಯರ್ಥಃ । ಯುಗಪದ್ ಭ್ರಾಂತಿಪ್ರಮಿತೀ ಪುರುಷದ್ವಯೇ ಏಕತ್ರೈಕದೈವ ಜಾಯಮಾನಾ ರಜತಭ್ರಾಂತಿಃ ಶುಕ್ತಿಪ್ರಮಿತಿಶ್ಚೇತ್ಯರ್ಥಃ । ಕಸ್ಯ । ತವ ಮತೇ ಜೀವಾಂತರಾಭಾವಾದೇಕಜೀವಸ್ಯೈವೇತಿ ವಕ್ತವ್ಯಮ್ । ತಚ್ಚ ವಿರುದ್ಧಮ್ । ಪ್ರಮಾಭ್ರಮಯೋರ್ಯುಗಪದೇಕತ್ರಾಯೋಗಾದಯುಕ್ತಮತಸ್ತತ್-ಪ್ರತ್ಯೇತೃಜೀವದ್ವಯುಮಾವಶ್ಯಕಮಿತಿ ಭಾವಃ । ಕಾ ಮೃತಿಃ ಕಿಂ ಜನ್ಮ । ಜೀವಸ್ಯ ದೇಹಸಂಯೋಗ-ವಿಯೋಗೌ ಹಿ ಜನ್ಮಮರಣತಯಾಲೋಕೇ ವೇದೇ ಚ ಕಥ್ಯೇತೇ । ಏಕಸ್ಯೈವ ಜೀವತ್ವೇ ತದಪಿ ನ ಸ್ಯಾದಿತಿ ಭಾವಃ। ತಸ್ಯ ಏಕಜೀವಸ್ಯ । ಜೀವತ್ವಾದೇವ ನಿದ್ರಾಪಿ ಸಂಭಾವಿತಾ । ಅತಸ್ತದಾ ಜಗದಭಾವಪ್ರಸಂಗ ಇತಿ ಭಾವಃ ॥ ೭೧೫ ॥

**ವಿವರಣೆ–** ನಾವು ಸುಪ್ತ ಎಂಬ ಪದದಿಂದ ನಿದ್ರೆಯನ್ನು ಹೇಳುವುದಿಲ್ಲ, ಅಜ್ಞಾನಾವೃತತ್ವವನ್ನು ಹೇಳಿ ಜಾಗ್ರದವಸ್ಥೆಯಲ್ಲಿರುವ ಜೀವರಿಗೇ ಐಕ್ಯವನ್ನು ಹೇಳುತ್ತೇವೆಂದು ಅಂಗೀಕಾರ ಮಾಡುವ ಪಕ್ಷದಲ್ಲಿ ಅದಕ್ಕೆ ಇಲ್ಲಿ ದೋಷವನ್ನು ಹೇಳುತ್ತಾರೆ. ಶುಕ್ತಿಯನ್ನು ನೋಡಿ ಒಬ್ಬನಿಗೆ ಇದಂ ರಜತಂ ಎಂಬ ಭ್ರಾಂತಿಯು ಬರುವಾಗಲೇ, ಇನ್ನೊಬ್ಬನಿಗೆ ಇಯಂ ಶುಕ್ತಿಃ ಎಂಬ ಪ್ರಮೆಯು ಬರುತ್ತದೆ. ಜೀವರಿಗೆ ಐಕ್ಯವಿದ್ದರೆ ಒಬ್ಬನೇ ಜೀವನಿಗೆ ಏಕಕಾಲದಲ್ಲಿಯೇ ಇಯಂ ಶುಕ್ತಿಃ ಎಂಬ ಪ್ರಮೆಯೂ ಮತ್ತು ಇದಂ ರಜತಂ ಎಂಬ ಭ್ರಮೆಯೂ ಉಂಟಾಗಿದೆ ಎಂದು ಅಂಗೀಕಾರ ಮಾಡಬೇಕು. ಇದು ಅತ್ಯಂತ ವಿರುದ್ಧವಾದುದು. ಇನ್ನು ದೇಹಸಂಯೋಗಕ್ಕೆ ಜನನವೆಂದೂ, ದೇಹವಿಯೋಗಕ್ಕೆ ಮರಣವೆಂದೂ ಹೇಳುತ್ತಾರೆ. ಕಣ್ಣಿಗೆ ಕಾಣುವ ಯಾವ ದೇಹದಲ್ಲಿಯೂ ಜೀವನೇ ಇಲ್ಲದಿದ್ದರೆ ಯಾವ ಜೀವಕ್ಕೂ ದೇಹಸಂಯೋಗವೂ ಇಲ್ಲ, ವಿಯೋಗವೂ ಇಲ್ಲ. ಆದ್ದರಿಂದ ಕಣ್ಣಿಗೆ ಕಾಣುವ ಜನನ ಮರಣಗಳಿಗೆ ಅರ್ಥವಿಲ್ಲವೆಂಬ ಆಪತ್ತಿಯು ಬರುತ್ತದೆ. ಆ ಕಲ್ಪಕಜೀವನೂ ಸಹ ಜೀವನಾಗಿರುವುದರಿಂದ ಅವನಿಗೂ ನಿದ್ರೆಯು ಸಂಭಾವಿತವಾದುದು. ಹಾಗೆಯೇ ಅವನು ನಿದ್ರೆ ಮಾಡಿದಾಗ ಈ ಜಗತ್ತೇ ಇಲ್ಲವೆಂದಾಗುತ್ತದೆ ಎಂದು ಅಭಿಪ್ರಾಯ.

**ಸ್ವಪ್ನೇ ಕಥಂಚಿತ್ ಘಟತೇ ತತ್ ಸ್ವಪ್ನೋಽಯಂ ಭವೇದ್ ಧ್ರುವಮ್ ।**
**ನಿದ್ರಾ ಚ ನಿದ್ರೈವಾಸ್ಯ ಸ್ಯಾತ್ ಕಿಂ ನ ಸ್ಯಾದ್ದೂಷಣಂ ತದಾ ॥ ೭೧೬ ॥**

**ಅರ್ಥ–** ಸ್ವಪ್ನೇ= ಸ್ವಪ್ನದಲ್ಲಿ, ಕಥಂಚಿತ್= ಕಷ್ಟದಿಂದ, ಘಟತೇ= ವಿರುದ್ಧವಾದ ವಸ್ತುಗಳಿಗೂ ಘಟನೆಯು ಉಂಟಾಗುತ್ತದೆ, ತತ್= ಆದ್ದರಿಂದ, ಅಯಂ= ಈ ಜಗತ್ತು, ಧ್ರುವಂ= ನಿಶ್ಚಯವಾಗಿ, ಸ್ವಪ್ನೋ ಭವೇತ್= ಅವನ ಸ್ವಪ್ನವೇ ಆದೀತು, ಅಸ್ಯ= ಏಕಜೀವನ, ನಿದ್ರಾ ಚ= ನಿದ್ರೆಯೂ, ನಿದ್ರೈವಸ್ಯಾತ್= ಮುಖ್ಯವಾದ ನಿದ್ರೆಯೇ ಆಗುತ್ತದೆ, ತದಾ= ಆಗ, ಸ್ವಪ್ನಪಕ್ಷದಲ್ಲಿ, ಕಿಂ ದೂಷಣಂ= ಯಾವ ದೂಷಣವು, ನ ಸ್ಯಾತ್= ಉಂಟಾಗುವುದಿಲ್ಲ.

**ಅನುವಾದ-** ಸ್ವಪ್ನದಲ್ಲಿ ಬಹಳ ಕಷ್ಟದಿಂದ ವಿರುದ್ಧ ಧರ್ಮಗಳನ್ನು ಕೂಡಿಸಬಹುದು. ಆದ್ದರಿಂದ ಇದು ಅವನಿಗೆ ನಿಶ್ಚಯವಾಗಿ ಸ್ವಪ್ನವೇ ಆಗಬೇಕು. ಅವನಿಗೆ ನಿದ್ರೆ ಉಂಟಾದರೆ ಜಗತ್ತಿಗೇ ನಿದ್ರೆ ಉಂಟಾದೀತು. ಆಗ ನಿದ್ರಿತನಾದವನಿಗೆ ಕಾಣುತ್ತಿರುವ ಸ್ವಪ್ನವು ಈ ಜಗತ್ತು ಎಂಬ ಪಕ್ಷದಲ್ಲಿ ಯಾವ ದೋಷವು ಉಂಟಾಗುವುದಿಲ್ಲ?

**ಭಾವವಿಲಾಸಿನೀ–** ನನು ದೈನನಂದಿನಪ್ರಲಯಕಾಲ ಏವ ತಸ್ಯ ನಿಶಾ ತದೈವ ನಿದ್ರಾ ಚ ಅತಸ್ತಸ್ಯ ನಿದ್ರಾಯಾಂ ಜಗದಭಾವೋ ನಾನಿಷ್ಟ ಇತಿ ಚೇನ್ನ । ತ್ರೈಲೋಕ್ಯಾಭಾವಮಾತ್ರಸ್ಯೇಷ್ಟತ್ವೇಽಪಿ ತದತಿರಿಕ್ತಭವನಾಭವಸ್ಯ ಪ್ರಲಯೋದಕಾಭಾವಸ್ಯ ಚ ತದಪ್ಯನಿಷ್ಟತ್ವಾನ್ನಿದ್ರಾಕಾಲಸ್ಯೈವ ಸ್ವಪ್ನಕಾಲತ್ವಾನ್ಮಧ್ಯೇಪ್ರಲಯಂ ಜಗದುತ್ಪತ್ತಿಪ್ರಸಂಗಃ । ಪುನರಹ್ನಿ ಜಗದಭಾವಪ್ರಸಂಗಶ್ಚ । ಸೈವ ತಸ್ಯ ನಿಶಾ ಚೇತ್ ಕಸ್ಯ ತರ್ಹೀಯಂ ಮಾನುಷೀ ನಿಶಾ । ಇದಾನೀಂತನನಿದ್ರಾ ಚ । ನ ತಾವಜ್ಜಡಸ್ಯ । ತಸ್ಯಾವಸ್ಥಾತ್ರಯವಿಧುರತ್ವಾತ್ । ಚೇತನಾಂತರಸ್ಯ ಚೇತ್ ಬಹುಜೀವವಾದ-ಪ್ರಸಂಗಃ । ತಸ್ಯೈವ ಚೇತ್ ಇದಾನೀಮಪಿ ನಿಶಿ ಜಗದಭಾವಪ್ರಸಂಗಃ । ತಸ್ಮಾನ್ನಾಸೌ ಜಾಗ್ರದವಸ್ಥಾಪನ್ನಃ। ಉಕ್ತದೂಷಣಪರಿಹಾರಾಸಂಭವಾತ್ । ಕಿಂತು ಸ್ವಪ್ನಾವಸ್ಥಾಪನ್ನ ಏವ ವಾಚ್ಯ ಇತ್ಯಾಹ – ಸ್ವಪ್ನ ಇತಿ ॥ ಘಟತೇ । ಯುಗಪದ್ಭ್ರಾಂತಿಪ್ರಮಿತಿಜನ್ಮ ಮೃತ್ಯಾದಿಕಮ್ । ನಹಿ ಸ್ವಾಪ್ನಭ್ರಾಂತಿಪ್ರಮಿತಿಜನ್ಮಾದೌ ಸ್ವಪ್ನದ್ರಷ್ಟೃಜೀವಾದಪರೋ ಜೀವೋಽಸ್ತಿ । ಅತಃ ಸ್ವಪ್ನಸ್ಯ ಜಾಗ್ರ-ದವಸ್ಥಾವನ್ನಿಯಂತುಮಶಕ್ಯತ್ವಾತ್ ವಿರುದ್ಧಮಪಿ ತತ್ರ ಘಟತ ಇತಿ ಭಾವಃ । ಸ್ವಾಪ್ನಸೃಷ್ಟಿಪಕ್ಷೇ ತತ್ರಾಪಿ ನರಕರಿತುರಗಾದಿ ತಾತ್ಕಲಿಕಬಹುಜೀವ ಸದ್ಭಾವೇನ ಜಾಗ್ರದ್ವದೇವ ಮರ್ಯಾದಾಯಾ ವಕ್ತುಂ ಶಕ್ಯತ್ವಾತ್ ಕಥಂಚಿದಿತ್ಯುಕ್ತಮ್ । ತತ್ತಸ್ಮಾತ್ । ಅಯಂ ಏಕಜೀವಭ್ರಮಃ । ನಿದ್ರಾ ಸುಪ್ತಪದೋಕ್ತಾ ನಿದ್ರಾ । ಅಸ್ಯ ಏಕಜೀವಸ್ಯ । ತದಾ ಮುಖ್ಯತೋ ನಿದ್ರಿತಸ್ಯ ಸ್ವಪ್ನಪಕ್ಷೇ ಕಿಂ ದೂಷಣಂ ನ ಸ್ಯಾತ್ । ಪ್ರಾಗುಕ್ತಂ ವಕ್ಷ್ಯಮಾಣಂ ಚ ಸರ್ವಂ ದೂಷಣಂಸ್ಯಾದಿತ್ಯರ್ಥಃ ॥೭೧೬॥

**ವಿವರಣೆ–** ದೈನಂದಿನ ಪ್ರಳಯ ಕಾಲವೇ ಆ ಏಕಜೀವನಿಗೆ ರಾತ್ರಿ, ಮತ್ತು ಆಗಲೇ ಅವನಿಗೆ ನಿದ್ರೆ. ಆದ್ದರಿಂದ ಅವನ ನಿದ್ರೆಯ ಕಾಲದಲ್ಲಿ ಜಗತ್ತಿಗೆ ಅಭಾವವುಂಟಾಗಲಿ ಎಂಬುದು ನಮಗೆ ಅನಿಷ್ಟವಲ್ಲ ಎಂಬ ಶಂಕೆಗೆ ಇಲ್ಲಿ ಉತ್ತರವನ್ನು ಹೇಳುತ್ತಾರೆ. ದೈನಂದಿನ ಪ್ರಳಯದಲ್ಲಿ ಮೂರು ಲೋಕಗಳು ಮಾತ್ರ ನಾಶವಾಗುತ್ತವೆ ಹೊರತು, ಮೂರು ಲೋಕಗಳ ಮೇಲಿರುವ ಲೋಕಗಳು ನಾಶವಾಗುವುದಿಲ್ಲ. ಆದ್ದರಿಂದ ಆ ಲೋಕಗಳನ್ನು ಒಪ್ಪಲೇಬೇಕು ಮತ್ತು ಮೂರು ಲೋಕಗಳಲ್ಲಿಯೂ ಪ್ರಳಯೋದಕವು ತುಂಬಿಕೊಂಡಿರುತ್ತವೆ. ಆದ್ದರಿಂದ ಆ ಉದಕವನ್ನು ಒಪ್ಪಬೇಕು. ಆದ್ದರಿಂದ ಜಗದಭಾವವನ್ನು ಒಪ್ಪಲು ಬರುವುದಿಲ್ಲ ಮತ್ತು ಪ್ರಳಯಕಾಲವೇ ಅವನ ನಿದ್ರೆಯ ಕಾಲವಾದರೆ, ನಿದ್ರೆಯ ಮಧ್ಯದಲ್ಲಿಯೇ ಸ್ವಪ್ನವು ಬೀಳುವುದರಿಂದ ಪ್ರಳಯ ಕಾಲದಲ್ಲಿಯೇ ಪುನಃ ಅವನಿಗೆ ಸ್ವಪ್ನವು ಉಂಟಾಗಿ ಜಗತ್ತಿನ ಉತ್ಪತ್ತಿ ಉಂಟಾಗಬೇಕಾದ ಪ್ರಸಂಗವು ಬರುತ್ತದೆ. ಪುನಃ ನಿದ್ರೆಯಿಂದ ಅವನು ಹಗಲಲ್ಲಿ ಎದ್ದ ತಕ್ಷಣ ಜಗದಭಾವದ

ಪ್ರಸಂಗವು ಉಂಟಾಗುತ್ತದೆ. ಪ್ರಳಯ ಕಾಲವೇ ಆ ಏಕಜೀವನ ರಾತ್ರಿಯ ಕಾಲ ಎಂದು ಹೇಳಿದರ ಈಗ ಅನುಭವಕ್ಕೆ ಬರುತ್ತಿರುವ ರಾತ್ರಿಗಳು ಯಾರಿಗೆ ಎಂದು ಹೇಳಬೇಕು. ಜಡಕ್ಕಂತೂ ಅಲ್ಲ, ಏಕೆಂದರೆ ಅದು ಅವಸ್ಥಾತ್ರಯರಹಿತವಾದುದು. ಬೇರೆ ಜೀವನಿಗೆ ಎಂದು ಹೇಳಿದರೆ ಬಹುಜೀವವಾದವನ್ನು ಒಪ್ಪಿದಂತಾಗುತ್ತದೆ. ಕಲ್ಪಕನಾದ ಆ ಜೀವನಿಗೆ ಎಂದು ಹೇಳಿದರೆ ಈಗಲೂ ರಾತ್ರಿಯಲ್ಲಿ ಜಗದಭಾವ ಪ್ರಸಂಗವು ಬರುತ್ತದೆ. ಆದ್ದರಿಂದ ಆ ಏಕಜೀವನು ಜಾಗ್ರದವಸ್ಥೆಯಲ್ಲಿರುವವನು ಎಂದು ಹೇಳಬಾರದು. ಸ್ವಪ್ನಾವಸ್ಥೆಯಲ್ಲಿರುವವನು ಎಂದು ಒಂದು ಪಕ್ಷ ಹೇಳಬಹುದು. ಸ್ವಪ್ನವನ್ನು ನಿಯಂತ್ರಿಸಲು ಸಾಧ್ಯವಿಲ್ಲವಾದ್ದರಿಂದ, ಸ್ವಪ್ನದಲ್ಲಿ ವಿರುದ್ಧವಾದವುಗಳೂ ಒಟ್ಟಿಗೆ ತೋರಬಹುದು ಮತ್ತು ಸ್ವಪ್ನದಲ್ಲಿ ಒಬ್ಬನೇ ಜೀವನಿರುತ್ತಾನೆ. ಇದನ್ನಾದರೂ ಕಷ್ಟಪಟ್ಟೇ ಹೇಳಬೇಕು, ಏಕೆಂದರೆ ಸ್ವಪ್ನವಲ್ಲಿ ಕಾಣುವ ಗಜ ತುರಗಗಳೆಲ್ಲವೂ ಸತ್ಯವೆಂದೂ ಅಲ್ಲಿಯೂ ಬಹುಜೀವರೇ ಇದ್ದಾರೆಂದೂ ಮೊದಲೇ ಹೇಳಿದ್ದೇವೆ. ಆದ್ದರಿಂದ ಏಕಜೀವನಾದ ಅವನು ಮಲಗಿ ನಿದ್ದೆ ಮಾಡಿದರೆ, ಜಗತ್ತಿಗೇ ನಿದ್ರೆ ಉಂಟಾದೀತು. ಆಗ ಜಗದಭಾವ ಪ್ರಸಂಗವು ಇದ್ದೇ ಇದೆ. ಆದ್ದರಿಂದ ಅವನ ಸ್ವಪ್ನವೇ ಈ ಜಗತ್ತು ಎಂದು ಅಂಗೀಕಾರ ಮಾಡಿದರೆ ಸ್ವಪ್ನ ಪಕ್ಷದಲ್ಲಿ ಹಿಂದೆ ಹೇಳಿದ ಮತ್ತು ಮುಂದೆ ಹೇಳುವ ಎಲ್ಲಾ ದೋಷಗಳೂ ಬಂದೇ ಬರುತ್ತವೆ ಎಂದು ಅಭಿಪ್ರಾಯ.

**ಜಗದ್ಭಂಗಭಿಯಾ ನಿದ್ರಾಂ ಸುಭದ್ರಾಂ ಕುರ್ವತಃ ಸದಾ ।**
**ಸ್ವಪ್ನೋ ಜಗಚ್ಚೇತ್ ಕಸ್ಯ ಸ್ಯಾನ್ನಿಷೇಧವಿಧಿಶಾಸನಂ ॥ ೭೧೭ ॥**

**ಅರ್ಥ–** ಜಗದ್ಭಂಗಭಿಯಾ= ಜಗತ್ತಿಗೆ ನಾಶವಾಗುವ ಹೆದರಿಕೆಯಿಂದ, ಸದಾ= ಯಾವಾಗಲೂ, ಸುಭದ್ರಾಂ= ಗಾಢವಾದ, ನಿದ್ರಾಂ= ನಿದ್ರೆಯನ್ನು, ಕುರ್ವತಃ= ಮಾಡುವ, ಆ ಏಕಜೀವನ, ಸ್ವಪ್ನಃ= ಸ್ವಪ್ನವೇ, ಜಗಚ್ಚೇತ್= ಜಗತ್ತು ಎಂದಾದರೆ, ನಿಷೇಧವಿಧಿಶಾಸನಂ= ನಿಷೇಧಶಾಸ್ತ್ರ ಮತ್ತು ವಿಧಿಶಾಸ್ತ್ರಗಳು, ಕಸ್ಯಸ್ಯಾತ್= ಯಾರನ್ನು ಕುರಿತು ಇರುತ್ತವೆ?

**ಅನುವಾದ-** ತಾನು ಎಚ್ಚರಗೊಂಡರೆ ಜಗತ್ತೇ ನಾಶವಾಗುವುದು ಎಂಬ ಹೆದರಿಕೆಯಿಂದ ಯಾವಾಗಲೂ ಗಾಢವಾದ ನಿದ್ರೆಯನ್ನು ಮಾಡುತ್ತಿರುವ ಆ ಏಕಜೀವನ ಸ್ವಪ್ನವೇ ಜಗತ್ತು ಎಂದಾದರೆ, ವಿಧಿ ನಿಷೇಧ ಶಾಸ್ತ್ರಗಳು ಯಾರನ್ನು ಕುರಿತು ಪ್ರವೃತ್ತವಾಗುತ್ತವೆ?

**ಭಾವವಿಲಾಸಿನೀ–** ತದೇವ ದೂಷಣಂ ದರ್ಶಯತಿ – **ಜಗದಿತಿ ॥** ನಿದ್ರಿತಂ ಪ್ರತಿ ನಿಷೇಧ-ವಿಧ್ಯೋರಪ್ರಯೋಜಕತ್ವಾದನ್ಯಸ್ಯಾಚೇತನತ್ವಾದಿತಿ ಭಾವಃ ॥ ೭೧೭ ॥

**ವಿವರಣೆ–** ಜಡವನ್ನು ಕುರಿತು ವಿಧಿ ನಿಷೇಧಶಾಸ್ತ್ರ ಪ್ರವೃತ್ತವಾಗುವುದಿಲ್ಲ. ಇನ್ನೊಬ್ಬ ಜೀವನನ್ನು ಕುರಿತು ಎಂದು ಹೇಳಲು ಇನ್ನೊಬ್ಬ ಜೀವನನ್ನು ಒಪ್ಪಿಲ್ಲ. ಆ ಕಲ್ಪಕ ಜೀವನನ್ನೇ ಕುರಿತು ಪ್ರವೃತ್ತವಾಗುತ್ತವೆ ಎಂದು ಹೇಳಿದರೆ ಸಂಸಾರ ಮುಗಿಯುವವರೆಗೂ

ನಿದ್ರೆಯಲ್ಲಿಯೇ ಇದ್ದಾನೆ. ನಿದ್ರೆಯಲ್ಲಿದ್ದವನು ಯಾವ ವಿಧಿ ನಿಷೇಧ ಶಾಸ್ತ್ರವನ್ನೂ ಅನುಸರಿಸುವುದಿಲ್ಲ. ಹೀಗಿರುವಾಗ ವಿಧಿನಿಷೇಧ ಶಾಸ್ತ್ರವು ವ್ಯರ್ಥವಾಗುತ್ತದೆ. ಆದ್ದರಿಂದ ಏಕಜೀವವಾದವು ಅಪ್ರಮಾಣಕವಾದುದೆಂದು ಅಭಿಪ್ರಾಯ.

**ಯದಾ ನೋಪರಮಶ್ಚಕ್ಷುರಾದೇರ್ನ ಸ್ವಪ್ನವಜ್ಜಗತ್ ।**
**ಯದಾ ಚೋಪರಮಃ ಕಸ್ಯ ಕರಣಂ ಕಾರಣಂ ವದ ॥ ೭೧೮ ॥**

**ಅರ್ಥ–** ಯದಾ= ಒಂದು ಪಕ್ಷ, ಚಕ್ಷುರಾದೇಃ= ಚಕ್ಷುರಾದಿ ಇಂದ್ರಿಯಗಳಿಗೆ, ನ ಉಪರಮಃ= ಉಪರಮವನ್ನು ಒಪ್ಪದಿದ್ದರೆ, ಜಗತ್= ಈ ಜಗತ್ತು, ನ ಸ್ವಪ್ನವತ್= ಸ್ವಪ್ನದಂತೆ ಅಲ್ಲ, ಯದಾ ಚೋಪರಮಃ= ಒಂದು ಪಕ್ಷ ಉಪರಮವನ್ನು ಒಪ್ಪಿದರೆ, ಕರಣಂ= ಆ ಏಕಜೀವನ ಚಕ್ಷುರಾದಿಕರಣಗಳು, ಕಸ್ಯ ಕಾರಣಂ= ಯಾವ ಜ್ಞಾನಕ್ಕೆ ಕಾರಣವಾಗುತ್ತವೆ ಎಂದು, ವದ= ಹೇಳು.

**ಅನುವಾದ–** ಕಲ್ಪಕನಾದ ಏಕಜೀವನಿಗೆ ಚಕ್ಷುರಾದಿ ಇಂದ್ರಿಯ ಉಪರಮವು ಇದೆಯೋ, ಇಲ್ಲವೋ ಎಂಬುದು ಪ್ರಶ್ನೆ. ಉಪರಮವಿಲ್ಲ ಎಂದು ಹೇಳಿದರೆ ಆಗ ಸ್ವಪ್ನವೇ ಬೀಳಲು ಸಾಧ್ಯವಿಲ್ಲ. ಏಕೆಂದರೆ ಸ್ವಪ್ನಾವಸ್ಥೆಯಲ್ಲಿ ಮನಸ್ಸನ್ನು ಬಿಟ್ಟು ಉಳಿದ ಇಂದ್ರಿಯಗಳೆಲ್ಲವೂ ಉಪರತವಾಗಿರುತ್ತವೆ ಎಂಬುದು ಶಾಸ್ತ್ರಸಿದ್ಧವಾದುದು. ಒಂದು ಪಕ್ಷ ಉಪರಮವನ್ನು ಒಪ್ಪಿದರೆ ಆಗ ಅವನ ಸಂಸಾರವಿರುವವರೆಗೂ ಜಗತ್ತು ಇದ್ದೇ ಇರುತ್ತದೆ. ಅಲ್ಲಿಯವರೆಗೆ ಅವನು ಚಕ್ಷುರಾದಿ ಇಂದ್ರಿಯಗಳ ಉಪರಮವನ್ನೇ ಹೊಂದಿರುತ್ತಾನೆ. ಹೀಗಿರುವಾಗ ಅವನ ಚಕ್ಷುಸ್ಸು ಯಾವ ಜ್ಞಾನಕ್ಕೆ ಕಾರಣವಾಗುತ್ತದೆ? ಸಂಸಾರವಸ್ಥೆಯಲ್ಲಿ ಯಾವ ಜ್ಞಾನವೂ ಉಂಟಾಗುವುದಿಲ್ಲ. ಅನಂತರ ಚಕ್ಷುರಾದಿ ಇಂದ್ರಿಯಗಳೇ ಇರುವುದಿಲ್ಲ. ಆದ್ದರಿಂದ ಚಕ್ಷುರಾದಿ ಇಂದ್ರಿಯಗಳ ಸೃಷ್ಟಿಯೇ ವ್ಯರ್ಥವಾಗುತ್ತದೆ. ಆದ್ದರಿಂದ ಏಕಜೀವವಾದವು ದುಷ್ಟವಾದುದು ಎಂದು ಅಭಿಪ್ರಾಯ.

**ಭಾವವಿಲಾಸಿನೀ–** ದೂಷಣಾಂತರಮಾಹ – ಯದೇತಿ ॥ ಚಕ್ಷುರಾದೀಂದ್ರಿಯಾಣಾಮುಪರಮಾಭಾವೇ ಸ್ವಪ್ನ ಏವ ನ ಸ್ಯಾತ್ । ಸ್ವಪ್ನೇ ಹಿ ಮನೋಮಾತ್ರಸ್ಯೋದ್ಬುದ್ಧತಾ । ಇತರೇಂದ್ರಿಯಾಣಾಮುಪರಮಃ । ಉಪರಮೇ ಚ ಕರಣಂ ಏಕಜೀವಚಕ್ಷುರಾದಿಕರಣಂ ಕಸ್ಯ ಪ್ರಯೋಜನಸ್ಯ ಕಾರಣಮ್ । ಆಸಂಸಾರಂ ನಿದ್ರಾಂಗೀಕಾರೇಣ ತತ್ಕರಣಸೃಷ್ಟೇರ್ವೈಯರ್ಥ್ಯಾದಿತಿ ಭಾವಃ ॥ ೭೧೮ ॥

ಕಿಂ ಚೈಕಜೀವಸ್ವಪ್ನೋಽಯಂ ಸಾಕ್ಷಾತ್ ಸ್ವಪ್ನೋ ಭವೇದ್ ಯದಿ ।
ತದಾ ಸ್ವಪ್ನೋಪದೇಶೇನ ಸ್ವಾಪ್ನಬ್ರಹ್ಮಾಪರೋಕ್ಷಧೀಃ ।
ಸ್ವಾಪ್ನವೈಕುಂಠಯಾತ್ರಾ ಚ ಸ್ಯಾದ್ಧಿ ಸ್ವಪ್ನೇ ನ ಕಿಂ ಭವೇತ್ ॥ ೭೧೯ ॥

**ಪ್ರಬೋಧೇ ಗುರುಶಾಸ್ತ್ರಾದೇರ್ನಿವೃತ್ತ್ಯೇತಃ ಫಲಾಂತರಂ ।**
**ಕದಾಪಿ ನ ಭವೇತ್ ತಸ್ಯ ಭವಸ್ತಸ್ಮಾದ್ ಧ್ರುವೋऽಭವತ್ ॥ ೭೨೦ ॥**

**ಅರ್ಥ–** ಕಿಂಚ= ಮತ್ತು, ಯದಿ= ಒಂದು ಪಕ್ಷ, ಅಯಂ ಏಕಜೀವಸ್ವಪ್ನಃ= ಈ ಏಕಜೀವ ಸ್ವಪ್ನವು, ಸಾಕ್ಷಾತ್ ಸ್ವಪ್ನೋ ಭವೇತ್= ನಿಜವಾದ ಸ್ವಪ್ನವೇ ಆದರೆ, ಸ್ವಾಪ್ನವೈಕುಂಠ ಯಾತ್ರಾ ಚ= ಸ್ವಾಪ್ನವೈಕುಂಠ ಯಾತ್ರೆಯು ಎಂದರೆ ಸ್ವಪ್ನದಲ್ಲಿಯೇ ಮೋಕ್ಷವು, ಸ್ಯಾದ್ಧಿ= ಆಗಬೇಕಾಗುತ್ತದಷ್ಟೇ, ಸ್ವಪ್ನೇ= ಸ್ವಪ್ನದಲ್ಲಿ, ಕಿಂ ನ ಭವೇತ್= ಯಾವುದು ಉಂಟಾಗುವುದಿಲ್ಲ, ಪ್ರಬೋಧೇ= ಎಚ್ಚರಗೊಂಡರೆ, ಗುರುಶಾಸ್ತ್ರಾದೇರ್ನಿವೃತ್ತ್ಯಾ ಗುರುಗಳು ಮತ್ತು ಶಾಸ್ತ್ರವು ನಿವೃತ್ತವಾಗುವುದರಿಂದ, ಇತಃ= ಗುರುವಿನಿಂದಾಗಲೀ, ಶಾಸ್ತ್ರದಿಂದಾಗಲೀ, ಕದಾಪಿ= ಯಾವ ಸಮಯದಲ್ಲೂ ಕೂಡ, ಫಲಾಂತರಂ= ಬೇರೆಯ ಫಲವು, ನ ಭವೇತ್= ಉಂಟಾಗುವುದಿಲ್ಲ, ತಸ್ಯ= ಆ ಏಕಜೀವನಿಗೆ, ತಸ್ಮಾತ್= ಆ ಕಾರಣದಿಂದ, ಭವಃ= ಸಂಸಾರವು, ಧ್ರುವಃ ಅಭವತ್= ಶಾಶ್ವತವಾಯಿತು.

**ಅನುವಾದ-** ಮತ್ತು ಈ ಏಕಜೀವನ ಸ್ವಪ್ನವು ನಿಜವಾದ ಸ್ವಪ್ನವೇ ಆದರೆ ಸ್ವಪ್ನದಲ್ಲಿಯೇ ವೈಕುಂಠ ಯಾತ್ರೆ ಎಂದರೆ ಮೋಕ್ಷಪ್ರಾಪ್ತಿಯೂ ಆಗಲಿ. ಏಕೆಂದರೆ ಸ್ವಪ್ನದಲ್ಲಿ ಏನು ಆಗುವುದಿಲ್ಲ? ಆ ಏಕಜೀವನು ಸ್ವಪ್ನದಿಂದ ಎಚ್ಚೆತ್ತರೆ ಗುರುವು ಮತ್ತು ಶಾಸ್ತ್ರವು ನಿವೃತ್ತಿಯನ್ನು ಹೊಂದುವುದರಿಂದ ಗುರು ಮತ್ತು ಶಾಸ್ತ್ರಗಳಿಂದ ಯಾವಾಗಲಾದರೂ ಬೇರೆ ಯಾವ ಪ್ರಯೋಜನವೂ ಇಲ್ಲದಿರುವುದರಿಂದ ಆ ಏಕಜೀವನಿಗೆ ಸಂಸಾರವು ಶಾಶ್ವತವಾಗುತ್ತದೆ.

**ಭಾವವಿಲಾಸಿನೀ–** ಪ್ರಬಲಂ ದೂಷಣಮಾಹ – **ಕಿಂಚೇತಿ** ॥ ಸ್ವಪ್ನೇ ಕಿಂ ನ ಭವೇತ್ ಸರ್ವಮಪಿ। ಸಂಭಾವಿತಮಿತಿ ಭಾವಃ । ಇದಂ ಚ ಸ್ವಪ್ನೋಪದೇಶೇ ಜ್ಞಾನಮೋಕ್ಷಾದಿಕಂ ತವಾಪಿ ನ ಫಲಮ್ । ಸ್ವಾಪ್ನೋಪದೇಶೇನ ಜಾಗ್ರತಿ ಜ್ಞಾನಾದಿಕಂ ಚ ನ ಸಂಭಾವಿತಮ್ । ಸ್ವಪ್ನಭೋಜನೇನ ಜಾಗ್ರತಿ ತೃಪ್ತೇರದರ್ಶನಾತ್ । ಸ್ವಾಪ್ನಯಜ್ಞೇನ ಜಾಗ್ರತಿ ಸ್ವರ್ಗಾದ್ಯದರ್ಶನಾಚ್ಚ ॥ ಇತಃ ಸ್ವಾಪ್ನಬ್ರಹ್ಮಜ್ಞಾನಮೋಕ್ಷಾದಿಭ್ಯಃ । ತಸ್ಯ ಏಕಜೀವಸ್ಯ । ಭವಃಸಂಸಾರಃ । ತಸ್ಮಾತ್ ಜಾಗ್ರಚ್ಛ್ರವಣಾದೇರಭಾವಾತ್ ಈದೃಶೈಕಜೀವಸ್ಯ ಕದಾಪಿ ಮೋಕ್ಷೋ ನ ಭವೇದಿತ್ಯರ್ಥಃ । ಉಪಲಕ್ಷಣಂ ಚೈತತ್ । ವೈಧರ್ಮ್ಯಾಚ್ಚ ನ ಸ್ವಪ್ನಾದಿವದಿತಿ ಬ್ರಹ್ಮಸೂತ್ರವಿರುದ್ಧತ್ವಾಚ್ಚ ನಾಯಂ ಪಕ್ಷಃ ಶೋಭತ ಇತ್ಯಪಿ ದ್ರಷ್ಟವ್ಯಮ್ ॥ ೭೧೯, ೭೨೦ ॥

**ವಿವರಣೆ–** ಕಲ್ಪಕ ಏಕಜೀವನು ಸ್ವಪ್ನಾವಸ್ಥೆಯಲ್ಲಿದ್ದಾನೆ ಎಂಬ ಪಕ್ಷಕ್ಕೆ ಪ್ರಬಲವಾದ ದೋಷವನ್ನು ಇಲ್ಲಿ ಹೇಳುತ್ತಾರೆ. ಸ್ವಪ್ನದಲ್ಲಿ ಏನು ಸಂಭವಿಸುವುದಿಲ್ಲ? ಎಲ್ಲವೂ ಸಂಭವಿಸುತ್ತದೆ. ಆದ್ದರಿಂದ ಸ್ವಪ್ನೋಪದೇಶದಿಂದ ಮೋಕ್ಷವಾಗಲಿ ಎಂದು ಆಪತ್ತಿ. ಇದನ್ನು ನೀನು ಅಂಗೀಕಾರ ಮಾಡಲು ಬರುವುದಿಲ್ಲ. ಏಕೆಂದರೆ ಸ್ವಪ್ನೋಪದೇಶದಿಂದ

ಜಾಗ್ರದವಸ್ಥೆಯಲ್ಲಿ ಜ್ಞಾನವೂ ಯಾರಿಗೂ ಉಂಟಾಗುವುದಿಲ್ಲ. ಸ್ವಪ್ನಭೋಜನದಿಂದ ಜಾಗ್ರದವಸ್ಥೆಯಲ್ಲಿ ತೃಪ್ತಿ ಉಂಟಾಗುವುದಿಲ್ಲ. ಸ್ವಪ್ನ ಯಜ್ಞದಿಂದ ಜಾಗ್ರದವಸ್ಥೆಯಲ್ಲಿ ಸ್ವರ್ಗವು ಉಂಟಾಗುವುದಿಲ್ಲ. ಆದ್ದರಿಂದ ಇಷ್ಟಾಪತ್ತಿಯನ್ನು ಹೇಳಲು ಬರುವುದಿಲ್ಲ. ಏಕಜೀವನು ಮಲಗಿ ಸ್ವಪ್ನವನ್ನು ನೋಡುವವರೆಗೆ ಗುರು ಮತ್ತು ಶಾಸ್ತ್ರವು ಇರುತ್ತವೆ. ಮಲಗಿರುವವನಿಗಂತೂ ಉಪದೇಶವು ಸಾಧ್ಯವಿಲ್ಲ. ಅವನು ಜಾಗ್ರದವಸ್ಥೆಗೆ ಬಂದರೆ ಆಗ ಅವನ ಸ್ವಪ್ನವು ನಿವೃತ್ತವಾಗುವುದರಿಂದ ಗುರುವೂ ಮತ್ತು ಶಾಸ್ತ್ರವೂ ನಿವೃತ್ತವಾಗುತ್ತವೆ. ಆಗಲೂ ಉಪದೇಶದ ಪ್ರಸಕ್ತಿಯಿಲ್ಲ. ಗುರು ಮತ್ತು ಶಾಸ್ತ್ರಗಳಿಗೆ ಮೋಕ್ಷವನ್ನು ಬಿಟ್ಟು ಬೇರೆ ಫಲವಿಲ್ಲ. ಆದ್ದರಿಂದ ಅವನ ಸ್ವಪ್ನಾವಸ್ಥೆಯಲ್ಲಿರುವ ಗುರು ಮತ್ತು ಶಾಸ್ತ್ರಗಳು ವ್ಯರ್ಥವಾಗುತ್ತವೆ. ಜೊತೆಗೆ ಬ್ರಹ್ಮಸೂತ್ರವು ವೈಧರ್ಮ್ಯಾಚ್ಚ ನ ಸ್ವಪ್ನಾದಿವತ್ ಎಂಬಲ್ಲಿ ಜಗತ್ತಿಗೆ ಸ್ವಪ್ನವೈಧರ್ಮ್ಯವನ್ನು ಹೇಳಿರುವುದರಿಂದ ಜಗತ್ತಿಗೆ ಸ್ವಪ್ನಸಾಧರ್ಮ್ಯವನ್ನು ಹೇಳುವುದು ಬ್ರಹ್ಮಸೂತ್ರಗಳಿಗೂ ವಿರುದ್ಧವಾಗುತ್ತವೆ ಎಂದು ಅಭಿಪ್ರಾಯ.

ಜಾಗ್ರದ್ದಶೈವ ಸಾ ಸ್ವಪ್ನಕಥಾ ಯದ್ಯುಪಚಾರತಃ ।
ದೇಹೇದೇಹೇ ತದಾ ವ್ಯಾಪ್ತಬ್ರಹ್ಮಚೈತನ್ಯಮಸ್ತಿ ತೇ ॥ ೭೨೧ ॥

ದೇಹೋಪಾದಾನಮಜ್ಞಾನಂ ಚಾಸ್ತಿ ದೇಹ್ಯುಚಿತಕ್ರಿಯಾಃ ।
ಸಂತಿ ನಿರ್ಜೀವತಾ ತೇಷಾಂ ದೇಹಾನಾಂ ಕೇನ ಹೇತುನಾ ॥ ೭೨೨ ॥

**ಅರ್ಥ–** ಯದಿ= ಒಂದು ಪಕ್ಷ, ಸಾ= ಆ ಏಕಜೀವನ ಅವಸ್ಥೆಯು, ಜಾಗ್ರದ್ದಶೈವ= ಜಾಗ್ರದವಸ್ಥೆಯೇ, ಸ್ವಪ್ನಕಥಾ= ಸ್ವಪ್ನವೆಂದು ಹೇಳುವುದು, ಉಪಚಾರತಃ= ಕೇವಲ ಉಪಚಾರದಿಂದ, ಎಂದು ಹೇಳಿದರೆ, ತದಾ= ಆಗ, ತೇ= ನಿನ್ನ ರೀತಿಯಿಂದಲೂ, ದೇಹೇದೇಹೇ= ಪ್ರತಿಯೊಂದು ದೇಹದಲ್ಲಿಯೂ, ವ್ಯಾಪ್ತಬ್ರಹ್ಮಚೈತನ್ಯಂ ಅಸ್ತಿ= ವ್ಯಾಪ್ತವಾದ ಬ್ರಹ್ಮಚೈತನ್ಯವು ಇದ್ದೇ ಇದೆ, ದೇಹೋಪಾದಾನಮಜ್ಞಾನಂ ಚ= ದೇಹಕ್ಕೆ ಉಪಾದಾನವಾದ ಅಜ್ಞಾನವೂ, ಅಸ್ತಿ= ಇದ್ದೇ ಇದೆ, ದೇಹ್ಯುಚಿತಕ್ರಿಯಾಃ= ದೇಹಿಗೆ ಯೋಗ್ಯವಾದ ಕ್ರಿಯೆಗಳೂ, ಸಂತಿ= ಇವೆ, ತೇಷಾಂ ದೇಹಾನಾಂ= ಆ ದೇಹಗಳಿಗೆ, ನಿರ್ಜೀವತಾ= ಜೀವರಾಹಿತ್ಯವು, ಕೇನ ಹೇತುನಾ= ಯಾವ ಹೇತುವಿನಿಂದ ಸಿದ್ಧವಾಗುತ್ತದೆ.

**ಅನುವಾದ–** ಆ ಏಕಜೀವನ ಅವಸ್ಥೆಯು ನಿಜವಾಗಿ ಜಾಗ್ರದವಸ್ಥೆಯೇ. ಸ್ವಪ್ನ ಎಂದು ಹೇಳುವುದು ಕೇವಲ ಉಪಚಾರದಿಂದ ಎಂದು ಒಂದು ಪಕ್ಷ ಹೇಳಿದರೆ, ಆಗ ಪ್ರತಿಯೊಂದು ದೇಹದಲ್ಲಿಯೂ ನಿನ್ನ ರೀತಿಯಿಂದಲೂ ವ್ಯಾಪ್ತವಾದ ಬ್ರಹ್ಮಚೈತನ್ಯವು ಇದೆ. ದೇಹಕ್ಕೆ ಉಪಾದಾನಕಾರಣವಾದ ಅಜ್ಞಾನವೂ ಇದೆ. ಆ ದೇಹದಲ್ಲಿ ದೇಹಿಗೆ ಉಚಿತವಾದ ಕ್ರಿಯೆಗಳೂ ನಡೆಯುತ್ತವೆ. ಹೀಗಿರುವಾಗ ಆ ದೇಹಗಳನ್ನು ಜೀವರಹಿತವೆಂದು ಹೇಳುವುದಕ್ಕೆ ಏನು ಕಾರಣ?

**ಭಾವವಿಲಾಸಿನೀ–** ಸ್ವಾಪ್ನಪಕ್ಷಂ ದೂಷಯಿತ್ವಾ ಜಾಗ್ರತ್ಪಕ್ಷಂ ಪುನರಪಿ ಪ್ರಬಲದೋಷಾಂತರೇಣ ದೂಷಯತಿ – **ಜಾಗ್ರದ್ದಶೇತಿ** ॥ ಸಾ ಏಕಜೀವಾವಸ್ಥಾ । ತದಾ ಜಾಗ್ರದ್ದಶಾತ್ವೇ । ತೇ ಮತೇ ದೇಹ್ಯುಚಿತಕ್ರಿಯಾಃ ದೇಹಿನೋ ಜೀವಸ್ಯೋಚಿತಕ್ರಿಯಾಃ ಅಭಿಲಾಪಾದಯಃ । ಕೇನ ಹೇತುನಾ ನ ಕೇನಾಪಿ । ಏಕಜೀವದೇಹವತ್ ಜಾಗ್ರದವಸ್ಥಾದೇಹತ್ವಸ್ಯ ಬ್ರಹ್ಮಚೈತನ್ಯಪ್ರವೇಶಸ್ಯಾಭಿಲಾಪಾದಿಜೈವಧರ್ಮಸ್ಯ ಚೋಭಯತ್ರ ಸಾಮ್ಯಾತ್ ಉಭಯೋರಪಿ ಸಜೀವತ್ವಮೇವ ಭವೇತ್ । ಏವಮಪಿ ನಿರ್ಜೀವತ್ವೇ ಕ್ವಾಪಿ ಜೀವೋ ನ ಸ್ಯಾದಿತಿ ಭಾವಃ ॥ ೭೨೧-೭೨೨ ॥

**ವಿವರಣೆ–** ಸ್ವಪ್ನ ಪಕ್ಷಕ್ಕೆ ದೋಷವನ್ನು ಹೇಳಿ ಪುನಃ ಜಾಗ್ರತ್ ಪಕ್ಷದಲ್ಲಿ ದೋಷವನ್ನು ಹೇಳುತ್ತಾರೆ. ಹೇಗೆ ಕಲ್ಪಕನಾದ ಏಕಜೀವನ ಶರೀರದಲ್ಲಿ ಬ್ರಹ್ಮಚೈತನ್ಯಪ್ರವೇಶವೂ ದೇಹೋಪಾದಾನವಾದ ಅಜ್ಞಾನವೂ, ದೇಹಿಗೆ ಉಚಿತವಾದ ಕ್ರಿಯೆಗಳೂ ಇವೆಯೋ, ಅದರಂತೆ ಕಣ್ಣಿಗೆ ಕಾಣುವ ಎಲ್ಲ ದೇಹಗಳಲ್ಲಿಯೂ ಬ್ರಹ್ಮಚೈತನ್ಯ ಪ್ರವೇಶವೂ ಆ ದೇಹಕ್ಕೆ ಉಪಾದಾನವಾದ ಅಜ್ಞಾನವೂ ಮತ್ತು ದೇಹಿಗೆ ಯೋಗ್ಯವಾದ ಕ್ರಿಯೆಗಳೂ ಇವೆ. ಹೀಗಿರುವಾಗ ಏಕಜೀವ ಶರೀರದಲ್ಲಿ ಜೀವವನ್ನು ಒಪ್ಪಿದಂತೆ ಇಲ್ಲೂ ಎಲ್ಲಾ ಕಡೆಗಳಲ್ಲಿಯೂ ಜೀವನನ್ನು ಒಪ್ಪು. ಇಲ್ಲದಿದ್ದರೆ ಏಕಜೀವ ಶರೀರದಲ್ಲೂ ಸಹ ಜೀವವನ್ನು ಒಪ್ಪಬೇಡ ಎಂದು ಅಭಿಪ್ರಾಯ.

ಯದ್ಯಸ್ಯ ಮಾಯಾಸೃಷ್ಟಿಃ ಸಾ ದ್ರಷ್ಟಾ ಕೋಽಸ್ಯಾಸ್ತದಾ ವದ ।
ಸ್ವಯಂ ಚೇನ್ನಾಸ್ಯ ಮಾಯಾಭೂನ್ನಾಪರೋಽಸ್ತ್ಯೇಕಜೀವಿನಃ ॥ ೭೨೩ ॥

**ಅರ್ಥ–** ಯದಿ= ಒಂದು ಪಕ್ಷ, ಸಾ= ಆ ಜಗತ್ಸೃಷ್ಟಿಯು, ಅಸ್ಯ= ಈ ಕಲ್ಪಕನಾದ ಜೀವನ, ಮಾಯಾಸೃಷ್ಟಿಃ= ಮಾಯಾಸೃಷ್ಟಿ ಎಂದು ಹೇಳಿದರೆ, ತದಾ= ಆಗ, ಅಸ್ಯಾಃ= ಈ ಸೃಷ್ಟಿಯನ್ನು, ದ್ರಷ್ಟಾ= ನೋಡುವವನು, ಕಃ= ಯಾವನು ಎಂದು, ವದ= ಹೇಳು, ಸ್ವಯಂ ಚೇತ್= ತಾನೇ ಎಂದು ಹೇಳಿದರೆ, ಅಸ್ಯ= ಅವನಿಗೆ, ಮಾಯಾ ನ ಭೂತ್= ಅದು ಮಾಯೆಯಾಗಲಿಲ್ಲ, ಏಕಜೀವಿನಃ= ಏಕಜೀವವನ್ನು ಅಂಗೀಕರಿಸುವ ನಿನಗೆ, ಅಪರಃ= ಇನ್ನೊಬ್ಬ ಜೀವನು, ನ= ಇಲ್ಲ.

**ಅನುವಾದ–** ಈ ಜಗತ್ತು ಆ ಕಲ್ಪಕ ಜೀವನ ಮಾಯಾಸೃಷ್ಟಿ ಎಂದು ಹೇಳಿದರೆ ಈ ಜಗತ್ತಿನ ಸೃಷ್ಟಿಯನ್ನು ನೋಡುವವನು ಯಾರು ಎಂದು ಹೇಳು. ಕಲ್ಪಕ ಜೀವನೇ ನೋಡುತ್ತಾನೆ ಎಂದು ಹೇಳಿದರೆ ಅದು ಅವನಿಗೆ ಮಾಯೆಯಲ್ಲ. ಏಕಜೀವವಾದವನ್ನು ಅಂಗೀಕರಿಸುವ ನಿನಗೆ ಇನ್ನೊಬ್ಬ ಜೀವನಿಲ್ಲ.

**ಭಾವವಿಲಾಸಿನೀ–** ಪಕ್ಷಾಂತರಮಾಶಂಕತೇ – **ಯದ್ಯಸ್ಯೇತಿ** ॥ ಅಸ್ಯ ಏಕಜೀವಸ್ಯ । ಸಾ ಜೀವಾಂತರಸೃಷ್ಟಿಃ। ಮಾಯಿಕಕರಿತುರಗಾದೀನಾಮಿವ ನಿರ್ಜೀವತ್ವಂ ಸಂಭವತೀತ್ಯಾಶಯಃ । ದೂಷಯತಿ – **ದ್ರಷ್ಟೇತಿ** ॥ ಅಸ್ಯಾಃ ಮಾಯಿಕಸೃಷ್ಟೇಃ । ಸ್ವಯಂ ಏಕಜೀವ ಏವ । ದ್ರಷ್ಟಾ

ಚೇದಿತಿ ಸಂಬಂಧಃ । ಅಸ್ಯ ಏಕಜೀವಸ್ಯ। ಮಾಯಾವೀ ಸ್ವಮಾಯಾಕಲ್ಪಿತಸೃಷ್ಟಿಂ ಸ್ವಯಂ ನ ಪಶ್ಯತಿ । ಸ್ವಾಶ್ರಯಾವ್ಯಾಮೋಹಿನೀಮಾಯೇತ್ಯಂಗೀಕಾರಾತ್ । ಕಿಂತು ದ್ರಷ್ಟೃಪುರುಷಾಂತರ-ನಯನಾನಿ ಮಂತ್ರೌಷಧಾದಿನಾऽऽಚ್ಛಾದ್ಯ ತೇಷಾಂ ದರ್ಶಯತಿ । ಅತ ಏಕ ಜೀವಸ್ಯೈವ ದ್ರಷ್ಟೃತ್ವೇ ತನ್ಮಾಯಾತ್ವಂ ನ ಘಟತ ಇತಿ ಭಾವಃ । ಅನ್ಯಶ್ಚ ದ್ರಷ್ಟಾ ನಾಸ್ತೀತ್ಯಾಹ – ನಾಪರ ಇತಿ ॥ ೭೨೩ ॥

**ವಿವರಣೆ–** ಏಕಜೀವವಾದಕ್ಕೆ ಇಲ್ಲಿ ಇನ್ನೊಂದು ದೋಷವನ್ನು ಹೇಳುತ್ತಾರೆ. ಮಾಯಾ ಸೃಷ್ಟಿಯು ಯಾವಾಗಲೂ ಮಾಯಾವಿಯ ಕಣ್ಣಿಗೆ ಕಾಣಿಸುವುದಿಲ್ಲ. ಪಕ್ಕದಲ್ಲಿದ್ದ ಇನ್ನೊಬ್ಬನ ಕಣ್ಣಿಗೆ ಮಾತ್ರ ಕಾಣಿಸುತ್ತದೆ. ಇದು ಅನುಭವ ಸಿದ್ಧವಾದ ಸಂಗತಿ. ಜಗತ್ತನ್ನು ಏಕಜೀವನ ಮಾಯಾಸೃಷ್ಟಿ ಎಂದು ಕರೆದರೆ ಇದನ್ನು ನೋಡುವವರು ಯಾರು ಎಂಬ ಪ್ರಶ್ನೆ ಇದೆ. ಆ ಏಕಜೀವನಂತೂ ಆಗಲು ಸಾಧ್ಯವಿಲ್ಲ. ಏಕೆಂದರೆ ಅವನಿಗೆ ಸೃಷ್ಟಿಯು ತೋರಿದರೆ ಅದು ಮಾಯಾಸೃಷ್ಟಿಯಲ್ಲ ಎಂದಾಗುತ್ತದೆ. ಅವನು ಕೇವಲ ಮಾಯಾವಿಯಷ್ಟೇ. ಪಕ್ಕದಲ್ಲಿದ್ದ ಇನ್ನೊಬ್ಬನಿಗೆ ಕಾಣಬೇಕು, ಆದರೆ ನೀನು ಇನ್ನೊಬ್ಬ ಜೀವನನ್ನು ಅಂಗೀಕರಿಸದಿರುವುದರಿಂದ ಅದು ಅವನಿಗೂ ಕಾಣುವುದಿಲ್ಲ. ಆದ್ದರಿಂದ ಈ ಜಗತ್ತಿನ ಜ್ಞಾನವೇ ಯಾರಿಗೂ ಬರಲಾರದಂತಹ ಪರಿಸ್ಥಿತಿ ಬರುತ್ತದೆ ಎಂಬ ಪ್ರಬಲ ದೋಷವನ್ನು ಇಲ್ಲಿ ಹೇಳುತ್ತಾರೆ.

**ರೂಪಮಾತ್ರಂ ತದಾಪಿ ಸ್ಯಾತ್ ಕಥಂ ಶಾಸ್ತ್ರನಿರೂಪಣಂ ।**
**ಮಾಯಾಕೃತಿಮವಿಪ್ರೇಷು ವಾಗ್ವೃತ್ತಿರ್ನ ಹಿ ಮಾಯಯಾ ॥ ೭೨೪ ॥**

**ಅರ್ಥ–** ತದಾಪಿ= ಮಾಯಾಸೃಷ್ಟಿ ಎಂದು ಅಂಗೀಕರಿಸಿದರೂ ಸಹ, ರೂಪಮಾತ್ರಂ= ಆಗಲೂ ಕೇವಲ ಆಕೃತಿಯು, ಸ್ಯಾತ್= ಇರುತ್ತದೆ, ಶಾಸ್ತ್ರ ನಿರೂಪಣಂ= ಶಾಸ್ತ್ರ ನಿರೂಪಣೆಯು, ಕಥಂ= ಹೇಗೆ ಉಂಟಾಗುತ್ತದೆ, ಮಾಯಾಕೃತಿಮವಿಪ್ರೇಷು= ಮಾಯೆಯಿಂದ ಸೃಷ್ಟಿ ಮಾಡಲ್ಪಟ್ಟ ಬ್ರಾಹ್ಮಣರಲ್ಲಿ, ಮಾಯಯಾ= ಮಾಯೆಯಿಂದ, ವಾಗ್ವೃತ್ತಿಃ= ವಾಗಾದಿ ವ್ಯಾಪಾರವು, ನ ಹಿ= ಇಲ್ಲವಷ್ಟೇ.

**ಅನುವಾದ–** ಮಾಯಾಸೃಷ್ಟಿ ಎಂದು ಅಂಗೀಕಾರ ಮಾಡಿದರೂ ಸಹ ಆಗ ಮಾಯೆಯಿಂದ ಕೇವಲ ಒಂದು ಆಕಾರವು ಸಿದ್ಧವಾಗುತ್ತದೆ. ಶಾಸ್ತ್ರೋಪದೇಶಾದಿ ವ್ಯಾಪಾರವು ಸಿದ್ಧವಾಗುವುದಿಲ್ಲ. ಏಕೆಂದರೆ ಮಾಯೆಯಿಂದ ಸೃಷ್ಟಿಯಾದ ಬ್ರಾಹ್ಮಣಾದಿ ವಸ್ತುಗಳಲ್ಲಿ ಮಾಯೆಯಿಂದ ವಾಗಾದಿವ್ಯಾಪಾರವು ಉಂಟಾಗುವುದು ಎಂದೂ ಕಂಡುಬರುವುದಿಲ್ಲ.

**ಭಾವವಿಲಾಸಿನೀ–** ದೂಷಣಾಂತರಂ ಚಾಹ – **ರೂಪಮಾತ್ರಮಿತಿ** ॥ ತದಾಪಿ ಮಾಯಾಸೃಷ್ಟಿತ್ವೇऽಪಿ ಉಪಲಕ್ಷಣಂ ಚೈತತ್ । ಏಕಜೀವವಾದೋ ಹಿ ವಿವರಣಕಾರಸ್ಯೈವ ಪಕ್ಷಃ । ತಸ್ಯಾವಿದ್ಯಾತಿ-ರಿಕ್ತಾಮಾಯೈವ ನಾಸ್ತಿ ।ಅತಃಶಂಕೈವೇಯಂ ನ ಘಟತ ಇತ್ಯಪಿ ದ್ರಷ್ಟವ್ಯಮ್ ॥ ೭೨೪ ॥

**ವಿವರಣೆ–** ಮಾಯಾ ಸೃಷ್ಟಿಯನ್ನು ಅಂಗೀಕಾರ ಮಾಡಿದರೂ ಶಾಸ್ತ್ರೋಪದೇಶಾದಿ ವ್ಯವಹಾರವನ್ನು ಕೂಡಿಸಲು ಬರುವುದಿಲ್ಲವೆಂಬ ದೋಷವನ್ನು ಇಲ್ಲಿ ಹೇಳುತ್ತಾರೆ. ಅದೂ ಅಲ್ಲದೇ ಏಕಜೀವವಾದವು ವಿವರಣಕಾರನ ಮತ. ವಿವರಣಕಾರನ ಮತದಲ್ಲಿ ಕೇವಲ ಅಜ್ಞಾನ ಮಾತ್ರ ಇದೆಯೇ ಹೊರತಾಗಿ ಮಾಯೆಯು ಇಲ್ಲ. ಬಹುಜೀವವಾದದಲ್ಲಿ ಮಾತ್ರ ಮಾಯೆ, ಅಜ್ಞಾನ ಎಂಬ ಎರಡು ಪ್ರಭೇದಗಳನ್ನು ಅಂಗೀಕಾರಿಸುತ್ತಾರೆ. ಆದ್ದರಿಂದ ವಿವರಣಕಾರನ ಮತವನ್ನು ಅಂಗೀಕರಿಸಿ ಏಕಜೀವವಾದವನ್ನು ಹೇಳುವಾಗ ಮಾಯಾಸೃಷ್ಟಿ ಎಂಬ ಕಲ್ಪನೆಯೇ ಅಸಂಗತವಾದುದು ಎಂದು ಅಭಿಪ್ರಾಯ.

**ಅಥ ಸ್ವಯಂ ಬ್ರಹ್ಮಣೋಽಂಶಃ ಸ್ವಾಂಶಾಃ ಸರ್ವೇಽನ್ಯದೇಹಿನಃ ।**
**ಇತಿ ಚೇದೇಕಜೀವತ್ವಂ ಕಿಂ ಸ ಯೋಗಪ್ರಭಾವವಾನ್ ।**
**ಪರಿಚ್ಛಿನ್ನೈಕದೇಹಸ್ಥಃ ಕಥಂ ದೇಹಾಂತರಂ ವಿಶೇತ್ ॥ ೭೨೫ ॥**

**ಅರ್ಥ–** ಅಥ= ಇನ್ನು, ಸ್ವಯಂ= ಕಲ್ಪಕನಾದ ಜೀವನು ತಾನೇ, ಬ್ರಹ್ಮಣ ಅಂಶಃ= ಬ್ರಹ್ಮನ ಅಂಶ, ಅನ್ಯದೇಹಿನಃ ಸರ್ವೇ= ಅನ್ಯದೇಹವುಳ್ಳವರೆಲ್ಲರೂ, ಸ್ವಾಂಶಾಃ= ತನ್ನ ಅಂಶರು, ಇತಿ= ಹೀಗೆ, ಏಕಜೀವತ್ವಂ ಚೇತ್= ಏಕಜೀವವಾದವು ಇರುವುದಾದರೆ, ಸಃ= ಆ ಕಲ್ಪಕನಾದ ಜೀವನು, ಯೋಗಪ್ರಭಾವವಾನ್ ಕಿಂ= ಯೋಗಪ್ರಭಾವವನ್ನು ಹೊಂದಿರುತ್ತಾನೆಯೇ, ಪರಿಚ್ಛಿನ್ನೈಕದೇಹಸ್ಥಃ= ಪರಿಚ್ಛಿನ್ನವಾದ ಒಂದು ದೇಹದಲ್ಲಿ ಇರುವವನು, ದೇಹಾಂತರಂ= ಇನ್ನೊಂದು ದೇಹವನ್ನು, ಕಥಂ ವಿಶೇತ್= ಹೇಗೆ ಪ್ರವೇಶಿಸುತ್ತಾನೆ.

**ಅನುವಾದ-** ಅಥವಾ ಕಲ್ಪಕನಾದ ಜೀವನು ತಾನು ಸ್ವಯಂ ಬ್ರಹ್ಮನ ಅಂಶ, ಉಳಿದ ಜೀವರೆಲ್ಲರೂ ತನ್ನ ಅಂಶರು ಎಂಬುದು ಏಕಜೀವವಾದವಾದರೆ ಆ ಕಲ್ಪಕನಾದ ಏಕಜೀವನಿಗೆ ಯೋಗ ಪ್ರಭಾವವಿರುತ್ತದೆಯೇ? ಪರಿಚ್ಛಿನ್ನವಾದ ಒಂದು ದೇಹದಲ್ಲಿ ಇರುವವನು ಇನ್ನೊಂದು ದೇಹವನ್ನು ಹೇಗೆ ಪ್ರವೇಶಿಸುತ್ತಾನೆ?

**ಭಾವವಿಲಾಸಿನೀ–** ಏಕ ಏವ ಜೀವಸ್ತಸ್ಯ ಚ ಸ್ವಪ್ನಃಸರ್ವಂ ಜಗನ್ನಿರ್ಜೀವಂ ಚೇತ್ಯೇವ ಮಾಯಿನಾಂ ಸಿದ್ಧಾಂತಃ । ಗ್ರಂಥಕಾರಸ್ತು ಸಂಭಾವಿತಂ ಪಕ್ಷಾಂತರಮುತ್ಥಾಪಯತಿ – **ಅಥೇತಿ ॥** ಸ್ವಯಮೇಕಜೀವಃ। ಸ್ವಾಂಶಾಃ ಏಕಜೀವಾಂಶಾ ಇತಿ ಏಕಜೀವತ್ವಂ ಚೇದಿತಿ ಸಂಬಂಧಃ । ದೂಷಯತಿ – **ಕಿಮಿತಿ ॥** ಸಃ ಏಕಜೀವಃ । ಏಕದೇಹಾವಚ್ಛಿನ್ನಸ್ಯ ಜೀವಸ್ಯ ಪುನರನಂತದೇಹೇಷು ಪ್ರವಿಶ್ಯ ಜೀವಭಾವೋ ಪರೋಕ್ಷಜ್ಞಾನೋತ್ತರಕಾಲಂ ಪ್ರಾರಬ್ಧಕರ್ಮಭೋಗಾಯ ಕಾಯವ್ಯೂಹಂ ಸಂಪಾದಯತೋ ಯೋಗಿನ ಏವ ಘಟತೇ ನಾನ್ಯಸ್ಯ । ಅಯಂ ಚಾನಾದಿಕಾಲ-ಮಾರಭ್ಯ ಜನನಮರಣನರಕಾದ್ಯನೇಕಕ್ಲೇಶಾನನುಭವನ್ನ ಯೋಗೀ ನಾಪ್ಯಪರೋಕ್ಷಜ್ಞಾನೀ । ಅತೋಽಸ್ಯಾನನಂತಾನಂತಜೀವದೇಹೇಷು ಕಥಂಪ್ರವೇಶಃ । ವ್ಯಾಪ್ತಸ್ಯ ತು ಬ್ರಹ್ಮಣಃ ಕಥಂಚಿದ್ಘಟತೇ । ಅತ ಈದೃಶೋಽಪ್ಯೇಕ ಜೀವವಾದೋ ನ ಶೋಭತ ಇತಿ ಭಾವಃ । ಏತಮೇವ ವಿಶದಯತಿ – **ಪರಿಚ್ಛಿನ್ನೇತಿ** ॥ ೭೨೫ ॥

**ವಿವರಣೆ–** ಕಲ್ಪಕನಾದ ಜೀವನು ಒಬ್ಬನೇ ಅವನ ಸ್ವಪ್ನವೇ ಈ ಜಗತ್ತು ಎಂಬುದು ಅದ್ವೈತಿಗಳ ವಾದ. ಇಲ್ಲಿ ಶಂಕಿಸಿರುವ ಏಕಜೀವವಾದವು ಅದ್ವೈತಿಗಳಿಗೆ ಸಮ್ಮತವಲ್ಲ. ಆದರೂ ವಿಚಾರ ಮಾಡುವ ದೃಷ್ಟಿಯಿಂದ ಅದನ್ನೂ ಅನುವಾದ ಮಾಡಿ ನಿರಾಕರಿಸುತ್ತಾರೆ. ಯೋಗಪ್ರಭಾವವುಳ್ಳವರು ಅನೇಕ ದೇಹಗಳಲ್ಲಿ ಪ್ರವೇಶಿಸುತ್ತಾರೆ. ಆ ಯೋಗ ಪ್ರಭಾವವಾದರೂ ಅಪರೋಕ್ಷಜ್ಞಾನವಾದ ಮೇಲೆ ಬರುತ್ತದೆ. ಅಂತಹ ಯೋಗಿಗಳು ಪ್ರಾರಬ್ಧಕರ್ಮಗಳನ್ನು ಬೇಗ ಮುಗಿಸುವುದಕ್ಕಾಗಿ ಅನೇಕ ದೇಹಗಳನ್ನು ಸ್ವೀಕರಿಸುತ್ತಾರೆ. ಆದರೆ ಅನಾದಿ ಕಾಲದಿಂದಲೂ ಜನನ ಮರಣಾದಿ ಕ್ಲೇಶಗಳನ್ನು ಅನುಭವಿಸುತ್ತಿರುವ ಈ ಜೀವನು ಯೋಗಿಯೂ ಅಲ್ಲ, ಅಪರೋಕ್ಷ ಜ್ಞಾನಿಯೂ ಅಲ್ಲವಷ್ಟೇ. ಅಂತಹವನು ಅನಂತ ಜೀವರಲ್ಲಿ ಪ್ರವೇಶಿಸುವುದು ಹೇಗೆ? ವ್ಯಾಪ್ತನಾದ ಬ್ರಹ್ಮನು ಅನೇಕ ದೇಹದಲ್ಲಿ ಪ್ರವೇಶಿಸಬಹುದು. ಆದರೆ ಪರಿಮಿತವಾದ ಒಳಗಿರುವ ಜೀವನು ಹೇಗೆ ಇನ್ನೊಂದು ಜೀವವನ್ನು ಪ್ರವೇಶಿಸಲು ಸಾಧ್ಯ ಎಂದು ಅಭಿಪ್ರಾಯ.

**ದೇಹೇದೇಹೇ ಪೃಥಗ್ಭೋಗಾನ್ ಭುಂಜಂತೋಽನಾದಿತೋ ಯದಿ ।**
**ಸಂತ್ಯನಂತಾಶ್ಚೇತನಾಂಶಾ ಬಹುಜೀವತ್ವಮೇವ ತತ್ ॥ ೭೨೬ ॥**

**ಅರ್ಥ–** ದೇಹೇದೇಹೇ= ಪ್ರತಿಯೊಂದು ದೇಹದಲ್ಲಿಯೂ, ಪೃಥಗ್ಭೋಗಾನ್ ಭುಂಜಂತಃ= ಬೇರೆ ಬೇರೆ ಭೋಗಗಳನ್ನು ಅನುಭವಿಸುವ, ಅನಂತಾಃ ಚೇತನಾಂಶಾಃ= ಅನಂತವಾದ ಚೇತನಾಂಶಗಳು, ಅನಾದಿತಃ= ಅನಾದಿಕಾಲದಿಂದಲೂ, ಯದಿ= ಒಂದು ಪಕ್ಷ, ಸಂತಿ= ಇರುವುದಾದರೆ, ತತ್= ಅದು, ಬಹುಜೀವತ್ವಮೇವ= ಬಹುಜೀವವಾದವೇ ಆಗುತ್ತದೆ.

**ಅನುವಾದ–** ಪ್ರತಿಯೊಂದು ದೇಹದಲ್ಲಿಯೂ ಭಿನ್ನ ಭಿನ್ನವಾದ ಭೋಗಗಳನ್ನು ಅನುಭವಿಸುವ ಅನಂತ ಚೇತನಾಂಶಗಳು ಅನಾದಿಕಾಲದಿಂದಲೂ ಇವೆ ಎಂದು ಅಂಗೀಕರಿಸಿದರೆ ಅದು ಬಹುಜೀವವಾದವೇ ಆಗುತ್ತದೆ.

**ಭಾವವಿಲಾಸಿನೀ–** ಏತತ್ ಏತಾದೃಶಮತಮ್ ॥ ೭೨೬ ॥

**ವಿವರಣೆ–** ಏಕಜೀವವಾದವನ್ನು ಅವಲಂಬಿಸಿ ಹೀಗೆ ಅಂಗೀಕರಿಸುವುದು ಯುಕ್ತವಲ್ಲ ಎಂದು ಅಭಿಪ್ರಾಯ.

**ಜೀವಾದ್ವಾ ಬ್ರಹ್ಮಣೋವಾಸ್ತು ನುಮ್ನುಟೋಃ ಕಿಂ ವಿಶೇಷಣಂ ॥ ೭೨೭ ॥**

**ಅರ್ಥ–** ಜೀವಾದ್ ವಾ= ಜೀವನದಾಗಲೀ, ಬ್ರಹ್ಮಣೋ ವಾ= ಬ್ರಹ್ಮನದಾಗಲೀ, ಅಸ್ತು= ಅಂಶಗಳಿರಲಿ, ನುಮ್‌ಮಟೋಃ= ನುಮ್, ನುಟ್‌ಗಳಿಗೆ, ಕಿಂ ವಿಶೇಷಣಂ= ಏನು ವ್ಯತ್ಯಾಸ.

**ಅನುವಾದ-** ಪ್ರತಿಯೊಂದು ದೇಹದಲ್ಲಿ ಚೇತನಗಳು ಜೀವಾಂಶಗಳಾಗಲಿ ಅಥವಾ ಬ್ರಹ್ಮಾಂಶಗಳಾಗಿರಲಿ ನುಮ್, ನುಟ್‌ಗಳಿಗೆ ಏನು ವ್ಯತ್ಯಾಸ?

**ಭಾವವಿಲಾಸಿನೀ–** ಅಸ್ತು ಅಂಶವಿಭಾಗೋಽಸ್ತು ॥ ೭೨೭ ॥

**ವಿವರಣೆ–** ಪ್ರತಿಯೊಂದು ದೇಹದಲ್ಲಿಯೂ ಚೇತನಾಂಶವನ್ನು ಒಪ್ಪಿದ ಮೇಲೆ ಜೀವಬ್ರಹ್ಮಭಾವವೇ ಸಿದ್ಧವಾಯಿತು. ಆ ಅಂಶಗಳು ಜೀವನ ಅಂಶಗಳಾದರೇನು ಬ್ರಹ್ಮನ ಅಂಶಗಳಾದರೇನು? ಚೇತನಬಹುತ್ವವಂತೂ ಸಿದ್ಧವಾಗುತ್ತದೆ. ನುಮ್, ನುಟ್ ಯಾವ ಪ್ರತ್ಯಯವು ಬಂದರೂ ನಕಾರ ಮಾತ್ರ ಉಳಿಯುತ್ತದೆ. ಅದರಂತೆ ಇಲ್ಲಿಯೂ ಜೀವ ಬಹುತ್ವವು ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

**ಗೇಹೇ ಗೇಹೇ ಸ್ಥಿತಾ ದೀಪಾಃ ದೀಪಾನ್ಮೂಲಾಗ್ನಿತೋಽಪಿ ವಾ ।**
**ಭವಂತು ಬಹುದೀಪತ್ವೇ ನ ವಿಶೇಷೋಸ್ತಿ ಕಶ್ಚನ ॥ ೭೨೮ ॥**

**ಅರ್ಥ–** ಗೇಹೇ ಗೇಹೇ ಸ್ಥಿತಾ ದೀಪಾಃ= ಪ್ರತಿ ಮನೆಯಲ್ಲಿಯೂ ಇರುವ ದೀಪಗಳು, ದೀಪಾದ್ವಾ= ಒಂದು ದೀಪದಿಂದಾಗಲೀ, ಮೂಲಾಗ್ನಿತೋ ವಾ= ಅಥವಾ ಎಲ್ಲ ದೀಪಗಳಿಗೂ ಮೂಲವಾದ ಅಗ್ನಿಯಿಂದಾಗಲೀ, ಭವಂತು= ಉಂಟಾಗಲಿ, ಬಹುದೀಪತ್ವೇ= ದೀಪಗಳ ಬಹುತ್ವ ವಿಷಯದಲ್ಲಂತೂ, ಕಶ್ಚನ ವಿಶೇಷಃ= ಯಾವ ವಿಶೇಷವೂ, ನಾಸ್ತಿ= ಇರುವುದಿಲ್ಲ.

**ಅನುವಾದ-** ಮನೆಮನೆಯಲ್ಲಿಯೂ ಇರುವ ದೀಪಗಳು ಒಂದು ದೀಪದಿಂದಾಗಲೀ ಅಥವಾ ಆ ದೀಪಕ್ಕೆ ಮೂಲವಾದ ಅಗ್ನಿಯಿಂದಾಗಲೀ ಉಂಟಾಗಲಿ. ಬಹು ದೀಪಗಳು ಇರುವ ವಿಷಯದಲ್ಲಂತೂ ಯಾವ ವಿಶೇಷವೂ ಇಲ್ಲ.

**ಭಾವವಿಲಾಸಿನೀ–** ತತ್ರ ದೃಷ್ಟಾಂತಮಾಹ – **ಗೇಹೇ ಗೇಹ ಇತಿ** ॥ ಬಹುದೀಪತ್ವೇ ಗೇಹಾನಾಂ ಬಹುದೀಪತ್ವೇ ॥ ೭೨೮ ॥

**ವಿವರಣೆ–** ಜೀವರು ಮೂಲಬ್ರಹ್ಮನ ಅಂಶವಾದರೆ ಮೂಲವಾದ ಅಗ್ನಿಯಿಂದ ಉಂಟಾದ ದೀಪಗಳಂತೆ. ಕಲ್ಪಕ ಜೀವನ ಅಂಶಗಳಾದರೆ ದೀಪದಿಂದ ಉಂಟಾದ ದೀಪಗಳಂತೆ. ಅಲ್ಲಿ ಹೇಗಾದರೂ ಬಹುದೀಪತ್ವವು ಹೇಗೆ ಇರುತ್ತದೆಯೋ, ಹಾಗೆಯೇ ಇಲ್ಲಿಯೂ ಸಹ ಬಹುಚೇತನತ್ವವು ಇರುವುದರಲ್ಲಿ ಯಾವ ವ್ಯತ್ಯಾಸವೂ ಇಲ್ಲ ಎಂದು ಅಭಿಪ್ರಾಯ.

**ನಿರ್ಜೀವದೇಹಸಂಚಾರೇ ಸ್ವದೇಹೋಽಪ್ಯಸ್ತು ತಾದೃಶಃ ।**
**ಸರ್ವಭ್ರಾಂತಿರ್ಬ್ರಹ್ಮಣೋಽಸ್ತು ಸಂಸರೇನ್ಮುಚ್ಯತಾಂ ಚ ತತ್ ॥ ೭೨೯ ॥**

**ಅರ್ಥ–** ನಿರ್ಜೀವದೇಹಸಂಚಾರೇ= ಜೀವವಿಲ್ಲದ ದೇಹವೇ ಸಂಚಾರ ಮಾಡುವುದಾದರೆ, ಸ್ವದೇಹೋಽಪಿ= ಕಲ್ಪಕನಾದ ಜೀವನ ದೇಹವೂ ಸಹ, ತಾದೃಶಃ ಅಸ್ತು= ಹಾಗೆಯೇ ಆಗಲಿ, ಸರ್ವಭ್ರಾಂತಿಃ= ಸರ್ವಭ್ರಾಂತಿಯು, ಬ್ರಹ್ಮಣೋಸ್ತು= ಬ್ರಹ್ಮನಿಗೇ ಇರಲಿ, ತತ್= ಆ ಬ್ರಹ್ಮನು, ಸಂಸರೇನ್ಮುಚ್ಯತಾಂ ಚ= ಸಂಸಾರವನ್ನು ಅನುಭವಿಸಲಿ, ಮುಕ್ತನೂ ಆಗಲಿ.

**ಅನುವಾದ-** ಜೀವರಹಿತವಾದ ದೇಹವೇ ಸಂಚಾರವನ್ನು ಮಾಡುವುದಾದರೆ ಕಲ್ಪಕನಾದ ಜೀವನ ದೇಹವೂ ಹಾಗೆಯೇ ನಿರ್ಜೀವವಾಗಲಿ. ಎಲ್ಲ ಭ್ರಾಂತಿಗಳೂ ಬ್ರಹ್ಮನಿಗೇ ಉಂಟಾಗಲಿ. ಬ್ರಹ್ಮನಿಗೇ ಸಂಸಾರವೂ ಮತ್ತು ಮೋಕ್ಷವು ಉಂಟಾಗಲಿ.

**ಭಾವವಿಲಾಸಿನೀ–** ಕಿಂಚ ಸರ್ವವಿಕಲ್ಪಗತೋಽಪ್ಯೇಕಜೀವಸ್ಯ ದೇಹಃ ಕೇನ ಕಲ್ಪಿತಃ । ನ ತಾವತ್ಸ್ವೇನೈವ । ದೇಹೋತ್ಪತ್ತೇಃ ಪೂರ್ವಂ ಕಲ್ಪಕತ್ವಾಯೋಗಾತ್ । ಯೋಗೇ ವಾ ಜಗತ್ಕಲ್ಪನಸ್ಯಾಪಿ ದೇಹಂ ವಿನೈವ ಸಂಭವೇನ ದೇಹಾಂಗೀಕಾರವೈಯರ್ಥ್ಯಪ್ರಸಂಗಾತ್ । ಸ್ವಪ್ನದ್ರಷ್ಟುಃ ಸ್ವದೇಹಕಲ್ಪಕತ್ವಸ್ಯ ಕ್ವಾಪ್ಯದರ್ಶನಾಚ್ಚ । ಅತೋ ಬ್ರಹ್ಮಣೈವೇತಿ ವಕ್ತವ್ಯಮ್ । ಏವಂ ಸತಿ ಸರ್ವೇ ದೇಹಾಃ ನಿರ್ಜೀವಾ ಏವ ಸಂತು ಕಿಂ ದ್ವಿಪ್ರಕಾರಕಲ್ಪನಯೇತ್ಯಾಹ – **ನಿರ್ಜೀವೇತಿ** ॥ ಸ್ವದೇಹಃ ಏಕಜೀವದೇಹಃ । ತಾದೃಶಃ ನಿರ್ಜೀವಃ । ತರ್ಹಿ ಭ್ರಮಃ ಕಸ್ಯೇತ್ಯತ ಆಹ – **ಸರ್ವೇತಿ** ॥ ತತ್ ಬ್ರಹ್ಮ ॥ ೭೨೯ ॥

**ವಿವರಣೆ–** ಇಂತಹ ಏಕಜೀವವಾದದಲ್ಲಿ ಇಲ್ಲಿ ದೋಷಾಂತರವನ್ನು ಹೇಳುತ್ತಾರೆ. ಕಲ್ಪಕನಾದ ಜೀವನ ದೇಹವು ಯಾರಿಂದ ಕಲ್ಪಿತವಾಗುತ್ತದೆ? ತನ್ನಿಂದಲೇ ಎಂದು ಹೇಳಲು ಬರುವುದಿಲ್ಲ. ಏಕೆಂದರೆ ದೇಹವು ಬರುವುದಕ್ಕಿಂತ ಮುಂಚೆ ಕಲ್ಪಕತ್ವವು ಇರುವುದಿಲ್ಲ. ದೇಪವು ಬಂದಮೇಲೆ ಕಲ್ಪನೆ, ಕಲ್ಪನೆಯಾದ ಮೇಲೆ ದೇಹಪ್ರಾಪ್ತಿ ಎಂದು ಅನ್ಯೋನ್ಯಾಶ್ರಯವು ಬರುತ್ತದೆ. ಕಲ್ಪಕನಿಲ್ಲದೇ ಆ ದೇಹವು ಕಲ್ಪಿತವಾಗುವುದಾದರೆ ಅನಂತದೇಹಗಳಿಗೆ ಆ ಜೀವನನ್ನು ಕಲ್ಪಕ ಎಂದು ಏಕೆ ಒಪ್ಪಬೇಕು? ಮೊದಲನೆಯ ಕಲ್ಪನೆಯಂತೆ ಎಂದರೆ ಸೃಷ್ಟಿಯಂತೆ ಅನಂತರದ ಜಗತ್ತಿನ ಸೃಷ್ಟಿಯೂ ಆಗಬಹುದು. ಇದು ಆ ಜೀವನ ಸ್ವಪ್ನ ಎಂದು ಹೇಳುವ ಪಕ್ಷದಲ್ಲಿ ಸ್ವಪ್ನವನ್ನು ನೋಡುವ ಪುರುಷನಿಗೆ ತನ್ನ ದೇಹದ ಕಲ್ಪಕತ್ವವು ಇರುವುದಿಲ್ಲವಾದ್ದರಿಂದ ಕಲ್ಪಕನಾದ ಜೀವನಿಗೆ ಅವನ ದೇಹವು ಅವನಿಂದಲೇ ಕಲ್ಪಿತವಲ್ಲ ಎಂದು ಸಿದ್ಧವಾಗುತ್ತದೆ. ಆದ್ದರಿಂದ ಬ್ರಹ್ಮನಿಂದಲೇ ಕಲ್ಪಿತವೆಂದು ಹೇಳಬೇಕು. ಅದರಂತೆ ಎಲ್ಲಾ ದೇಹಗಳೂ ಬ್ರಹ್ಮನಿಂದಲೇ ಕಲ್ಪಿತವೆಂದು ಒಪ್ಪು. ಆದ್ದರಿಂದ ಎಲ್ಲ ದೇಹಗಳೂ ನಿರ್ಜೀವವೆಂದೂ ಒಪ್ಪು, ಏಕೆ ಅದರಲ್ಲಿ ವ್ಯತ್ಯಾಸವನ್ನು ಮಾಡುತ್ತೀಯೆ? ಎಲ್ಲ ದೇಹಗಳೂ ನಿರ್ಜೀವವಾದರೆ ಜಗತ್ತಿನ ಭ್ರಮೆಯಾರಿಗೆ ಉಂಟಾಗುತ್ತದೆ ಎಂಬ ಪ್ರಶ್ನೆ ಬಂದರೆ, ಎಲ್ಲಾ ಭ್ರಾಂತಿಗಳನ್ನೂ ಬ್ರಹ್ಮನಿಗೆ ಅಂಗೀಕಾರ ಮಾಡು ಎಂದು ಉತ್ತರ. ಭ್ರಾಂತಿ ಉಂಟಾದರೆ ಬ್ರಹ್ಮನಿಗೆ ಸಂಸಾರ

ಉಂಟಾಗುತ್ತದೆ ಎಂದರೆ ಆಗಲಿ ಬ್ರಹ್ಮನಿಗೇ ಸಂಸಾರವನ್ನು ಮತ್ತು ಮೋಕ್ಷವನ್ನು ಅಂಗೀಕಾರ ಮಾಡು. ಜೀವನನ್ನು ಏಕೆ ಪ್ರತ್ಯೇಕವಾಗಿ ಅಂಗೀಕಾರ ಮಾಡುತ್ತೀಯೆ ಎಂದು ಅಭಿಪ್ರಾಯ.

**ಅಜ್ಞಾನಕಾರ್ಯಬ್ರಹ್ಮೇಶಸರ್ವಕರ್ತೃತ್ವಹಂತೃತೇ ।**
**ಯುಕ್ತೇ ನೇತಿ ತಯೋಃ ಕಾರ್ಯತ್ವೇನೇತ್ಯಾದಾವುದೀರಿತಂ ॥ ೭೩೦ ॥**

**ಅರ್ಥ–** ಅಜ್ಞಾನಕಾರ್ಯಬ್ರಹ್ಮೇಶ ಸರ್ವಕರ್ತೃತ್ವ ಹಂತೃತೇ= ಅಜ್ಞಾನ ಕಾರ್ಯರಾದ ಬ್ರಹ್ಮನ ಸರ್ವಕರ್ತೃತ್ವವು ಮತ್ತು ಈಶ್ವರನ ಸರ್ವಹಂತೃತ್ವವು, ತಯೋಃ= ಅವರಿಬ್ಬರೂ, ಕಾರ್ಯತ್ವೇನ= ಅಜ್ಞಾನಕಾರ್ಯವಾದ ಕಾರಣದಿಂದ, ನ ಯುಕ್ತೇ= ಉಪಪನ್ನವಾಗುವುದಿಲ್ಲ, ಇತಿ= ಎಂದು, ಆದೌ= ಮಂಗಳಶ್ಲೋಕದಲ್ಲಿಯೇ, ಉದೀರಿತಂ= ಹೇಳಲ್ಪಟ್ಟಿದೆಯಷ್ಟೇ.

**ಅನುವಾದ–** **ಬ್ರಹ್ಮ ಮತ್ತು ಈಶ್ವರರು ಅಜ್ಞಾನಕಾರ್ಯರಾದ ಕಾರಣದಿಂದ ಅವರಿಗೆ ಕ್ರಮವಾಗಿ ಸಕಲಜಗತ್ಕರ್ತೃತ್ವವೂ, ಸರ್ವಜಗತ್‌ಸಂಹರ್ತೃತ್ವವೂ ಉಪಪನ್ನವಾಗುವುದಿಲ್ಲವೆಂದು ನಿನ್ನ ಗ್ರಂಥದಲ್ಲಿ ಮೊದಲೇ ಹೇಳಲ್ಪಟ್ಟಿದೆಯಷ್ಟೇ.**

**ಭಾವವಿಲಾಸಿನೀ–** ಇದಾನೀಮೇಕಜೀವಸ್ಯ ಜಗತ್ಕರ್ತೃತ್ವಾದೇ ತಚ್ಛಾಸ್ತ್ರಸ್ಯ ಪೂರ್ವೋತ್ತರ-ವಿರೋಧಂ ದರ್ಶಯತಿ ॥ **ಅಜ್ಞಾನೇತಿ** ॥ ಅಜ್ಞಾನಕಾರ್ಯಯೋರ್ಬ್ರಹ್ಮರುದ್ರಯೋಃ ಸರ್ವ ಕರ್ತುತ್ವಹಂತೃತೇ ಬ್ರಹ್ಮಣಃ ಕರ್ತೃತ್ವಂ ರುದ್ರಸ್ಯ ಹಂತೃತ್ವಮಿತ್ಯರ್ಥಃ । ತಯೋಃ ಕಾರ್ಯತ್ವೇನೇತ್ಯನೇನ ತಯೋಃ ಕಾರ್ಯತ್ವೇನ ನಿಖಿಲಜಗತ್‌ಸರ್ಜನ ಸಂಹರಣಸಾಮರ್ಥ್ಯಾ-ಭಾವಾದಿತಿ ತತ್ವದೀಪನವಾಕ್ಯಂ ಸಂಗೃಹ್ಣಾತಿ । ಆದೌ ಮಂಗಲಪದ್ಯವ್ಯಾಖ್ಯಾನಾವಸರೇ । ಇತಿ ವಾಕ್ಯೇ ಉದೀರಿತಮಿತಿ ಸಂಬಂಧಃ । ಉಪಲಕ್ಷಣಂ ಚೈತತ್‌। ಕಾರಣತ್ವಾಕ್ರಾಂತಂ ಬ್ರಹ್ಮ ನಮಸ್ಕಾರ್ಯಮಿತ್ಯಾಹೇತಿ ಬ್ರಹ್ಮಕಾರಣತಾಯಾಶ್ಚ ನಿರೂಪಣಾದಿತ್ಯಪಿ ದ್ರಷ್ಟವ್ಯಮ್‌ । ತಯೋ-ರ್ವಿಧಿರುದ್ರಯೋಃ ಕಾರ್ಯತ್ವೇನ ಅಜ್ಞಾನಕಾರ್ಯತ್ವೇನೇತಿ ತದ್ವಾಕ್ಯಾರ್ಥಃ ॥ ೭೩೦ ॥

**ವಿವರಣೆ–** ಇಲ್ಲಿ ಏಕಜೀವವಾದವನ್ನು ಅಂಗೀಕರಿಸಿದರೆ ಅವನಿಗೇ ಜಗತ್ಕರ್ತೃತ್ವವು ಉಂಟಾಗುವುದರಿಂದ ನಿನ್ನ ಶಾಸ್ತ್ರವು ಪೂರ್ವೋತ್ತರ ವಿರುದ್ಧವಾಗುತ್ತದೆ ಎಂದು ಹೇಳುತ್ತಾರೆ. ತತ್ವಪ್ರದೀಪನ ಎಂಬ ಅದ್ವೈತಗ್ರಂಥದಲ್ಲಿ ಮಂಗಳ ಪದ್ಯ ವ್ಯಾಖ್ಯಾನ ಸಂದರ್ಭದಲ್ಲಿ ಬ್ರಹ್ಮರುದ್ರರು ಅಜ್ಞಾನಕಾರ್ಯರಾದ್ದರಿಂದ ಅವರಿಗೆ ಸರ್ವ ಸ್ರಷ್ಟೃತ್ವವಾಗಲಿ ಅಥವಾ ಸರ್ವಸಂಹರ್ತೃತ್ವವಾಗಲೀ ಕೂಡುವುದಿಲ್ಲ ಎಂದು ಹೇಳಿದ್ದಾರೆ. ಈಗ ಏಕಜೀವವಾದವನ್ನು ಒಪ್ಪಿ ಒಬ್ಬ ಜೀವನಿಗೆ ಸೃಷ್ಟಿಕರ್ತೃತ್ವವನ್ನೂ ಸಂಹಾರಕರ್ತೃತ್ವವನ್ನೂ ಹೇಳಿದರೆ ಈ ಕಲ್ಪಕನಾದ ಜೀವನು ಅಜ್ಞಾನ ಕಾರ್ಯನಾಗಿರುವುದರಿಂದ ಅಜ್ಞಾನಕಾರ್ಯರಾದ ಬ್ರಹ್ಮರುದ್ರರಿಗೆ ಬರುವುದಿಲ್ಲ ಎಂದು ಹೇಳಿದ ನಿನ್ನ ಪೂರ್ವಶಾಸ್ತ್ರಕ್ಕೂ ಈ ಮಾತಿಗೂ ವಿರೋಧವುಂಟಾಗುತ್ತದೆ. ಅಷ್ಟೇ ಅಲ್ಲದೆ

ಅದೇ ಗ್ರಂಥದಲ್ಲಿ ಕಾರಣತ್ವವನ್ನು ಹೊಂದಿದ ಬ್ರಹ್ಮನು ನಮಸ್ಕಾರಾರ್ಹನು ಎಂದು ಹೇಳಿರುವುದರಿಂದ ಇಲ್ಲಿ ಜೀವನಿಗೇ ಜಗತ್ಕಾರಣತ್ವವನ್ನು ಹೇಳಿದರೆ ಆ ವಾಕ್ಯದ ವಿರೋಧವು ಬರುತ್ತದೆ ಎಂದೂ ಇಟ್ಟುಕೊಳ್ಳಬೇಕು.

ಪುನರಜ್ಞಾನಕಾರ್ಯಸ್ಯ ಜೀವಸ್ಯಾಸ್ಯ ನಿಗದ್ಯತೇ ।
ಸರ್ವಸ್ಯ ಕರ್ತೃತಾ ತೇನ ಜೀವೋ ಜಾಗರ್ತಿ ಚೇತ್ ತವ ॥ ೭೩೧ ॥

ನಿದ್ರಾತಿ ಹೃದ್ರುಜಾ ಶಾಸ್ತ್ರಂ ಮಿಥೋ ಯದ್ಧಿ ವ್ಯರುಧ್ಯತ ।
ಜೀವೇಽತಿವ್ಯಾಪಕಂ ಚೇದಂ ಕಥಂ ಸ್ಯಾದ್ ಬ್ರಹ್ಮಲಕ್ಷಣಂ ॥ ೭೩೨ ॥

**ಅರ್ಥ–** ಪುನಃ ಅತ್ರ= ಪುನಃ ಇಲ್ಲಿ, ಅಜ್ಞಾನಕಾರ್ಯಸ್ಯ ಅಸ್ಯ ಜೀವಸ್ಯ= ಅಜ್ಞಾನಕಾರ್ಯನಾದ ಈ ಕಲ್ಪಕಜೀವನಿಗೆ, ಸರ್ವಸ್ಯ ಕರ್ತೃತಾ= ಸರ್ವಕರ್ತೃತ್ವವು, ನಿಗದ್ಯತೇ= ಹೇಳಲ್ಪಡುತ್ತದೆ, ತೇನ= ಆ ಕಾರಣದಿಂದ, ಜೀವಃ= ಕಲ್ಪಕನಾದ ಜೀವನು, ಜಾಗರ್ತಿ ಚೇತ್= ಎಚ್ಚರಿಕೆಯಿಂದ ಇರುವನೆಂದಾದರೆ, ತವ ಶಾಸ್ತ್ರಂ= ನಿನ್ನ ಶಾಸ್ತ್ರವು, ಹೃದ್ರುಜಾ= ಹೃದಯರೋಗದಿಂದ, ನಿದ್ರಾತಿ= ನಿದ್ರಿಸುತ್ತದೆ, ಯತ್= ಏಕೆಂದರೆ, ಮಿಥಃ= ಪರಸ್ಪರವಾಗಿ, ವ್ಯರುಧ್ಯತ ಹಿ= ವಿರೋಧವನ್ನು ಹೊಂದಿದೆಯಷ್ಟೇ, ಚ= ಮತ್ತು, ಜೀವೇಽತಿವ್ಯಾಪಕಂ= ಜೀವನಲ್ಲಿ ಅತಿವ್ಯಾಪ್ತವಾದ, ಇದಂ= ಈ ಜಗತ್ಕರ್ತೃತ್ವವು, ಕಥಂ= ಹೇಗೆ, ಬ್ರಹ್ಮಲಕ್ಷಣಂ ಸ್ಯಾತ್= ಬ್ರಹ್ಮಲಕ್ಷಣವಾಗುತ್ತದೆ.

**ಅನುವಾದ–** ಪುನಃ ಇಲ್ಲಿ ಅಜ್ಞಾನಕಾರ್ಯನಾದ ಈ ಕಲ್ಪಕಜೀವನಿಗೆ ಸರ್ವಜಗತ್ಕರ್ತೃತ್ವವು ಹೇಳಲ್ಪಡುತ್ತದೆ. ಆದ್ದರಿಂದ ನಿನ್ನ ಆ ಕಲ್ಪಕನಾದ ಜೀವನು ಜಾಗರೂಕನಾದರೆ ಪೂರ್ವೋತ್ತರ ವಿರೋಧವೆಂಬ ಹೃದಯರೋಗದಿಂದ ನಿನ್ನ ಶಾಸ್ತ್ರವು ನಿದ್ರೆಯನ್ನು ಮಾಡುತ್ತದೆ. ಏಕೆಂದರೆ ಅದು ಪರಸ್ಪರವಾಗಿ ವಿರೋಧವನ್ನು ಹೊಂದಿದೆ. ಅದೂ ಅಲ್ಲದೇ, ಜೀವನಲ್ಲಿ ಅತಿವ್ಯಾಪ್ತವಾದ ಈ ಜಗತ್ಕರ್ತೃತ್ವವು ಹೇಗೆ ಬ್ರಹ್ಮನ ಲಕ್ಷಣವಾಗುತ್ತದೆ?

**ಭಾವವಿಲಾಸಿನೀ–** ತೇನ ಕಾರಣೇನ । ತವ ಜೀವಃ ಏಕಜೀವಃ । ಜಾಗರ್ತಿ ಚೇತ್ ಜಾಗರೂಕತಯಾ ವರ್ತತೇ ಚೇತ್ । ಹೃದ್ರುಜಾ ಪೂರ್ವೋತ್ತರವಿರೋಧಾಖ್ಯ ಹೃದಯವ್ಯಾಧಿನಾ ನಿದ್ರಾತಿ ನಿದ್ರಿತಪುರುಷವತ್ ಸ್ವಾರ್ಥಸಾಧಕಂ ನ ಭವತೀತ್ಯರ್ಥಃ। ಯತ್ ಶಾಸ್ತ್ರಮ್ । ಅಜ್ಞಾನಕಾರ್ಯತ್ವಾತ್ ವಿಧಿರುದ್ರಯೋಃ ಕರ್ತೃತಾ ನೇತ್ಯೇಕತ್ರೋಕ್ತಮ್ । ಇದಾನೀಂ ಪುನರಜ್ಞಾನಕಾರ್ಯಸ್ಯೈಕಜೀವಸ್ಯ ಸಕಲಜಗತ್ಕರ್ತೃತ್ವಮುಚ್ಯತೇ । ಅತಃ ಪೂರ್ವೋತ್ತರವಿರುದ್ಧತ್ವಾತ್ ಶಾಸ್ತ್ರಮುನ್ಮತ್ತಪ್ರಲಪಿತಂ ಸ್ಯಾದಿತಿ ಭಾವಃ । ದೋಷಾಂತರಂ ಚಾಹ – ಜೀವೇಽತಿವ್ಯಾಪಕಮಿತಿ ॥ ಸೂತ್ರವಿರುದ್ಧಶ್ಚ ಜೀವಸ್ಯ ಜನ್ಮಾದಿಕಾರಣತ್ವಾಂಗೀಕಾರ ಇತಿ ಭಾವಃ ॥ ೭೩೧-೭೩೨ ॥

**ವಿವರಣೆ–** ಶಾಸ್ತ್ರವು ನಿದ್ರಿಸುತ್ತದೆ ಎಂದರೆ ತನಗೆ ಉದ್ದಿಷ್ಟವಾದ ಅರ್ಥವನ್ನು ಸಾಧಿಸುವುದಿಲ್ಲ ಎಂದು ಅರ್ಥ. ಪೂರ್ವೋತ್ತರ ವಿರುದ್ಧವಾದ ಶಾಸ್ತ್ರವು ಉನ್ಮತ್ತಪ್ರಲಾಪವಾಗುತ್ತದೆ ಎಂದು ಅಭಿಪ್ರಾಯ.

ಕಿಂ ಚಾಸೌ ಚಕ್ಷುರಾದ್ಯಕ್ಷೈಃ ಕಲ್ಪಯೇನ್ನತು ಸಾಕ್ಷಿಣಾ ।
ಅಂತರೇವ ಸ್ವತಂತ್ರೇಣ ಸನ್ನಿಕೃಷ್ಟಾನಿ ತಾನಿ ಚ ॥ ೭೩೩ ॥

ಜ್ಞಾಪಕಾನಿ ತತೋ ಭ್ರಾಂತೇಃ ಪುರಾ ಸರ್ವಮಭೂಜ್ಜಗತ್ ।
ಅಂಡಸ್ಯಾಂತರ್ಬಹಿಃ ಸರ್ವಂ ಜೀವೋಣುಃ ಕಲ್ಪಯೇತ್ ಕಥಂ ॥ ೭೩೪ ॥

**ಅರ್ಥ–** ಕಿಂಚ= ಮತ್ತು, ಅಸೌ= ಈ ಕಲ್ಪಕಜೀವನು, ಚಕ್ಷುರಾದ್ಯಕ್ಷೈಃ= ಚಕ್ಷುರಾದಿ ಇಂದ್ರಿಯಗಳಿಂದ, ಕಲ್ಪಯೇತ್= ಕಲ್ಪಿಸುತ್ತಾನೆ, ಅಂತರೇವ= ದೇಹದ ಒಳಗೇ, ಸ್ವತಂತ್ರೇಣ= ಇಂದ್ರಿಯ ನಿರಪೇಕ್ಷವಾದ, ಸಾಕ್ಷಿಣಾ= ಸಾಕ್ಷಿಯಿಂದ, ನ ತು= ಕಲ್ಪಿಸುವುದಿಲ್ಲ, ತಾನಿ ಚ= ಆ ಇಂದ್ರಿಯಗಳಾದರೂ, ಸನ್ನಿಕೃಷ್ಟಾನಿ= ವಿಷಯ ಸನ್ನಿಕರ್ಷವನ್ನು ಹೊಂದಿದವುಗಳಾಗಿ, ಜ್ಞಾಪಕಾನಿ= ಜ್ಞಾನವನ್ನು ಉಂಟು ಮಾಡುತ್ತವೆ, ತತಃ= ಆ ಕಾರಣದಿಂದ, ಭ್ರಾಂತೇಃ ಪುರಾ= ಭ್ರಾಂತಿಗಿಂತ ಮೊದಲೇ, ಸರ್ವಂ ಜಗತ್= ಎಲ್ಲ ಜಗತ್ತು, ಅಭೂತ್= ಇದೆಯೆಂದಾಯಿತು, ಅಣುಃ ಜೀವಃ= ಅಣುವಾದ ಜೀವನು, ಅಂಡಸ್ಯಾಂತರ್ಬಹಿಃ= ಬ್ರಹ್ಮಾಂಡದ ಒಳಗೂ ಮತ್ತು ಹೊರಗೂ, ಸರ್ವಂ= ಎಲ್ಲವನ್ನೂ, ಕಥಂ ಕಲ್ಪಯೇತ್= ಹೇಗೆ ಕಲ್ಪಿಸುತ್ತಾನೆ.

**ಅನುವಾದ-** ಮತ್ತು ಆ ಕಲ್ಪಕನಾದ ಜೀವನು ಚಕ್ಷುರಾದಿ ಇಂದ್ರಿಯಗಳ ಸಹಾಯದಿಂದಲೇ ಕಲ್ಪಿಸುತ್ತಾನೆಯೇ ಹೊರತು ಇಂದ್ರಿಯ ನಿರಪೇಕ್ಷವಾದ ಸಾಕ್ಷಿಯಿಂದ ದೇಹದೊಳಗೆ ಎಲ್ಲವನ್ನೂ ಕಲ್ಪಿಸುವುದಿಲ್ಲ. ಆ ಇಂದ್ರಿಯಗಳಾದರೂ ವಿಷಯಸನ್ನಿಕರ್ಷವನ್ನು ಹೊಂದಿಯೇ ಜ್ಞಾನವನ್ನು ಉಂಟುಮಾಡುತ್ತವೆ. ಆದ್ದರಿಂದ ಭ್ರಾಂತಿಗಿಂತ ಮೊದಲೇ ಸರ್ವಜಗತ್ತು ಇದೆ ಎಂದು ಸಿದ್ಧವಾಯಿತು ಮತ್ತು ಅಣುವಾದ ಜೀವನು ಬ್ರಹಾಂಡದ ಒಳಗೂ ಮತ್ತು ಹೊರಗೂ ಎಲ್ಲವನ್ನೂ ಕಲ್ಪಿಸುವುದು ಹೇಗೆ?

**ಭಾವವಿಲಾಸಿನೀ–** ಸ್ವಪ್ನಪಕ್ಷೇ ದೂಷಣಾಂತರಂ ಸೂಚಯಂದೋಷಾಂತರಂ ಚಾಹ–**ಕಿಂಚೇತಿ** ॥ ಅಸೌ ಏಕಜೀವಃ । ಅಂತರೇವ ದೇಹಾಂತರೇವ । ತಾನಿ ಚಕ್ಷುರಾದ್ಯಕ್ಷಾಣಿ । ತತಃ ಭ್ರಾಂತಿಜನಕ-ಸನ್ನಿಕರ್ಷಘಟಕತಯಾ ಜಗತಃ ಪ್ರಾಗ್‌ಭಾವನಿಯಮಾತ್ । ಅಯಮಾಶಯಃ । ಸ್ವಪ್ನಪಕ್ಷಂ ದೃಢೀಕೃತ್ಯ ಮನಸೈವ ಸ ಕಲ್ಪಯತೀತಿ ಪಕ್ಷೇ ತಸ್ಯ ಚಕ್ಷುರಾದೀಂದ್ರಿಯ ಸೃಷ್ಟಿರ್ವ್ಯರ್ಥಾ ಸ್ಯಾತ್ । ತೈರಪಿ ಕಲ್ಪಯತಿ ಚೇದುಕ್ತಂ ದೂಷಣಂ ತದವಸ್ಥಮಿತಿ । ಸ್ವಪ್ನಪಕ್ಷೇ ಶ್ರುತಿವಿರೋಧಂ ಸೂಚಯನ್ ದೋಷಾಂತರಂ ಚಾಹ–**ಅಂಡಸ್ಯೇತಿ** ॥ ಸರ್ವಂ ಪುಂಸೂಕ್ತೋಕ್ತಪಾದಾದಿಜಮ್ ॥೭೩೩-೩೪॥

**ವಿವರಣೆ–** ಸ್ವಪ್ನಪಕ್ಷದಲ್ಲಿ ಒಂದು ದೋಷವನ್ನು ಹೇಳಿ ಇನ್ನೊಂದು ದೋಷವನ್ನು ಸೂಚಿಸುತ್ತಾರೆ. ಈ ಸ್ವಾಪ್ನ ಪದಾರ್ಥಗಳ ಜ್ಞಾನವು ಬರಬೇಕಾದರೂ ಕಲ್ಪಕಜೀವನಿಗೆ ದೇಹದ ಅಪೇಕ್ಷೆ ಇದೆ. ಭ್ರಾಂತಿಯು ಬರಬೇಕಾದರೆ ಅರ್ಥೇಂದ್ರಿಯ ಸನ್ನಿಕರ್ಷವು ಆವಶ್ಯಕವಾದುದು. ಆದ್ದರಿಂದ ಸನ್ನಿಕರ್ಷವು ಉಂಟಾದುವುದಕ್ಕೆ ಮೊದಲೇ ಅರ್ಥವಿರಬೇಕಷ್ಟೇ? ಆದ್ದರಿಂದ ಜಗತ್ತೆಲ್ಲವೂ ಭ್ರಾಂತಿಗಿಂತ ಮೊದಲೇ ಇರುವುದರಿಂದ ಸತ್ಯವೆಂದೇ ಸಿದ್ಧವಾಗುತ್ತದೆ ಎಂಬುದು ಒಂದು ದೋಷ. ಅಣುವಾದ ಜೀವನು ಬ್ರಹ್ಮಾಂಡದ ಒಳಗೂ ಮತ್ತು ಹೊರಗೂ ಎಲ್ಲಾ ಪದಾರ್ಥಗಳನ್ನು ಕಲ್ಪಿಸಲು ಅಸಮರ್ಥನಾದವನು. ಏಕೆಂದರೆ ಅವನ ಚಕ್ಷುರಾದಿ ಇಂದ್ರಿಯಗಳು ಆ ಎಲ್ಲಕಡೆಯಲ್ಲಿಯೂ ವ್ಯಾಪಿಸುವುದಿಲ್ಲ ಎಂಬುದು ಇನ್ನೊಂದು ದೋಷ.

ಬಹವಃ ಪುರುಷಾ ಬ್ರಹ್ಮನ್ನುತಾಹೋ ಏಕ ಏವ ತು ।
ನೈತದಿಚ್ಛಂತಿ ಪುರುಷಮೇಕಂ ಕುರುಕುಲೋದ್ವಹ ॥ ೭೩೫ ॥

ಇತಿ ಭಾರತಕರ್ತ್ರೈವ ಯಜ್ಜೀವಬಹುತ್ವೈಕತೇ ।
ಪ್ರಾಕ್ ಪ್ರಸ್ತಾವ್ಯೋತ್ತರಾರ್ಧೇನ ನೇಚ್ಛಂತೀತ್ಯೇಕಜೀವತಾಂ ।
ಪ್ರತ್ಯಾಕ್ಷಿಪತ್ ತತೋಽಪ್ಯೇಷ ಪಕ್ಷೋ ನ ಸ ಹಿ ಸೂತ್ರಕೃತ್ ॥ ೭೩೬ ॥

**ಅರ್ಥ–** ಎಲೈ ಬ್ರಾಹ್ಮಣನೇ, ಪುರುಷಾಃ= ಪುರುಷರು, ಬಹವಃ= ಅನೇಕರೋ ಅಥವಾ, ಏಕ ಏವ ತು= ಒಬ್ಬನೋ, ಕುರುಕುಲೋದ್ವಹ= ಎಲೈ ಕುರುಕುಲೋದ್ವಹನೇ, ಏಕಂ ಪುರುಷಂ= ಒಬ್ಬನೇ ಪುರುಷನೆಂಬ, ಏತತ್= ಈ ಪ್ರಮೇಯವನ್ನು, ನ ಇಚ್ಛಂತಿ= ಜ್ಞಾನಿಗಳು ಅಂಗೀಕರಿಸುವುದಿಲ್ಲ, ಇತಿ= ಈ ರೀತಿಯಲ್ಲಿ, ಭಾರತಕರ್ತ್ರೈವ= ಭಾರತಕರ್ತೃವಾದ ವ್ಯಾಸರೇ, ಯತ್= ಯಾವ ಕಾರಣದಿಂದ, ಜೀವಬಹುತ್ವೈಕತೇ= ಜೀವಬಹುತ್ವವನ್ನು ಮತ್ತು ಏಕತ್ವವನ್ನು, ಪ್ರಾಕ್ ಪ್ರಸ್ತಾವ್ಯ= ಮೊದಲು ಪ್ರಸ್ತಾಪಿಸಿ, ಉತ್ತರಾರ್ಧೇನ= ಉತ್ತರಾರ್ಧದಿಂದ, ನೈಚ್ಛಂತೀತಿ= ಅಂಗೀಕರಿಸುವುದಿಲ್ಲ ಎಂದು ಹೇಳಿ, ಏಕಜೀವತಾಂ= ಏಕಜೀವವಾದವನ್ನು, ಪ್ರತ್ಯಾಕ್ಷಿಪತ್= ನಿರಾಕರಿಸಿದರೋ, ತತೋಽಪಿ= ಆ ಕಾರಣದಿಂದಲೂ, ಏಷಪಕ್ಷಃ= ಈ ಏಕಜೀವ ಪಕ್ಷವು, ನ= ಉಪಪನ್ನವಾಗುವುದಿಲ್ಲ, ಸ ಹಿ ಸೂತ್ರಕೃತ್= ಮಹಾಭಾರತವನ್ನು ರಚನೆ ಮಾಡಿದ ವ್ಯಾಸರೇ ಬ್ರಹ್ಮಸೂತ್ರಗಳನ್ನೂ ರಚನೆ ಮಾಡಿದವರು.

**ಅನುವಾದ–** ಭಾರತಕರ್ತೃಗಳಾದ ವ್ಯಾಸರೇ ಪುರುಷರು ಅನೇಕರೋ ಅಥವಾ ಒಬ್ಬನೋ ಎಂದು ಮೊದಲು ಪ್ರಸ್ತಾವವನ್ನು ಮಾಡಿ ಉತ್ತರಾರ್ಧದಲ್ಲಿ ಈ ಏಕಪುರುಷತ್ವವನ್ನು ಜ್ಞಾನಿಗಳು ಅಂಗೀಕರಿಸುವುದಿಲ್ಲ ಎಂದು ಹೇಳಿ ನಿರಾಕರಣೆ ಮಾಡಿರುವುದರಿಂದಲೂ ಈ ಪಕ್ಷವು ಯುಕ್ತವಲ್ಲ. ಭಾರತವನ್ನು ರಚಿಸಿದ ವ್ಯಾಸರೇ ಬ್ರಹ್ಮಸೂತ್ರಗಳನ್ನು ರಚಿಸಿದವರು.

**ಭಾವವಿಲಾಸಿನೀ–** ಭಾರತೇ ಪುರುಷಾ ಬಹವೋ ವಾ ಏಕೋ ವೇತಿ ವಿಕಲ್ಪ್ಯ ಏಕಂ ಪುರುಷಂ ನೇಚ್ಛಂತೀತಿ ಸಿದ್ಧಾಂತಕರಣಾತ್ತದ್ವಿರೋಧಶ್ಚೈಕಜೀವವಾದಸ್ಯೇತ್ಯಾಹ – **ಬಹವ ಇತಿ** ॥ ಸಃ ಭಾರತಕರ್ತಾ ವ್ಯಾಸಃ ॥ ೭೩೫-೭೩೬ ॥

**ವಿವರಣೆ–** ಮಹಾಭಾರತ ವಿರೋಧವು ಬರುವುದರಿಂದಲೂ ಏಕಜೀವವಾದವು ಅಪ್ರಾಮಾಣಿಕವೆಂದು ಇಲ್ಲಿ ಹೇಳುತ್ತಾರೆ. ಮಹಾಭಾರತದಲ್ಲಿ ಜೀವರು ಏಕರೋ ಅಥವಾ ಅನೇಕರು ಎಂದು ಜನಮೇಜಯನ ಪ್ರಶ್ನೆ. ಜೀವನು ಒಬ್ಬನೇ ಎಂಬ ಪಕ್ಷವನ್ನು ಜ್ಞಾನಿಗಳು ಅಂಗೀಕರಿಸುವುದಿಲ್ಲ ಎಂದು ವೈಶಂಪಾಯನರ ಉತ್ತರ. ಆದ್ದರಿಂದ ಏಕಜೀವವಾದವು ಭಾರತ ವಿರುದ್ಧವಾದುದು. ಭಾರತವನ್ನು ರಚನೆ ಮಾಡಿದ ವೇದವ್ಯಾಸರೇ ಸೂತ್ರಗಳನ್ನು ರಚನೆ ಮಾಡಿರುವುದರಿಂದ ಏಕಜೀವವಾದವು ಸೂತ್ರಕ್ಕೂ ವಿರುದ್ಧವಾದುದು ಎಂದು ಅಭಿಪ್ರಾಯ.

> ನಿರ್ಜೀವಸೇನಾಸಂಹಾರಮುಜ್ಜಿಹಾಸುಃ ಕಿಲಾರ್ಜುನಃ ।
> ಅಕ್ಷೋಹಿಣೀನಾಂ ತದ್ಯುದ್ಧಂ ಮೃತಾನಾಂ ಮಾರಣಂ ಕಿಲ ।
> ಏಕಜೀವಕಥಾ ತಸ್ಮಾದ್ ವೃಥೈವೇತಿ ಮತಿರ್ಮಮ ॥ ೭೩೭ ॥

**ಅರ್ಥ–** ನಿರ್ಜೀವಸೇನಾಸಂಹಾರಂ= ನಿರ್ಜೀವರಾದ ಸೈನ್ಯದ ಸಂಹಾರವನ್ನು, ಅರ್ಜುನಃ= ಅರ್ಜುನನು, ಉಜ್ಜಿಹಾಸುಃ ಕಿಲ= ಪರಿತ್ಯಜಿಸಲು ಬಯಸಿದನಷ್ಟೇ, ಅಕ್ಷೋಹಿಣೀನಾಂ= ಅನೇಕ ಅಕ್ಷೋಹಿಣಿಗೆ ಸಂಭವಿಸಿದ, ತದ್ಯುದ್ಧಂ= ಆ ಭಾರತ ಯುದ್ಧವು, ಮೃತಾನಾಂ ಮಾರಣಂ ಕಿಲ= ಸತ್ತವರನ್ನೇ ಸಾಯಿಸುವುದಷ್ಟೇ, ತಸ್ಮಾತ್= ಆ ಕಾರಣದಿಂದಲೂ, ಏಕಜೀವಕಥಾ= ಏಕಜೀವವಾದವು, ವೃಥೈವೇತಿ= ವ್ಯರ್ಥವೇ ಎಂದು, ಮಮ ಮತಿಃ= ನನ್ನ ಅಭಿಪ್ರಾಯ.

**ಅನುವಾದ-** ನಿರ್ಜೀವವಾದ ಸೈನ್ಯದ ಸಂಹಾರವನ್ನು ಅರ್ಜುನನು ಪರಿತ್ಯಜಿಸಲು ಬಯಸಿದನಷ್ಟೇ! ಅನೇಕ ಅಕ್ಷೋಹಿಣಿಗಳ ಸೈನ್ಯಕ್ಕೆ ನಡೆದ ಆ ಯುದ್ಧವು ಮೃತಮಾರಣವಷ್ಟೇ! ಆದ್ದರಿಂದಲೂ ಏಕಜೀವವಾದವು ವ್ಯರ್ಥವೆಂದೇ ನನ್ನ ಅಭಿಪ್ರಾಯ.

**ಭಾವವಿಲಾಸಿನೀ–** ಗೀತಾಪ್ರಮೇಯವಿರುದ್ಧಶ್ಚೈಕಜೀವವಾದ ಇತ್ಯಾಹ – **ನಿರ್ಜೀವೇತಿ** ॥ ಉತ್ಕರ್ಷೇಣ ಹಾತುಮಿಚ್ಛುಃ ಉಜ್ಜೀಹಾಸುಃ । ಏಕಜೀವವಾದೇ ಕುರುಸೇನಾಯಾ ನಿರ್ಜೀವತ್ವಾತ್ ತದ್ದನನೇ ಕುತಃಸರ್ವಜ್ಞಸ್ಯಾರ್ಜುನಸ್ಯ ಮನೋವ್ಯಾಕ್ಷೇಪಃ ಕುತೋ ವಾ ಮೃತ-ಮಾರಣರೂಪತದ್ಯುದ್ಧಸ್ಯ ಪ್ರಶಂಸೇತಿ ಭಾವಃ । ತಸ್ಮಾದರ್ಜುನೇನ ಮನೋವ್ಯಾಕ್ಷೇಪ-ಕರಣಾದ್ಯುದ್ಧಸ್ತುತೇಶ್ಚ । ವೃಥಾ ನಿರ್ಮೂಲೇತ್ಯರ್ಥಃ । ನ ಕೇವಲಮೇತಾವತ್ । ಮೂಲವಿರುದ್ಧಾ ಚೇತ್ಯಪಿ ಗ್ರಾಹ್ಯಮ್ ॥ ೭೩೭ ॥

**ವಿವರಣೆ–** ಗೀತಾಪ್ರಮೇಯಕ್ಕೆ ವಿರುದ್ಧವಾದುದರಿಂದಲೂ ಏಕಜೀವವಾದವು ಅಪ್ರಾಮಾಣಿಕವೆಂದು ಇಲ್ಲಿ ಹೇಳುತ್ತಾರೆ. ಅರ್ಜುನನು ಇಂದ್ರನ ಅವತಾರ, ಅವನು ಸರ್ವಜ್ಞನಾದವನು. ಸೈನ್ಯವೆಲ್ಲವೂ ನಿರ್ಜೀವವಾಗಿದ್ದರೆ ಅವರನ್ನು ಕೊಲ್ಲುವ ವಿಷಯದಲ್ಲಿ ಅವನಿಗೆ ಮನೋವಿಷಾದವು ಏಕೆ ಬರುತ್ತಿತ್ತು? ಅಂತಹ ಭ್ರಾಂತಿಯು ಅರ್ಜುನನಿಗೆ ಉಂಟಾಗುತ್ತದೆಯೇ? ಆ ಯುದ್ಧವೆಲ್ಲವೂ ಮೊದಲೇ ಮೃತರಾದವರ ಮಾರಣವಾದ್ದರಿಂದ ವ್ಯರ್ಥವೇ ಅಷ್ಟೇ! ಅದಕ್ಕೆ ಕೃಷ್ಣನು ಏಕೆ ಉಪದೇಶ ಮಾಡಬೇಕು? ಆದ್ದರಿಂದ ಗೀತಾ ಪ್ರಮೇಯಕ್ಕೆ ವಿರೋಧ ಬರುವುದರಿಂದ ಏಕಜೀವವಾದವು ಯುಕ್ತವಲ್ಲ ಎಂದು ಅಭಿಪ್ರಾಯ.

ಬಹುಜೀವತ್ವಪಕ್ಷೇಪಿ ನಿರ್ಮೂಲಾ ತೇಷ್ವಭಿನ್ನತಾ ॥ ೭೩೮ ॥

**ಅರ್ಥ–** ಬಹುಜೀವತ್ವ ಪಕ್ಷೇಪಿ= ಬಹುಜೀವರನ್ನು ಅಂಗೀಕರಿಸಿದ ಪಕ್ಷದಲ್ಲಿಯೂ, ತೇಷು= ಅವರಲ್ಲಿ, ಅಭಿನ್ನತಾ= ಅಭೇದವು, ನಿರ್ಮೂಲಾ= ನಿರ್ಮೂಲವಾದುದು.

**ಅನುವಾದ–** ಬಹುಜೀವರನ್ನು ಅಂಗೀಕರಿಸಿದರೂ ಅವರಲ್ಲಿ ಅಭೇದವು ನಿರ್ಮೂಲವಾದುದು.

**ಭಾವವಿಲಾಸಿನೀ–** ತೇಷು ಬಹುಜೀವೇಷು । ಭಾರತೇಽರ್ಜುನಾದೀನಾಂ ಹಂತೃತಯಾ ಸೇನಾಯಾಶ್ಚ ಹನ್ಯಮಾನತಯಾ ಕಥನಾತ್ ತಸ್ಯ ಚ ಭೇದಾವಿನಾಭೂತತ್ವಾನ್ನಿರ್ಮೂಲಾ ಮೂಲವಿರುದ್ಧಾ ಚೇತಿ ಭಾವಃ ॥ ೭೩೮ ॥

**ವಿವರಣೆ–** ಏಕಜೀವವಾದದಲ್ಲಿ ಹೇಳಿದ ನಿರ್ಮೂಲತ್ವವನ್ನು ಬಹುಜೀವವಾದದಲ್ಲಿಯೂ ಅತಿದೇಶಮಾಡಿ ತೋರಿಸುತ್ತಾರೆ. ಯುದ್ಧವು ನಡೆಯಬೇಕಾದರೆ ವಿರೋಧವು ಇರಬೇಕಷ್ಟೇ. ವಿರೋಧವು ಇರಬೇಕಾದರೆ ಭೇದವು ಇರಬೇಕು. ಒಬ್ಬನಿಗೆ ತನ್ನಿಂದಲೇ ವಿರೋಧವು ಉಂಟಾಗುವುದಿಲ್ಲವಷ್ಟೇ? ಆದ್ದರಿಂದ ಯುದ್ಧವು ನಡೆದಿದೆ ಎಂಬ ಕಾರಣದಿಂದಲೇ ಅವರಲ್ಲಿ ಭೇದವು ಸಿದ್ಧವಾಗುತ್ತದೆ. ಆದ್ದರಿಂದ ಬಹುಜೀವವಾದವನ್ನು ಒಪ್ಪಿದರೂ ಅಭೇದವು ಮಾತ್ರ ಸಿದ್ಧವಾಗುವುದಿಲ್ಲ ಎಂದು ಅಭಿಪ್ರಾಯ.

ಭೇದತ್ವಾದ್ ಯದಿ ಭೇದಸ್ಯ ಮಿಥ್ಯಾತ್ವಂ ಚಂದ್ರಭೇದವತ್ ।
ತರ್ಹಿ ಭೇದೋ ನ ಮಿಥ್ಯೇತಿ ಭೇದತ್ವೇನೈವ ಹೇತುನಾ ।
ಬ್ರಹ್ಮಮೋಕ್ಷವಿಭೇದಾಖ್ಯದೃಷ್ಟಾಂತೇನೈವ ಸಾಧ್ಯತೇ ॥ ೭೩೯ ॥

**ಅರ್ಥ–** ಯದಿ= ಒಂದು ಪಕ್ಷ, ಭೇದಸ್ಯ= ಭೇದಕ್ಕೆ, ಭೇದತ್ವಾತ್= ಭೇದತ್ವವು ಇರುವುದರಿಂದ, ಚಂದ್ರಭೇದವತ್= ಚಂದ್ರಭೇದದಂತೆ, ಮಿಥ್ಯಾತ್ವಂ= ಮಿಥ್ಯಾತ್ವವು

ಇರುವುದಾದರೆ, ತರ್ಹಿ= ಆಗ, ತೇನೈವ ಹೇತುನಾ= ಅದೇ ಹೇತುವಿನಿಂದ, ಭೇದಃ= ಭೇದವು, ನ ಮಿಥ್ಯಾ= ಮಿಥ್ಯೆಯಲ್ಲ, ಎಂದು, ಬ್ರಹ್ಮಮೋಕ್ಷವಿಭೇದಾಖ್ಯ ದೃಷ್ಟಾಂತೇನೈವ= ಬ್ರಹ್ಮ ಮತ್ತು ಮೋಕ್ಷಗಳ ಭೇದದಂತೆ ಎಂಬ ದೃಷ್ಟಾಂತದಿಂದಲೇ, ಸಾಧ್ಯತೇ= ಸಾಧಿಸಲ್ಪಡುತ್ತದೆ.

**ಅನುವಾದ-** 'ಭೇದೋ ಮಿಥ್ಯಾ ಭೇದತ್ವಾತ್ ಚಂದ್ರಭೇದವತ್' ಎಂಬ ಅನುಮಾನದಿಂದ ಭೇದ ಮಿಥ್ಯಾತ್ವವನ್ನು ಸಾಧಿಸುತ್ತೇವೆ ಎಂದು ಹೇಳಿದರೆ 'ಭೇದೋ ನ ಮಿಥ್ಯಾ ಭೇದತ್ವಾತ್ ಬ್ರಹ್ಮಮೋಕ್ಷಭೇದವತ್' ಎಂಬ ಅನುಮಾನದಿಂದ ನಾವು ಮಿಥ್ಯಾತ್ವಾಭಾವವನ್ನು ಸಾಧಿಸುತ್ತೇವೆ.

**ಭಾವವಿಲಾಸಿನೀ–** ನನ್ವನುಮಾನತೋ ಭೇದಮಾತ್ರಸ್ಯ ಮಿಥ್ಯಾತ್ವಸಿದ್ಧೇಃ ಕಥಂ ಭೇದೋಽಂಗೀಕ್ರಿಯತ ಇತ್ಯತಸ್ತದನೂದ್ಯ ಪ್ರಕರಣಸಮತಯಾ ದೂಷಯತಿ – **ಭೇದತ್ವಾದಿತಿ** ॥ **ಮೋಕ್ಷಃ** ಅವಿದ್ಯಾನಿವೃತ್ತಿಃ ॥ ೭೩೯ ॥

**ವಿವರಣೆ–** ಅನುಮಾನದಿಂದ ಭೇದಸಾಮಾನ್ಯಕ್ಕೆ ಮಿಥ್ಯಾತ್ವವು ಸಿದ್ಧವಾಗುವುದರಿಂದ ಹೇಗೆ ಭೇದವನ್ನು ಅಂಗೀಕರಿಸಲು ಸಾಧ್ಯ ಎಂದು ಶಂಕಿಸಿದರೆ, ಅನುಮಾನದಿಂದ ಭೇದ ಮಿಥ್ಯಾತ್ವವು ಸಿದ್ಧವಾಗುವುದಿಲ್ಲ, ಪ್ರತ್ಯನುಮಾನದಿಂದ ಭೇದ ಸತ್ಯತ್ವವನ್ನೇ ಸಾಧಿಸುತ್ತೇವೆ ಎಂದು ಇಲ್ಲಿ ಹೇಳುತ್ತಾರೆ.

**ಅವಿದ್ಯಾಯಾ ನಿವೃತ್ತೌ ಹಿ ಪ್ರಕಾರಃ ಪಂಚಮಸ್ತವ ।**
**ಅತೋಽರ್ವಾಗೇವ ಮಿಥ್ಯಾತ್ವಂ ತಸ್ಮಿನ್ ಯಕ್ಷೇ ಬಲಿಃ ಪೃಥಕ್ ॥ ೭೪೦ ॥**

**ಅರ್ಥ–** ತವ= ನಿನಗೆ, ಅವಿದ್ಯಾಯಾ ನಿವೃತ್ತೌ= ಅವಿದ್ಯಾನಿವೃತ್ತಿಯಲ್ಲಿ, ಪಂಚಮ ಪ್ರಕಾರಃ ಹಿ= ಪಂಚಮ ಪ್ರಕಾರವಷ್ಟೇ, ಅತೋಽರ್ವಾಗೇವ= ಆ ನಿವೃತ್ತಿಗಿಂತ ಮೊದಲೇ, ಮಿಥ್ಯಾತ್ವಂ= ಮಿಥ್ಯಾತ್ವವು ಇರುತ್ತದೆ, ತಸ್ಮಿನ್ ಯಕ್ಷೇ= ಆ ಅವಿದ್ಯಾನಿವೃತ್ತಿರೂಪವಾದ ಯಕ್ಷದಲ್ಲಿ, ಪೃಥಕ್= ಬೇರೆಯೇ, ಬಲಿಃ= ಪೂಜೆಯನ್ನು ಕೊಡಬೇಕಾಗುತ್ತದೆ.

**ಅನುವಾದ-** ಅವಿದ್ಯಾ ನಿವೃತ್ತಿಯಲ್ಲಿ ನೀನು ಪಂಚಮಪ್ರಕಾರವನ್ನು ಒಪ್ಪುತ್ತೀಯೆ. ಮಿಥ್ಯಾತ್ವವು ಅದಕ್ಕಿಂತ ಮೊದಲಿನ ಪ್ರಕಾರದಲ್ಲಿಯೇ ಇರುವಂತಹದು. ಆ ಅವಿದ್ಯಾನಿವೃತ್ತಿರೂಪವಾದ ಯಕ್ಷನಿಗೆ ಅದಕ್ಕೆ ಯೋಗ್ಯವಾದ ಬಲಿಯನ್ನೇ (ಪೂಜಾಸಮಾನವಾದ ಪ್ರಕಾರವನ್ನೇ) ಕೊಡಬೇಕಷ್ಟೇ.

**ಭಾವವಿಲಾಸಿನೀ–** ಬ್ರಹ್ಮಮೋಕ್ಷಭೇದಸ್ಯ ಮಿಥ್ಯಾತ್ವಾಭಾವಮುಪಪಾದಯತಿ ॥ **ಅವಿದ್ಯಾಯಾ ಇತಿ** ॥ ನಿವೃತ್ತೌ ಪ್ರಧ್ವಂಸೇ ತವ ಮತೇ ಪಂಚಮಃ ಪ್ರಕಾರಃ । ಅತಃ ಪಂಚಮಪ್ರಕಾರತ್ವಾತ್ । ಅತಃ ಅವಿದ್ಯಾ ಪ್ರಧ್ವಂಸಾತ್ । ಅರ್ವಾಗಸ್ತಾದಿತಿ ಯೋಜನಾ । ಯಕ್ಷೇ ಯಕ್ಷಸಮಾನೇ ।

ತಸ್ಮಿನ್ನವಿದ್ಯಾಪ್ರಧ್ವಂಸೇ । ಬಲಿಃ ಪೂಜಾಸಮಾನಃ ಪ್ರಕಾರಃ । ಯಥಾ ಯಜ್ಞೇ ಹರಿಹರಾದಿಬಲಿತೋ ಬಲಿಃ ಪೃಥಗೇವ । ತಥಾऽಸ್ಮಿನ್ನಪಿ ಪ್ರಕಾರಃ ಪೃಥಗೇವೇತಿ ಭಾವಃ । ಅನೇನ ನ ಸನ್ನಾಸನ್ನ ಸದಸನ್ನಾನಿರ್ವಾಚ್ಯಶ್ಚ ತಕ್ಷಯಃ । ಯಕ್ಷಾನುರುಪೋ ಬಲಿರಿತ್ಯಾಚಾರ್ಯಾಃ ಪ್ರತ್ಯಪೀಪದನ್ನಿತಿ ತದೀಯಕಾರಿಕಾಂ ಸೂಚಯತಿ । ಉಪಲಕ್ಷಣಂ ಚೈತತ್ । ಪ್ರಧ್ವಂಸಸ್ಯೋತ್ಪನ್ನತ್ವಾತ್ ಸಪ್ರತಿಯೋಗಿಕತ್ವಾತ್ ಬ್ರಹ್ಮಣಶ್ಚ ತದ್ವಿರುದ್ಧತ್ವಾತ್ ತದ್ಭೇದೋ ನ ಮಿಥ್ಯೇತ್ಯಪಿ ದ್ರಷ್ಟವ್ಯಮ್ ॥೭೪೦॥

**ವಿವರಣೆ–** ನಾವು ಹೇಳಿದ ಅನುಮಾನದಲ್ಲಿ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯವನ್ನು ಇಲ್ಲಿ ಪರಿಹರಿಸುತ್ತಾರೆ. ಬ್ರಹ್ಮ ಮತ್ತು ಅವಿದ್ಯಾ ನಿವೃತ್ತಿಗಳಿಗೆ ಭೇದವಿದೆ. ಆದ್ದರಿಂದ ಅಲ್ಲಿ ಭೇದತ್ವ ಹೇತುವಿದೆ. ಆದರೆ ಆ ಭೇದದಲ್ಲಿ ಮಿಥ್ಯಾತ್ವವಿಲ್ಲ. ಅವಿದ್ಯೆಯೇ ನಾಲ್ಕನೇ ಪ್ರಕಾರವಾದ ಮಿಥ್ಯಾತ್ವವನ್ನು ಹೊಂದಿರುವುದು. ಆ ಮಿಥ್ಯಾತ್ವವು ಸದಸದ್ವಿಲಕ್ಷಣತ್ವ ರೂಪವಾದುದು. ಪ್ರತಿಯೋಗಿಯೂ ಸದಸದ್ವಿಲಕ್ಷಣವಾಗಿರುವಾಗ ಅದರ ನಿವೃತ್ತಿಯೂ ಸದಸದ್ವಿಲಕ್ಷಣರೂಪವಾಗಿರುವುದಿಲ್ಲ ಎಂದು ಹೇಳಿ ಅದ್ವೈತಿಗಳು ಅವಿದ್ಯಾನಿವೃತ್ತಿಯನ್ನು ಸದಸದ್ವಿಲಕ್ಷಣವಿಲಕ್ಷಣ ಎಂದು ಅಂಗೀಕರಿಸುತ್ತಾರೆ. ಸದಸದ್ವಿಲಕ್ಷಣವಿಲಕ್ಷಣತ್ವವು ಮಿಥ್ಯಾತ್ವವಲ್ಲ. ಆದ್ದರಿಂದ ಅಲ್ಲಿ ಮಿಥ್ಯಾತ್ವಾಭಾವರೂಪವಾದ ಸಾಧ್ಯವು ಬರುತ್ತದೆ. ಆದ್ದರಿಂದ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯವಿಲ್ಲ. ಸತ್, ಅಸತ್, ಸದಸತ್, ಸದಸದ್ವಿಲಕ್ಷಣ, ಸದಸದ್ವಿಲಕ್ಷಣವಿಲಕ್ಷಣ ಎಂಬ ಐದು ಪ್ರಕಾರಗಳು ಅದ್ವೈತಿಗಳಿಗೆ ಅಭಿಪ್ರೇತವಾದವು. ಆದ್ದರಿಂದ ಅವಿದ್ಯವು ನಾಲ್ಕನೇ ಪ್ರಕಾರವು, ಅವಿದ್ಯಾನಿವೃತ್ತಿಯು ಐದನೇ ಪ್ರಕಾರವಾಗುತ್ತದೆ ಎಂದು ಅಭಿಪ್ರಾಯ.

ಅತೋऽವಿವಾದೋ ದೃಷ್ಟಾಂತೋ ಮಿಥ್ಯಾತ್ವಾಭಾವಸಾಧನೇ ।
ಶ್ರುತಿಃ ಸತ್ಯಂ ಭಿದೇತ್ಯಾದ್ಯಾ ಕುರ್ವತೀ ಶಪಥಂ ಹಿ ನಃ ॥ ೭೪೧ ॥

**ಅರ್ಥ–** ಅತಃ= ಆ ಕಾರಣದಿಂದ, ಮಿಥ್ಯಾತ್ವಾಭಾವಸಾಧನೇ= ಮಿಥ್ಯಾತ್ವಾಭಾವವನ್ನು ಸಾಧಿಸುವುದರಲ್ಲಿ, ದೃಷ್ಟಾಂತಃ= ದೃಷ್ಟಾಂತವು, ಅವಿವಾದಃ= ನಿರ್ವಿವಾದವಾಯಿತು, ಮತ್ತು, ನಃ= ನಮಗೆ, ಸತ್ಯಂಭಿದೇತ್ಯಾದ್ಯಾ ಶ್ರುತಿಃ= ಸತ್ಯಂಭಿದಾ ಎಂಬ ಶ್ರುತಿಯು, ಶಪಥಂ ಕುರ್ವತೀ ಹಿ= ಶಪಥವನ್ನು ಮಾಡುತ್ತಿದೆಯಷ್ಟೇ(ಶಪಥವನ್ನು ಮಾಡುವ ಶ್ರುತಿ ಇದೆಯಷ್ಟೇ).

**ಅನುವಾದ–** ಆದ್ದರಿಂದ ದೃಷ್ಟಾಂತದಲ್ಲಿ ಮಿಥ್ಯಾತ್ವಾಭಾವವು ಇರುವುದರಲ್ಲಿ ಉಭಯ ವಾದಿಗಳಿಗೆ ಯಾವ ವಿವಾದವೂ ಇಲ್ಲ. ಜೊತೆಗೆ ನಮಗಂತೂ ಸತ್ಯಂಭಿದಾ ಎಂಬ ಶಪಥವನ್ನು ಮಾಡುವ ಶ್ರುತಿಯು ಭೇದದ ಮಿಥ್ಯಾತ್ವಾಭಾವವನ್ನೇ ಹೇಳುತ್ತದೆ.

**ಭಾವವಿಲಾಸಿನೀ–** ಅತಃ ಉಭಯವಾದಿಸಮ್ಮತತ್ವಾತ್ । ಅವಿವಾದಃ ವಿವಾದರಹಿತಃ । ಸತ್ಯಂ ಭಿದೇತಿ ತ್ರಿಶಃ ಕಥನಾತ್ ಶಪಥಂ ಕುರ್ವತೀತ್ಯುಕಮ್ । ನಃ ಅಸ್ತಿ । ಅಸ್ಮದನುಮಾನಾನುಗ್ರಾಹಿಕೇತ್ಯರ್ಥಃ ॥ ೭೪೧ ॥

**ವಿವರಣೆ–** ನಮ್ಮ ಅನುಮಾನದ ದೃಷ್ಟಾಂತದಲ್ಲಿ ಸಾಧ್ಯಸತ್ತ್ವವನ್ನು ಅದ್ವೈತಿಗಳು ಮತ್ತು ನಾವು ಒಪ್ಪಿರುವುದರಿಂದ ಇಲ್ಲಿ ಸಾಧ್ಯವೈಕಲ್ಯಕ್ಕೆ ಅವಕಾಶವಿಲ್ಲ. ಜೊತೆಗೆ ಭೇದ ಸತ್ಯತ್ವ ಸಾಧಕ ಅನುಮಾನವು ಶ್ರುತಿಯ ಸಂವಾದದಿಂದ ಕೂಡಿ ಪ್ರಬಲವಾಗಿದೆ. ಶ್ರುತಿಯಾದರೂ ಸತ್ಯಂಭಿದಾ, ಸತ್ಯಂಭಿದಾ, ಸತ್ಯಂಭಿದಾ ಎಂದು ಮೂರು ಬಾರಿ ಹೇಳಿ. ಭೇದಸತ್ಯತ್ವವನ್ನು ಶಪಥ ಮಾಡುತ್ತಿದೆ. ಆದ್ದರಿಂದ ಭೇದಸತ್ಯತ್ವ ಸಿದ್ಧಿಗೆ ಯಾವ ತೊಂದರೆಯೂ ಇಲ್ಲ ಎಂದು ಅಭಿಪ್ರಾಯ.

**ಶೂನ್ಯಬ್ರಹ್ಮವಿಭೇದೋ ವಾ ದೃಷ್ಟಾಂತಸ್ತತ್ರ ಕಥ್ಯತೇ ।**
**ತದ್ಭೇದಸ್ಯಾಪಿ ಮಿಥ್ಯಾತ್ವೇ ಬ್ರಹ್ಮ ಶೂನ್ಯಂ ಭವೇತ್ ತವ ॥ ೭೪೨ ॥**

**ಅರ್ಥ–** ವಾ= ಅಥವಾ, ತತ್ರ= ಆ ಅನುಮಾನದಲ್ಲಿ, ಶೂನ್ಯಬ್ರಹ್ಮವಿಭೇದಃ= ಶೂನ್ಯಬ್ರಹ್ಮ ಭೇದವು, ದೃಷ್ಟಾಂತಃ= ದೃಷ್ಟಾಂತವು, ಕಥ್ಯತೇ= ಹೇಳಲ್ಪಡುತ್ತದೆ, ತದ್ಭೇದಸ್ಯಾಪಿ= ಆ ಭೇದವೂ ಸಹ, ಮಿಥ್ಯಾತ್ವೇ= ಮಿಥ್ಯಾ ಎಂದಾದರೆ, ತವ ಬ್ರಹ್ಮ= ನಿನ್ನ ಬ್ರಹ್ಮನು, ಶೂನ್ಯಂ ಭವೇತ್= ಶೂನ್ಯನೇ ಆಗುತ್ತಾನೆ.

**ಅನುವಾದ–** ನಮ್ಮ ಅನುಮಾನದಲ್ಲಿ ಬ್ರಹ್ಮ ಮೋಕ್ಷ ಭೇದದ ಬದಲಾಗಿ ಬ್ರಹ್ಮಶೂನ್ಯ ಭೇದವನ್ನು ದೃಷ್ಟಾಂತವಾಗಿ ಹೇಳುತ್ತೇನೆ. ಬ್ರಹ್ಮಶೂನ್ಯಗಳ ಭೇದವು ಮಿಥ್ಯಾ ಎಂದು ಹೇಳಿದರೆ ನಿನ್ನ ಬ್ರಹ್ಮನು ಶೂನ್ಯನಾಗುತ್ತಾನೆ.

**ಭಾವವಿಲಾಸಿನೀ–** ತತ್ರ ಭೇದಮಿಥ್ಯಾತ್ವಾಭಾವೋ ॥ ೭೪೨ ॥

**ವಿವರಣೆ–** ಬ್ರಹ್ಮ ಶೂನ್ಯಗಳಿಗೆ ಭೇದವಿಲ್ಲವೆಂದರೆ ಅಭೇದವಿದೆ ಎಂದಾಯಿತು. ಅದರಿಂದ ಬ್ರಹ್ಮನು ಶೂನ್ಯ ಎಂದಾಗುತ್ತಾನೆ ಎಂಬ ಅತಿಪ್ರಸಂಗವು ಬರುವುದರಿಂದ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯವನ್ನು ಉದ್ಭಾವನೆ ಮಾಡಬಾರದು. ಆದ್ದರಿಂದ ನಿರ್ದುಷ್ಟವಾದ ನಮ್ಮ ಅನುಮಾನದಿಂದ ಭೇದಸತ್ಯತ್ವವು ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

**ಸತ್ಯೋ ಭೇದಃ ಸಾಧ್ಯವಾನ್ನ ಮಿಥ್ಯಾಚ್ಚೇದ್ಧೇತುಮಾನ್ ನ ಮೇ ।**
**ರಜ್ಜುಸರ್ಪೋ ನ ಯತ್ ಸರ್ಪಸ್ತದ್ಭೇದಂ ಭೀಷಯೇದ್ಧಿ ಕಃ ॥ ೭೪೩ ॥**

**ಅರ್ಥ–** ಸತ್ಯೋ ಭೇದಃ= ದೃಷ್ಟಾಂತವಾಗಿ ಹೇಳಿದ ಭೇದವು ಸತ್ಯಭೇದವಾದರೆ, ಸಾಧ್ಯವಾನ್ನ= ಅಲ್ಲಿ ಸಾಧ್ಯವು ಇಲ್ಲ, ಮಿಥ್ಯಾಚೇತ್= ಅದು ಮಿಥ್ಯೆಯಾದರೆ, ಮೇ= ನನ್ನ ಮತದಂತೆ, ಹೇತುಮಾನ್ ನ= ಅಲ್ಲಿ ಹೇತುವಿಲ್ಲ, ಯತ್= ಯಾವ ಕಾರಣದಿಂದ, ರಜ್ಜು ಸರ್ಪಃ= ರಜ್ಜುಸರ್ಪವು, ಸರ್ಪೋ ನ= ಸರ್ಪವಲ್ಲವೋ, ಆದ್ದರಿಂದ, ತದ್ಭೇದಂ= ಆರೋಪಿತ ಅನಾರೋಪಿತ ಭೇದವನ್ನು, ಕಃ ಭೀಷಯೇದ್ಧಿ= ಯಾವನು ತಾನೇ ಹೆದರಿಸುತ್ತಾನೆ.

**ಅನುವಾದ–** ದೃಷ್ಟಾಂತವನ್ನಾಗಿ ಹೇಳಿದ ಚಂದ್ರಭೇದವು ಸತ್ಯವೋ ಅಥವಾ ಮಿಥ್ಯವೋ? ಅದು ಸತ್ಯವಾದರೆ ಅಲ್ಲಿ ಮಿಥ್ಯಾತ್ವರೂಪವಾದ ಸಾಧ್ಯವಿಲ್ಲ. ಮಿಥ್ಯೆಯಾದರೆ ಅಲ್ಲಿ ಭೇದತ್ವರೂಪವಾದ ಹೇತುವಿಲ್ಲ. ಏಕೆಂದರೆ ರಜ್ಜು ಸರ್ಪವು ಸರ್ಪವಲ್ಲವಷ್ಟೇ? ಆದ್ದರಿಂದ ಭೇದವನ್ನು ಯಾರು ಹೆದರಿಸಲು (ಬಾಧಿಸಲು) ಸಾಧ್ಯ?

**ಭಾವವಿಲಾಸಿನೀ–** ಸತ್ಯಭೇದಸ್ಯ ದೃಷ್ಟಾಂತೀಕರಣೇ ಸಾಧ್ಯವೈಕಲ್ಯಮ್ । ಮಿಥ್ಯಾಭೂತಭೇದಸ್ಯ ದೃಷ್ಟಾಂತೀಕರಣೇ ಸಾಧನವೈಕಲ್ಯಮ್ । ಅತಃ ಪರಸ್ಯ ದೃಷ್ಟಾಂತ ಏವ ನಾಸ್ತೀತ್ಯಾಹ–**ಸತ್ಯ** ಇತಿ ॥ ಸಾಧ್ಯವಾನ್ ಮಿಥ್ಯಾತ್ವಾರೂಪಸಾಧ್ಯವಾನ್ । ಹೇತುಮಾನ್ ಭೇದತ್ವರೂಪಹೇತುಮಾಹ । ಮೇ ಮತೇ। ಯದ್ಯಸ್ಮಾತ್ ರಜ್ಜುಸ್ಸರ್ಪಃಸರ್ಪೋ ನ ಸರ್ಪತ್ವಜಾತ್ಯಾಕ್ರಾಂತೋ ನ । ತಸ್ಮಾನ್ಮಿಥ್ಯಾ ಚೇತ್ ಹೇತುಮಾನ್ನೇತಿ ಸಂಬಂಧಃ । ಅತಸ್ಮಿಂಸ್ತದಿತಿ ಪ್ರತ್ಯಯೋ ಹಿ ಭ್ರಮಃ । ಅತಃ ಕಥ-ಮಾರೋಪಿತಭೇದೋ ಭೇದತ್ವವಾನಿತಿ ಭಾವಃ ॥ ೭೪೩ ॥

**ವಿವರಣೆ–** 'ಭೇದೋ ಮಿಥ್ಯಾ ಭೇದತ್ವಾತ್ ಚಂದ್ರಭೇದವತ್' ಎಂಬ ಅದ್ವೈತಿಗಳ ಅನುಮಾನದಲ್ಲಿ ದೃಷ್ಟಾಂತವಾಗಿ ಹೇಳಲ್ಪಟ್ಟ ಚಂದ್ರಭೇದವು ಸತ್ಯವೆಂದಾದರೆ ಸಾಧ್ಯವೈಕಲ್ಯವು ಬರುತ್ತದೆ. ಮಿಥ್ಯಾ ಎಂದಾದರೆ ಸತ್ಯ ಮತ್ತು ಮಿಥ್ಯಗಳಿಗೆ ಒಂದು ಸಾಧಾರಣವಾದ ಧರ್ಮವೇ ಇಲ್ಲದಿರುವುದರಿಂದ ಅಲ್ಲಿ ಭೇದತ್ವವೇ ಇಲ್ಲದಿರುವುದರಿಂದ ಸಾಧನವೈಕಲ್ಯವು ಬರುತ್ತದೆ. ಆದ್ದರಿಂದ ಭೇದಸತ್ಯತ್ವವನ್ನು ಯಾರು ಬಾಧಿಸಲು ಸಾಧ್ಯ ಎಂದು ಅಭಿಪ್ರಾಯ.

ಯತಃ ಸಪಕ್ಷಪಕ್ಷೀ ತೇ ಭೇದಮಿಥ್ಯಾತ್ವಸಾಧನೇ ।
ಛಿನ್ನಪಕ್ಷದ್ವಯೋಽಪ್ಯಾಸೀತ್ತನ್ನೋತ್ಸರ್ಪೇತ್ಸ ಕುತ್ರಚಿತ್ ॥ ೭೪೪ ॥

**ಅರ್ಥ–** ಯತಃ= ಯಾವ ಕಾರಣದಿಂದ, ಭೇದಮಿಥ್ಯಾತ್ವಸಾಧನೇ= ಭೇದಮಿಥ್ಯಾತ್ವವನ್ನು ಸಾಧನೆ ಮಾಡುವ ನಿನ್ನ ಅನುಮಾನದಲ್ಲಿ, ಸಪಕ್ಷಪಕ್ಷೀ= ದೃಷ್ಟಾಂತವಾದ ಸಪಕ್ಷವೆಂಬ ಪಕ್ಷಿಯು, ಛಿನ್ನಪಕ್ಷದ್ವಯೋಽಪಿ ಆಸೀತ್= ಸಾಧ್ಯ ಮತ್ತು ಸಾಧನಶೂನ್ಯವಾದ್ದರಿಂದ ಎರಡು ರೆಕ್ಕೆಗಳನ್ನೂ ಕಳೆದುಕೊಂಡಿತು, ತತ್= ಆ ಕಾರಣದಿಂದ, ಸಃ= ಆ ಪಕ್ಷಿಯು, ಕುತ್ರಚಿತ್= ಎಲ್ಲಿಯೂ, ನ ಉತ್ಸರ್ಪೇತ್= ಹಾರುವುದಿಲ್ಲ.

**ಅನುವಾದ–** ಭೇದಮಿಥ್ಯಾತ್ವವನ್ನು ಸಾಧನೆ ಮಾಡುವ ನಿನ್ನ ಅನುಮಾನದಲ್ಲಿ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯವು ಮತ್ತು ಸಾಧನವೈಕಲ್ಯವು ಬರುವುದರಿಂದ ಎರಡು ರೆಕ್ಕೆಗಳನ್ನು ಕತ್ತರಿಸಿದಂತೆ ಆಗುವುದರಿಂದ ಆ ದೃಷ್ಟಾಂತವೆಂಬ ಪಕ್ಷಿಯು ಎಲ್ಲಿಯೂ ಹಾರಿಹೋಗುವುದಿಲ್ಲ.

**ಭಾವವಿಲಾಸಿನೀ**– ಉಕ್ತಮರ್ಥಂ ಸಾಹಿತ್ಯಮುದ್ರಯಾ ವರ್ಣಯತಿ – **ಯತ ಇತಿ** ॥ ಸಪಕ್ಷಪಕ್ಷೇ ಚಂದ್ರಭೇದಾಖ್ಯ ಸಪಕ್ಷಪಕ್ಷೇ ಭಿನ್ನಪಕ್ಷದ್ವಯಃ ಭಿನ್ನಂ ಸಾಧ್ಯಸಾಧನವೈಕಲ್ಯಾಭ್ಯಾಂ ದೂಷಿತಂ, ಪಕ್ಷದ್ವಯಂ ಸತ್ಯತ್ವಮಿಥ್ಯಾತ್ವಾಖ್ಯಪಕ್ಷದ್ವಯಂ ಯಸ್ಯ । ತ್ವಯಾ ದೃಷ್ಟಾಂತೀಕೃತಶ್ಚಂದ್ರಭೇದಃ ಸತ್ಯತ್ವೇಽಪಿ ಮಿಥ್ಯಾತ್ವೇಽಪಿ ನ ದೃಷ್ಟಾಂತೋಽಭೂದಿತಿ ಭಾವಃ । ತತ್ತಸ್ಮಾತ್ । ಉತ್ಸರ್ಪೇತ್ ಊರ್ಧ್ವಂ ಗಚ್ಛೇತ್ । ಸಾಧ್ಯಸಿದ್ಧ್ಯುಪಯೋಗೀ ನೇತಿ ಯಾವತ್ । ಸಃ ಸಪಕ್ಷಃ ॥ ೭೪೪ ॥

**ವಿವರಣೆ**– ಚಂದ್ರಭೇದ ದೃಷ್ಟಾಂತದಿಂದ ಭೇದಮಿಥ್ಯಾತ್ವವನ್ನು ಸಾಧಿಸಲು ಶಕ್ಯವಾಗುವುದಿಲ್ಲ ಎಂದು ಅಭಿಪ್ರಾಯ.

ಚಂದ್ರಭೇದೋಪಿ ಕೋವಾಸೌ ಯೋ ದೃಷ್ಟಾಂತಸ್ತ್ವಯೇರಿತಃ ।
ಆರೋಪಿತಾನಾರೋಪಿತಯೋರ್ಭೇದಶ್ಚೇತ್ಸ ಹಿ ಮನ್ಮತೇ ।
ಸತ್ಯ ಏವೇತಿ ಸಾಧ್ಯಸ್ಯ ವೈಕಲ್ಯಂ ಸ್ಯಾನ್ನಿದರ್ಶನೇ ॥ ೭೪೫ ॥

**ಅರ್ಥ**– ತ್ವಯೇರಿತಃ= ನಿನ್ನಿಂದ ಹೇಳಲ್ಪಟ್ಟ, ದೃಷ್ಟಾಂತಃ= ದೃಷ್ಟಾಂತವಾದ, ಅಸೌ ಚಂದ್ರಭೇದೋಪಿ= ಈ ಚಂದ್ರಭೇದವಾದರೂ, ಕೋವಾ= ಯಾವುದು? ಆರೋಪಿತಾನಾರೋಪಿತಯೋರ್ಭೇದಶ್ಚೇತ್= ಆರೋಪಿತ ಅನಾರೋಪಿತಗಳ ಭೇದವಾದರೆ, ಸಃ= ಅದು, ಮನ್ಮತೇ= ನನ್ನ ಮತದಲ್ಲಿ, ಸತ್ಯ ಏವ ಹಿ= ಸತ್ಯವೇ ಆಗಿದೆಯಷ್ಟೇ, ಇತಿ= ಎಂಬ ಕಾರಣದಿಂದ, ನಿದರ್ಶನೇ= ದೃಷ್ಟಾಂತದಲ್ಲಿ, ಸಾಧ್ಯಸ್ಯ ವೈಕಲ್ಯಂ= ಸಾಧ್ಯವೈಕಲ್ಯವು ಉಂಟಾಗುತ್ತದೆ.

**ಅನುವಾದ**- ನೀನು ದೃಷ್ಟಾಂತವಾಗಿ ಹೇಳಿದ ಈ ಚಂದ್ರಭೇದವಾದರೂ ಯಾವುದು? ಅದು ಆರೋಪಿತ ಅನಾರೋಪಿತ ಚಂದ್ರಗಳ ಭೇದವಾದರೆ ನನ್ನ ಮತದಲ್ಲಿ ಅದು ಸತ್ಯವಾಗಿರುವ ಕಾರಣ ನಿನ್ನ ದೃಷ್ಟಾಂತಕ್ಕೆ ಸಾಧ್ಯವೈಕಲ್ಯವು ಬರುತ್ತದೆ.

**ಭಾವವಿಲಾಸಿನೀ**– ಪೂರ್ವಂ ಯೋ ವಾ ಕೋ ವಾ ಚಂದ್ರಭೇದೋಸ್ತು । ಉಕ್ತರೀತ್ಯಾ ಪಕ್ಷದ್ವಯೇಽಪಿ ಸದ್ದೃಷ್ಟಾಂತೋಽನೇತ್ಯುಕ್ತಮ್ । ಅಧುನಾಽಽರೋಪಿತಾನಾರೋಪಿತ-ಚಂದ್ರಭೇದೋ ವಾ ದೃಷ್ಟಾಂತೀಕ್ರಿಯತೇ । ಆರೋಪಿತಚಂದ್ರಾಣಾಮೇವ ಪರಸ್ಪರಭೇದೋ ವೇತಿ ವಿಕಲ್ಪ್ಯ ದ್ವಿವಿಧೋಽಪಿ ಸದ್ದೃಷ್ಟಾಂತೋ ನೇತ್ಯಾಹ – **ಚಂದ್ರಭೇದ ಇತಿ** ॥ ಆರೋಪಿತಾನಾರೋಪಿತ ಚಂದ್ರಭೇದಃ ॥ ೭೪೫ ॥

ನಾಯಾಮಾರೋಪಿತಶ್ಚಂದ್ರ ಇತಿ ಸಚ್ಚಂದ್ರಧರ್ಮಿಕಃ ।
ಆರೋಪಿತಾತ್ ತು ಯೋ ಭೇದಃ ಸ ಸತ್ಯಃ ಸರ್ವವಾದಿನಾಂ ॥ ೭೪೪ ॥

**ಅರ್ಥ**– ಅಯಂ ಚಂದ್ರಃ= ಈ ಚಂದ್ರನು, ನ ಆರೋಪಿತಃ= ಆರೋಪಿತನಲ್ಲ, ಇತಿ= ಎಂದು, ಸಚ್ಚಂದ್ರಧರ್ಮಿಕಃ= ಸತ್ಯವಾದ ಚಂದ್ರನಲ್ಲಿರುವ, ಆರೋಪಿತಾತ್= ಆರೋಪಿತ

ಚಂದ್ರ ಪ್ರತಿಯೋಗಿಕವಾದ, ಯೋ ಭೇದಃ= ಯಾವ ಭೇದವಿದೆಯೋ, ಸಃ= ಅದು, ಸರ್ವವಾದಿನಾಂ= ಎಲ್ಲ ವಾದಿಗಳ ಪಕ್ಷದಲ್ಲಿಯೂ, ಸತ್ಯಃ= ಸತ್ಯವೇ ಆಗಿದೆ.

**ಅನುವಾದ-** ವಾಸ್ತವ ಚಂದ್ರನಲ್ಲಿ ಇವನು ಆರೋಪಿತಚಂದ್ರನಲ್ಲ ಎಂದು ಯಾವ ಆರೋಪಿತ ಚಂದ್ರ ಪ್ರತಿಯೋಗಿಕವಾದ ಭೇದವು ಇದೆಯೋ ಅದು ಎಲ್ಲ ವಾದಿಗಳ ರೀತಿಯಲ್ಲಿಯೂ ಸತ್ಯವೇ ಆಗಿದೆ.

**ಭಾವವಿಲಾಸಿನೀ–** ಆರೋಪಿತಪ್ರತಿಯೋಗಿಕಾನಾರೋಪಿತಧರ್ಮಿಕಚಂದ್ರಭೇದಸ್ಯ ಸತ್ಯತಾಮುಪಪಾದಯತಿ – **ನಾಯಮಿತಿ** ॥ ೭೪೪ ॥

**ಸತಸ್ತಾದಾತ್ಮ್ಯಯೋಗ್ಯತ್ವಾದ್ ಭ್ರಾಂತಾಭ್ರಾಂತೈಕ್ಯಶಂಕಯಾ ।**
**ತನ್ನಿಷೇಧಸ್ಯ ಔಚಿತ್ಯಾದ್ ಭೇದಧೀಃ ಸಾ ಹ್ಯಬಾಧಿತಾ ॥ ೭೪೭ ॥**

**ಅರ್ಥ–** ಸತಃ= ವಿದ್ಯಮಾನವಾದ ಪದಾರ್ಥಕ್ಕೆ, ತಾದಾತ್ಮ್ಯಯೋಗ್ಯತ್ವಾತ್= ತಾದಾತ್ಮ್ಯ ಯೋಗ್ಯತೆಯು ಇರುವುದರಿಂದ, ಭ್ರಾಂತಾತ್= ಭ್ರಾಂತಿ ವಿಷಯಪದಾರ್ಥದಿಂದ, ಭ್ರಾಂತೈಕ್ಯಶಂಕಯಾ= ಭ್ರಾಂತ ವಿಷಯದ ತಾದಾತ್ಮ್ಯ ಶಂಕೆಯಿಂದ, ತನ್ನಿಷೇಧಸ್ಯ= ಅದರ ನಿಷೇಧವು, ಔಚಿತ್ಯಾತ್= ಉಚಿತವಾಗುವುದರಿಂದ, ಸಾ ಭೇದಧೀಃ= ಆ ಭೇದ ಪ್ರತೀತಿಯು, ಅಬಾಧಿತಾ ಹಿ= ಅಬಾಧಿತವೇ ಆಗುವುದಷ್ಟೇ.

**ಅನುವಾದ-** ವಿದ್ಯಮಾನವಾದ ಪದಾರ್ಥಕ್ಕೆ ತಾದಾತ್ಮ್ಯ ಯೋಗ್ಯತೆಯು ಇರುವುದರಿಂದ ಭ್ರಾಂತಿಪ್ರತಿಪನ್ನವಾದ ಪದಾರ್ಥದ ಐಕ್ಯಶಂಕೆಯು ಅಲ್ಲಿ ಬರಬಹುದಾದ್ದರಿಂದ ಆ ಆರೋಪಿತ ಪದಾರ್ಥದ ತಾದಾತ್ಮ್ಯ ನಿಷೇಧವು ಯುಕ್ತವಾಗಿಯೇ ಇದೆ. ಆ ಭೇದ ಪ್ರತೀತಿಯು ಅಬಾಧಿತವಾಗಿಯೇ ಇರುವುದಷ್ಟೇ?

**ಭಾವವಿಲಾಸಿನೀ–** ತಾದಾತ್ಮ್ಯಯೋಗ್ಯತ್ವಾತ್ ಸಸ್ವರೂಪತಯಾ ಸ್ವತಾದಾತ್ಮ್ಯಸ್ಯೈವ ವಿದ್ಯಮಾನತ್ವಾದಿತ್ಯರ್ಥಃ । ಭ್ರಾಂತ್ಯಕ್ಯಶಂಕಯಾ ಭ್ರಾಂತಿಕಲ್ಪಿತಸ್ಯಾರೋಪಿತ ಚಂದ್ರಸ್ಯಾಪಿ ಚಂದ್ರತಯಾ ಪ್ರತೀಯಮಾನತ್ವೇನ ತತ್ತಾದಾತ್ಮ್ಯಶಂಕಯಾ । ತನ್ನಿಷೇಧಸ್ಯ ಆರೋಪಿತ-ಚಂದ್ರತಾದಾತ್ಮ್ಯನಿಷೇಧಸ್ಯ । ಔಚಿತ್ಯಾತ್ ಸಸ್ವರೂಪತಯಾ ತಾದಾತ್ಮ್ಯಯೋಗ್ಯೇ ಸಚ್ಚಂದ್ರೇ ತಸ್ಯಾಪಿ ತಾದಾತ್ಮ್ಯಸ್ಯ ಭ್ರಾಂತ್ಯಾ ಪ್ರಸಕ್ತತ್ವೇನ ನಿಷೇಧಾವಶ್ಯಂಭಾವಾದಿತ್ಯರ್ಥಃ । ಸಾ ಅನಾ-ರೋಪಿತಚಂದ್ರಧರ್ಮಿಕಭೇದವಿಷಯಿಣೀ । ಅಬಾಧಿತಾ ವಿಷಯಬಾಧರಹಿತಾ ॥ ೭೪೭ ॥

**ವಿವರಣೆ–** ಅದ್ವೈತಿಗಳ ಅನುಮಾನಕ್ಕೆ ಹೇಳಿದ ಸಾಧ್ಯವೈಕಲ್ಯವನ್ನೇ ಈ ಪ್ರಕರಣದ ಶ್ಲೋಕಗಳಿಂದ ಸಮರ್ಥನೆ ಮಾಡುತ್ತಿದ್ದಾರೆ.

**ಸ ಚ ಸ್ವರೂಪತೋಽಸ್ತ್ಯೇವ ಪರಂ ನಾಸ್ತೀತರಾತ್ಮನಾ ।**
**ಅತಸ್ತತ್ರ ಸದಾಽನ್ಯಸ್ಮಾದ್ ಭೇದಾವಸರ ಏವ ಹಿ ॥ ೭೪೮ ॥**

**ಅರ್ಥ–** ಸ ಚ= ಆ ವಾಸ್ತವ ಚಂದ್ರನಾದರೂ, ಸ್ವರೂಪತಃ= ತನ್ನ ಸ್ವರೂಪದಿಂದ, ಅಸ್ತ್ಯೇವ= ಇದ್ದೇ ಇದ್ದಾನೆ, ಪರಂ= ಆದರೆ, ಇತರಾತ್ಮನಾ= ಇತರ ರೂಪದಿಂದ, ನಾಸ್ತಿ= ಇಲ್ಲ, ಅತಃ= ಆದ್ದರಿಂದ, ತತ್ರ ಅನ್ಯಸ್ಮಾತ್= ಅವನಲ್ಲಿ ಬೇರೆ ಇನ್ನೊಂದು ವಸ್ತುವಿನಿಂದ, ಭೇದಾವಸರ ಏವ ಹಿ= ಭೇದದ ಅವಕಾಶವು ಇದ್ದೇ ಇದೆ.

**ಅನುವಾದ–** ವಾಸ್ತವ ಚಂದ್ರನಾದರೂ ಸ್ವರೂಪತಃ ಇದ್ದೇ ಇದ್ದಾನೆ. ಆದರೆ ಅನ್ಯಾತ್ಮನಾ ಇಲ್ಲ. ಆದ್ದರಿಂದ ಅಲ್ಲಿ ಯಾವಾಗಲೂ ಅನ್ಯತಾದಾತ್ಮ್ಯದ ಪ್ರಸಕ್ತಿ ಇದ್ದೇ ಇರುವುದರಿಂದ ಅದನ್ನು ನಿಷೇಧ ಮಾಡಲು ಭೇದವನ್ನು ಒಪ್ಪುವುದಕ್ಕೆ ಅವಕಾಶವು ಇದ್ದೇ ಇದೆ.

**ಭಾವವಿಲಾಸಿನೀ–** ಸಾಃ ಅನಾರೋಪಿತಚಂದ್ರಃ । ಅನ್ಯಸ್ಮಾತ್ಸ್ವವಿಲಕ್ಷಣಾತ್ । ಆರೋಪಿತಚಂದ್ರಾದನಾರೋಪಿತಘಟಾದೇಶ್ಚ । ಪ್ರಸಕ್ತಸ್ಯಾವಿದ್ಯಮಾನಸ್ಯ ಚ ತಾದಾತ್ಮ್ಯಸ್ಯಾವಶ್ಯಂ ನಿಷೇಧ್ಯತ್ವಾತ್ । ಅತಃ ಪ್ರಥಮಪಕ್ಷೇ ದೃಷ್ಟಾಂತೇ ಪ್ರತಿವಾದಿನಃ ಸಾಧ್ಯವೈಕಲ್ಯಮಿತಿ ಭಾವಃ ॥ ೭೪೮ ॥

**ಯದ್ಯಾರೋಪಿತಚಂದ್ರಾಣಾಮೇವ ಭೇದಃ ಪರಸ್ಪರಂ ।**
**ತದಾಂ ಸಾಧನವೈಕಲ್ಯಂ ದೃಷ್ಟಾಂತೇ ಪ್ರತಿವಾದಿನಃ ॥ ೭೪೯ ॥**

**ಅರ್ಥ–** ಯದಿ= ಒಂದು ಪಕ್ಷ, ಆರೋಪಿತಚಂದ್ರಾಣಾಮೇವ= ಆರೋಪಿತ ಚಂದ್ರರಿಗೆ, ಪರಸ್ಪರಂ ಭೇದಃ= ಪರಸ್ಪರ ಭೇದವು, ದೃಷ್ಟಾಂತವಾದರೆ, ತದಾ= ಆಗ, ಪ್ರತಿವಾದಿನಃ= ಪ್ರತಿವಾದಿಯಾದ ನನ್ನ ರೀತಿಯಿಂದ, ದೃಷ್ಟಾಂತೇ= ದೃಷ್ಟಾಂತದಲ್ಲಿ, ಸಾಧನವೈಕಲ್ಯಂ= ಸಾಧನವೈಕಲ್ಯದೋಷವು ಬರುತ್ತದೆ.

**ಅನುವಾದ–** ಎರಡು ಆರೋಪಿತ ಚಂದ್ರಗಳ ಭೇದವನ್ನೇ ದೃಷ್ಟಾಂತವಾಗಿ ಹೇಳಿದರೆ ಆಗ ಅಲ್ಲಿ ಪ್ರತಿವಾದಿಯಾದ ನಾನು ಭೇಗತ್ವರೂಪ ಹೇತುವನ್ನು ಅಂಗೀಕರಿಸದೇ ಇರುವುದರಿಂದ ದೃಷ್ಟಾಂತದಲ್ಲಿ ಸಾಧನವೈಕಲ್ಯದೋಷವು ಬರುತ್ತದೆ.

**ಭಾವವಿಲಾಸಿನೀ–** ದ್ವಿತೀಯಂ ದೂಷಯತಿ – ಯದೀತಿ ॥ ೭೪೯ ॥

**ವಿವರಣೆ–** ಎರಡು ಆರೋಪಿತ ವಸ್ತುಗಳಿಗೆ ಪರಸ್ಪರವಾಗಿ ಭೇದವು ಏಕೆ ಇಲ್ಲ? ಭೇದವಿದ್ದರೆ ತಾನೇ ಅದರಲ್ಲಿ ಭೇದತ್ವ ಬರುವುದು ಎಂಬ ಈ ಅಂಶವನ್ನು ಮುಂದಿನ ಶ್ಲೋಕಗಳಿಂದ ಸಮರ್ಥನೆ ಮಾಡುತ್ತಾರೆ.

**ಅನ್ಯೋನ್ಯಾಭಾವಭೇದೋಽಯಂ ನ ಹ್ಯಸತ್ಯೇಷು ಮನ್ಯತೇ ॥ ೭೫೦ ॥**

**ಅರ್ಥ–** ಮನ್ಮತೇ= ನನ್ನ ಮತದಲ್ಲಿ, ಅಯಂ ಅನ್ಯೋನ್ಯಾಭಾವಭೇದಃ= ಈ ಅನ್ಯೋನ್ಯಾಭಾವರೂಪವಾದ ಭೇದವು, ಅಸತ್ಯೇಷು= ಅಸತ್ಯವಾದವುಗಳಲ್ಲಿ, ನ= ಇಲ್ಲ.

**ಅನುವಾದ-** ನನ್ನ ಮತದಲ್ಲಿ ಅಸತ್ಯವಾದ ಪದಾರ್ಥಗಳಲ್ಲಿ ಅನ್ಯೋನ್ಯಾಭಾವರೂಪವಾದ ಭೇದವಿಲ್ಲ.

**ಭಾವವಿಲಾಸಿನೀ–** ಸಾಧನವೈಕಲ್ಯಮೇವೋಪಪಾದಯತಿ**–ಅನ್ಯೋನ್ಯೇತಿ** ॥ ಅನ್ಯೋನ್ಯಾಭಾವಭೇದಃ ಅನ್ಯೋನ್ಯಾಭಾವಾಖ್ಯಭೇದಃ ॥ ೭೫೦ ॥

**ಯದಾ ಧರ್ಮ್ಯೇವ ನೈವಾಸ್ತಿ ತದಾ ತಸ್ಯೈವ ನಾಸ್ತಿತಾ ।**
**ತತ್ರಾನ್ಯೋನ್ಯಾತ್ಮತಾಽಭಾವೋ ಹ್ಯಪ್ರಸಕ್ತನಿಷೇಧನಮ್** ॥ ೭೫೧ ॥

**ಅರ್ಥ–** ಯದಾ= ಯಾವಾಗ, ಧರ್ಮ್ಯೇವ ನೈವಾಸ್ತಿ= ಧರ್ಮಿಯೇ ಇಲ್ಲವೋ, ತದಾ= ಆಗ, ತಸ್ಯೈವ ನಾಸ್ತಿತಾ= ಧರ್ಮಿಗೇ ಅಭಾವವು ಉಂಟಾಗುತ್ತದೆ, ತತ್ರ= ಅಲ್ಲಿ, ಅನ್ಯೋನ್ಯಾತ್ಮತಾ ಭಾವಃ= ಅನ್ಯೋನ್ಯ ತಾದಾತ್ಮ್ಯಾಭಾವವು, ಅಪ್ರಸಕ್ತನಿಷೇಧನಂ ಹಿ= ಅಪ್ರಸಕ್ತ ಪ್ರತಿಷೇಧನವಷ್ಟೇ.

**ಅನುವಾದ-** ಧರ್ಮಿಯೇ ಇಲ್ಲದಿರುವಾಗ ಅದರ ಸ್ವರೂಪವೇ ಇಲ್ಲ. ಅಲ್ಲಿ ಅನ್ಯೋನ್ಯ ತಾದಾತ್ಮ್ಯ ಪ್ರತಿಷೇಧ ರೂಪವಾದ ಭೇದವನ್ನು ಒಪ್ಪಿದರೆ ಅದು ಅಪ್ರಸಕ್ತ ಪ್ರತಿಷೇಧವಾಗುತ್ತದೆಯಷ್ಟೇ.

**ಭಾವವಿಲಾಸಿನೀ–** ಕುತೋ ನಾಸ್ತೀತ್ಯತೋ ಯುಕ್ತಿಮಾಹ **– ಯದೇತಿ** ॥ ಧರ್ಮೀ ಶಶವಿಷಾಣಾದಿಃ । ನೈವಾಸ್ತಿ ಸರ್ವಥಾ ನಾಸ್ತೀತ್ಯರ್ಥಃ । ತಸ್ಯೈವ ಶಶವಿಷಾಣಾದೇರೇವ । ತದಾ ಶಶವಿಷಾಣಮೇವನಾಸ್ತೀತ್ಯುಚ್ಯತೇ । ನತು ತದನ್ಯಾತ್ಮನಾನಾಸ್ತೀತಿ ವ್ಯವಹ್ರಿಯತೇ । ಅಸತ್ತ್ವೇನ ಸ್ವತಾದಾತ್ಮ್ಯಸ್ಯೈವಾಯೋಗ್ಯತಯಾಽನ್ಯತಾದಾತ್ಮ್ಯಸ್ಯ ಸುತರಾಮಪ್ರಸಕ್ತೇಃ । ತತ್ರಶಶವಿಷಾಣಾದೌ । ಅನ್ಯೋನ್ಯಾತ್ಮತಾಽಭಾವಃ ಅನ್ಯೋನ್ಯತಾದಾತ್ಮ್ಯಸ್ಯಾಭಾವೋ ನಿಷೇಧನಮಿತ್ಯರ್ಥಃ । ಅಪ್ರಸಕ್ತನಿಷೇಧನಂ ಹೀತಿ ಸಂಬಂಧಃ । ಅತಸ್ತತ್ರಾನ್ಯತಾದಾತ್ಮ್ಯನಿಷೇಧರೂಪಭೇದಸ್ಯೈವಾಭಾವೇನ ಭೇದತ್ವಸ್ಯ ಸುತರಾಮಭಾವಾತ್ ಸಾಧನವೈಕಲ್ಯಮ್ । ವಸ್ತುಸ್ಥಿತ್ಯಭಿಪ್ರಾಯೇಣ ಮನ್ಮತ ಇತ್ಯುಕ್ತಮ್ । ಯುಕ್ತಿಸ್ತು ಸರ್ವೇಷಾಮಪಿ ಸಾಧಾರಣೇತಿ ಭಾವಃ ॥ ೭೫೧ ॥

**ವಿವರಣೆ–** ಶಶವಿಷಾಣಾದಿಧರ್ಮಿಯೇ ಇಲ್ಲ. ಧರ್ಮಿಯು ಇದ್ದರೆ ಅದು ಒಂದು ರೂಪದಿಂದ ಇರುತ್ತದೆ. ಇನ್ನೊಂದು ರೂಪದಿಂದ ಇರುವುದಿಲ್ಲ. ಆದ್ದರಿಂದ ಇನ್ನೊಂದು ರೂಪವನ್ನು ಪ್ರತಿಷೇಧ ಮಾಡಬೇಕು. ಇನ್ನೊಂದು ರೂಪ ಎಂದರೆ ಅನ್ಯತಾದಾತ್ಮ್ಯ ಎಂದು ಅರ್ಥ. ಆದರೆ ಧರ್ಮಿಸ್ವರೂಪವೇ ಇಲ್ಲದಿರುವಾಗ ಅನ್ಯತಾದಾತ್ಮ್ಯವು ಪ್ರಸಕ್ತವೇ

ಆಗುವುದಿಲ್ಲ. ಅದನ್ನು ನಿಷೇಧ ಮಾಡಿದರೆ ಆ ನಿಷೇಧವು ಅಪ್ರಸಕ್ತ ನಿಷೇಧವಾಗುತ್ತದೆ. ಆದ್ದರಿಂದ ಅಸತ್ಯವಾದ ಪದಾರ್ಥಗಳಲ್ಲಿ ಅನ್ಯೋನ್ಯಾಭಾವರೂಪವಾದ ಭೇದವನ್ನು ಒಪ್ಪುವುದಿಲ್ಲ ಎಂದು ಅಭಿಪ್ರಾಯ.

ತದೇವ ನಾಸ್ತಿ ಚೇತ್ ಕಸ್ಯ ತಾದಾತ್ಮ್ಯಂ ತತ್ರ ಶಂಕ್ಯತೇ ।
ಶಶಶೃಂಗಂ ಸ್ವತೋ ನಾಸ್ತಿ ನ ತು ನಾಸ್ತೀತರಾತ್ಮನಾ ॥ ೭೫೨ ॥

**ಅರ್ಥ–** ತದೇವ ನಾಸ್ತಿ ಚೇತ್= ಆ ವಸ್ತುವೇ ಇಲ್ಲವೆಂದಾದರೆ, ತತ್ರ= ಅಲ್ಲಿ, ಕಸ್ಯ ತಾದಾತ್ಮ್ಯಂ= ಯಾವುದರ ತಾದಾತ್ಮ್ಯವು, ಶಂಕ್ಯತೇ= ಶಂಕಿಸಲ್ಪಡುತ್ತದೆ? ಶಶಶೃಂಗಂ= ಶಶವಿಷಾಣವು, ಸ್ವತೋ ನಾಸ್ತಿ= ಸ್ವರೂಪತಃ ತಾನೇ ಇಲ್ಲ, ಇತರಾತ್ಮನಾ= ಅನ್ಯರೂಪದಿಂದ, ನಾಸ್ತಿ= ಇಲ್ಲ ಎಂಬುದು, ನ ತು= ಇಲ್ಲವಷ್ಟೇ.

**ಅನುವಾದ-** ಧರ್ಮಿಯೇ ಇಲ್ಲದಿರುವಾಗ ಅಲ್ಲಿ ಯಾವ ತಾದಾತ್ಮ್ಯದ ಶಂಕೆಯು ಉಂಟಾಗುತ್ತದೆ? ಶಶವಿಷಾಣವು ಸ್ವಯಂ ಇಲ್ಲ. ಅದು ಇತರಾತ್ಮನಾ ಇಲ್ಲ ಎಂದು ಹೇಳುವುದು ಅನುಪಪನ್ನವಾಗುತ್ತದೆ.

**ಭಾವವಿಲಾಸಿನೀ–** ಅಪ್ರಸಕ್ತಿಮೇವೋಪಪಾದಯತಿ ॥ **ತದೇವೇತಿ** ॥ ಸ್ವತಃ ಸ್ವಯಮೇವ । ಇತರಾತ್ಮನಾ ನಾಸ್ತೀತಿ ನತು । ನ ಕೇನಾಪಿ ವ್ಯವಹ್ರಿಯತ ಇತ್ಯರ್ಥಃ ॥ ೭೫೨ ॥

**ವಿವರಣೆ–** ಶಶವಿಷಾಣವು ಸ್ವಯಂ ಇಲ್ಲ. ಅದನ್ನು ಘಟತ್ವೇನ ಇಲ್ಲ ಎಂದು ಹೇಳುವುದು ಘಟತ್ವೇನ ಇರಬಹುದಾದ ಶಂಕೆಯು ಬಂದರೆ ಮಾತ್ರ. ಸ್ವರೂಪವೇ ಇಲ್ಲದಿರುವದಕ್ಕೆ ಎಂದರೆ ತನ್ನ ತಾದಾತ್ಮ್ಯವೇ ಇಲ್ಲದಿರುವುದಕ್ಕೆ ಇನ್ನೊಂದರ ತಾದಾತ್ಮ್ಯದ ಶಂಕೆಯೇ ಬರುವುದಿಲ್ಲವಾದ್ದರಿಂದ ಶಶವಿಷಾಣದಲ್ಲಿ ಭೇದವಿಲ್ಲ ಎಂದು ಅಭಿಪ್ರಾಯ.

ಅತಸ್ತತ್ರಾನ್ಯವಸ್ತುಭ್ಯೋ ಭೇದಾವಸರ ಏವ ನ ।
ಯತೋ ಧರ್ಮಿಸ್ವರೂಪೋಽಯಮನ್ಯೋನ್ಯಾಭಾವ ಈರ್ಯತೇ ॥ ೭೫೩ ॥

**ಅರ್ಥ–** ಅತಃ= ಆದ್ದರಿಂದ, ತತ್ರ= ಅಸತ್ ಪದಾರ್ಥದಲ್ಲಿ, ಅನ್ಯವಸ್ತುಭ್ಯಃ= ಬೇರೆ ವಸ್ತುಗಳಿಂದ, ಭೇದಾವಸರ ಏವ ನ= ಭೇದವನ್ನು ಅಂಗೀಕರಿಸುವುದಕ್ಕೆ ಅವಕಾಶವೇ ಇಲ್ಲ, ಯತಃ= ಏಕೆಂದರೆ, ಅಯಂ ಅನ್ಯೋನ್ಯಾಭಾವಃ= ಈ ಅನ್ಯೋನ್ಯಾಭಾವರೂಪವಾದ ಭೇದವು, ಧರ್ಮಿಸ್ವರೂಪಃ= ಧರ್ಮಿ ಸ್ವರೂಪವೆಂದು, ಈರ್ಯತೇ= ಹೇಳಲ್ಪಡುತ್ತದೆ.

**ಅನುವಾದ-** ಆದ್ದರಿಂದ ಅಸತ್ ಪದಾರ್ಥದಲ್ಲಿ ಅನ್ಯವಸ್ತುಗಳ ಭೇದವನ್ನು ಹೇಳಲು ಅವಕಾಶವೇ ಇಲ್ಲ. ಏಕೆಂದರೆ ಅನ್ಯೋನ್ಯಾಭಾವರೂಪವಾದ ಈ ಭೇದವು ಧರ್ಮಿ ಸ್ವರೂಪವೆಂದು ಹೇಳಲ್ಪಡುತ್ತದೆ.

**ಭಾವವಿಲಾಸಿನೀ–** ಅತಃ ಅನ್ಯೋನ್ಯತಾದಾತ್ಮ್ಯಪ್ರಸಕ್ತ್ಯಭಾವಾತ್ । ತತ್ರ ಅಸತಿ । ನನು ತರ್ಹಿ ಶಶವಿಷಾಣೇ ವಸ್ತುಸ್ಥಿತ್ಯಾ ವಿದ್ಯಮಾನ ಇತರತಾದಾತ್ಮ್ಯಾಭಾವಃ ಕ ಇತಿ ಚೇತ್ ವಸ್ತುಸ್ಥಿತ್ಯಾ ವಿದ್ಯಮಾನಃ ಶಶವಿಷಾಣಾಭಾವ ಇವ ಸಪ್ತಮ್ಯಾ ನಿರ್ದಿಷ್ಟಶಶವಿಷಾಣಸ್ಯೇತರತಾದಾತ್ಮ್ಯಂ ಪ್ರತ್ಯಾಧಾರತ್ವಾತ್ಯಂತಾಭಾವ ಏವೇತಿ ಬ್ರೂಮಃ । ಭೇದಸ್ತ್ವಿದಮಿದಂ ನೇತಿ ಪದದ್ವಯ-ಸಾಮಾನಾಧಿಕರಣ್ಯಮರ್ಯಾದಯೋ ಭಯತಾದಾತ್ಮ್ಯಂ ಪ್ರಸಂಜಯಿತ್ವಾ ಯೋ ನಿಷೇಧಃ ಸ ಏವ । ತಾದಾತ್ಮ್ಯಮೇವಾತ್ರ ನಾಸ್ತೀತ್ಯಾದ್ಯಾಕಾರೇಣ ಯೋ ನಿಷೇಧಃ ಸ ತು ತದತ್ಯಂತಾಭಾವ ಭಾವ । ಅಸ್ಯ ಚ ಪ್ರತಿಯೋಗಿಪ್ರಸಿದ್ಧ್ಯೈವಾಲಮ್ । ನತು ಪುರೋವರ್ತಿನಿ ತತ್ ಪ್ರಸಕ್ತಿರಪಿ ನಿಯಮೇನಾಪೇಕ್ಷಿತಾ । ಶಶವಿಷಾಣಾದಿನಿಷೇಧೇ ತದದರ್ಶನಾತ್ । ಭೇದಸ್ತೂಕ್ತರೀತ್ಯಾ ನಿಯಮೇನ ಪುರೋವರ್ತಿನ್ಯೇವ ತತ್ ಪ್ರಸಕ್ತಿಮಪೇಕ್ಷತೇ । ಸಾ ಚ ತಾದಾತ್ಮ್ಯಯೋಗ್ಯೇ ಸತ್ಪದಾರ್ಥೆ ಏವ ಭವತಿ ನತು ಸರ್ವಥಾ ತಾದಾತ್ಮ್ಯಾಯೋಗ್ಯೇಽತ್ಯಂತಾಸತಿ । ಕಿಂ ಚೇತಮಿತ್ಯನೂದ್ಯೇದಂ ನೇತ್ಯಾಕಾರೇಣ ನಿಷೇಧಃ ಸ್ವಾಕಾರಣೇ ಸತ್ಯೇವ ವಸ್ತುನಿ ಭವತಿ । ಸರ್ವಥಾಽವಿದ್ಯಮಾನೇ ಧರ್ಮಿಣೀದಮೇವ ನೇತ್ಯೇತಾವತಾ ಪೂರ್ತೇಃ ಪುನರಿದಂ ನೇತ್ಯನ್ಯಾ-ಕಾರೇಣ ನಿಷೇಧಸ್ಯ ಕಥಮವಸರಃ । ನಹಿ ಕಶ್ಚಿತ್ ಶಶವಿಷಾಣಂ ಘಟೋ ನೇತಿ ಬ್ರೂತೇ । ಕಿಂತು ಶಶವಿಷಾಣಮೇವ ನೇತಿ ನಿಷೇಧತಿ । ಪ್ರತೀತಿಶ್ಚ ದೃಷ್ಟೇಽನುತ್ಪನ್ನೇ ಚ ಘಟೇ ಘಟ ಏವ ನೇತ್ಯಾಕಾರಾ ಭವತಿ । ನತು ತದಾಪಿ ಘಟೋಽಯಂ ನ ಪಟ ಇತಿ ಕಸ್ಯಾಪಿ ಪ್ರತೀತಿರಸ್ತಿ । ಸತಿ ತು ಘಟೇ ಘಟ ಏವಾಯಂ ನತು ಪಟ ಇತಿ ವಸ್ತ್ವಂತರತಾದಾತ್ಮ್ಯ - ಪ್ರತಿಷೇಧರೂಪೈವ ಜಾಯತೇ । ಪ್ರತೀತಿರೇವ ಚ ವಸ್ತುವ್ಯವಸ್ಥಿತೌ ಪ್ರಮಾಣಮ್ । ಸತಿ ತು ಧರ್ಮಿಣಿ ತತ್ ಸ್ವರೂಪಸ್ಯೈವ ನಿಷೇದ್ಧುಮಶಕ್ಯತ್ವಾತ್ ಅನ್ಯಾತ್ಮನೈವ ನಿಷೇಧಸ್ಸಂಭಾವಿತಃ । ಅತಃಸನ್ಮಾತ್ರಧರ್ಮಿಕ ಏವ ಭೇದೋ ನಾಸತಿ । ಏತತ್ ಸರ್ವಮಭಿಪ್ರೇತ್ಯೋಕ್ತಂ ಭೇದಾವಸರ ಏವ ನೇತಿ । ಅತ್ಯಂತಾಸತಿ ಶಶಶೃಂಗಾ-ದಾವನ್ಯೋನ್ಯಾಭಾವರೂಪಭೇದಾಭಾವೇಽತಿಪ್ರಬಲಯುಕ್ತಿಂ ಚಾಹ – ಯತ ಇತಿ ॥ ೭೫೩ ॥

**ವಿವರಣೆ–** ಹಾಗಾದರೆ ಶಶವಿಷಾಣೇ ಇತರ ತಾದಾತ್ಮ್ಯಾಭಾವಃ ಎಂದು ತೋರುವ ಶಶವಿಷಾಣದಲ್ಲಿ ವಾಸ್ತವವಾಗಿ ಇರುವ ಇದರ ತಾದಾತ್ಮ್ಯಾಭಾವವು ಯದ್ ರೂಪ ಎಂದು ಕೇಳಿದರೆ ಅದು ವಾಸ್ತವವಾಗಿ ಇರುವ ಶಶವಿಷಾಣಾಭಾವದಂತೆ ಸಪ್ತಮೀ ವಿಭಕ್ತಿಯಿಂದ ನಿರ್ದಿಷ್ಟವಾದ ಶಶವಿಷಾಣದಲ್ಲಿ ಇತರ ತಾದಾತ್ಮ್ಯಾಧಾರತ್ವಾಭಾವ ರೂಪವಾದುದು ಎಂದು ಹೇಳುತ್ತೇವೆ. ಭೇದವಾದರೂ ಇದು, ಇದು ಅಲ್ಲ ಎಂದು ಸಮಾನ ವಿಭಕ್ತಿಕವಾದ ಎರಡು ಪದಗಳನ್ನು ಪ್ರಯೋಗಿಸಿ ಅವುಗಳ ತಾದಾತ್ಮ್ಯವನ್ನು ಪ್ರಸಕ್ತಿ ಮಾಡಿ ನಂತರ ನಿಷೇಧಿಸಲ್ಪಡುವಂತಹದು. ಇಲ್ಲಿ ತಾದಾತ್ಮ್ಯವೇ ಇಲ್ಲ ಎಂಬ ಆಕಾರವಾದ ಯಾವ ನಿಷೇಧವಿದೆಯೋ ಅದು ಅತ್ಯಂತಾಭಾವ ರೂಪವಾದುದು. ಈ ಅತ್ಯಂತಾಭಾವಕ್ಕೆ ಪ್ರತಿಯೋಗಿಯ ಪ್ರಸಕ್ತಿ ಇದ್ದರೆ ಸಾಕು. ಪುರೋವರ್ತಿಯಲ್ಲಿ ಅದರ ಪ್ರಸಕ್ತಿಯು ಇರಬೇಕೆಂಬ ನಿಯಮವಿಲ್ಲ. ಏಕೆಂದರೆ ಶಶವಿಷಾಣಾದಿ ನಿಷೇಧ ಮಾಡುವಾಗ ಅಲ್ಲಿ ಪ್ರಸಕ್ತಿ ಇಲ್ಲವಷ್ಟೇ? ಭೇದವಾದರೂ ನಿಯಮೇನ

ಪುರೋವರ್ತಿಯಲ್ಲಿ ಪ್ರಸಕ್ತಿಯನ್ನು ಅಪೇಕ್ಷಿಸುತ್ತದೆ. ಆ ಅಪೇಕ್ಷೆಯಾದರೂ ತಾದಾತ್ಮ್ಯಕ್ಕೆ ಯೋಗ್ಯವಾದ ಸತ್ ಪದಾರ್ಥದಲ್ಲೇ ಉಂಟಾಗುತ್ತದೆ ಹೊರತಾಗಿ ತಾದಾತ್ಮ್ಯಕ್ಕೆ ಅಯೋಗ್ಯವಾದ ಅತ್ಯಂತ ಅಸತ್ ಪದಾರ್ಥದಲ್ಲಿ ಉಂಟಾಗುವುದಿಲ್ಲ. ಮತ್ತು ಇದಂ ಎಂದು ಅನುವಾದ ಮಾಡಿ, ಇದಂ ನ ಎಂದು ಮಾಡುವ ನಿಷೇಧವು ತನ್ನ ಸ್ವರೂಪದಿಂದ ಇರುವ ವಸ್ತುವಿನಲ್ಲಿಯೇ ಸಂಭವಿಸುತ್ತದೆ. ಸರ್ವತಃ ಅವಿದ್ಯಮಾನವಾದ ವಸ್ತುವಿನಲ್ಲಿ 'ಇದಮೇವ ನ' (ಇದೇ ಇಲ್ಲ, ಶಶವಿಷಾಣವೇ ಇಲ್ಲ) ಎಂಬ ಇಷ್ಟೇ ಮಾತಿನಿಂದ ಆಕಾಂಕ್ಷೆಯು ಪೂರ್ಣವಾಗುವುದರಿಂದ ಪುನಃ 'ಇದಂ ನ' ಎಂದು ಹೇಳಬೇಕಾದ ಅವಶ್ಯಕತೆ ಇಲ್ಲ. ಯಾರೂ ಶಶವಿಷಾಣವು ಘಟವಲ್ಲ ಎಂದು ಹೇಳುವುದಿಲ್ಲವಷ್ಟೇ. ಆದರೆ ಶಶವಿಷಾಣವೇ ಇಲ್ಲ ಎಂದು ಹೇಳುತ್ತಾರೆ. ಈ ಪ್ರತೀತಿಯಾದರೂ ಧ್ವಸ್ತವಾದ ಅಥವಾ ಅನುತ್ಪನ್ನವಾದ ಘಟದಲ್ಲಿ ಘಟವೇ ಇಲ್ಲ ಎಂಬ ಆಕಾರವನ್ನೇ ಹೊಂದಿರುತ್ತದೆ. ಆ ಅವಸ್ಥೆಯಲ್ಲಿ ಈ ಘಟವು ಪಟವಲ್ಲ ಎಂಬ ಆಕಾರವನ್ನು ಉಳ್ಳ ಪ್ರತೀತಿಯು ಯಾರಿಗೂ ಬರುವುದಿಲ್ಲ. ಘಟವು ಇದ್ದಾಗ ಮಾತ್ರ ಇದು ಘಟ, ಪಟವಲ್ಲ ಎಂಬ ವಸ್ತ್ವಂತರ ತಾದಾತ್ಮ್ಯ ನಿಷೇಧ ರೂಪವಾದ ಪ್ರತೀತಿಯು ಉಂಟಾಗುತ್ತದೆ. ಪ್ರತೀತಿಯೇ ವಸ್ತುವನ್ನು ವ್ಯವಸ್ಥೆ ಮಾಡುವುದರಲ್ಲಿ ಪ್ರಮಾಣ. ಧರ್ಮಿಯು ಇದ್ದರೆ, ಧರ್ಮಿಯ ಸ್ವರೂಪವನ್ನೇ ನಿಷೇಧ ಮಾಡಲು ಸಾಧ್ಯವಿಲ್ಲವಾದ್ದರಿಂದ ಅಲ್ಲಿ ಅನ್ಯಾತ್ಮತ್ವವನ್ನು ನಿಷೇಧ ಮಾಡಬೇಕು. ಅನ್ಯಾತ್ಮತೆಯ ನಿಷೇಧವೇ ಭೇದ. ಆದ್ದರಿಂದ ಅದು ಸತ್ಯವಾದ ಧರ್ಮಿಯಲ್ಲಿ ಮಾತ್ರ ಇರುತ್ತದೆ. ಅಸತ್ತಿನಲ್ಲಿ ಇರುವುದಿಲ್ಲ. ಈ ಎಲ್ಲ ವಿಷಯಗಳನ್ನು ಮೂಲಕಾರರು 'ಭೇದಾವಸರ ಏವ ನ' ಭೇದಕ್ಕೆ ಅವಕಾಶವೇ ಇಲ್ಲ ಎಂಬ ಮಾತಿನಿಂದ ಸೂಚಿಸಿದ್ದಾರೆ.

**ಘಟೋಽಯಮೇವ ನ ಪಟಃ ಪಟೋಽಸೌ ನ ಘಟಸ್ತ್ವಿತಿ ।**
**ಸಾಮಾನಾಧಿಕರಣ್ಯಸ್ಯ ವಸ್ತ್ವೈಕ್ಯೇ ಹ್ಯನುಶಾಸನಾತ್ ॥ ೭೫೪ ॥**

**ಅರ್ಥ–** ಘಟೋಽಯಮೇವ= ಇದು ಘಟವೇ ಆಗಿದೆ, ಘಟಃ ನ ಪಟಃ= ಘಟವು ಪಟವಲ್ಲ, ಪಟೋಽಸೌ ನ ಘಟಃ= ಆ ಪಟವು ಘಟವಲ್ಲ ಎಂದು, ಪ್ರತೀತಿಯು ಬರುತ್ತದೆ, ವಸ್ತ್ವೈಕ್ಯೇ= ವಸ್ತುವಿಗೆ ಅಭೇದವಿದ್ದರೆ ಮಾತ್ರ, ಸಾಮಾನಾಧಿಕರಣ್ಯಸ್ಯ= ಸಾಮಾನಾಧಿಕರಣ್ಯಕ್ಕೆ, ಅನುಶಾಸನಾತ್= ಅನುಶಾಸನವು ಇರುವ ಕಾರಣದಿಂದ (ಭೇದಕ್ಕೂ ಮತ್ತು ಧರ್ಮಿಗೂ ಅಭೇದವು ಸಿದ್ಧವಾಗುತ್ತದೆ).

**ಅನುವಾದ-** ಇದು ಘಟವೇ, ಘಟವು ಪಟವಲ್ಲ. ಆ ಪಟವು ಘಟವಲ್ಲ ಎಂಬ ಪ್ರತೀತಿಯು ಬರುವುದರಿಂದ ವಸ್ತುವಿನ ಐಕ್ಯವಿದ್ದರೆ ಮಾತ್ರ ಸಾಮಾನ್ಯಾಧಿಕರಣ್ಯವನ್ನು ಶಾಸ್ತ್ರವು ಅನುಶಾಸನ ಮಾಡುವುದರಿಂದ ಧರ್ಮಿಯೂ ಮತ್ತು ಭೇದವೂ ಅಭಿನ್ನವೆಂದು ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ಅಯಂ ಘಟ ಏವೇತಿ ಸಂಬಂಧಃ । ನ ಘಟಸ್ತ್ವಿತಿ । ಈರ್ಯತ ಇತಿ ಪೂರ್ವೇಣಾನ್ವಯಃ । ನನ್ವೇವಂ ಪ್ರತೀತಾವಪಿ ಕುತೋಽನ್ಯೋನ್ಯಾಭಾವಸ್ಯ ಘಟಾದಿಸ್ವರೂಪತ್ವಮಿತ್ಯತ ಆಹ – **ಸಾಮಾನಾಧಿಕರಣ್ಯಸ್ಯೇತಿ** ॥ ಇಹಾಪಿ ಘಟಾದೇರ್ಧರ್ಮಿಣಃ ಪಟೋ ನೇತ್ಯಾದ್ಯಾಕಾರೇಣ ಪಟಪ್ರತಿಯೋಗಿಕನಞರ್ಥಭೂತಾನ್ಯೋನ್ಯಾಭಾವಸಾಮಾನಾಧಿಕರಣ್ಯದರ್ಶನೇನಾನ್ಯೋನ್ಯಾಭಾವಾತ್ಮಕತ್ವಸಿದ್ಧಿರಿತಿ ಭಾವಃ ॥ ೭೫೪ ॥

**ವಿವರಣೆ–** ಸಾಮಾನಾಧಿಕರಣವೆಂದರೆ ಸಮಾನವಿಭಕ್ತಿಪದದೋಪಸ್ಥಾಪ್ಯತ್ವ ಎಂದು ಅರ್ಥ. ಘಟಃ ಪಟೋನ ಎಂಬ ಪ್ರತೀತಿ ಇರುವಾಗ ಮತ್ತು ಅದರಂತೆ ಪ್ರಯೋಗ ಬರುವಾಗ, ನಞ್ ಅರ್ಥವಾದ ಭೇದವು ಘಟ ಪದದ ಜೊತೆಯಲ್ಲಿ ಸಾಮಾನಾಧಿಕರಣ್ಯವನ್ನು ಹೊಂದಿರುವುದರಿಂದ ಭೇದಕ್ಕೂ ಘಟರೂಪವಾದ ಧರ್ಮಿಗೂ ಅಭೇದವನ್ನು ಹೇಳಬೇಕು. ಆದ್ದರಿಂದ ಅನ್ಯೋನ್ಯಾಭಾವರೂಪವಾದ ಭೇದವು ಧರ್ಮಿಯಿಂದ ಅಭಿನ್ನವೆಂದು ಸಿದ್ಧವಾಗುತ್ತದೆ.

**ಅತೋ ನಾಸತಿ ಸೋಽಭಾವೋ ಭಾವಾಭಾವಬಹಿಷ್ಕೃತೇ ॥ ೭೫೫ ॥**

**ಅರ್ಥ–** ಅತಃ= ಆ ಕಾರಣದಿಂದ, ಭಾವಾಭಾವಬಹಿಷ್ಕೃತೇ= ಭಾವಾಭಾವಗಳಿಂದ ಭಿನ್ನವಾದ, ಅಸತಿ= ಅಸತ್ತಿನಲ್ಲಿ, ಸೋ ಅಭಾವಃ= ಅನ್ಯೋನ್ಯಾಭಾವರೂಪವಾದ ಅಭಾವವು ಎಂದರೆ ಭೇದವು, ನ= ಇರುವುದಿಲ್ಲ.

**ಅನುವಾದ-** ಆದ್ದರಿಂದ ಭಾವಾಭಾವಭಿನ್ನವಾದ ಅಸತ್ತಿನಲ್ಲಿ ಅನ್ಯೋನ್ಯಾಭಾವರೂಪವಾದ ಭೇದವು ಇರುವುದಿಲ್ಲ.

**ಭಾವವಿಲಾಸಿನೀ–** ಅತಃ ಅನ್ಯೋನ್ಯಾಭಾವಸ್ಯ ಧರ್ಮಿಸ್ವರೂಪತ್ವನಿಯಮಾತ್ । ಸೋಽಭಾವಃ ಅನ್ಯೋನ್ಯಾಭಾವಃ । ಭಾವಾಭಾವಬಹಿಷ್ಕೃತ ಇತಿ ತತ್ರ ಹೇತುಗರ್ಭವಿಶೇಷಣಮ್ । ಅಸತ್ಯನ್ಯೋನ್ಯಾಭಾವಾಂಗೀಕಾರೇಽಸತೋಽಪಿ ತದ್ರೂಪತ್ವಂ ಸ್ಯಾತ್ । ಅನ್ಯೋನ್ಯಾಭಾವಸ್ಯ ಧರ್ಮಿಸ್ವರೂಪತ್ವನಿಯಮಾತ್ । ತಚ್ಚ ವಿರುದ್ಧಮ್ । ಅಸತೋ ಭಾವಾಭಾವಬಹಿಷ್ಕೃತತ್ವಾದಿತಿ ಅತೋ ನಾಸತಿ ಸೋಽಭಾವ ಇತಿ ಹೇತೋಃಸೂಚನಾತ್ ॥ ೭೫೫ ॥

**ವಿವರಣೆ–** ಅನ್ಯೋನ್ಯಾಭಾವವು ಧರ್ಮಿಸ್ವರೂಪವಾದುದರಿಂದ ಅಸತ್ತಾದ ಧರ್ಮಿಯೇ ಇಲ್ಲದಿರುವುದರಿಂದ ಅಸತ್ತಿನಲ್ಲಿ ಅನ್ಯೋನ್ಯಾಭಾವರೂಪವಾದ ಭೇದವು ಇರುವುದಿಲ್ಲ. ಭೇದಕ್ಕೆ ಭಾವಾಭಾವಸ್ವರೂಪತ್ವವನ್ನು ಒಪ್ಪಿರುವುದರಿಂದ ಅಸತ್ತಿನಲ್ಲಿ ಭೇದವನ್ನು ಒಪ್ಪಿದರೆ ಅದಕ್ಕೂ ಧರ್ಮಿಸ್ವರೂಪತ್ವ ಉಂಟಾಗುತ್ತದೆ. ಧರ್ಮಿಸ್ವರೂಪವೇ ಇಲ್ಲದಿರುವುದರಿಂದ ಅಲ್ಲಿ ಭೇದವನ್ನು ಅಂಗೀಕರಿಸಲು ಬರುವುದಿಲ್ಲ. ಭೇದವನ್ನು ಅಂಗೀಕರಿಸಿದರೆ ಭೇದವು ಇದೆ ಧರ್ಮಿಯು ಇಲ್ಲ ಎಂದಾಗುವುದರಿಂದ ಇದು ವಿರುದ್ಧವಾದುದರಿಂದ ಅಸತ್ತಿನಲ್ಲಿ ಧರ್ಮಿಸ್ವರೂಪವಾದ ಭೇದವು ಇಲ್ಲವೆಂದು ಅಭಿಪ್ರಾಯ.

**ಅಭಾವೇಷು ಹಿ ಸರ್ವೇಷು ಯೋ ಧರ್ಮೀ ವಿದ್ಯಮಾನತಾ ।**
**ತಸ್ಯ ಸರ್ವಸ್ಯ ನಿಯತಾ ನಾಭಾವೋಽಸತಿ ಧರ್ಮಿಣಿ ॥ ೭೫೬ ॥**

**ಅರ್ಥ–** ಸರ್ವೇಷು ಅಭಾವೇಷು= ಎಲ್ಲ ಅಭಾವ ಸ್ಥಳಗಳಲ್ಲಿಯೂ, ಯಃ ಧರ್ಮೀ= ಯಾವುದು ಧರ್ಮಿಯಾಗಿದೆಯೋ, ತಸ್ಯ ಸರ್ವಸ್ಯ= ಆ ಎಲ್ಲಕ್ಕೂ, ವಿದ್ಯಮಾನತಾ= ವಿದ್ಯಮಾನತ್ವವು, ನಿಯತಾ= ನಿಯತವಾಗಿದೆ, ಧರ್ಮಿಣಿ ಅಸತಿ= ಧರ್ಮಿಯು ಅಸತ್ ಆದರೆ ಅದರಲ್ಲಿ, ಅಭಾವೋ ನ= ಅಭಾವವು ಇರುವುದಿಲ್ಲ.

**ಅನುವಾದ-** ಎಲ್ಲ ಅಭಾವಗಳಲ್ಲಿಯೂ ಧರ್ಮಿಯ ವಿದ್ಯಮಾನತ್ವವು ನಿಯತವಾಗಿರುತ್ತದೆ. ಅಸತ್ ಎಂಬುದು ಅವಿದ್ಯಮಾನವಾದ್ದರಿಂದ ಅಲ್ಲಿ ಅಭಾವವು ಇರುವುದಿಲ್ಲ.

**ಭಾವವಿಲಾಸಿನೀ–** ಯುಕ್ತ್ಯಂತರಂ ಚಾಹ – **ಅಭಾವೇಷ್ವಿತಿ** ॥ ತಸ್ಯ ಧರ್ಮಿಣಃ ವಿದ್ಯಮಾನತಾ ನಿಯತೇತಿ ಸಂಬಂಧಃ ॥ ೭೫೬ ॥

**ನಾಭೂದತ್ರ ಘಟೋ ನಷ್ಟೋ ಘಟೋ ನಾಯಂ ಘಟಃ ಪಟಃ ।**
**ಶಶಶೃಂಗಂ ಸರ್ವದೇಶಕಾಲೇ ನೇತಿ ಹಿ ಧೀರ್ನೃಣಾಂ ॥ ೭೫೭ ॥**

**ಅರ್ಥ–** ಅತ್ರ ಘಟಃ ನಾಭೂತ್= ಇಲ್ಲಿ ಘಟವು ಇರಲಿಲ್ಲ, ಅತ್ರ ಘಟೋ ನಷ್ಟಃ= ಇಲ್ಲಿ ಘಟವು ನಷ್ಟವಾಗಿದೆ, ಅಯಂ ಘಟಃ ಪಟೋ ನ= ಈ ಘಟವು ಪಟವಲ್ಲ, ಶಶಶೃಂಗಂ= ಶಶಶೃಂಗವು, ಸರ್ವದೇಶೇ ಕಾಲೇ= ಎಲ್ಲ ದೇಶಕಾಲಗಳಲ್ಲಿಯೂ, ನ= ಇಲ್ಲ, ಇತಿ= ಎಂದೇ, ನೃಣಾಂ ಧೀಃ= ಪುರುಷರಿಗೆ ಬುದ್ಧಿಯುಂಟಾಗುವುದಷ್ಟೇ.

**ಅನುವಾದ-** ಇಲ್ಲಿ ಘಟವು ಇರಲಿಲ್ಲ, ಇಲ್ಲಿ ಘಟವು ನಷ್ಟವಾಗಿದೆ, ಈ ಘಟವು ಪಟವಲ್ಲ, ಶಶಶೃಂಗವು ಎಲ್ಲಾ ದೇಶಕಾಲದಲ್ಲಿಯೂ ಇಲ್ಲ ಎಂದೇ ಪುರುಷರಿಗೆ ಬುದ್ಧಿಯುಂಟಾಗುವುದಷ್ಟೇ.

**ಭಾವವಿಲಾಸಿನೀ–**ಅಭಾವಸ್ಯ ಧರ್ಮಿಸತ್ತಾನಿಯಮಮುದಾಹರಣೇನ ದ್ರಢಯತಿ–**ನಾಭೂದಿತಿ** ॥ ಅತ್ರೇತಿಪದಂ ನಾಭೂದಿತ್ಯನೇನ ನಷ್ಟ ಇತ್ಯನೇನ ಚ ಸಂಬಧ್ಯತೇ । ಅತ್ರ ಕಪಾಲಾದಾವುಪಾದಾನೇ ಅಯಂ ಘಟಃ ಘಟೋ ನೇತಿ ಸಂಬಂಧಃ । ಸರ್ವದೇಶಕಾಲೇ ಸರ್ವಸ್ಮಿನ್‌ದೇಶೇ ಸರ್ವಸ್ಮಿನ್ ಕಾಲೇ । ಅತಃ ಪ್ರಾಗಭಾವಪ್ರಧ್ವಂಸಾನ್ಯೋನ್ಯಾಭಾವಾತ್ಯಂತಾಭಾವಾನಾಂ ಚತುರ್ಣಾಮಪಿ ಧರ್ಮೀ ಸನ್ನೇವ ॥ ೭೫೭ ॥

**ವಿವರಣೆ–** ಇಲ್ಲಿ ಘಟವು ಇರಲಿಲ್ಲ ಎಂಬುದು ಅತ್ಯಂತಾಭಾವಕ್ಕೆ ಉದಾಹರಣೆ. ಅಲ್ಲಿ 'ಇಲ್ಲಿ' ಎಂಬ ಪದದಿಂದ ಧರ್ಮಿಯ ವಿದ್ಯಮಾನತ್ವವನ್ನು ಹೇಳುತ್ತೇವೆ. ಅತ್ರ ಘಟೋ

ನಷ್ಟಃ ಎಂದರೆ ಈ ಕಪಾಲದಲ್ಲಿ ಘಟವು ನಷ್ಟವಾಗಿದೆ ಎಂದು ಅರ್ಥ. ಇಲ್ಲಿಯೂ ಅತ್ರ ಎಂಬ ಶಬ್ದದಿಂದ ಕಪಾಲರೂಪವಾದ ಧರ್ಮಿಗೆ ವಿದ್ಯಮಾನತ್ವವನ್ನು ಹೇಳುತ್ತೇವೆ. ಇದರಂತೆ ಅತ್ರ ಘಟೋ ಭವಿಷ್ಯತಿ ಎಂಬ ಪ್ರತೀತಿಯನ್ನೂ ತೆಗೆದುಕೊಳ್ಳಬೇಕು. ಇದು ಪ್ರಾಗಭಾವದ ಪ್ರತೀತಿ. ಇಲ್ಲಿಯೂ ಕೂಡ ಅತ್ರ ಎಂಬ ಪದದಿಂದ ಕಪಾಲವನ್ನು ಹೇಳಿ ಪ್ರಾಗಭಾವಕ್ಕೂ ಸಹ ಧರ್ಮಿಯ ವಿದ್ಯಮಾನತ್ವವು ಇದೆ ಎಂದು ಹೇಳುತ್ತೇವೆ. 'ಅಯಂ ಘಟಃ ಪಟೋ ನ' ಈ ಘಟವು ಪಟವಲ್ಲ ಎಂದು ಅನ್ಯೋನ್ಯಾಭಾವವನ್ನು ಹೇಳುವ ಸ್ಥಳದಲ್ಲಿಯೂ 'ಅಯಂ' ಎಂಬ ಪದದಿಂದ ಧರ್ಮಿಯನ್ನು ಹೇಳುತ್ತೇವೆ. ಶಶಶೃಂಗವು ಎಲ್ಲಾ ದೇಶಕಾಲಗಳಲ್ಲಿಯೂ ಇಲ್ಲ ಎಂದು ಹೇಳುವಾಗ ಮಾತ್ರ ಧರ್ಮಿಯನ್ನು ಹೇಳುವುದಿಲ್ಲ. ಆದ್ದರಿಂದ ಅತ್ಯಂತಾಭಾವ, ಪ್ರಾಗಭಾವ, ಧ್ವಂಸ ಮತ್ತು ಅನ್ಯೋನ್ಯಾಭಾವ ಸ್ಥಳಗಳಲ್ಲಿ ಧರ್ಮಿಯ ಸತ್ವವು ನಿಯತವಾಗಿದೆ. ಅಸತ್ ಸ್ಥಳದಲ್ಲಿ ಮಾತ್ರ ಧರ್ಮಿಯು ಇಲ್ಲದಿರುವುದರಿಂದ ಅಲ್ಲಿ ಧರ್ಮಿಸತ್ತಾಸಾಪೇಕ್ಷವಾದ ಯಾವ ಅಭಾವವೂ ಇಲ್ಲವೆಂದು ಅಭಿಪ್ರಾಯ.

**ಪಶ್ಚಾತ್ ಸತ್ತ್ವಂ ಪ್ರಾಗಭಾವೇ ನಿಯತಂ ಪ್ರತಿಯೋಗಿನಃ ।**
**ಅತೋಽಸೌ ಪ್ರಾಗಭಾವೋಭೂತ್ ಪ್ರಧ್ವಂಸಪ್ರತಿಯೋಗಿನಃ ।**
**ಪೂರ್ವಂ ಸತ್ವಂ ಚ ನಿಯತಮುತ್ತರಾಭಾವತಾಽಸ್ಯ ತತ್ ॥ ೭೫೮ ॥**

**ಅರ್ಥ–** ಪ್ರಾಗಭಾವೇ= ಪ್ರಾಗಭಾವ ಸ್ಥಳದಲ್ಲಿ, ಪ್ರತಿಯೋಗಿನಃ= ಪ್ರತಿಯೋಗಿಗೆ, ಪಶ್ಚಾತ್ತತ್ತ್ವಂ= ಅನಂತರ ವಿದ್ಯಮಾನತ್ವವು, ನಿಯತಂ= ನಿಯತವಾಗಿದೆ, ಅತಃ= ಆದ್ದರಿಂದ, ಅಸೌ= ಇದು, ಪ್ರಾಗಭಾವಃ= ಮೊದಲು ಇರುವ ಅಭಾವ, ಅಭೂತ್= ಆಯಿತು, ಪ್ರಧ್ವಂಸ ಪ್ರತಿಯೋಗಿನಃ= ಪ್ರಧ್ವಂಸ ಪ್ರತಿಯೋಗಿಗೆ, ಪೂರ್ವ ಸತ್ವಂ ಚ= ಮೊದಲು ವಿದ್ಯಮಾನತ್ವವು ಸಹ, ನಿಯತಂ= ನಿಯತವಾಗಿದೆ, ತತ್= ಆದ್ದರಿಂದ, ಅಸ್ಯ= ಪ್ರಧ್ವಂಸಕ್ಕೆ, ಉತ್ತರಾಭಾವತಾ= ಅನಂತರದ ಅಭಾವತ್ವವು ಉಂಟಾಗುತ್ತದೆ.

**ಅನುವಾದ–** ಪ್ರಾಗಭಾವ ಸ್ಥಳದಲ್ಲಿ ಪ್ರತಿಯೋಗಿಗೆ ಉತ್ಪತ್ತಿಗಿಂತ ಮೊದಲು ಅಭಾವವು ನಿಯತವಾಗಿದೆ. ಆದ್ದರಿಂದ ಅದು ಪ್ರಾಗಭಾವ ಎಂದರೆ ಮೊದಲು ಇರುವ ಅಭಾವ ಎನಿಸಿಕೊಳ್ಳುತ್ತದೆ. ಪ್ರಧ್ವಂಸ ಸ್ಥಳದಲ್ಲಿ ಪ್ರಧ್ವಂಸ ಪ್ರತಿಯೋಗಿಗೆ ಪ್ರಧ್ವಂಸ ಆಗುವುದಕ್ಕಿಂತ ಮುಂಚೆ ವಿದ್ಯಮಾನತ್ವವು ಇರುತ್ತದೆ. ಆದ್ದರಿಂದ ಪ್ರಧ್ವಂಸವು ಉತ್ತರಾಭಾವ. ಅನಂತರ ಇರುವ ಅಭಾವ ಎಂದು ಕರೆಸಿಕೊಳ್ಳಲ್ಪಡುತ್ತದೆ.

**ಭಾವವಿಲಾಸಿನೀ–** ಪ್ರಾಗಭಾವೇ ಪ್ರತಿಯೋಗಿನೋ ಘಟಾದೇಃ ಪಶ್ಚಾತ್ ಸತ್ತ್ವಂ ನಿಯತಮಿತಿ ಸಂಬಂಧಃ। ಅತಃ ಪಶ್ಚಾತ್ ಪ್ರತಿಯೋಗಿಸತ್ತ್ವನಿಯಮಾತ್ । ಅಸೌ ಅಭಾವಃ । ತತ್ತಸ್ಮಾತ್ ಪೂರ್ವಸತ್ತ್ವನಿಯಮಾತ್। ಅಸ್ಯ ಪ್ರಧ್ವಂಸಸ್ಯ ॥ ೭೫೮ ॥

**ವಿವರಣೆ–** ಪ್ರಾಗಭಾವ ಮತ್ತು ಪ್ರಧ್ವಂಸ ಸ್ಥಳಗಳಲ್ಲಿ ಪ್ರತಿಯೋಗಿಗೂ ವಿದ್ಯಮಾನತ್ವವು ಅಪೇಕ್ಷಿತವಾಗಿರುತ್ತದೆ. ಅಭಾವ ಕಾಲದಲ್ಲಿಯೇ ಪ್ರತಿಯೋಗಿಗೆ ವಿದ್ಯಮಾನತ್ವವು ಇರುವುದಿಲ್ಲ. ಆದರೆ ಅಭಾವಕ್ಕಿಂತ ಮೊದಲಾಗಲೀ ಅಥವಾ ಅಭಾವದ ಅನಂತರವಾಗಲೀ ಪ್ರತಿಯೋಗಿಗೆ ವಿದ್ಯಮಾನತ್ವವು ಇದ್ದೇ ಇರುತ್ತದೆ.

ಸದ್ಭ್ಯಾಮಭಾವ ಇತಿ ಹಿ ತತಃ ಪ್ರಾಹುರ್ವಿಪಶ್ಚಿತಃ ।
ನಾಶೇನ ಜನ್ಮನಾ ತಸ್ಮಾತ್ ಜಗತ್ಸತ್ಯತ್ವಮುಚ್ಯತೇ ॥ ೭೫೯ ॥

**ಅರ್ಥ–** ತತಃ= ಆ ಕಾರಣದಿಂದ, ವಿಪಶ್ಚಿತಃ= ಜ್ಞಾನಿಗಳಾದವರು, ಸದ್ಭ್ಯಾಮಭಾವಃ= ವಿದ್ಯಮಾನವಾದ ಪ್ರತಿಯೋಗಿ ಮತ್ತು ಧರ್ಮಿಗಳಿಂದ ಅಭಾವ ನಿರೂಪಿತವಾಗುತ್ತದೆ, ಇತಿಃ ಪ್ರಾಹುಃ ಹಿ= ಎಂದು ಹೇಳುವರಷ್ಟೇ. ತಸ್ಮಾತ್= ಆದ್ದರಿಂದ, ನಾಶೇನ= ನಾಶದಿಂದಲೂ, ಜನ್ಮನಾ= ಉತ್ಪತ್ತಿಯಿಂದಲೂ, ಜಗತ್ಸತ್ಯತ್ವಂ= ಜಗತ್ಸತ್ಯತ್ವವೇ, ಉಚ್ಯತೇ= ಹೇಳಲ್ಪಡುತ್ತದೆ.

**ಅನುವಾದ-** ಆದ್ದರಿಂದಲೇ ಜ್ಞಾನಿಗಳಾದವರು ವಿದ್ಯಮಾನವಾದ ಧರ್ಮಿ ಪ್ರತಿಯೋಗಿಗಳಿಂದ ಅಭಾವವು ನಿರೂಪಿಸಲ್ಪಡುತ್ತದೆ ಎಂದು ಹೇಳುತ್ತಾರೆ. ಆದ್ದರಿಂದ ಜಗತ್ತಿನ ನಾಶದಿಂದ ಮತ್ತು ಉತ್ಪತ್ತಿಯಿಂದ ಜಗತ್ತಿನ ಸತ್ಯತ್ವವು ಹೇಳಲ್ಪಡುತ್ತದೆ.

**ಭಾವವಿಲಾಸಿನೀ–** ಉಕ್ತಾರ್ಥೇ ಪ್ರಾಚಾಂ ವಾಚಂ ಸಮ್ಮತಿತ್ವೇನಾಹ – **ಸದ್ಭ್ಯಾಮಿತಿ** ॥ ತತಃ ಪ್ರಾಗಭಾವ ಪ್ರಧ್ವಂಸಯೋಃ ಪ್ರತಿಯೋಗಿಸತ್ತ್ವಸ್ಯಾಪಿ ನಿಯತತ್ವಾತ್ । ಸದ್ಭ್ಯಾಂ ವಿದ್ಯ-ಮಾನಾಭ್ಯಾಂ ಧರ್ಮಿಪ್ರತಿಯೋಗಿಭ್ಯಾಂ ನಿರೂಪ್ಯತ ಇತಿ ವಾಕ್ಯಶೇಷಃ । ತಾರ್ಕಿಕಾಸ್ತು ಸರ್ವಾ-ಭಾವೇಷ್ವಪಿ ಧರ್ಮಿಪ್ರತಿಯೋಗಿಸತ್ತ್ವನಿಯಮಂ ವದಂತಿ । ತದಯುಕ್ತಮ್ । ಅತ್ಯಂತಾಭಾವ ಪ್ರತಿಯೋಗಿನಿ ಶಶವಿಷಣೇ ಸನ್ನಿಷ್ಠಭೇದಪ್ರತಿಯೋಗಿನಿ ಅಸತಿ ಚ ಸತ್ತ್ವಾದರ್ಶನಾತ್ । ತತ್ತ್ವವಾದಿನಸ್ತು ಸರ್ವಾಭಾವೇಷ್ವಪಿ ಧರ್ಮಿಸತ್ತ್ವನಿಯಮಂ ಪ್ರಾಗಭಾವಪ್ರಧ್ವಂಸಯೋರೇವ ಪ್ರತಿಯೋಗಿಸತ್ತ್ವನಿಯಮಂ ಚಾಹುಃ । ವಕ್ಷ್ಯತಿ ಚೈತತ್ ಗ್ರಂಥಕಾರಃ ಸ್ವಯಮೇವ । ಅತ ಇದಂ ವಾಕ್ಯಮಸ್ಮಾಕಮಪ್ಯನುಕೂಲಮೇವೇತಿ ಭಾವಃ । ತಸ್ಮಾತ್ ಪ್ರಾಗಭಾವಪ್ರಧ್ವಂಸಯೋಃ ಪ್ರತಿಯೋಗಿಸತ್ತ್ವನಿಯಮಾತ್ । ಉಚ್ಯತೇ ವಿವೇಕಿಭಿಃ ॥ ೭೫೯ ॥

**ವಿವರಣೆ–** ಪ್ರಾಗಭಾವಾದಿ ನಾಲ್ಕು ಸ್ಥಳಗಳಲ್ಲಿಯೂ ಧರ್ಮಿಯ ಸತ್ತ್ವವು ಅಪೇಕ್ಷಿತವಾದುದು. ಪ್ರಾಗಭಾವ ಪ್ರಧ್ವಂಸ ಸ್ಥಳದಲ್ಲಿ ಪ್ರತಿಯೋಗಿ ಸತ್ತ್ವವು ಅಪೇಕ್ಷಿತವಾದುದು. ಆದ್ದರಿಂದಲೇ ಅಭಾವವು ಧರ್ಮಿ ಪ್ರತಿಯೋಗಿಗಳಿಂದ ನಿರೂಪಿಸಲ್ಪಡುತ್ತದೆ ಎಂಬ ಪ್ರಾಚೀನರ ವಾಕ್ಯವಿದೆ. ತಾರ್ಕಿಕರು ಮಾತ್ರ ಎಲ್ಲ ಅಭಾವಸ್ಥಳಗಳಲ್ಲಿಯೂ ಧರ್ಮಿ ಮತ್ತು ಪ್ರತಿಯೋಗಿ ಇವೆರಡರ ವಿದ್ಯಮಾನತ್ವವನ್ನು ಕಡ್ಡಾಯವಾಗಿ ಹೇಳುತ್ತಾರೆ. ಅದು ಸರಿಯಲ್ಲ. ಅತ್ಯಂತಾಭಾವಪ್ರತಿಯೋಗಿಯಾದ

ಶಶವಿಷಾಣದಲ್ಲೂ, ಸನ್ನಿಷ್ಠಭೇದ ಪ್ರತಿಯೋಗಿಯಾದ ಅಸತ್ತಿನಲ್ಲಿಯೂ ವಿದ್ಯಮಾನತ್ವ ಅಥವಾ ಸತ್ವವು ಇರುವುದಿಲ್ಲವಷ್ಟೇ? ನಾಲ್ಕು ಅಭಾವ ಸ್ಥಳಗಳಲ್ಲಿ ಧರ್ಮಿಸತ್ತಾಪೇಕ್ಷೆಯನ್ನು ಪ್ರಧ್ವಂಸ ಪ್ರಾಗಭಾವ ಸ್ಥಳಗಳಲ್ಲಿ ಪ್ರತಿಯೋಗಿ ಸತ್ವದ ಅಪೇಕ್ಷೆಯನ್ನು ಗ್ರಂಥಕಾರರೇ ಮುಂದೆ ಹೇಳುತ್ತಾರೆ. ಜಗತ್ತಿಗೆ ನಾಶ ಉಂಟಾಗುತ್ತದೆ ಎಂದು ಅಂಗೀಕರಿಸಿದರೆ ನಾಶ ಎಂದರೆ ಧ್ವಂಸ. ಅದು ಉತ್ತರಾಭಾವ. ಅದಕ್ಕೆ ಮೊದಲು ಪ್ರತಿಯೋಗಿಯು ವಿದ್ಯಮಾನವೆಂದು ಸಿದ್ಧವಾಗುತ್ತದೆ. ಜಗತ್ತಿಗೆ ಉತ್ಪತ್ತಿಯನ್ನು ಒಪ್ಪಿದರೆ ಉತ್ಪತ್ತಿಯು ಪ್ರಾಗಭಾವ ಪ್ರತಿಯೋಗಿ ರೂಪವಾದ್ದರಿಂದ ಜಗತ್ತಿಗೆ ಪ್ರಾಗಭಾವವನ್ನು ಒಪ್ಪಿದಂತಾಯಿತು. ಪ್ರಾಗಭಾವವೆಂದರೆ ಮೊದಲು ಇರುವ ಅಭಾವ. ಮೊದಲು ಮಾತ್ರ ಅಭಾವವಿರುತ್ತದೆ, ನಂತರ ಜಗತ್ತು ಇರುತ್ತದೆ ಎಂದು ಒಪ್ಪಿದಂತಾಯಿತು. ಆದ್ದರಿಂದ ಜಗತ್ತಿಗೆ ಉತ್ಪತ್ತಿ ನಾಶಗಳನ್ನು ಅಂಗೀಕರಿಸಿದರೆ ಪ್ರಾಗಭಾವ ಮತ್ತು ಪ್ರಧ್ವಂಸವನ್ನು ಅಂಗೀಕರಿಸುವುದರಿಂದ ಅದಕ್ಕೆ ಪ್ರತಿಯೋಗಿಯಾದ ಜಗತ್ತು ವಿದ್ಯಮಾನವಾದುದು ಎಂದರೆ ಸತ್ಯವಾದುದು ಎಂದು ಸಿದ್ಧವಾಗುತ್ತದೆ.

**ಸತಃ ಸದಂತರಾದ್ ಭೇದೇ ಪ್ರತಿಯೋಗಿನಿ ಸತ್ಯತಾ ।**
**ಅವಿದ್ಯಮಾನಾದ್ ಭೇದೇ ತು ಪ್ರತಿಯೋಗೀ ಪರಂ ನ ಸನ್ ॥ ೭೬೦ ॥**

**ನಾಯಮಾರೋಪಿತಶ್ಚಂದ್ರೋ ನೇದಂ ರಜತಮಿತ್ಯಪಿ ।**
**ಯತಃ ಪ್ರತೀತಿರ್ಲೋಕಾನಾಂ ಧರ್ಮೀ ತತ್ರಾಪಿ ಸನ್ ಭವೇತ್ ॥ ೭೬೧ ॥**

**ಅರ್ಥ–** ಸತಃ= ಸತ್ಯವಾದ ಒಂದು ಪದಾರ್ಥಕ್ಕೆ, ಸದಂತರಾದ್ಭೇದೇ= ಸತ್ಯವಾದ ಇನ್ನೊಂದು ಪದಾರ್ಥದಿಂದ ಭೇದವಿದ್ದರೆ, ಆಗ, ಪ್ರತಿಯೋಗಿನಿ= ಪ್ರತಿಯೋಗಿಯಲ್ಲಿ, ಸತ್ಯತಾ= ಸತ್ಯತ್ವವು ಇರುತ್ತದೆ, ಪರಂ= ಆದರೆ, ಅವಿದ್ಯಮಾನಾದ್ಭೇದೇ ತು= ಸತ್ಯವಾದ ಪದಾರ್ಥಕ್ಕೆ ಅವಿದ್ಯಮಾನ ವಸ್ತುವಿನಿಂದ ಭೇದವನ್ನು ಹೇಳಿದರೆ, ಪ್ರತಿಯೋಗೀ= ಪ್ರತಿಯೋಗಿಯು, ನ ಸನ್= ಸತ್ಯವಾಗಿರುವುದಿಲ್ಲ, ಯತಃ= ಯಾವ ಕಾರಣದಿಂದ, ಅಯಂ= ವಾಸ್ತವ ಚಂದ್ರನು, ಆರೋಪಿತ ಚಂದ್ರಃ ನ= ಆರೋಪಿತ ಚಂದ್ರನಲ್ಲ ಎಂದೂ, ಇದಂ ರಜತಂ ನ= ಇದು ರಜತವಲ್ಲ ಎಂದೂ, ಲೋಕಾನಾಂ= ಜನರಿಗೆ, ಪ್ರತೀತಿಃ= ಪ್ರತೀತಿ ಉಂಟಾಗುತ್ತದೆಯೋ, ತತ್ರಾಪಿ= ಅಲ್ಲಿಯೂ ಸಹ, ಧರ್ಮೀ= ಧರ್ಮಿಯು, ಸನ್ ಭವೇತ್= ವಿದ್ಯಮಾನವೇ ಆಗುತ್ತದೆ.

**ಅನುವಾದ-** ವಿದ್ಯಮಾನವಾದ ಪದಾರ್ಥಕ್ಕೆ ವಿದ್ಯಮಾನ ಪದಾರ್ಥಾಂತರದಿಂದ ಭೇದವನ್ನು ಹೇಳಿದರೆ ಆಗ ಪ್ರತಿಯೋಗಿಗೂ ಸತ್ವವು ಅಪೇಕ್ಷಿತವಾಗುತ್ತದೆ. ಆದರೆ ಅವಿದ್ಯಮಾನವಾದ ವಸ್ತುವಿನಿಂದ ಭೇದವನ್ನು ಹೇಳಿದರೆ ಮಾತ್ರ ಅಲ್ಲಿ ಪ್ರತಿಯೋಗಿಗೆ ಸತ್ವ ಇರುವುದಿಲ್ಲ. ಇವನು ಆರೋಪಿತ ಚಂದ್ರನಲ್ಲ ಮತ್ತು ಇದು

ರಜತವಲ್ಲ ಎಂದೇ ಜನರಿಗೆ ಪ್ರತೀತಿ ಉಂಟಾಗುವ ಕಾರಣದಿಂದ ಅಲ್ಲಿಯೂ ಸಹ ಧರ್ಮಿಯು ಸತ್ಯವೇ ಆಗುತ್ತದೆ.

**ಭಾವವಿಲಾಸಿನೀ–** ಅನ್ಯೋನ್ಯಾಭಾವೇ ಕ್ವಚಿತ್ ಪ್ರತಿಯೋಗಿಸತ್ತ್ವಂ ಕ್ವಚಿಚ್ಚ ತದನಪೇಕ್ಷೇತ್ಯಾಹ – **ಸತ ಇತಿ** ॥ ಅವಿದ್ಯಮಾನಾತ್ ಶಶವಿಷಾಣಾದೇಃ ॥ ನನು ಕಿಮರ್ಥಮಯಂ ವಿಭಾಗ ಇತ್ಯತ ಆಹ – **ನಾಯಮಿತಿ** ॥ ಯತ ಇತ್ಯಸ್ಯ ಪೂರ್ವೇಣಾನ್ವಯಃ। ಧರ್ಮೀ ಚಂದ್ರಶುಕ್ತ್ಯಾದಿಃ। ತತ್ರಾಪಿ ಅವಿದ್ಯಮಾನಾದ್ಭೇದಪ್ರತೀತಾವಪಿ ॥ ೭೬೦-೭೬೧ ॥

**ವಿವರಣೆ–** ಅನ್ಯೋನ್ಯಾಭಾವ ಸ್ಥಳದಲ್ಲಿ ಮಾತ್ರ ಕೆಲವು ಕಡೆ ಪ್ರತಿಯೋಗಿಯ ಸತ್ವವು ಅಪೇಕ್ಷಿತವಾಗುತ್ತದೆ, ಕೆಲವು ಕಡೆ ಪ್ರತಿಯೋಗಿಯ ಸತ್ವವು ಅಪೇಕ್ಷಿತವಾಗುವುದಿಲ್ಲ ಎಂದು ಹೇಳುತ್ತಾರೆ. ಘಟಃ ಪಟೋನ ಎಂಬಲ್ಲಿ ಘಟ ಪಟಗಳೆರಡೂ ಸತ್ಯವಾದವು. ಆದ್ದರಿಂದ ಅಂತಹ ಅನ್ಯೋನ್ಯಾಭಾವ ಸ್ಥಳದಲ್ಲಿ ಪ್ರತಿಯೋಗಿಯ ಸತ್ವವು ಅಪೇಕ್ಷಿತವಾಗುತ್ತದೆ. ವಾಸ್ತವ ಚಂದ್ರಃ ಆರೋಪಿತ ಚಂದ್ರೋ ನ, ಇದಂ ರಜತಂ ನ ಎಂಬಲ್ಲಿ ಸತ್ಯವಾದ ವಾಸ್ತವಚಂದ್ರ ಮತ್ತು ಇದಂ ಪದಾರ್ಥದಲ್ಲಿ ಅಸತ್ಯವಾದ ಆರೋಪಿತ ಚಂದ್ರನ ಮತ್ತು ರಜತದ ಭೇದವು ಹೇಳಲ್ಪಡುತ್ತದೆ. ಇಂತಹ ಸ್ಥಳದಲ್ಲಿ ಪ್ರತಿಯೋಗಿ ಸತ್ವದ ಅಪೇಕ್ಷೆ ಇಲ್ಲ. ಆದ್ದರಿಂದ ಅನ್ಯೋನ್ಯಾಭಾವಸ್ಥಳದಲ್ಲಿ ಪ್ರತಿಯೋಗಿಸತ್ವದ ನಿಯಮವಿಲ್ಲ ಎಂದು ಅಭಿಪ್ರಾಯ.

ತ್ರಿಕಾಲನಾಸ್ತಿತಾಧರ್ಮಿ ಕಾಲತ್ರಿತಯಮೇವ ಹಿ ॥ ೭೬೨ ॥

**ಅರ್ಥ–** ತ್ರಿಕಾಲನಾಸ್ತಿತಾ ಧರ್ಮಿ= ತ್ರೈಕಾಲಿಕ ಅಭಾವಕ್ಕೆ ಧರ್ಮಿಯಾದುದು, ಕಾಲತ್ರಿತಯ ಮೇವ ಹಿ= ಕಾಲತ್ರಯವೇ ಆಗುತ್ತದೆಯಷ್ಟೇ.

**ಅನುವಾದ -** ತ್ರಿಕಾಲಾತ್ಯಂತಾಭಾವಕ್ಕೆ ಧರ್ಮಿಯಾದುದು ತ್ರಿಕಾಲವೇ ಆಗುತ್ತದೆಯಷ್ಟೇ?

**ಭಾವವಿಲಾಸಿನೀ–** ಅತ್ಯಂತಾಭಾವೇಽಪಿ ಪ್ರಾಗುಕ್ತಂ ಧರ್ಮಿಸತ್ತ್ವನಿಯಮಮುಪಪಾದಯನ್ ಪ್ರತಿಯೋಗಿಸತ್ತ್ವಂ ನೈವಾಪೇಕ್ಷಿತಮಿತ್ಯಾಹ – **ತ್ರಿಕಾಲೇತಿ** ॥ ಶಶವಿಷಾಣಂ ನಾಸೀನ್ನಾಸ್ತಿ ನ ಭವಿಷ್ಯತೀತಿ ಯಾ ಕಾಲತ್ರಯನಾಸ್ತಿತಾ। ಅತ್ಯಂತಾಭಾವ ಇತಿ ಯಾವತ್। ಉಪಲಕ್ಷಣಂ ಚೈತತ್। ಸರ್ವದೇಶೇಷು ನಾಸ್ತಿತೇತ್ಯಪಿ ಗ್ರಾಹ್ಯಮ್। ತಸ್ಯ ಧರ್ಮ್ಯಾಧಾರಃ ಕಾಲತ್ರಿತಯಂ ಸರ್ವದೇಶಾಶ್ಚ। ಏವ ಶಬ್ದೇನ ಶಶವಿಷಾಣಂ ವ್ಯಾವರ್ತಯತಿ ॥ ೭೬೨ ॥

**ವಿವರಣೆ–** ಅತ್ಯಂತಾಭಾವಸ್ಥಳದಲ್ಲಿಯೂ ಧರ್ಮಿಸತ್ವ ನಿಯಮವಿದೆ ಎಂದು ಹೇಳುತ್ತಾ, ಪ್ರತಿಯೋಗಿ ಸತ್ವವು ಅಪೇಕ್ಷಿತವಲ್ಲ ಎಂದು ಇಲ್ಲಿ ಉಪಪಾದನೆ ಮಾಡುತ್ತಾರೆ. ಶಶವಿಷಾಣವು ಹಿಂದೆ ಇರಲಿಲ್ಲ. ಈಗ ಇಲ್ಲ, ಮುಂದೆ ಇರುವುದಿಲ್ಲ ಎಂದು

ಕಾಲತ್ರಯದಲ್ಲಿ ಅತ್ಯಂತಾಭಾವವನ್ನು ಹೇಳುವ ಸ್ಥಳದಲ್ಲಿಯೂ ಕಾಲತ್ರಯವೇ ಧರ್ಮಿಯಾಗುತ್ತದೆ. ಕಾಲತ್ರಯವು ಧರ್ಮಿ ಎಂಬುದು ಉಪಲಕ್ಷಣ. ಸರ್ವ ದೇಶವೂ ಧರ್ಮಿಯಾಗುತ್ತದೆ, ಹೊರತಾಗಿ ಅಲ್ಲಿ ಶಶವಿಷಾಣವು ಧರ್ಮಿಯಲ್ಲ. ಆದ್ದರಿಂದ ಧರ್ಮಿಸತ್ವದ ನಿಯಮವು ಅತ್ಯಂತಾಭಾವ ಸ್ಥಳದಲ್ಲಿಯೂ ಇದ್ದೇ ಇದೆ ಎಂದು ಅಭಿಪ್ರಾಯ.

ಶಶಶೃಂಗಸ್ಯ ನಾಸ್ತಿತ್ವಂ ತದ್ಗರೂಪಾದಿನಾಸ್ತಿತಾ ।
ತ್ರಿಕಾಲನಾಸ್ತಿತೈವೇತಿ ಧರ್ಮೀ ಕಾಲೋಽಖಿಲಸ್ಯ ಸನ್ ॥ ೭೬೩ ॥

**ಅರ್ಥ–** ಶಶಶೃಂಗಸ್ಯ= ಶಶವಿಷಾಣದ, ನಾಸ್ತಿತ್ವಂ= ಅಭಾವವು, ತದ್ಗರೂಪಾದಿನಾಸ್ತಿತಾ= ಶಶವಿಷಾಣದ ರೂಪದ ಅಭಾವವು, ತ್ರಿಕಾಲನಾಸ್ತಿತೈವೇತಿ= ತ್ರೈಕಾಲಿಕ ಅಭಾವವೇ ಎಂಬ ಕಾರಣದಿಂದ, ಅಖಿಲಸ್ಯ= ಆ ಎಲ್ಲ ಅಭಾವಗಳಿಗೂ, ಧರ್ಮೀ= ಧರ್ಮಿಯಾದ, ಕಾಲಃ= ಕಾಲವು, ಸನ್= ಸತ್ಯವಾಗಿಯೇ ಇದೆ.

**ಅನುವಾದ-** ಶಶಶೃಂಗಾಭಾವವಾಗಲೀ ಅಥವಾ ಶಶಶೃಂಗದ ರೂಪದ ಅಭಾವವಾಗಲೀ ತ್ರೈಕಾಲಿಕ ಅಭಾವವಾದ ಕಾರಣದಿಂದ ಅಲ್ಲಿಯೂ ಅವುಗಳಿಗೆ ಧರ್ಮಿಯಾದ ಕಾಲವು ಸತ್ಯವಾಗಿಯೇ ಇದೆ.

**ಭಾವವಿಲಾಸಿನೀ–** ಶಶಶೃಂಗೇ ಯಾ ರೂಪನಾಸ್ತಿತಾ ತಸ್ಯಾ ಅಪಿ ತ್ರೈಕಾಲಿಕಾಭಾವತ್ವಾತ್ ಕಾಲತ್ರಿ- ತಯಮೇವ ಧರ್ಮೀತ್ಯಾಹ–**ಶಶಶೃಂಗಸ್ಯೇತಿ** ॥ ತದ್ಗಂ ಶಶಶೃಂಗಗತಂ ಯದ್ರೂಪಾದಿ ತನ್ನಾಸ್ತಿತಾ । ಅಖಿಲಸ್ಯ ಶಶವಿಷಾಣಾದ್ಯತ್ಯಂತಾಭಾವಸ್ಯ ತದ್ಗತರೂಪಾದ್ಯತ್ಯಂತಾಭಾವಸ್ಯ ಚ ॥ ೭೬೩ ॥

ಅಸತಃ ಶಶಶೃಂಗಾದೇರ್ಧರ್ಮಿತ್ವಂ ತೂಪಚಾರತಃ ॥ ೭೬೪ ॥

**ಅರ್ಥ–** ಅಸತಃ= ಅಸತ್ ಆದ, ಶಶಶೃಂಗಾದೇಃ= ಶಶಶೃಂಗಾದಿಗಳಿಗೆ, ಧರ್ಮಿತ್ವಂ ತು= ಧರ್ಮಿತ್ವವಾದರೂ, ಉಪಚಾರತಃ= ಉಪಚಾರದಿಂದ ಹೇಳಲ್ಪಡುತ್ತದೆ.

**ಅನುವಾದ-** ಅಸತ್ ಆದ ಶಶಶೃಂಗಾದಿಗಳಿಗೆ ಧರ್ಮಿತ್ವವಾದರೂ ಉಪಚಾರದಿಂದ ಹೇಳಲ್ಪಡುತ್ತದೆ.

**ಭಾವವಿಲಾಸಿನೀ–** ಪ್ರತಿಯೋಗಿಭೂತರೂಪವ್ಯಾವರ್ತಕತಯಾ ಶಶವಿಷಾಣೇ ರೂಪಾತ್ಯಂತಾ- ಭಾವ ಇತಿ ವ್ಯವಹ್ರಿಯತೇ ನತು ತಸ್ಯ ಸಾಕ್ಷಾದ್ಧರ್ಮಿತಯೇತ್ಯಾಹ – **ಅಸತ ಇತಿ** ॥ ೭೬೪ ॥

**ವಿವರಣೆ–** ಆದರೆ ಶಶವಿಷಾಣದಲ್ಲಿ ರೂಪವು ಇಲ್ಲ ಎಂದು ರೂಪಾತ್ಯಂತಾಭಾವವನ್ನು ಹೇಗೆ ಕೂಡಿಸುವುದು. ಧರ್ಮಿಯಾದ ಶಶವಿಷಾಣಕ್ಕೆ ಸತ್ವವಿಲ್ಲವಷ್ಟೇ ಎಂಬ ಶಂಕೆಯು ಬರುತ್ತದೆ. ಅದನ್ನು ಪರಿಹರಿಸಲು ಅಲ್ಲಿ ಧರ್ಮಿತ್ವವು ಉಪಚರಿತವಾದುದು,

ವಾಸ್ತವವಾದುದಲ್ಲ ಎಂದು ಹೇಳುತ್ತಾರೆ. ಉಪಚರಿತವಾದುದೆಂದರೆ ಬೌದ್ಧಿಕವಾದ ಧರ್ಮಿತ್ವ ಎಂದರೆ ಬುದ್ಧ್ಯಾರೋಹಕ್ಕಾಗಿ ಹೇಳಿದ ಒಂದು ಅಮುಖ್ಯವಾದ ಧರ್ಮಿತ್ವ ಎಂದು ಅಭಿಪ್ರಾಯ. ಶಶವಿಷಾಣದಲ್ಲಿ ಅನ್ಯತಾದಾತ್ಮ್ಯಾಧಾರತ್ವಾಭಾವವನ್ನೂ ಹೀಗೇ ಕೂಡಿಸಬೇಕು.

ಪ್ರತಿಯೋಗಿತ್ವಪೂರ್ವಾಸ್ತು ಧರ್ಮಿಸತ್ತಾನಪೇಕ್ಷಿಣಃ ।
ಭಾವಧರ್ಮಾಃ ಸಂತಿ ತತ್ರಾತ್ಯಭಾವಸ್ಯ ಗತಿಸ್ತ್ವಿಯಂ ॥ ೭೬೫ ॥

**ಅರ್ಥ–** ಧರ್ಮಿಸತ್ತಾನಪೇಕ್ಷಿಣಃ= ಧರ್ಮಿಸತ್ತಾನಿರಪೇಕ್ಷವಾದ, ಪ್ರತಿಯೋಗಿತ್ವ-ಪೂರ್ವಾಃ= ಪ್ರತಿಯೋಗಿತ್ವವೇ ಮೊದಲಾದ, ಭಾವಧರ್ಮಾಸ್ತು= ಭಾವರೂಪವಾದ ಧರ್ಮಗಳಾದರೂ, ತತ್ರ= ಅಸತ್ತಿನಲ್ಲಿ, ಸಂತಿ= ಇವೆ, ಅತ್ಯಭಾವಸ್ಯ= ಅತ್ಯಂತಾಭಾವಕ್ಕೆ ಮಾತ್ರ, ಇಯಂ ಗತಿಃ= ಈ ಗತಿಯು ಎಂದರೆ ಧರ್ಮಿಸತ್ತಾಸಾಪೇಕ್ಷತ್ವವು ಇರುತ್ತದೆ.

**ಅನುವಾದ–** ಆದರೆ ಧರ್ಮಿಸತ್ತಾನಿರಪೇಕ್ಷವಾದ ಪ್ರತಿಯೋಗಿತ್ವ ಮೊದಲಾದ ಭಾವಧರ್ಮಗಳು ಅಸತ್ತಿನಲ್ಲಿಯೂ ಇರುತ್ತವೆ. ಅತ್ಯಂತಾಭಾವಕ್ಕೆ ಮಾತ್ರ ಇದೇ ಗತಿ ಎಂದರೆ ಸರ್ವತ್ರ ಧರ್ಮಿಯ ವಿದ್ಯಮಾನತ್ವದ ಅಪೇಕ್ಷೆ ಇದೆ ಎಂಬುದೇ ನಿಯಮ.

**ಭಾವವಿಲಾಸಿನೀ–** ಕಥಂ ತರ್ಹಿ ಶಶವಿಷಾಣೇಽತ್ಯಂತಾಭಾವಪ್ರತಿಯೋಗಿತ್ವಾದಿ ಧರ್ಮಾಧಾರತ್ವಮಿತ್ಯತ ಆಹ – **ಪ್ರತಿಯೋಗಿತ್ವೇತಿ** ॥ ತತ್ರ ಶಶವಿಷಾಣೇ । ಅತ್ಯಂತಾಭಾವಸ್ಯ ಶಶವಿಷಾಣಾದಿಪ್ರತಿಯೋಗಿಕಾತ್ಯಂತಾ ಭಾವಸ್ಯ । ಇಯಂ ಪ್ರಾಗುಕ್ತಾ । ಅಭಾವ ಪ್ರತಿಯೋಗಿತ್ವಂ ಭ್ರಾಂತಿಜ್ಞೇಯತ್ವಂ ನಾಸ್ತಿತ್ವೇನ ಜ್ಞೇಯತ್ವಾದಿಕಂ ಚಾವಿದ್ಯಮಾನಸ್ಯೈವ ಭವತಿ । ನತು ಕದಾಪಿ ವಿದ್ಯಮಾನಸ್ಯ । ಅತಸ್ತೇ ಧರ್ಮಿಸತ್ತಾನಿರಪೇಕ್ಷತ್ವಾತ್ ಶಶವಿಷಾಣಾದಾವೇವ ಸ್ಯುಃ । ಅತ್ಯಂತಾಭಾವಸ್ಯ ತು ಸಾರ್ವದೇಶಿಕಸಾರ್ವಕಾಲಿಕತಯಾ ವ್ಯವಹ್ರಿಯಮಾಣತ್ವಾತ್ ದೇಶ-ಕಾಲಾವೇವ ಧರ್ಮಿಣಾವಿತಿ ಭಾವಃ ॥ ೭೬೫ ॥

**ವಿವರಣೆ–** ಹಾಗಾದರೆ ಶಶವಿಷಾಣ ಸ್ಥಳದಲ್ಲಿ ಧರ್ಮಿಯು ಇಲ್ಲದಿರುವುದರಿಂದ ಅತ್ಯಂತಾಭಾವ ಪ್ರತಿಯೋಗಿತ್ವ ಮೊದಲಾದ ಧರ್ಮಗಳು ಹೇಗೆ ಬರುತ್ತವೆ ಎಂಬ ಪ್ರಶ್ನೆಗೆ ಇಲ್ಲಿ ಉತ್ತರವನ್ನು ಹೇಳುತ್ತಾರೆ. ಧರ್ಮಗಳು ಎರಡು ರೀತಿಯವು. ಕೆಲವು ಧರ್ಮಿಸತ್ತಾಸಾಪೇಕ್ಷವಾದವುಗಳು, ಅದಕ್ಕೆ ಉದಾಹರಣೆ ರೂಪರಸಗಳು. ಇನ್ನು ಕೆಲವು ಧರ್ಮಿಸತ್ತಾನಿರಪೇಕ್ಷವಾದವುಗಳು, ಅವು ಪ್ರತಿಯೋಗಿತ್ವ, ಭ್ರಾಂತಿವಿಷಯತ್ವ, ನಾಸ್ತಿತ್ವ ಪ್ರಕಾರತ್ವಜ್ಞಾನವಿಷಯತ್ವ ಮೊದಲಾದವುಗಳು. ಆದ್ದರಿಂದ ಅತ್ಯಂತಾಭಾವ ಪ್ರತಿಯೋಗಿತ್ವವು ಧರ್ಮಿಸತ್ತಾನಿರಪೇಕ್ಷವಾದ್ದರಿಂದ ಅಸತ್ತಿನಲ್ಲಿ ಅಂತಹ ಧರ್ಮಗಳು ಇರುತ್ತವೆ. ಅತ್ಯಂತಾಭಾವಕ್ಕೆ ಮಾತ್ರ ಸರ್ವದೇಶವೂ, ಸರ್ವಕಾಲವೂ ಧರ್ಮಿಯಾಗುವುದರಿಂದ ಅಲ್ಲಿಯೂ ಧರ್ಮಿಸತ್ವವು ಇದ್ದೇ ಇದೆ.

**ನಿಷೇಧಪ್ರತಿಯೋಗಿತ್ವಮಾತ್ರಂ ಸರ್ವಸ್ಯ ಚಾಸತಃ ।**
**ದೇಶಃ ಕಾಲಶ್ಚಾಖಿಲೋಪಿ ಧರ್ಮೀ ತಸ್ಯ ನಿಷೇಧನೇ ॥ ೭೬೬ ॥**

**ಶಶಶೃಂಗಂ ನ ಕುತ್ರಾಪಿ ನ ಕದಾಪೀತಿ ಹಿ ಪ್ರಮಾ ।**
**ತದ್ದೈರ್ಘ್ಯಂ ಚ ನ ಕುತ್ರಾಪಿ ನ ಕದಾಪೀತಿ ಹಿ ಪ್ರಮಾ ॥ ೭೬೭ ॥**

**ಅರ್ಥ–** ಸರ್ವಸ್ಯ ಅಸತಃ= ಎಲ್ಲಾ ಅಸತ್ತುಗಳಿಗೂ, ನಿಷೇಧಪ್ರತಿಯೋಗಿತ್ವಮಾತ್ರಂ= ಕೇವಲ ನಿಷೇಧ ಪ್ರತಿಯೋಗಿತ್ವವೇ ಇದೆ, ತಸ್ಯ ನಿಷೇಧನೇ= ಅಸತ್ತಿನ ನಿಷೇಧಕ್ಕೆ, ಅಖಿಲಃ ದೇಶಃ ಕಾಲೋಪಿ= ಎಲ್ಲ ದೇಶಕಾಲಗಳೂ, ಧರ್ಮೀ= ಧರ್ಮಿಯಾಗುತ್ತವೆ, ಶಶಶೃಂಗಂ= ಶಶಶೃಂಗವು, ಕುತ್ರಾಪಿ ನ= ಎಲ್ಲಿಯೂ ಇಲ್ಲ, ಕದಾಪಿ ನ= ಯಾವಾಗಲೂ ಇಲ್ಲ, ಇತಿಃ ಪ್ರಮಾ= ಎಂದೇ ಪ್ರಮೇಯು ಬರುವುದಷ್ಟೇ, ತದ್ದೈರ್ಘ್ಯಂ ಚ= ಶಶವಿಷಾಣದ ದೀರ್ಘತ್ವವು, ಕುತ್ರಾಪಿ= ಎಲ್ಲಿಯೂ ಇಲ್ಲ, ಕದಾಪಿ ನ= ಯಾವಾಗಲೂ ಇಲ್ಲ, ಇತಿ ಪ್ರಮಾ= ಎಂದೇ ಪ್ರಮೇಯು ಉಂಟಾಗುವುದಷ್ಟೇ?

**ಅನುವಾದ- ಎಲ್ಲ ಅಸತ್ತುಗಳಿಗೂ ಕೇವಲ ನಿಷೇಧ ಪ್ರತಿಯೋಗಿತ್ವವು ಮಾತ್ರ ಇದೆ. ಹಾಗೆ ಅಸತ್ತನ್ನು ನಿಷೇಧ ಮಾಡಿದರೆ ಆ ನಿಷೇಧಕ್ಕೆ ಎಲ್ಲ ದೇಶಗಳೂ ಮತ್ತು ಎಲ್ಲ ಕಾಲಗಳೂ ಧರ್ಮಿಗಳಾಗುತ್ತವೆ. ಶಶವಿಷಾಣವು ಯಾವ ದೇಶದಲ್ಲಿಯೂ ಇಲ್ಲ, ಯಾವ ಕಾಲದಲ್ಲಿಯೂ ಇಲ್ಲ ಎಂದೇ ಪ್ರಮೇಯು ಉಂಟಾಗುವುದಷ್ಟೇ? ಶಶವಿಷಾಣದ ದೀರ್ಘತ್ವವು ಯಾವ ದೇಶದಲ್ಲಿಯೂ ಇಲ್ಲ, ಯಾವ ಕಾಲದಲ್ಲಿಯೂ ಇಲ್ಲ ಎಂದು ಪ್ರಮೇಯು ಉಂಟಾಗುವುದಷ್ಟೇ?**

**ಭಾವವಿಲಾಸಿನೀ– ತದೇವ ವಿಶದಯತಿ ॥ ನಿಷೇಧೇತಿ ॥ ತಸ್ಯಾಸತಃ ॥ ತತ್ ಧ್ಯೈರ್ಯಂ ಶಶಶೃಂಗದೀರ್ಘತ್ವಮ್ ॥ ೭೬೬-೭೬೭ ॥**

**ವಿವರಣೆ–** ಅತ್ಯಂತಾಭಾವಕ್ಕೆ ಸಕಲ ದೇಶಗಳೂ ಧರ್ಮಿಗಳಾಗುತ್ತವೆ ಎಂದು ಹಿಂದಿನ ಶ್ಲೋಕದಲ್ಲಿ ಹೇಳಿದ ಪ್ರಮೇಯವನ್ನು ಇಲ್ಲಿ ಸ್ಪಷ್ಟಪಡಿಸುತ್ತಾರೆ.

**ಅತ್ಯಂತಾಭಾವಮಾತ್ರೇ ತು ಪ್ರತಿಯೋಗಿನ್ಯಸತ್ಯತಾ ।**
**ನಿಯತಾ ಕಥಮತ್ಯಂತಾಭಾವಃ ಸೋಪಿ ಸತೋ ಯದಿ ।**
**ಕಾಲತ್ರಯೇಪ್ಯಭಾವಂ ಹಿ ತಚ್ಛಬ್ದಾರ್ಥಂ ವಿದುರ್ಬುಧಾಃ ॥ ೭೬೮ ॥**

**ಅರ್ಥ–** ಅತ್ಯಂತಾಭಾವಮಾತ್ರೇ ತು= ಕೇವಲ ಅತ್ಯಂತಾಭಾವದಲ್ಲಿ, ಪ್ರತಿಯೋಗಿನ್ಯ-ಸತ್ಯತಾ= ಪ್ರತಿಯೋಗಿಯಲ್ಲಿ ಅವಿದ್ಯಮಾನತ್ವವು, ನಿಯತಾ= ನಿಯತವಾಗಿವೆ, ಸೋಪಿ= ಅತ್ಯಂತಾಭಾವವೂ ಸಹ, ಸತೋ ಯದಿ= ವಿದ್ಯಮಾನ ಪ್ರತಿಯೋಗಿಕವಾದರೆ, ಕಥಂ= ಹೇಗೆ,

ಅತ್ಯಂತಾಭಾವಃ= ಅತ್ಯಂತಾಭಾವವಾಗುತ್ತದೆ, ಬುಧಾಃ= ವಿವೇಕಿಗಳು, ಕಾಲತ್ರಯೇಽಪ್ಯಭಾವಂ= ಮೂರು ಕಾಲದಲ್ಲಿಯೂ ಇರುವ ಅಭಾವವನ್ನು, ತಚ್ಛಬ್ದಾರ್ಥಂ= ಅತ್ಯಂತಾಭಾವಶಬ್ದದ ಅರ್ಥವೆಂದು, ವಿದುಃ ಹಿ= ತಿಳಿಯುತ್ತಾರಷ್ಟೇ? (ಹೇಳುತ್ತಾರಷ್ಟೇ?)

**ಅನುವಾದ-** ಕೇವಲ ಅತ್ಯಂತಾಭಾವದಲ್ಲಿ ಮಾತ್ರ ಪ್ರತಿಯೋಗಿಯ ಅಸತ್ಯತ್ವವು ಎಂದರೆ ಅವಿದ್ಯಮಾನತ್ವವು ನಿಯತವಾಗಿವೆ. ವಿದ್ಯಮಾನವಸ್ತುವಿಗೂ ಅತ್ಯಂತಾಭಾವವನ್ನು ಒಪ್ಪಿದರೆ ಅದು ಅತ್ಯಂತಾಭಾವವಾಗುವುದು ಹೇಗೆ? ವಿವೇಕಿಗಳು ಕಾಲತ್ರಯ ವೃತ್ತಿಯಾದ ಅಭಾವವನ್ನೇ ಅತ್ಯಂತಾಭಾವ ಶಬ್ದದ ಅರ್ಥವೆಂದು ತಿಳಿಯುತ್ತಾರಷ್ಟೇ?

**ಭಾವವಿಲಾಸಿನೀ–** ಅತ್ಯಂತಾಭಾವಮಾತ್ರೇ ಸಕಲಾತ್ಯಂತಾಭಾವೇ । ಅತ್ಯಂತಾಭಾವಸ್ಯ ಪ್ರತಿಯೋಗೀ ಸರ್ವೋಽಪ್ಯಸನ್ನೇವ । ವಿದ್ಯಮಾನಸ್ಯಾತ್ಯಂತಾಭಾವಾಯೋಗಾದಿತಿ ಭಾವಃ । ಸೋಽಪಿ ಅತ್ಯಂತಾಭಾವೋಽಪಿ । ತಚ್ಛಬ್ದಾರ್ಥಂ ಅತ್ಯಂತಾಭಾವಶಬ್ದಾರ್ಥಮ್ ॥ ೭೬೮ ॥

**ವಿವರಣೆ–** ಅತ್ಯಂತಾಭಾವಪ್ರತಿಯೋಗಿಯು ಯಾವಾಗಲೂ ಅಸತ್ಯವೇ ಅಥವಾ ಅಪ್ರಾಮಾಣಿಕವೇ ಆಗಿರಬೇಕೆಂಬುದು ವಾದಿರಾಜರ ಅಭಿಪ್ರಾಯ. ಅವರು ಪ್ರಾಮಾಣಿಕಪ್ರತಿಯೋಗಿಕವಾದ ಅತ್ಯಂತಾಭಾವವನ್ನು ಒಪ್ಪುವುದಿಲ್ಲವೆಂದು ಈ ಪ್ರಕರಣದಲ್ಲಿ ಸ್ಪಷ್ಟವಾಗುತ್ತದೆ.

**ಯೋತ್ಯಂತಾಭಾವಮೇವಾಹ ಘಟಸ್ಯ ಸ ಹಿ ಸರ್ವದಾ ।**
**ಜಲಾಹರಣಯೋಗ್ಯಸ್ಯಾಭಾವಾಚ್ಛುಷ್ಯದ್ಗಲೋ ಭವೇತ್ ।**
**ನ ಚೇದತ್ಯಂತಶಬ್ದೋಽಯಂ ಶೋಷಯೇದ್ ಬಹುಜಲ್ಪತಃ ॥ ೭೬೯ ॥**

**ಅರ್ಥ–** ಯಃ= ಯಾವನು, ಘಟಸ್ಯ= ಘಟಕ್ಕೂ ಸಹ, ಅತ್ಯಂತಾಭಾವಮೇವ ಆಹ= ಅತ್ಯಂತಾಭಾವವನ್ನೇ ಹೇಳುತ್ತಾನೆಯೋ (ಅಂಗೀಕರಿಸುತ್ತಾನೆಯೋ), ಸಃ= ಅವನು, ಜಲಾಹರಣಯೋಗ್ಯಸ್ಯಾಭಾವಾತ್= ಜಲಾಹರಣ ಯೋಗ್ಯವಾದ ವಸ್ತುವು ಇಲ್ಲದಿರುವುದರಿಂದ, ಸರ್ವದಾ= ಯಾವಾಗಲೂ, ಚ್ಛುಷ್ಯದ್ಗಲಃ= ಒಣಗಿದ ಗಂಟಲುಳ್ಳವನಾಗಿಯೇ, ಭವೇತ್= ಆಗುತ್ತಾನೆ, ನ ಚೇತ್= ಇಲ್ಲದಿದ್ದರೆ, ಬಹುಜಲ್ಪತಃ= ಅನೇಕ ಬಾರಿ ಹೇಳುವುದರಿಂದ, ಅಯಂ ಅತ್ಯಂತಶಬ್ದಃ= ಈ ಅತ್ಯಂತ ಶಬ್ದವು, ಶೋಷಯೇತ್= ಅವನ ಗಂಟಲನ್ನು ಒಣಗಿಸುತ್ತದೆ.

**ಅನುವಾದ-** ಯಾವನು ವಿದ್ಯಮಾನವಾದ ಘಟಕ್ಕೂ ಅತ್ಯಂತಾಭಾವವನ್ನೇ ಅಂಗೀಕರಿಸುತ್ತಾನೆಯೋ ಅವನು ಜಲಾಹರಣಯೋಗ್ಯವಾದ ವಸ್ತುವು ಇಲ್ಲದಿರುವುದರಿಂದ ತನ್ನ ಗಂಟಲನ್ನು ಒಣಗಿಸಿಕೊಳ್ಳುತ್ತಾನೆ. ಇಲ್ಲದಿದ್ದರೆ ಎಂದರೆ

**ಯಾವಾಗಲಾದರೂ ಎಲ್ಲಿಯಾದರೂ ಇರುವ ವಸ್ತುವಿಗೂ ಅತ್ಯಂತಾಭಾವವನ್ನು ಒಪ್ಪಿದರೆ ಅತ್ಯಂತ ಎಂಬ ಶಬ್ದವು ವ್ಯರ್ಥವಾಗುವುದರಿಂದ ಅಂತಹ ಶಬ್ದವನ್ನು ವಿದ್ಯಮಾನ ವಸ್ತುಗಳ ಅಭಾವಕ್ಕೆಲ್ಲಾ ಉಪಯೋಗಿಸಿ ಅವನ ಗಂಟಲು ಒಣಗುತ್ತದೆ.**

**ಭಾವವಿಲಾಸಿನೀ–** ಅತ ಏವ ಘಟಾದೇರತ್ಯಂತಾಭಾವ ಪ್ರತಿಯೋಗಿತ್ವಕಥನಮಯುಕ್ತಮಿತ್ಯಾಹ – **ಯ ಇತಿ ॥** ಸಃ ಘಟಾತ್ಯಂತಾಭಾವವಾದೀ । ಸರ್ವದಾಽಭಾವಾದಿತಿ ಸಂಬಂಧಃ । ನ ಚೇತ್ ಸರ್ವದಾಽಭಾವೋ ನಚೇತ್ । ಶೋಷಯೇತ್ ಗಲಂ ಶೋಷಯೇತ್ । ಕದಾಚಿತ್ ಕ್ವಚಿದ್ ವಿದ್ಯಮಾನಸ್ಯಾಪ್ಯಭಾವಸ್ಯಾತ್ಯಂತಾಭಾವತ್ವೇಽತ್ಯಂತಪದವೈಯರ್ಥ್ಯಮಿತಿ ಭಾವಃ ॥ ೭೬೯ ॥

**ವಿವರಣೆ–** ಆದ್ದರಿಂದಲೇ ಘಟಾದಿಗಳಿಗೆ ಅತ್ಯಂತಾಭಾವ ಪ್ರತಿಯೋಗಿತ್ವವು ಇಲ್ಲ ಎಂದು ಇಲ್ಲಿ ಸಮರ್ಥನೆ ಮಾಡುತ್ತಾರೆ. ಅವಿದ್ಯಮಾನ ವಸ್ತುಗಳಿಗೆ ಹೇಳಿದಂತೆ ವಿದ್ಯಮಾನ ವಸ್ತುಗಳ ಅಭಾವವನ್ನೂ ಅತ್ಯಂತಾಭಾವವೆಂದು ಕರೆದರೆ ವಿದ್ಯಮಾನ ವಸ್ತುಗಳು ಅನೇಕವಾಗಿರುವುದರಿಂದ ಅವುಗಳ ಅಭಾವವನ್ನು ಹೇಳುವಾಗಲೆಲ್ಲ ಅತ್ಯಂತ, ಅತ್ಯಂತ ಎಂಬ ಶಬ್ದವನ್ನು ಬಳಸಿ ಅವನ ಗಂಟಲು ಒಣಗುತ್ತದೆ ಎಂದು ಪರಿಹಾಸ ಮಾಡಿ ವಿದ್ಯಮಾನ ವಸ್ತುವಿನ ಅಭಾವಕ್ಕೆ ಅತ್ಯಂತಾಭಾವವೆಂದು ಹೇಳುವಾಗ ಅತ್ಯಂತ ಶಬ್ದವು ವ್ಯರ್ಥವಾಗುತ್ತದೆ ಎಂದು ಹೇಳುತ್ತಾರೆ.

**ಪ್ರಾಗಭಾವಾದಯೋಪ್ಯತ್ಯಂತಾಭಾವಾಃ ಸ್ಯುರ್ನ ಚೇತ್ ತವ ।**
**ಧರ್ಮೀ ತಸ್ಯಾಪ್ಯುಕ್ತರೀತ್ಯಾ ಸನ್ನೇವೇತಿ ವಿನಿಶ್ಚಿತಃ ॥ ೭೭೦ ॥**

**ಅರ್ಥ–** ನ ಚೇತ್= ಅಲ್ಲಿ ಅತ್ಯಂತ ಪದವು ವ್ಯರ್ಥವಾಗದಿದ್ದರೆ, ಪ್ರಾಗಭಾವಾದಯೋಽಪಿ= ಪ್ರಾಗಭಾವಾದಿಗಳೂ ಕೂಡ, ತವ= ನಿನಗೆ, ಅತ್ಯಂತಾಭಾವಾಃ ಸ್ಯುಃ= ಅತ್ಯಂತಾಭಾವಗಳೇ ಆಗಲಿ, ತಸ್ಯಾಪಿ= ಶಶವಿಷಾಣಾಭಾವಕ್ಕೂ, ಉಕ್ತ ರೀತ್ಯಾ= ಹಿಂದೆ ಹೇಳಿದ ರೀತಿಯಲ್ಲಿ, ಧರ್ಮೀ= ಧರ್ಮಿಯು, ಸನ್ನೇವೇತಿ= ಸತ್ಯವೆಂದೇ, ವಿನಿಶ್ಚಿತಃ= ನಿಶ್ಚಿತವಾಗಿದೆ.

**ಅನುವಾದ– ಅಲ್ಲಿ ಅತ್ಯಂತ ಪದವು ವ್ಯರ್ಥವಾಗದಿದ್ದರೆ ಪ್ರಾಗಭಾವಾದಿಗಳೂ ಕೂಡ ನಿನಗೆ ಅತ್ಯಂತಾಭಾವಗಳೇ ಆಗಲಿ. ಶಶವಿಷಾಣಾಭಾವಕ್ಕೂ ಹಿಂದೆ ಹೇಳಿದ ರೀತಿಯಲ್ಲಿ ಧರ್ಮಿಯು ಸತ್ಯವೆಂದೇ ನಿಶ್ಚಿತವಾಗಿದೆ.**

**ಭಾವವಿಲಾಸಿನೀ–** ನಚೇತ್ ತತ್ರಾತ್ಯಂತಪದವೈಯರ್ಥ್ಯಂ ನಚೇತ್ । ತಸ್ಯ ಶಶಶೃಂಗಾದ್ಯತ್ಯಂತಾಭಾವಸ್ಯ ॥ ೭೭೦ ॥

**ವಿವರಣೆ–** ವಿದ್ಯಮಾನ ವಸ್ತುವಿನ ಅಭಾವಕ್ಕೂ ಅತ್ಯಂತಾಭಾವವನ್ನು ಒಪ್ಪಿದರೆ ಪ್ರಾಗಭಾವ ಮತ್ತು ಪ್ರಧ್ವಂಸಗಳನ್ನು ಒಪ್ಪಬೇಕಾಗಿಲ್ಲ. ಅತ್ಯಂತಾಭಾವವನ್ನೇ ಮೂರು ವಿಧ ಎಂದು ಹೇಳಿ ಪ್ರಾಗಭಾವವನ್ನು ಪ್ರಾಕ್ ಕಾಲೀನ ಅತ್ಯಂತಾಭಾವವೆಂದೂ, ಧ್ವಂಸವನ್ನು

ಉತ್ತರ ಕಾಲೀನ ಅಭಾವವೆಂದೂ ಹೇಳಬಹುದು. ಪ್ರಾಗಭಾವ ಮತ್ತು ಪ್ರಧ್ವಂಸಗಳಲ್ಲಿ ಧರ್ಮಿಯ ಸತ್ವದ ಅಪೇಕ್ಷೆ ಇದೆ. ಅತ್ಯಂತಾಭಾವದ ಸ್ಥಳದಲ್ಲಿ ಧರ್ಮಿಸತ್ವದ ಅಪೇಕ್ಷೆ ಇಲ್ಲ ಎಂಬ ವೈಲಕ್ಷಣ್ಯವನ್ನು ಹೇಳುವಂತಿಲ್ಲ. ಏಕೆಂದರೆ ನಾವು ಅತ್ಯಂತಾಭಾವ ಸ್ಥಳದಲ್ಲಿಯೂ ಧರ್ಮಿಯ ಸತ್ವವು ಇದೆ ಎಂದು ಸಮರ್ಥಿಸಿದ್ದೇವೆ.

**ಏವಂ ಚ ಧರ್ಮಿಣಃ ಸತ್ವಂ ಸರ್ವಾಭಾವೇಷು ಯದ್ ಧ್ರುವಂ ।**
**ಅನ್ಯೋನ್ಯಾಭಾವರೂಪೋಽಯಂ ಭೇದೋ ನಾರೋಪಿತೇಷು ತತ್ ॥೭೭೦॥**

**ಅರ್ಥ–** ಏವಂ ಚ= ಎಲ್ಲ ರೀತಿಯಲ್ಲಿ, ಯತ್= ಯಾವ ಕಾರಣದಿಂದ, ಸರ್ವಾಭಾವೇಷು= ಎಲ್ಲ ಅಭಾವಗಳಲ್ಲಿಯೂ, ಧರ್ಮಿಣಃ ಸತ್ವಂ= ಧರ್ಮಿಯ ಸತ್ವವು, ಧ್ರುವಂ= ನಿಯತವಾಗಿದೆಯೋ, ತತ್= ಆ ಕಾರಣದಿಂದ, ಆರೋಪಿತೇಷು= ಅಸತ್ಯವಾದವುಗಳಲ್ಲಿ, ಅನ್ಯೋನ್ಯಾಭಾವರೂಪಃ= ಅನ್ಯೋನ್ಯಾಭಾವರೂಪವಾದ, ಅಯಂ ಭೇದಃ= ಈ ಭೇದವು, ನ= ಇರುವುದಿಲ್ಲ.

**ಅನುವಾದ–** ಆದ್ದರಿಂದ ಹಿಂದೆ ಹೇಳಿದಂತೆ ಎಲ್ಲ ಅಭಾವ ಸ್ಥಳಗಳಲ್ಲಿಯೂ ಧರ್ಮಿಯ ಸತ್ವವು ನಿಯತವಾಗಿರುವುದರಿಂದ ಆರೋಪಿತಚಂದ್ರಾದಿಪದಾರ್ಥಗಳಲ್ಲಿ ಅನ್ಯೋನ್ಯಾಭಾವ ರೂಪವಾದ ಈ ಭೇದವು ಇರುವುದಿಲ್ಲ.

**ಭಾವವಿಲಾಸಿನೀ–** ಸರ್ವಾಭಾವೇಷು ಪ್ರಾಗಭಾವಪ್ರಧ್ವಂಸಾನ್ಯೋನ್ಯಾಭಾವಾತ್ಯಂತಾಭಾವೇಷು ಯದಸ್ಮಾತ್ । ಆರೋಪಿತೇಷು ಆರೋಪಿತಚಂದ್ರೇಷು । ಸರ್ವಥಾಽವಿದ್ಯಮಾನೇಷ್ವಿತಿ ಯಾವತ್ । ತತ್ತಸ್ಮಾತ್ ॥ ೭೭೦ ॥

**ವಿವರಣೆ–** ಭೇದವು ಒಂದು ಅಭಾವ. ಅಭಾವಸಾಮಾನ್ಯಕ್ಕೆ ಧರ್ಮಿಸತ್ವ ಸಾಪೇಕ್ಷತ್ವವಿದೆ. ಅಸತ್‌ಸ್ಥಳದಲ್ಲಿ ಧರ್ಮಿಯು ಇಲ್ಲದಿರುವುದರಿಂದ ಅಲ್ಲಿ ಧರ್ಮಿಸತ್ವ ಸಾಪೇಕ್ಷವಾದ ಭೇದವು ಇರುವುದಿಲ್ಲ ಎಂದು ಅಭಿಪ್ರಾಯ.

**ವರ್ತಮಾನಃ ಪರಂ ಧರ್ಮೀ ಭಾವೋಽಸ್ಯಾಭಾವ ಏವ ವಾ ।**
**ಸ ಚ ಭಾವೇಷು ಭಾವಾತ್ಮಾ ಹ್ಯಭಾವೇಷು ತದಾತ್ಮಕಃ ॥ ೭೭೨ ॥**

**ಅರ್ಥ–** ಅಸ್ಯ= ಈ ಅನ್ಯೋನ್ಯಾಭಾವಕ್ಕೆ, ವರ್ತಮಾನಃ ಪರಂ= ಕೇವಲ ವಿದ್ಯಮಾನವಾದ, ಭಾವಃ ಅಭಾವ ಏವ ಹಿ= ಭಾವವಾಗಲೀ ಅಥವಾ ಅಭಾವವಾಗಲೀ, ಧರ್ಮೀ= ಧರ್ಮಿಯಾಗುತ್ತದೆ, ಸ ಚ= ಆ ಅನ್ಯೋನ್ಯಾಭಾವವಾದರೂ, ಭಾವೇಷು= ಭಾವಗಳಲ್ಲಿ, ಭಾವಾತ್ಮಾ= ಭಾವರೂಪವಾಗಿರುತ್ತದೆ, ಅಭಾವೇಷು= ಅಭಾವಗಳಲ್ಲಿ, ತದಾತ್ಮಕಃ ಹಿ= ಅಭಾವರೂಪವಾಗಿಯೇ ಇರುತ್ತದೆಯಷ್ಟೇ.

**ಅನುವಾದ-** ಅನ್ಯೋನ್ಯಾಭಾವಕ್ಕೆ ವಿದ್ಯಮಾನವಾದ ವಸ್ತುವೇ ಅದು ಭಾವವಾಗಲೀ ಅಥವಾ ಅಭಾವವಾಗಲೀ ಧರ್ಮಿಯಾಗುತ್ತದೆ. ಅನ್ಯೋನ್ಯಾಭಾವರೂಪವಾದ ಭೇದವು ಭಾವಗಳಲ್ಲಿ ಭಾವರೂಪವಾಗಿಯೂ ಅಭಾವಗಳಲ್ಲಿ ಅಭಾವರೂಪ ವಾಗಿಯೂ ಇರುತ್ತದೆಯಷ್ಟೇ?

**ಭಾವವಿಲಾಸಿನೀ–** ವರ್ತಮಾನಃ ವಿದ್ಯಮಾನಃ । ಅಸ್ಯಾನ್ಯೋನ್ಯಾಭಾವಸ್ಯ । ಸಃ ಅನ್ಯೋನ್ಯಾ-ಭಾವಃ ॥ ೭೭೨ ॥

**ವಿವರಣೆ–** ಅನ್ಯೋನ್ಯಾಭಾವರೂಪವಾದ ಭೇದವು ಧರ್ಮಿಸ್ವರೂಪವಾದುದರಿಂದ ಅದು ಧರ್ಮಿಯಾದ ಭಾವದಲ್ಲಿ ಭಾವರೂಪದಿಂದಲೂ, ಧರ್ಮಿಯಾದ ಅಭಾವದಲ್ಲಿ ಅಭಾವರೂಪದಿಂದಲೂ ಇರುತ್ತದೆ ಎಂದು ಅಭಿಪ್ರಾಯ.

**ಪಟ ಏವ ಘಟೋ ನೇತಿ ಸಮಾನಾಧಿಕೃತತ್ವತಃ ।**
**ಯತಃ ಪ್ರತೀಯತೇ ಸರ್ವೈಃ ತತೋ ಧರ್ಮ್ಯಭಿನ್ನತಾ ॥ ೭೭೩ ॥**

**ಅರ್ಥ–** ಯತಃ= ಯಾವ ಕಾರಣದಿಂದ, ಪಟ ಏವ ಘಟೋ ನ= ಇದು ಪಟವೇ ಘಟವಲ್ಲ, ಇತಿ= ಎಂದು, ಸಮಾನಾಧಿಕೃತತ್ವತಃ= ಸಾಮಾನಾಧಿಕರಣ್ಯದಿಂದ, ಸರ್ವೈಃ= ಎಲ್ಲರಿಂದಲೂ, ಪ್ರತೀಯತೇ= ತಿಳಿಯಲ್ಪಡುತ್ತದೆಯೋ, ತತಃ= ಆ ಕಾರಣದಿಂದ ಭೇದವು, ಧರ್ಮ್ಯಭಿನ್ನತಾ= ಧರ್ಮಿಯಿಂದ ಅಭಿನ್ನವಾಗಿದೆ.

**ಅನುವಾದ-** ಯಾವ ಕಾರಣದಿಂದ ಇದು ಪಟವೇ ಘಟವಲ್ಲ ಎಂದು ಭೇದವು ಸಮಾನಾಧಿಕರಣವಾಗಿ ಎಲ್ಲರಿಂದಲೂ ತಿಳಿಯಲ್ಪಡುತ್ತದೆಯೋ ಆದ್ದರಿಂದ ಭೇದವು ಧರ್ಮಿಗಿಂತ ಅಭಿನ್ನವಾಗಿದೆ.

**ಭಾವವಿಲಾಸಿನೀ–** ಹೀತ್ಯನೇನ ಸೂಚಿತಂ ಹೇತುಮಾಹ – **ಪಟ ಏವೇತಿ** ॥ ಸಮಾನಾಧಿಕೃತತ್ವತಃ ಸಾಮಾನಾಧಿಕರಣ್ಯಾದಿತ್ಯರ್ಥಃ । ತತಃ ಸಾಮಾನಾಧಿಕರಣ್ಯೇನ ಪ್ರತೀಯಮಾನತ್ವಾತ್ । ಘಟಃ ಪಟೋ ನೇತಿ । ಅಭಾವಃ ಭಾವೋ ನೇತಿ ಭಾವೇಽಭಾವೇ ಚ ಸಾಮಾನಾಧಿಕರಣ್ಯೇನ ಪ್ರತೀಯಮಾನತ್ವಾತ್ ಭಾವಾಭಾವಾತ್ಮಕೋಽನ್ಯೋನ್ಯಾಭಾವ ಇತಿ ಭಾವಃ ॥ ೭೭೩ ॥

**ವಿವರಣೆ–** ಸಮಾನಾಧಿಕರಣ್ಯದಿಂದಲೂ ಸಮಾನ ವಿಭಕ್ತಿಕ ಪದೋಪಸ್ಥಾಪ್ಯತ್ವ ಎಂಬಲ್ಲಿಯೂ ನಞ್ ಪದವು ಘಟಃ ಪಟೋ ನ ಎಂಬಲ್ಲಿಯೂ ಅಭಾವಃ ಭಾವೋ ನ ಎಂಬಲ್ಲಿಯೂ ನಞ್ ಪದವು ಘಟ ಪದದಿಂದಲೂ ಮತ್ತು ಅಭಾವ ಪದದಿಂದಲೂ ಸಾಮಾನಾಧಿಕರಣ್ಯವನ್ನು ಹೊಂದಿದೆ. ಆದ್ದರಿಂದ ನಞ್ ಪದಾರ್ಥವಾದ ಭೇದವು ಘಟದಿಂದ ಅಭಿನ್ನವಾಗಿಯೇ ತೋರುತ್ತದೆ. ಆದ್ದರಿಂದ ಭಾವಾಭಾವಗಳಲ್ಲಿರುವ ಭೇದವನ್ನು ಭಾವಾಭಾವಸ್ವರೂಪವೆಂದು ಅಂಗೀಕರಿಸಬೇಕು.

**ಭಾವಾಭಾವವಿರೋಧಶ್ಚ ಪ್ರತಿಯೋಗ್ಯನುಯೋಗಿನೋಃ ।**
**ಘಟಾಭಾವಃ ಪಟವತಿ ಘಟವತ್ಯೇವ ನಹ್ಯಸೌ ॥ ೭೭೪ ॥**

**ಅರ್ಥ–** ಭಾವಾಭಾವವಿರೋಧಶ್ಚ= ಭಾವಾಭಾವವಿರೋಧವೂ ಸಹ, ಪ್ರತಿಯೋಗ್ಯನುಯೋಗಿನೋಃ= ಪ್ರತಿಯೋಗಿ ಮತ್ತು ಅನುಯೋಗಿಗಳಿಗೆ ಮಾತ್ರ ಇರುತ್ತದೆ, ಘಟಾಭಾವಃ= ಘಟಾಭಾವವು, ಪಟವತಿ= ಪಟವು ಇದ್ದಲ್ಲಿ ಇರುತ್ತದೆ, ಅಸೌ= ಘಟಾಭಾವವು, ಘಟವತ್ಯೇವ= ಘಟವು ಇದ್ದಲ್ಲಿಯೇ, ನ ಹಿ= ಇರುವುದಿಲ್ಲವಷ್ಟೇ.

**ಅನುವಾದ–** ಭಾವಾಭಾವವಿರೋಧವಾದರೂ ಪ್ರತಿಯೋಗಿ ಮತ್ತು ಅನುಯೋಗಿಗಳಿಗೆ ಇರುತ್ತದೆ. ಪಟವಿದ್ದಲ್ಲಿ ಘಟಾಭಾವವಿರುತ್ತದೆಯೇ ಹೊರತು ಘಟವಿದ್ದಲ್ಲಿಯೇ ಘಟಾಭಾವವಿರುವುದಿಲ್ಲವಷ್ಟೇ.

**ಭಾವವಿಲಾಸಿನೀ–** ನನ್ವನ್ಯೋನ್ಯಾಭಾವಸ್ಯ ಭಾವಸ್ವರೂಪತ್ವೇ ಭಾವಾಭಾವವಿರೋಧ ಶಾಂತಿರಿತ್ಯತ ಆಹ – **ಭಾವಾಭಾವೇತಿ** ॥ ಪ್ರತಿಯೋಗ್ಯನುಯೋಗಿನೋಃ ಪ್ರತಿಯೋಗ್ಯನುಯೋಗಿರೂಪಭಾವಾಭಾವಯೋರೇವ । ನತು ಯಸ್ಯಕಸ್ಯಾಪ್ಯಭಾವಸ್ಯ ಯೇನ ಕೇನಾಪಿ ಭಾವೇನ ವಿರೋಧ ಇತಿ ಭಾವಃ । ತತ್ರ ಹೇತುಮಾಹ – **ಘಟಾಭಾವ ಇತಿ** ॥ ಹಿ ಯಸ್ಮಾತ್ ಘಟಾಭಾವಃ ಪಟವತಿ ಭೂತಲೇ ವರ್ತತೇ । ಅಸೌ ಘಟಾಭಾವಃ ಘಟವತ್ಯೇವ ಭೂತಲೇ ನ । ತಸ್ಮಾತ್ ಪ್ರತಿಯೋಗ್ಯನುಯೋಗಿರೂಪಭಾವಾಭಾವಾಯೋರೇವ ವಿರೋಧೋ ನತು ಯಸ್ಯ ಕಸ್ಯಾಪ್ಯಭಾವಸ್ಯ ಯೇನ ಕೇನಾಪಿ ಭಾವೇನ ॥ ೭೭೪ ॥

**ವಿವರಣೆ–** ಭಾವದಲ್ಲಿರುವ ಅನ್ಯೋನ್ಯಾಭಾವಕ್ಕೆ ಭಾವಸ್ವರೂಪವನ್ನು ಒಪ್ಪಿದರೆ ಭಾವಾಭಾವ ವಿರೋಧವೇ ಇಲ್ಲದಂತಾಗುತ್ತದೆ ಎಂಬ ಪ್ರಶ್ನೆಗೆ ಇಲ್ಲಿ ಉತ್ತರವನ್ನು ಹೇಳುತ್ತಾರೆ. ಭಾವಾಭಾವವಿರೋಧವೆಂದರೆ ಒಂದು ಅಭಾವದ ಪ್ರತಿಯೋಗಿಗೂ ಮತ್ತು ಅದರ ಅನುಯೋಗಿಯಾದ ಅಭಾವಕ್ಕೂ ವಿರೋಧವೆಂದು ಅರ್ಥ. ಹೊರತು ಯಾವುದೇ ಅಭಾವಕ್ಕೆ ಯಾವುದೇ ಭಾವದಿಂದ ವಿರೋಧವಿದೆ ಎಂದು ಅಲ್ಲ. ಘಟಾಭಾವ ಸ್ಥಲದಲ್ಲಿ ಘಟವು ಪ್ರತಿಯೋಗಿ, ಘಟಾಭಾವವು ಅನುಯೋಗಿ. ಅವುಗಳಿಗೆ ವಿರೋಧವಿರುವುದರಿಂದ ಘಟವಿದ್ದ ಸ್ಥಳದಲ್ಲಿ ಘಟಾಭಾವವು ಇರುವುದಿಲ್ಲ. ಪಟವಿದ್ದ ಸ್ಥಳದಲ್ಲಿ ಮಾತ್ರ ಘಟಾಭಾವವು ಇರುತ್ತದೆ ಎಂದು ಅಭಿಪ್ರಾಯ.

**ಏವಂ ಘಟಸ್ಯ ಭೇದೋಽಯಂ ಪಟೇಽಸ್ತಿ ನ ಘಟೇ ಪರಂ ।**
**ಅತಃ ಸಿದ್ಧೋ ವಿರೋಧೋಽಸ್ಮಿನ್ ಪ್ರತಿಯೋಗ್ಯನುಯೋಗಿನೋಃ ॥ ೭೭೫ ॥**

**ಅರ್ಥ–** ಏವಂ= ಇದೇ ರೀತಿಯಲ್ಲಿ, ಅಯಂ ಘಟಸ್ಯ ಭೇದಃ= ಈ ಘಟಭೇದವು, ಪಟೇಽಸ್ತಿ= ಪಟದಲ್ಲಿದೆ, ಪರಂ= ಆದರೆ, ಘಟೇ ನ= ಘಟದಲ್ಲಿ ಇಲ್ಲ, ಅತಃ= ಆದ್ದರಿಂದ,

ಅಸ್ಮಿನ್= ಅನ್ಯೋನ್ಯಾಭಾವದಲ್ಲಿಯೂ, ಪ್ರತಿಯೋಗ್ಯನುಯೋಗಿನೋಃ= ಪ್ರತಿಯೋಗಿ ಮತ್ತು ಅನುಯೋಗಿಗಳಿಗೆ, ವಿರೋಧಃ= ವಿರೋಧವು, ಸಿದ್ಧಃ= ಸಿದ್ಧವಾಯಿತು.

**ಅನುವಾದ-** **ಇದೇ ರೀತಿಯಲ್ಲಿ ಈ ಘಟಭೇದವು ಪಟದಲ್ಲಿದೆ. ಆದರೆ ಘಟದಲ್ಲಿ ಘಟಭೇದವಿಲ್ಲ. ಆದ್ದರಿಂದ ಈ ಅನ್ಯೋನ್ಯಾಭಾವದಲ್ಲಿಯೂ ಪ್ರತಿಯೋಗಿ ಮತ್ತು ಅನುಯೋಗಿಗಳಿಗೆ ವಿರೋಧವು ಸಿದ್ಧವಾಯಿತು.**

**ಭಾವವಿಲಾಸಿನೀ–** ಅಸ್ತ್ವೇವಂ ಪ್ರಕೃತೇ ಕಿಮಿತ್ಯತ ಆಹ – **ಏವಮಿತಿ** ॥ ಏವಂ ಪೂರ್ವೋಕ್ತ-ಘಟಾಭಾವವತ್ । ಅಯಂ ಘಟಸ್ಯಭೇದಃ ಘಟಪ್ರತಿಯೋಗಿಕ ಭೇದ ಇತ್ಯರ್ಥಃ । ಪಟೇಽಸ್ತಿ । ತಸ್ಯಾಪ್ರತಿಯೋಗಿರೂಪತ್ವಾತ್ ತದ್ರೂಪೋಽಪ್ಯಸ್ತು । ಪರಂ ಕೇವಲಂ ಘಟೇ ನ । ತದ್ರೂಪತಾಽ-ಸ್ಮಾಭಿರಪಿ ನೋಚ್ಯತೇ । ಅತಃ ಘಟಭೇದಸ್ಯ ಪ್ರತಿಯೋಗಿಭೂತಘಟರೂಪತ್ವಾನುಕ್ತೇಃ । ಅಸ್ಮಿನ್ ಭೇದೇ । ಪ್ರತಿಯೋಗ್ಯನುಯೋಗಿನೋರ್ವಿರೋಧಃ ಸಿದ್ಧಃ । ಘಟಪ್ರತಿಯೋಗಿಕಭೇದಸ್ಯ ಧರ್ಮಿಭೂತ ಪಟರೂಪತ್ವಾಂಗಿಕಾರೇಽಪಿ ಪ್ರತಿಯೋಗಿಭೂತ ಘಟರೂಪತ್ವಾನಂಗೀಕಾರಾತ್ ಪ್ರತಿಯೋಗ್ಯನುಯೋಗಿರೂಪಭಾವಾಭಾವವಿರೋಧಸ್ಯ ಭೇದಸ್ಥಲೇಽಪಿ ನ ಕಾಚಿತ್ ಕ್ಷತಿರಿತಿ ಭಾವಃ ॥ ೭೭೫ ॥

**ವಿವರಣೆ–** ಪ್ರತಿಯೋಗಿಗಳ ಅನುಯೋಗಿವಿರೋಧವನ್ನು ಇಲ್ಲಿ ಅನ್ಯೋನ್ಯಾಭಾವ ಸ್ಥಳದಲ್ಲಿಯೂ ಉಪಪಾದನೆ ಮಾಡುತ್ತಾರೆ. ಘಟಭೇದಕ್ಕೆ ಘಟವು ಪ್ರತಿಯೋಗಿ, ಭೇದವು ಅನುಯೋಗಿ. ಘಟಭೇದವು ಪಟದಲ್ಲಿದೆ. ಅಲ್ಲಿ ಘಟಭೇದವು ಪಟಸ್ವರೂಪವಾಗಿದೆ. ಆದ್ದರಿಂದ ಘಟಭೇದಕ್ಕೆ ಪಟಸ್ವರೂಪತ್ವವನ್ನು ಒಪ್ಪುತ್ತೇವೆ. ಆದರೆ ಪ್ರತಿಯೋಗಿಯಾದ ಘಟಕ್ಕೆ ಪಟಸ್ವರೂಪತ್ವವಿಲ್ಲ. ಆದ್ದರಿಂದ ಅನುಯೋಗಿಪ್ರತಿಯೋಗಿಗಳಿಗೆ ಇಲ್ಲಿಯೂ ಸಹ ವಿರೋಧವೇ ಇದೆ ಎಂದು ಅಭಿಪ್ರಾಯ.

**ಉಕ್ತಪ್ರತ್ಯಕ್ಷಬಲತಃ ಸೋಽಭಿನ್ನಃ ಸ್ವಸ್ವಧರ್ಮಿಣಾ ।**
**ಅನವಸ್ಥಾಭಿಯಾಂತೇ ಚ ಧರ್ಮ್ಯೈಕ್ಯಂ ವಾಚ್ಯಮಸ್ಯ ಹಿ ॥ ೭೭೬ ॥**

**ಅರ್ಥ–** ಸಃ= ಅನ್ಯೋನ್ಯಾಭಾವವು, ಉಕ್ತಪ್ರತ್ಯಕ್ಷಬಲತಃ= ಹಿಂದೆ ಹೇಳಿದ ಪ್ರತ್ಯಕ್ಷ ಬಲದಿಂದ, ಸ್ವಧರ್ಮಿಣಾ= ತನ್ನ ಧರ್ಮಿಯಿಂದ, ಅಭಿನ್ನಃ= ಅಭಿನ್ನವಾಗಿದೆ, ಅಸ್ಯ= ಈ ಅನ್ಯೋನ್ಯಾಭಾವಕ್ಕೆ, ಅನವಸ್ಥಾಭಿಯಾ= ಅನವಸ್ಥೆಯ ಹೆದರಿಕೆಯಿಂದ, ಅಂತೇ ಚ= ಕೊನೆಯಲ್ಲಾದರೂ, ಧರ್ಮ್ಯೈಕ್ಯಂ= ಧರ್ಮ್ಯೈಕ್ಯವು, ವಾಚ್ಯಂ ಹಿ= ಹೇಳಲ್ಪಡಲೇಬೇಕಷ್ಟೇ.

**ಅನುವಾದ-** **'ಘಟ ಪಟೋ ನ' ಎಂದು ಹಿಂದೆ ಹೇಳಿದ ಪ್ರತ್ಯಕ್ಷಬಲದಿಂದಲೂ ಭೇದವು ತನ್ನ ಧರ್ಮಿಯಿಂದ ಅಭಿನ್ನವೆಂದು ಸಿದ್ಧವಾಗುತ್ತದೆ. ಅನವಸ್ಥಾ-ದೋಷವನ್ನು ಪರಿಹಾರ ಮಾಡಿಕೊಳ್ಳಲು ಕೊನೆಯಲ್ಲಾದರೂ ಭೇದಕ್ಕೆ ಧರ್ಮಿಯ ಅಭೇದವನ್ನು ಹೇಳಲೇಬೇಕಷ್ಟೇ?**

**ಭಾವವಿಲಾಸಿನೀ**– ಸಃ ಭೇದಃ । ಅಸ್ಯ ಭೇದಸ್ಯ ॥ ೭೭೬ ॥

**ವಿವರಣೆ**– ಭೇದಕ್ಕೂ ಮತ್ತು ಧರ್ಮಿಗೂ ಭೇದವಿದ್ದರೆ ಆ ಎರಡನೆಯ ಭೇದಕ್ಕೂ ಮತ್ತು ಧರ್ಮಿಗೂ ಪುನಃ ಭೇದವೇ ಇರಬೇಕಾಗುತ್ತದೆ. ಆಗ ಮೂರನೆಯ ಭೇದವನ್ನು ಕಲ್ಪನೆ ಮಾಡಬೇಕು. ಆ ಮೂರನೆಯ ಭೇದವೂ ಧರ್ಮಿಗಿಂತ ಭಿನ್ನವೇ ಆಗಬೇಕಾಗಿರುವುದರಿಂದ, ಧರ್ಮಿಗೂ ಮೂರನೆಯ ಭೇದಕ್ಕೂ ಮಧ್ಯೆ ನಾಲ್ಕನೆಯ ಭೇದವನ್ನು ಕಲ್ಪನೆ ಮಾಡಬೇಕು. ಈ ಅನವಸ್ಥಾ ದೋಷವನ್ನು ಪರಿಹಾರ ಮಾಡಲು ಕೊನೆಯಲ್ಲಾದರೂ ಒಂದು ಕಡೆ ಧರ್ಮಿಗೂ ಮತ್ತು ಭೇದಕ್ಕೂ ಐಕ್ಯವಿದೆ ಎಂದು ಹೇಳಬೇಕು. ಅದನ್ನು ಮೊದಲೇ ಹೇಳುವುದು ಒಳ್ಳೆಯದು ಎಂದು ಅಭಿಪ್ರಾಯ.

ಉಕ್ತಪ್ರತ್ಯಕ್ಷಾನುಸಾರಾತ್ ಪ್ರಾಗೇವ ಸ ನಿಗದ್ಯತಾಂ ।
ಧರ್ಮಿತ್ವಾದೀಶಕ್ಲೃಪ್ತತ್ವಾತ್ತತ್ತಚ್ಛಕ್ತಿವಿಶೇಷತಃ ॥ ೭೭೭ ॥

**ಅರ್ಥ**– ಉಕ್ತಪ್ರತ್ಯಕ್ಷಾನುಸಾರಾತ್= ಹಿಂದೆ ಹೇಳಿದ ಪ್ರತ್ಯಕ್ಷಕ್ಕೆ ಅನುಸಾರವಾಗಿ (ಪದಾರ್ಥವು), ಧರ್ಮಿತ್ವಾತ್= ಭೇದಕ್ಕೆ ಧರ್ಮಿಯಾದುದರಿಂದ, ಈಶಕ್ಲೃಪ್ತತ್ವಾತ್= ಈಶ್ವರ ನಿಯತವಾದುದರಿಂದ, ತತ್ತಚ್ಛಕ್ತಿ ವಿಶೇಷತಃ= ಆಯಾ ಪದಾರ್ಥದ ಶಕ್ತಿ ವಿಶೇಷದಿಂದ, ಪ್ರಾಗೇವ= ಮೊದಲೇ, ಸಃ= ಭೇದಕ್ಕೆ ಧರ್ಮಿಯ ಅಭೇದವು, ನಿಗದ್ಯತಾಂ= ಹೇಳಲ್ಪಡಲಿ.

**ಅನುವಾದ**- ಹಿಂದೆ ಹೇಳಿದ ಪ್ರತ್ಯಕ್ಷದ ಬಲದಿಂದಲೂ ಮತ್ತು ಪದಾರ್ಥವು ಭೇದಕ್ಕೆ ಧರ್ಮಿಯಾದುದರಿಂದಲೂ ಈಶ್ವರ ನಿಯತವಾದುದರಿಂದಲೂ ಆಯಾ ವಸ್ತುಗಳಲ್ಲಿರುವ ವಿಶೇಷ ಎಂಬ ಹೆಸರಿನ ಸಾಮರ್ಥ್ಯದಿಂದಲೂ ಮೊದಲೇ ಅನ್ಯೋನ್ಯಾಭಾವಕ್ಕೆ ಧರ್ಮ್ಯೈಕ್ಯವು ಹೇಳಲ್ಪಡಲಿ.

**ಭಾವವಿಲಾಸಿನೀ**– ಸಃ ಧರ್ಮ್ಯಭೇದಃ । ಅಭೇದೇ ಕಥಂ ಧರ್ಮಧರ್ಮಿಭಾವ ಇತ್ಯತ ಆಹ – ಧರ್ಮಿತ್ವಾದೀತಿ ॥ ಆದಿಪದೇನ ಧರ್ಮತ್ವಾದಿಕಂ ಗ್ರಾಹ್ಯಮ್ ॥ ೭೭೭ ॥

ಇಹ ನೇತಿ ಪ್ರತೀತಸ್ತು ಭಿನ್ನೋಽಭಾವಸ್ತ್ರಿರೂಪವಾನ್ ।
ಆಧಾರಾಧೇಯಭಾವೋ ಹಿ ತೇಷಾಂ ಧರ್ಮಿಷು ದೃಶ್ಯತೇ ।
ಧರ್ಮ್ಯಭೇದೇ ತು ಮಾನಂ ನ ತದ್ಭಿನ್ನಾಃ ಸ್ವಸ್ವಧರ್ಮಿಭಿಃ ॥ ೭೭೮ ॥

**ಅರ್ಥ**– ಇಹ ನ ಇತಿ= ಇಲ್ಲಿ ಇಲ್ಲ ಎಂದು, ಪ್ರತೀತಃ= ಪ್ರತೀತವಾದ, ತ್ರಿರೂಪವಾನ್= ಮೂರು ರೂಪವುಳ್ಳ, ಅಭಾವಸ್ತು= ಅಭಾವವಾದರೂ, ಭಿನ್ನಃ= ಧರ್ಮಿಯಿಂದ ಭಿನ್ನವಾಗಿದೆ, ತೇಷಾಂ= ಆ ಮೂರು ಅಭಾವಗಳಿಗೆ, ಧರ್ಮಿಷು= ಧರ್ಮಿಗಳಲ್ಲಿ, ಆಧಾರಾಧೇಯ ಭಾವಃ= ಆಧಾರಾಧೇಯ ಭಾವವು, ದೃಶ್ಯತೇ ಹಿ= ತೋರುವುದಷ್ಟೇ,

ಧರ್ಮ್ಯಭೇದೇ ತು= ಧರ್ಮಿಯಿಂದ ಅಭೇದದ ವಿಷಯದಲ್ಲಿಯಾದರೂ, ಮಾನಂ ನ= ಪ್ರಮಾಣವು ಇರುವುದಿಲ್ಲ, ತತ್= ಆದ್ದರಿಂದ, ಆ ಮೂರು ಅಭಾವಗಳು, ಸ್ವಸ್ವಧರ್ಮಿಭಿಃ= ತಮ್ಮ ತಮ್ಮ ಧರ್ಮಿಗಳಿಂದ, ಭಿನ್ನಾಃ= ಭಿನ್ನವಾಗಿವೆ.

**ಅನುವಾದ-** ಇಲ್ಲಿ ಇಲ್ಲ ಎಂಬ ಪ್ರತೀತಿಗೆ ವಿಷಯವಾದ ಮೂರು ವಿಧವಾದ ಅಭಾವವು ಧರ್ಮಿಯಿಂದ ಭಿನ್ನವಾಗಿಯೇ ಇದೆ. ಏಕೆಂದರೆ ಅವುಗಳಿಗೂ ಮತ್ತು ಧರ್ಮಿಗೂ ಆಧಾರಾಧೇಯಭಾವವು ತೋರುತ್ತದೆ. ಆ ಮೂರು ಅಭಾವಗಳಿಗೆ ಧರ್ಮಿಯ ಅಭೇದವನ್ನು ಹೇಳುವುದಕ್ಕೆ ಯಾವ ಪ್ರಮಾಣವೂ ಇಲ್ಲ. ಆದ್ದರಿಂದ ಆ ಮೂರು ಅಭಾವಗಳು ತಮ್ಮ ತಮ್ಮ ಧರ್ಮಿಗಳಿಂದ ಭಿನ್ನವಾಗಿಯೇ ಇದೆ.

**ಭಾವವಿಲಾಸಿನೀ–** ಏವಂ ತರ್ಹಿ ಪ್ರಾಗಭಾವಪ್ರಧ್ವಂಸಾತ್ಯಂತಾಭಾವಾನಾಮಪಿ ಪ್ರಾಭಾಕರರೀತ್ಯಾ ಧರ್ಮಿಸ್ವರೂಪತ್ವಮಸ್ತ್ವಿತ್ಯತ ಆಹ – **ಇಹೇತಿ** ॥ ಅಭಾವಃ ಭಿನ್ನಃ ಧರ್ಮಿಣಾ ಭಿನ್ನ ಇತ್ಯರ್ಥಃ। ತತ್ರ ಹೇತುಂ ವಿಶಿನಷ್ಟಿ –**ಆಧಾರೇತಿ** ॥ ತೇಷಾಮಭಾವಾನಾಮ್ । ತತ್ ತಸ್ಮಾತ್ । ಇಹ ಭೂತಲೇ ಘಟೋ ನ ಕಪಾಲೇ ಘಟೋ ನ । ಕಾಲತ್ರಯೇ ಶಶಶೃಂಗಂ ನೇತ್ಯಭಾವತ್ರಯಸ್ಯಾಪಿ ಸ್ವಧರ್ಮಿಭಿರ್ಭೇದಸಾಪೇಕ್ಷಾಧಾರಾಧೇಯಭಾವಸ್ಯೈವ ಪ್ರತೀತತ್ವೇನಾಭೇದಬಾಧಕಸದ್ಭಾವಾತ್ ಸಾಧಕಾಭಾವಾಚ್ಚ ಧರ್ಮ್ಯಭೇದೋ ನಾಂಗೀಕ್ರಿಯತ ಇತಿ ಭಾವಃ ॥ ೭೭೮ ॥

**ವಿವರಣೆ–** 'ಇಹ ಭೂತಲೇ ಘಟೋ ನ', 'ಕಪಾಲೇ ಘಟೋ ನ', 'ಕಾಲತ್ರಯೇ ಶಶಶೃಂಗಂ ನ' ಎಂಬ ಅಭಾವ ಪ್ರತೀತಿಗಳಲ್ಲಿ, 'ಇಹ ಭೂತಲೇ ಘಟೋ ನ' ಎಂಬುದು ಅತ್ಯಂತಾಭಾವ ಪ್ರತೀತಿ. 'ಕಪಾಲೇ ಘಟೋ ನ' ಎಂಬುದು ಪ್ರಾಗಭಾವದ ಪ್ರತೀತಿ. 'ಕಾಲತ್ರಯೇ ಶಶಶೃಂಗಂ ನ' ಎಂಬುದು ಅತ್ಯಂತ ಆಸತ್ತಿನ ಪ್ರತೀತಿ, ಅದೂ ಸಹ ಅತ್ಯಂತಾಭಾವದ ಪ್ರತೀತಿಯೇ ಆಗಿದೆ. ಇಲ್ಲಿ ಕ್ರಮವಾಗಿ ಭೂತಲವೂ, ಕಪಾಲವೂ ಮತ್ತು ಕಾಲತ್ರಯವೂ ಧರ್ಮಿಗಳಾಗಿವೆ. ಇವುಗಳಿಗೂ ಮತ್ತು ಅಭಾವಗಳಿಗೂ ಭೇದವೇ ಇದೆ. ಅಲ್ಲಿ ಅಭೇದವನ್ನು ಅಂಗೀಕರಿಸುವುದಿಲ್ಲ ಎಂದು ಅಭಿಪ್ರಾಯ. ಅದೃಶ್ಯತ್ವಾದಿಕರಣದಲ್ಲಿ ಈ ಒಂದು ವಿಷಯವನ್ನು ಗಮನಿಸಬಹುದು. ಯತ್ತದದ್ರೇಶ್ಯಂ ಎಂಬುದು ಅಲ್ಲಿ ವಿಷಯವಾಕ್ಯ. ಅದ್ರೇಶ್ಯಂ ಎಂಬ ಶಬ್ದದಿಂದ ದೃಶ್ಯಭೇದವನ್ನು, ಅಗೋತ್ರಂ ಎಂಬ ಶಬ್ದದಿಂದ ಗೋತ್ರಾಭಾವವನ್ನು ಹೇಳುತ್ತದೆ. ಭೇದವು ಧರ್ಮಿಸ್ವರೂಪವಾದುದರಿಂದ ಅದೃಶ್ಯಂ ಎಂಬಲ್ಲಿ ಹೇಳಿದ ದೃಶ್ಯಭೇದವು ಬ್ರಹ್ಮನ ಸ್ವರೂಪಲಕ್ಷಣವಾಗುತ್ತದೆ. ಗೋತ್ರಾಭಾವವಾದರೂ ಧರ್ಮಿಗಿಂತ ಭಿನ್ನವಾದುದರಿಂದ ಅದು ಬ್ರಹ್ಮನ ಸ್ವರೂಪಲಕ್ಷಣವಾಗುವುದಿಲ್ಲ. ಆದ್ದರಿಂದ ಅನ್ಯೋನ್ಯಾಭಾವಕ್ಕೂ ಉಳಿದ ಅಭಾವಗಳಿಗೂ ಧರ್ಮ್ಯಭೇದ ಮತ್ತು ಧರ್ಮಿಭೇದಗಳು ಸಿದ್ಧವಾಗುತ್ತವೆ ಎಂದು ಅಭಿಪ್ರಾಯ.

ಏಕಾಭಾವೇ ತ್ವಭಾವೋನ್ಯೋ ಮೃತಮಾರಣವೇವ ಹಿ ॥ ೭೭೯ ॥

**ಅರ್ಥ–** ಏಕಾಭಾವೇ ತು= ಒಂದು ಅಭಾವವಿರುವಾಗ, ಅನ್ಯ ಅಭಾವಃ= ಇನ್ನೊಂದು ಅಭಾವವನ್ನು ಅಂಗೀಕರಿಸುವುದು, ಮೃತಮಾರಣವೇವ ಹಿ= ಮೃತಮಾರಣವಷ್ಟೇ.

**ಅನುವಾದ-** ಒಂದು ಅಭಾವವಿರುವಾಗ ಇನ್ನೊಂದು ಅಭಾವವನ್ನು ಒಪ್ಪುವುದು ಮೃತಮಾರಣವಾಗುವುದಷ್ಟೇ.

**ಭಾವವಿಲಾಸಿನೀ–** ಪೂರ್ವಂ ಪ್ರಸಕ್ತ್ಯಭಾವಾತ್ ಧರ್ಮ್ಯಭೇದಾಯೋಗಾತ್ ಧರ್ಮಿಸತ್ತ್ವಾಸಂಭವಾಚ್ಚ ಶಶವಿಷಾಣಾದೌ ನಾನ್ಯೋನ್ಯಾಭಾವ ಇತ್ಯುಕ್ತಮ್ । ಅಧುನಾಽಭಾವಸ್ಯಾಭಾವಾಂತರಾಸಹತ್ವಾಚ್ಚಾತ್ಯಂತಾಭಾವಪ್ರತಿಯೋಗಿನಿ ತಸ್ಮಿನ್ನಾನ್ಯೋನ್ಯಾಭಾವ ಇತ್ಯಾಹ – **ಏಕಾಭಾವ ಇತಿ ॥ ೭೭೯ ॥**

**ವಿವರಣೆ–** ಹಿಂದೆ ಪ್ರಸಕ್ತಿ ಇಲ್ಲದಿರುವುದರಿಂದ ಧರ್ಮ್ಯಭೇದವು ಕೂಡುವುದಿಲ್ಲವಾದ್ದರಿಂದ ಮತ್ತು ಧರ್ಮಿಸತ್ತ್ವವು ಇಲ್ಲದಿರುವುದರಿಂದ ಶಶವಿಷಾಣಾದಿಗಳಲ್ಲಿ ಅನ್ಯೋನ್ಯಾಭಾವವನ್ನು ಒಪ್ಪುವುದಿಲ್ಲ ಎಂದು ಹೇಳಿದರು. ಈಗ ಒಂದು ಅಭಾವಕ್ಕೆ ಇನ್ನೊಂದು ಅಭಾವ ಸಹಿಷ್ಣುತ್ವವು ಇಲ್ಲದಿರುವುದರಿಂದಲೂ ಅತ್ಯಂತಾಭಾವ-ಪ್ರತಿಯೋಗಿಯಾದ ಶಶವಿಷಾಣದಲ್ಲಿ ಅನ್ಯೋನ್ಯಾಭಾವವನ್ನು ಅಂಗೀಕರಿಸುವುದಿಲ್ಲ ಎಂದು ಹೇಳುತ್ತಾರೆ.

ಅನ್ಯೋನ್ಯಾಭಾವ ಏವೈಕೋ ವರ್ತಮಾನೇಷು ವಸ್ತುಷು ।
ನ ಪ್ರಧ್ವಂಸಃ ಪ್ರಾಗಭಾವೋ ನಾತ್ಯಂತಾಭಾವ ಏವ ವಾ ॥ ೭೮೦ ॥

**ಅರ್ಥ–** ವರ್ತಮಾನೇಷು ವಸ್ತುಷು= ವಿದ್ಯಮಾನವಾಗಿರುವ, ವಸ್ತುಗಳಲ್ಲಿ ಏಕೋ ಅನ್ಯೋನ್ಯಾಭಾವ ಏವ= ಒಂದು ಅನ್ಯೋನ್ಯಾಭಾವವೇ ಇರುತ್ತದೆ, ಪ್ರಧ್ವಂಸಃ= ಪ್ರಧ್ವಂಸವಾಗಲೀ, ಪ್ರಾಗಭಾವಃ= ಪ್ರಾಗಭಾವವಾಗಲೀ, ಅತ್ಯಂತಾಭಾವ ಏವ ವಾ= ಅಥವಾ ಅತ್ಯಂತಾಭಾವವಾಗಲೀ, ನ= ಇರುವುದಿಲ್ಲ.

**ಅನುವಾದ-** ವಿದ್ಯಮಾನವಾದ ವಸ್ತುವಿಗೆ ಅನ್ಯೋನ್ಯಾಭಾವವು ಮಾತ್ರ ಇರುತ್ತದೆ. ಪ್ರಾಗಭಾವವಾಗಲೀ, ಪ್ರಧ್ವಂಸವಾಗಲೀ, ಅತ್ಯಂತಾಭಾವವಾಗಲೀ ಇರುವುದಿಲ್ಲ.

**ಭಾವವಿಲಾಸಿನೀ–** ತದೇವ ವಿಶದಯತಿ – **ಅನ್ಯೋನ್ಯಾಭಾವ ಇತಿ ॥ ೭೮೦ ॥**

**ವಿವರಣೆ–** ಘಟವು ಇರುವಾಗ ಘಟದ ಅನ್ಯೋನ್ಯಾಭಾವವು ಪಟಾದಿಗಳಲ್ಲಿ ಇರುತ್ತವೆ. ಆದರೆ ಘಟಪ್ರಾಗಭಾವವಾಗಲೀ, ಘಟಧ್ವಂಸವಾಗಲೀ ಅಥವಾ ಘಟದ ಅತ್ಯಂತಾಭಾವವಾಗಲೀ ಇರುವುದಿಲ್ಲ. ಆದ್ದರಿಂದ ಅನ್ಯೋನ್ಯಾಭಾವವು ತಾನು

ಇರುವಾಗ ಉಳಿದ ಮೂರು ಅಭಾವಗಳು ಇರುವುದನ್ನು ಸಹಿಸುವುದಿಲ್ಲ ಎಂದು ಸಿದ್ಧವಾಗುತ್ತದೆ.

**ಇಹ ಭೂಮೌ ಘಟೋ ನೇತಿ ಯೋ ನಿಷೇಧಃ ಪ್ರತೀಯತೇ ।**
**ಸ ತತ್ಸಂಸರ್ಗನಾಶೋ ವಾ ತಸ್ಯ ಪ್ರಾಂಜ್ ನಾಸ್ತಿತೈವ ವಾ ॥ ೭೮೧ ॥**

**ಅರ್ಥ–** ಇಹ ಭೂಮೌ ಘಟೋ ನ= ಈ ಭೂಮಿಯಲ್ಲಿ ಘಟವಿಲ್ಲ, ಇತಿ= ಎಂದು, ಯಃ= ಯಾವ ಅಭಾವವು, ಪ್ರತೀಯತೇ= ತೋರುತ್ತದೆಯೋ, ಸಃ= ಅದು, ತತ್ಸಂಸರ್ಗನಾಶಃ= ಘಟದ ಸಂಸರ್ಗದ ಧ್ವಂಸವು, ವಾ= ಅಥವಾ, ತಸ್ಯ= ಘಟಸಂಸರ್ಗದ, ಪ್ರಾಜ್‌ನಾಸ್ತಿತೈವ= ಪ್ರಾಗಭಾವವೇ ಸರಿ.

**ಅನುವಾದ–** ಈ ಭೂಮಿಯಲ್ಲಿ ಘಟವಿಲ್ಲ ಎಂದು ಪ್ರತೀತವಾಗುವ ಅಭಾವವು ಘಟಸಂಸರ್ಗದ ಧ್ವಂಸ ಅಥವಾ ಘಟಸಂಸರ್ಗದ ಪ್ರಾಗಭಾವವೇ ಆಗಿದೆ.

**ಭಾವವಿಲಾಸಿನೀ–** ನನ್ವಿಹ ಭೂತಲೇ ಘಟೋ ನಾಸ್ತೀತಿ ವರ್ತಮಾನಘಟಸ್ಯೈವಾಭಾವಾಂತರಂ ಪ್ರತೀತೇರುಕ್ತಮಯುಕ್ತಮಿತ್ಯತ ಆಹ – ಇಹ ಭೂಮಾವಿತಿ ॥ ಸಃ ಅಭಾವಃ । ತಸ್ಯ ಘಟಸ್ಯ ಸಂಸರ್ಗನಾಶಃ ತತ್ ಸಂಸರ್ಗನಾಶಃ । ತಸ್ಯ ತತ್ ಸಂಸರ್ಗಸ್ಯ । ಪ್ರಾಜ್‌ನಾಸ್ತಿತಾ ಪ್ರಾಗ-ಭಾವಃ ॥ ೭೮೧ ॥

**ವಿವರಣೆ–** ಅನ್ಯತ್ರಘಟವಿರುವಾಗಲೇ ಇಲ್ಲಿ ಭೂತಲದಲ್ಲಿ ಘಟವಿಲ್ಲ ಎಂದು ಅಭಾವವು ತೋರುವುದರಿಂದ ಹಿಂದಿನ ಶ್ಲೋಕದಲ್ಲಿ ಹೇಳಿದ ಪ್ರಮೇಯವು ಸರಿಯಲ್ಲ ಎಂದು ಶಂಕಿಸಿದರೆ ಅದಕ್ಕೆ ಇಲ್ಲಿ ಉತ್ತರವನ್ನು ಕೊಡುತ್ತಾರೆ. ವಿದ್ಯಮಾನ ವಸ್ತುವಿಗೆ ಅನ್ಯೋನ್ಯಾಭಾವ ಮಾತ್ರವಿರುವುದೆಂದೇ ನಮ್ಮ ಸಿದ್ಧಾಂತ. ಈ ಸ್ಥಳದಲ್ಲಿ ತೋರುವ ಅಭಾವವು ವಿದ್ಯಮಾನ ಘಟದ ಅಭಾವವೇ ಅಲ್ಲ. ಅದು ಘಟಸಂಸರ್ಗದ ಪ್ರಾಗಭಾವ ಅಥವಾ ಘಟಸಂಸರ್ಗದ ಧ್ವಂಸ. ಘಟಸಂಸರ್ಗರೂಪವಾದ ಪ್ರತಿಯೋಗಿಯು ಇರುವಾಗ ಈ ಅಭಾವವು ಇರುವುದೇ ಇಲ್ಲವಾದ್ದರಿಂದ ಪ್ರತಿಯೋಗಿಯು ಇರುವಾಗ ಅನ್ಯೋನ್ಯಾಭಾವವನ್ನು ಬಿಟ್ಟು ಉಳಿದ ಯಾವ ಅಭಾವಗಳೂ ಇಲ್ಲ ಎಂದು ನಾವು ಹಿಂದೆ ಹೇಳಿದ ಪ್ರಮೇಯವು ಸುಸ್ಥವಾಗುತ್ತದೆ.

**ಸಂಸರ್ಗೋ ಯತ್ರ ನೈವ ಸ್ಯಾತ್ ತತ್ರ ತ್ವತ್ಯಂತನಾಸ್ತಿತಾ ।**
**ಯೋ ಘಟೋಽಸ್ತಿ ಕಥಂ ನಾಸ್ತಿ ಸ ಏವ ವ್ಯಾಹತಂ (ಹಿ) ಚ ತತ್ ॥೭೮೨॥**

**ಅರ್ಥ–** ಯತ್ರ= ಎಲ್ಲಿ, ಸಂಸರ್ಗಃ= ಸಂಸರ್ಗವು, ನೈವ ಸ್ಯಾತ್= ಉಂಟಾಗುವುದೇ ಇಲ್ಲವೋ, ತತ್ರತು= ಅಲ್ಲಿಯಾದರೂ, ಅತ್ಯಂತನಾಸ್ತಿತಾ= ಅತ್ಯಂತಾಭಾವವೇ ಆಗುತ್ತದೆ, ಯಃ ಘಟಾ ಅಸ್ತಿ= ಯಾವು ಘಟದಲ್ಲಿ ಇದೆಯೋ, ಸ ಏವ ಕಥಂ ನಾಸ್ತಿ= ಅದೇ ಇಲ್ಲವೆಂದು

ಹೇಗೆ ಆಗುತ್ತದೆ, ತತ್= ಘಟವು ಇದೆ, ಘಟವು ಇಲ್ಲ ಎಂದು ಹೇಳುವುದು, ವ್ಯಾಹತಂ ಹಿ= ವ್ಯಾಹತವಾಗುತ್ತದೆಯಷ್ಟೇ.

**ಅನುವಾದ-** ಆ ಸ್ಥಳದಲ್ಲಿ ಘಟ ಸಂಸರ್ಗವೇ ಉಂಟಾಗದಿದ್ದರೆ ಅದು ಘಟಸಂಸರ್ಗದ ಅತ್ಯಂತಾಭಾವವೇ ಆಗುತ್ತದೆ. ಯಾವ ಘಟವು ಇದೆಯೋ ಅದೇ ಘಟವು ಇಲ್ಲ ಎಂದು ಹೇಗೆ ಆಗುತ್ತದೆ. ಘಟವು ಇದೆ, ಘಟವು ಇಲ್ಲ ಎಂದು ಹೇಳುವುದು ವ್ಯಾಹತವಾಗುತ್ತದೆಯಷ್ಟೇ.

**ಭಾವವಿಲಾಸಿನೀ–** ಯತ್ರ ಕಾಶ್ಯಾದೌ । ನನು ಘಟೋ ನೇತಿ ಪ್ರತೀಯಮಾನೋಽಭಾವಃ ಕಥಂ ತತ್ ಸಂಸರ್ಗಾಭಾವಸ್ಸ್ಯಾದಿತಿ ಚೇತ್ ನ । ತಾರ್ಕಿಕೇಣಾಪಿ ಘಟಾತ್ಯಂತಾಭಾವಾಭಿಮತ-ಘಟಾಭಾವಸ್ಯ ಸಂಸರ್ಗಾಭಾವತ್ವೇನ ವ್ಯವಹ್ರಿಯಮಾಣತ್ವಾತ್ । ಯುಕ್ತ್ಯಂತರಂ ಚಾಹ – **ಯೋ ಘಟ ಇತಿ ॥** ಸ ಏವ ಕಥಂ ನಾಸ್ತೀತಿ ಸಂಬಂಧಃ । ತತ್ ಘಟೋಽಸ್ತಿ ಘಟೋ ನಾಸ್ತೀತ್ಯೇತತ್ । ಪ್ರಾಗಭಾವಪ್ರಧ್ವಂಸಾತ್ಯಂತಾಭಾವೇಷು ಘಟಾದಿ ಪ್ರತಿಯೋಗಿನ ಏವಾಭಾವಾತ್ ಘಟಾದ್ಯಭಾವತ್ವಂ ವಕ್ತುಂ ಶಕ್ಯಮ್ । ಇಹ ತು ಪ್ರತಿಯೋಗ್ಯಭಿಮತಘಟಸ್ಯ ವಿದ್ಯಮಾನತ್ವಾತ್ ಕಥಂ ತದಭಾವೋ ವಕ್ತವ್ಯಃ । ಏಕೋನೈವಾಕಾರೇಣೈಕದಾ ಭಾವಾಭಾವಯೋರೇಕತ್ರ ವಿರುದ್ಧತ್ವಾತ್ । ವಿದ್ಯಮಾನತ್ವಾತ್ವದೇವ ವಿದ್ಯಮಾನೇ ಘಟೇ ಪ್ರಾಗಭಾವಪ್ರಧ್ವಂಸಯೋ-ರಯೋಗಾತ್ ಘಟಸ್ವರೂಪೇಣ ಭಾವೋ ರೂಪಾಂತರೇಣೈವ ಚಾಭಾವೋ ವಾಚ್ಯಃ । ಕಿಂಚ ಶಶವಿಷಾಣವದತ್ಯಂತಾಭಾವಾಯೋಗಾತ್ ಇಹ ಘಟೋ ನೇತಿ ಪ್ರತೀತಸ್ಯ ತಸ್ಯಾಭಾವಸ್ಯಾ-ನ್ಯೋನ್ಯಾಭಾವಾತ್ ಯೋಗಾಚ್ಚ ಪರಿಶೇಷೇಣ ಘಟಸಂಸರ್ಗಸ್ಯೈವಾಭಾವೋ ವಕ್ತವ್ಯಃ । ಘಟಸಂಸರ್ಗೇ ತು ಘಟತಸ್ಯ ಪಶ್ಚಾದಾನಯನೇ ಪ್ರಾಗಭಾವಸ್ಯ ಅನ್ಯತ್ರಾಪಸರಣೇ ಪ್ರಧ್ವಂಸಸ್ಯ ಸರ್ವಥಾಽಸಂಬಂಧೇಽತ್ಯಂತಾಭಾವಸ್ಯ ಚ ವಕ್ತುಂ ಶಕ್ಯತ್ವಾತ್ । ಕಥಂ ತರ್ಹಿ ಘಟಃ ಪಟೋ ನೇತ್ಯತ್ರ ಪಟತಾದಾತ್ಮ್ಯಸ್ಯ ವಿದ್ಯಮಾನಸ್ಯೈವ ಘಟೇಽಭಾವ ಇತಿ ಚೇತ್ । ನ । ತತ್ರಾಪಿ ಪಟತಾದಾತ್ಮ್ಯಸಂಬಂಧಸ್ಯೈವ ಘಟೇ ನಿಷೇಧಾತ್ । ಸ ಚ ನಾಸ್ತ್ಯೇವೇತಿ ಕಥಂ ವಿದ್ಯಮಾನಸ್ಯಾಭಾವಃ । ನನು ತರ್ಹ್ಯಯಮಪ್ಯತ್ಯಂತಾಭಾವ ಏವಾಸ್ತ್ವಿತಿ ಚೇತ್ । ನ । ನಿಯಮೇನ ಘಟಃ ಪಟ ಇತಿ ಸಮಾನಾಧಿಕರಣಪದದ್ವಯಾರ್ಥತಯಾ ಪ್ರಾಪ್ತತಾದಾತ್ಮ್ಯಂ ಪ್ರಾಕ್ ಪ್ರಸಜ್ಯ ನೇತಿ ತತ್ತಾದಾತ್ಮ್ಯಸಂಸರ್ಗ ನಿಷೇಧರೂಪತ್ವಾಖ್ಯೇನಾತ್ಯಂತಾಭಾವ ವೈಲಕ್ಷಣ್ಯೇನಾನ್ಯೋನ್ಯಾಭಾವತ್ವಸ್ಯೈವ ನ್ಯಾಯತ್ವಾತ್ । ಘಟೇಪಟತಾದಾತ್ಮ್ಯಂ ನೇತ್ಯತ್ರ ತು ಪಟತಾದಾತ್ಮ್ಯಪದೇನ ತಾದಾತ್ಮ್ಯಸ್ಯಪ್ರಸಕ್ತಾವಪಿ ಪದದ್ವಯಸಾಮಾನಾಧಿಕರಣ್ಯಾರ್ಥತಯಾ ಪ್ರಾಪ್ತತಾದಾತ್ಮ್ಯಂ ಪ್ರಾಕ್ ಪ್ರಸಜ್ಯ ನೇತಿ ತತ್ತಾದಾತ್ಮ್ಯಸಂಸರ್ಗ ನಿಷೇಧರೂಪತ್ವಾಖ್ಯೇ-ನಾತ್ಯಂತಾಭಾವವೈಲಕ್ಷಣ್ಯೇನಾನ್ಯೋನ್ಯಾ ಭಾವತ್ವಸ್ಯೈವ ನ್ಯಾಯ್ಯತ್ವಾತ್ । ಘಟೇಪಟತಾದಾತ್ಮ್ಯಂ ನೇತ್ಯತ್ರ ತು ಪಟತಾದಾತ್ಮ್ಯಪದೇನ ತಾದಾತ್ಮ್ಯಸ್ಯ ಪ್ರಸಕ್ತಾವಪಿ ಪದದ್ವಯ ಸಾಮಾನಾಧಿ ಕರಣ್ಯಾರ್ಥತಯಾ ಪ್ರಾಪ್ತತಾದಾತ್ಮ್ಯಪ್ರಸಕ್ತ್ಯ ಭಾವೇನಾನ್ಯೋನ್ಯಾಭಾವತ್ವಾಯೋಗಾತ್ ।

**ಶಶಶೃಂಗಂ ನೇತಿವತ್ ತಾದಾತ್ಮ್ಯಂ ನೇತ್ಯಾಕಾರೇಣ ಯತ್ರ ತಾದಾತ್ಮ್ಯಂ ನಿಷಿದ್ಧ್ಯತೇ ಸೋऽತ್ಯಂತಾಭಾವಃ । ಅನೀದೃಶಾಕಾರೇಣ ಯತ್ರ ತಾದಾತ್ಮ್ಯಂ ನಿಷಿದ್ಧ್ಯತೇ ಸೋऽನ್ಯೋನ್ಯಾಭಾವ ಇತಿ ವಿವೇಕಃ । ಅತ ಏವಾಯಮಭಾವಃ ಘಟಃ ಪಟೋ ನ ಪಟೋ ಘಟೋ ನೇತ್ಯೇವಮಾಕಾರೇಣ ಪ್ರತೀಯತೇ । ಅತ್ಯಂತಾಭಾವಸ್ತು ಶಶಶೃಂಗಂ ನೇತ್ಯೇವ । ನತು ಶಶಶೃಂಗಮಿದಂ ನೇತಿ ॥ ೭೮೨ ॥**

**ವಿವರಣೆ**– ಇಲ್ಲಿರುವ ಘಟದ ಸಂಸರ್ಗವು ಕಾಶಿಯಲ್ಲಿ ಎಂದೂ ಉಂಟಾಗುವುದಿಲ್ಲ. ಆದ್ದರಿಂದ ಕಾಶಿಯಲ್ಲಿ ಘಟಾಭಾವವನ್ನು ಹೇಳಿದರೆ ಅದು ಘಟಸಂಸರ್ಗದ ಅತ್ಯಂತಾಭಾವವೇ ಆಗುತ್ತದೆ. ತಾರ್ಕಿಕರೂ ಸಹ ಅತ್ಯಂತಾಭಾವವನ್ನು ಸಂಸರ್ಗಾಭಾವವೆಂದು ಹೇಳುತ್ತಾರಷ್ಟೇ. ಯಾವ ಘಟವು ಎಲ್ಲಿ ಇದೆಯೋ, ಅಲ್ಲಿಯೇ ಆ ಘಟವು ಇಲ್ಲ ಎಂದು ಹೇಳಿದರೆ ಅದು ವ್ಯಾಹತವಾಗುತ್ತದೆ.

ಪ್ರಾಗಭಾವ, ಪ್ರಧ್ವಂಸ ಮತ್ತು ಅತ್ಯಂತಾಭಾವ ಸ್ಥಳಗಳಲ್ಲಿ ಪ್ರತಿಯೋಗಿಯಾದ ಘಟವೇ ಇಲ್ಲದಿರುವುದರಿಂದ ಅವುಗಳಿಗೆ ಘಟಾಭಾವತ್ವವನ್ನು ಹೇಳುವುದು ಯುಕ್ತವಾಗುತ್ತದೆ. ಇಲ್ಲಿ ಭೇದ ಸ್ಥಳದಲ್ಲಿಯಾದರೂ ಪ್ರತಿಯೋಗಿಯಾದ ಘಟವು ಇರುವುದರಿಂದ ಘಟಾಭಾವವನ್ನು ಹೇಗೆ ಹೇಳುವುದು? ಒಂದೇ ಆಕಾರದಿಂದ ಒಂದೇ ಕಾಲದಲ್ಲಿ ಒಂದೇ ಸ್ಥಳಗಳಲ್ಲಿ ಭಾವಾಭಾವಗಳು ವಿರುದ್ಧವಾದವುಗಳು. ಘಟವು ವಿದ್ಯಮಾನವಾದ ಕಾರಣದಿಂದಲೇ ಪ್ರಾಗಭಾವ ಮತ್ತು ಪ್ರಧ್ವಂಸಗಳು ಕೂಡದಿರುವುದರಿಂದ ಘಟಸ್ವರೂಪದಿಂದ ಭಾವವನ್ನು ರೂಪಾಂತರೇಣ ಅಭಾವವನ್ನು ಹೇಳುತ್ತೇವಷ್ಟೇ ಮತ್ತು ಶಶವಿಷಾಣದಂತೆ ಈ ಸ್ಥಳದಲ್ಲಿ ಅತ್ಯಂತಾಭಾವವು ಅಂಗೀಕಾರಾರ್ಹವಾದುದರಿಂದ ಮತ್ತು ಇಲ್ಲಿ ಘಟವಿಲ್ಲ ಎಂದು ಪ್ರತೀತವಾದ ಆ ಭಾವವು ಅನ್ಯೋನ್ಯಾಭಾವವಾಗಲು ಸಾಧ್ಯವಲ್ಲವಾದ್ದರಿಂದ ಪರಿಶೇಷದಿಂದ ಘಟ ಸಂಸರ್ಗಾಭಾವವನ್ನೇ ಹೇಳಬೇಕು. ಆ ಪ್ರದೇಶದಲ್ಲಿ ಘಟಸಂಸರ್ಗವು ಅನಂತರ ಉಂಟಾದರೆ ಇಹ ಘಟೋ ನ ಎಂಬ ಪ್ರತೀತಿಗೆ ವಿಶೇಷವಾದುದು ಸಂಸರ್ಗದ ಪ್ರಾಗಭಾವವೆಂದೂ, ಅಲ್ಲಿದ್ದ ಘಟವು ಇನ್ನೊಂದು ಕಡೆಗೆ ತೆಗೆದುಕೊಂಡು ಹೋಗಲ್ಪಟ್ಟರೆ ಅದು ಸಂಸರ್ಗದ ಪ್ರಧ್ವಂಸವೆಂದೂ ಆ ಸ್ಥಳದಲ್ಲಿ ಘಟದ ಸಂಬಂಧವು ಸರ್ವಥಾ ಉಂಟಾಗದಿದ್ದರೆ ಅದನ್ನು ಅತ್ಯಂತಾಭಾವವೆಂದೂ ಹೇಳುವುದು ಯುಕ್ತವಾಗುತ್ತದೆ. ಹಾಗಾದರೆ ಘಟಃಪಟೋ ನ ಎಂಬಲ್ಲಿ ಪಟತಾದಾತ್ಮ್ಯವು ಪಟದಲ್ಲಿ ವಿದ್ಯಮಾನವಾಗಿರುವುದರಿಂದ ಘಟದಲ್ಲಿ ಹೇಗೆ ಅದರ ಅಭಾವವನ್ನು ಹೇಳುವುದು ಎಂಬ ಪ್ರಶ್ನೆಯು ಬರುತ್ತದೆ. ಅದಕ್ಕೆ ಉತ್ತರ, ಅಲ್ಲಿಯೂ ಪಟತಾದಾತ್ಮ್ಯ ಸಂಬಂಧವನ್ನೇ ನಿಷೇಧ ಮಾಡುತ್ತೇವೆ ಎಂಬುದು. ಪಟತಾದಾತ್ಮ್ಯ ಸಂಬಂಧವಂತೂ ಘಟದಲ್ಲಿ ಇಲ್ಲವೇ ಇಲ್ಲವಷ್ಟೇ. ಆದ್ದರಿಂದ ವಿದ್ಯಮಾನವಸ್ತುವಿಗೆ ಅಭಾವವಿಲ್ಲ ಎಂಬುದಕ್ಕೆ ಏನೂ

ತೊಂದರೆಯಿಲ್ಲ. ಹಾಗಾದರೆ ಘಟಃ ಪಟೋ ನ ಎಂಬಲ್ಲಿಯೂ ಅತ್ಯಂತಾಭಾವವನ್ನೇ ಅಂಗೀಕರಿಸಿ ಎಂಬ ಶಂಕೆಗೆ ಅವಕಾಶವಿಲ್ಲ. ಏಕೆಂದರೆ ಘಟಃ ಪಟೋ ನ ಎಂದು ಹೇಳುವಾಗ ಮೊದಲು ಘಟಃ ಪಟಃ ಎಂದು ಹೇಳಿ ಎರಡು ಸಮಾನಾಧಿಕರಣ ಪದಗಳ ಅರ್ಥವಾಗಿ ಪ್ರಾಪ್ತವಾದ ತಾದಾತ್ಮ್ಯವನ್ನು ಮೊದಲು ಪ್ರಸಂಜನೆ ಮಾಡಿ ನ ಎಂಬ ಪದದಿಂದ ಆ ತಾದಾತ್ಮ್ಯ ಸಂಸರ್ಗವನ್ನು ನಿಷೇಧ ಮಾಡುವುದರಿಂದ ಇದು ಅತ್ಯಂತಾಭಾವಕ್ಕಿಂತಲೂ ವಿಲಕ್ಷಣವಾದುದು. ಅತ್ಯಂತಾಭಾವದಲ್ಲಿ ಪದಗಳಿಂದ ಪ್ರಾಪ್ತವಾದ ಪ್ರತಿಷೇಧವಿಲ್ಲ. ಆದ್ದರಿಂದ ಘಟಃ ಪಟೋ ನ ಎಂಬಲ್ಲಿ ಅನ್ಯೋನ್ಯಾಭಾವವೇ ಸಿದ್ಧವಾಗುತ್ತದೆ. ಘಟೇ ಪಟ ತಾದಾತ್ಮ್ಯಂ ನ ಎಂಬಲ್ಲಿ ಪಟತಾದಾತ್ಮ್ಯ ಪದದಿಂದ ಪ್ರಸಕ್ತವಾಗಿದ್ದರೂ ಸಹ ಆ ತಾದಾತ್ಮ್ಯವು ಸಮಾನಾಧಿಕರಣ್ಯವಾದ ಪದದ್ವಯದಿಂದ ಉಪಸ್ಥಾಪಿತವಾದುದಲ್ಲ. ಆದ್ದರಿಂದ ಅದು ಅನ್ಯೋನ್ಯಾಭಾವವಾಗುವುದಿಲ್ಲ, ಅತ್ಯಂತಾಭಾವವೇ ಆಗುತ್ತದೆ. ಶಶಶೃಂಗಂ ನ ಎನ್ನುವಂತೆ ಎಲ್ಲಿ ತಾದಾತ್ಮ್ಯಂ ನ ಎಂದೇ ತಾದಾತ್ಮ್ಯವನ್ನು ನಿಷೇಧ ಮಾಡುತ್ತೇವೆಯೋ, ಅಲ್ಲಿ ಅದು ಅತ್ಯಂತಾಭಾವವೇ ಆಗುತ್ತದೆ. ಅದನ್ನು ಬಿಟ್ಟು ತಾದಾತ್ಮ್ಯ ಪದವಿಲ್ಲದೇ ಸಾಮಾನಾಧಿಕರಣದಿಂದ ಪ್ರಾಪ್ತವಾದ ತಾದಾತ್ಮ್ಯವು ಎಲ್ಲಿ ನಿಷೇಧಿಸಲ್ಪಡುತ್ತದೆಯೋ, ಅದು ಅನ್ಯೋನ್ಯಾಭಾವವೇ ಆಗುತ್ತದೆ ಎಂದು ತಿಳಿಯಬೇಕು. ಆದ್ದರಿಂದಲೇ ಈ ಅನ್ಯೋನ್ಯಾಭಾವವು 'ಘಟಃ ಪಟೋ ನ' 'ಘಟವು ಪಟವಲ್ಲ' 'ಪಟಃ ಘಟೋ ನ' ಪಟವು ಘಟವಲ್ಲ ಎಂಬ ಈ ಆಕಾರದಿಂದ ತೋರುತ್ತದೆ. ಅತ್ಯಂತಾಭಾವವಾದರೋ ಶಶಶೃಂಗಂ ನ, ಶಶಶೃಂಗವು ಇಲ್ಲ ಎಂದೇ ತೋರುತ್ತದೆ. ಇದಂ ಶಶಶೃಂಗಂ ನ ಇದು ಶಶಶೃಂಗವಲ್ಲ ಎಂದು ತೋರುವುದಿಲ್ಲ. ಆದ್ದರಿಂದ ಶಶಶೃಂಗ ಸ್ಥಳದಲ್ಲಿ ಅತ್ಯಂತಾಭಾವವು, 'ಘಟಃ ಪಟೋ ನ' ಎಂಬಲ್ಲಿ ಅನ್ಯೋನ್ಯಾಭಾವವು ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

**ಸಂಸರ್ಗೋ ನೇತ್ಯಭಾವಸ್ತು ತತ್ಸಂಬಂಧಸ್ಯ ನಾಸ್ತಿತಾ ।**
**ಕಾಶ್ಯಾಮಯಂ ಚ ಸಂಸರ್ಗೋ ನೇತಿ ಚಾಸ್ಯ ನಿಷೇಧನಂ ॥ ೭೮೩ ॥**

**ಅರ್ಥ–** ಸಂಸರ್ಗೋ ನ= ಸಂಸರ್ಗವು ಇಲ್ಲ, ಇತಿ= ಎಂದು ತೋರುವ, ಅಭಾವಸ್ತು= ಅಭಾವವಾದರೂ, ತತ್ಸಂಬಂಧಸ್ಯ= ಸಂಸರ್ಗ ಸಂಬಂಧದ, ನಾಸ್ತಿತಾ= ಅತ್ಯಂತಾಭಾವವು, ಅಯಂ ಸಂಸರ್ಗಃ= ಏತದ್ದೇಶಘಟಸಂಸರ್ಗವು, ಕಾಶ್ಯಾಂ= ಕಾಶಿಯಲ್ಲಿ, ನೇತಿ= ಇಲ್ಲವಾದ ಕಾರಣದಿಂದ, ಅಸ್ಯ= ಆ ಸಂಸರ್ಗದ, ನಿಷೇಧನಂ= ನಿಷೇಧವು ಉಪಪನ್ನವಾಗುತ್ತದೆ.

**ಅನುವಾದ- ಸಂಸರ್ಗವು ಇಲ್ಲ ಎಂದು ಪ್ರತೀತವಾಗುವ ಅಭಾವವು ಸಂಸರ್ಗ ಸಂಬಂಧದ ಅತ್ಯಂತಾಭಾವ. ಏತದ್ಭೂತಲ ಘಟ ಸಂಸರ್ಗವು ಕಾಶಿಯಲ್ಲಿ ಇಲ್ಲದಿರುವುದರಿಂದ ಅದನ್ನು ನಿಷೇಧ ಮಾಡುವುದು ಯುಕ್ತವಾಗುತ್ತದೆ.**

**ಭಾವವಿಲಾಸಿನೀ–** ನನು ಘಟೋ ನಾಸ್ತೀತ್ಯಭಾವೋ ಘಟಸಂಸರ್ಗಾಭಾವಶ್ಚೇತ್ ಸಂಸರ್ಗೋ ನಾಸ್ತೀತಿ ಯೋಽಭಾವಃ ಪ್ರತೀಯತೇ ಸ ಕಸ್ಯೇತ್ಯತ ಆಹ – **ಸಂಸರ್ಗ ಇತಿ ॥** ತತ್ ಸಂಬಂಧಸ್ಯ ಸಂಸರ್ಗಸಂಬಂಧಸ್ಯ । ಏವಂಚೈತತ್ ಭೂತಲಘಟಸಂಸರ್ಗಃ ಕಾಶ್ಯಾಂ ನಾಸ್ತೀತಿ ಯೋಭಾವಃ ಪ್ರತೀಯತೇ ಸೋಽಪ್ಯೇತದ್ಭೂತಲಘಟಸಂಸರ್ಗಸ್ಯ ಯಃ ಕಾಶೀಸಂಸರ್ಗಃ ತಸ್ಯೈವ । ಸ ಚ ನಾಸ್ತ್ಯೇವೇತಿ ನ ಕ್ವಾಪಿ ಪ್ರಾಮಾಣಿಕಸ್ಯಾತ್ಯಂತಾಭಾವಪ್ರತಿಯೋಗಿತೇತ್ಯಾಹ – **ಕಾಶ್ಯಾಮಿತಿ ॥** ಅಸ್ಯ ಏತತ್ ಭೂತಲಘಟಸಂಸರ್ಗಸ್ಯ ॥ ೭೮೩ ॥

**ವಿವರಣೆ–** ಘಟೋ ನಾಸ್ತಿ ಎಂಬ ಅಭಾವವು ಘಟಸಂಸರ್ಗಾಭಾವವಾದರೆ ಘಟ ಸಂಸರ್ಗೋ ನಾಸ್ತಿ ಎಂದು ತೋರುವ ಅಭಾವವು ಯಾವ ಅಭಾವ ಎಂದು ಪ್ರಶ್ನೆಯನ್ನು ಕೇಳಿದರೆ ಅದು ಘಟಸಂಸರ್ಗದ ಅತ್ಯಂತಾಭಾವ ಎಂದು ಉತ್ತರವನ್ನು ಹೇಳುತ್ತಾರೆ. ಏತದ್ದೇಶ ಮತ್ತು ಘಟಸಂಸರ್ಗದ ಸಂಬಂಧವು ಎಂದೂ ಕಾಶಿಯಲ್ಲಿ ಇಲ್ಲದಿರುವುದರಿಂದ ಆ ಪ್ರತೀತಿಗೆ ವಿಷಯವಾದುದು ಸಂಸರ್ಗ ಸಂಬಂಧದ ಪ್ರಾಗಭಾವವೂ, ಸಂಸರ್ಗ ಸಂಬಂಧದ ಧ್ವಂಸವೂ ಅಲ್ಲ, ಸಂಸರ್ಗಸಂಬಂಧದ ಅತ್ಯಂತಾಭಾವವೇ ಎಂದು ಅಭಿಪ್ರಾಯ.

**ಘಟಸಂಸರ್ಗವತ್ ಸಂಸರ್ಗಸ್ಯ ಸಂಸರ್ಗನಾಸ್ತಿತಾ ।**
**ಸ ಚಾಪ್ರಾಮಾಣಿಕಸ್ತಸ್ಯ ಹ್ಯತ್ಯಂತಾಭಾವ ಏವ ಸಃ ॥ ೭೮೪ ॥**

**ಅರ್ಥ–** ಘಟಸಂಸರ್ಗವತ್= ಘಟಸಂಸರ್ಗದಂತೆ, ಸಂಸರ್ಗಸ್ಯ ಸಂಸರ್ಗನಾಸ್ತಿತಾ= ಸಂಸರ್ಗದ ಸಂಸರ್ಗಕ್ಕೂ ನಿಷೇಧವೇ ಇದೆ, ಸ ಚ= ಸಂಸರ್ಗದ ಸಂಸರ್ಗವು ಸಹ, ಅಪ್ರಾಮಾಣಿಕಃ= ಅಪ್ರಾಮಾಣಿಕವಾದುದು, ತಸ್ಯ= ಅದಕ್ಕೆ, ಅತ್ಯಂತಾಭಾವ ಏವ ಹಿ= ಅತ್ಯಂತಾಭಾವವೇ ಇದೆಯಷ್ಟೇ.

**ಅನುವಾದ–** ಘಟವು ನಾಸ್ತಿ ಎಂಬಲ್ಲಿ ತೋರುವ ಘಟಸಂಸರ್ಗದಂತೆ ಘಟಸಂಸರ್ಗಸಂಸರ್ಗೋ ನಾಸ್ತಿ ಎಂಬಲ್ಲಿ ತೋರುವ ಸಂಸರ್ಗಸಂಸರ್ಗವೂ ಅಪ್ರಾಮಾಣಿಕವಾದುದೇ. ಆದ್ದರಿಂದ ಅಲ್ಲಿ ಸಂಸರ್ಗಸಂಸರ್ಗದ ಅತ್ಯಂತಾಭಾವ ವನ್ನೇ ಅಂಗೀಕರಿಸುತ್ತೇವೆ.

**ಭಾವವಿಲಾಸಿನೀ–** ಘಟಸಂಸರ್ಗವತ್ ಯಥಾ ಘಟೋ ನಾಸ್ತೀತ್ಯುಕ್ತೇ ಘಟಸಂಸರ್ಗಸ್ಯೈವ ನಿಷೇಧಸ್ತದ್ವತ್ಕಾಶ್ಯಾಮೇತತ್ ಭೂತಲ ಘಟಸಂಸರ್ಗೋ ನಾಸ್ತೀತ್ಯುಕ್ತೇಽಪಿ ಸಂಸರ್ಗಸ್ಯ ಏತತ್ ಭೂತಲಘಟಸಂಸರ್ಗಸ್ಯ ಯಃ ಕಾಶೀಸಂಸರ್ಗಃ ತನ್ನಾಸ್ತಿತೇತ್ಯರ್ಥಃ । ಸಃ ಏತತ್ ಭೂತಲ-ಘಟಸಂಸರ್ಗಸ್ಯ ಕಾಶೀಸಂಸರ್ಗಃ । ತಸ್ಯ ಸಂಸರ್ಗಸಂಸರ್ಗಸ್ಯ । ಸಃ ಅಭಾವಃ ॥ ೭೮೨ ॥

**ವಿವರಣೆ–** ಘಟ ಸಂಸರ್ಗಸಂಸರ್ಗವು ಅಪ್ರಾಮಾಣಿಕವಾಗುವುದರಿಂದ ಎರಡು ಕಡೆಗಳಲ್ಲಿಯೂ ಅತ್ಯಂತಾಭಾವವನ್ನೇ ಹೇಳುತ್ತೇವೆ ಎಂದು ತಾತ್ಪರ್ಯ.

ಪ್ರಾಮಾಣಿಕಸ್ಯ ಪ್ರಾಗೂರ್ಧ್ವಂ ಪ್ರಾಗಭಾವವಿನಾಶನೇ ।
ವರ್ತಮಾನತ್ವಸಮಯೇ ತ್ವನ್ಯೋನ್ಯಾಭಾವ ಏವ ಹಿ ॥ ೭೮೫ ॥

**ಅರ್ಥ–** ಪ್ರಾಮಾಣಿಕಸ್ಯ= ಪ್ರಾಮಾಣಿಕವಾದ ವಸ್ತುವಿಗೆ, ಪ್ರಾಗೂರ್ಧ್ವಂ= ಅದರ ಉತ್ಪತ್ತಿಗಿಂತ ಮೊದಲು, ಮತ್ತು ನಾಶದ ನಂತರ, ಪ್ರಾಗಭಾವವಿನಾಶನೇ= ಕ್ರಮವಾಗಿ ಪ್ರಾಗಭಾವವು ಮತ್ತು ಪ್ರಧ್ವಂಸವು ಇರುತ್ತದೆ, ವರ್ತಮಾನತ್ವಸಮಯೇ ತು= ಆ ವಸ್ತುವು ಇರುವ ಕಾಲದಲ್ಲಿ ಮಾತ್ರ, ಅನ್ಯೋನ್ಯಾಭಾವ ಏವ ಹಿ= ಅನ್ಯೋನ್ಯಾಭಾವವು ಮಾತ್ರ ಇರುತ್ತದೆ.

**ಅನುವಾದ-** ಪ್ರಾಮಾಣಿಕವಾದ ವಸ್ತುವಿಗಾದರೆ ವಸ್ತುವಿನ ಉತ್ಪತ್ತಿಗಿಂತ ಮೊದಲು ಪ್ರಾಗಭಾವವು ವಸ್ತುವಿನ ನಾಶದ ಅನಂತರದಲ್ಲಿ ಧ್ವಂಸವು ಇರುತ್ತವೆ. ವಸ್ತುವು ಇರುವಾಗ ಮಾತ್ರ ಅನ್ಯೋನ್ಯಾಭಾವ ಒಂದೇ ಇರುತ್ತದೆ.

**ಭಾವವಿಲಾಸಿನೀ–** ತರ್ಹಿ ಪ್ರಾಮಾಣಿಸ್ಯ ಕೋ ಭಾವ ಇತ್ಯತ ಆಹ – **ಪ್ರಾಮಾಣಿಕಸ್ಯೇತಿ** ॥ ಪ್ರಾಕ್ ಉತ್ಪತ್ತೇಃ ಪ್ರಾಕ್ । ಊರ್ಧ್ವಂ ವರ್ತಮಾನತ್ವಾದೂರ್ಧ್ವಮ್ । ಪ್ರಾಕ್ ಪ್ರಾಗಭಾವ-ಪ್ರತಿಯೋಗಿತ್ವಂ ಊರ್ಧ್ವಂ ಪ್ರಧ್ವಂಸಪ್ರತಿಯೋಗಿತ್ವಮಿತ್ಯರ್ಥಃ । ವರ್ತಮಾನತ್ವಸಮಯೇ ತಯೋರಭಾವಯೋರಭಾವಾತ್ ಸತ ಏವ ಸದಂತರಭೇದಸದ್ಭಾವಾತ್ ಏಕನಿಷ್ಠಭೇದ-ಪ್ರತಿಯೋಗಿತ್ವಮನ್ಯಾಸ್ಯೇತ್ಯರ್ಥಃ ॥ ೭೮೫ ॥

**ವಿವರಣೆ–** ವರ್ತಮಾನತ್ವಕಾಲದಲ್ಲಿ ಪ್ರತಿಯೋಗಿಯ ಸತ್ವಕ್ಕೆ ಅನ್ಯೋನ್ಯಾಭಾವಾತಿರಿಕ್ತ ಅಭಾವ ಸಹಿಷ್ಣುತ್ವವು ಇಲ್ಲದಿರುವುದರಿಂದ ಅನ್ಯೋನ್ಯಾಭಾವವು ಒಂದೇ ಇರುತ್ತದೆ ಎಂದು ಅಭಿಪ್ರಾಯ.

ಅಭೂತೇ ಪ್ರಾಗಭಾವೋಸ್ತಿ ತಾದಾತ್ಮ್ಯಸ್ಯಾಪ್ಯಸೌ ತದಾ ।
ಅತಸ್ತದಾತ್ಮತಾಽನ್ಯಸ್ಮಿನ್ನಭೂತೇ ನೈವ ಶಂಕ್ಯತೇ ॥ ೭೮೬ ॥

**ಅರ್ಥ–** ಅಭೂತೇ= ಇನ್ನೂ ಉತ್ಪನ್ನವಾಗದ ವಸ್ತುವಿನಲ್ಲಿ, ತದಾ= ಆಗ, ತಾದಾತ್ಮ್ಯಸ್ಯಾಪಿ= ತಾದಾತ್ಮ್ಯದ್ದೂ ಕೂಡ, ಅಸೌ ಪ್ರಾಗಭಾವಃ= ಈ ಪ್ರಾಗಭಾವವು ಇರುತ್ತದೆ, ಅತಃ= ಆದ್ದರಿಂದ, ತದಾತ್ಮತಾ= ಅದರ ತಾದಾತ್ಮ್ಯವು, ಅನ್ಯಸ್ಮಿನ್ ಅಭೂತೇ= ಉತ್ಪತ್ತಿಯಾಗದಿರುವ ಇನ್ನೊಂದು ಪದಾರ್ಥದಲ್ಲಿ, ನೈವ ಶಂಕ್ಯತೇ= ಶಂಕಿಸಲ್ಪಡುವುದಿಲ್ಲ.

**ಅನುವಾದ-** ವಸ್ತುವು ಉತ್ಪನ್ನವಾಗದಿರುವಾಗ ವಸ್ತುವಿನ ಪ್ರಾಗಭಾವವಿದ್ದಂತೆ ವಸ್ತುವಿನ ತಾದಾತ್ಮ್ಯ ಪ್ರಾಗಭಾವವೂ ಇದೆ. ಆದ್ದರಿಂದ ಅಲ್ಲಿ ತನ್ನ ತಾದಾತ್ಮ್ಯವೇ ಇಲ್ಲದಿರುವುದರಿಂದ ಇನ್ನೊಂದು ವಸ್ತುವಿನ ತಾದಾತ್ಮ್ಯದ ಶಂಕೆಯು ಉಂಟಾಗುವುದಿಲ್ಲ.

**ಭಾವವಿಲಾಸಿನೀ–** ತರ್ಹಿ ಪ್ರಾಗಭಾವದಶಾಯಾಂ ಭೇದಾಭಾವಾತ್ ಅಭೂತಾದ-ಭೂತಾಂತರಸ್ಯ ತಾದಾತ್ಮ್ಯಂ ಸ್ಯಾದಿತ್ಯತ ಆಹ – **ಅಭೂತ ಇತಿ** ॥ ಅಭೂತೇ ಘಟೇ । ಅಸೌ ಪ್ರಾಗಭಾವಃ । ತದಾ ಅಭೂತತ್ವದಶಾಯಾಮ್ । ಅತಃ ತದಾತ್ಮ್ಯಸ್ಯಾಪಿ ಪ್ರಾಗಭಾವಾತ್ । ವಿರೋಧಿಭೂತಭೇದಾಭಾವೇಽಪಿ ಪ್ರಾಗಭಾವಾಖ್ಯ ವಿರೋಧಿಸದ್ಭಾವಾತ್ । ಅಭೂತೇ ಘಟೇ । ನೈವ ಅಭೂತ ತಾದಾತ್ಮ್ಯಮಪಿ ನ ಶಂಕಿತುಂ ಶಕ್ಯಮೇವೇತಿ ಭಾವಃ ॥ ೭೮೬ ॥

**ವಿವರಣೆ–** ಪ್ರಾಗಭಾವದೆಶೆಯಲ್ಲಿ ಭೇದವಿಲ್ಲದಿರುವುದರಿಂದ ಎರಡು ಅನುತ್ಪನ್ನ ವಸ್ತುಗಳಿಗೆ ತಾದಾತ್ಮ್ಯವೇ ಉಂಟಾಗಲಿ ಎಂಬ ಶಂಕೆಗೆ ಇಲ್ಲಿ ಉತ್ತರವನ್ನು ಹೇಳುತ್ತಾರೆ. ಘಟ ಪ್ರಾಗಭಾವದೆಶೆಯಲ್ಲಿ ಘಟದ ತಾದಾತ್ಮ್ಯವೇ ಇಲ್ಲ. ಘಟದ ತಾದಾತ್ಮ್ಯವಿದ್ದರೆ ಅಲ್ಲಿ ಅನ್ಯತಾದಾತ್ಮ್ಯದ ಪ್ರಸಕ್ತಿ ಮತ್ತು ಅದರ ನಿಷೇಧರೂಪವಾದ ಭೇದವು ಇರುತ್ತದೆ. ಘಟತಾದಾತ್ಮ್ಯವೇ ಇಲ್ಲದಿರುವುದರಿಂದ ಅಲ್ಲಿ ಇನ್ನೊಂದು ತಾದಾತ್ಮ್ಯದ ಪ್ರಸಕ್ತಿಯೂ ಇಲ್ಲ, ಪ್ರತಿಷೇಧವೂ ಇಲ್ಲ. ಆದ್ದರಿಂದ ಪ್ರಾಗಭಾವದೆಶೆಯಲ್ಲಿ ಭೇದವಿಲ್ಲವೆಂದು ಅಭಿಪ್ರಾಯ.

ಧ್ವಸ್ತೇ ತು ಧ್ವಂಸ ಏವಾಸ್ತಿ ನಾನ್ಯೋಽಭಾವಸ್ತು ಕಶ್ಚನ ।
ತಾದಾತ್ಮ್ಯಸ್ಯಾಪಿ ನಾಶೇನ ಲೀನಾನ್ಯೈಕ್ಯಂ ಚ ತಸ್ಯ ನ ॥ ೭೮೭ ॥

**ಅರ್ಥ–** ಧ್ವಸ್ತೇ ತು= ನಾಶವನ್ನು ಹೊಂದಿದ ಮೇಲೆ, ಧ್ವಂಸ ಏವಾಸ್ತಿ= ಧ್ವಂಸವೇ ಇರುತ್ತದೆ, ಅನ್ಯೋ ಅಭಾವಃ= ಇನ್ನೊಂದು ಅಭಾವವು, ಕಶ್ಚನ= ಯಾವುದೂ, ನ= ಇರುವುದಿಲ್ಲ, ತಾದಾತ್ಮ್ಯಸ್ಯಾಪಿ ನಾಶೇನ= ತಾದಾತ್ಮ್ಯವೂ ನಾಶವನ್ನು ಹೊಂದುವುದರಿಂದ, ಲೀನಾನ್ಯೈಕ್ಯಂ ಚ= ನಷ್ಟವಾದ ಇನ್ನೊಂದು ವಸ್ತುವಿನ ಐಕ್ಯವೂ ಸಹ, ತಸ್ಯ= ಅದಕ್ಕೆ, ನ= ಇರುವುದಿಲ್ಲ.

**ಅನುವಾದ–** ವಸ್ತುವು ನಷ್ಟವಾದ ಮೇಲೆ ಅದರ ಧ್ವಂಸವು ಮಾತ್ರ ಇರುತ್ತದೆ. ಅನ್ಯೋನ್ಯಾಭಾವವಾಗಲೀ, ಪ್ರಾಗಭಾವವಾಗಲೀ, ಅತ್ಯಂತಾಭಾವವಾಗಲೀ ಇರುವುದಿಲ್ಲ. ವಸ್ತುವು ನಾಶವಾದಾಗ ತಾದಾತ್ಮ್ಯವೂ ನಾಶವನ್ನು ಹೊಂದುವುದರಿಂದ ಆ ವಸ್ತುವಿಗೆ ನಷ್ಟವಾದ ಇನ್ನೊಂದು ವಸ್ತುವಿನ ತಾದಾತ್ಮ್ಯದ ಪ್ರಸಕ್ತಿಯೂ ಇಲ್ಲ, ಅದರ ಪ್ರತಿಷೇಧವೂ ಇಲ್ಲ.

**ಭಾವವಿಲಾಸಿನೀ–** ಅನ್ಯಃ ಅಭಾವಃ ಪ್ರಾಗಭಾವಾನ್ಯೋನ್ಯಾಭಾವಾದಿಃ । ಲೀನಾನ್ಯೈಕ್ಯಂ ಲೀನಸ್ಯ ಧ್ವಸ್ತಸ್ಯಾನ್ಯಸ್ಯ ಪದಾರ್ಥಸ್ಯೈಕ್ಯಮಿತ್ಯರ್ಥಃ । ತಸ್ಯ ಲೀನಪದಾರ್ಥಾಂತರಸ್ಯ । ಯುಕ್ತಿಸ್ತು ಪೂರ್ವವದೇವ ದ್ರಷ್ಟವ್ಯಾ ॥ ೭೮೭ ॥

**ವಿವರಣೆ–** ಪ್ರಾಗಭಾವ ದೆಶೆಯಲ್ಲಿ ಭೇದವನ್ನು ನಿರಾಕರಣೆ ಮಾಡಿದಂತೆ, ಅದೇ ನ್ಯಾಯದಿಂದ ಧ್ವಂಸಾವಸ್ಥೆಯಲ್ಲಿಯೂ ಇಲ್ಲಿ ಭೇದವನ್ನು ನಿರಾಕರಣೆ ಮಾಡುತ್ತಾರೆ.

ವರ್ತಮಾನೇ ತು ಭೇದೋಸ್ತಿ ತೇನಾನ್ಯೋನ್ಯಮನೇಕತಾ ।
ಅತ್ಯಂತಾಭಾವ ಏವಾಸ್ತಿ ತಥಾತ್ಯಂತಾಸತೋಽಪಿ ಹಿ ॥ ೭೮೮ ॥

ತತ್ತದಾತ್ಮ್ಯಂ ಹಿ ತನ್ಮಾತ್ರಂ ತಸ್ಯಾಪ್ಯತ್ಯಂತನಾಸ್ತಿತಾ ।
ತೇಷ್ವನ್ಯೋನ್ಯಂ ಭೇದಕಥಾ ತಾದಾತ್ಮ್ಯಸ್ಯಾಪ್ಯಸತ್ತ್ವತಃ ॥ ೭೮೯ ॥

**ಅರ್ಥ–** ವರ್ತಮಾನೇ ತು= ವಿದ್ಯಮಾನವಾದ ವಸ್ತುವಿನ ವಿಷಯದಲ್ಲಾದರೆ, ಭೇದೋಸ್ತಿ= ಭೇದವು ಇದೆ, ತೇನ= ಆದ್ದರಿಂದ, ಅನ್ಯೋನ್ಯಮನೇಕತಾ= ವರ್ತಮಾನವಾದ ಇನ್ನೊಂದು ವಸ್ತುವಿನ ಭೇದವೂ ಇದೆ (ಪರಸ್ಪರವಾಗಿ ಅನೇಕತ್ವವಿದೆ), ತಥಾ= ಅದರಂತೆ, ಅತ್ಯಂತ ಅಸತೋಪಿ= ಅತ್ಯಂತ ಅಸತ್ತಿಗೆ ಕೂಡ, ಅತ್ಯಂತಾಭಾವ ಏವಾಸ್ತಿ= ಅತ್ಯಂತಾಭಾವವು ಮಾತ್ರ ಇದೆ, ತತ್ತದಾತ್ಮ್ಯಂ= ಅತ್ಯಂತ ಅಸತ್ತಿನ ತಾದಾತ್ಮ್ಯವೂ ಸಹ, ತನ್ಮಾತ್ರಂ ಹಿ= ಆ ಅಸತ್ತಿನ ಸ್ವರೂಪವಾಗಿಯೇ ಇದೆಯಷ್ಟೇ, ತಸ್ಯಾಪಿ= ಆ ಅಸತ್ತಿನ ತಾದಾತ್ಮ್ಯಕ್ಕೂ ಸಹ, ಅತ್ಯಂತ ನಾಸ್ತಿತಾ= ಅತ್ಯಂತಾಭಾವವೇ ಇದೆ, ತೇಷು= ಅಸತ್ತುಗಳಲ್ಲಿ, ಅನ್ಯೋನ್ಯಂ ಭೇದಕಥಾ= ಪರಸ್ಪರವಾದ ಭೇದವಾರ್ತೆಯು, ತಾದಾತ್ಮ್ಯಸ್ಯಾಪಿ ಅಸತ್ತ್ವತಃ= ತಾದಾತ್ಮ್ಯದ ಅತ್ಯಂತಾಭಾವದ ಕಾರಣದಿಂದ.

**ಅನುವಾದ-** ವಸ್ತು ವಿದ್ಯಮಾನವಾಗಿರುವಾಗ ಅಲ್ಲಿ ಭೇದ ಮಾತ್ರವಿದೆ. ಆದ್ದರಿಂದ ಪರಸ್ಪರವಾಗಿ ಭೇದಗಳು ಇವೆ. ಅತ್ಯಂತ ಅಸತ್ತಿಗಾದರೆ ಅತ್ಯಂತಾಭಾವವೇ ಇದೆ (ಅಲ್ಲಿ ಭೇದವಿಲ್ಲ). ಅಸತ್ ತಾದಾತ್ಮ್ಯವೂ ಸಹ ಅಸದ್ರೂಪವಾದುದೇ ಅಷ್ಟೇ? ಆದ್ದರಿಂದ ಅಸತ್ ತಾದಾತ್ಮ್ಯಕ್ಕೂ ಸಹ ಅತ್ಯಂತಾಭಾವವೇ ಇದೆ. ಅಸತ್ತುಗಳಲ್ಲಿ ಪರಸ್ಪರವಾಗಿ ಭೇದವಾರ್ತೆಯು ತಾದಾತ್ಮ್ಯದ ಅತ್ಯಂತಾಭಾವನಿಮಿತ್ತವಾಗಿ ಉಪಚರಿತವಾಗುತ್ತದೆ.

**ಭಾವವಿಲಾಸಿನೀ–** ತತಃ ಭೇದಸದ್ಭಾವಾತ್ ॥ ತತ್ತಾದಾತ್ಮ್ಯಂ ತಸ್ಯ ಶಶಶೃಂಗಾದೇಸ್ತಾದಾತ್ಮ್ಯಂ ತನ್ಮಾತ್ರಂ ಶಶಶೃಂಗಾದ್ಯಾತ್ಮಕಮೇವ । ತಸ್ಯಾಪಿ ತತ್ತಾದಾತ್ಮ್ಯಸ್ಯಾಪಿ । ತೇಷು ಶಶಶೃಂಗಾದಿಷು । ಭೇದಕಥಾ ಉಕ್ತರೀತ್ಯಾ ಭೇದಾಭಾವೇಽಪಿ ಭೇದವಾರ್ತಾ । ಅಸತ್ತ್ವತಃ ಅತ್ಯಂತಾಭಾವಾತ್ ॥ ೭೮೮-೭೮೯ ॥

**ವಿವರಣೆ–** ಶಶವಿಷಾಣವು ನರವಿಷಾಣವಲ್ಲ ಎಂದು ಈ ಎರಡು ಅಸತುಗಳ ವಿಷಯದಲ್ಲಿ ಒಂದು ಭೇದವಾರ್ತೆ ಇದೆ. ಅಸತ್ತುಗಳಲ್ಲಿ ತಾದಾತ್ಮ್ಯವೇ ಇಲ್ಲವಾದ್ದರಿಂದ ಇನ್ನೊಂದು ತಾದಾತ್ಮ್ಯದ ಪ್ರಸಕ್ತಿ ಇಲ್ಲದಿರುವುದರಿಂದ ಅಲ್ಲಿ ಭೇದವು ಹೇಗೆ ಸಿದ್ಧವಾಗುತ್ತದೆ ಎಂಬ ಪ್ರಶ್ನೆಯಿದೆ. ಅದಕ್ಕೆ ಈ ಭೇದವಾರ್ತೆಯು ಉಪಚರಿತವಾದುದು ಎಂದು ಹೇಳುತ್ತಾರೆ. ಶಶವಿಷಾಣವು ಅಸತ್ ಎಂದರೆ ಶಶವಿಷಾಣದ ಅತ್ಯಂತಾಭಾವವಿದೆ ಎಂದು ಅರ್ಥ.

ನರವಿಷಾಣವು ಅಸತ್ ಎಂದರೆ ನರವಿಷಾಣದ ಅತ್ಯಂತಾಭಾವವಿದೆ ಎಂದು ಅರ್ಥ. ಈ ಎರಡು ಅತ್ಯಂತಾಭಾವಗಳು ಸತ್ಯವಾದವು. ಅವುಗಳಲ್ಲಿ ಭೇದವಿದೆ. ಆ ಭೇದವನ್ನು ಆ ಅತ್ಯಂತಾಭಾವಪ್ರತಿಯೋಗಿಗಳಲ್ಲಿ ಉಪಚಾರದಿಂದ ಪ್ರಯೋಗ ಮಾಡುತ್ತೇವೆ ಎಂದು ಇಷ್ಟೇ ಅರ್ಥ. ಹೊರತಾಗಿ ಅಸತ್ ಧರ್ಮಿಕವಾದ ಭೇದವು ಇಲ್ಲ ಎಂದು ಅಭಿಪ್ರಾಯ.

**ತಾದಾತ್ಮ್ಯಾಭಾವಧೀಸ್ತಸ್ಯ ಹ್ಯತ್ಯಂತಾಭಾವತಃ ಸದಾ ।**
**ಅತೋ ಭೇದವ್ಯವಹೃತಿಸ್ತತ್ರ ತತ್ರ ತಥಾ ತಥಾ ।**
**ಸತಿ ತದ್ಭೇದಸದ್ಭಾವಾತ್ ತೇಷು ತದ್ಭಿನ್ನತಾ ವಚಃ ॥ ೭೯೦ ॥**

**ಅರ್ಥ–** ತಸ್ಯ= ಅಸತ್ತಿನ, ತಾದಾತ್ಮ್ಯಾಭಾವಧೀಃ= ತಾದಾತ್ಮ್ಯಾಭಾವ ಪ್ರತೀತಿಯು ಮಾತ್ರ, ಸದಾ= ಯಾವಾಗಲೂ, ಅತ್ಯಂತಾಭಾವತಃ= ತಾದಾತ್ಮ್ಯದ ಅತ್ಯಂತಾಭಾವದಿಂದಲೇ, ಹಿ= ಉಪಪನ್ನವಾಗುವುದಷ್ಟೇ, ಅತಃ= ಆದ್ದರಿಂದ, ತತ್ರ ತತ್ರ= ನರವಿಷಾಣಾದಿಗಳಲ್ಲಿ, ಭೇದವ್ಯವಹೃತಿಃ= ಭೇದವ್ಯವಹಾರವು, ತಥಾ ತಥಾ= ಹಾಗೆ ಹಾಗೆಯೇ ಎಂದರೆ ಉಪಚಾರದಿಂದ ಉಪಪನ್ನವಾಗುತ್ತದೆ, ಸತಿ= ವಿದ್ಯಮಾನವಾದ ಪದಾರ್ಥದಲ್ಲಿ, ತದ್ಭೇದಸದ್ಭಾವಾತ್= ಅಸತ್ ಪದಾರ್ಥದ ಭೇದವಿರುವುದರಿಂದ, ತೇಷು= ಅಸತ್ ಪದಾರ್ಥಗಳಲ್ಲಿ, ತದ್ಭಿನ್ನತಾ ವಚಃ= ಅಸತ್ ಪ್ರತಿಯೋಗಿಕ ಭೇದವಿದೆ ಎಂಬ ವ್ಯವಹಾರವು ಉಂಟಾಗುತ್ತದೆ.

**ಅನುವಾದ-** ಅಸತ್ತಿನ ತಾದಾತ್ಮ್ಯಾಭಾವವು ಯಾವಾಗಲೂ ತಾದಾತ್ಮ್ಯದ ಅತ್ಯಂತಾಭಾವದಿಂದಲೇ ಉಪಪನ್ನವಾಗುವುದಷ್ಟೇ. ಆದ್ದರಿಂದ ಅಸತ್ತುಗಳಲ್ಲಿ ಅಲ್ಲಲ್ಲಿ ಮಾಡುವ ಭೇದವ್ಯವಹಾರವು ಹಾಗೆ ಹಾಗೆಯೇ ಎಂದರೆ ಉಪಚಾರದಿಂದ ಕೂಡಿಸಲ್ಪಡಬೇಕು. ವಿದ್ಯಮಾನವಾದ ಪದಾರ್ಥದಲ್ಲಿ ಅಸತ್ ಪ್ರತಿಯೋಗಿಕವಾದ ಭೇದವಿರುವುದರಿಂದ ಅಸತ್ತುಗಳಲ್ಲಿಯೂ ಒಂದು ಭೇದವ್ಯವಹಾರವಿದೆ (ಹೊರತು ಭೇದವಿಲ್ಲ).

**ಭಾವವಿಲಾಸಿನೀ**–ತಸ್ಯ ತಾದಾತ್ಮ್ಯಸ್ಯ । ಹಿ ಯಸ್ಮಾತ್ । ಅತಃ ತಾದಾತ್ಮ್ಯಸ್ಯಾಪ್ಯತ್ಯಂತಾಸತ್ತ್ವಾತ್ । ತದ್ಭೇದಸದ್ಭಾವಾತ್ ತಸ್ಮಾದಸತಃ ಭೇದಸದ್ಭಾವಾತ್ । ತೇಷು ಸತ್ಸು ॥ ೭೮೮ ॥

**ವಿವರಣೆ–** ಅಸತ್ತುಗಳಲ್ಲಿ ಉಪಚರಿತವಾದ ಭೇದ ಪ್ರಯೋಗಕ್ಕೆ ಇಲ್ಲಿ ಇನ್ನೊಂದು ನಿಮಿತ್ತವನ್ನು ಹೇಳುತ್ತಾರೆ. ವಿದ್ಯಮಾನವಾದ ವಸ್ತುಗಳಲ್ಲಿ ಅಸತ್‌ವಸ್ತುವಿನ ಭೇದವಿರುವುದರಿಂದ ಅಸದ್ವಸ್ತುಗಳಲ್ಲಿಯೂ ಅಂತಹ ಭೇದವಿದೆ ಎಂದು ತಿಳಿದು ಉಪಚಾರದಿಂದ ಪ್ರಯೋಗವು ಉಪಪನ್ನವಾಗುತ್ತದೆ ಹೊರತು ಅಸತ್ ಧರ್ಮಿಕವಾದ ಭೇದವಿಲ್ಲ ಎಂದು ಅಭಿಪ್ರಾಯ.

ಯಥಾ ಕಥಂಚಿದ್ ವೈಸಾದೃಶ್ಯಾದ್ವಾ ತೇಷ್ವಪಿ ಭೇದವಾಕ್ ।
ಧರ್ಮ್ಯಭಾವೇನ ತೇಷ್ವನ್ಯೋನ್ಯಾಭಾವಸ್ಯಾತ್ಯಸಂಭವಾತ್ ॥ ೭೯೧ ॥

**ಅರ್ಥ–** ಯಥಾ ಕಥಂಚಿದ್ವೈಸಾದೃಶ್ಯಾತ್= ಯಾವುದೋ ಒಂದು ರೀತಿಯ ವೈಲಕ್ಷಣ್ಯವಿರುವುದರಿಂದ, ತೇಷ್ವಪಿ= ಅಸತ್ತುಗಳಲ್ಲಿಯೂ ಕೂಡ, ಭೇದವಾಕ್= ಭೇದ ವಚನಗಳು ಕೂಡುತ್ತವೆ, ಧರ್ಮ್ಯಭಾವೇನ= ಧರ್ಮಿ ಇಲ್ಲದಿರುವುದರಿಂದ, ತೇಷು= ಅವುಗಳಲ್ಲಿ, ಅನ್ಯೋನ್ಯಾಭಾವಸ್ಯ= ಅನ್ಯೋನ್ಯಾಭಾವವು, ಅತ್ಯಸಂಭವಾತ್= ಅತ್ಯಂತ ಅಸಂಭಾವಿತವಾಗಿರುವುದರಿಂದ (ಭೇದ ವಚನಕ್ಕೆ ವಿಸದೃಶ ಎಂದು ಅರ್ಥವನ್ನು ಮಾಡಬೇಕು).

**ಅನುವಾದ-** ಅಥವಾ ಅಸತ್ತುಗಳಲ್ಲಿಯೂ ಸಹ ಯಾವುದೋ ರೀತಿಯ ವೈಲಕ್ಷಣ್ಯವಿರುವುದರಿಂದ (ವೈಸಾದೃಶ್ಯವಿರುವುದರಿಂದ) ಅವುಗಳಲ್ಲಿಯೂ ಭೇದವಚನವಿದೆ. ಅಲ್ಲಿ ಧರ್ಮಿಯೇ ಇಲ್ಲದಿರುವುದರಿಂದ ಅನ್ಯೋನ್ಯಾಭಾವವು ಅಸಂಭಾವಿತವಾಗಿರುವುದರಿಂದ ಭೇದ ವಚನವು ವಿಸದೃಶ ಎಂದಿಷ್ಟೇ ಅರ್ಥವನ್ನು ಕೊಡುತ್ತದೆ.

**ಭಾವವಿಲಾಸಿನೀ–** ಸಿಂಹಾವಲೋಕನನ್ಯಾಯೇನ ಪುನರಸತ್ಸು ಭೇದಕಥಾಯಾ ಯುಕ್ತ್ಯಂತರಂ ಚಾಹ – **ಯಥಾಕಥಂಚಿದಿತಿ** ॥ ವೈಸಾದೃಶ್ಯಾತ್ ಶಶಶೃಂಗ ನರಶೃಂಗಾದಿವಿಲಕ್ಷಣ-ಪದೈರ್ವ್ಯವಹ್ರಿಯಮಾಣತ್ವಾತ್ । ಭಿನ್ನಾಭಿನ್ನಭಾವಪ್ರತಿಯೋಗಿತ್ವಾದ್ವಾ । ತೇಷು ಶಶಶೃಂಗ-ನರಶೃಂಗಾದಿಷು । ತೇಷು ಅಸತ್ಸು ॥ ೭೯೧ ॥

**ವಿವರಣೆ–** ಅಸತ್ತುಗಳಲ್ಲಿ ಭೇದವಚನಗಳನ್ನು ಭೇದವನ್ನು ಒಪ್ಪದೆ ನಞ್ ಪದಕ್ಕೆ ವೈಸಾದೃಶ್ಯ ಎಂದು ಅರ್ಥವನ್ನು ಹೇಳಿ ಇಲ್ಲಿ ಆ ಪ್ರಯೋಗವನ್ನು ಉಪಪಾದನೆ ಮಾಡುತ್ತಾರೆ.

ತಾದಾತ್ಮ್ಯಸ್ಯ ಪ್ರಾಗಭಾವೋ ನಾಶೋಽತ್ಯಂತನಿಷೇಧನಂ ।
ಐಕ್ಯಸ್ಯ ಪ್ರಾಗಭಾವಾದಿರ್ನ ಭೇದಸ್ತ್ರಿತಯಂ ಚ ತತ್ ॥ ೭೯೨ ॥

**ಅರ್ಥ–** ತಾದಾತ್ಮ್ಯಸ್ಯ ಪ್ರಾಗಭಾವಃ= ತಾದಾತ್ಮ್ಯದ ಪ್ರಾಗಭಾವವು, ನಾಶಃ= ತಾದಾತ್ಮ್ಯದ ನಾಶವು, ಅತ್ಯಂತನಿಷೇಧನಂ= ತಾದಾತ್ಮ್ಯದ ಅತ್ಯಂತಾಭಾವವು, ಐಕ್ಯ ಪ್ರಾಗಭಾವಾದಿಃ= ಐಕ್ಯ ಪ್ರಾಗಭಾವ, ಐಕ್ಯ ಧ್ವಂಸ ಮತ್ತು ಐಕ್ಯ ಅತ್ಯಂತಾಭಾವ ರೂಪವೇ ಆಗಿದೆ, ತತ್ ತ್ರಿತಯಂ= ಆ ಮೂರೂ, ನ ಭೇದಃ= ಭೇದವಲ್ಲ.

**ಅನುವಾದ-** ತಾದಾತ್ಮ್ಯ ಪ್ರಾಗಭಾವ, ತಾದಾತ್ಮ್ಯ ಧ್ವಂಸ ಮತ್ತು ತಾದಾತ್ಮ್ಯ ಅತ್ಯಂತಾಭಾವ ಈ ಮೂರು ಐಕ್ಯ ಪ್ರಾಗಭಾವ, ಐಕ್ಯ ಧ್ವಂಸ ಮತ್ತು ಐಕ್ಯ ಅತ್ಯಂತಾಭಾವವಾಗಿವೆ. ಈ ಮೂರೂ ಭೇದವಲ್ಲ.

**ಭಾವವಿಲಾಸಿನೀ–** ನನು ತಾದಾತ್ಮ್ಯಪ್ರತಿಯೋಗಿಕಾಭಾವ ಏವ ಭೇದ ಇತ್ಯುಚ್ಯತೇ । ಸ ಚ ಪ್ರಾಗಭಾವಾದಿಕಮಾದಾಯಾತೀತಾದಿಷ್ವಪಿ ಭವದ್ಭಿರೇವಾಂಗೀಕೃತಃ । ತಥಾಪಿ ಭೇದೋ ನಾಸ್ತೀತ್ಯಸ್ಯ ಕೋऽಭಿಪ್ರಾಯ ಇತ್ಯತ ಆಹ – **ತಾದಾತ್ಮ್ಯಸ್ಯೇತಿ** ॥ ತಾದಾತ್ಮ್ಯಸ್ಯೇತಿ ವಿಶೇಷಣಂ ಪ್ರಾಗಭಾವಾದಿವಿಶೇಷ್ಯತ್ರಯೇऽಪಿ ಸಂಬಧ್ಯತೇ । ಆದಿಪದೇನ ಪ್ರಧ್ವಂಸಾತ್ಯಂತಾಭಾವಯೋರ್ಗ್ರಹಣಮ್ । ತತ್‌ತ್ರಿತಯಂ ಚ ತಾದಾತ್ಮ್ಯಪ್ರಾಗಭಾವಾದಿತ್ರಿತಯಂ ಚ ನ ಭೇದ ಇತಿ ಯೋಜನಾ ॥ ೭೯೨ ॥

**ವಿವರಣೆ–** ತಾದಾತ್ಮ್ಯ ಪ್ರತಿಯೋಗಿಕಾಭಾವವನ್ನೇ ಭೇದವೆಂದು ಹೇಳುತ್ತೀರಿ. ಪ್ರಾಗಭಾವ ಸ್ಥಳದಲ್ಲಿಯೂ ತಾದಾತ್ಮ್ಯಪ್ರಾಗಭಾವವನ್ನು ಅಂಗೀಕರಿಸಿದ್ದೀರಿ. ಆದರೂ ಪ್ರಾಗಭಾವ ದೆಶೆಯಲ್ಲಿ ಭೇದವಿಲ್ಲ ಎಂದು ಹೇಳುವ ಮಾತಿಗೆ ಏನು ಅಭಿಪ್ರಾಯ ಎಂಬ ಪ್ರಶ್ನೆಗೆ ಇಲ್ಲಿ ಉತ್ತರವನ್ನು ಹೇಳುತ್ತಾರೆ. ಘಟ ಪ್ರಾಗಭಾವ ದೆಶೆಯಲ್ಲಿ ಘಟ ತಾದಾತ್ಮ್ಯ ಪ್ರಾಗಭಾವವೂ ಇದೆ. ಆದರೆ ಘಟತಾದಾತ್ಮ್ಯದ ಪ್ರಾಗಭಾವವು ಭೇದವಲ್ಲ. ಅದರಂತೆಯೇ ಘಟಧ್ವಂಸವಿರುವಾಗಲೂ, ಘಟದ ಅತ್ಯಂತಾಭಾವವಿರುವಾಗಲೂ, ಘಟ ತಾದಾತ್ಮ್ಯ ಧ್ವಂಸ ಮತ್ತು ಘಟತಾದಾತ್ಮ್ಯದ ಅತ್ಯಂತಾಭಾವವಿದ್ದರೂ ಅವೂ ಭೇದವಲ್ಲ ಎಂದು ಅಭಿಪ್ರಾಯ. ಹಾಗಾದರೆ ಭೇದ ಎಂದರೆ ಯಾವುದು ಎಂಬುದನ್ನು ಮುಂದಿನ ಶ್ಲೋಕದಲ್ಲಿ ಹೇಳುತ್ತಾರೆ.

**ಘಟೇ ಸತಿ ಪಟಾದೀನಾಂ ತಾದಾತ್ಮ್ಯಂ ಯನ್ನಿಷಿಧ್ಯತೇ ।**
**ಘಟಃ ಪಟೋ ನ ಭವತಿ ಪಟೋ ನ ಘಟ ಇತ್ಯಪಿ ।**
**ಸ ಏವ ಭೇದನಾಮಾऽಯಮನ್ಯೋನ್ಯಾಭಾವ ಇಷ್ಯತೇ ॥ ೭೯೩ ॥**

**ಅರ್ಥ–** ಘಟೇ ಸತಿ= ಘಟವು ಇರುವಾಗ, ಯತ್= ಯಾವ, ಪಟಾದೀನಾಂ ತಾದಾತ್ಮ್ಯಂ= ಪಟಾದಿಗಳ ತಾದಾತ್ಮ್ಯವು, ಘಟಃ ಪಟೋನ ಭವತಿ= ಘಟವು ಪಟವಲ್ಲ ಮತ್ತು, ಪಟೋ ನ ಘಟೋ ಭವತಿ= ಪಟವು ಘಟವಲ್ಲ ಎಂದು, ನಿಷಿಧ್ಯತೇ= ನಿಷೇಧಿಸಲ್ಪಡುತ್ತದೆಯೋ, ಸ ಏವ= ಅದೇ, ಭೇದನಾಮಾ= ಭೇದವೆಂಬ ಶಬ್ದದಿಂದ ಕರೆಸಿಕೊಳ್ಳಲ್ಪಡುವುದು, ಅಯಂ= ಈ ಭೇದವು, ಅನ್ಯೋನ್ಯಾಭಾವ ಇಷ್ಯತೇ= ಇದು ಅನ್ಯೋನ್ಯಾಭಾವ ರೂಪವೆಂದು ಅಂಗೀಕರಿಸಲ್ಪಡುತ್ತದೆ.

**ಅನುವಾದ–** ವಿದ್ಯಮಾನವಾದ ವಸ್ತುವಿಗೆ ಎರಡು ಸಮಾನಾಧಿಕರಣ ಪದದಿಂದ ತಾದಾತ್ಮ್ಯವನ್ನು ಪ್ರಸಂಜಿಸಿ ಅದನ್ನು ನಿಷೇಧ ಮಾಡುವುದೇ ಭೇದವಾಗುತ್ತದೆ. ಪ್ರಾಗಭಾವಾದಿ ಸ್ಥಳದಲ್ಲಿ ಇಂತಹ ವಚನವು ಇಲ್ಲದಿರುವುದರಿಂದ ಅಲ್ಲಿ ಭೇದವಿಲ್ಲ ಎಂದು ಹಿಂದೆ ಹೇಳಿದ ವಿಷಯವನ್ನೇ ಇನ್ನೊಮ್ಮೆ ಇಲ್ಲಿ ನಿರೂಪಿಸುತ್ತಾರೆ.

**ಭಾವವಿಲಾಸಿನೀ–** ತರ್ಹಿ ಭೇದಃ ಕ ಇತ್ಯತಃ ಪ್ರಾಗುಕ್ತಂ ಭೇದಮೇವ ಪುನಃ ಸ್ಮಾರಯತಿ– **ಘಟೇ ಸತೀತಿ** ॥ ಯತ್ತಾದಾತ್ಮ್ಯಂ ಘಟಃ ಪಟೋ ನ, ಪಟೋ ಘಟೋ ನೇತ್ಯಾದ್ಯಕಾರೇಣ ಸತಿ ಘಟೇ

ಪಟಾದೀನಾಂ ನಿಷಿಧ್ಯತೇ ಸಃ ಏತಾದೃಶತಾದಾತ್ಮ್ಯನಿಷೇಧ ಏವ । ಏವಪದೇನೇಹ ತಾದಾತ್ಮ್ಯಂ ನಾಭೂತ್ ಇಹ ತದಾತ್ಮ್ಯಂ ಧ್ವಸ್ತಂ ಇಹತಾದಾತ್ಮ್ಯಂ ಕದಾಪಿ ನಾಸ್ತೀತ್ಯಾಕಾರಕತಾದಾತ್ಮ್ಯ ನಿಷೇಧತ್ರಯಂ ವ್ಯವಚ್ಛಿನತ್ತಿ । ಅಯಂ ಅಯಮೇವ ॥ ೭೯೩ ॥

ನಾಸ್ತಿ ತಾದಾತ್ಮ್ಯಮಿತಿ ತು ಪ್ರಾಗಭಾವಾದಿರೀರ್ಯತೇ ।
ಅನ್ಯೋನ್ಯಾಭಾವಭೇದಸ್ತದ್ವರ್ತಮಾನೇಷು ಕೇವಲಂ ॥ ೭೯೪ ॥

**ಅರ್ಥ–** ತಾದಾತ್ಮ್ಯಂ ನಾಸ್ತಿ ಇತಿ ತು= ತಾದಾತ್ಮ್ಯವಿಲ್ಲ ಎಂಬ ಪ್ರತೀತಿಗೆ ವಿಷಯವಾದುದಾದರೂ, ಪ್ರಾಗಭಾವಾದಿಃ= ಪ್ರಾಗಭಾವಾದಿಗಳು ಎಂದು, ಈರ್ಯತೇ= ಹೇಳಲ್ಪಡುತ್ತದೆ, ತತ್= ಆದ್ದರಿಂದ, ಅನ್ಯೋನ್ಯಾಭಾವಭೇದಃ= ಅನ್ಯೋನ್ಯಾಭಾವರೂಪವಾದ ಭೇದವು, ಕೇವಲಂ= ಕೇವಲ, ವರ್ತಮಾನೇಷು= ವರ್ತಮಾನ ವಸ್ತುಗಳಲ್ಲಿ ಮಾತ್ರ ಇದೆ.

**ಅನುವಾದ-** ತಾದಾತ್ಮ್ಯಂ ನಾಸ್ತಿ ಎಂದು ಪ್ರತೀತವಾಗುವ ತಾದಾತ್ಮ್ಯಾಭಾವವು ತಾದಾತ್ಮ್ಯದ ಪ್ರಾಗಭಾವಾದಿರೂಪವೆಂದು ಹೇಳಲ್ಪಡುತ್ತದೆ. ಆದ್ದರಿಂದ ಅನ್ಯೋನ್ಯಾಭಾವರೂಪವಾದ ಭೇದವು ಮಾತ್ರ ವಿದ್ಯಮಾನವಾದ ವಸ್ತುಗಳಲ್ಲಿಯೇ ಇರುತ್ತದೆ.

**ಭಾವವಿಲಾಸಿನೀ–** ವ್ಯವಚ್ಛೇದ್ಯಮೇವ ಸಾಮಾನ್ಯತೋ ದರ್ಶಯತಿ– **ನಾಸ್ತೀತಿ** ॥ ತತ್ತಸ್ಮಾತ್ ಅತೀತಾದಿಷು ಭೇದಪ್ರತೀತ್ಯಭಾವಾತ್ ॥ ೭೯೪ ॥

ಅತೋಽಭಾವೋತಿದುಷ್ಟೋಽಯಂ ಸ್ವಗೋತ್ರಕಲಹಪ್ರಿಯಃ ।
ಧರ್ಮಿಣ್ಯೇಕಃ ಸದೈಕಾಕೀ ಪ್ರತಿಯೋಗಿಷು ತೇ ತ್ರಯಃ ॥ ೭೯೫ ॥

**ಅರ್ಥ–** ಅತಃ= ಆದ್ದರಿಂದ, ಸ್ವಗೋತ್ರಕಲಹಪ್ರಿಯಃ= ತನ್ನ ಗೋತ್ರಕ್ಕೆ ಸೇರಿದವರ ಜೊತೆಯಲ್ಲೇ ಕಲಹವನ್ನು ಮಾಡುವ, ಅಯಂ ಅಭಾವಃ= ಈ ಅಭಾವವು, ಅತಿದುಷ್ಟಃ= ಅತಿ ದುಷ್ಟವಾದುದು, ಏಕಃ= ಅನ್ಯೋನ್ಯಾಭಾವರೂಪವಾದ ಒಂದು ಅಭಾವವು, ಧರ್ಮಿಣಿ= ಧರ್ಮಿಯಲ್ಲಿ, ಸದಾ= ಯಾವಾಗಲೂ, ಏಕಾಕೀ= ಏಕಾಕಿಯಾಗಿರುತ್ತದೆ, ತೇ ತ್ರಯಃ= ಪ್ರಾಗಭಾವ, ಪ್ರಧ್ವಂಸ, ಅತ್ಯಂತಾಭಾವಗಳು, ಪ್ರತಿಯೋಗಿನಿ= ಪ್ರತಿಯೋಗಿಯಲ್ಲಿ, ಏಕಾಕಿನಃ= ಏಕಾಕಿಯಾಗಿರುತ್ತವೆ.

**ಅನುವಾದ-** ಆದ್ದರಿಂದ ತನ್ನ ಗೋತ್ರದವರ ಜೊತೆಯಲ್ಲೇ ಕಲಹವನ್ನು ಮಾಡುವ ಈ ಅಭಾವವು ಅತ್ಯಂತ ದುಷ್ಟವಾದುದು. ಅನ್ಯೋನ್ಯಾಭಾವರೂಪವಾದ ಒಂದು ಅಭಾವವು ಧರ್ಮಿಯಲ್ಲಿ ಸದಾ ಏಕಾಕಿಯಾಗಿರುತ್ತದೆ. ಪ್ರಾಗಭಾವ, ಪ್ರಧ್ವಂಸ ಮತ್ತು ಅತ್ಯಂತಾಭಾವರೂಪವಾದ ಆ ಮೂರು ಅಭಾವಗಳು ಪ್ರತಿಯೋಗಿಯಲ್ಲಿ ಏಕಾಕಿಯಾಗಿರುತ್ತವೆ.

**ಭಾವವಿಲಾಸಿನೀ–** ಅತಃ ಏಕಾಭಾವಸ್ಥಲೇಽಭಾವಾಂತರಾಭಾವಾತ್ । ಅತಿದುಷ್ಟಃ ಅನ್ಯನಿಷೇಧರೂಪತ್ವಾದತಿಕ್ರೂರಃ । ಅತಿದುಷ್ಟತ್ವಮೇವೋಪಪಾದಯತಿ ॥ **ಸ್ವಗೋತ್ರೇತಿ** ॥ ಅಭಾವಸ್ಯಾಭಾವಾಂತರಾಸಹಿಷ್ಣುತ್ವಾತ್ ಸ್ವಗೋತ್ರ ಕಲಹಪ್ರಿಯ ಇತ್ಯರ್ಥಃ । ಭಾವನಿಷೇಧೇನ ಪರಗೋತ್ರಕಲಹಾತ್ ಅಭಾವಾಂತರಾಸಹಿಷ್ಣುತ್ವೇನ ಸ್ವಗೋತ್ರಕಲಹಾಚ್ಚಾತಿದುಷ್ಟ ಇತಿ ಭಾವಃ । ತತ್ರ ವಿಶೇಷಮಾಹ – **ಧರ್ಮಿಣೀತಿ॥** ಏಕಃ ಅನ್ಯೋನ್ಯಾಭಾವಃ । ಧರ್ಮಿಣಿ ಧರ್ಮಿಣ್ಯೇವ । ನತು ಸ್ವಪ್ರತಿಯೋಗಿನಿ । ಅನ್ಯೋನ್ಯಾಭಾವಪ್ರತಿಯೋಗಿನಿ ಶಶವಿಷಾಣಾದಾವತ್ಯಂತಾಭಾವಪ್ರತಿಯೋಗಿತ್ವಸ್ಯಾಪಿ ವಿದ್ಯಮಾನತ್ವಾತ್ । ಏಕಾಕೀ ಸ್ವಧರ್ಮಿತಾದಶಾಯಾಂ ತಸ್ಯ ಪ್ರಾಗಭಾವಾದಿಕಮಸಹಮಾನ ಇತ್ಯರ್ಥಃ । ತೇ ತ್ರಯಃ ಪ್ರಾಗಭಾವಪ್ರಧ್ವಂಸಾತ್ಯಂತಾಭಾವಾಃ । ಪ್ರತಿಯೋಗಿನಿ ಸ್ವಸ್ವಪ್ರತಿಯೋಗಿನ್ಯೇವ ಏಕಾಕಿನಃ । ಸ್ವಪ್ರತಿಯೋಗಿತಾದಶಾಯಾಮಭಾವಾಂತರ ಪ್ರತಿಯೋಗಿತ್ವಮಸಹಮಾನಾ ಇತ್ಯರ್ಥಃ । ಸ್ವಗೃಹೈಕ್ಯಮಸಹಮಾನೋ ಲುಬ್ಧ ಇವೈಕ ಏಕಾಕೀ । ಅಪರೇ ತು ಸ್ವಮಾರಿತೇ ಶತ್ರೌ ಮಾರಕಾಂತರಮಸಹಮಾನವೀರಭಟಾ ಇವೈಕಾಕಿನ ಇತಿ ಭಾವಃ ॥ ೭೯೫ ॥

**ವಿವರಣೆ–** ಭಾವಾಭಾವಗಳಿಗೆ ವಿರೋಧವಿದೆ. ಆದ್ದರಿಂದ ಅಭಾವವು ಭಾವವನ್ನು ವಿರೋಧಿಸಿದರೆ ಅದನ್ನು ದುಷ್ಟ ಎಂದು ಕರೆಯಬಹುದು. ಆದರೆ ಈ ಅಭಾವಗಳು ಹಾಗಲ್ಲ. ಒಂದು ಅಭಾವವು ಇರುವಾಗ ಇನ್ನೊಂದು ಅಭಾವವನ್ನು ಇರಲು ಬಿಡುವುದಿಲ್ಲ. ಆದ್ದರಿಂದ ತಮ್ಮ ಗೋತ್ರಕ್ಕೇ ಸೇರಿದ ಅಭಾವಾಂತರವನ್ನು ನಿಷೇಧ ಮಾಡುವುದರಿಂದ ಅಭಾವಗಳು ಅತಿದುಷ್ಟವಾದವು ಎಂದು ಹೇಳುತ್ತಾರೆ. ಅನ್ಯೋನ್ಯಾಭಾವವು ಧರ್ಮಿಯಲ್ಲಿಯೇ ಏಕಾಕಿಯಾಗಿರುತ್ತದೆ. ಎಂದರೆ ಧರ್ಮಿಯಾದ ಘಟದಲ್ಲಿ ಭೇದವಿರುವಾಗ ಘಟಪ್ರಾಗಭಾವವಾಗಲೀ, ಘಟಧ್ವಂಸವಾಗಲೀ, ಘಟಾತ್ಯಂತಾಭಾವವಾಗಲೀ ಇರುವುದಿಲ್ಲ. ಆದ್ದರಿಂದ ಅನ್ಯೋನ್ಯಾಭಾವವು ಧರ್ಮಿಯಲ್ಲಿ ಏಕಾಕೀ. ಉಳಿದ ಮೂರು ಅಭಾವಗಳು ಪ್ರತಿಯೋಗಿಯಲ್ಲಿ ಏಕಾಕಿಗಳು. ಎಂದರೆ ಘಟದಲ್ಲಿ ಪ್ರಾಗಭಾವಪ್ರತಿಯೋಗಿತ್ವ ಇರುವಾಗ ಅಲ್ಲಿ ಧ್ವಂಸ ಪ್ರತಿಯೋಗಿತ್ವವಾಗಲೀ, ಅತ್ಯಂತಾಭಾವ ಪ್ರತಿಯೋಗಿತ್ವವಾಗಲೀ ಇರುವುದಿಲ್ಲ. ಅದರಂತೆ ಘಟದಲ್ಲಿ ಧ್ವಂಸ ಪ್ರತಿಯೋಗಿತ್ವ ಇರುವಾಗ ಪ್ರಾಗಭಾವಪ್ರತಿಯೋಗಿತ್ವವಾಗಲೀ, ಅತ್ಯಂತಾಭಾವ ಪ್ರತಿಯೋಗಿತ್ವವಾಗಲೀ ಇರುವುದಿಲ್ಲ. ಹಾಗೆಯೇ ಘಟದಲ್ಲಿ ಅತ್ಯಂತಾಭಾವ ಪ್ರತಿಯೋಗಿತ್ವವು ಇರುವಾಗ ಘಟದಲ್ಲಿ ಪ್ರಾಗಭಾವಪ್ರತಿಯೋಗಿತ್ವವಾಗಲೀ ಅಥವಾ ಧ್ವಂಸಪ್ರತಿಯೋಗಿತ್ವವಾಗಲೀ ಇರುವುದಿಲ್ಲ. ಅನ್ಯೋನ್ಯಾಭಾವವು ಮಾತ್ರ ಪ್ರತಿಯೋಗಿಯಲ್ಲಿ ಏಕಾಕಿಯಲ್ಲ. ಏಕೆಂದರೆ ಶಶವಿಷಾಣದಲ್ಲಿ ಅತ್ಯಂತಾಭಾವಪ್ರತಿಯೋಗಿತ್ವ ಇರುವಾಗಲೇ ಘಟಾದಿನಿಷ್ಠ ಅನ್ಯೋನ್ಯಾಭಾವಪ್ರತಿಯೋಗಿತ್ವವೂ ಇದೆ. ಆದ್ದರಿಂದ ಅದು ಪ್ರತಿಯೋಗಿಯಲ್ಲಿ ಏಕಾಕಿಯಲ್ಲ. ಹೀಗೆ ಅಭಾವಗಳು ಭಾವವನ್ನೂ ವಿರೋಧಿಸಿ, ಅಭಾವಾಂತರವನ್ನೂ

ವಿರೋಧಿಸುವುದರಿಂದ ಅತ್ಯಂತ ದುಷ್ಟವಾದವು ಎಂದು ಸಾಹಿತ್ಯಮುದ್ರೆಯಿಂದ ಹೇಳುತ್ತಾರೆ.

**ಭಾವಾಭಾವಸ್ವರೂಪತ್ವಾತ್ ನಾನ್ಯೋನ್ಯಾಭಾವತಾ ಪೃಥಕ್ ।**
**ಇತಿ ತತ್ವವಿವೇಕಂ ತತ್ ಕುರ್ವನ್ ಗುರ್ವಗ್ರಣೀರ್ಮಮ ॥ ೭೯೬ ॥**

**ಅನ್ಯೋನ್ಯಾಭಾವಾಭಿಧಾನಂ ತತ್ವಂ ನ ಪೃಥಗುಕ್ತವಾನ್ ।**
**ಭಾವಾಭಾವೇಷು ತಾದ್ರೂಪ್ಯಾದ್ ಭೇದಸ್ಯಾಸತ್ಯವರ್ತನಾತ್॥ ೭೯೭ ॥**

**ಅರ್ಥ–** ಭಾವಾಭಾವಸ್ವರೂಪತ್ವಾತ್= ಭಾವಾಭಾವಸ್ವರೂಪವಾದ್ದರಿಂದ, ಅನ್ಯೋನ್ಯಾಭಾವತಾ= ಅನ್ಯೋನ್ಯಾಭಾವವು, ನ ಪೃಥಕ್= ಭಾವಾಭಾವಗಳಿಂದ ಭಿನ್ನವಲ್ಲ, ಇತಿ= ಎಂದು, ತತ್= ಈ ಅಭಾವಗಳ, ತತ್ವವಿವೇಕಂ= ತತ್ವವಿವೇಚನೆಯನ್ನು, ಕುರ್ವನ್= ಮಾಡುವ, ಮಮ ಗುರ್ವಗ್ರಣೀಃ= ನಮ್ಮ ಗುರುಶ್ರೇಷ್ಠರು, ಅನ್ಯೋನ್ಯಾಭಾವಾಭಿಧಾನಂ ತತ್ವಂ= ಅನ್ಯೋನ್ಯಾಭಾವ ಎಂಬ ಹೆಸರಿನ ಒಂದು ತತ್ವವನ್ನು, ಪೃಥಕ್= ಬೇರೆಯಾಗಿ, ನ ಉಕ್ತವಾನ್= ಹೇಳಲಿಲ್ಲ, ಏಕೆಂದರೆ, ಭಾವಾಭಾವೇಷು= ಭಾವಾಭಾವಗಳಲ್ಲಿ ಇರುವ ಭೇದವು, ತಾದ್ರೂಪ್ಯಾತ್= ಭಾವಾಭಾವ ಸ್ವರೂಪವೇ ಆಗಿರುವುದರಿಂದ, ಮತ್ತು, ಅಸತಿ= ಅಸತ್ ಪದಾರ್ಥಗಳಲ್ಲಿ, ಅವರ್ತನಾತ್= ಭೇದವೇ ಇಲ್ಲದಿರುವುದರಿಂದ.

**ಅನುವಾದ-** **ಆದ್ದರಿಂದ ಅಭಾವಗಳ ಸ್ವರೂಪವನ್ನು ವಿವೇಚನ ಮಾಡುವ ನಮ್ಮ ಗುರುವರರಾದ ಆಚಾರ್ಯರು ಅನ್ಯೋನ್ಯಾಭಾವವು ಭಾವಾಭಾವ ಸ್ವರೂಪವೇ ಆಗಿರುವುದರಿಂದ ಅದು ಅವುಗಳಿಗಿಂತ ಬೇರೆಯಲ್ಲವೆಂದು ಅನ್ಯೋನ್ಯಾಭಾವವೆಂಬ ತತ್ವವನ್ನು ಭಿನ್ನವಾಗಿ ನಿರೂಪಿಸಲಿಲ್ಲ. ಏಕೆಂದರೆ ಭಾವಾಭಾವಗಳಲ್ಲಿ ಇರುವ ಭೇದವು ಭಾವಾಭಾವ ರೂಪವಾಗಿಯೇ ಇದೆ. ಅಸತ್ತಿನಲ್ಲಿ ಭೇದವೇ ಇಲ್ಲ.**

**ಭಾವವಿಲಾಸಿನೀ–** ಉಕ್ತಾಭಾವವ್ಯವಸ್ಥಾಕಲ್ಪನಾಯಾಃ ಕಿಂ ಮೂಲಮಿತ್ಯತಸ್ತತ್ ದರ್ಶಯತಿ ॥ **ಭಾವಾಭಾವೇತಿ ॥** ನನು ಸರ್ವಜನಪ್ರಸಿದ್ಧಾನ್ಯೋನ್ಯಾಭಾವಪದಂ ವಿಹಾಯಾನ್ಯೋನ್ಯಾಭಾವತಾಪದೇನ ಕುತೋಽನ್ಯೋನ್ಯಾಭಾವಸ್ಯ ಗ್ರಹಣಮಿತಿ ಚೇತ್ । ಸತ್ಯಮ್ । ಅಯಮಭಿಸಂಧಿರ್ಗ್ರಂಥಕಾರಸ್ಯ । ಭಾವಾಭಾವಸ್ವರೂಪತ್ವಾದಿತಿ ಪೂರ್ವವಾಕ್ಯೇ ಭಾವಪದೇನ ಭವತೀತಿ ಕರ್ತೃವ್ಯುತ್ಪತ್ತ್ಯಾ ಘಟಪಟಾದಯೋ ಭಾವಾ ಗೃಹೀತಾಃ । ಅತಃ ಪ್ರಾಕ್ ಪ್ರಸ್ತುತಾಂ ತಾಮೇವ ವ್ಯುತ್ಪತ್ತಿಂ ಮನಸಿ ನಿಧಾಯ ಪ್ರಯೋಗಕೌಶಲಂ ಚ ವಿದುಷಾಮುಪದಿಶನ್ನಾಚಾರ್ಯಃ ಅನ್ಯೋನ್ಯಂ ನ ಭವತ ಇತ್ಯನ್ಯೋನ್ಯಾಭಾವೌ ಘಟಪಟೌ ತಯೋರ್ಭಾವೋಽನ್ಯೋನ್ಯಾಭಾವತೇತಿ ತಲ್ಪ್ರತ್ಯಯಾಂತಪದೇನಾನ್ಯೋನ್ಯಾಭಾವಮಭ್ಯಧಾದಿತಿ । ವಕ್ತುರ್ವಿವಕ್ಷಾಪೂರ್ವಿಕಾ ಶಬ್ದಪ್ರವೃತ್ತಿರಿತಿ ಹಿ ಪ್ರಾಚಾಂ ವಾಚಃ । ತತ್ತಸ್ಮಾತ್ ॥ ೭೯೬ ॥

**ವಿವರಣೆ–** ತತ್ವ ಸಂಖ್ಯಾನವನ್ನು ಮಾಡುವ ಆಚಾರ್ಯರು ಭಾವಾಭಾವಗಳನ್ನು ಪರಿಗಣಿಸಿದರೇ ಹೊರತು ಭೇದವನ್ನು ಪರಿಗಣಿಸಲಿಲ್ಲ. ಏಕೆಂದರೆ ಭಾವಾಭಾವ ಪರಿಗಣನೆಯಿಂದಲೇ ಭೇದವು ಪರಿಗಣಿತವಾಗುತ್ತದೆ ಎಂದು ಅವರ ಅಭಿಪ್ರಾಯ. ಅಸತ್ತಿನಲ್ಲಿ ಭೇದವಿದ್ದರೆ ಆಗ ಅದು ಭಾವವೂ ಅಲ್ಲ, ಅಭಾವವೂ ಅಲ್ಲವಾದ್ದರಿಂದ ಭೇದವೆಂಬ ಇನ್ನೊಂದು ತತ್ವವನ್ನು ಹೇಳಬೇಕಾಗಿತ್ತು. ಆದರೆ ಅಸತ್ತಿನಲ್ಲಿ ಭೇದವೇ ಇಲ್ಲ. ಭಾವಾಭಾವಗಳಲ್ಲಿ ಇರುವ ಭೇದವು ಭಾವಾಭಾವರೂಪವೇ ಆಗಿವೆ. ಆದ್ದರಿಂದ ಭೇದವನ್ನು ಪ್ರತ್ಯೇಕವಾಗಿ ಹೇಳಲಿಲ್ಲ ಎಂದು ಅಭಿಪ್ರಾಯ.

**ತಸ್ಮಾತ್ ಸಾಧನವೈಕಲ್ಯಮಸ್ಮಿನ್ ಪಕ್ಷೇ ದೃಢಂ ವಿದಾಂ ॥ ೭೯೮ ॥**

**ಅರ್ಥ–** ತಸ್ಮಾತ್= ಆದ್ದರಿಂದ, ಅಸ್ಮಿನ್ ಪಕ್ಷೇ= ಈ ಪಕ್ಷದಲ್ಲಿ, ವಿದಾಂ= ಜ್ಞಾನಿಗಳ ಮತದಂತೆ, ಸಾಧನ ವೈಕಲ್ಯಂ= ದೃಷ್ಟಾಂತದಲ್ಲಿ ಸಾಧನ ವೈಕಲ್ಯವು, ದೃಢಂ= ಪ್ರಬಲವಾಗಿ ಬರುತ್ತದೆ.

**ಅನುವಾದ-** ಆದ್ದರಿಂದ ಈ ಪಕ್ಷದಲ್ಲಿ ಜ್ಞಾನಿಗಳ ದೃಷ್ಟಿಯಿಂದ ಸಾಧನವೈಕಲ್ಯವು ಪ್ರಬಲವಾಗಿ ಬರುತ್ತದೆ.

**ಭಾವವಿಲಾಸಿನೀ–** ತಮೇವ ಹೇತುಂ ವಿಶಿನಷ್ಟಿ ॥ **ಭಾವಾಭಾವೇಷ್ವಿತಿ** ॥ ತಾದ್ರೂಪ್ಯಾತ್ ತದ್ರೂಪತ್ವಾತ್। ಭಾವಾಭಾವಾಭಿನ್ನತ್ವಾದಿತ್ಯರ್ಥಃ। ಅಸತಿ ಶಶವಿಷಾಣಾದೌ। ಅವರ್ತನಾತ್ ಉಕ್ತರಿತ್ಯಾಽಭಾವಾದಿತ್ಯರ್ಥಃ। ಅಸತಿ ಅನ್ಯೋನ್ಯಾಭಾವಸ್ಯ ವರ್ತನೇ ಹಿ ಸತೋಽಸ್ಯ ತದ್ರೂಪತ್ವಾಯೋಗೇನ ಪೃಥಕ್ ಗಣನಾ ಸ್ಯಾತ್। ತತ್ರಚ ಉಕ್ತರೀತ್ಯಾಽವರ್ತನೇ ಅನ್ಯತ್ರ ಚ ತದ್ರೂಪತ್ವೇ ಕಿಂ ಪೃಥಕ್‌ಗಣನಯೇತಿ ನ ಪೃಥಗುಕ್ತವಾನಿತಿ ಭಾವಃ ॥ ಪ್ರಕೃತಮನುಸರತಿ– **ತಸ್ಮಾದಿತಿ** ॥ ತಸ್ಮಾದಸತಿ ಭೇದಸ್ಯಾವಿದ್ಯಮಾನತ್ವೇನ ತದ್‌ಭೇದೇ ಭೇದತ್ವಸ್ಯ ಸುತರಾಮವಿದ್ಯ-ಮಾನತ್ವಾತ್। ಅಸ್ಮಿನ್‌ಪಕ್ಷೇ ಆರೋಪಿತಚಂದ್ರಾಣಾಮೇವ ಭೇದ ಇತಿ ಪಕ್ಷೇ ॥೭೯೭-೭೯೮॥

**ವಿವರಣೆ–** ಭೇದೋ ಮಿಥ್ಯಾ ಭೇದತ್ವಾತ್ ಚಂದ್ರಭೇದವತ್ ಎಂಬ ಅನುಮಾನದಲ್ಲಿ ದೃಷ್ಟಾಂತವನ್ನಾಗಿ ಹೇಳಿದ ಚಂದ್ರಭೇದವು ಯಾವುದು ಎಂದು ವಿಕಲ್ಪ ಮಾಡಿ ದೂಷಣೆಯನ್ನು ಹೇಳುತ್ತಿದ್ದಾರೆ. ಅದರಲ್ಲಿ ಎರಡು ಆರೋಪಿತಚಂದ್ರರಿಗಿರುವ ಭೇದವನ್ನು ದೃಷ್ಟಾಂತವಾಗಿ ಹೇಳುತ್ತೇವೆ ಎಂಬ ಪಕ್ಷದಲ್ಲಿ ಈ ವಿಚಾರವು ಹರಿದು ಬಂದಿದೆ. ಎರಡು ಆರೋಪಿತಚಂದ್ರಗಳು ಅಪ್ರಾಮಾಣಿಕವಾದವು. ಆದ್ದರಿಂದ ಅವುಗಳಲ್ಲಿ ಭೇದವೇ ಇಲ್ಲ. ಆದ್ದರಿಂದ ಆರೋಪಿತ ಅನಾರೋಪಿತ ಚಂದ್ರಭೇದವನ್ನು ಹೇಳಿದರೆ ಪ್ರಾಮಾಣಿಕ ಅಪ್ರಾಮಾಣಿಕ ಸಾಧಾರಣವಾದ ಒಂದು ಧರ್ಮವಿಲ್ಲದಿರುವುದರಿಂದ ಅಲ್ಲಿ ಭೇದತ್ವರೂಪಸಾಧನವಿಲ್ಲದಿರುವುದರಿಂದ ದೃಷ್ಟಾಂತಕ್ಕೆ ಸಾಧನವೈಕಲ್ಯ ರೂಪವಾದ ದೋಷವು ಬರುತ್ತದೆ ಎಂದು ಅಭಿಪ್ರಾಯ.

**ಕಿಂಚಾರೋಪಿತರೂಪ್ಯೇಷು ರೂಪ್ಯತ್ವಂ ಕಸ್ಯ ಸಂಮತಂ ।**
**ಅತ ಆರೋಪಿತೋ ಭೇದೋ ನ ಭೇದಃ ಸರ್ವವಾದಿನಾಂ ॥ ೭೯೯ ॥**

**ಅರ್ಥ–** ಕಿಂಚ= ಮತ್ತು, ಆರೋಪಿತರೂಪ್ಯೇಷು= ಆರೋಪಿತ ರಜತಗಳಲ್ಲಿ, ರೂಪ್ಯತ್ವಂ= ರಜತತ್ವವು, ಕಸ್ಯ ಸಂಮತಂ= ಯಾರಿಗೆ ಸಂಮತವಾಗಿದೆ, ಆದ್ದರಿಂದ, ಸರ್ವವಾದಿನಾಂ= ಎಲ್ಲ ವಾದಿಗಳ ಮತದಂತೆಯೂ, ಆರೋಪಿತೋ ಭೇದಃ= ಆರೋಪಿತ ಭೇದವು, ಭೇದಃ ನ= ಭೇದವೇ ಅಲ್ಲ.

**ಅನುವಾದ–** ಮತ್ತು ಆರೋಪಿತ ರಜತಗಳಲ್ಲಿ ರಜತತ್ವವು ಯಾರಿಗೆ ಸಮ್ಮತವಾಗಿದೆ? ಆದ್ದರಿಂದ ಎಲ್ಲಾ ವಾದಿಗಳ ದೃಷ್ಟಿಯಲ್ಲಿ ಆರೋಪಿತ ಭೇದವು ಭೇದವೇ ಅಲ್ಲ.

**ಭಾವವಿಲಾಸಿನೀ–** ಪ್ರಾಗುಕ್ತಂ ಸುಲಭಂ ಪಕ್ಷಂ ಬಹುಚರ್ಚಾಯಾಮುಸಮರ್ಥಸ್ಯಾಪಿ ಮಂದಸ್ಯೋಪಕಾರಾಯ ಸಿಂಹಾವಲೋಕನನ್ಯಾಯೇನ ಪುನಃ ಸ್ಮಾರಯನ್ ಭೇದತ್ವಾನುಮಾನ-ದೂಷಣಮುಪಸಂಹರತಿ– **ಕಿಂಚೇತಿ** ॥ ವ್ಯಾಖ್ಯಾತಪ್ರಾಯಮೇತತ್ । ತತಃ ಏಕತ್ರ ಸಾಧನವೈಕಲ್ಯಾತ್ । ಅಪರತ್ರ ಸಾಧ್ಯವೈಕಲ್ಯಾಯತ್ ॥ ೭೯೯ ॥

**ವಿವರಣೆ–** ಆರೋಪಿತ ಚಂದ್ರದ್ವಯರಲ್ಲಿ ವಾಸ್ತವ ಭೇದವಿಲ್ಲದಿದ್ದರೂ ಆರೋಪಿತ ಅನಾರೋಪಿತಚಂದ್ರರಲ್ಲಿ ಭೇದತ್ವವಿರಬಹುದು ಎಂದು ಶಂಕಿಸಿದರೆ ಅದಕ್ಕೆ ಇಲ್ಲಿ ಉತ್ತರವನ್ನು ಹೇಳುತ್ತಾರೆ. ಹೇಗೆ ಆರೋಪಿತರಜತದಲ್ಲಿ ರಜತತ್ವವಿಲ್ಲವೋ, ಹಾಗೆಯೇ ಆರೋಪಿತಭೇದದಲ್ಲಿ ಭೇದತ್ವವೂ ಇಲ್ಲ. ನೀನು ಭೇದತ್ವವನ್ನು ಹೇತು ಮಾಡಿದ್ದೀಯೆ. ಆದ್ದರಿಂದ ದೃಷ್ಟಾಂತದಲ್ಲಿ ಸಾಧನವೈಕಲ್ಯದೋಷವು ಬಂದೇ ಬರುತ್ತದೆ ಎಂದು ಅಭಿಪ್ರಾಯ.

**ಅನಾರೋಪಿತಭೇದಸ್ತು ಸತ್ಯ ಏವಾಖಿಲಸ್ತತಃ ।**
**ಸಾಧ್ಯಸಾಧನವೈಕಲ್ಯಶಲ್ಯಮುದ್ಧ್ರಿಯತೇ ಕಥಂ ॥ ೮೦೦ ॥**

**ಅರ್ಥ–** ಅನಾರೋಪಿತಭೇದಸ್ತು= ಅನಾರೋಪಿತಚಂದ್ರಧರ್ಮಿಕಭೇದವಾದರೂ, ತತಃ= ಆ ಕಾರಣದಿಂದ, ಅಖಿಲಃ ಸತ್ವ ಏವ= ಅವೆಲ್ಲವೂ ಸತ್ಯವೇ ಆಗಿದೆ, ಸಾಧ್ಯಸಾಧನ ವೈಕಲ್ಯಶಲ್ಯಂ= ಸಾಧ್ಯವೈಕಲ್ಯ ಮತ್ತು ಸಾಧನವೈಕಲ್ಯ ಎಂಬ ಶಲ್ಯವನ್ನು, ಕಥಮುದ್ಧ್ರಿಯತೇ= ಹೇಗೆ ಪರಿಹಾರ ಮಾಡುತ್ತೀಯೇ?

**ಅನುವಾದ–** ಅನಾರೋಪಿತಚಂದ್ರಧರ್ಮಿಕ ಭೇದವಾದರೂ ಅವೆಲ್ಲವೂ ಸತ್ಯವೇ ಆಗಿದೆ. ಆದ್ದರಿಂದ ದೃಷ್ಟಾಂತಕ್ಕೆ ಬರುವ ಸಾಧ್ಯವೈಕಲ್ಯ ಮತ್ತು ಸಾಧನವೈಕಲ್ಯವನ್ನು ನೀನು ಹೇಗೆ ಪರಿಹರಿಸಿಕೊಳ್ಳುತ್ತೀಯೆ?

**ವಿವರಣೆ–** ದೃಷ್ಟಾಂತವನ್ನಾಗಿ ಹೇಳಿದ ಚಂದ್ರಭೇದವು ಅನಾರೋಪಿತಚಂದ್ರಧರ್ಮಿಕ ಭೇದವಾದರೆ ಅದು ಸತ್ಯವಾದುದರಿಂದ ಅಲ್ಲಿ ಮಿಥ್ಯಾತ್ವ ರೂಪವಾದ ಸಾಧ್ಯವಿಲ್ಲ. ಆದ್ದರಿಂದ ಸಾಧ್ಯವೈಕಲ್ಯ ದೋಷವು ಬರುತ್ತದೆ. ಎರಡು ಆರೋಪಿತ ಚಂದ್ರರ ಭೇದವನ್ನು ದೃಷ್ಟಾಂತವನ್ನಾಗಿ ಹೇಳಿದರೆ, ಅಲ್ಲಿ ಭೇದತ್ವವೇ ಇಲ್ಲದಿರುವುದರಿಂದ ಸಾಧನ ವೈಕಲ್ಯವು ಬರುತ್ತದೆ. ಈ ದೋಷವನ್ನು ಪರಿಹಾರ ಮಾಡಿಕೊಳ್ಳಲು ಸಾಧ್ಯವಿಲ್ಲ ಎಂದು ಅಭಿಪ್ರಾಯ.

**ಅತಸ್ತವೈಷ ದೃಷ್ಟಾಂತೋ ನಾಮ್ನಾ ದೃಷ್ಟಾಂತ ಏವ ಹಿ ।**
**ಯತೋ ದ್ವೇಧಾಪಿ ದೃಷ್ಟೋಽಂತಃ ಸರ್ವೈರಸ್ಯ ಮನೀಷಿಭಿಃ ॥ ೮೦೧ ॥**

**ಅರ್ಥ–** ಅತಃ= ಆದ್ದರಿಂದ, ಏಷ ತವ ದೃಷ್ಟಾಂತಃ= ಈ ನಿನ್ನ ದೃಷ್ಟಾಂತವು, ನಾಮ್ನಾ= ಹೆಸರಿಗೆ ತಕ್ಕಂತೆ, ದೃಷ್ಟಾಂತ ಏವ ಹಿ= ದೃಷ್ಟಾಂತವೇ ಆಗಿದೆ, ಯತಃ= ಏಕೆಂದರೆ, ಸರ್ವೈಃ ಮನೀಷಿಭಿಃ= ಎಲ್ಲ ವಿವೇಕಿಗಳಿಂದಲೂ, ದ್ವೇಧಾಪಿ= ಎರಡು ರೀತಿಯಿಂದಲೂ, ಅಸ್ಯ= ಈ ದೃಷ್ಟಾಂತದ, ಅಂತಃ= ವಿನಾಶವು, ದೃಷ್ಟಃ= ದೃಷ್ಟವಾಗಿದೆ.

**ಅನುವಾದ–** ಆದ್ದರಿಂದ ನಿನ್ನ ಈ ದೃಷ್ಟಾಂತವು ದೃಷ್ಟಾಂತವೆಂಬ ಹೆಸರಿಗೆ ಯೋಗ್ಯವಾಗಿಯೇ ಇದೆ. ಏಕೆಂದರೆ ಎಲ್ಲ ವಿವೇಕಿಗಳೂ ಸಾಧ್ಯವೈಕಲ್ಯ ಮತ್ತು ಸಾಧನವೈಕಲ್ಯವು ಬರುವುದರಿಂದ ಎರಡು ಪ್ರಕಾರದಿಂದಲೂ ಈ ದೃಷ್ಟಾಂತವು ನಾಶವನ್ನು ಹೊಂದುತ್ತದೆ ಎಂದೇ ತಿಳಿಯುತ್ತಾರೆ.

**ಭಾವವಿಲಾಸಿನೀ–** ನಾಮ್ನಾ ನಾಮಮಾತ್ರೇ । ನ ತ್ವರ್ಥತಃ । ದೃಷ್ಟೋಽಂತಃ ಸಾಧ್ಯ ಸಾಧನಯೋ-ರಧ್ಯವಸಾಯೋ ಯತ್ರೇತ್ಯಸ್ಯಾರ್ಥಸ್ಯಾತ್ರಾಭಾವಾತ್ । ಕಥಂ ತರ್ಹಿ ದೃಷ್ಟಾಂತನಾಮಾಪೀತ್ಯತ ಆಹ – **ಯತ ಇತಿ** ॥ ದ್ವೇಧಾ ಆರೋಪಿತಾನಾರೋಪಿತಪಕ್ಷಯೋಃ ಅಂತೋ ನಾಶಃ । ಅಸ್ಯ ತ್ವದಭಿಲಷಿತಾರ್ಥಸ್ಯ । ಅನುಕೂಲಾರ್ಥಾಭಾವೇಽಪಿ ಪ್ರತಿಕೂಲಮಿಮಮರ್ಥಮಾದಾಯ ದೃಷ್ಟಾಂತನಾಮಮಾತ್ರಂ ಘಟತ ಇತಿ ಭಾವಃ ॥ ೮೦೧ ॥

**ವಿವರಣೆ–** ದೃಷ್ಟಾಂತಃ ಎಂಬ ಶಬ್ದಕ್ಕೆ ದೃಷ್ಟಃ ಅಂತಃ ಯಸ್ಯ ಸಃ ಎಂಬ ವಿಗ್ರಹದಿಂದ ಬಹುವ್ರೀಹಿ ಸಮಾಸವನ್ನು ಮಾಡಿದರೆ ಅಂತಃ ಶಬ್ದಕ್ಕೆ ನಾಶ ಎಂಬ ಅರ್ಥವಿರುವುದರಿಂದ, ನಾಶವು ದೃಷ್ಟವಾಗಿದೆ, ಯಾವುದರ ನಾಶವು ದೃಷ್ಟವಾಗಿದೆಯೋ ಎಂಬ ಅರ್ಥವು ಬರುತ್ತದೆ. ಇಲ್ಲಿ ಸಾಧ್ಯಸಾಧನವೈಕಲ್ಯದಿಂದ ದೃಷ್ಟಾಂತಕ್ಕೆ ನಾಶವುಂಟಾಗುತ್ತದೆ ಎಂದು ಅಭಿಪ್ರಾಯವಿದೆ.

**ಆತ್ಮತ್ವಾತ್ ಪರಮಾತ್ಮೈವ ಯದ್ಯಾತ್ಮಾಯಂ ಮತೇ ತವ ।**
**ನಾರೀತ್ವಾತ್ತರ್ಹಿ ಭಾರ್ಯೈವ ತೇ ಮಾತಾ ಸ್ಯಾತ್ ತಥೈವ ಹಿ ।**
**ಅತಸ್ತ್ವಂ ಮಾತೃಗಮನೀತ್ಯುಪೇಕ್ಷ್ಯಃ ಪ್ರತಿವಾದಿನಾಂ ॥ ೮೦೨ ॥**

**ಅರ್ಥ–** ತವ ಮತೇ= ನಿನ್ನ ಮತದಲ್ಲಿ, ಯದಿ= ಒಂದು ಪಕ್ಷ, ಅಯಂ ಆತ್ಮಾ= ಈ ಜೀವಾತ್ಮನು, ಆತ್ಮತ್ವಾತ್= ಆತ್ಮನಾದ ಕಾರಣದಿಂದ, ಪರಮಾತ್ಮೈವ= ಪರಮಾತ್ಮನೇ ಎಂದು ಹೇಳಿದರೆ, ತಥೈವ= ಅದರಂತೆಯೇ, ತರ್ಹಿ= ಆಗ, ನಾರೀತ್ವಾತ್= ಹೆಂಗಸಾದ್ದರಿಂದ, ತೇ ಮಾತಾ= ನಿನ್ನ ತಾಯಿಯೇ, ಭಾರ್ಯೈವ ಸ್ಯಾತ್= ನಿನ್ನ ಹೆಂಡತಿಯೇ ಆಗುತ್ತಾಳೆ. ಅತಃ= ಆದ್ದರಿಂದ, ತ್ವಂ= ನೀನು, ಮಾತೃಗಮನೀತಿ= ಮಾತೃಗಮನವನ್ನು ಮಾಡಿದವನೆಂದು, ಪ್ರತಿವಾದಿನಾಂ= ಪ್ರತಿವಾದಿಗಳಿಗೆ, ಉಪೇಕ್ಷ್ಯಃ= ಉಪೇಕ್ಷಣೀಯನಾಗುತ್ತೀಯೆ.

**ಅನುವಾದ–** ಜೀವಾತ್ಮನು ಆತ್ಮನಾದ ಕಾರಣದಿಂದ ಪರಮಾತ್ಮನೇ ಎಂದು ಒಂದು ಪಕ್ಷ ನೀನು ಹೇಳುವುದಾದರೆ ಆಗ ಅದರಂತೆ ನಿನ್ನ ತಾಯಿಯು ನಾರಿಯಾದ್ದರಿಂದ ಹೆಂಡತಿಯೇ ಎಂದು ಅನುಮಾನವನ್ನು ಮಾಡಬಹುದು. ಆದ್ದರಿಂದ ನೀನು ಮಾತೃಗಮನವನ್ನು ಮಾಡಿದವನು ಎಂಬ ಕಾರಣದಿಂದ ಪ್ರತಿವಾದಿಗಳಿಂದ ಉಪೇಕ್ಷಣೀಯನಾಗುತ್ತೀಯೆ.

**ಭಾವವಿಲಾಸಿನೀ–** ಅಧುನಾ ವಿಮತಾ ಆತ್ಮಾನಃ ಪರಮಾತ್ಮನಸ್ತತ್ತ್ವತೋ ನ ಭಿದ್ಯಂತೇ ಆತ್ಮಾತ್ವಾತ್ ಪರಮಾತ್ಮವದಿತ್ಯನುಮಾನಂ ಕಿಂಚಿದನುವದನ್ನಾಭಾಸಸಮಾನಯೋಗಕ್ಷೇಮತಯಾ ದೂಷಯತಿ –ಆತ್ಮತ್ವಾದಿತಿ ॥ ಅಸ್ತು ತರ್ಹೀದಮಪ್ಯನುಮಾನಮಿತ್ಯತ ಆಹ – ಆತ ಇತಿ ॥ ೮೦೨ ॥

**ವಿವರಣೆ–** ಈಗ ವಿಮತಾ ಆತ್ಮಾನಃ ಪರಮಾತ್ಮನಃ ತತ್ತ್ವತೋ ನ ಭಿದ್ಯಂತೇ ಆತ್ಮತ್ವಾತ್ ಪರಮಾತ್ಮವತ್, ವಿಪ್ರತಿಪನ್ನರಾದ ಜೀವಾತ್ಮರು ಪರಮಾತ್ಮನಿಂದ ತಾತ್ವಿಕ ಭೇದವುಳ್ಳವರಲ್ಲ, ಆತ್ಮತ್ವ ಇರುವುದರಿಂದ ಪರಮಾತ್ಮನಂತೆ ಎಂಬ ಅನುಮಾನದಿಂದ ಅದ್ವೈತಿಗಳು ಜೀವೇಶ್ವರ ಭೇದವನ್ನು ನಿರಾಕರಣೆ ಮಾಡುತ್ತಾರೆ. ಆ ಅನುಮಾನವನ್ನು ಈಗ ವಿಮರ್ಶೆ ಮಾಡುತ್ತಾರೆ. ಈ ಅನುಮಾನಕ್ಕೆ ಆಭಾಸಸಮಾನಯೋಗಕ್ಷೇಮತ್ವವು ಇದೆ ಎಂದು ಮೊದಲು ತಿಳಿಸುತ್ತಾರೆ. 'ವಿಮತಾ ನಾರೀ (ಮಾತಾ) ಭಾರ್ಯಾ ಏವ ನಾರೀತ್ವಾತ್ ಭಾರ್ಯಾವತ್' ನಾರೀತ್ವ ಇರುವುದರಿಂದ ಪತ್ನಿಯಂತೆ ತಾಯಿಯೂ ಭಾರ್ಯೆ ಎಂಬ ಆಭಾಸ ಅನುಮಾನವನ್ನು ಪ್ರಯೋಗ ಮಾಡಬಹುದಾದ್ದರಿಂದ ನಿನ್ನ ಈ ಅನುಮಾನವು ಅತ್ಯಂತ ಹೇಯವಾದುದು ಎಂದು ಅಭಿಪ್ರಾಯ.

**ಪಶುತ್ವಾದ್ ಗೌಃ ಶುನೀ ತೇ ಸ್ಯಾದ್ ವಸ್ತುತ್ವಾದನ್ನಮೇವ ಹಿ ।**
**ಅಶುದ್ಧಂ ಸ್ಯಾದ್ ಘಟೋಽಪಿ ಸ್ಯಾತ್ ಪಟೋ ದ್ರವ್ಯತ್ವತಸ್ತವ ॥ ೮೦೩ ॥**

**ಅರ್ಥ–** ತೇ= ನಿನ್ನ, ಗೌಃ= , ಪಶುತ್ವಾತ್= ಪಶುವಾದ್ದರಿಂದ, ಶುನೀ ಸ್ಯಾತ್= ಹೆಣ್ಣು ನಾಯಿಯಾಗಲಿ, ಅನ್ನಂ= ನಿನ್ನ ಅನ್ನವು, ವಸ್ತುತ್ವಾತ್= ವಸ್ತುವಾದ್ದರಿಂದ, ಅಶುದ್ಧಂ ಸ್ಯಾತ್= ಅಶುದ್ಧವಾಗಲಿ, ಘಟವು ದ್ರವ್ಯತ್ವವಿರುವುದರಿಂದ ಪಟವಾಗಲಿ.

**ಅನುವಾದ–** ನಿನ್ನ ಗೋವು ಪಶುತ್ವವಿರುವುದರಿಂದ ಹೆಣ್ಣು ನಾಯಿಯಾಗಲಿ. ನಿನ್ನ ಅನ್ನವು ವಸ್ತುತ್ವವಿರುವುದರಿಂದ ಅಶುದ್ಧವಾದ ಪದಾರ್ಥವಾಗಲಿ. ನಿನ್ನ ಘಟವೂ ಸಹ ದ್ರವ್ಯತ್ವದಿಂದ ಪಟವಾಗಲಿ.

**ಭಾವವಿಲಾಸಿನೀ–** ಪರಾನುಮಾನಸ್ಯಾತ್ಯಪ್ರಾಮಾಣಿಕತ್ವಸೂಚನಾಯ ಬಹ್ವಾಭಾಸಸಾಮ್ಯಮಾಹ – **ಪಶುತ್ವಾದಿತ್ಯಾದಿನಾ** ॥ ಅಥವಾ ಪೂರ್ವಾನುಮಾನೇನ ಪರಸ್ಯ ಮಾತೃಗಮನಾಖ್ಯಮಹಾಪಾತಕಮುಕ್ತಂ ತೇನ ಲಜ್ಜಾವಾಂಶ್ಚೇತ್‌ಪರದೇಶಮೇವ ಗಚ್ಛೇತ್ । ತಥಾಪಿ ನಿರ್ಲಜ್ಜತಯಾ ಗೃಹಂ ನ ತ್ಯಜತಿ ಚೇತ್‌ಕ್ಷೀರಪಾನಾನ್ನ ಭೋಜನಜಲಪಾನಾ ನಾಮಭಾವೇನ ಮರಣಂ ಸ್ಯಾದಿತ್ಯುತ್ತರಾನುಮಾನೈರಾಹ ॥ ೮೦೩ ॥

**ವಿವರಣೆ–** ಆಭಾಸಸಮಾನಯೋಗಕ್ಷೇಮತ್ವವನ್ನು ಹೇಳುತ್ತಾ ಇನ್ನೂ ಅನೇಕ ಉದಾಹರಣೆಗಳನ್ನು ಇಲ್ಲಿ ಕೊಡುತ್ತಾರೆ. ಗೌಃ ಶುನೀಃ ಪಶುತ್ವಾತ್ ಅನ್ನಂ ಅಶುದ್ಧಂ ದ್ರವ್ಯತ್ವಾತ್, ಘಟಃ ಪಟಃ ದ್ರವ್ಯತ್ವಾತ್ ಎಂಬ ಆಭಾಸಾನುಮಾನಗಳ ಸಮಾನ ಯೋಗಕ್ಷೇಮವೇ ನಿನ್ನ ಅನುಮಾನಕ್ಕೆ ಬರುತ್ತದೆ ಎಂದು ಒಂದು ಅಭಿಪ್ರಾಯ. ಅಥವಾ ಹಿಂದಿನ ಶ್ಲೋಕದಲ್ಲಿ ನಿನಗೆ ಮಾತೃಗಮನ ದೋಷವುಂಟಾಗುತ್ತದೆ ಎಂದು ಹೇಳಿದರು. ಆದರಿಂದ ಲಜ್ಜಿತನಾಗಿ ದೇಶಾಂತರಕ್ಕೆ ಹೋಗಬೇಕು. ಹಾಗೆ ಹೋಗದೆ ನಿರ್ಲಜ್ಜೆಯಿಂದ ಮನೆಯಲ್ಲೇ ಇರುವುದಾದರೆ ಕ್ಷೀರಪಾನ ಮಾಡಲು ಗೋವು ಇಲ್ಲ, ಊಟವನ್ನು ಮಾಡಲು ಅನ್ನವೇ ಇಲ್ಲ, ಕುಡಿಯಲು ನೀರೇ ಇಲ್ಲ ಎಂದಾಗಿ ಮರಣವೇ ಉಂಟಾಗುತ್ತದೆ ಎಂದೂ ಸೂಚಿಸುತ್ತಾರೆ.

**ಅಭಾಸೋಪಮಹೇತೂನಾಂ ತನ್ಮುಖ್ಯೇಯಮುದಾಹೃತಿಃ ।**
**ಅತೋನುಮಾನತೋऽಪ್ಯೈಕ್ಯಂ ನ ಸಿದ್ಧ್ಯೇತ್ ಪ್ರತಿವಾದಿನಾಂ ॥ ೮೦೪ ॥**

**ಅರ್ಥ–** ತತ್= ಆದ್ದರಿಂದ, ಅಭಾಸೋಪಮಹೇತೂನಾಂ= ಅಭಾಸ ಸದೃಶವಾದ ಹೇತುಗಳಿಗೆ, ಇಯಂ= ಈ ನಿನ್ನ ಅನುಮಾನವು, ಮುಖ್ಯಮುದಾಹೃತಿಃ= ಮುಖ್ಯ ಉದಾಹರಣೆಯಾಗಿದೆ, ಅತಃ= ಆದ್ದರಿಂದ, ಪ್ರತಿವಾದಿನಾಂ= ಪ್ರತಿವಾದಿಗಳಾದ ಅದ್ವೈತಿಗಳಿಗೆ, ಅನುಮಾನತೋಪಿ= ಅನುಮಾನದಿಂದಲೂ, ಐಕ್ಯಂ ನ ಸಿದ್ಧ್ಯೇತ್= ಐಕ್ಯವು ಸಿದ್ಧವಾಗುವುದಿಲ್ಲ.

**ಅನುವಾದ–** 'ವಿಮತಾ ಆತ್ಮಾನಃ' ಎಂಬ ಅದ್ವೈತಿಗಳ ಅನುಮಾನವು ಅಭಾಸಾನುಮಾನಗಳಿಗೆ ಮುಖ್ಯ ಉದಾಹರಣೆಯಾಗಿದೆ. ಆದ್ದರಿಂದ ಪ್ರತಿವಾದಿಗಳಿಗೆ ಅನುಮಾನದಿಂದಲೂ ಐಕ್ಯವು ಸಿದ್ಧವಾಗುವುದಿಲ್ಲ.

**ಭಾವವಿಲಾಸಿನೀ–** ತತ್ತಸ್ಮಾತ್ । ಆಭಾಸಪಂಕ್ತಿಪತಿತತ್ವಾತ್ । ಇಯಂ ತ್ವದನುಮಾ । ಉದಾಹೃತಿರುದಾಹರಣಂ ನಿದರ್ಶನಮಿತ್ಯರ್ಥಃ । ಅತಃ ಉಕ್ತವಿಧಯಾऽನುಮಾನಾನಾಮಾಭಾಸತ್ವಾತ್ ॥ ೮೦೪ ॥

**ವಿವರಣೆ–** 'ವಿಮತಾ ಆತ್ಮಾನಃ ವ್ಯವಹಾರತೋಪಿ ನ ಭಿದ್ಯಂತೇ ಆತ್ಮತ್ವಾತ್ ಪರಮಾತ್ಮವತ್' ಎಂದು ಹೇಳಿ ನಿನಗೆ ಅಭಿಮತವಾದ ವ್ಯಾವಹಾರಿಕಭೇದವನ್ನೂ ನಿರಾಕರಣೆ ಮಾಡಬಹುದಾದ್ದರಿಂದ ಇದು ಎಲ್ಲಾ ಆಭಾಸಅನುಮಾನಗಳಿಗೆ ದೊಡ್ಡ ಉದಾಹರಣೆಯಾಗುತ್ತದೆ ಎಂದು ಅಭಿಪ್ರಾಯ.

**ಯತೋನುಮಾ ತತೋಽಪ್ಯಕ್ಷಾಗಮಾವನ್ವೇವ ಸಾ ಭವೇತ್ ॥ ೮೦೫ ॥**

**ಅರ್ಥ–** ಯತಃ= ಯಾವ ಕಾರಣದಿಂದ, ಅನುಮಾ= ಅನುಸರಿಸಿ ಮಾನ ಎಂದು ಕರೆಯಲ್ಪಡುತ್ತದೆಯೋ, ತತೋಪಿ= ಆ ಕಾರಣದಿಂದಲೂ, ಸಾ= ಆ ಅನುಮಾನವು, ಅಕ್ಷಾಗಮಾವನ್ವೇವ= ಪ್ರತ್ಯಕ್ಷಾಗಮಗಳನ್ನು ಅನುಸರಿಸಿಯೇ, ಭವೇತ್= ಪ್ರಮಾಣ ವಾಗುತ್ತದೆ.

**ಅನುವಾದ–** ಯಾವ ಕಾರಣದಿಂದ ಅನುಮಾ ಎಂಬ ಶಬ್ದವು ಅನುಸರಿಸಿ ಪ್ರಮಾಣವಾಗುತ್ತದೆ ಎಂಬ ಅರ್ಥವನ್ನು ಹೇಳುತ್ತದೆಯೋ ಆ ಕಾರಣದಿಂದಲೂ ಅನುಮಾನವು ಪ್ರತ್ಯಕ್ಷ ಮತ್ತು ಆಗಮಗಳಿಗೆ ಅನುಸಾರಿಯಾಗಿಯೇ ಇರಬೇಕು.

**ಭಾವವಿಲಾಸಿನೀ– ಉಕ್ತಾನುಕ್ತಪರಕೀಯಸರ್ವಾನುಮಾನಸಾಧಾರಣದೂಷಣಮಾಹ – ಯತ ಇತಿ ॥ ಅನುಮಾ ಪ್ರಮಾಣಾಂತರಮನುಸೃತ್ಯೈವ ಪ್ರಮಾಣಮಿತ್ಯರ್ಥಃ। ತತಸ್ತಸ್ಮಾತ್ಕಾರಣಾತ್। ಸಾಽನುಮಾ। ತ್ವದಭಿಲಷಿತಾನುಮಾನಜಾತಂ ಚ ಸರ್ವಂ ದ್ವಾಸುಪರ್ಣೇತ್ಯಾದಿ ನಿರವಕಾಶ-ಶ್ರುತ್ಯನನುಸಾರಿತ್ವಾನ್ನಾಹಂ ಸರ್ವಜ್ಞ ಇತ್ಯಾದಿ ಪ್ರತ್ಯಕ್ಷಾನನುಸಾರಿತ್ವಾಚ್ಚಾನುಮಾನಪದ-ಯೋಗ್ಯಮಪಿ ನ ಭವತೀತಿ ಭಾವಃ ॥ ೮೦೫ ॥**

**ವಿವರಣೆ–** ಪ್ರತ್ಯಕ್ಷ ಆಗಮ ಅನುಸಾರಿಯಾದ ಅನುಮಾನವು ಮಾತ್ರ ಪ್ರಮಾಣವಾಗುತ್ತದೆ. ನಿನ್ನ ಈ ಅನುಮಾನವು ದ್ವಾಸುಪರ್ಣಾ ಮುಂತಾದ ಶ್ರುತಿ ವಿರುದ್ಧವಾದುದರಿಂದಲೂ ನಾಹಂ ಸರ್ವಜ್ಞಃ ನಾಹಂ ನಿರ್ದುಃಖಃ ಮುಂತಾದ ಪ್ರತ್ಯಕ್ಷ ವಿರುದ್ಧವಾದುದರಿಂದಲೂ ಅವುಗಳಿಗೆ ಅನುಸಾರವಾಗಿಲ್ಲ ಆದ್ದರಿಂದ ಅದು ಪ್ರಮಾಣವಾಗುವುದಿಲ್ಲ ಎಂದು ಅಭಿಪ್ರಾಯ.

**ಮಾನಾನಾಮೇವ ಮಿಥ್ಯಾತ್ವಾದೈಕ್ಯೇ ಮಾನಂ ನ ತೇ ಮತೇ ।**
**ಮಮ ತ್ವೈದಂಪರ್ಯಮಾತ್ರಮಿಥ್ಯಾತ್ವಾತ್ ತಾನಿ ತತ್ರ ನ ॥ ೮೦೬ ॥**

**ಅರ್ಥ–** ತೇ ಮತೇ= ನಿನ್ನ ಮತದಲ್ಲಿ, ಮಾನಾನಾಮೇವ= ಪ್ರಮಾಣಗಳಿಗೆ, ಮಿಥ್ಯಾತ್ವಾತ್= ಮಿಥ್ಯಾತ್ವವಿರುವುದರಿಂದ, ಐಕ್ಯೇ= ಐಕ್ಯದಲ್ಲಿ, ಮಾನಂ ನ= ಪ್ರಮಾಣವಿಲ್ಲ, ಮತ್ತು ನನಗಾದರೂ, ಐದಂಪರ್ಯಮಾತ್ರ ಮಿಥ್ಯಾತ್ವಾತ್= ತಾತ್ಪರ್ಯವು ಮಾತ್ರ ಮಿಥ್ಯೆಯಾಗುವುದರಿಂದ, ತತ್ರ= ಐಕ್ಯದ ವಿಷಯದಲ್ಲಿ, ತಾನಿ ನ= ಆ ವಾಕ್ಯಗಳು ಪ್ರಮಾಣವಲ್ಲ.

**ಅನುವಾದ–** ನಿನ್ನ ಮತದಲ್ಲಿ ಪ್ರಮಾಣಗಳೇ ಮಿಥ್ಯವಾದ ಕಾರಣ ಐಕ್ಯವಿಷಯದಲ್ಲಿ ಯಾವ ಪ್ರಮಾಣವೂ ಅಲ್ಲ. ನನಗಾದರೂ ಆ ವಾಕ್ಯಗಳಿಗೆ ನೀನು ಹೇಳಿರುವ ತಾತ್ಪರ್ಯವು ಮಾತ್ರ ಮಿಥ್ಯೆಯಾಗಿರುವುದರಿಂದ ಐಕ್ಯ ವಿಷಯದಲ್ಲಿ ಅವು ಪ್ರಮಾಣವಲ್ಲ.

**ಭಾವವಿಲಾಸಿನೀ–** ಉಭಯವಾದಿಸಂಪ್ರತಿಪತ್ತ್ಯಾಽಪ್ಯೈಕ್ಯೇ ಮಾನಂ ನಾಸ್ತೀತ್ಯಾಹ – **ಮಾನಾನಾಮೇವೇತಿ** ॥ ಸರ್ವಮಿಥ್ಯಾತ್ವವಾದಿನಸ್ತವ ಮತೇ ಐಕ್ಯವಾಕ್ಯಾನಾಂ ಸರ್ವೇಷಾಮಪಿ ಸುತರಾಂ ತ್ರಿಕಾಲನಾಸ್ತಿತ್ವಾಪರಪರ್ಯಾಯಮಿಥ್ಯಾತ್ವಾಂಗೀಕಾರಾತ್ ಐಕ್ಯೇ ಮಾನಂ ನ । ಮಮ ತು ಮತೇ ಐದಂ ಪರ್ಯಮಾತ್ರಮಿಥ್ಯಾತ್ವಾತ್ ಇದಮೈಕ್ಯಂ ಪರಂ ತಾತ್ಪರ್ಯವಿಷಯೋ ಯಸ್ಯ ತತ್ ಇದಂಪರಂ ತಸ್ಯ ಭಾವಃ ಐದಂಪರ್ಯಂ ತಾತ್ಪರ್ಯಮಿತ್ಯರ್ಥಃ । ತನ್ಮಾತ್ರಮಿಥ್ಯಾತ್ವಾತ್ ಸರ್ವಸತ್ಯತ್ವವಾದಿನೋಽಪಿ ಮಮ ಮತೇ ಏತಾವನ್ಮಾತ್ರಮಿಥ್ಯಾತ್ವಸ್ಯ ಸಮ್ಮತತ್ವಾದಿತ್ಯರ್ಥಃ । ತಾನಿ ಐಕ್ಯವಾಕ್ಯಾನಿ । ತತ್ರ ಐಕ್ಯೇ । ನ ಪ್ರಮಾಣಂ ನ । ಏವಂಚೋಭಯವಾದಿಸಂಪ್ರತಿಪತ್ತ್ಯಾ ಐಕ್ಯೇ ಪ್ರಮಾಣಾಭಾವಾತ್ ಮಾತಾಪಿತೃರಹಿತಪುತ್ರಗರ್ಭವತ್ ಗರ್ಭಸ್ರಾವಾತ್ ಪ್ರಾಗೇವ ತವೈಕ್ಯಾಖ್ಯಶಿಶುಃ ಅಭಾವಮಾಪೇತಿ ಭಾವಃ ॥ ೮೦೬ ॥

**ವಿವರಣೆ–** ಐಕ್ಯ ವಿಷಯದಲ್ಲಿ ಪ್ರಮಾಣವಿಲ್ಲವೆಂಬುದು ಉಭಯವಾದಿ ಸಮ್ಮತವೆಂದು ಇಲ್ಲಿ ಹೇಳುತ್ತಾರೆ. ಅದ್ವೈತಿಗಳು ಐಕ್ಯವನ್ನು ಹೇಳುವ ವೇದವಾಕ್ಯಗಳಿಗೆ ತ್ರಿಕಾಲತಾನಾಸ್ತಿತ್ವರೂಪವಾದ ಮಿಥ್ಯಾತ್ವವನ್ನು ಹೇಳುವುದರಿಂದ ಐಕ್ಯದಲ್ಲಿ ಪ್ರಮಾಣವಿಲ್ಲ. ನನ್ನ ಮತದಲ್ಲಿ ವಾಕ್ಯವು ಸತ್ಯವಾಗಿದ್ದರೂ ಅವುಗಳಿಗೆ ಐಕ್ಯದಲ್ಲಿ ತಾತ್ಪರ್ಯವಿಲ್ಲವಾದ್ದರಿಂದ ಅದ್ವೈತಿಗಳು ಕಲ್ಪನೆ ಮಾಡುವ ಐಕ್ಯತಾತ್ಪರ್ಯವು ಮಾತ್ರ ಮಿಥ್ಯ. ಐಕ್ಯತಾತ್ಪರ್ಯವು ಮಿಥ್ಯವಾದ್ದರಿಂದ ಆ ವಾಕ್ಯಗಳು ಐಕ್ಯದಲ್ಲಿ ಪ್ರಮಾಣವಾಗುವುದಿಲ್ಲ. ಆದ್ದರಿಂದ ಉಭಯವಾದಿಗಳ ಸಮ್ಮತಿ ಇರುವುದರಿಂದ ಐಕ್ಯದಲ್ಲಿ ಪ್ರಮಾಣವಿಲ್ಲ. ಮಾತಾ ಪಿತೃರಹಿತವಾದ ಗರ್ಭವು ಗರ್ಭಸ್ರಾವಕ್ಕಿಂತಲೂ ಮೊದಲೇ ಅಭಾವವನ್ನು ಹೊಂದಿದಂತೆ ನಿನ್ನ ಐಕ್ಯ ಎಂಬ ಶಿಶುವು ಪ್ರಮಾಣವಿಲ್ಲದ ಕಾರಣ ಅಭಾವವನ್ನು ಹೊಂದುತ್ತದೆ ಎಂದು ಅಭಿಪ್ರಾಯ.

ವಿಮತೌ ಜೀವಪರಮೌ ವಿರುದ್ಧಗುಣವತ್ತ್ವತಃ ।
ಅಭಿನ್ನೌ ನೈವ ತುಹಿನದಹನಾವಿವ ಸರ್ವದಾ ।
ಸರ್ವಾನುಭವಸಿದ್ಧೇಯಮನುಮಾ ಭೇದಸಾಧಿಕಾ ॥ ೮೦೭ ॥

**ಅರ್ಥ–** ವಿಮತೌ ಜೀವಪರಮೌ= ವಿಮತರಾದ ಜೀವ ಪರಮಾತ್ಮರು, ಸರ್ವದಾ ಅಭಿನ್ನೌ ನೈವ= ಯಾವಾಗಲೂ ಅಭಿನ್ನರಲ್ಲ, ವಿರುದ್ಧ ಗುಣವತ್ತ್ವತಃ= ವಿರುದ್ಧ ಧರ್ಮಾಧಿಕರಣತ್ವವು ಇರುವುದರಿಂದ, ತುಹಿನದಹನಾವಿವ= ಹಿಮ ಮತ್ತು ಅಗ್ನಿಗಳಂತೆ, ಎಂಬ,

ಸರ್ವಾನುಭವ ಸಿದ್ಧಾ= ಎಲ್ಲರ ಅನುಭವದಿಂದ ಸಿದ್ಧವಾದ, ಇಯಂ ಅನುಮಾ= ಈ ಅನುಮಾನವು, ಭೇದಸಾಧಿಕಾ= ಭೇದವನ್ನು ಸಾಧಿಸುತ್ತದೆ.

**ಅನುವಾದ–** ವಿಮತೌ ಜೀವ ಪರಮಾತ್ಮಾನೌ ಸರ್ವದಾ ನ ಅಭಿನ್ನೌ ವಿರುದ್ಧ ಧರ್ಮಾಧಿಕರಣತ್ವಾತ್, ತುಹಿನದಹನವತ್ ಎಂಬ ಸರ್ವಾನುಭವ ಸಿದ್ಧವಾದ ಈ ಅನುಮಾನವು ಭೇದವನ್ನು ಸಾಧಿಸುತ್ತದೆ.

**ಭಾವವಿಲಾಸಿನೀ–** ಸ್ವಮತೇಽನುಮಾನಪ್ರತ್ಯಕ್ಷಾಗಮಾನ್ ದರ್ಶಯತಿ– **ವಿಮತಾವಿತ್ಯಾದಿನಾ ॥** ವ್ಯಾವಹಾರಿಕಭೇದಮಾದಾಯ ಸಿದ್ಧಸಾಧನತಾ ಮಾಭೂದಿತಿ ಸರ್ವದಾಽಭಿನ್ನೌ ನೇತ್ಯುಕ್ತಮ್ । ಆವಯೋರ್ಮತೇ ದಹನತುಹಿನಯೋಃ ಸರ್ವದಾಪ್ಯಭೇದಾಭಾವಸ್ಯ ಸಂಪ್ರತಿಪನ್ನತ್ವಾತ್ ದೃಷ್ಟಾಂತಶ್ಚ ನ ಸಾಧ್ಯವಿಕಲಃ ॥ ೮೦೭ ॥

**ವಿವರಣೆ–** ವಿರುದ್ಧಧರ್ಮಾಧಿಕರಣತ್ವ ಇರುವ ಕಡೆಯಲ್ಲಿ ಭೇದವು ಉಭಯ ಸಮ್ಮತವಾದುದರಿಂದ ಇಲ್ಲಿ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯವಿಲ್ಲ. ಸಾಧ್ಯ ಶರೀರದಲ್ಲಿ ಕೇವಲ ಅಭಿನ್ನೌ ನ ಎಂದಿಷ್ಟೇ ಹೇಳಿದರೆ ವ್ಯಾವಹಾರಿಕ ದೆಶೆಯಲ್ಲಿ ಅವರು ಅಭೇದಾಭಾವವನ್ನು ಒಪ್ಪುವುದರಿಂದ ಅನುಮಾನಕ್ಕೆ ಸಿದ್ಧಸಾಧನ ದೋಷವು ಬರುತ್ತದೆ. ಆದ್ದರಿಂದ 'ಸರ್ವದಾ ಅಭಿನ್ನೌ ನ' ಎಂದು ಹೇಳಿದ್ದಾರೆ. ಸರ್ವದಾ ಎಂದರೆ ಮೋಕ್ಷದಲ್ಲಿಯೂ ಎಂದು ಅರ್ಥ. ಈ ಅನುಮಾನದಿಂದ ಮೋಕ್ಷದಲ್ಲಿಯೂ ಭೇದವು ಸಿದ್ಧವಾಗುವುದರಿಂದ ಸಿದ್ಧಸಾಧನತ್ವ ದೋಷವನ್ನು ಹೇಳಲು ಬರುವುದಿಲ್ಲ ಎಂದು ಅಭಿಪ್ರಾಯ.

ನಾಹಂ ಸರ್ವಜ್ಞ ಇತ್ಯಾದಿ ಸಾಕ್ಷಿಪ್ರತ್ಯಕ್ಷಮಸ್ತಿ ಹಿ ।
ಜೀವೇಶಭೇದೇ ಸರ್ವೇಷಾಂ ವೇದಸೂಕ್ತಃ ಪದೇ ಪದೇ ॥ ೮೦೮ ॥

**ಅರ್ಥ–** ನಾಹಂ ಸರ್ವಜ್ಞ ಇತ್ಯಾದಿ= ನಾನು ಸರ್ವಜ್ಞನಲ್ಲ ಮುಂತಾದ, ಸಾಕ್ಷಿಪ್ರತ್ಯಕ್ಷಂ= ಸಾಕ್ಷಿ ಪ್ರತ್ಯಕ್ಷವು, ಸರ್ವೇಷಾಂ= ಎಲ್ಲರಿಗೂ, ಅಸ್ತಿ ಹಿ= ಇದೆಯಷ್ಟೇ, ವೇದೇಷು= ವೇದಗಳಲ್ಲಿ, ಜೀವೇಶಭೇದಃ= ಜೀವೇಶ್ವರ ಭೇದವು, ಪದೇ ಪದೇ= ಹೆಜ್ಜೆ ಹೆಜ್ಜೆಗೂ, ಉಕ್ತಃ= ಹೇಳಲ್ಪಟ್ಟಿದೆ.

**ಅನುವಾದ–** ಎಲ್ಲರಿಗೂ ನಾನು ಸರ್ವಜ್ಞನಲ್ಲ ಎಂಬ ಸಾಕ್ಷಿಪ್ರತ್ಯಕ್ಷವು ಇದ್ದೇ ಇದೆಯಷ್ಟೇ? ವೇದಗಳಲ್ಲಿ ಜೀವೇಶಭೇದವು ಹೆಜ್ಜೆ ಹೆಜ್ಜೆಗೂ ಹೇಳಲ್ಪಟ್ಟಿದೆ.

**ಭಾವವಿಲಾಸಿನೀ–** ಸರ್ವೇಷಾಂ ಸಾಕ್ಷಿಪ್ರತ್ಯಕ್ಷಮಿತಿ ಸಂಬಂಧಃ ॥ ೮೦೮ ॥

**ವಿವರಣೆ–** ನಿನ್ನ ಅಭೇದ ಸಾಧಕ ಅನುಮಾನಕ್ಕೆ ಸಾಕ್ಷಿ ಪ್ರತ್ಯಕ್ಷದಿಂದಲೂ ಮತ್ತು ವೇದದಿಂದಲೂ ವಿರೋಧವು ಬರುವುದರಿಂದ ಅದು ಅಭೇದವನ್ನು ಸಾಧಿಸುವುದಿಲ್ಲ ಎಂದು ಅಭಿಪ್ರಾಯ.

**ಅತಸ್ತ್ರಿಮಾರ್ಗಗಾಮಿತ್ವಾದ್ ಭೇದೋ ಗಂಗೇವ ಸೇಶ್ವರೈಃ ।**
**ಧಾರ್ಯೋಽಯಂ ಶಿರಸಾ ಸರ್ವೈಃ ಪುನಾತಿ ಚ ಜಗತ್ತ್ರಯಂ ॥ ೮೦೯ ॥**

**ಅರ್ಥ–** ಅತಃ= ಆದ್ದರಿಂದ, ತ್ರಿಮಾರ್ಗಗಾಮಿತ್ವಾತ್= ಮೂರು ಮಾರ್ಗಗಳಲ್ಲೂ ಹರಿಯುವುದರಿಂದ ಎಂದರೆ ಪ್ರತ್ಯಕ್ಷಾನುಮಾನಾಗಮದಿಂದ ಸಿದ್ಧವಾಗುವುದರಿಂದ, ಅಯಂ ಭೇದಃ= ಈ ಭೇದವು, ಗಂಗೇವ= ಗಂಗೆಯಂತೆ, ಸೇಶ್ವರೈಃ ಸರ್ವೈಃ= ಈಶ್ವರ ಸಹಿತರಾಗಿ ಎಲ್ಲರಿಂದಲೂ, ಶಿರಸಾ ಧಾರ್ಯಃ= ಶಿರಸ್ಸಿನಲ್ಲಿ ಧಾರಣೆ ಮಾಡಲು ಯೋಗ್ಯವಾದುದು, ಚ= ಮತ್ತು, ಜಗತ್ತ್ರಯಂ= ಮೂರು ಲೋಕಗಳನ್ನೂ, ಪುನಾತಿ= ಪವಿತ್ರವನ್ನಾಗಿ ಮಾಡುತ್ತದೆ.

**ಅನುವಾದ– ಆದ್ದರಿಂದ ಪ್ರತ್ಯಕ್ಷಾನುಮಾನಾಗಮಗಳಿಂದ ಸಿದ್ಧವಾದ ಈ ಭೇದವು ತ್ರಿಪಥ ಗಾಮಿನಿಯಾದ ಗಂಗೆಯು ಹೇಗೆ ಈಶ್ವರ ಸಹಿತರಾದ ಎಲ್ಲರಿಂದಲೂ ಶಿರಸ್ಸಿನಲ್ಲಿ ಧರಿಸಲ್ಪಡುತ್ತದೆಯೋ ಅದರಂತೆ ಧರಿಸಲ್ಪಡಬೇಕು ಮತ್ತು ಅದು ಮೂರು ಲೋಕಗಳನ್ನೂ ಪವಿತ್ರೀಕರಿಸುತ್ತದೆ.**

**ಭಾವವಿಲಾಸಿನೀ– ಅತಃ ಪ್ರಮಾಣತ್ರಯಾನುಸಾರಿತ್ವಾತ್ ॥ ೮೦೯ ॥**

**ವಿವರಣೆ–** ಗಂಗೆಯು ಹೇಗೆ ಮೂರು ಲೋಕಗಳನ್ನೂ ಪವಿತ್ರೀಕರಿಸುತ್ತದೆಯೋ, ಅದರಂತೆ ಭೇದಜ್ಞಾನವೂ ಪವಿತ್ರೀಕರಿಸುತ್ತದೆ. ಭಾಗವತದಲ್ಲಿ 'ವಿದ್ಯಾತ್ಮನಿ ಭಿದಾಬೋಧಃ' ಎಂದು ಭೇದಜ್ಞಾನವನ್ನು ವಿದ್ಯೆ ಎಂದು ಕರೆದಿದ್ದಾರೆ. ಗೀತೆಯಲ್ಲಿ 'ನ ಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ' ಎಂದು ಜ್ಞಾನದಂತೆ ಪವಿತ್ರೀಕರಿಸುವುದು ಯಾವುದೂ ಇಲ್ಲ ಎಂದು ಹೇಳಿದ್ದಾರೆ. ಆದ್ದರಿಂದ ಗಂಗೆಯಂತೆ ಭೇದಜ್ಞಾನವು ಪವಿತ್ರೀಕರಿಸುತ್ತದೆ ಎಂದು ಹೇಳಿರುವುದು ಯಥಾಶಾಸ್ತ್ರವಾಗಿದೆ.

**ದೇವಾನಾಂ ಕಿಲ ಮಾನುಷ್ಯಂ ನಾಜ್ಞಾನೇನೈವ ಕೇವಲಂ ।**
**ಕಿಂತು ಶಾಪೇನ ತನ್ಮೂಲಪಾಪಾದ್ಯೈರ್ವಾ ಭವೇದ್ ಭುವಿ ॥ ೮೧೦ ॥**

**ವಿಪ್ರಾಣಾಮಂತ್ಯಜತ್ವಂ ಚ ಮಹಾಪಾಪಫಲಂ ಕಿಲ ।**
**ಅಂತ್ಯಜಾನಾಂ ಚ ವಿಷ್ಠಾಯಾಂ ಕ್ರಿಮಿತಾ ಪಾಪತಃ ಕಿಲ ॥ ೮೧೧ ॥**

**ಅರ್ಥ–** ದೇವಾನಾಂ= ದೇವತೆಗಳಿಗೆ, ಭುವಿ= ಭೂಲೋಕದಲ್ಲಿ, ಮಾನುಷ್ಯಂ= ಮನುಷ್ಯ ಶರೀರ ಪ್ರಾಪ್ತಿಯು, ಕೇವಲಂ ಅಜ್ಞಾನೇನೈವ= ಕೇವಲ ಅಜ್ಞಾನದಿಂದಲೇ, ನ= ಅಲ್ಲ, ಕಿಂತು= ಆದರೆ, ಶಾಪೇನ= ಶಾಪದಿಂದಲಾಗಲೀ, ತನ್ಮೂಲಪಾಪಾದ್ಯೈರ್ವಾ= ಅಥವಾ ಶಾಪಕ್ಕೆ ಮೂಲವಾದ ಪಾಪದಿಂದಾಗಲೀ, ಭವೇತ್= ಉಂಟಾಗುತ್ತದೆ, ವಿಪ್ರಾಣಾಂ= ಬ್ರಾಹ್ಮಣರಿಗೆ, ಅಂತ್ಯಜತ್ವಂ= ಅಂತ್ಯಜಾತಿಯಲ್ಲಿ ಜನ್ಮವು, ಮಹಾಪಾಪಫಲಂ ಕಿಲ=

ಮಹಾಪಾಪ ಫಲವಷ್ಟೇ, ಅಂತ್ಯಜಾನಾಂ= ಮತ್ತು ಅಂತ್ಯಜರಿಗೂ, ವಿಷ್ಠಾಯಾಂ= ಅಶುಚಿಯಾದ ಪದಾರ್ಥದಲ್ಲಿ, ಕ್ರಿಮಿತಾ= ಕ್ರಿಮಿಜನ್ಮವು, ಪಾಪತಃ ಕಿಲ= ಪಾಪದಿಂದಲೇ ಉಂಟಾಗುವುದಷ್ಟೇ.

**ಅನುವಾದ–** ದೇವತೆಗಳಿಗೆ ಭೂಮಿಯಲ್ಲಿ ಮನುಷ್ಯ ಶರೀರ ಪ್ರಾಪ್ತಿಯು ಕೇವಲ ಅಜ್ಞಾನದಿಂದಲೇ ಉಂಟಾಗುವುದಿಲ್ಲ. ಆದರೆ ಶಾಪದಿಂದಲಾಗಲೀ ಅಥವಾ ಆ ಶಾಪಕ್ಕೆ ಮೂಲವಾದ ಪಾಪದಿಂದಾಗಲೀ ಉಂಟಾಗುತ್ತದೆ. ಬ್ರಾಹ್ಮಣರಿಗೆ ಅಂತ್ಯಜ ಜನ್ಮವು ಮಹಾಪಾಪ ಫಲವಷ್ಟೇ. ಅದರಂತೆ ಅಂತ್ಯಜರಿಗೂ ಅಶುಚಿ ಪದಾರ್ಥದಲ್ಲಿ ಕ್ರಿಮಿರೂಪವಾಗಿ ಜನ್ಮವು ಪಾಪದ ಫಲವಷ್ಟೇ?

**ಭಾವವಿಲಾಸಿನೀ–** ಅಧುನಾ ಉಚ್ಚಸ್ಯ ನೀಚತಾ ಪಾಪಫಲಮೇವ । ಪಾಪಂಚ ಸ್ಮರಣಮಾತ್ರಾತ್ ಸರ್ವೇಷಾಂ ಪಾಪಹಾರಿಣಿ ಸಕಲಪಾಪಹರಗಂಗಾಜನಕಚರಣೇ ಸರ್ವಜ್ಞೇ ನಾರಾಯಣೇ ಮನಸಾಪಿ ಸ್ಮರ್ತುಂ ನ ಶಕ್ಯತೇ । ಅತಸ್ತಸ್ಯ ನೀಚಜೀವತ್ವಂ ಕಥಂ ಸ್ಯಾದಿತಿ ಸ್ವೋಕ್ತಾನುಮಾನಸ್ಯಾನುಗ್ರಾಹಕತರ್ಕಂ ಪ್ರಪಂಚಯತಿ – **ದೇವಾನಾಮಿತ್ಯಾದಿನಾ ॥** ತನ್ಮೂಲಪಾಪಾದ್ಯೈಃ ಶಾಪಕಾರಣೀಭೂತಪಾಪಾದ್ಯೇಃ । ವಿದುರಭೀಷ್ಮಾದಿಷು ತಥಾ ಶ್ರವಣಾತ್ ॥ ೮೧೦-೮೧೧ ॥

**ವಿವರಣೆ–** ಅನುಮಾನದಿಂದ ಜೀವೇಶ್ವರ ಭೇದವನ್ನು ಸಾಧಿಸಿದರೆ ಉಚ್ಚನಿಗೆ ನೀಚೈಕ್ಯವನ್ನು ಹೇಳಿದಂತೆ ಆಗುತ್ತದೆ. ಉಚ್ಚನಿಗೆ ನೀಚತ್ವವು ಬರಬೇಕಾದರೆ ಅದು ಪಾಪದ ಫಲವಾಗಿಯೇ ಬರಬೇಕು. ಆದರೆ ಯಾವ ಪರಮಾತ್ಮನ ಎಂದರೆ ನಾರಾಯಣನ ಪಾದ ಸ್ಮರಣೆಯಿಂದಲೇ ಸಕಲ ಪಾಪಗಳೂ ಪರಿಹಾರವಾಗುತ್ತವೆಯೋ ಅವನಿಗೆ ಪಾಪದ ಪ್ರಸಕ್ತಿಯೇ ಇಲ್ಲ. ಆದ್ದರಿಂದ ಅವನಿಗೆ ನೀಚತ್ವವು ಬರುವುದಿಲ್ಲ ಎಂದು ಹೇಳಿ ಜೀವ ಪರಮಾತ್ಮಾನೌ ಎಂದು ನಾವು ಹೇಳಿದ ಅನುಮಾನಕ್ಕೆ ಇಲ್ಲಿ ಅನುಕೂಲತರ್ಕವನ್ನು ಹೇಳುತ್ತಿದ್ದಾರೆ. ವಿದುರಭೀಷ್ಮಾದಿಗಳ ಪ್ರಸಂಗದಲ್ಲಿ ಭೂಮಿಯಲ್ಲಿ ಅವರ ಜನ್ಮಕ್ಕೆ ಕಾರಣವಾದ ಅವರ ಪಾಪವು ಶಾಸ್ತ್ರಸಮ್ಮತವಾಗಿದೆ. ಆದ್ದರಿಂದ ಈ ಅನುಗ್ರಾಹಕ ತರ್ಕದಲ್ಲಿ ಯಾವ ದೋಷವೂ ಇಲ್ಲ ಎಂದು ಅಭಿಪ್ರಾಯ.

**ತಸ್ಮಾದುಚ್ಚಸ್ಯ ನೀಚತ್ವಪ್ರಾಪ್ತಿಃ ಪಾಪೇನ ಕೇವಲಂ ।**
**ಅಜ್ಞಾನಮಾತ್ರತಃ ಸಾ ಚೇತ್ ಸ್ಮೃತ್ಯಾದೀನಾಮಪಾರ್ಥತಾ ॥ ೮೧೨ ॥**

**ಅರ್ಥ–** ತಸ್ಮಾತ್= ಆದ್ದರಿಂದ, ಉಚ್ಚಸ್ಯ= ಶ್ರೇಷ್ಠನಾದವನಿಗೆ, ನೀಚತ್ವಪ್ರಾಪ್ತಿಃ= ನೀಚತ್ವದ ಪ್ರಾಪ್ತಿಯು, ಕೇವಲಂ ಪಾಪೇನ= ಕೇವಲ ಪಾಪದಿಂದಲೇ ಉಂಟಾಗುತ್ತದೆ, ಅಜ್ಞಾನಮಾತ್ರತಃ= ಕೇವಲ ಅಜ್ಞಾನದಿಂದ, ಸಾ ಚೇತ್= ನೀಚತ್ವ ಪ್ರಾಪ್ತಿಯು ಉಂಟಾಗುವುದಾದರೆ, ಸ್ಮೃತ್ಯಾದೀನಾಂ= ಶ್ರುತಿ ಪುರಾಣಗಳಿಗೆ, ಅಪಾರ್ಥತಾ= ಅಪ್ರಾಮಾಣ್ಯವು ಉಂಟಾಗುತ್ತದೆ.

**ಅನುವಾದ–** ಆದ್ದರಿಂದ ಶ್ರೇಷ್ಠನಾದವನಿಗೆ ನೀಚತ್ವ ಪ್ರಾಪ್ತಿಯು ಕೇವಲ ಪಾಪದಿಂದಲೇ ಉಂಟಾಗುತ್ತದೆ. ಹಾಗಲ್ಲದೇ ಕೇವಲ ಅಜ್ಞಾನದಿಂದಲೇ ನೀಚತ್ವ ಪ್ರಾಪ್ತಿಯಾಗುತ್ತದೆ ಎಂದು ಹೇಳಿದರೆ ಶ್ರುತಿ ಪುರಾಣಗಳಿಗೆ ಅಪ್ರಾಮಾಣ್ಯವು ಬರುತ್ತದೆ.

**ಭಾವವಿಲಾಸಿನೀ–** ತಸ್ಮಾದುಕ್ತನ್ಯಾಯಾತ್ । ಸಾ ನೀಚಯೋನಿಃ । ಸ್ಮೃತ್ಯಾದೀನಾಂ ಚಂಡಾಲಾಃ ಕೋಟಿಜನ್ಮಸು, ವಿಷ್ಠಾಯಾಂ ಜಾಯತೇ ಕ್ರಿಮಿರಿತ್ಯಾದಿಸ್ಮೃತ್ಯಾದೀನಾಮ್ । ಆದಿಪದೇನ ಪುರಾಣಾದಿಕಂ ಗೃಹ್ಯತೇ । ಕಿಂಚೇಂದ್ರದ್ಯುಮ್ನಸ್ಯಾಗಸ್ತ್ಯ ಹೇಲನರೂಪಪಾಪೇನ ಗಜತ್ವಪ್ರಾಪ್ತಿದರ್ಶನಾತ್ । ನಾರದಾವಜ್ಞಾನೇನ ನಲಕೂಬರಮಣಿಗ್ರೀವಯೋ-ರ್ವೃಕ್ಷತ್ವಪ್ರಾಪ್ತಿದರ್ಶನಾತ್ । ಅಹಲ್ಯಾಯಾಶ್ಚ ಪರಪುರುಷಪರಿಗ್ರಹರೂಪಪಾಪೇನ ಶಿಲಾತ್ವದರ್ಶನಾಚ್ಚ । ಜ್ಞಾನಿನೋಽಜ್ಞಾನಿತ್ವಮಪಿ ಮಹಾಪಾಪಫಲಮ್ । ತಸ್ಮಾತ್ ಪಾಪಾಭಾವೇಽಪ್ಯಜ್ಞಾನಾದೇವ ನೀಚಯೋನಿಪ್ರಾಪ್ತಿರಿತ್ಯಪಿ ರಿಕ್ತಂ ವಚಃ ॥ ೮೧೨ ॥

**ವಿವರಣೆ–** ಸ್ಮೃತಿಗಳು ಪಾಪವನ್ನು ಮಾಡಿದ ಚಂಡಾಲರು ಮುಂದಿನ ಜನ್ಮಗಳಲ್ಲಿ ಅಮೇಧ್ಯದಲ್ಲಿ ಕ್ರಿಮಿಯಾಗುತ್ತಾರೆ ಎಂದು ಹೇಳುತ್ತವೆ. ಇಂದ್ರದ್ಯುಮ್ನ ರಾಜನಿಗೆ ಅಗಸ್ತ್ಯರ ಅವಹೇಳನದಿಂದ ಗಜತ್ವಪ್ರಾಪ್ತಿಯು ಭಾಗವತಪುರಾಣದಲ್ಲಿ ಪ್ರಸಿದ್ಧವಾಗಿದೆ. ನಾರದರನ್ನು ಅವಮಾನ ಮಾಡಿದ ಕಾರಣದಿಂದ ನಳಕೂಬರ ಮಣಿಗ್ರೀವರಿಗೆ ವೃಕ್ಷ ಜನ್ಮಪ್ರಾಪ್ತಿಯೂ ಭಾಗವತದಲ್ಲೇ ಉಕ್ತವಾಗಿದೆ. ಅಹಲ್ಯೆಗೂ ಸಹ ಪರಪುರುಷ ಸ್ಪರ್ಶರೂಪವಾದ ಪಾಪದಿಂದ ಶಿಲಾತ್ವ ಪ್ರಾಪ್ತಿಯು ಕಂಡಿದೆ. ಜ್ಞಾನಿಗಳಿಗೆ ಅಜ್ಞಾನಿತ್ವವೂ ಕೂಡ ಮಹಾಪಾಪದ ಫಲವೇ. ಆದ್ದರಿಂದ ಪಾಪವಿಲ್ಲದೇ ಕೇವಲ ಅಜ್ಞಾನದಿಂದ ನೀಚ ಯೋನಿಯ ಪ್ರಾಪ್ತಿಯಾಗುವುದಿಲ್ಲ. ಬ್ರಹ್ಮನಿಗಂತೂ ಪಾಪದ ಲೇಪವೇ ಇಲ್ಲ. ಆದ್ದರಿಂದ ಅಜ್ಞಾನ ವಶನಾಗಿ ಬ್ರಹ್ಮನು ನೀಚಯೋನಿಗಳನ್ನು ಹೊಂದುತ್ತಾನೆ ಎಂಬ ಅದ್ವೈತಿಗಳ ಆಸೆಯು ಛೇದಿಸಲ್ಪಟ್ಟಿತು ಎಂದು ಅಭಿಪ್ರಾಯ.

ಏವಂ ಸತಿ ಶ್ವಚಂಡಾಲಪಶುಪಕ್ಷ್ಯಾದಿಯೋನಿಷು ।
ಅನಾದಿಕಾಲತೋ ಭೂತ್ವಾ ಸದಾ ಸರ್ವತ್ರ ಸಂಸರೇತ್ ॥ ೮೧೩ ॥

ತೇ ಬ್ರಹ್ಮ ಬಹುದುಷ್ಕರ್ಮವಿಣ್ಮಯಾರ್ಣವಮಜ್ಜಿತಂ ।
ಪರಂಬ್ರಹ್ಮ ತವೈವ ಸ್ಯಾತ್ತದೇವ ತ್ವಂ ನ ಸಂಶಯಃ ॥ ೮೧೪ ॥

**ಅರ್ಥ–** ಏವಂ ಸತಿ= ಹೀಗೆ ಎಲ್ಲರ ಐಕ್ಯವಿದ್ದರೆ, ತೇ ಬ್ರಹ್ಮ= ನಿನ್ನ ಬ್ರಹ್ಮನು, ಅನಾದಿ ಕಾಲತಃ= ಅನಾದಿ ಕಾಲದಿಂದಲೂ, ಶ್ವಚಂಡಾಲಪಶುಪಕ್ಷ್ಯಾದಿಯೋನಿಷು= ನಾಯಿ, ಚಂಡಾಲ, ಪಶು, ಪಕ್ಷ್ಯಾದಿ ಯೋನಿಗಳಲ್ಲಿ, ಭೂತ್ವಾ= ಶರೀರವನ್ನು ಪಡೆದು, ಸದಾ=

ಯಾವಾಗಲೂ, ಸರ್ವತ್ರ= ಎಲ್ಲ ಕಡೆಗಳಲ್ಲಿಯೂ, ಸಂಸರೇತ್= ಸಂಸಾರವನ್ನು ಹೊಂದುವವನಾಗಿ, ಬಹುದುಷ್ಕರ್ಮವಿಣ್ಮಯಾರ್ಣವಮಜ್ಜಿತಂ= ಅನೇಕ ದುಷ್ಕರ್ಮರೂಪವಾದ ಅಸಹ್ಯ ಸಾಗರದಲ್ಲಿ ಮುಳುಗಿರುವ, ಪರಬ್ರಹ್ಮ= ಪರಬ್ರಹ್ಮನು, ತವೈವ ಸ್ಯಾತ್= ನಿನಗೇ ಇರಲಿ, ತ್ವಂ= ನೀನು, ತದೇವ= ಅದೇ ಬ್ರಹ್ಮನಾಗಿದ್ದೀಯೆ, ನ ಸಂಶಯಃ= ಇದರಲ್ಲಿ ಸಂಶಯವಿಲ್ಲ.

**ಅನುವಾದ–** ಹೀಗೆ ಬ್ರಹ್ಮನಿಗೆ ಎಲ್ಲಾ ಜೀವರ ಐಕ್ಯವಿದ್ದರೆ ನಿನ್ನ ಬ್ರಹ್ಮನು ಅನಾದಿಕಾಲದಿಂದಲೂ ನಾಯಿ ಚಂಡಾಲ ಪಶು ಪಕ್ಷ್ಯಾದಿ ಯೋನಿಗಳಲ್ಲಿ ಸಂಭವಿಸಿ ಎಲ್ಲ ಕಡೆಗಳಲ್ಲಿಯೂ ಯಾವಾಗಲೂ ಸಂಸಾರವನ್ನು ಹೊಂದಿದ್ದಾನೆಂದಾಯಿತು. ಅನೇಕ ದುಷ್ಕರ್ಮಮಯವಾದ ಅಸಹ್ಯ ಸಾಗರದಲ್ಲಿ ಮುಳುಗಿರುವ ಆ ಪರಬ್ರಹ್ಮನು ನಿನಗೇ ಇರಲಿ. ನೀನೇ ಆ ಪರಬ್ರಹ್ಮ. ಇದರಲ್ಲಿ ಸಂಶಯವಿಲ್ಲ.

**ಭಾವವಿಲಾಸಿನೀ–** ಬಹುದುಷ್ಕರ್ಮಾಣ್ಯೇವ ವಿಣ್ಮಯಾರ್ಣವೋ ವಿಷ್ಠಾಮಯಸಮುದ್ರಃ । ತತ್ರ ಮಜ್ಜಿತಮ್ । ತೇ ಬ್ರಹ್ಮ ತವೈವ ಪರಬ್ರಹ್ಮ ಸ್ಯಾತ್ । ತದೇವ ತತ್‌ಬ್ರಹ್ಮೈವ ತ್ವಮಸಿ । ಉಕ್ತ-ವಿಧಯಾಽನಾದಿಕಾಲಮಾರಭ್ಯ ಪಾಪಾವಿಲಸ್ಯ ತಸ್ಯ ಬ್ರಹ್ಮತಾ ಆಗ್ರಹಮಾತ್ರಾತ್ ಜೀವಚೈತನ್ಯ-ಮೇವ ತತ್ । ತಸ್ಯ ಚ ಜೀವಾಭೇದೋ ಯುಕ್ತ ಏವೇತಿ ಭಾವಃ ॥ ೮೧೩-೮೧೪ ॥

**ವಿವರಣೆ–** ಅನಾದಿ ಕಾಲದಿಂದಲೂ ಪಾಪದ ಸಂಬಂಧವನ್ನು ಹೊಂದಿರುವ ಚೇತನನನ್ನು ಬ್ರಹ್ಮ ಎಂದು ಕರೆಯುವುದು ಕೇವಲ ದುರಾಗ್ರಹದಿಂದ. ಅಂತಹ ಚೇತನನು ಜೀವನಾಗುತ್ತಾನೆಯೇ ಹೊರತು ಬ್ರಹ್ಮನಾಗುವುದಿಲ್ಲ. ಅವನಿಗೆ ಜೀವ ಭೇದವು ಯುಕ್ತವಾಗಿಯೇ ಇದೆ ಎಂದು ಅಭಿಪ್ರಾಯ.

ಅಸ್ಮದ್ಬ್ರಹ್ಮ ಹಯಗ್ರೀವಮತ್ಸ್ಯಕೂರ್ಮಾದಿವಿಗ್ರಹೇ ।
ಅಪಿ ಚಿತ್ಸುಖಸಂಪೂರ್ಣಂ ಸಹಸ್ರಾರ್ಕಸಮಪ್ರಭಂ ॥ ೮೧೫ ॥

ಅನಂತವೇದವೇದಾಂಗಪುರಾಣಸ್ಮೃತಿಪಾರಗಂ ।
ಚತುರ್ಮುಖಾದ್ಯೈರಾರಾಧ್ಯಂ ತೇಷಾಂ ವಿದ್ಯೋಪದೇಷ್ಟೃ ಚ॥ ೮೧೬ ॥

**ಅರ್ಥ–** ಅಸ್ಮದ್ಬ್ರಹ್ಮ= ನಮ್ಮ ಬ್ರಹ್ಮನಾದರೂ, ಹಯಗ್ರೀವಮತ್ಸ್ಯಕೂರ್ಮಾದಿವಿಗ್ರಹೇ ಅಪಿ= ಹಯಗ್ರೀವ ಮತ್ಸ್ಯ ಕೂರ್ಮ ಮೊದಲಾದ ಶರೀರಗಳಲ್ಲಿಯೂ ಸಹ, ಚಿತ್ಸುಖಸಂಪೂರ್ಣಂ= ಜ್ಞಾನಾನಂದ ಪರಿಪೂರ್ಣನು, ಸಹಸ್ರಾರ್ಕಸಮಪ್ರಭಂ= ಸಹಸ್ರ ಸೂರ್ಯ ಪ್ರಕಾಶವುಳ್ಳವನು, ಅನಂತವೇದವೇದಾಂಗಪುರಾಣಸ್ಮೃತಿಪಾರಗಂ= ಅನಂತವಾದ ವೇದ

ವೇದಾಂಗ, ಪುರಾಣ ಮತ್ತು ಸ್ಮೃತಿಗಳಲ್ಲಿ ಪಾರಂಗತನು, ಚತುರ್ಮುಖಾದ್ಯೈಃ= ಬ್ರಹ್ಮ ಮೊದಲಾದವರಿಂದ, ಆರಾಧ್ಯಂ= ಆರಾಧ್ಯನು, ತೇಷಾಂ= ಬ್ರಹ್ಮದೇವರು ಮೊದಲಾದವರಿಗೆ, ವಿದ್ಯೋಪದೇಷ್ಟಾ ಚ= ವಿದ್ಯೋಪದೇಶಕನೂ (ಆಗಿದ್ದಾನೆ).

**ಅನುವಾದ–** ನಮ್ಮ ಬ್ರಹ್ಮನಾದರೂ ಹಯಗ್ರೀವ, ಮತ್ಸ್ಯಕೂರ್ಮ ವರಾಹ ಮೊದಲಾದ ಶರೀರಗಳಲ್ಲಿಯೂ ಜ್ಞಾನಾನಂದ ಪರಿಪೂರ್ಣನೂ ಸಹಸ್ರ ಸೂರ್ಯರ ಕಾಂತಿಯುಳ್ಳವನೂ, ಅನಂತ ವೇದ ವೇದಾಂಗ ಪುರಾಣ ಸ್ಮೃತಿಗಳಲ್ಲಿ ಪಾರಂಗತನಾದವನೂ, ಚತುರ್ಮುಖಾದಿಗಳಿಂದ ಆರಾಧ್ಯನಾದವನೂ ಮತ್ತು ಚತುರ್ಮುಖಾದಿಗಳಿಗೆ ವಿದ್ಯೋಪದೇಶಕನೂ ಆಗಿದ್ದಾನೆ.

**ಭಾವವಿಲಾಸಿನೀ–** ವಿಗ್ರಹೇಽಪೀತಿ ಸಂಬಂಧಃ । ಚಿತ್ಸುಖಸಂಪೂರ್ಣಂ ನಿರವಧಿಕಜ್ಞಾನ-ಸುಖಸಂಪೂರ್ಣಮ್ । ಚಿತ್ಸುಖಸಂಪೂರ್ಣಮಿತ್ಯಾದಿವಿಶೇಷಣಂ ಮತ್ಸ್ಯಕೂರ್ಮಾದಿಹೀನ-ಯೋನಿಷ್ವವತರಣಮಪಿ ನ ಪಾಪಾತ್ । ತತ್ರಾಪಿ ಜ್ಞಾನಾನಂದಬಲಾದಿಶುಭಗುಣಭರಿತಸ್ಯ ವೇದವೇದಾಂಗಪಾರಗಸ್ಯ ಬ್ರಹ್ಮಾದೀನಾಂ ಚ ಗುರೋಃ ಪಾಪಾಸಂಭವಾತ್ । ಅತೀಂದ್ರಿಯಂ ಹಿ ಪಾಪಂ ದುಃಖಾಜ್ಞಾನಾದಿ ಫಲಬಲೋನ್ನೇಯಮ್ । ತದಭಾವೇ ತಸ್ಯಾಪ್ಯ-ಭಾವನಿಯಮಾತ್ । ಕಿಂತ್ವಾನಂದೋದ್ರೇಕಾದ್ವಾ ದೇವಾದಿಷು ಕೃಪಯಾ ವಾ ದೈತ್ಯಹನನಾಖ್ಯ-ಲೀಲಾರ್ಥಂ ವೇತಿ ಸೂಚನಾಯ ಅನೀದೃಶೀಷು ತವ ಬ್ರಹ್ಮಣಃ ದುಃಖಾಜ್ಞಾನನರಕಯಾತನಾದಿ-ಪಾಪಫಲಭೋಕ್ತೃಜೀವಾತ್ಮಕ ಪ್ರಾಗುಕ್ತ ಹೀನಯೋನಿಷು ಪ್ರಾಪ್ತಿಃ ಪಾಪಾದೇವೇತಿ ಸೂಚನಾಯ ಚ ॥ ೮೧೫-೮೧೬ ॥

**ವಿವರಣೆ–** ಮತ್ಸ್ಯಾದಿ ಯೋನಿಗಳಲ್ಲಿ ಚಿತ್ಸುಖಪರಿಪೂರ್ಣನು ಎಂದು ಹೇಳಿ ಅಂತಹ ಶರೀರವು ಪಾಪದಿಂದ ಬಂದುದಲ್ಲ ಎಂದು ಸೂಚಿಸುತ್ತಾರೆ. ಚತುರ್ಮುಖನಿಗೂ ಗುರುವಾದ ಅವನಿಗೆ ಪಾಪದ ಪ್ರಸಕ್ತಿಯೂ ಇಲ್ಲ ಎಂದು ತಿಳಿಸಲು ಬ್ರಹ್ಮನಿಗೆ ಉಪದೇಶಕನೆಂದು ತಿಳಿಸಿದ್ದಾರೆ. ಪಾಪವು ಅತೀಂದ್ರಿಯವಾದುದು. ದುಃಖ ಅಜ್ಞಾನಾದಿ ಕಾರ್ಯಗಳಿಂದ ಅದನ್ನು ಊಹಿಸಬೇಕು. ದುಃಖಾಜ್ಞಾನಾದಿಗಳು ಇಲ್ಲದಿದ್ದರೆ ಪಾಪವೂ ಇಲ್ಲವೆಂದು ನಿಶ್ಚಯವಾಗುತ್ತದೆ. ಮತ್ಸ್ಯಾದಿ ಅವತಾರಗಳಲ್ಲಿ ಜ್ಞಾನಾನಂದಪೂರ್ಣವೆಂದು ಹೇಳಿರುವುದರಿಂದ ದುಃಖಾಜ್ಞಾನದ ರಾಹಿತ್ಯವೂ ಅದರಿಂದ ಪಾಪರಾಹಿತ್ಯವೂ ಸಿದ್ಧವಾಗುತ್ತದೆ. ಆದ್ದರಿಂದ ಆನಂದೋದ್ರೇಕದಿಂದ ಅಥವಾ ದೇವತೆಗಳ ಮೇಲಿನ ಕೃಪೆಯಿಂದ ಅಥವಾ ದೈತ್ಯಹನನ ಮೊದಲಾದ ಲೀಲೆಯಿಂದ ನಾರಾಯಣನು ಮತ್ಸ್ಯಾದಿ ಶರೀರವನ್ನು ತೆಗೆದುಕೊಂಡಿದ್ದಾನೆ ಎಂದು ಸಿದ್ಧವಾಗುತ್ತದೆ. ನಿನ್ನ ಬ್ರಹ್ಮನಾದರೂ ದುಃಖಾಜ್ಞಾನ ನರಕಯಾತನಾ ರೂಪವಾದ ಪಾಪ ಫಲವನ್ನು ಅನುಭವಿಸುವ ಜೀವನಿಂದ ಅಭಿನ್ನನಾದುದರಿಂದ ಅವನಿಗೆ ಹೀನಯೋನಿಪ್ರಾಪ್ತಿಯು ಪಾಪದಿಂದಲೇ ಉಂಟಾಗುತ್ತದೆ. ನೀನು ಅಂತಹ ಬ್ರಹ್ಮನೇ ಸರಿ ಎಂದು ಅಭಿಪ್ರಾಯ.

ಯನ್ಮಂತ್ರೋಽಪಿ ಚ ಮರ್ತ್ಯಾನಾಂ ವಿದ್ಯಾಸಿದ್ಧ್ಯೈ ನಿಯುಜ್ಯತೇ ।
ಯದ್ಭಕ್ತ್ಯಾ ಮುಚ್ಯತೇ ಜಂತುರ್ಯಸ್ಯ ಮಾತಾ ಪಿತಾ ಚ ನ ॥ ೮೧೭ ॥

ಯತ್ ಕೃಪಾವೀಕ್ಷಣಾತ್ ಸದ್ಯೋ ಮುಕ್ತೋ ನಿಷ್ಪಾಪತಾಮಿಯಾತ್ ।
ಅವದ್ಯಗಂಧವಿಧುರಂ ಪರಕ್ಲೇಶವಿಮೋಚನಂ ॥ ೮೧೮ ॥

ಅನಂತರೂಪೇಷ್ವಪ್ಯೇವಂ ಯಸ್ಯ ಶಕ್ತಿರನಂತಧಾ ।
ತತೋಽಧಿಕಂ ಪರಂಬ್ರಹ್ಮ ಕಿಂ ಸ್ಯಾದ್ ವದ ವಿವೇಕಿನಾಂ ॥ ೮೧೯ ॥

**ಅರ್ಥ–** ಯನ್ಮಂತ್ರೋಽಪಿ= ಯಾವನ ಹಯಗ್ರೀವಾದಿ ಮಂತ್ರಗಳೂ ಸಹ, ಮರ್ತ್ಯಾನಾಂ= ಮನುಷ್ಯರಿಗೆ, ವಿದ್ಯಾಸಿದ್ಧ್ಯೈ= ವಿದ್ಯಾ ಪ್ರಾಪ್ತಿಗಾಗಿ, ನಿಯುಜ್ಯತೇ= ವಿಧಿಸಲ್ಪಡುತ್ತದೆಯೋ, ಯದ್ಭಕ್ತ್ಯಾ= ಯಾವನಲ್ಲಿ ಭಕ್ತಿಯಿಂದ, ಜಂತುಃ= ಜನನವುಳ್ಳ ಜೀವನು, ಮುಚ್ಯತೇ= ಮೋಕ್ಷವನ್ನು ಪಡೆಯುತ್ತಾನೆಯೋ, ಯಸ್ಯ= ಯಾರಿಗೆ, ಮಾತಾ ಪಿತಾ ಚ ನ= ತಂದೆತಾಯಿಗಳು ಇಲ್ಲವೋ, ಯತ್ಕೃಪಾವೀಕ್ಷಣಾತ್= ಯಾವನ ಕೃಪಾದೃಷ್ಟಿಯಿಂದ, ಮುಕ್ತಃ= ಮುಕ್ತನಾದವನು, ಸದ್ಯಃ= ತಕ್ಷಣದಲ್ಲಿಯೇ, ನಿಷ್ಪಾಪತಾಮ್= ಪಾಪರಹಿತ್ವವನ್ನು ಇಯಾತ್= ಹೊಂದುತ್ತಾನೆಯೋ, ಯಸ್ಯ= ಯಾವನ, ಶಕ್ತಿಃ= ಸಾಮರ್ಥ್ಯವು, ಅನಂತಧಾ= ಅನಂತ ಪ್ರಕಾರವಾಗಿದೆಯೋ, ಅನಂತರೂಪೇಷ್ವಪಿ= ಮತ್ತು ಅನಂತ ರೂಪಗಳಲ್ಲಿಯೂ, ಏವಂ= ಈ ರೀತಿಯಾಗಿ, ಅವದ್ಯಗಂಧವಿಧುರಂ= ದೋಷ ಲೇಶದಿಂದಲೂ ರಹಿತವಾಗಿದೆಯೋ, ಪರಕ್ಲೇಶವಿಮೋಚನಂ= ಇನ್ನೊಬ್ಬರ ಕ್ಲೇಶವನ್ನು ವಿಮೋಚನ ಮಾಡುವುದಾಗಿದೆಯೋ, ತತೋಽಧಿಕಂ ಪರಂಬ್ರಹ್ಮ= ಅದಕ್ಕಿಂತ ಶ್ರೇಷ್ಠವಾದ ಪರಬ್ರಹ್ಮ ವಸ್ತುವು, ವಿವೇಕಿನಾಂ= ವಿವೇಕಿಗಳಿಗೆ, ಕಿಂ ಸ್ಯಾತ್= ಯಾವುದು ಇದೆ ಎಂದು, ವದ= ಹೇಳು.

**ಅನುವಾದ–** ಯಾರ ಹಯಗ್ರೀವಾದಿ ಮಂತ್ರಗಳೂ ಸಹ ಮನುಷ್ಯರಿಗೆ ವಿದ್ಯಾಸಿದ್ಧಿಗಾಗಿ ವಿಧಿಸಲ್ಪಡುತ್ತದೆಯೋ, ಯಾವನಲ್ಲಿ ಭಕ್ತಿಯಿಂದ ಜೀವನು ಮುಕ್ತನಾಗುತ್ತಾನೆಯೋ, ಯಾವನಿಗೆ ಮಾತಾ ಪಿತೃಗಳೂ ಇಲ್ಲವೋ, ಯಾವನ ಕೃಪಾದೃಷ್ಟಿಯಿಂದ ಮುಕ್ತನಾದವನು ತಕ್ಷಣದಲ್ಲಿಯೇ ಸರ್ವಪಾಪರಹಿತನಾಗುತ್ತಾನೆಯೋ, ಯಾವನ ಶಕ್ತಿಯು ಅನಂತ ಪ್ರಕಾರವಾಗಿದೆಯೋ ಅಂತಹ ಅನಂತ ರೂಪಗಳಲ್ಲಿಯೂ ದೋಷಲೇಶವಿಧುರನೂ, ಇನ್ನೊಬ್ಬರ ಕ್ಲೇಶವನ್ನು ಪರಿಹರಿಸುವವನೂ ಆದ ನಮ್ಮ ಹಯಗ್ರೀವ ಬ್ರಹ್ಮನಿಗಿಂತಲೂ ಅಧಿಕವಾದ ಪರಬ್ರಹ್ಮವಸ್ತುವು ವಿವೇಕಿಗಳ ದೃಷ್ಟಿಯಲ್ಲಿ ಯಾವುದು ಇದೆ ಎಂದು ಹೇಳು.

**ಭಾವವಿಲಾಸಿನೀ–** ಯನ್ಮಂತ್ರಃ ಯೇಷಾಂ ಹಯಗ್ರೀವಾದೀನಾಂ ಮಂತ್ರಃ । ಯಸ್ಯ ಹಯಗ್ರೀವ ಮತ್ಸ್ಯಕೂರ್ಮ ನರಸಿಂಹಾದಿರೂಪಿಣಃ । ಇದಮಪಿ ಹರೇಃ ಪಾಪನಿಮಿತ್ತಯೋನಿತ್ವಾಭಾವ-

ಸೂಚನಾರ್ಥವ್ । ಪಾಪಜಪಶ್ವಾದಿಯೋನಿಷು ಮಾತೃಪಿತೃಸಾಹಿತ್ಯನಿಯಮಸ್ಯೈವ ದರ್ಶನಾತ್ ॥ ೮೧೭ ॥ ತತಃ ಹಯಗ್ರೀವಾದಿರೂಪಾನ್ನಾರಾಯಣಾತ್ ॥ ೮೧೯ ॥

ಬ್ರಹ್ಮಾದಯೋಽಪಿ ಯದ್ದಾಸಾ ಯದ್ದಾಸ್ಯಂ ಚ ತಪಃಫಲಂ ।
ತದ್ಭಕ್ತಿರೂಪಭಾವಃ ಸ್ಯಾತ್ ತದ್ಭಾವಸ್ತು ನ ಕಸ್ಯಚಿತ್ ॥ ೮೨೦ ॥

**ಅರ್ಥ–** ಬ್ರಹ್ಮಾದಯೋಽಪಿ= ಬ್ರಹ್ಮಾದಿ ದೇವತೆಗಳೂ ಸಹ, ಯದ್ದಾಸಾಃ= ಯಾವ ಹಯಗ್ರೀವನ ದಾಸರೋ, ಯದ್ದಾಸ್ಯಂ ಚ= ಯಾವನ ದಾಸ್ಯವೂ ಸಹ, ತಪಃ ಫಲಂ= ತಪಸ್ಸಿನ ಫಲವೋ, ತದ್ಭಕ್ತಿರೂಪಭಾವಃ= ಅಂತಹ ಅವನಲ್ಲಿ ಭಕ್ತಿರೂಪವಾದ ಭಾವವು, ಸ್ಯಾತ್= ಉಂಟಾಗುತ್ತದೆ, ತದ್ಭಾವಸ್ತು= ಬ್ರಹ್ಮತ್ವವಾದರೂ, ಕಸ್ಯಚಿತ್ ನ= ಯಾರಿಗೂ ಉಂಟಾಗುವುದಿಲ್ಲ.

**ಅನುವಾದ–** ಬ್ರಹ್ಮಾದಿ ದೇವತೆಗಳು ಯಾವನ ದಾಸರೋ ಮತ್ತು ಯಾವನ ದಾಸ್ಯವು ತಪಸ್ಸಿನ ಫಲವೋ ಅಂತಹವನ ಭಕ್ತಿರೂಪವಾದ ಭಾವವೇ ಉಂಟಾಗುತ್ತದೆ. ಅವನ ಅಭೇದವು ಯಾರಿಗೂ ಉಂಟಾಗುವುದಿಲ್ಲ.

**ಭಾವವಿಲಾಸಿನೀ–** ಸ್ವಧರ್ಮನಿಷ್ಠಃ ಶತಜನ್ಮಭಿಃ ಪುಮಾನ್ವಿರಿಂಚತಾಮೇತೀತಿಸ್ಮೃತೇಃ ಏದೇಹಿ ರುದ್ರೋ ರುದ್ರಿಯಂ ಮಹಿತ್ವಮಿತಿ ಶ್ರುತೇಶ್ಚ ಯದ್ದಾಸ್ಯಂ ಚ ತಪಃ ಫಲಮಿತ್ಯರ್ಥಃ । ನನ್ವೈಕ್ಯಾಭಾವೇ ಬ್ರಹ್ಮಭಾವಾಯ ಕಲ್ಪತ ಇತ್ಯಾದಿವಾಕ್ಯಾನಾಂ ಕಾ ಗತಿರಿತ್ಯತ ಆಹ – **ತದ್ಭಕ್ತೀತಿ** ॥ ತಸ್ಯ ಹರೇರ್ಭಕ್ತಿರೂಪಭಾವಃ । ತದ್ಭಾವಸ್ತತ್ತ್ವಮ್ । ಭಾವೋ ಭಕ್ತಿರಿತಿ ಸ್ಮೃತ ಇತಿ ವಚನಾತ್ ಭಾವನ್ನೆವ ಭಕ್ತಿರಿತಿ ವ್ಯುತ್ಪತ್ತ್ಯಾ ಚ ಭಾವಪದಸ್ಯ ಭಕ್ತ್ಯರ್ಥಕತ್ವಾತ್ ಬ್ರಹ್ಮಣೋ ಭಾವಾಯ ಭಕ್ತ್ಯೈ ಕಲ್ಪತ ಇತ್ಯೇವ ವಾಕ್ಯಾರ್ಥಃ । ಬ್ರಹ್ಮತ್ವಂ ಪ್ರಾಪ್ನೋತೀತ್ಯರ್ಥಸ್ತೂಕ್ತ ಭಗವನ್ಮಹಿಮಾವಿರುದ್ಧತ್ವಾತ್ ಅಯುಕ್ತ ಏವ ॥ ೮೨೦ ॥

**ವಿವರಣೆ–** 'ಸ್ವಧರ್ಮನಿಷ್ಠಃ ಶತಜನ್ಮಭಿಃ ಪುಮಾನ್ ವಿರಿಂಚಿತಾಂ ಏತಿ' ಎಂಬ ಭಾಗವತ ವಾಕ್ಯದಿಂದ ಬ್ರಹ್ಮದೇವರು ನೂರು ಜನ್ಮಗಳ ತಪಸ್ಸಿನ ಫಲವಾಗಿ ಪರಮಾತ್ಮನ ದಾಸ್ಯವನ್ನು ಪಡೆಯುತ್ತಾರೆ ಎಂದು ಸಿದ್ಧವಾಗುತ್ತದೆ. 'ವಿದೇ ಹಿ ರುದ್ರೋ ರುದ್ರಿಯಂ ಮಹಿತ್ವಂ' ಎಂಬ ಶ್ರುತಿಯು ರುದ್ರನ ರುದ್ರಪದವಿಯು ಭಗವಂತನ ಅನುಗ್ರಹದಿಂದ ಪ್ರಾಪ್ತವಾಗಿದೆ ಎಂದು ಹೇಳಿ ರುದ್ರನಿಗೂ ಸಹ ಭಗವದ್ದಾಸ್ಯವು ತಪಸ್ಸಿನ ಫಲವೆಂದು ಹೇಳುತ್ತದೆ. ಶ್ರುತಿ ಸ್ಮೃತಿಗಳಲ್ಲಿ ಅಲ್ಲಲ್ಲಿ ಬ್ರಹ್ಮಭಾವಾಯ ಕಲ್ಪತೇ ಎಂಬ ವಾಕ್ಯವು ಬರುತ್ತದೆ. ಇಲ್ಲಿ ಬ್ರಹ್ಮಭಾವ ಎಂದರೆ ಬ್ರಹ್ಮತ್ವ ಅಥವಾ ಬ್ರಹ್ಮನ ಅಭೇದ ಎಂದು ಅರ್ಥವಲ್ಲ. ಭಾವೋ ಭಕ್ತಿರಿತಿಸ್ಮೃತಃ ಎಂಬ ವಚನಕ್ಕೆ ಅನುಗುಣವಾಗಿ ಭಾವ ಎಂದರೆ ಭಕ್ತಿ, ಬ್ರಹ್ಮಭಾವ ಎಂದರೆ ಬ್ರಹ್ಮನಲ್ಲಿ ಭಕ್ತಿ. ಬ್ರಹ್ಮನಲ್ಲಿ ಭಕ್ತಿಯನ್ನು ಹೊಂದುತ್ತಾನೆ ಎಂದು ಆ ವಾಕ್ಯಕ್ಕೆ ಅರ್ಥವೇ ಹೊರತು ಬ್ರಹ್ಮನಿಂದ ಅಭಿನ್ನನಾಗುತ್ತಾನೆ ಎಂದು ಆ ವಾಕ್ಯಕ್ಕೆ ಅರ್ಥವಲ್ಲ.

ನ ಯತ್ರ ಮಾಯೇತಿ ಗಿರಾ ಮಾಯಾಯಾ ಭಗವತ್ಪದೇ ।
ಸಾಮಾನ್ಯತೋ ನಿಷೇಧೇನ ಮಾಯಾಲೇಶೋಽಪಿ ನೇಷ್ಯತೇ ॥ ೮೨೧ ॥

**ಅರ್ಥ–** ಭಗವತ್ಪದೇ= ಭಗವಂತನ ಸ್ಥಾನವಾದ ವೈಕುಂಠದಲ್ಲಿ, ನ ಯತ್ರ ಮಾಯೇತಿ ಗಿರಾ= ನ ಯತ್ರ ಮಾಯಾ ಎಂಬ ವಾಕ್ಯದಿಂದ, ಮಾಯಾಯಾಃ ಸಾಮಾನ್ಯತೋ ನಿಷೇಧೇನ= ಮಾಯಾ ಸಾಮಾನ್ಯಾಭಾವವನ್ನು ಹೇಳಿರುವುದರಿಂದ, ಮಾಯಾಲೇಶೋಽಪಿ= ಮಾಯೆಯ ಲೇಶವೂ ಸಹ, ನೇಷ್ಯತೇ= ಅಲ್ಲಿ ಅಂಗೀಕರಿಸಲ್ಪಡುವುದಿಲ್ಲ.

**ಅನುವಾದ–** ಭಗವಂತನ ಸ್ಥಾನವಾದ ವೈಕುಂಠದಲ್ಲಿ 'ನ ಯತ್ರ ಮಾಯಾ' ಎಂಬ ವಾಕ್ಯವು ಮಾಯಾ ಸಾಮಾನ್ಯಾಭಾವವನ್ನು ಹೇಳುವುದರಿಂದ ಅಲ್ಲಿ ಮಾಯೆಯ ಲೇಶವೂ ಇರುವುದಿಲ್ಲ.

**ಭಾವವಿಲಾಸಿನೀ–** ಅಧುನಾ ನ ಯತ್ರ ಮಾಯಾ ಕಿಮುತಾಪರೇ ಹರೇರನುವ್ರತಾ ಯತ್ರ ಸುರಾಸುರಾರ್ಚಿತಃ । ಶ್ಯಾಮಾವದಾತಾಃ ಶತಪತ್ರಲೋಚನಾಃ ಪಿಶಂಗವಾಸಾಃ ಸುರುಚಸ್ಸುಪೇಶಸ ಇತಿ ಭಾಗವತಸ್ಥವೈಕುಂಠವರ್ಣನವಾಕ್ಯೇನ ಯತ್ರ ಮಾಯಾ ನೇತಿ ಸಾಮಾನ್ಯತೋ ಮಾಯಾಂ ನಿಷಿಧ್ಯ ಮಾಯಾಭಾವೇ ತತ್ರಾಪರೇ ಮಾಯಾನಿಮಿತ್ತಸತ್ತ್ವರಜಸ್ತಮೋಗುಣಾದಯಃ ನೇತಿ ಕಿಮುತ ಕಿಂ ವಕ್ತವ್ಯಮಿತಿ ಸತ್ತಾದ್ಯಭಾವೇ ಕೈಮುತ್ಯಾಖ್ಯಯುಕ್ತಿಂ ಚೋಕ್ತ್ವಾ ಹರೇರನುವ್ರತಾ ಯತ್ರೇತ್ಯಾದಿ ವಾಕ್ಯಶೇಷೇಣ ಹರಿಭಕ್ತಾನಾಂ ಮುಕ್ತಾನಾಂ ಸವಿಸ್ತರಂ ವರ್ಣಿತತ್ವಾತ್ ಮಾಯಾನಿವೃತ್ತಿಕಾಲೀನೋ ಮೌಕ್ತಭೇದೋಽಯಂ ಪಾರಮಾರ್ಥಿಕ ಏವ ನ ವ್ಯಾವಹಾರಿಕ ಇತ್ಯಾಹ – ನ ಯತ್ರೇತಿ ॥ ಭಗವತ್ಪದೇ ವೈಕುಂಠೇ ॥ ೮೨೧ ॥

**ವಿವರಣೆ–**

ನ ವರ್ತತೇ ಯತ್ರ ರಜಸ್ತಮಸ್ತಯೋಃ ಸತ್ವಂ ಚ ಮಿಶ್ರಂ ನಚ ಕಾಲವಿಕ್ರಮಃ ।
ನ ಯತ್ರ ಮಾಯಾ ಕಿಮುತಾಪರೇನುವ್ರತಾ ಯತ್ರ ಸುರಾಸುರಾರ್ಚಿತಾಃ ॥
ಶ್ಯಾಮಾವದಾಶಾಃ ಶತಪತ್ರಲೋಚನಾಃ ಪಿಶಂಗವಸ್ತ್ರಾಃ ಸುರುಚಃ ಸುಪೇಶಸಃ ।
ಸರ್ವೇ ಚತುರ್ಬಾಹವ ಉನ್ಮಿಷನ್ಮಣಿಪ್ರವೇಕನಿಷ್ಕಾಭರಣಾದ್ಯುದಾಯುಧಾಃ॥

ಸುವರ್ಚಸಃ ಎಂಬ ಎರಡು ಭಾಗವತ ಶ್ಲೋಕಗಳಿಂದ (2-9-10.11) ಮುಕ್ತಿಯಲ್ಲಿ ಭೇದವನ್ನು ಮತ್ತು ಭೇದಕ್ಕೆ ಪಾರಮಾರ್ಥಿಕತ್ವವನ್ನು ಸಾಧಿಸುತ್ತಾರೆ. ನ ಯತ್ರ ಮಾಯಾ ಎಂಬ ಶಬ್ದವು ಮಾಯಾಸಾಮಾನ್ಯಾಭಾವವನ್ನೇ ಹೇಳುತ್ತದೆ. ಆದ್ದರಿಂದ ಮುಕ್ತ ಸ್ಥಾನವಾದ ವೈಕುಂಠದಲ್ಲಿ ಮಾಯೆಯ ಲೇಶವೂ ಇಲ್ಲ ಎಂದು ಸಿದ್ಧವಾಗುತ್ತದೆ.

ಸತ್ಯೇಕಸ್ಮಿನ್ನಪಿ ಘಟೇ ಘಟೋ ನಾಸ್ತೀತಿ ಧೀರ್ನ ಹಿ ।
ಅತಃ ಸಾಮಾನ್ಯತೋಽಭಾವೇ ಪ್ರತಿಯೋಗೀ ನ ಶೇಷಭಾಕ್ ॥ ೮೨೨ ॥

**ಅರ್ಥ–** ಏಕಸ್ಮಿನ್ನಪಿ ಘಟೇ ಸತಿ= ಒಂದು ಘಟವು ಇದ್ದರೂ ಸಹ, ಘಟೋ ನಾಸ್ತೀತಿ= ಘಟವು ಇಲ್ಲ ಎಂಬ ಪ್ರತೀತಿಯು, ನ ಹಿ= ಉಂಟಾಗುವುದಿಲ್ಲವಷ್ಟೇ. ಅತಃ= ಆದ್ದರಿಂದ, ಸಾಮಾನ್ಯತೋಽಭಾವೇ= ಸಾಮಾನ್ಯಾಭಾವವನ್ನು ಹೇಳಿದರೆ, ಪ್ರತಿಯೋಗೀ= ಪ್ರತಿಯೋಗಿಯು, ಶೇಷಭಾಕ್ ನ= ಅಲ್ಪವಾಗಿಯೂ ಉಳಿದಿರುವುದಿಲ್ಲ.

**ಅನುವಾದ–** ಒಂದು ಘಟವು ಇದ್ದ ಸ್ಥಳದಲ್ಲಿಯೂ 'ಘಟೋ ನಾಸ್ತಿ' ಎಂದು ಘಟ ಸಾಮಾನ್ಯಾಭಾವವನ್ನು ಹೇಳಲು ಬರುವುದಿಲ್ಲ. ಆದ್ದರಿಂದ ಸಾಮಾನ್ಯಾಭಾವವನ್ನು ಹೇಳಿದ ಸ್ಥಳದಲ್ಲಿ ಯಾವ ಪ್ರತಿಯೋಗಿಯೂ ಉಳಿದಿರುವುದಿಲ್ಲ.

**ಭಾವವಿಲಾಸಿನೀ–** ಸಾಮಾನ್ಯನಿಷೇಧೇಽಪಿ ಕುತೋ ಮಾಯಾಲೇಶೋಽಪಿ ನೇಷ್ಯತ ಇತ್ಯತೋ ಯುಕ್ತಿಮಾಹ – **ಸತ್ಯೇಕಸ್ಮಿನ್ನಿತಿ** ॥ ಅತಃ ಪ್ರತಿಯೋಗಿತಾವಚ್ಛೇದಕಾವಚ್ಛಿನ್ನಯತ್ಕಿಂಚತ್ಸದ್ಭಾವೇ ಸಾಮಾನ್ಯನಿಷೇಧಸ್ಯ ಕ್ವಾಪ್ಯದರ್ಶನಾತ್ । ನ ಶೇಷಭಾಕ್ । ನಾವಶಿಷ್ಯತ ಇತ್ಯರ್ಥಃ ॥ ೮೨೨ ॥

**ವಿವರಣೆ–** ಸಾಮಾನ್ಯಾಭಾವವನ್ನು ಹೇಳುವಾಗ ಪ್ರತಿಯೋಗಿಯು ಸರ್ವಥಾ ಇರುವುದಿಲ್ಲವಾದ್ದರಿಂದ ಮೋಕ್ಷದಲ್ಲಿ ಮಾಯೆ ಇಲ್ಲ ಎಂದು ಉಪಪಾದನೆ ಮಾಡುತ್ತಿದ್ದಾರೆ.

**ಮಾಯಾ ನೇತಿ ನಿಷೇಧೋಯಂ ಸಾಮಾನ್ಯಾಭಾವ ಏವ ಹಿ ।**
**ಮುಖ್ಯಸ್ಯ ಬಾಧನೇ ಹಿ ಸ್ಯಾದಮುಖ್ಯೋಽರ್ಥೋ ನ ಚಾನ್ಯಥಾ ।**
**ನಿರ್ಮಾಯಭಗವಲ್ಲೋಕೇ ಮುಖ್ಯನಿರ್ಮಾಯತೋಚಿತಾ ॥ ೮೨೩ ॥**

**ಅರ್ಥ–** ಮಾಯಾ ನೇತಿ ನಿಷೇಧೋಯಂ= ಮಾಯೆಯು ಇಲ್ಲ ಎಂಬ ಈ ನಿಷೇಧವು, ಸಾಮಾನ್ಯಾಭಾವ ಏವ ಹಿ= ಸಾಮಾನ್ಯಾಭಾವವೇ ಆಗಿದೆಯಷ್ಟೇ, ಮುಖ್ಯಸ್ಯ ಬಾಧನೇ= ಮುಖ್ಯಾರ್ಥವು ಬಾಧಿತವಾದರೆ ಮಾತ್ರ, ಅಮುಖ್ಯೋ ಅರ್ಥಃ= ಅಮುಖ್ಯವಾದ ಅರ್ಥವು, ಸ್ಯಾತ್ ಹಿ= ಸ್ವೀಕರಿಸಲ್ಪಡುತ್ತದೆ, ಅನ್ಯಥಾ= ಇಲ್ಲದಿದ್ದರೆ, ನ ಚ= ಇಲ್ಲ, ನಿರ್ಮಾಯಭಗವಲ್ಲೋಕೇ= ಮಾಯಾ ರಹಿತವಾದ ಭಗವಲ್ಲೋಕದಲ್ಲಿ, ಮುಖ್ಯ ನಿರ್ಮಾಯತಾ= ಮುಖ್ಯವಾದ ನಿರ್ಮಾಯತ್ವವೇ, ಉಚಿತಾ= ಯೋಗ್ಯವಾಗಿದೆ.

**ಅನುವಾದ–** ಮಾಯೆಯು ಇಲ್ಲ ಎಂಬ ಈ ನಿಷೇಧವು ಮಾಯಾಸಾಮಾನ್ಯಾಭಾವವೇ ಆಗಿದೆಯಷ್ಟೇ. ಮುಖ್ಯಾರ್ಥಕ್ಕೆ ಬಾಧವಿದ್ದರೆ ಮಾತ್ರ ಅಮುಖ್ಯಾರ್ಥವನ್ನು ಸ್ವೀಕರಿಸಬೇಕು ಇಲ್ಲದಿದ್ದರೆ ಇಲ್ಲ. ಮಾಯಾ ರಹಿತವಾದ ಭಗವಲ್ಲೋಕದಲ್ಲಿ ಮುಖ್ಯವಾದ ನಿರ್ಮಾಯತ್ವವೇ ಯೋಗ್ಯವಾದುದು.

**ಭಾವವಿಲಾಸಿನೀ–** ಅತ್ರ ಘಟೋ ನೇತಿವತ್ ಯತ್ರ ಮಾಯಾ ನೇತಿ ನಿಷೇಧಶ್ಚ ಸಾಮಾನ್ಯ ನಿಷೇಧ ಏವೇತ್ಯಾಹ – **ಮಾಯೇತಿ** ॥ ಮುಖ್ಯಾನಿರ್ಮಾಯತಾ ಮಾಯಾಲೇಶಸ್ಯಾಪ್ಯಭಾವರೂಪ-

ನಿರ್ಮಾಯತಾ। ಅತೋ ಮುಖ್ಯಾರ್ಥ ಪರಿತ್ಯಾಗೇ ನ ಕಾರಣಾಭಾವಮಾತ್ರಂ ಕಿಂತು ಬಾಧಕಮಪ್ಯಸ್ತೀತಿ ಭಾವಃ । ಭಗವತೋ ನಿರ್ಮಾಯತ್ವಂ ಚ ನ ಯತ್ರ ಶ್ರೂಯತೇ ಮಾಯಾ ಲೋಕದೃಷ್ಟಿವಿಕಲ್ಪನೇತ್ಯಾದಿ ಪ್ರಾಗುಕ್ತವಾಕ್ಯೈರೇವ ಸಿದ್ಧಮ್ ॥ ೮೨೩ ॥

**ವಿವರಣೆ–** ಘಟ ಸಾಮಾನ್ಯಾಭಾವದಂತೆ ಮಾಯಾಸಾಮಾನ್ಯಾಭಾವವು ಮಾಯಾಲೇಶಕ್ಕೂ ವಿರೋಧಿಯಾದುದರಿಂದ ಮಾಯಾಭಾವಶಬ್ದದ ಮುಖ್ಯಾರ್ಥವಾದ ಸರ್ವ ಮಾಯಾಭಾವವನ್ನೇ ಭಗವಲ್ಲೋಕದಲ್ಲಿ ಅಂಗೀಕರಿಸಬೇಕು ಎಂದು ಅಭಿಪ್ರಾಯ. 'ನ ಯತ್ರ ಶ್ರೂಯತೇ ಮಾಯಾ ಲೋಕದೃಷ್ಟಿ ವಿಕಲ್ಪನಾ' ಎಂಬ ಭಾಗವತ ಶ್ಲೋಕದಲ್ಲಿ ವೈಕುಂಠಲೋಕವು ಮಾಯಾರಹಿತವಾದುದು ಎಂದು ಹೇಳಲ್ಪಟ್ಟಿದೆ ಎಂದು ಅಭಿಪ್ರಾಯ.

ನ ಯತ್ರ ಸತ್ತ್ವಮಿತ್ಯಾದಿನೋಕ್ತಮಾಯಾಫಲಾತ್ಯಯೇ ।
ಕೈಮುತ್ಯಾಯೋದಿತೋ ಮಾಯಾಭಾವೋಽಯಂ ಮುಖ್ಯ ಏವ ಹಿ ॥೮೨೪॥

**ಅರ್ಥ–** ನ ಯತ್ರ ಸತ್ತ್ವಂ= ಎಲ್ಲಿ ಸತ್ತ್ವಗುಣವಿಲ್ಲವೋ, ಇತ್ಯಾದಿನೋಕ್ತ= ಇತ್ಯಾದಿ ವಾಕ್ಯದಿಂದ ಹೇಳಲ್ಪಟ್ಟ, ಮಾಯಾಫಲಾತ್ಯಯೇ= ಮಾಯಾ ಕಾರ್ಯದ ಅಭಾವವನ್ನು ಹೇಳುವುದಕ್ಕಾಗಿ, ಕೈಮುತ್ಯಾಯ= ಕೈಮುತ್ಯ ನ್ಯಾಯವನ್ನು ಹೇಳಲು, ಉದಿತಃ= ಹೇಳಲ್ಪಟ್ಟ, ಅಯಂ ಮಾಯಾಭಾವಃ= ಈ ಮಾಯಾಭಾವವು, ಮುಖ್ಯ ಏವ ಹಿ= ಮುಖ್ಯವಾದುದೇ ಆಗಿದೆಯಷ್ಟೇ.

**ಅನುವಾದ–** 'ನ ಯತ್ರ ಸತ್ತ್ವಂ' ಎಂದು ಹೇಳಿದ ಸತ್ತ್ವಾದಿ ಗುಣರೂಪವಾದ ಮಾಯಾ ಕಾರ್ಯದ ಅಭಾವವನ್ನು ಸಾಧಿಸಲು ಕೈಮುತ್ಯನ್ಯಾಯವನ್ನು ಹೇಳುವುದಕ್ಕಾಗಿ ಯಾವ ಮಾಯಾಭಾವವು ಹೇಳಲ್ಪಟ್ಟಿದೆಯೋ ಅದು ಮುಖ್ಯವಾದದ್ದೇ ಆಗಿದೆ.

**ಭಾವವಿಲಾಸಿನೀ–** ಕೈಮುತ್ಯಾಖ್ಯಯುಕ್ತ್ಯಾ ಚ ಮುಖ್ಯಾರ್ಥ ಏವ ಗ್ರಾಹ್ಯ ಇತ್ಯಾಹ – ನ ಯತ್ರೇತಿ ॥ ೮೨೪ ॥

**ವಿವರಣೆ–** ಅದೇ ಶ್ಲೋಕದ ಪೂರ್ವಾರ್ಧದಲ್ಲಿ 'ನ ವರ್ತತೇ ಯತ್ರ ರಜಸ್ತಮಸ್ತಯೋಃ' ಎಂದು ಹೇಳಿ ಸತ್ತ್ವಾದಿಗುಣಾಭಾವವನ್ನು ಹೇಳಿದ್ದಾರೆ. ಅದನ್ನು ಉಪಪಾದನೆ ಮಾಡಲು ಅದೇ ಶ್ಲೋಕದ ಉತ್ತರಾರ್ಧದಲ್ಲಿ ಕೈಮುತ್ಯನ್ಯಾಯವನ್ನು ಉಪಪಾದನೆ ಮಾಡುವುದಕ್ಕಾಗಿ ಮಾಯಾಭಾವವನ್ನು ಹೇಳಿದ್ದಾರೆ. ಮಾಯೆಯೇ ಇಲ್ಲದಿರುವಾಗ ಮಾಯಾ ಕಾರ್ಯಗಳಾದ ಸತ್ತ್ವಾದಿಗುಣಗಳು ಇಲ್ಲವೆಂದು ಪುನಃ ಹೇಳಬೇಕಾಗಿಲ್ಲವೆಂದು ಕೈಮುತ್ಯನ್ಯಾಯ. ಈ ನ್ಯಾಯವನ್ನು ಉಪಪಾದನೆ ಮಾಡಬೇಕಾದರೆ ಅಲ್ಲಿ ಮಾಯೆಯು ಸರ್ವಥಾ ಇರಬಾರದು. ಆದ್ದರಿಂದ ಇಲ್ಲಿ ಹೇಳಿದ ಮಾಯಾಭಾವವು ಮುಖ್ಯವಾದುದು ಎಂದು ಅಭಿಪ್ರಾಯ.

**ನ ಚೇತ್ ತತ್ಕಾರ್ಯಕಾಮಾದೀನ್ ಕೈಮುತ್ಯೇನ ಕಥಂ ಕ್ಷಿಪೇತ್ ।**
**ಕಿಮುತಾಪರ ಇತ್ಯತ್ರ ಯತೋ ಹೇತೋರಸಿದ್ಧತಾ ॥ ೮೨೫ ॥**

**ಅರ್ಥ–** ನ ಚೇತ್= ಹಾಗಿಲ್ಲದೆ ಮಾಯಾಲೇಶವಾದರೂ ಇದ್ದರೆ, ತತ್ಕಾರ್ಯ-ಕಾಮಾದೀನ್= ಮಾಯಾಕಾರ್ಯವಾದ ಕಾಮಾದಿಗಳನ್ನು, ಕೈಮುತ್ಯೇನ= ಕೈಮುತ್ಯ-ನ್ಯಾಯದಿಂದ, ಕಿಮುತಾಪರ ಇತ್ಯತ್ರ= ಕಿಮುತಾಪರೇ ಎಂಬಲ್ಲಿ, ಕಥಂ= ಹೇಗೆ, ಕ್ಷಿಪೇತ್= ನಿರಾಕರಿಸುತ್ತದೆ, ಯತಃ= ಏಕೆಂದರೆ, ಹೇತೋಃ= ಹೇತುವಿಗೆ, ಅಸಿದ್ಧತಾ= ಅಸಿದ್ಧಿ ದೋಷವು ಬರುತ್ತದೆ.

**ಅನುವಾದ–** ಹಾಗಲ್ಲದೆ ಮಾಯಾಲೇಶವಾದರೂ ಉಳಿದಿದ್ದರೆ ಅದೇ ಶ್ಲೋಕದಲ್ಲಿ ಕಿಮುತಾಪರೇ ಎಂಬ ಶಬ್ದದಿಂದ ಮಾಯಾಕಾರ್ಯವಾದ ಕಾಮಾದಿಗಳನ್ನು ಕೈಮುತ್ಯನ್ಯಾಯದಿಂದ ಹೇಗೆ ನಿರಾಕರಣೆ ಮಾಡುತ್ತದೆ? ಏಕೆಂದರೆ ಆಗ ನಿರ್ಮಾಯತ್ವರೂಪವಾದ ಹೇತುವಿಗೆ ಅಸಿದ್ಧಿರೂಪವಾದ ದೋಷವು ಬರುತ್ತದೆ.

**ಭಾವವಿಲಾಸಿನೀ–** ನ ಚೇನ್ನಿರ್ಮಾಯತ್ವಂ ಮುಖ್ಯಂ ನಚೇತ್ । ಈಷನ್ಮಾಯಾಲೇಶಸ್ಯಾವಶೇಷೇ ತತ್ಕಾರ್ಯಸತ್ತ್ವಾದೇರಪೀಷದವಶೇಷಾವಶ್ಯಂಭಾವಾನ್ನೇತಿ ಕಿಂ ವಕ್ತವ್ಯಮಿತಿ ಕಥಂ ಕೈಮುತ್ಯೇನ ಫಲನಿಷೇಧಂ ಕುರ್ಯಾತ್ । ಸ ಹಿ ಅಸ್ಮಿನ್ವಿಪ್ರಗ್ರಾಮೇ ಶೂದ್ರಾ ನೈವ ಸಂತೀತ್ಯುಕ್ತೇ ಚಂಡಾಲಾ ನ ಸಂತೀತಿ ಕಿಂ ವಕ್ತವ್ಯಮಿತ್ಯಾದಾವಿವ ಸರ್ವಥಾ ನಿಷೇಧ್ಯಾಭಾವ ಏವ ಯುಕ್ತ ಇತಿ ಭಾವಃ । ಯುಕ್ತ್ಯಂತರಂ ಚಾಹ – **ಕಿಮುತೇತಿ** ॥ ಇತ್ಯತ್ರ ಸಾಧ್ಯೇ । ಹೇತೋಃ ನಿರ್ಮಾಯತ್ವರೂಪ-ಹೇತೋಃ । ದ್ರವ್ಯತ್ವಾಭಾವಸಾಧಕತಯಾ ಪ್ರಯುಕ್ತನಿರ್ಗುಣತ್ವಹೇತೌ ಗುಣಲೇಶಸ್ಯಾಪ್ಯ-ವಶೇಷೇಽಸಿದ್ಧಿವನ್ಮಾಯಾಲೇಶಸ್ಯಾಪ್ಯವಶೇಷೇ ನಿರ್ಮಾಯತ್ವಹೇತೋರಸಿದ್ಧಿಃ ಸ್ಯಾದಿತಿ ಭಾವಃ ॥ ೮೨೫ ॥

**ವಿವರಣೆ–** ಭಗವಲ್ಲೋಕಃ ಕಾಮಾದಿರಹಿತಃ ನಿರ್ಮಾಯತ್ವಾತ್ ಎಂಬ ಅನುಮಾನವು ಇಲ್ಲಿ ಅಭಿಪ್ರೇತವಾಗಿದೆ. ಮಾಯಾರೂಪಕಾರಣವು ಇಲ್ಲದಿರುವುದರಿಂದ ಕಾಮಾದಿರೂಪ ಕಾರ್ಯಗಳೂ ಇಲ್ಲ ಎಂದು ಅಭಿಪ್ರಾಯ. ಮಾಯೆಯು ಅಲ್ಪವಾದರೂ ಉಳಿದಿದ್ದರೆ ನಿರ್ಮಾಯತ್ವ ಎಂಬ ಹೇತುವೇ ಅಸಿದ್ಧವಾಗುತ್ತದೆ. ಆದ್ದರಿಂದ ಸಂಪೂರ್ಣವಾಗಿ ಮಾಯಾಭಾವವು ವೈಕುಂಠಲೋಕದಲ್ಲಿದೆ ಎಂದು ಅಭಿಪ್ರಾಯವಾಗುತ್ತದೆ. ಅದೇ ಮಾಯಾಭಾವಶಬ್ದದ ಮುಖ್ಯಾರ್ಥ ಎಂದು ಅಭಿಪ್ರಾಯ.

**ಹರೇರನುವ್ರತಾ ಏವ ತತ್ರಾಪಿ ಕಿಲ ಚೇತನಾಃ ।**
**ಸರ್ವೇ ಚತುರ್ಭುಜಾ ಭಿನ್ನಾ ಹರಿಣಾ ಚ ಪರಸ್ಪರಂ ॥ ೮೨೬ ॥**

**ಅರ್ಥ–** ತತ್ರಾಪಿ= ಮಾಯಾರಹಿತವಾದ ಭಗವಲ್ಲೋಕದಲ್ಲಿಯೂ ಸಹ, ಚೇತನಾಃ= ಜೀವರು, ಹರೇರನುವ್ರತಾ ಏವ ಕಿಲ= ಹರಿಗೆ ದಾಸರಾಗಿಯೇ ಇರುತ್ತಾರಷ್ಟೇ, ಸರ್ವೇ=

ಎಲ್ಲರೂ, ಹರಿಣಾ= ಹರಿಯಿಂದಲೂ, ಪರಸ್ಪರಂ ಚ= ಮತ್ತು ಪರಸ್ಪರವಾಗಿಯೂ, ಭಿನ್ನಾಃ= ಭಿನ್ನರಾಗಿದ್ದು, ಚತುರ್ಭುಜಾಃ= ಚತುರ್ಭುಜವುಳ್ಳವರಾಗಿರುತ್ತಾರೆ.

**ಅನುವಾದ–** ಮಾಯಾರಹಿತವಾದ ಭಗವಲ್ಲೋಕದಲ್ಲಿಯೂ ಚೇತನರು ಹರಿಗೆ ಅನುವ್ರತರಾಗಿ ಎಂದರೆ ದಾಸರಾಗಿ ಇರುತ್ತಾರಷ್ಟೇ? ಎಲ್ಲರೂ ಚತುರ್ಭುಜ-ರಾಗಿದ್ದು ಹರಿಯಿಂದಲೂ ಮತ್ತು ಪರಸ್ಪರವಾಗಿಯೂ ಭಿನ್ನರಾಗಿರುತ್ತಾರೆ.

**ಭಾವವಿಲಾಸಿನೀ–** ತತ್ರಾಪಿ ನಿರ್ಮಾಯ ಭಗವಲ್ಲೋಕೇಽಪಿ ॥ ೮೨೬ ॥

**ವಿವರಣೆ–** ಅನುವ್ರತಾಃ ಎಂಬ ಶಬ್ದದಿಂದ ದಾಸ್ಯವೂ ಸರ್ವೇ ಎಂಬ ಬಹುವಚನ ಸರ್ವ ಶಬ್ದದಿಂದ ಜೀವರಿಗೆ ಪರಸ್ಪರ ಭೇದವೂ, ವಿಮಾನಾವಲಿಭಿಃ ಎಂಬ ಪದವಿರುವ ಅಲ್ಲಿ ಇನ್ನೊಂದು ಶ್ಲೋಕದಿಂದ ಜಡಗಳಿಗೆ ಪರಸ್ಪರ ಭೇದವೂ, ವಿಮಾನದಲ್ಲಿರುವ ಜೀವರಿಗೂ ಮತ್ತು ವಿಮಾನಗಳಿಗೂ ಇರುವ ಜೀವ-ಜಡಭೇದವೂ ಜಡವಾದ ವೈಕುಂಠ ಲೋಕಕ್ಕೂ ಮತ್ತು ಅದರ ಅಧಿಪತಿಯಾದ ಹರಿಗೂ ಭೇದವೂ ಸೇರಿ ಪಂಚಭೇದಗಳು ಇಲ್ಲಿ ಸಿದ್ಧವಾಗುತ್ತವೆ.

**ಅತೋ ಭಗವತೋ ಲೋಕೇ ಭೇದಾಕಾರಾದಿಸಂಪದಿ ।**
**ಜೀವಾನಾಂ ಚ ಮಿಥೋ ಭೇದೇ ಜೀವಬಾಹುಲ್ಯಮೇವ ಚ ।**
**ಸಿದ್ಧಂ ಮಾಯಾತಿದೂರತ್ವಂ ಸತ್ತ್ವಂ ಚ ಪರಮಾರ್ಥತಃ ॥ ೮೨೭ ॥**

**ಅರ್ಥ–** ಅತಃ= ಆದ್ದರಿಂದ, ಭೇದಾಕಾರಾದಿಸಂಪದಿ= ಜೀವೇಶ ಭೇದ, ಹಸ್ತಪಾದಾದಿ ಆಕಾರ ಮತ್ತು ಆಭರಣಾದಿ ಸಂಪತ್ತುಳ್ಳ, ಭಗವತೋ ಲೋಕೇ= ಭಗವಂತನ ಲೋಕದಲ್ಲಿ, ಜೀವಾನಾಂ ಚ= ಜೀವರಿಗೂ ಸಹ, ಮಿಥೋ ಭೇದೇ= ಪರಸ್ಪರವಾಗಿ ಭೇದವಿರುವುದರಿಂದ, ಜೀವಬಾಹುಲ್ಯಂ ಏವ ಚ= ಜೀವಬಾಹುಲ್ಯವೇ, ಸಿದ್ಧಂ= ಸಿದ್ಧವಾಗುತ್ತದೆ, ಮಾಯಾತಿದೂರತ್ವಂ= ಮಾಯಾರಾಹಿತ್ಯವಿರುವ ಕಾರಣದಿಂದ, ಪರಮಾರ್ಥತಃ ಸತ್ತ್ವಂ ಚ= ಪಾರಮಾರ್ಥಿಕ ಸತ್ವವೂ ಸಿದ್ಧವಾಗುತ್ತವೆ.

**ಅನುವಾದ–** ಆದ್ದರಿಂದ ಜೀವೇಶ ಭೇದ, ಹಸ್ತಪಾದಾದಿ ಆಕಾರ ಮತ್ತು ಆಭರಣಾದಿ ಸಂಪತ್ತಿರುವ ಭಗವಂತನ ಲೋಕದಲ್ಲಿ ಜೀವರಿಗೆ ಪರಸ್ಪರ ಭೇದವಿರುವುದರಿಂದ ಜೀವಬಹುತ್ವವೇ ಸಿದ್ಧವಾಗುತ್ತದೆ. ಆ ಭಗವಲ್ಲೋಕವು ಮಾಯಾರಹಿತ-ವಾದುದರಿಂದ ಆ ಜೀವಭೇದವು ಪಾರಮಾರ್ಥಿಕ ಸತ್ಯವೆಂದೂ ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ಅತಃ ನಿರ್ಮಾಯಲೋಕವರ್ತಿತ್ವಾತ್ । ಭೇದಾಕಾರಾದಿಸಂಪದಿ । ಭೇದೋ ಜೀವಭಗವದ್ಭೇದಃ ಆಕಾರೋ ಹಸ್ತಪಾದಾದಿಃ । ಆದಿಪದೇನಾಭರಣಾದಿಕಂ ಗೃಹ್ಯತೇ । ಪರಮಾರ್ಥತಃ ಸತ್ತ್ವಂ ಚೇತಿ ಸಂಬಂಧಃ ॥ ೮೨೭ ॥

**ತಸ್ಮಾತ್ ಪರಮಮೋಕ್ಷತ್ವಂ ವೈಕುಂಠಾದಿಪುರತ್ರಯೇ ।**
**ಅವ್ಯಾವಹಾರಿಕಂ ಭೇದಂ ಪ್ರಾಹ ಭಾಗವತೇ ಶುಕಃ ॥ ೮೨೮ ॥**

**ಅರ್ಥ–** ತಸ್ಮಾತ್= ಆದ್ದರಿಂದ, ವೈಕುಂಠಾದಿಪುರತ್ರಯೇ= ವೈಕುಂಠ, ಶ್ವೇತದ್ವೀಪ ಮತ್ತು ಅನಂತಾಸನ ರೂಪವಾದ ಮೂರು ಪುರಗಳಲ್ಲಿ, ಶುಕಃ= ಶುಕಾಚಾರ್ಯರು, ಭಾಗವತೇ= ಭಾಗವತದಲ್ಲಿ, ಪರಮಮೋಕ್ಷತ್ವಂ= ಪರಮಮೋಕ್ಷತ್ವವನ್ನೂ, ಅವ್ಯಾವಹಾರಿಕಂ ಭೇದಂ= ವ್ಯಾವಹಾರಿಕವಲ್ಲದ ಎಂದರೆ ಪಾರಮಾರ್ಥಿಕವಾದ ಭೇದವನ್ನೂ, ಪ್ರಾಹ= ಹೇಳಿದ್ದಾರೆ.

**ಅನುವಾದ–** ಆದ್ದರಿಂದ ಶುಕಾಚಾರ್ಯರು ಭಾಗವತದಲ್ಲಿ ವೈಕುಂಠ, ಶ್ವೇತದ್ವೀಪ, ಅನಂತಾಸನ ರೂಪವಾದ ಮೂರು ಪಟ್ಟಣಗಳಿಗೆ ಪರಮ ಮೋಕ್ಷತ್ವವನ್ನೂ ಅಲ್ಲಿರುವ ಭೇದಕ್ಕೆ ಪಾರಮಾರ್ಥಿಕತ್ವವನ್ನೂ ಹೇಳಿದ್ದಾರೆ.

**ಭಾವವಿಲಾಸಿನೀ–** ತಸ್ಮಾಲ್ಲೋಕಸ್ಯ ನಿರ್ಮಾಯತ್ವಾತ್ । ವೈಕುಂಠಾದಿಪುರತ್ರಯೇ ಪರಮ-ಮೋಕ್ಷತ್ವಮಿತಿ ಸಂಬಂಧಃ । ವೈಕುಂಠಾದಿಪುರತ್ರಯಸ್ಯೈವ ಪರಮಮೋಕ್ಷತ್ವಮಿತಿ ಯಾವತ್ ॥ ಮಾಯಾತ್ಯಯಸ್ಥಲಸ್ಯೈವ ಪರಮ ಮೋಕ್ಷತ್ವಾದಿತಿ ಭಾವಃ ॥ ೮೨೮ ॥

**ವಿವರಣೆ–** ವೈಕುಂಠಾದಿಲೋಕತ್ರಯಗಳು ಮಾಯಾರಹಿತವಾದುದರಿಂದ ಮಾಯಾ ನಿವೃತ್ತಿಯಾದ ಮೇಲೆ ಸಿಗುವ ಸ್ಥಾನಗಳು. ಮಾಯಾನಿವೃತ್ತಿಯಾದ ಮೇಲೆ ಸಿಗುವ ಸ್ಥಾನದಲ್ಲಿ ಮಾಯಾಕಾರ್ಯವಾದುದು ಯಾವುದೂ ಇರಲು ಸಾಧ್ಯವಿಲ್ಲ. ಆದ್ದರಿಂದ ಅದು ಪರಮ ಮೋಕ್ಷವೆಂದೂ, ಅಲ್ಲಿರುವ ಭೇದವು ಪಾರಮಾರ್ಥಿಕವೆಂದೂ ಸಿದ್ಧವಾಗುತ್ತದೆ.

**ಅತೋ ಜೀವೇಶಭೇದಾದ್ಯಮಭೇದ್ಯಂ ಸರ್ವವಾದಿನಾಂ ।**
**ಮಾಯಾ ಯಂ ನಾಸ್ಪೃಶತ್ ತಂ ತು ಕೋಽನ್ಯೋ ಮಾಯಾವಶಃ ಸ್ಪೃಶೇತ್ ॥ ೮೨೯ ॥**

**ಅರ್ಥ–** ಅತಃ= ಆದ್ದರಿಂದ, ಜೀವೇಶಭೇದಾದ್ಯಂ= ಜೀವೇಶಭೇದ ಮೊದಲಾದವುಗಳು, ಸರ್ವ ವಾದಿನಾಂ= ಎಲ್ಲ ವಾದಿಗಳಿಂದಲೂ, ಅಭೇದ್ಯಂ= ಅಭೇದ್ಯವಾದುದು, ಯಂ= ಯಾವ ಭೇದವನ್ನು, ಮಾಯಾ= ಮಾಯೆಯು, ನ ಅಸ್ಪೃಶತ್= ಸ್ಪರ್ಶಿಸಲಿಲ್ಲವೋ, ತಂ ತು= ಆ ಭೇದವನ್ನು, ಮಾಯಾವಶಃ= ಮಾಯಾವಶನಾದ, ಅನ್ಯಃ ಕಃ= ಇನ್ನೊಬ್ಬ ಯಾವನು, ಸ್ಪೃಶೇತ್= ಸ್ಪರ್ಶಿಸುತ್ತಾನೆ.

**ಅನುವಾದ–** ಆದ್ದರಿಂದ ಜೀವೇಶ ಭೇದ ಮೊದಲಾದ ಐದು ಭೇದಗಳು ಎಲ್ಲ ವಾದಿಗಳಿಂದಲೂ ಅಭೇದ್ಯವಾಗಿವೆ. ಯಾವ ಭೇದವನ್ನು ಮಾಯೆಯೇ ಸ್ಪರ್ಶಿಸಲು

ಸಾಧ್ಯವಾಗಲಿಲ್ಲವೋ ಅಂತಹ ಮುಕ್ತಿಕಾಲೀನ ಭೇದವನ್ನು ಯಾವ ಮಾಯಾವಶನು ಸ್ಪರ್ಶಿಸುತ್ತಾನೆ?

**ಭಾವವಿಲಾಸಿನೀ–** ಉಪಸಂಹರತಿ – **ಅತ ಇತಿ ॥** ಅಮಾಯಾಮಯತ್ವಾದಿತ್ಯರ್ಥಃ । ಆದ್ಯಪದೇ-ನಾಕಾರಾದಿಕಂ ಗೃಹ್ಯತೇ । ಯಂ ಭೇದಂ ಮಾಯಾವಶಃ ಮಾಯಾಧೀನೋ ವಾದೀ ॥೮೯॥

**ವಿವರಣೆ–** ಮಾಯಾರಹಿತ ವೈಕುಂಠದಲ್ಲಿರುವ ಭೇದವು ಮಾಯಾಸ್ಪರ್ಶ-ಶೂನ್ಯವಾಗಿದೆ. ಆದ್ದರಿಂದ ಪಾರಮಾರ್ಥಿಕವಾಗಿದೆ. ಅಂತಹ ಪಾರಮಾರ್ಥಿಕ ಭೇದವನ್ನು ಯಾವ ವಾದಿಯು ಅವಿದ್ಯಕವೆಂದು ಸಮರ್ಥಿಸಲು ಸಾಧ್ಯ ಎಂದು ಇಲ್ಲಿ ಆಕ್ಷೇಪವನ್ನು ಮಾಡುತ್ತಿದ್ದಾರೆ.

**ವಿಮತೋ ಜೀವಪರಯೋರ್ಭೇದೋಽಯಂ ಪರಮಾರ್ಥಸನ್ ।**
**ಅವಿದ್ಯಾಸ್ತಮಯೇ ಸತ್ತ್ವಾದ್ ಯಥಾತ್ಮೇತ್ಯನುಮಾನತಃ ।**
**ಸತ್ಯಭೇದೋಪಿ ಸಂಸಿದ್ಧ್ಯೇದ್ಧೇತೋರಾಗಮಿಕತ್ವತಃ ॥ ೮೩೦ ॥**

**ಅರ್ಥ–** ವಿಮತಃ= ವಿವಾದಗ್ರಸ್ತವಾದ, ಅಯಂ ಜೀವಪರಯೋರ್ಭೇದಃ= ಈ ಜೀವೇಶ ಭೇದವು, ಪರಮಾರ್ಥಸನ್= ಪಾರಮಾರ್ಥಿಕ ಸತ್ಯವಾಗಿದೆ, ಅವಿದ್ಯಾಸ್ತಮಯೇ ಸತ್ತ್ವಾತ್= ಅವಿದ್ಯಾನಾಶದ ನಂತರವೂ ಇರುವುದರಿಂದ, ಯಥಾತ್ಮಾ= ಆತ್ಮನಂತೆ, ಇತ್ಯನುಮಾನತಃ= ಎಂಬ ಅನುಮಾನದಿಂದ, ಸತ್ಯಭೇದೋಪಿ= ಸತ್ಯಭೇದವೂ ಸಹ, ಸಂಸಿದ್ಧ್ಯೇತ್= ಚೆನ್ನಾಗಿ ಸಿದ್ಧವಾಗುತ್ತದೆ, ಹೇತೋಃ= ಹೇತುವು, ಆಗಮಿಕತ್ವತಃ= ಆಗಮದಿಂದ ಸಿದ್ಧವಾಗಿರುವುದರಿಂದ (ಅಸಿದ್ಧಿ ದೋಷವಿಲ್ಲ).

**ಅನುವಾದ–** 'ವಿಮತೋ ಜೀವೇಶಭೇದಃ ಪರಮಾರ್ಥಸನ್ ಅವಿದ್ಯಾನಾಶೇ ಸತಿ ವರ್ತಮಾನತ್ವಾತ್ ಆತ್ಮವತ್' ಎಂಬ ಅನುಮಾನದಿಂದ ಮೋಕ್ಷದಲ್ಲಿ ಸತ್ಯಭೇದವೇ ಸಿದ್ಧವಾಗುತ್ತದೆ. 'ಅವಿದ್ಯಾಸ್ತಮಯೇ ಸತ್ತ್ವಾತ್' ಎಂಬ ಹೇತುವು ಹಿಂದೆ ಹೇಳಿದ ಭಾಗವತ ಶ್ಲೋಕದಿಂದ ಸಿದ್ಧವಾಗುವುದರಿಂದ ಹೇತುವಿಗೆ ಅಸಿದ್ಧಿ ದೋಷವು ಇಲ್ಲ.

**ಭಾವವಿಲಾಸಿನೀ–** ಭೇದೇಽನುಮಾನಮುಕ್ತ್ವಾ ಭೇದಸತ್ಯತ್ವೇಪ್ಯನುಮಾನಮಾಹ–**ವಿಮತ ಇತಿ ॥** ಅಸಿದ್ಧಿಂ ಪರಿಹರತಿ –**ಹೇತೋರಿತಿ ॥ ೮೩೦ ॥**

**ನ ವೈ ಸ ಆತ್ಮಾಽತ್ಮವತಾಮಿತಿಽವಾಕ್ಯಮನುಸ್ಮರ ।**
**ಯೋ ದುಃಖಂ ನೈವ ಭುಂಕ್ತೇಽಸೌ ದುಃಖೀ ಜೀವಃ ಕಥಂ ಭವೇತ್ ॥೮೩೧॥**

**ಅರ್ಥ–** ನ ವೈ ಸ ಆತ್ಮಾತ್ಮವತಾಂ= ನ ವೈ ಸ ಆತ್ಮಾತ್ಮವತಾಂ, ಇತಿ= ಎಂಬ, ವಾಕ್ಯಂ= ಭಾಗವತ ವಾಕ್ಯವನ್ನು, ಅನುಸ್ಮರ= ಸ್ಮರಿಸಿಕೋ, ಯಃ= ಯಾವ ಈಶ್ವರನು, ದುಃಖಂ=

ದುಃಖವನ್ನು, ನೈವ ಭುಂಕ್ತೇ= ಎಂದೂ ಭೋಗಿಸುವುದಿಲ್ಲವೋ, ಅಸೌ= ಅವನು, ದುಃಖೀ ಜೀವಃ= ದುಃಖವುಳ್ಳ ಜೀವನಾಗಿ, ಕಥಂ ಭವೇತ್= ಹೇಗೆ ಆಗುತ್ತಾನೆ.

**ಅನುವಾದ–** 'ನ ವೈ ಸ ಆತ್ಮಾತ್ಮವತಾಮಧೀಶ್ವರಃ ಭುಂಕ್ತೇ ಹಿ ದುಃಖಂ ಭಗವಾನ್ ವಾಸುದೇವಃ ನ ಸ್ತ್ರೀಕೃತಂ ಕಶ್ಮಲಮಶ್ನುವೀತ ನ ಲಕ್ಷ್ಮಣಂ ಚಾಪಿ ಜಹಾತಿ ಕರ್ಹಿಚಿತ್' ಎಂಬುದು ಭಾಗವತದ ನವಮಸ್ಕಂದದಲ್ಲಿ ರಾಮಾಯಣ ಕಥೆಯ ಸಂದರ್ಭದಲ್ಲಿ ಬಂದಿರುವ ಶ್ಲೋಕ. ಈ ಶ್ಲೋಕವನ್ನು ಸ್ಮರಿಸಿಕೋ. ಯಾವ ಪರಮಾತ್ಮನು ದುಃಖವನ್ನು ಎಂದೂ ಭೋಗಿಸುವುದಿಲ್ಲವೋ ಅವನು ದುಃಖಿಯಾದ ಜೀವನಿಂದ ಹೇಗೆ ಅಭಿನ್ನನಾಗುತ್ತಾನೆ?

**ಭಾವವಿಲಾಸಿನೀ–** ಆಗಮಿಕಮನುಮಾನಾನಂತರಂ ಚ ವಕ್ತುಂ ಪೀಠಮಾಚರತಿ – ನ ವೈ ಸ ಇತಿ ॥ ೮೩೧ ॥

**ವಿವರಣೆ–** ಇದುವರೆಗೆ ಭಾಗವತದ ತೃತೀಯ ಸ್ಕಂದದ ಶ್ಲೋಕಗಳಿಂದ ಮೋಕ್ಷದಲ್ಲಿ ಜೀವೇಶಭೇದವನ್ನು ಮತ್ತು ಅದರ ಪಾರಮಾರ್ಥಿಕತ್ವವನ್ನು ಸಮರ್ಥನೆ ಮಾಡಿ ಇನ್ನು ಇನ್ನೊಂದು ಅನುಮಾನದಿಂದ ಜೀವೇಶಭೇದವನ್ನು ಸಮರ್ಥಿಸಲು ಇಲ್ಲಿ ಪೀಠಿಕೆಯನ್ನು ರಚಿಸುತ್ತಿದ್ದಾರೆ.

ಬ್ರಹ್ಮಚಿಜ್ಜೀವಚಿನ್ನೈವ ದುಃಖಾಭೋಕ್ತೃತ್ವತಃ ಸದಾ ।
**ಘಟವತ್ ಪಟವದ್ವೇತಿ ಸ್ಮೃತಿಮೂಲಾನುಮಾಪ್ಯಭೂತ್ ॥ ೮೩೨ ॥**

**ಅರ್ಥ–** ಬ್ರಹ್ಮಚಿತ್= ಬ್ರಹ್ಮ ಚೈತನ್ಯವು, ಜೀವಚಿತ್ ನೈವ= ಜೀವ ಚೈತನ್ಯಕ್ಕಿಂತ ಭಿನ್ನವಾಗಿದೆ, ಸದಾ ದುಃಖಾಭೋಕ್ತೃತ್ವತಃ= ಯಾವಾಗಲೂ ದುಃಖವನ್ನು ಭೋಗಿಸದೇ ಇರುವುದರಿಂದ, ಘಟವತ್ಪಟವದ್ವಾ= ಘಟದಂತೆ ಅಥವಾ ಪಟದಂತೆ, ಇತಿ= ಎಂಬ, ಸ್ಮೃತಿಮೂಲಾನುಮಾ= ಸ್ಮೃತಿ ಮೂಲೋಕವಾದ ಅನುಮಾನವು, ಅಭೂತ್= ಸಿದ್ಧವಾಯಿತು.

**ಅನುವಾದ–** 'ಬ್ರಹ್ಮಚಿತ್ ನ ಜೀವಚಿತ್ ಕದಾಪಿ ದುಃಖಾಭೋಕ್ತೃತ್ವಾತ್ ಘಟವತ್ ಪಟವದ್ವಾ' ಎಂಬ ಅನುಮಾನವು ಹಿಂದೆ ಹೇಳಿದ ಭಾಗವತ ಸ್ಮೃತಿಯಿಂದ ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ಅನುಮಾನಪ್ರಯೋಗಂ ದರ್ಶಯತಿ ॥ ಬ್ರಹ್ಮಚಿದಿತಿ ॥ ಜೀವಚಿನ್ನೈವೇತಿ ಸಾಧ್ಯಮ್ । ಜೀವಚಿದಭಿನ್ನೋ ನೈವೇತ್ಯರ್ಥಃ । ಸದಾ ದುಃಖಾಭೋಕ್ತೃತ್ವಾತ್ । ಕದಾಚಿತ್ ದುಃಖಾಭೋಕ್ತೃತ್ವಂ ಜೀವಚಿತೋಽಪ್ಯಸ್ತೀತ್ಯತೋ ವ್ಯಭಿಚಾರಪರಿಹಾರಾಯ ಸದೇತ್ಯುಕ್ತಮ್ । ಹೇತೋರಸಿದ್ಧಿಪರಿಹಾರಸೂಚನಾಯೋಕ್ತಂ ಸ್ಮೃತಿಮೂಲೇತಿ ॥ ೮೩೨ ॥

**ವಿವರಣೆ–** ಈ ಅನುಮಾನದಿಂದಲೂ ಜೀವೇಶಭೇದವು ಸಿದ್ಧವಾಗುತ್ತದೆ. ಕೇವಲ ದುಃಖ ಅಭೋಕ್ತೃತ್ವವನ್ನೇ ಹೇತು ಮಾಡಿದರೆ, ಜೀವನಲ್ಲೂ ಒಮ್ಮೊಮ್ಮೆ ದುಃಖ ಅಭೋಕ್ತೃತ್ವವಿರುವುದರಿಂದ ಹೇತುವಿಗೆ ವ್ಯಭಿಚಾರವು ಬರುತ್ತದೆ. ಆದ್ದರಿಂದ ಸದಾ ಎಂಬ ವಿಶೇಷಣವನ್ನು ಕೊಟ್ಟಿದ್ದಾರೆ. ಹೇತುವು ಭಾಗವತ ಸ್ಮೃತಿಯಿಂದ ಸಿದ್ಧವಾಗುವುದರಿಂದ ಅದಕ್ಕೆ ಅಸಿದ್ಧಿದೋಷವು ಇಲ್ಲ ಎಂದು ಅಭಿಪ್ರಾಯ.

**ವಿಮತೋಽನಾದಿಜೀವೇಶಭೇದಾದಿಃ ಪರಮಾರ್ಥಸನ್ ।**
**ಅನಾದಿತ್ವಾದ್ ಯಥಾ ಬ್ರಹ್ಮೇತ್ಯಸ್ತಿ ಶಾಸ್ತ್ರಾನುಮಾ ಮಮ ॥ ೮೩೩ ॥**

**ಅರ್ಥ–** ವಿಮತಃ= ವಿವಾದಗ್ರಸ್ತವಾದ, ಅನಾದಿಜೀವೇಶ ಭೇದಾದಿಃ= ಅನಾದಿಯಾದ ಜೀವೇಶ ಭೇದ ಮೊದಲಾದವು, ಪರಮಾರ್ಥಸನ್= ಪರಮಾರ್ಥ ಸತ್ಯವಾಗಿದೆ, ಅನಾದಿತ್ವಾತ್= ಅನಾದಿತ್ವವಿರುವುದರಿಂದ, ಯಥಾ ಬ್ರಹ್ಮ= ಬ್ರಹ್ಮನಂತೆ, ಇತಿ= ಎಂಬ, ಶಾಸ್ತ್ರಾನುಮಾ= ಶಾಸ್ತ್ರಸಿದ್ಧವಾದ ಅನುಮಾನವು, ಮಮ ಅಸ್ತಿ= ನನಗೆ ಇದೆ.

**ಅನುವಾದ–** 'ವಿಮತಂ ಅನಾದಿಜೀವೇಶಭೇದಾದಿ ಪರಮಾರ್ಥಸತ್ ಅನಾದಿತ್ವಾತ್ ಬ್ರಹ್ಮವತ್' ಎಂಬ ಶಾಸ್ತ್ರಮೂಲವಾದ ಅನುಮಾನವು ನನಗೆ ಇದೆ.

**ಭಾವವಿಲಾಸಿನೀ–** ಭೇದಸ್ಯ ಪಾರಮಾರ್ಥಿಕತ್ವೇ ಪರಪ್ರಕ್ರಿಯಯೈವ ಸಿದ್ಧಮನುಮಾನಾನಂತರಂ ಚಾಹ – ವಿಮತ ಇತಿ ॥ ಅನಾದೀತಿ ಉಪರಂಜಕತಯಾ ಹೇತುಗರ್ಭಂ ಪಕ್ಷವಿಶೇಷಣಮ್ । ಅಸ್ಮನ್ಮತೇ ತು ಘಟಪಟಾದಿಭೇದೇಹೇತೋರ್ಭಾಗಾಸಿದ್ಧಿಪರಿಹಾರಾಯ ॥ ೮೩೩ ॥

**ವಿವರಣೆ–** ಶಾಸ್ತ್ರದಲ್ಲಿ ಜೀವೇಶ್ವರರಿಗೆ ಅನಾದಿತ್ವವನ್ನು ಹೇಳುವುದರಿಂದ ಮತ್ತು ನೀನು ಸಹ 'ಜೀವ ಈಶೋ ವಿಶುದ್ಧಾಚಿತ್' ಎಂದು ಜೀವೇಶ್ವರಭೇದದಲ್ಲಿ ಅನಾದಿತ್ವವನ್ನು ಒಪ್ಪುವುದರಿಂದ ಶಾಸ್ತ್ರದಿಂದಲೂ ಮತ್ತು ನಿನ್ನ ಪ್ರಕ್ರಿಯೆಯಿಂದಲೂ ಜೀವೇಶಭೇದವು ಪಾರಮಾರ್ಥಿಕವೆಂದು ಸಿದ್ಧವಾಗುತ್ತದೆ ಎಂದು ಇಲ್ಲಿ ಉಪಪಾದನೆ ಮಾಡುತ್ತಾರೆ.

**ಭೇದಾದಿಷಟ್ಕಾನಾದಿತ್ವಂ ಷಡಸ್ಮಾಕಮನಾದಯಃ ।**
**ಇತಿ ಸಂಜಲ್ಪತ್ವೈವೋಕ್ತಂ ತ್ವಯಾತೋ ನ ಕುತೋಽಪಿ ಭೀಃ ॥ ೮೩೪ ॥**

**ಅರ್ಥ–** ಷಡಸ್ಮಾಕಮನಾದಯಃ= ಈ ಆರು ನಮಗೆ ಅನಾದಿ ಪದಾರ್ಥಗಳು, ಇತಿ ಸಂಜಲ್ಪತಾ= ಎಂದು ಹೇಳುವ, ತ್ವಯಾ ಏವ= ನಿನ್ನಿಂದಲೇ, ಭೇದಾದಿಷಟ್ಕಾನಾದಿತ್ವಂ= ಭೇದ ಮೊದಲಾದ ಆರು ಪದಾರ್ಥಗಳಿಗೆ ಅನಾದಿತ್ವವು, ಉಕ್ತಂ= ಹೇಳಲ್ಪಟ್ಟಿದೆ, ಅತಃ= ಆದ್ದರಿಂದ, ಕುತೋಽಪಿ= ಯಾವ ರೀತಿಯಿಂದಲೂ, ಭೀಃ ನ= ಭಯವಿಲ್ಲ.

**ಅನುವಾದ–** 'ಷಡಸ್ಮಾಕಮನಾದಯಃ' ಎಂದು ಹೇಳುವ ನಿನ್ನಿಂದಲೇ ಭೇದ ಮೊದಲಾದ ಆರು ಪದಾರ್ಥಗಳಿಗೆ ಅನಾದಿತ್ವವು ಹೇಳಲ್ಪಟ್ಟಿದೆ. ಆದ್ದರಿಂದ ನನಗೆ ಯಾವ ರೀತಿಯಿಂದಲೂ ಭಯವಿಲ್ಲ.

**ಭಾವವಿಲಾಸಿನೀ–** ಅತಃ ಹೇತೋಃ ಪರಮತಸಿದ್ಧತ್ವಾತ್ ॥ ೮೩೪ ॥

**ವಿವರಣೆ–** 'ಜೀವ ಈಶೋ ವಿಶುದ್ಧಾಚಿತ್ ಭೇದಸ್ತಸ್ಯಾಃ ತಯೋರ್ದ್ವಯೋಃ । ಅವಿದ್ಯಾ ತಚ್ಚಿತೋ ಯೋಗಃ ಷಡಸ್ಮಾಕಮನಾದಯಃ' ಎಂಬುದು ಅದ್ವೈತಿಗಳ ಕಾರಿಕಾ. ಅಲ್ಲಿ ಆರು ಅನಾದಿಪದಾರ್ಥಗಳನ್ನು ಪರಿಗಣಿಸುತ್ತಾ ಭೇದಸ್ತಸ್ಯಾಃ ತಯೋರ್ದ್ವಯೋಃ ಎಂದು ಹೇಳಿದ್ದಾರೆ. ಜೀವ ಮತ್ತು ಶುದ್ಧ ಚೈತನ್ಯ ಭೇದ ಹಾಗೂ ಈಶ್ವರ ಮತ್ತು ಶುದ್ಧ ಚೈತನ್ಯ ಭೇದ ಇವೆರಡೂ ಆ ಆರು ಪದಾರ್ಥಗಳಲ್ಲಿ ಸೇರಿದೆ. ಈ ಎರಡು ಭೇದಗಳನ್ನು ಪ್ರತ್ಯೇಕವಾಗಿ ಹೇಳಿರುವುದರಿಂದ ಜೀವೇಶ್ವರ ಭೇದವು ಅದರಿಂದಲೇ ಸಿದ್ಧವಾಗುತ್ತವೆ. ಇಲ್ಲದಿದ್ದರೆ ಒಂದೇ ಭೇದವನ್ನು ಹೇಳಿದರೆ ಸಾಕಾಗುತ್ತಿತ್ತು. ಆದ್ದರಿಂದ ಪ್ರತಿವಾದಿಯಾದ ನೀನೂ ಸಹ ಜೀವೇಶ್ವರ ಭೇದಕ್ಕೆ ಅನಾದಿತ್ವವನ್ನು ಒಪ್ಪಿರುವುದರಿಂದ ಹೇತುವಿಗೆ ಅಸಿದ್ಧಿ ದೋಷವಿಲ್ಲ ಎಂದು ಅಭಿಪ್ರಾಯ.

**ಪೂರ್ವಂ ಪೂರ್ವಂ ವಿದ್ಯಮಾನೇ ಯತ್ರೇದಂಪೂರ್ವತಾ ತು ನ ।**
**ಷೋಢಾನಾದಿಂ ವಿಭಜತಾಮನಾದಿರಯಮೇವ ಹಿ ॥ ೮೩೫ ॥**

**ಅರ್ಥ–** ಪೂರ್ವಂ ಪೂರ್ವಂ ವಿದ್ಯಮಾನೇ= ಹಿಂದೆ ಹಿಂದೆ ವಿದ್ಯಮಾನವಾದ, ಯತ್ರ= ಯಾವ ವಸ್ತುವಿನಲ್ಲಿ, ಇದಂಪೂರ್ವತಾ ತು ನ= ಇದಂ ಪೂರ್ವತ್ವವು ಇಲ್ಲವೋ, ಅಯ ಮೇವ= ಇದೇ, ಅನಾದಿಂ ಷೋಢಾದಿ ವಿಭಜತಾ= ಅನಾದಿಯಾದ ವಸ್ತುವನ್ನು ಆರು ಭಾಗವಾಗಿ ವಿಭಾಗಿಸುವವರಿಗೆ, ಅನಾದಿಃ ಹಿ= ಅನಾದಿಯಷ್ಟೇ.

**ಅನುವಾದ–** ಹಿಂದೆ ಹಿಂದೆ ಹೋದರೂ ವಿದ್ಯಮಾನವಾದ ಯಾವ ವಸ್ತುವಿನಲ್ಲಿ ಇದಂಪೂರ್ವತ್ವವು ಇಲ್ಲವೋ ಅದೇ ಅನಾದಿ ಪದಾರ್ಥವನ್ನು ಆರು ಭಾಗವಾಗಿ ವಿಭಾಗ ಮಾಡುವವರಿಗೆ ಅನಾದಿತ್ವವಷ್ಟೇ?

**ಭಾವವಿಲಾಸಿನೀ–** ಅನಾದಿತ್ವಂ ಚ ನಿರವಧಿಕಪ್ರಾಕ್ಕಾಲಮಾರಭ್ಯ ವಿದ್ಯಮಾನತ್ವಮೇವ ನ ತ್ವಾದಿರಾಹಿತ್ಯಮಾತ್ರಮ್ । ತಥಾ ಸತಿ ಶಶಶೃಂಗಾದೇರಪ್ಯನಾದಿತ್ವಪ್ರಸಂಗೇನ ಷಡಸ್ಮಾಕ-ಮನಾದಯ ಇತಿ ವಿಭಾಗಾಯೋಗಾತ್ । ಅತೋ ಹೇತೋರ್ನಕ್ವಾಪಿ ವಿಪಕ್ಷಗಾಮಿತ್ವಮ್ । ಕಿಂತ್ವನುಕೂಲತರ್ಕಸಹಿತತ್ವಾತ್ ಪ್ರಾಬಲ್ಯಂ ಚಾಸ್ತೀತ್ಯಾಹ – **ಪೂರ್ವಂ ಪೂರ್ವಮಿತಿ** ॥ ಆದಿರಾಹಿತ್ಯೇ ಸತಿ ವಿದ್ಯಮಾನತ್ವಮನಾದಿತ್ವಮಿತಿ ಭಾವಃ ॥ ೮೩೫ ॥

**ವಿವರಣೆ–** ಅನಾದಿತ್ವವೆಂದರೆ ನಿರವಧಿಕ ಪ್ರಾಕ್ಕಾಲದಿಂದಲೂ ವಿದ್ಯಮಾನತ್ವವೇ ಹೊರತು ಕೇವಲ ಆದಿರಾಹಿತ್ಯವಲ್ಲ. ಆದಿರಾಹಿತ್ಯವೇ ಅನಾದಿತ್ವವೆಂದರೆ ಹೇಳಿದರೆ

ಶಶವಿಷಾಣಕ್ಕೂ ಆದಿರಾಹಿತ್ಯವಿರುವುದರಿಂದ ಅನಾದಿತ್ವವು ಬರುತ್ತದೆ. ಆಗ ಆರೇ ಅನಾದಿ ಪದಾರ್ಥಗಳು ಎಂದು ವಿಭಾಗ ಮಾಡುವುದು ಸರಿ ಹೊಂದುವುದಿಲ್ಲ. ಶಶವಿಷಾಣದಲ್ಲಿ ಅನಾದಿತ್ವವು ಇಲ್ಲದಿರಬೇಕಾದರೆ 'ವಿದ್ಯಮಾನತ್ವೇಸತಿ ಇದಂಪೂರ್ವತ್ವಾ ಭಾವಃ' ಎಂದರೆ 'ವಿದ್ಯಮಾನತ್ವೇಸತಿ ಪ್ರಾಗಭಾವಾ ಪ್ರತಿಯೋಗಿತ್ವಂ' ಎಂದೇ ಅನಾದಿತ್ವವನ್ನು ನಿರ್ವಚನ ಮಾಡಬೇಕು. ಇಂತಹ ಅನಾದಿತ್ವವನ್ನು ಜೀವೇಶ ಭೇದಕ್ಕೆ ನೀನೂ ಒಪ್ಪುವುದರಿಂದ ಅದಕ್ಕೆ ಪಾರಮಾರ್ಥಿಕ ಸತ್ತ್ವವೇ ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

**ಸಪಕ್ಷಪಕ್ಷಗೋ ಹೇತುರ್ಯತೋऽಯಂ ನ ವಿಪಕ್ಷಗಃ ।**
**ಷಣ್ಣಾಮಕ್ಷುಣ್ಣತದ್ಭಾವಾದನ್ಯಾನಾದೇಶ್ಚ ನಿಹ್ನುತೇಃ ॥ ೮೩೬ ॥**

**ಅರ್ಥ–** ಅಯಂ ಹೇತುಃ= ಈ ಅನಾದಿತ್ವ ಎಂಬ ಹೇತುವು, ಸಪಕ್ಷ ಪಕ್ಷಗಃ= ಪಕ್ಷ ಮತ್ತು ಸಪಕ್ಷದಲ್ಲಿ ಮಾತ್ರ ಇದೆ, ಷಣ್ಣಾಂ= ಆರು ಪದಾರ್ಥಗಳಿಗೆ, ಅಕ್ಷುಣ್ಣತದ್ಭಾವಾತ್= ನಿರ್ವಿವಾದವಾಗಿ ಅನಾದಿತ್ವವಿರುವುದರಿಂದ, ಚ= ಮತ್ತು, ಅನ್ಯಾನಾದೇಃ= ಇನ್ನೊಂದು ಅನಾದಿಯಾದ ವಸ್ತುವನ್ನು ನಿಹ್ನುತೇಃ= ನಿರಾಕರಣೆ ಮಾಡಿರುವುದರಿಂದ, ನ ವಿಪಕ್ಷಗಃ= ವಿಪಕ್ಷದಲ್ಲಿ ಇರುವುದಿಲ್ಲ.

**ಅನುವಾದ–** ಅನಾದಿತ್ವ ಎಂಬ ಈ ಹೇತುವು ಸಪಕ್ಷ ಮತ್ತು ಪಕ್ಷಗಳಲ್ಲಿ ಮಾತ್ರ ಇರುತ್ತದೆ. ಈ ಆರು ಪದಾರ್ಥಗಳಿಗೆ ನಿರ್ವಿವಾದವಾಗಿ ಅನಾದಿತ್ವವಿರುವುದರಿಂದ ಮತ್ತು ಇದನ್ನು ಬಿಟ್ಟು ಬೇರೆ ಅನಾದಿ ಪದಾರ್ಥವನ್ನು ನಿರಾಕರಣೆ ಮಾಡಿರುವುದರಿಂದ ವಿಪಕ್ಷವೃತ್ತಿಯಾಗುವುದಿಲ್ಲ.

**ಭಾವವಿಲಾಸಿನೀ–** ಅನ್ಯಾನಾದೇಃ ಶಶಶೃಂಗಾದ್ಯನಾದೇಃ। ನಿಹ್ನುತೇಃ ತ್ವಯೈವ ನಿರಾಕರಣಾದಿತ್ಯರ್ಥಃ ॥ ೮೩೬ ॥

**ವಿವರಣೆ–** 'ವಿಮತೋ ಜೀವೇಶ್ವರ ಭೇದಾದಿಃ ಪರಮಾರ್ಥಸನ್ ಅನಾದಿತ್ವಾತ್' ಎಂಬುದು ನಮ್ಮ ಅನುಮಾನ. ವಿಮತವಾದ ಜೀವೇಶ್ವರಭೇದವು ಪರಮಾರ್ಥ ಸತ್ಯವಾಗಿದೆ ಅನಾದಿಯಾಗಿರುವುದರಿಂದ ಬ್ರಹ್ಮನಂತೆ ಎಂಬುದು ನಮ್ಮ ಅನುಮಾನದ ರೀತಿಯಿದೆ. ಶಶವಿಷಾಣದಲ್ಲಿ ಅನಾದಿತ್ವವು ಇದೆ, ಪಾರಮಾರ್ಥಿಕತ್ವವು ಇಲ್ಲ ಎಂದು ಈ ನಮ್ಮ ಅನುಮಾನಕ್ಕೆ ವ್ಯಭಿಚಾರವನ್ನು ಶಂಕಿಸಿದರೆ ಅದಕ್ಕೆ ಇಲ್ಲಿ ಉತ್ತರವನ್ನು ಹೇಳುತ್ತಾರೆ. ಶಶವಿಷಾಣವು ಅನಾದಿಯಲ್ಲ. ಏಕೆಂದರೆ ಅದ್ವೈತಿಗಳು ತಮ್ಮ ಕಾರಿಕೆಯಲ್ಲಿ ನಮಗೆ ಆರೇ ಅನಾದಿಪದಾರ್ಥಗಳು ಎಂದು ಹೇಳಿ ಜೀವ, ಈಶ್ವರ, ಶುದ್ಧಚೈತನ್ಯ, ಚೈತನ್ಯದಲ್ಲಿ ಜೀವೇಶ್ವರಭೇದ, ಅವಿದ್ಯಾ ಮತ್ತು ಅವಿದ್ಯಾ ಚೈತನ್ಯ ಸಂಬಂಧ ಇವು ಆರೇ ಅನಾದಿ ಪದಾರ್ಥಗಳು. ಇನ್ನೊಂದು ಅನಾದಿ ಪದಾರ್ಥವಿಲ್ಲ ಎಂದು ಹೇಳಿರುವುದರಿಂದ ಶಶವಿಷಾಣವು ಅದ್ವೈತ ಮತದಂತೆಯೂ ಅನಾದಿಯಲ್ಲ. ಆದ್ದರಿಂದ

ಅಲ್ಲಿ ಹೇತುವಿಗೆ ವ್ಯಭಿಚಾರವಿಲ್ಲ ಎಂದು ಅಭಿಪ್ರಾಯ.

**ಅನಾದಿಃ ಕಲ್ಪಿತಶ್ಚೇತಿ ವ್ಯಾಹತೇಃ ಪ್ರಥಮಂ ಗೃಹಂ ।**
**ಅತಃ ಕರ್ಕಶತರ್ಕೋಽಪಿ ಧಿಕ್ಕರೋತಿ ಮತಂ ತವ ।**
**ತಸ್ಮಾದುಕ್ತಂ ಸಮಸ್ತಂ ಚ ನಿರವದ್ಯಮಿತಿ ಸ್ಥಿತಂ ॥ ೮೩೭ ॥**

**ಅರ್ಥ–** ಅನಾದಿಃ ಕಲ್ಪಿತಶ್ಚೇತಿ= ಒಂದು ವಸ್ತುವು ಅನಾದಿ ಮತ್ತು ಕಲ್ಪಿತ ಎಂದು ಹೇಳುವುದು, ವ್ಯಾಹತೇಃ= ವ್ಯಾಹತಿ ದೋಷಕ್ಕೆ, ಪ್ರಥಮಂ= ಮುಖ್ಯವಾದ, ಗೃಹಂ= ಆವಾಸ ಸ್ಥಾನ (ಉದಾಹರಣೆ), ಅತಃ= ಆ ಕಾರಣದಿಂದ, ಕರ್ಕಶತರ್ಕೋಽಪಿ= ಉಗ್ರವಾದ ತರ್ಕವೂ ಸಹ, ತವ ಮತಂ= ನಿನ್ನ ಮತವನ್ನು, ಧಿಕ್ಕರೋತಿ= ನಿರಾಕರಿಸುತ್ತದೆ, ತಸ್ಮಾತ್= ಆದ್ದರಿಂದ, ಉಕ್ತಂ ಸಮಸ್ತಂ ಚ= ನಾವು ಹೇಳಿದ ಎಲ್ಲಾ ಪ್ರಮೇಯವೂ, ನಿರವದ್ಯಮಿತಿ= ನಿರ್ದೋಷವಾದುದು ಎಂದು, ಸ್ಥಿತಂ= ಸಿದ್ಧವಾಯಿತು.

**ಅನುವಾದ– ಒಂದು ವಸ್ತುವು ಅನಾದಿ ಮತ್ತು ಕಲ್ಪಿತ ಎಂದು ಹೇಳುವುದು ವ್ಯಾಹತಿಗೆ ಮುಖ್ಯ ಉದಾಹರಣೆ. ಆದ್ದರಿಂದ ಕರ್ಕಶವಾದ ತರ್ಕವೂ ನಿನ್ನ ಮತವನ್ನು ನಿರಾಕರಿಸುತ್ತದೆ. ಆ ಕಾರಣದಿಂದ ನಾವು ಹೇಳಿದ ಪ್ರಮೇಯವೆಲ್ಲವೂ ನಿರ್ದುಷ್ಟವಾಗಿವೆ ಎಂದು ಸಿದ್ಧವಾಗುತ್ತವೆ.**

**ಭಾವವಿಲಾಸಿನೀ–ಕಲ್ಪಿತಃ ಅವಿದ್ಯಾಕಲ್ಪಿತಃ। ತಸ್ಮಾತ್ ಭೇದಸ್ಯ ಪ್ರಬಲಾ- ನೇಕಾನುಮಾನಸಿದ್ಧತ್ವಾತ್ ॥ ೮೩೭ ॥**

**ವಿವರಣೆ–** ಅನಾದಿ ಎಂದರೆ ಯಾರಿಂದಲೂ ಕಲ್ಪಿತವಲ್ಲ ಎಂದೇ ಅರ್ಥ. ಪುನಃ ಅದನ್ನು ಕಲ್ಪಿತವೆಂದು ಹೇಳಿದರೆ ವ್ಯಾಹತಿ ಉಂಟಾಗುತ್ತದೆ. ಆದ್ದರಿಂದ ಅವಿದ್ಯಾದಿಗಳಿಗೆ ಅನಾದಿತ್ವವನ್ನೂ ಕಲ್ಪಿತವನ್ನೂ ಅಂಗೀಕರಿಸುವುದು ವ್ಯಾಹತವಾದುದು ಎಂದು ಅಭಿಪ್ರಾಯ.

**ಅನಾದಿಮಾಯಯಾ ಸುಪ್ತೋ ಯದಾ ಜೀವಃ ಪ್ರಬುಧ್ಯತೇ ।**
**ಅಜಮನಿದ್ರಮಸ್ವಪ್ನಮದ್ವೈತಂ ಬುಧ್ಯತೇ ತದಾ ॥ ೮೩೮ ॥**

**ಅನಾದಿತೋಽಪಿ ಸುಪ್ತೋಽಜ್ಞೋ ಜೀವೋ ಮಾಯಾವಶೋಽವಶಃ ।**
**ಅಪ್ರಬುದ್ಧಶ್ಚ ಪೂರ್ವಾರ್ಧೇ ಸುಪ್ರಸಿದ್ಧೋಽಭಿಧೀಯತೇ ।**
**ಉತ್ತರಾರ್ಧೇ ತ್ವಜೋಽನಿದ್ರಃ ಸ್ವಪ್ನಶೂನ್ಯಶ್ಚ ಕಶ್ಚನ ॥ ೮೩೯ ॥**

**ಅರ್ಥ–** ಅನಾದಿಮಾಯಯಾ= ಅನಾದಿಯಾದ ಭಗವದ್ದಿಚ್ಛೆಯಿಂದ, ಸುಪ್ತಃ ಜೀವಃ= ಆವೃತನಾದ ಜೀವನು, ಯದಾ= ಯಾವಾಗ, ಪ್ರಬುಧ್ಯತೇ= ಎಚ್ಚರಗೊಳ್ಳುತ್ತಾನೆಯೋ,

ತದಾ= ಆಗ, ಅಜಂ= ಜನ್ಮರಹಿತನಾದ, ಅನಿದ್ರಂ= ಸರ್ವದಾ ನಿದ್ರಾರಹಿತನಾದ, ಅಸ್ವಪ್ನಂ= ಸರ್ವದಾ ಸ್ವಪ್ನರಹಿತನಾದ, ಅದ್ವೈತಂ= ಅದ್ವಂದ್ವನಾದ ಪರಮಾತ್ಮನನ್ನು, ಬುಧ್ಯತೇ= ತಿಳಿಯುತ್ತಾನೆ, ಅಜ್ಞಃ ಜೀವಃ= ಅಜ್ಞಾನಿಯಾದ ಜೀವನು, ಮಾಯಾ ವಶಃ= ಮಾಯೆಗೆ ವಶನಾಗಿ, ಅವಶಃ= ತನ್ನ ಸ್ವಾತಂತ್ರ್ಯವಿಲ್ಲದೆ, ಅನಾದಿತೋಪಿ= ಅನಾದಿ ಕಾಲದಿಂದಲೂ, ಸುಪ್ತಃ= ಮಲಗಿ ನಿದ್ರಿಸುತ್ತಾ, ಅಪ್ರಬುದ್ಧಶ್ಚ= ಇನ್ನೂ ಎದ್ದಿಲ್ಲವೆಂದು, ಪೂರ್ವಾರ್ಧೇ= ಪೂರ್ವಾರ್ಧದಲ್ಲಿ, ಸುಪ್ರಸಿದ್ಧಃ= ಸುಪ್ರಸಿದ್ಧನಾದ ಜೀವನೇ, ಅಭಿಧೀಯತೇ= ಹೇಳಲ್ಪಡುತ್ತಾನೆ, ಉತ್ತರಾರ್ಧೇ= ಆ ಮಂತ್ರದ ಉತ್ತರಾರ್ಧದಲ್ಲಿ, ಅಜಃ= ಜನ್ಮರಹಿತನಾದ, ಅನಿದ್ರಃ= ನಿದ್ರಾರಹಿತನಾದ, ಸ್ವಪ್ನಶೂನ್ಯಶ್ಚ= ಮತ್ತು ಸ್ವಪ್ನರಹಿತನಾದ, ಕಶ್ಚನ= ಇನ್ನೊಬ್ಬ ನಿದರ್ಶನ ವ್ಯಕ್ತಿಯು, ಅಭಿಧೀಯತೇ= ಹೇಳಲ್ಪಡುತ್ತಾನೆ.

**ಅನುವಾದ–** ಅನಾದಿಕಾಲದಿಂದಲೂ ಭಗವದಿಚ್ಛೆಯಿಂದ ಸುಪ್ತನಾದ ಜೀವನು ಯಾವಾಗ ಪ್ರಬುದ್ಧನಾಗುತ್ತಾನೆಯೋ ಆಗ ಜನ್ಮರಹಿತನಾದ, ನಿದ್ರಾರಹಿತನಾದ, ಸ್ವಪ್ನರಹಿತನಾದ ಮತ್ತು ಅದ್ವಂದ್ವನಾದ ಭಗವಂತನನ್ನು ತಿಳಿಯುತ್ತಾನೆ. (ಇದು ಶ್ಲೋಕದಲ್ಲಿ ಉದಾಹರಣೆ ಮಾಡಿದ ವೇದಮಂತ್ರದ ಅರ್ಥ). ಇಲ್ಲಿ ಪೂರ್ವಾರ್ಧದಲ್ಲಿ ಮಾಯಾವಶನಾಗಿ ಅಸ್ವತಂತ್ರ್ಯನಾಗಿ, ಅಜ್ಞನಾಗಿ, ಅನಾದಿಕಾಲದಿಂದಲೂ ಸುಪ್ತನಾಗಿ, ಪ್ರಬೋಧವನ್ನು ಹೊಂದದೇ, ಸುಪ್ರಸಿದ್ಧನಾಗಿರುವ ಜೀವನು ಹೇಳಲ್ಪಡುತ್ತಾನೆ. ಉತ್ತರಾರ್ಧದಲ್ಲಿ ಜನ್ಮರಹಿತನೂ, ನಿದ್ರಾರಹಿತನೂ, ಸ್ವಪ್ನರಹಿತನೂ ಆದ ವಿಲಕ್ಷಣನಾದ ಇನ್ನೊಬ್ಬನು ಹೇಳಲ್ಪಡುತ್ತಾನೆ.

**ಭಾವವಿಲಾಸಿನೀ–** ಅಧುನಾऽದ್ವೈತೇ ಪರಾಭಿಲಷಿತೇನಾನಾದಿಮಾಯಯೇತಿ ವಾಕ್ಯೇನೈವ ದ್ವೈತಂ ಸಾಧಯತಿ – **ಅನಾದೀತ್ಯಾದಿನಾ ॥** ಅವಶಃ ಪರವಶಃ । ಲೋಕಪ್ರಸಿದ್ಧಜೀವ-ಪದೇನೈವೋಕ್ತತ್ವಾತ್ ಸುಪ್ತತ್ವಾದೇಶ್ಚ ತತ್ರೈವ ಪ್ರಸಿದ್ಧತ್ವಾತ್ ಪ್ರಸಿದ್ಧ ಇತ್ಯುಕ್ತಮ್ । ಕಶ್ಚನ ಪೂರ್ವಾರ್ಧೋಕ್ತಾದ್ವಿರುದ್ಧಃ ಕಶ್ಚಿದಭಿಧೀಯತ ಇತಿ ಸಂಬಂಧಃ । ಅನಿದ್ರಾऽಸ್ವಪ್ನತ್ವಯೋಃ ಸುಪ್ತತ್ವಸ್ಯ ಚೈಕತ್ರಾಯೋಗಾದಿತಿ ಭಾವಃ ॥ ೮೩೮-೮೩೯ ॥

**ವಿವರಣೆ–** ಇನ್ನು ಅದ್ವೈತಿಗಳು ತಮ್ಮ ತತ್ವವನ್ನು ಪ್ರತಿಪಾದನೆ ಮಾಡುವುದೆಂದು ತಿಳಿದಿರುವ 'ಅನಾದಿಮಾಯಯಾಸುಪ್ತಃ' ಎಂಬ ವಾಕ್ಯವನ್ನು ವಿಮರ್ಶೆ ಮಾಡುತ್ತಾರೆ. ಇಲ್ಲಿ ಇರುವ ವಿಶೇಷಣಗಳಿಂದ ಪೂರ್ವಾರ್ಧದಲ್ಲಿ ಜೀವನೂ, ಉತ್ತರಾರ್ಧದಲ್ಲಿ ಪರಮಾತ್ಮನೂ ಹೇಳಲ್ಪಡುತ್ತಾರೆ ಎಂದು ಸಿದ್ಧವಾಗುತ್ತದೆ. ಪೂರ್ವಾರ್ಧದಲ್ಲಿ ಹೇಳಿದ ವಿಶೇಷಣಗಳಿಗೂ, ಉತ್ತರಾರ್ಧದಲ್ಲಿ ಹೇಳಿದ ವಿಶೇಷಣಗಳಿಗೂ ವಿರೋಧ ವಿರುವುದರಿಂದ ಪೂರ್ವಾರ್ಧದಲ್ಲಿ ಹೇಳಿದ ವ್ಯಕ್ತಿಯೂ, ಉತ್ತರಾರ್ಧದಲ್ಲಿ ಹೇಳಿದ ವ್ಯಕ್ತಿಯೂ ಭಿನ್ನ ಭಿನ್ನರೆಂದು ಸಿದ್ಧವಾಗುತ್ತದೆ.

**ಸ ಚ ಜನ್ಮಾದಿದೂರತ್ವಾತ್ ಸದಾ ನಿದ್ರೋಜ್ಝಿತತ್ವತಃ ।**
**ಅಸ್ವಪ್ನತ್ವಾದಮಾಯತ್ವಾದ್ ದೇವೋ ನಾರಾಯಣೋ ಭವೇತ್ ॥ ೮೪೦ ॥**

**ಅರ್ಥ–** ಸ ಚ= ಆ ಉತ್ತರಾರ್ಧದಲ್ಲಿ ಹೇಳಲ್ಪಟ್ಟವನಾದರೂ, ಜನ್ಮಾದಿದೂರತ್ವಾತ್= ಜನ್ಮಾದಿ ರಹಿತನಾದುದರಿಂದ, ಸದಾ ನಿದ್ರೋಜ್ಝಿತತ್ವತಃ= ಸರ್ವಕಾಲದಲ್ಲಿಯೂ ನಿದ್ರಾರಹಿತನಾದ್ದರಿಂದ, ಅಸ್ವಪ್ನತ್ವಾತ್= ಸ್ವಪ್ನರಹಿತನಾದುದರಿಂದ, ಅಮಾಯತ್ವಾತ್= ಮಾಯಾರಹಿತನಾದುದರಿಂದ, ದೇವಃ= ದೇವನಾದ, ನಾರಾಯಣಃ ಭವೇತ್= ನಾರಾಯಣನೇ ಆಗಿರುತ್ತಾನೆ.

**ಅನುವಾದ– ಆ ಉತ್ತರಾರ್ಧದಲ್ಲಿ ಹೇಳಿದ ಪುರುಷನಾದರೂ ಜನ್ಮಾದಿರಹಿತ-ನಾದುದರಿಂದ, ಸದಾ ನಿದ್ರಾರಹಿತನಾದುದರಿಂದ, ಸ್ವಪ್ನರಹಿತನಾದುದರಿಂದ, ಮಾಯಾ ವಶನಲ್ಲವಾದುದರಿಂದ ದೇವನಾದ ನಾರಾಯಣನೇ ಆಗುತ್ತಾನೆ.**

**ಭಾವವಿಲಾಸಿನೀ– ಸಃ ಉತ್ತರಾರ್ಧೋಕ್ತಃ । ದೇವಪದೇನ ಆದಿತ್ಯಾಋಭವೋಽಸ್ವಪ್ನಾ ಇತಿ ದೇವಪರ್ಯಾಯಾಸ್ವಪ್ನಪದಮಹಿಮ್ನಾ ನಾರಾಯಣ ಏವಾತ್ರಾಭಿಧೀಯತ ಇತಿ ಸೂಚಯತಿ। ವಿಶಿಷ್ಯ ಪೂರ್ವಾರ್ಧೋಕ್ತಸ್ಯೈವ ಮಾಯಿಕತ್ವೋಕ್ತ್ಯಾ ತದ್ವಿರುದ್ಧಸ್ಯೋತ್ತರಾರ್ಧೋಕ್ತ-ಸ್ಯಾರ್ಥಾದಮಾಯತ್ವಮಪಿ ಸಿದ್ಧಮಿತಿ ಭಾವೇನೋಕ್ತಮ್ । ಅಮಾಯತ್ವಾದಿತಿ । ಅನ್ಯಥಾಽ-ತ್ರೋಕ್ತಾನಿದ್ರತ್ವಸ್ಯ ವ್ಯಾಹತತ್ವಾದಿತಿ ಭಾವಃ ॥ ೮೪೦ ॥**

**ವಿವರಣೆ–** ಮಂತ್ರದಲ್ಲಿ ಅಸ್ವಪ್ನ ಎಂಬ ಪದವಿದೆ. ಅಸ್ವಪ್ನ ಪದವು ದೇವಪದ ಪರ್ಯಾಯವೆಂದು ಆದಿತ್ಯಾಋಭವೋ ಅಸ್ವಪ್ನಾಃ ಎಂಬ ಕೋಶವು ಹೇಳುತ್ತದೆ. ಆದ್ದರಿಂದ ಉತ್ತರಾರ್ಧದಲ್ಲಿ ಹೇಳಿದವನು ದೇವನಾದ ನಾರಾಯಣನೇ ಆಗಬೇಕು. ಪೂರ್ವಾರ್ಧದಲ್ಲಿ ಮಾಯಾವಶನನ್ನು ಹೇಳಿ ಉತ್ತರಾರ್ಧದಲ್ಲಿ ಪೂರ್ವಾರ್ಧದಲ್ಲಿ ಹೇಳಿದ ವಿಶೇಷಣಗಳಿಗಿಂತ ವಿರುದ್ಧವಾದ ವಿಶೇಷಣಗಳನ್ನೇ ಹೇಳಿರುವುದರಿಂದ ಆ ದೇವನು ಮಾಯಾರಹಿತನಾಗಬೇಕು, ಅವನೇ ಮಾಯಾರಹಿತನಾದ ನಾರಾಯಣ ಎಂದು ಅಭಿಪ್ರಾಯ.

**ಅನಾದಿತೋಽಪಿ ಬದ್ಧಸ್ಯ ಸದಾ ಬಂಧೋಜ್ಝಿತಸ್ಯ ಚ ।**
**ಭವೇದ್ ಭೇದೋ ಯತಸ್ತಸ್ಮಾತ್ ಸೋಽದ್ವೈತೋ ದ್ವಂದ್ವವರ್ಜನಾತ್ ॥೮೪೧॥**

**ಅರ್ಥ–** ಯತಃ= ಯಾವ ಕಾರಣದಿಂದ, ಅನಾದಿತೋಽಪಿ ಬದ್ಧಸ್ಯ= ಅನಾದಿಕಾಲದಿಂದಲೂ ಬದ್ಧನಾದವನಿಗೂ, ಚ= ಮತ್ತು, ಸದಾ ಬಂಧೋಜ್ಝಿತಸ್ಯ= ಸರ್ವಕಾಲದಲ್ಲೂ ಬಂಧರಹಿತನಾದವನಿಗೂ, ಭೇದಃ ಭವೇತ್= ಭೇದವೇ ಇರುತ್ತದೆಯೋ, ತಸ್ಮಾತ್= ಆ ಕಾರಣದಿಂದ, ಸಃ= ಅವನು, ದ್ವಂದ್ವವರ್ಜನಾತ್= ದ್ವಂದ್ವವರ್ಜಿತ-ನಾದುದರಿಂದ, ಅದ್ವೈತಃ= ಅದ್ವೈತಪದವಾಚ್ಯನಾಗುತ್ತಾನೆ.

**ಅನುವಾದ–** ಯಾವ ಕಾರಣದಿಂದ ಅನಾದಿಕಾಲದಿಂದ ಬದ್ಧನಾದ ಜೀವನಿಗೂ ಮತ್ತು ಸರ್ವದಾ ಬಂಧರಹಿತನಾದ ಪರಮಾತ್ಮನಿಗೂ ಭೇದವೇ ಇರುತ್ತದೆಯೋ ಆ ಕಾರಣದಿಂದ ಅವನು ದ್ವಂದ್ವವರ್ಜಿತನಾದುದರಿಂದಲೇ ಅದ್ವೈತಪದವಾಚ್ಯನೆಂದು ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ಪೂರ್ವಾರ್ಧೇ ಸ್ಪಷ್ಟಂ ಬದ್ಧತ್ವೋಕ್ತ್ಯೋತ್ತರಾರ್ಧೇ ಸಾಮಾನ್ಯತೋ ನಿದ್ರಾ-ಭಾವಾದಿವಾಚಕನಿದ್ರಾದಿಪದೈರ್ನಿತ್ಯಮುಕ್ತತ್ವಸ್ಯ ಲಾಭಾತ್ । ಅನಾದಿಕಾಲಬದ್ಧಸ್ಯ ಸದಾ ಬಂಧೋಜ್ಝಿತಸ್ಯ ಚೇತ್ಯುಕ್ತಮ್ । ಯತೋ ಯಸ್ಮಾತ್ ವಿರುದ್ಧಧರ್ಮಾಕ್ರಾಂತತ್ವಾದಿತ್ಯರ್ಥಃ । ಸ ಉತ್ತರಾರ್ಧೋಕ್ತಃ ನಾರಾಯಣಃ । ಅದ್ವೈತಃ ದ್ವಂದ್ವಸಮಾನಾರ್ಥಕ ದ್ವೈತಶಬ್ದೋಕ್ತ-ಶೀತೋಷ್ಣಾದಿ ದ್ವಂದ್ವವರ್ಜನಾದೇವಾದ್ವೈತ ಪದವಾಚ್ಯಃ ನತು ಭೇದಾಭಾವಾತ್ । ತಥಾ ಸತ್ಯುಕ್ತವಿರುದ್ಧ ಧರ್ಮವಿರೋಧಾದಿತಿ ಭಾವಃ ॥ ೮೪೧ ॥

**ವಿವರಣೆ–** ಪೂರ್ವಾರ್ಧದಲ್ಲಿ ಸ್ಪಷ್ಟವಾಗಿ ಬದ್ಧತ್ವವನ್ನು ಹೇಳಿ ಉತ್ತರಾರ್ಧದಲ್ಲಿ ನಿದ್ರಾಭಾವಾದಿಗಳನ್ನು ಹೇಳಿದಾಗ ಬದ್ಧರಿಗೆ ಇರುವ ನಿದ್ರಾಭಾವಕ್ಕಿಂತ ವಿಲಕ್ಷಣವಾದ ನಿದ್ರಾಭಾವವೇ ಎಂದರೆ ಸಾರ್ವಕಾಲಿಕ ನಿದ್ರಾಭಾವವೇ ಆದರಂತೆ ಸಾರ್ವಕಾಲಿಕ ಸ್ವಪ್ನಾಭಾವವೇ ಸಿದ್ಧವಾಗುತ್ತದೆ. ಅನಾದಿಕಾಲದಿಂದ ಬದ್ಧನಾದವನಿಗೂ ಮತ್ತು ಅನಾದಿಕಾಲದಿಂದ ಮುಕ್ತನಾದವನಿಗೂ ವಿರುದ್ಧ ಧರ್ಮಗಳು ಇರುವ ಪ್ರಯುಕ್ತ ಭೇದವೇ ಸಿದ್ಧವಾಗುವುದರಿಂದ ಅದ್ವೈತ ಎಂಬ ಪದವು ಭೇದವನ್ನು ನಿಷೇಧ ಮಾಡಬಾರದು. ಅದನ್ನು ಬಿಟ್ಟು ಶೀತೋಷ್ಣಾದಿ ದ್ವಂದ್ವವನ್ನು ನಿಷೇಧ ಮಾಡಬೇಕು ಎಂದು ಅಭಿಪ್ರಾಯ.

**ಯೋ ಬೋದ್ಧಾ ನ ಸ ಬೋಧ್ಯೋ ಹಿ ಕರ್ತೃಕರ್ಮವಿರೋಧತಃ ।**
**ಅತಃ ಪೂರ್ವಾರ್ಧಮಧ್ಯಸ್ಥೋ ನೋತ್ತರಾರ್ಧಗತೋಪಿ ತೇ ।**
**ಕರ್ತೃಕರ್ಮವಿರೋಧಾಖ್ಯಸರ್ಪಸ್ತೇ ಹ್ಯಪ್ರತಿಕ್ರಿಯಃ ॥ ೮೪೨ ॥**

**ಅರ್ಥ–** ಯಃ ಬೋದ್ಧಾ= ಯಾವನು ತಿಳಿಯುವವನೋ, ಸಃ= ಅವನು, ಬೋಧ್ಯೋ ನ ಹಿ= ತಿಳಿಯಲ್ಪಡುವವನಲ್ಲವಷ್ಟೇ ಏಕೆಂದರೆ, ಕರ್ತೃಕರ್ಮವಿರೋಧತಃ= ಕರ್ತೃಕರ್ಮ ವಿರೋಧವು ಉಂಟಾಗುತ್ತದೆ, ಅತಃ= ಆದ್ದರಿಂದ, ತೇ= ನಿನ್ನ ಮತದಂತೆಯೇ, ಪೂರ್ವಾರ್ಧಮಧ್ಯಸ್ಥಃ= ಪೂರ್ವಾರ್ಧಮಧ್ಯದಲ್ಲಿ ಹೇಳಲ್ಪಟ್ಟ ಜೀವನು, ಉತ್ತರಾರ್ಧ ಗತೋಪಿ ನ= ಉತ್ತರಾರ್ಧದಲ್ಲಿ ಹೇಳಲ್ಪಡುವುದಿಲ್ಲ, ತೇ= ನಿನಗೆ, ಕರ್ತೃಕರ್ಮ ವಿರೋಧಾಖ್ಯಸರ್ಪಃ= ಕರ್ತೃಕರ್ಮವಿರೋಧವೆಂಬ ಸರ್ಪವು, ಅಪ್ರತಿಕ್ರಿಯಃ ಹಿ= ಪರಿಹಾರ ಮಾಡಲು ಅಶಕ್ಯವಾದುದಷ್ಟೇ?

**ಅನುವಾದ–** ಕರ್ತೃಕರ್ಮವಿರೋಧವು ಉಂಟಾಗುವುದರಿಂದ ಯಾವನು ಬೋದ್ಧ್ರುವಾಗುತ್ತಾನೆಯೋ ಅವನು ಬೋಧ್ಯನಾಗುವುದಿಲ್ಲ. ಆದ್ದರಿಂದ ನಿನ್ನ

ಮತದಂತೆಯೇ ಪೂರ್ವಾರ್ಧದಲ್ಲಿ ಹೇಳಿದ ವ್ಯಕ್ತಿಯು ಉತ್ತರಾರ್ಧದಲ್ಲಿ ಹೇಳಲ್ಪಡುವುದಿಲ್ಲ. ಕರ್ತೃ ಕರ್ಮ ವಿರೋಧವೆಂಬ ಸರ್ಪದ ವಿಷಕ್ಕೆ ನಿನ್ನ ಬಳಿ ಯಾವ ಚಿಕಿತ್ಸೆಯೂ ಇಲ್ಲವಷ್ಟೇ?

**ಭಾವವಿಲಾಸಿನೀ–** ಕಿಂಚ ತವ ಮತೇ ಕರ್ತೃಕರ್ಮಭಾವವಿರೋಧ್ಯೈನ್ಯೈಕಸ್ಯೈವ ಬೋಧ್ಯತ್ವ-ಬೋದ್ಧೃತ್ವಾಯೋಗಾದಪ್ಯದ್ವೈತಪದಸ್ಯಾಸ್ಮದುಕ್ತ ಏವಾರ್ಥೋ ವಕ್ತವ್ಯೋ ನತು ಸಾಕ್ಷಾದೈಕ್ಯ-ಮೇವೇತ್ಯಾಹ – **ಯೋ ಬೋದ್ಧೇತಿ ॥ ತೇ ಮತೇ ॥ ೮೪೨ ॥**

**ವಿವರಣೆ–** ಅದ್ವೈತಿಗಳು ಒಂದು ಕ್ರಿಯೆಯಲ್ಲಿ ಒಂದೇ ವಸ್ತುವಿಗೆ ಕರ್ತೃತ್ವ ಮತ್ತು ಕರ್ಮತ್ವವು ಬರುವುದಿಲ್ಲವೆಂದು ಹೇಳುತ್ತಾರೆ. ಇಲ್ಲಿ ಜ್ಞಾನವೆಂಬ ಒಂದು ಕ್ರಿಯೆಯಲ್ಲಿ ಜೀವನು ಕರ್ತೃ ಎಂದೂ ಪರಮಾತ್ಮನು ಕರ್ಮವೆಂದೂ ಹೇಳಲ್ಪಡುತ್ತದೆ. ಆದ್ದರಿಂದ ಒಂದು ಕ್ರಿಯೆಯಲ್ಲಿ ಕರ್ತೃಕರ್ಮಗಳು ಒಂದೇ ಆಗಲು ಸಾಧ್ಯವಿಲ್ಲವಾದ್ದರಿಂದ, ಇಲ್ಲಿರುವ ಅದ್ವೈತ ಶಬ್ದವು ಭೇದವನ್ನು ನಿಷೇಧಿಸುವುದಿಲ್ಲ ಎಂದು ಅಭಿಪ್ರಾಯ.

**ಬೋಧ್ಯಬ್ರಹ್ಮೈಕ್ಯವಾದಾಸ್ತೇ ಬೋದ್ಧೃತ್ವಂ ತ್ಯಾಜಯಂತಿ ಹಿ ।**
**ಅತೋಽದ್ವೈತಪದಂ ಚೈತನ್ನ ಜೀವೈಕ್ಯಪರಂ ತವ ॥ ೮೪೩ ॥**

**ಅರ್ಥ–** ಬೋಧ್ಯಬ್ರಹ್ಮೈಕ್ಯವಾದಾಃ= ಬೋಧ್ಯನಾದ ಬ್ರಹ್ಮನಿಂದ ಜೀವನಿಗೆ ಐಕ್ಯವಿದೆ ಎಂಬ ನಿನ್ನ ವಾದಗಳು, ತೇ= ನಿನಗೆ, ಬೋದ್ಧೃತ್ವಂ= ಶಾಸ್ತ್ರಜ್ಞತ್ವವನ್ನೇ, ತ್ಯಾಜಯಂತಿ ಹಿ= ದೂರ ಮಾಡುತ್ತವಷ್ಟೇ, ಅತಃ= ಆ ಕಾರಣದಿಂದ, ಏತದ್ ಅದ್ವೈತಪದಂ ಚ= ಈ ಅದ್ವೈತ ಪದವೂ ಸಹ, ತವ= ನಿನ್ನ ರೀತಿಯಿಂದಲೇ, ಜೀವೈಕ್ಯಪರಂ ನ= ಜೀವೈಕ್ಯದಲ್ಲಿ ತಾತ್ಪರ್ಯವುಳ್ಳದ್ದಲ್ಲ.

**ಅನುವಾದ–** ಬೋಧ್ಯನಾದ ಬ್ರಹ್ಮನಿಂದ ಜೀವನಿಗೆ ಐಕ್ಯವನ್ನು ಹೇಳುವ ನಿನ್ನ ವಾದಗಳು ನಿನಗೆ ಶಾಸ್ತ್ರಜ್ಞತ್ವವೇ ಇಲ್ಲವೆಂದು ತೋರಿಸುತ್ತದೆ. ಆದ್ದರಿಂದ ಇಲ್ಲಿರುವ ಈ ಅದ್ವೈತ ಪದವು ನಿನಗೆ ಅಭಿಪ್ರೇತವಾದ ಜೀವೈಕ್ಯದಲ್ಲಿ ತಾತ್ಪರ್ಯವುಳ್ಳದ್ದಲ್ಲ.

**ಭಾವವಿಲಾಸಿನೀ–** ಇಮಂ ನ್ಯಾಯಮನ್ಯತ್ರಾಪ್ಯುಪದಿಶತಿ – **ಬೋಧ್ಯೇತಿ ॥** ಬ್ರಹ್ಮಾಹಮಸ್ಮೀ-ತ್ಯಾದ್ಯೈಕ್ಯವಾಕ್ಯೇಷ್ವಪಿ ಬೋಧ್ಯೇನ ಬ್ರಹ್ಮಣಾ ಬೋದ್ಧುರಪರೋಕ್ಷತೋ ಜ್ಞಾತುರ್ಜೀವಸ್ಯ ಯೇ ಐಕ್ಯವಾದಾಃ ತೇ ಸರ್ವೇಽಪಿ ತೇ ತವ ಬೋದ್ಧೃತ್ವಂ ಶಾಸ್ತ್ರಸ್ಯ ಪೂರ್ವೋತ್ತರಾರ್ಥವೇತ್ತೃತ್ವಂ ತ್ಯಾಜಯಂತಿ ಹೀತಿ ಸಂಬಂಧಃ। ಕ್ವಚಿಚ್ಛಾಸ್ತ್ರಕೋಣೇ ಕರ್ತೃಕರ್ಮಭಾವಸ್ಯೈಕತ್ರಾಯೋಗಂ ವದಸಿ ಕ್ವಚಿಚ್ಚ ತಾದೃಶಯೋರೇವ ಜೀವಬ್ರಹ್ಮಣೋರೈಕ್ಯಂ ವದಸಿ । ಅತಃ ಪೂರ್ವೋತ್ತರ-ವಿರೋಧಾದೈಕ್ಯಮೇಕಸ್ಮಿನ್ನಪಿ ವಾಕ್ಯೇ ನ ವಕ್ತುಂ ಶಕ್ಯಮ್ । ಕಿಂತು ವಿವೇಕೀ ಚೇತ್ ಅಸ್ಮದುಕ್ತ-ವಿಧಯೈವ ಸಕಲೈಕ್ಯವಾಕ್ಯಾನಾಮಪ್ಯರ್ಥಂ ವದೇತಿ ಭಾವಃ । ಅತಃ ಕರ್ತೃಕರ್ಮಭಾವ-ವಿರೋಧಾತ್ ॥ ೮೪೩ ॥

**ವಿವರಣೆ–** ಶಾಸ್ತ್ರದ ಒಂದು ಮೂಲೆಯಲ್ಲಿ ಕರ್ತೃಕರ್ಮವಿರೋಧವನ್ನು ಹೇಳಿ, ಕರ್ತೃ ಕರ್ಮಗಳಿಗೆ ಐಕ್ಯವು ಕೂಡುವುದಿಲ್ಲ ಎಂದು ಹೇಳುವ ನೀನು ಇಲ್ಲಿ ಬೋಧನ ರೂಪ ಕ್ರಿಯೆಯಲ್ಲಿ ಕರ್ತೃಕರ್ಮ ರೂಪವಾದ ಜೀವಬ್ರಹ್ಮರಿಗೆ ಐಕ್ಯವನ್ನು ಹೇಳಿದರೆ ಪೂರ್ವೋತ್ತರ ವಿರೋಧವು ಬರುವುದರಿಂದ ನಿನಗೆ ಶಾಸ್ತ್ರಜ್ಞತ್ವವೇ ಇಲ್ಲವೆಂದಾಗುತ್ತದೆ. ಇದರಂತೆ ಬ್ರಹ್ಮಾಹಮಸ್ಮಿ ಮೊದಲಾದ ಐಕ್ಯವಾಕ್ಯಗಳಲ್ಲಿಯೂ ಸಹ ಬೋದ್ಧೃ ಮತ್ತು ಬೋಧ್ಯಗಳ ಭೇದವೇ ತಿಳಿಯುವುದರಿಂದ ಅಲ್ಲಿಯೂ ಸಹ ಕರ್ತೃ ಕರ್ಮವಿರೋಧವು ಬರುವ ಕಾರಣ ಐಕ್ಯವನ್ನು ಹೇಳಲು ಸಾಧ್ಯವಿಲ್ಲವೆಂದು ಈ ನ್ಯಾಯವನ್ನು ಅಲ್ಲಿಯೂ ಅತಿದೇಶ ಮಾಡಬೇಕು. ಆದ್ದರಿಂದ ವಿವೇಕಿಯಾದರೆ ನಾವು ಹೇಳಿದ ರೀತಿಯಲ್ಲಿಯೇ ಐಕ್ಯವಾಕ್ಯಗಳಿಗೆ ಯೋಜನೆಯನ್ನು ಮಾಡು ಎಂದು ಅಭಿಪ್ರಾಯ.

**ಸದಾ ನಿದ್ರಾಸ್ವಪ್ನಜನ್ಮಶೂನ್ಯಾಸ್ತತ್ಪದವಾಚ್ಯತಾಂ ।**
**ಅರ್ಹಂತ್ಯಸ್ವಪ್ನನಾಮ್ನೋಕ್ತಃ ಕಿಂ ಸುಪ್ತೇರುತ್ಥಿತಃ ಪಶುಃ ॥ ೮೪೪ ॥**

**ಅರ್ಥ–** ಸದಾ= ಯಾವಾಗಲೂ, ನಿದ್ರಾಸ್ವಪ್ನಜನ್ಮಶೂನ್ಯಾಃ= ನಿದ್ರಾ, ಸ್ವಪ್ನ ಮತ್ತು ಜನ್ಮಗಳಿಂದ ರಹಿತನಾದವರು, ತತ್ಪದವಾಚ್ಯತಾಂ= ಅನಿದ್ರ, ಅಸ್ವಪ್ನ ಮತ್ತು ಅಜ ಶಬ್ದವಾಚ್ಯತ್ವವನ್ನು, ಅರ್ಹಂತಿ= ಹೊಂದಲು ಅರ್ಹರಾಗಿರುತ್ತಾರೆ, ಸುಪ್ತೇರುತ್ಥಿತಃ= ಸುಪ್ತಿಯಿಂದ ಎದ್ದ, ಪಶುಃ= ಪಶುವು, ಅಸ್ವಪ್ನನಾಮ್ನೋಕ್ತಃ ಕಿಂ= ಅಸ್ವಪ್ನಶಬ್ದದಿಂದ ಹೇಳಲ್ಪಡುತ್ತದೆಯೇ?

**ಅನುವಾದ–** ಸದಾ ನಿದ್ರಾರಹಿತರಾದವರು, ಸದಾ ಸ್ವಪ್ನರಹಿತರಾದವರು, ಸದಾ ಜನ್ಮರಹಿತರಾದವರು ಆ ಪದಗಳಿಂದ ಎಂದರೆ ಅನಿದ್ರ, ಅಸ್ವಪ್ನ ಮತ್ತು ಅಜ ಎಂಬ ಪದದಿಂದ ವಾಚ್ಯರಾಗಲು ಯೋಗ್ಯರಾಗುತ್ತಾರೆ. ಸುಪ್ತಿಯಿಂದ ಎದ್ದ ಪಶುವು ಅಸ್ವಪ್ನ ಪದದಿಂದ ಹೇಳಲ್ಪಡುತ್ತದೆಯೇ?

**ಭಾವವಿಲಾಸಿನೀ–** ಪೂರ್ವಂ ಕಾಲವಿಶೇಷಾನುಕ್ತೇಃ ಅಜಾನಿದ್ರಾದಿಪದಾನಾಂ ಸರ್ವದಾ ಜನ್ಮನಿದ್ರಾದ್ಯಭಾವಾರ್ಥಕತ್ವಮುಕ್ತಮ್ । ಇದಾನೀಂ ಯುಕ್ತ್ಯಂತರೇಣಾಪಿ ತಮೇವಾರ್ಥ-ಮುಪಪಾದಯತಿ – **ಸದೇತಿ** ॥ ಸುಪ್ತೇರುತ್ಥಿತಃ ಪಶುರಸ್ವಪ್ನನಾಮ್ನಾ ಉಕ್ತಃ ಕಿಂ । ನೈವೋಕ್ತಃ। ಕಿಂತು ಸದಾಸ್ವಪ್ನವರ್ಜಿತಾ ದೇವಾ ಏವ ತತ್ಪದವಾಚ್ಯಾಃ । ಏವಂಚ ತತ್‌ಪ್ರಾಯ-ಪಠಿತಾಜಾನಿದ್ರಾದಿಪದಾನಾಮಪಿ ಸಾರ್ವಕಾಲಿಕಜನ್ಮನಿದ್ರಾದ್ಯಭಾವ ಏವಾರ್ಥೋ ವಕ್ತವ್ಯಃ । ತಸ್ಮಾತ್ ಬೋದ್ಧೃಬೋಧ್ಯತ್ವ ವಿರೋಧವದಯಮಪಿ ವಿರೋಧೋಽಪರಿಹಾರ್ಯ ಏವೇತಿ ಭಾವಃ ॥ ೮೪೪ ॥

**ವಿವರಣೆ–** ಹಿಂದಿನ ಶ್ಲೋಕದಲ್ಲಿ ಅಜ, ಅನಿದ್ರ ಮುಂತಾದ ಶಬ್ದಗಳಿಗೆ ಕಾಲವಿಶೇಷವನ್ನು ಹೇಳದಿರುವುದರಿಂದ ಸರ್ವದಾ ಜನ್ಮರಾಹಿತ್ಯವು ಸಿದ್ಧವಾಗುತ್ತದೆ

ಎಂದು ಹೇಳಿದರು. ಈಗ ಇನ್ನೊಂದು ಯುಕ್ತಿಯಿಂದ ಸಾರ್ವಕಾಲೀನವಾದ ನಿದ್ರಾದ್ಯಭಾವವು ಸಿದ್ಧವಾಗುವುದೆಂದು ಹೇಳುತ್ತಾರೆ. ಉತ್ತರಾರ್ಧದಲ್ಲಿ ಅಸ್ವಪ್ನ ಶಬ್ದವಿದೆ. ಅಸ್ವಪ್ನ ಪದದಿಂದ ಪ್ರಪಂಚದಲ್ಲಿ ಯಾರೂ ಸ್ವಪ್ನದಿಂದ ಎದ್ದ ಒಂದು ಪಶುವನ್ನು ಹೇಳುವುದಿಲ್ಲ. ಮತ್ತೇನೆಂದರೆ ಯಾವಾಗಲೂ ಸ್ವಪ್ನರಹಿತರಾದ ದೇವತೆಗಳನ್ನೇ ಹೇಳುತ್ತಾರೆ. ಕೋಶವೂ ಅದರಂತೆಯೇ ಇದೆ. ಅಸ್ವಪ್ನ ಶಬ್ದಕ್ಕೆ ಸದಾ ಸ್ವಪ್ನರಹಿತ ಎಂದು ಅರ್ಥವಾದಂತೆ, ಅದರ ಜೊತೆಯಲ್ಲಿ ಪಠಿತವಾದ ಅನಿದ್ರ ಮತ್ತು ಅಜ ಶಬ್ದಗಳಿಗೂ ಸದಾ ನಿದ್ರಾರಹಿತ ಮತ್ತು ಸದಾ ಜನ್ಮರಹಿತ ಎಂದೇ ಅರ್ಥವನ್ನು ಮಾಡಬೇಕು. ಆದ್ದರಿಂದ ಬೋದ್ಧೃ ಬೋಧ್ಯಗಳಿಗೆ ವಿರೋಧವಿರುವಂತೆ ಸಾರ್ವಕಾಲಿಕವಾದ ಸ್ವಪ್ನಾದ್ಯಭಾವವುಳ್ಳ ಚೇತನಕ್ಕೂ ಮತ್ತು ಆಗಾಗ್ಗೆ ಸ್ವಪ್ನವುಳ್ಳ ಚೇತನಕ್ಕೂ ವಿರೋಧವು ಇದ್ದೇ ಇದೆ. ಆದ್ದರಿಂದ ಐಕ್ಯವನ್ನು ಹೇಳಲು ಸಾಧ್ಯವಿಲ್ಲ ಎಂದು ಅಭಿಪ್ರಾಯ.

**ಬೋಧ್ಯಂ ವಸ್ತು ಪ್ರಶಂಸಂತೀ ಶ್ರುತಿರೇತತ್ಪರೈವ ಸಾ ।**
**ನಾಮುಖ್ಯಾರ್ಥೇ ಬಲಾನ್ನೇಯಾ ಮುಖ್ಯಾರ್ಥಂ ಕಃ ಪರಿತ್ಯಜೇತ್ ॥ ೮೪೫ ॥**

**ಅರ್ಥ–** ಬೋಧ್ಯಂ ವಸ್ತು= ಬೋಧ್ಯವಾದ ವಸ್ತುವನ್ನು, ಪ್ರಶಂಸಂತೀ= ಪ್ರಶಂಸೆ ಮಾಡುವ, ಸಾ ಶ್ರುತಿಃ= ಆ ಶ್ರುತಿಯು, ಏತತ್ಪರೈವ= ಈ ಅರ್ಥದಲ್ಲಿಯೇ ತಾತ್ಪರ್ಯ ವುಳ್ಳದ್ದಾಗಿದೆ, ಅಮುಖ್ಯಾರ್ಥೇ= ಅಮುಖ್ಯಾರ್ಥದಲ್ಲಿ, ಬಲಾತ್= ಬಲಾತ್ಕಾರದಿಂದ, ನ ನೇಯಾ= ಅದನ್ನು ತೆಗೆದುಕೊಂಡು ಹೋಗಬಾರದು, ಮುಖ್ಯಾರ್ಥಂ= ಮುಖ್ಯಾರ್ಥವನ್ನು, ಕಃ= ಯಾವನು, ಪರಿತ್ಯಜೇತ್= ಪರಿತ್ಯಜಿಸುತ್ತಾನೆ.

**ಅನುವಾದ–** ಬೋಧ್ಯವಾದ ವಸ್ತುವನ್ನು ಪ್ರಶಂಸೆ ಮಾಡಲು ಹೊರಟಿರುವ ಆ ಶ್ರುತಿಯು ಸಾರ್ವಕಾಲಿಕ ನಿದ್ರಾದ್ಯಭಾವವನ್ನೇ ಹೇಳುತ್ತದೆ. ಅಂತಹ ಶ್ರುತಿಯನ್ನು ಬಲಾತ್ಕಾರದಿಂದ ಅಮುಖ್ಯಾರ್ಥದಲ್ಲಿ ತೆಗೆದುಕೊಂಡು ಹೋಗಬಾರದು. ಮುಖ್ಯಾರ್ಥವನ್ನು ಯಾವನು ಪರಿತ್ಯಜಿಸುತ್ತಾನೆ?

**ಭಾವವಿಲಾಸಿನೀ–** ಯುಕ್ತ್ಯಂತರಂ ಚಾಹ – **ಬೋಧ್ಯಮಿತಿ ॥** ಏತತ್ಪರಾ ಸಾರ್ವಕಾಲಿಕ-ನಿದ್ರಾದ್ಯಭಾವಪರಾ । ಉಕ್ತಾರ್ಥೇ ಲೋಕಸಮ್ಮತಾರ್ಥಾಂತರ ವಿನ್ಯಾಸಂ ಕರೋತಿ – **ಮುಖ್ಯಾ-ರ್ಥಮಿತಿ ॥** ಕಾಚ ಕನಕಯೋರ್ಮಧ್ಯೇ ಯಥಾವಿವೇಕೀ ಕನಕಮೇವ ಗೃಹ್ಣಾತಿ । ಏವಂ ಮುಖ್ಯಾಮುಖ್ಯಯೋರರ್ಥಯೋರ್ಮಧ್ಯೇ ಶಬ್ದೋಽಪಿ ಬಾಧಾಭಾವೇ ಮುಖ್ಯಮೇವಾರ್ಥಂ ವದೇದಿತಿ ಭಾವಃ ॥ ೮೪೫ ॥

**ವಿವರಣೆ–** ಉತ್ತರಾರ್ಧದಲ್ಲಿ ಹೇಳಲ್ಪಟ್ಟವನು ಜೀವವ್ಯತಿರಿಕ್ತನಾದ ಪರಮಾತ್ಮನೇ ಎಂಬ ವಿಷಯದಲ್ಲಿ ಇಲ್ಲಿ ಇನ್ನೊಂದು ಯುಕ್ತಿಯನ್ನು ಹೇಳುತ್ತಾರೆ. ವೇದವು ಪರಮಾತ್ಮನನ್ನು ಪ್ರಶಂಸೆ ಮಾಡುವುದಕ್ಕೇ ಉದ್ಯುಕ್ತವಾಗಿದೆ. ಆದ್ದರಿಂದ ಅನಿದ್ರ ಎಂಬ

ಶಬ್ದದಿಂದ ತಾತ್ಕಾಲಿಕ ನಿದ್ರಾಭಾವವನ್ನು ಹೇಳಿದರೆ ಅದು ಜೀವನಿಗೂ ಸಾಧಾರಣವಾಗಿರುವುದರಿಂದ ಪರಮಾತ್ಮನನ್ನು ಪ್ರಶಂಸೆ ಮಾಡಿದಂತೆ ಆಗುವುದಿಲ್ಲ. ಸಾರ್ವಕಾಲಿಕ ನಿದ್ರಾಭಾವವನ್ನು ಹೇಳಿದರೆ ಮಾತ್ರ ಅದು ಬ್ರಹ್ಮನನ್ನು ಪ್ರಶಂಸೆ ಮಾಡಿದಂತೆ ಆಗುತ್ತದೆ. ಆದ್ದರಿಂದ ಬ್ರಹ್ಮನನ್ನು ಪ್ರಶಂಸೆ ಮಾಡಲು ಹೊರಟ ಶ್ರುತಿಯು ಸಾರ್ವಕಾಲಿಕ ನಿದ್ರಾಭಾವವನ್ನೇ ಹೇಳಬೇಕು. ಆದ್ದರಿಂದ ಸಾರ್ವಕಾಲಿಕ ನಿದ್ರಾದ್ಯಭಾವವು ಮುಖ್ಯವಾದ ಅರ್ಥ. ತಾತ್ಕಾಲಿಕ ನಿದ್ರಾದ್ಯಭಾವವು ಅಮುಖ್ಯವಾದ ಅರ್ಥ. ಮುಖ್ಯವಾದ ಅರ್ಥಕ್ಕೆ ಬಾಧವಿಲ್ಲದಿರುವಾಗ ಯಾರು ಅಮುಖ್ಯಾರ್ಥವನ್ನು ಸ್ವೀಕರಿಸುತ್ತಾರೆ? ಕಾಚ ಮತ್ತು ಸುವರ್ಣಗಳ ಮಧ್ಯೆ ವಿವೇಕಿಯಾದವನು ಸುವರ್ಣವನ್ನೇ ಸ್ವೀಕರಿಸುತ್ತಾನಷ್ಟೇ? ಅದರಂತೆ ಇಲ್ಲಿ ಮುಖ್ಯಾರ್ಥವನ್ನೇ ಸ್ವೀಕರಿಸಿ ಜೀವಬ್ರಹ್ಮರ ಭೇದವನ್ನೇ ಹೇಳಬೇಕು ಎಂದು ತಾತ್ಪರ್ಯ.

**ಭೇದಾಭಾವಾತ್ ಸ್ವರೂಪೇಷು ಸದೃಶಾಭಾವತೋಽಪಿ ವಾ ।**
**ದ್ವಂದ್ವಾಭಾವಾಚ್ಚ ಸೋಽದ್ವೈತೋ ಬೋದ್ಧುರ್ದ್ವೈತಸ್ಯ ಸಾಧನಾತ್॥ ೮೪೬ ॥**

**ಅರ್ಥ–** ಸ್ವರೂಪೇಷು= ತನ್ನ ರೂಪಗಳಲ್ಲಿ, ಭೇದಾಭಾವಾತ್= ಭೇದವಿಲ್ಲದಿರುವುದರಿಂದ, ವಾ= ಅಥವಾ, ಸದೃಶಾಭಾವತೋಽಪಿ= ಸದೃಶವಾದ ಇನ್ನೊಂದು ವಸ್ತು ಇಲ್ಲದಿರುವುದರಿಂದ, ಚ= ಮತ್ತು, ದ್ವಂದ್ವಾಭಾವಾತ್= ಶೀತೋಷ್ಣಾದಿ ದ್ವಂದ್ವವೂ ಇಲ್ಲದಿರುವುದರಿಂದ, ಸಃ= ಅವನು, ಅದ್ವೈತಃ= ಅದ್ವೈತ ಶಬ್ದವಾಚ್ಯನಾಗುತ್ತಾನೆ, ಬೋದ್ಧುರ್ದ್ವೈತಸ್ಯ= ಬೋದ್ಧುವಾದ ಜೀವನಿಂದ ಭೇದವನ್ನು, ಸಾಧನಾತ್= ಸಾಧನೆ ಮಾಡಿರುವುದರಿಂದಲೂ (ಜೀವಾಭೇದವನ್ನು ಹೇಳಿ ಅದ್ವೈತಪದವಾಚ್ಯತ್ವವನ್ನು ಹೇಳಿ ಕೂಡಿಸಲು ಬರುವುದಿಲ್ಲ).

**ಅನುವಾದ–** ಹಿಂದೆ ಹೇಳಿದ ರೀತಿಯಲ್ಲಿ ಜೀವಭೇದವನ್ನು ಸಾಧನೆ ಮಾಡಿರುವುದರಿಂದ ತನ್ನ ರೂಪಗಳಲ್ಲಿ ಭೇದವಿಲ್ಲದ ಕಾರಣದಿಂದಲಾಗಲೀ ಅಥವಾ ತನಗೆ ಸದೃಶವಾದ ವಸ್ತುವು ಇಲ್ಲವೆಂಬ ಕಾರಣದಿಂದಾಗಲೀ ಅಥವಾ ಶೀತೋಷ್ಣಾದಿ ದ್ವಂದ್ವಗಳು ಇಲ್ಲವೆಂಬ ಕಾರಣದಿಂದಾಗಲೀ ಬ್ರಹ್ಮನು ಅದ್ವೈತಶಬ್ದವಾಚ್ಯನಾಗುತ್ತಾನೆ. (ಜೀವಭೇದವಿಲ್ಲ ಎಂಬ ಕಾರಣದಿಂದಲ್ಲ. ಏಕೆಂದರೆ ಜೀವಭೇದವನ್ನು ಸಮರ್ಥನೆ ಮಾಡಿದ್ದೇವೆ).

**ಭಾವವಿಲಾಸಿನೀ–** ಪೂರ್ವೋಕ್ತಾರ್ಥೇ ಯುಕ್ತೀಃ ಸಂಕಲಯನ್ನುಪರರ್ಥದ್ವಯಂ ಚಾಹ – **ಭೇದಾಭಾವಾದಿತಿ** ॥ ಸಃ ಪರಮಾತ್ಮಾ ॥ ೮೪೬ ॥

**ವಿವರಣೆ–** ಈಗ ಅದ್ವೈತ ಶಬ್ದದ ಅರ್ಥವನ್ನು ವಿಮರ್ಶೆ ಮಾಡುತ್ತಾರೆ. ಅದ್ವೈತಶಬ್ದಕ್ಕೆ ಜೀವಭೇದರಹಿತನಾದವನು ಎಂದು ಅರ್ಥವನ್ನು ಮಾಡಲು ಸಾಧ್ಯವಿಲ್ಲ.

ಏಕೆಂದರೆ ಹಿಂದಿನ ಶ್ಲೋಕದಿಂದ ಶ್ರುತಿಯು ಜೀವಭೇದವನ್ನು ಸಮರ್ಥನೆ ಮಾಡುವ ರೀತಿಯನ್ನು ನಾವು ಉಪಪಾದನೆ ಮಾಡಿದ್ದೇವೆ. ಆದ್ದರಿಂದ ದ್ವೈತ ಎಂದರೆ ಭೇದ ಎಂಬ ಅರ್ಥವನ್ನು ಇಟ್ಟುಕೊಂಡರೂ ಅದ್ವೈತ ಶಬ್ದಕ್ಕೆ ಭೇದರಹಿತ ಎಂಬ ಅರ್ಥವು ದೊರೆಯುತ್ತದೆ. ಆಗ ತನ್ನ ರೂಪಗಳಲ್ಲಿ ಭೇದರಹಿತ ಎಂದು ಅರ್ಥ. ದ್ವೈತ ಎಂಬ ಶಬ್ದಕ್ಕೆ ದ್ವಿತೀಯ ಎಂದೂ ಅರ್ಥ. ದ್ವಿತೀಯ ಶಬ್ದವು ಯಾವಾಗಲೂ ಸದೃಶವಾದ ದ್ವಿತೀಯವನ್ನು ಹೇಳುತ್ತದೆ. ಆದ್ದರಿಂದ ಪರಮಾತ್ಮನಿಗೆ ಸದೃಶವಾದ ದ್ವಿತೀಯವಸ್ತುವು ಇಲ್ಲವಾದ ಕಾರಣ ಅವನು ಅದ್ವೈತಶಬ್ದವಾಚ್ಯನಾಗುತ್ತಾನೆ. ಶೀತೋಷ್ಣಾದಿದ್ವಂದ್ವವೂ ಸಹ ದ್ವೈತಶಬ್ದದಿಂದ ಹೇಳಲ್ಪಡುತ್ತದೆ. ಇದು 'ನಿರ್ದ್ವಂದ್ವೋ ನಿತ್ಯಸತ್ವಸ್ಥಃ' ಎಂಬ ಗೀತಾ ವಾಕ್ಯದಲ್ಲಿ ಪ್ರಸಿದ್ಧವಾಗಿದೆ. ಆದ್ದರಿಂದ ಅದ್ವೈತ ಎಂದರೆ ಶೀತೋಷ್ಣಾದಿ ದ್ವಂದ್ವವಿಲ್ಲದವನು ಎಂದೇ ಅರ್ಥ. ಆದ್ದರಿಂದ ಅದ್ವೈತಶಬ್ದವು ಬೇರೆ ಅರ್ಥವನ್ನು ಹೇಳುತ್ತದೆಯೇ ಹೊರತಾಗಿ ಜೀವಾಭೇದರೂಪವಾದ ಅರ್ಥವನ್ನು ಹೇಳುವುದಿಲ್ಲ ಎಂದು ಅಭಿಪ್ರಾಯ.

ಯಥಾಽಧನೋಽಯಮಿತ್ಯುಕ್ತಿಃ ಸ್ವಧನಂ ಪ್ರತಿಷೇಧತಿ ।
ನ ಯಾಚಿತಧನಂ ಸ್ವಸ್ಮಿನ್ ಗೇಹೇಗೇಹೇ ಧನಾನಿ ವಾ ॥ ೮೪೭ ॥

ತಥಾಽದ್ವೈತಪದಂ ವಿಷ್ಣೌ ಸ್ವದ್ವೈತಂ ಪ್ರತಿಷೇಧತಿ ।
ನ ತ್ವನ್ಯತೋ ಹರೇರ್ದ್ವೈತಂ ನಾಪ್ಯನ್ಯತ್ರಸ್ಥಿತಂ ಚ ತತ್ ॥ ೮೪೮ ॥

**ಅರ್ಥ–** ಯಥಾ= ಹೇಗೆ, ಅಧನೋಽಯಂ ಇತ್ಯುಕ್ತಿಃ= ಇವನು ನಿರ್ಧನನಾದವನು ಎಂಬ ವಾಕ್ಯವು, ಸ್ವಧನಂ ಪ್ರತಿಷೇಧತಿ= ತನ್ನ ಧನವನ್ನು ನಿರಾಕರಣೆ ಮಾಡುತ್ತದೆ, ಸ್ವಸ್ಮಿನ್= ತನ್ನಲ್ಲಿ, ಯಾಚಿತಧನಂ= ಬೇಡಿ ತಂದ ಧನವನ್ನು, ನ= ನಿಷೇಧ ಮಾಡುವುದಿಲ್ಲ, ಗೇಹೇ ಗೇಹೇ= ಮನೆ ಮನೆಗಳಲ್ಲಿ ಇರುವ, ಧನಾನಿ ವಾ= ಧನಗಳನ್ನಾಗಲೀ, ನ= ನಿಷೇಧ ಮಾಡುವುದಿಲ್ಲ, ತಥಾ= ಅದರಂತೆ, ಅದ್ವೈತಪದಂ= ಅದ್ವೈತ ಪದವು, ವಿಷ್ಣೌ= ವಿಷ್ಣುವಿನಲ್ಲಿ, ಸ್ವದ್ವೈತಂ= ತನ್ನಲ್ಲಿ ಇರುವ ಭೇದವನ್ನು, ಪ್ರತಿಷೇಧತಿ= ನಿರಾಕರಿಸುತ್ತದೆ, ಅನ್ಯತಃ= ಇನ್ನೊಂದು ವಸ್ತುವಿನಿಂದ, ಹರೇಃ= ಹರಿಗೆ ಇರುವ, ದ್ವೈತಂ= ಭೇದವನ್ನು, ನ= ನಿಷೇಧಿಸುವುದಿಲ್ಲ, ಅಪಿ= ಮತ್ತು, ಅನ್ಯತ್ರಸ್ಥಿತಂ= ಇನ್ನೊಂದು ಕಡೆ ಇರುವ, ತತ್ ಚ= ಆ ದ್ವೈತವನ್ನೂ ಸಹ, ನ= ನಿಷೇಧಿಸುವುದಿಲ್ಲ.

**ಅನುವಾದ–** ಇವನು ನಿರ್ಧನ ಎಂಬ ವಾಕ್ಯವನ್ನು ಹೇಳಿದರೆ ಅವನಲ್ಲಿ ತನ್ನ ಸ್ವಂತ ಧನವಿಲ್ಲ ಎಂದೇ ಅರ್ಥವಾಗುತ್ತದೆ ಹೊರತಾಗಿ ಅವನು ಬೇಡಿ ತಂದ ಹಣವಾಗಲೀ ಅಥವಾ ಬೇರೆ ಬೇರೆ ಮನೆಯಲ್ಲಿ ಧನವಿಲ್ಲವೆಂದಾಗಲೀ ಸಿದ್ಧವಾಗುವುದಿಲ್ಲ. ಆದ್ದರಿಂದ ಅದ್ವೈತವೆಂದು ಹೇಳಿದರೆ ಅದರಂತೆ ಅದ್ವೈತ ಎಂಬ

ಶಬ್ದವೂ ಸಹ ತನ್ನಲ್ಲಿ ಭೇದವನ್ನು ನಿರಾಕರಣೆ ಮಾಡುತ್ತದೆಯೇ ಹೊರತು ಅನ್ಯಪ್ರತಿಯೋಗಿಕವಾದ ತನ್ನಲ್ಲಿರುವ ಭೇದವನ್ನಾಗಲೀ ಅಥವಾ ಅನ್ಯನಿಷ್ಠಭೇದವನ್ನಾಗಲೀ ನಿಷೇಧ ಮಾಡುವುದಿಲ್ಲ.

**ಭಾವವಿಲಾಸಿನೀ–** ಅದ್ವೈತಶಬ್ದಸ್ಯ ಸ್ವಗತಭೇದವರ್ಜಿತತ್ವಮೇವಾರ್ಥೋ ಭವೇತ್ । ನತು ಯತ್‌ಕಿಂಚದ್ಭೇದವರ್ಜಿತತ್ವಮಿತ್ಯತ್ರ ನಿದರ್ಶನಮಾಹ – **ಯಥಾಽಧನ ಇತಿ** ॥ ಯಾಚಿತಧನಂ ಅನ್ಯಸ್ಮಾದ್ಯಾಚಿತಧನಮ್ ಸ್ವಸ್ಮಿನ್ನನಿಷೇಧತೀತಿ ಯೋಜನಾ ॥ ೮೪೭ ॥ ಅನ್ಯತೋಜೀವಾಜ್ಜಡಾಚ್ಚ । ಅನ್ಯತ್ರ ಜೀವಜಡೇಷು । ತತ್ ದ್ವೈತಮ್ ॥ ೮೪೮ ॥

**ವಿವರಣೆ–** ಅದ್ವೈತಶಬ್ದವು ಸ್ವಗತಭೇದವನ್ನು ಮಾತ್ರ ನಿಷೇಧ ಮಾಡುತ್ತದೆ ಎಂದರೆ ಸ್ವಪ್ರತಿಯೋಗಿಕ ಸ್ವಧರ್ಮಿಕ ಭೇದವನ್ನು ನಿಷೇಧಿಸುತ್ತದೆ. ಅನ್ಯಪ್ರತಿಯೋಗಿಕ ಸ್ವಧರ್ಮಿಕ ಭೇದವನ್ನು ನಿಷೇಧಿಸುವುದಿಲ್ಲ. ಇದು ಜೀವಜಡಪ್ರತಿಯೋಗಿಕವಾದ ಬ್ರಹ್ಮ ಧರ್ಮಿಕವಾದ ಭೇದ. ಇದು ಯಾಚನೆ ಮಾಡಿ ತಂದ ಧನವಿದ್ದಂತೆ. ಅಥವಾ ಅನ್ಯಧರ್ಮಿಕವಾದ ಸ್ವಪ್ರತಿಯೋಗಿಕವಾದ ಭೇದವನ್ನು ನಿರಾಕರಣೆ ಮಾಡುವುದಿಲ್ಲ. ಇವು ಜೀವಜಡಗಳಲ್ಲಿರುವ ಬ್ರಹ್ಮಪ್ರತಿಯೋಗಿಕಭೇದ. ಇದರಂತೆ ಜೀವ-ಜೀವ ಭೇದವನ್ನು, ಜೀವಾದಿ-ಜಡ ಭೇದವನ್ನು, ಜಡ-ಜೀವ ಭೇದವನ್ನು ತೆಗೆದುಕೊಳ್ಳಬಹುದು. ಇದು ಬೇರೆ ಬೇರೆ ಮನೆಗಳಲ್ಲಿರುವ ಧನದಂತೆ. ಆದ್ದರಿಂದ ಅದ್ವೈತ ಶಬ್ದವು ಸ್ವಗತ ಭೇದವನ್ನು ನಿಷೇಧಿಸುತ್ತದೆಯೇ ಹೊರತು ಜೀವ-ಜೀವ ಭೇದವನ್ನು ಎಂದೂ ನಿಷೇಧಿಸುವುದಿಲ್ಲ ಎಂದು ಲೋಕ ಪ್ರಯೋಗದ ಪರಿಶೀಲನೆಯಿಂದಲೂ ತಿಳಿದು ಬರುತ್ತದೆ ಎಂದು ಅಭಿಪ್ರಾಯ.

ಕೇವಲೋ ನಿರ್ಗುಣಃ ಸೋಽಯಂ ದೇವಃ ಪ್ರೋಕ್ತೋವಚೋಂತರೇ ।
ನಿತ್ಯಮುಕ್ತೋಽಮೃತಸ್ಯೈಷ ಸೇತುಶ್ಚೋಕ್ತಃ ಸ್ಥಲೇ ಸ್ಥಲೇ ॥ ೮೪೯ ॥

**ಅರ್ಥ–** ಸೋಯಂ ದೇವಃ= ಈ ದೇವನು, ವಚೋಂತರೇ= ಇನ್ನೊಂದು ವಾಕ್ಯದಲ್ಲಿ, ಕೇವಲೋ ನಿರ್ಗುಣಃ ಪ್ರೋಕ್ತಃ= ಕೇವಲನೆಂದು, ನಿರ್ಗುಣನೆಂದು ಹೇಳಲ್ಪಟ್ಟಿದ್ದಾನೆ, ಸ್ಥಲೇ ಸ್ಥಲೇ= ಅನೇಕ ಸ್ಥಳಗಳಲ್ಲಿ, ನಿತ್ಯಮುಕ್ತಃ= ನಿತ್ಯಮುಕ್ತನೆಂದು, ಅಮೃತಸ್ಯೈಷ ಸೇತುಶ್ಚ= ಮತ್ತು ಮೋಕ್ಷಕ್ಕೆ ಸಾಧನನೆಂದು, ಉಕ್ತಃ= ಹೇಳಲ್ಪಟ್ಟಿದ್ದಾನೆ.

**ಅನುವಾದ–** ಇಲ್ಲಿ ಹೇಳಲ್ಪಟ್ಟ ಈ ದೇವನೇ ಬೇರೆ ವಾಕ್ಯದಲ್ಲಿ ಕೇವಲನೆಂದೂ, ನಿರ್ಗುಣನೆಂದೂ ಹೇಳಲ್ಪಟ್ಟಿದ್ದಾನೆ ಮತ್ತು ಅನೇಕ ಸ್ಥಳಗಳಲ್ಲಿ ನಿತ್ಯಮುಕ್ತನೆಂದು, ಮೋಕ್ಷಕ್ಕೆ ಸಾಧನನೆಂದು ಹೇಳಲ್ಪಟ್ಟಿದ್ದಾನೆ.

**ಭಾವವಿಲಾಸಿನೀ–** ಕಿಂಚ ಏಕೋದೇವ ಇತ್ಯಾದಿ ಶ್ರುತೌ ಹರಿರ್ದೇವತಯಾ ನಿತ್ಯಮುಕ್ತತಯಾ ಚ ವರ್ಣ್ಯತೇ । ತತ್‌ಸಮಾಖ್ಯಯಾಽತ್ರಾಪಿ ಉತ್ತರಾರ್ಧೇಽಸ್ಪಷ್ಟ- ಪದೋಕ್ತೋಽಜ್ಞಾನಾಖ್ಯ-

ನಿದ್ರಾತ್ಯಂತಾಭಾವಾರ್ಥಕಾನಿದ್ರಪದೋಕ್ತಶ್ಚ ಹರಿರೇವ ಭವೇತ್ । ಜೀವಶ್ಚ ಮಾಯಾಬದ್ಧತ್ವದುಃಖಿತ್ವನರಕಿತ್ವಾದಿನಾ ಶ್ರುತ್ಯಾದೌ ಕೀರ್ತ್ಯತೇ । ತತ್ಸಮಾಖ್ಯಯಾ ಜೀವಪದಶಕ್ತ್ಯಾ ಚ ಪೂರ್ವಾರ್ಧೇ ಜೀವ ಏವೋಚ್ಯತೇ । ಏವಂ ಸತ್ಯೇವ ಹಿ ಶ್ರುತ್ಯುಕ್ತಾಬೋದ್ಧೃತಾ ಬೋಧ್ಯತಾಚ ಶೋಭತೇ ನಾನ್ಯಥಾ । ಏವಂಚ ಪ್ರತಿಪಾದ್ಯದ್ವೈತಸ್ಯೈವ ವಿದ್ಯಮಾನತ್ವಾದುತ್ತರಾರ್ಧೋಕ್ತಂ ಭಗವತೋಽದ್ವೈತತ್ವಮಪಿ ದ್ವಿಪ್ರಕಾರತಯೇತಂ ಜ್ಞಾತಂ ದ್ವೀತಂ ತಸ್ಯ ಭಾವೋ ದ್ವೈತಮಿತಿ ವ್ಯುತ್ಪತ್ತ್ಯಾ ದ್ವೈತಪದವಾಚ್ಯಮಿಥ್ಯಾಜ್ಞಾನರಾಹಿತ್ಯಾದೇವ । ಅನಿದ್ರಪದೋಕ್ತಾ ಜ್ಞಾನರಾಹಿತ್ಯೇನ ಸಹ ವಿಪರೀತಜ್ಞಾನರಾಹಿತ್ಯಸ್ಯೈವ ವಕ್ತುಂ ಯೋಗ್ಯತ್ವಾತ್ । ವಿರುದ್ಧಸ್ವಭಾವತಯಾ ಸರ್ವತ್ರ ಕಥನಾಚ್ಚ ಜೀವೇಶ್ವರ ಭೇದರೂಪದ್ವೈತಾಭಾವಮಾದಾಯನಾಸಾವದ್ವೈತ ಇತ್ಯಾಹ – **ಕೇವಲ ಇತ್ಯಾದಿನಾ ॥ ೮೪೯ ॥**

**ವಿವರಣೆ–** ಏಕೋ ದೇವಃ ಇತ್ಯಾದಿ ಕಾಠಕೋಪನಿಷತ್ತಿನ ವಾಕ್ಯದಲ್ಲಿಯೂ ಹರಿಯೇ ದೇವನೆಂದು ಮತ್ತು ನಿತ್ಯಮುಕ್ತನೆಂದು ಹೇಳಲ್ಪಟ್ಟಿದ್ದಾನೆ. ಆ ಸಮಾಖ್ಯೆಯಿಂದ ಇಲ್ಲಿಯೂ ಸಹ ಉತ್ತರಾರ್ಧದಲ್ಲಿ ಅಸ್ವಪ್ನಪದದಿಂದ ಹೇಳಲ್ಪಟ್ಟವನು ಮತ್ತು ಅಜ್ಞಾನವೆಂಬ ನಿದ್ರಾತ್ಯಂತಾಭಾವವನ್ನು ಹೇಳುವ ಅನಿದ್ರ ಪದದಿಂದ ಹೇಳಲ್ಪಟ್ಟವನು ಹರಿಯೇ ಆಗುತ್ತಾನೆ. ಜೀವರಾದರೂ ಶ್ರುತಿಗಳಲ್ಲಿ ಮಾಯಾಬದ್ಧರೆಂದು, ದುಃಖಿಗಳೆಂದು, ನರಕ ಭಾಜನರೆಂದು ಹೇಳಲ್ಪಡುತ್ತಾರೆ. ಆದ್ದರಿಂದ ಆ ಸಮಾಖ್ಯೆಯಿಂದ ಪೂರ್ವಾರ್ಧದಲ್ಲಿ ಹೇಳಲ್ಪಟ್ಟವರು ಜೀವರೆಂದು ಸಿದ್ಧವಾಗುತ್ತದೆ. ಹೀಗೆ ಅಂಗೀಕರಿಸಿದರೆ ಮಾತ್ರ ಶ್ರುತಿಯಲ್ಲಿ ಪೂರ್ವಾರ್ಧದಲ್ಲಿ ಹೇಳಿದ ಬೋದ್ಧೃತ್ವವು, ಉತ್ತರಾರ್ಧದಲ್ಲಿ ಹೇಳಿದ ಬೋಧ್ಯತ್ವವು ಉಪಪನ್ನವಾಗುತ್ತದೆ. ಹೀಗೆ ಈ ವಾಕ್ಯದಲ್ಲಿಯೇ ಪೂರ್ವಾರ್ಧ, ಉತ್ತರಾರ್ಧದಿಂದ ಪ್ರತಿಪಾದ್ಯವಾದ ವಸ್ತುವಿನಲ್ಲಿ ಭೇದವೇ ಇರುವುದರಿಂದ ಉತ್ತರಾರ್ಧದಲ್ಲಿ ಹೇಳಿದ ಅದ್ವೈತಪದವು ಮಿಥ್ಯಾಜ್ಞಾನರಾಹಿತ್ಯವನ್ನೇ ಹೇಳುತ್ತದೆ. ದ್ವೈತಶಬ್ದಕ್ಕೆ ಮಿಥ್ಯಾ ಜ್ಞಾನವೆಂಬ ಅರ್ಥವನ್ನು ವಿಷ್ಣುತತ್ತ್ವ ಟೀಕೆಯಲ್ಲಿ ಹೇಳಿದ್ದಾರೆ. ಅನಿದ್ರಪದದಿಂದ ಅಜ್ಞಾನದ ರಾಹಿತ್ಯವನ್ನು ಹೇಳಿದ ಮೇಲೆ ವಿಪರೀತಜ್ಞಾನದ ರಾಹಿತ್ಯವನ್ನು ಹೇಳುವುದು ಸಂಗತವಾಗುತ್ತದೆ. ಅದನ್ನು ಅದ್ವೈತ ಪದವು ಹೇಳುತ್ತದೆ. ಈ ರೀತಿಯಲ್ಲಿಯೂ ಅದ್ವೈತಪದವನ್ನು ಕೂಡಿಸಬೇಕೇ ಹೊರತು ಜೀವಭೇದವನ್ನು ನಿರಾಕರಣೆ ಮಾಡಿ ಅದ್ವೈತಪದವನ್ನು ಕೂಡಿಸಬಾರದು.

**ಜೀವಸ್ತು ಬದ್ಧೋ ದುಃಖೀ ಚ ಜನ್ಮಮೃತ್ಯುಜರಾವಶಃ ।**
**ಪಾತಕೀ ನಾರಕೀ ಚೈವ ಶ್ರುತ್ಯೈವೋಕ್ತಃ ಸ್ಥಲೇ ಸ್ಥಲೇ ॥ ೮೫೦ ॥**

**ಅರ್ಥ–** ಜೀವಸ್ತು= ಜೀವನಾದರೂ, ಸ್ಥಲೇ ಸ್ಥಲೇ= ಪ್ರತಿಯೊಂದು ಸ್ಥಳದಲ್ಲಿಯೂ, ಶ್ರುತ್ಯೈವ= ಶ್ರುತಿಯಿಂದಲೇ, ಬದ್ಧಃ= ಬದ್ಧನೆಂದು, ಚ ದುಃಖೀ= ಮತ್ತು ದುಃಖಿ ಎಂದು, ಜನ್ಮಮೃತ್ಯುಜರಾವಶಃ= ಜನ್ಮ ಮರಣ ಮತ್ತು ಮುಪ್ಪುಗಳಿಗೆ ವಶನಾದವನೆಂದು, ಪಾತಕೀ=

ಪಾಪಕ್ಕೆ ಆಶ್ರಯನೆಂದು, ನಾರಕೀ ಚೈವ= ಮತ್ತು ನರಕ ಭಾಜನನೆಂದು, ಉಕ್ತಃ= ಹೇಳಲ್ಪಟ್ಟಿದ್ದಾನೆ.

**ಅನುವಾದ–** **ಜೀವನಾದರೂ ಶ್ರುತಿಯಿಂದಲೇ ಅನೇಕ ಸ್ಥಳಗಳಲ್ಲಿ ಬದ್ಧನೆಂದೂ, ದುಃಖಿಯೆಂದೂ, ಜನ್ಮಮೃತ್ಯುಜರೆಗಳಿಗೆ ವಶನಾದವನೆಂದೂ ಪಾತಕವನ್ನು ಹೊಂದಿದವನೆಂದೂ, ನರಕ ಭಾಜನನೆಂದೂ ಹೇಳಲ್ಪಡುತ್ತಾನೆ.**

**ಏವಂ ವಿರುದ್ಧ ಚೈತನ್ಯದ್ವಯಂ ಭಿನ್ನಂ ಹ್ಯನಾದಿತಃ ।**
**ತಯೋರ್ನೈಕ್ಯಂ ಕದಾಪಿ ಸ್ಯಾನ್ಮುಕ್ತಃ ಸಾರೂಪ್ಯಮೇತ್ಯಸೌ ॥ ೮೫೧ ॥**

**ಅರ್ಥ–** ಏವಂ= ಈ ರೀತಿಯಲ್ಲಿ, ವಿರುದ್ಧ ಚೈತನ್ಯದ್ವಯಂ= ವಿರುದ್ಧ ಧರ್ಮವುಳ್ಳ ಎರಡು ಚೈತನ್ಯಗಳು, ಅನಾದಿತಃ= ಅನಾದಿಕಾಲದಿಂದಲೂ, ಭಿನ್ನಂ= ಭಿನ್ನವೇ ಆಗಿವೆ, ತಯೋಃ= ಆ ಎರಡು ಚೇತನಗಳಿಗೆ, ಕದಾಪಿ= ಯಾವ ಕಾಲದಲ್ಲಿಯೂ ಕೂಡ, ಐಕ್ಯಂ ನ ಸ್ಯಾತ್= ಐಕ್ಯವು ಉಂಟಾಗುವುದಿಲ್ಲ, ಮುಕ್ತಃ ಅಸೌ= ಮುಕ್ತನಾದ ಈ ಜೀವನು, ಸಾರೂಪ್ಯಂ= ಸಮಾನರೂಪವನ್ನು ಮಾತ್ರ, ಏತಿ= ಹೊಂದುತ್ತಾನೆ.

**ಅನುವಾದ–** **ಹೀಗೆ ಜೀವೇಶ್ವರ ಈ ಎರಡು ಚೇತನಗಳಿಗೂ ಅನಾದಿಕಾಲದಿಂದ ಭೇದವೇ ಇರುವುದರಿಂದ ಯಾವ ಕಾಲದಲ್ಲಿಯೂ ಅವರಿಗೆ ಐಕ್ಯವು ಉಂಟಾಗುವುದಿಲ್ಲ. ಮುಕ್ತನಾದ ಜೀವನು ಪರಮಾತ್ಮನ ಸಾದೃಶ್ಯವನ್ನು ಮಾತ್ರ ಪಡೆಯುತ್ತಾನೆ.**

**ವಿವರಣೆ–** ಶ್ರುತಿಯು 'ಯಥೋದಕಂ ಶುದ್ಧೇ ಶುದ್ಧಮಾಸಿಕ್ತಂ ತಾದೃಗೇವ ಭವತಿ । ಏವಂ ಮುನೇರ್ವಿಜಾನತ ಆತ್ಮಾ ಭವತಿ ಗೌತಮ' ಎಂದು ಹೇಳಿ ಮುಕ್ತಜೀವನು ತಾದೃಕ್= ಪರಮಾತ್ಮನ ಸದೃಶನೇ ಆಗುತ್ತಾನೆ ಎಂದೂ ಏವ ಶಬ್ದದಿಂದ ಪರಮಾತ್ಮನೇ ಆಗುವುದಿಲ್ಲ ಎಂದೂ ಅವಧಾರಣೆ ಮಾಡುತ್ತಿದೆ. ಆದ್ದರಿಂದ ಅನಾದಿಕಾಲದಿಂದಲೂ ಭೇದವಿದೆ. ಮೋಕ್ಷದಲ್ಲಿಯೂ ಭೇದವೇ ಇರುತ್ತದೆ ಎಂದು ಸಿದ್ಧವಾಗುತ್ತದೆ.

**ಪುನರ್ಜನ್ಮ ಸ್ವಪ್ನಬಂಧದುಃಖಾದ್ಯಪ್ರಿಯವರ್ಜನಾತ್ ।**
**ನಿತ್ಯಮುಕ್ತೋಽನಿತ್ಯಮುಕ್ತ ಇತಿ ತತ್ರಾಪಿ ಚಾಂತರಂ ॥ ೮೫೨ ॥**

**ಅರ್ಥ–** ಪುನರ್ಜನ್ಮ ಸ್ವಪ್ನಬಂಧದುಃಖಾದ್ಯಪ್ರಿಯವರ್ಜನಾತ್= ಪುನರ್ಜನ್ಮ, ಸ್ವಪ್ನ, ಬಂಧ, ದುಃಖ ಮೊದಲಾದ ಅನಿಷ್ಟವಾದ ಪದಾರ್ಥಗಳನ್ನು ಸದಾ ಪರಿತ್ಯಜಿಸಿರುವುದರಿಂದ, ತತ್ರಾಪಿ= ಮೋಕ್ಷದಲ್ಲಿಯೂ ಕೂಡ, ನಿತ್ಯ ಮುಕ್ತಃ ಇತಿ= ನಿತ್ಯಮುಕ್ತನಾದವನು ಮತ್ತು ಅನಿತ್ಯಮುಕ್ತನಾದವನು ಎಂದು, ಅಂತರಂ ಚ= ಭೇದವು ಇದೆ.

**ಅನುವಾದ–** ಪುನರ್ಜನ್ಮ ಸ್ವಪ್ನ ಬಂಧ ದುಃಖಾದಿಗಳಿಂದ ಯಾವಾಗಲೂ ರಹಿತನಾದವನು ಬ್ರಹ್ಮ. ಯಾವುದೋ ಒಂದು ಕಾಲದಿಂದ ಅವುಗಳಿಂದ ರಹಿತರಾದವರು ಜೀವರು ಎಂಬ ಕಾರಣದಿಂದ ಮೋಕ್ಷದಲ್ಲಿಯೂ ನಿತ್ಯಮುಕ್ತನಾದ ಹರಿಗೂ ಅನಿತ್ಯ ಮುಕ್ತರಾದ ಜೀವರಿಗೂ ಭೇದವೇ ಇದೆ.

**ಭಾವವಿಲಾಸಿನೀ–** ಕೇನ ಸಾರೂಪ್ಯಮಿತ್ಯತ ಆಹ – ಪುನರ್ಜನ್ಮೇತಿ ॥ ತತ್ರ ಮುಕ್ತೌ ॥ ೮೫೨ ॥

**ವಿವರಣೆ–** ಜೀವನು ಮುಕ್ತನಾದರೂ ಮುಕ್ತನಾದ ಮೇಲೆ ಅವನಿಗೆ ಜನ್ಮಾದಿ ದೋಷಗಳು ಇಲ್ಲ. ಅದಕ್ಕಿಂತ ಮೊದಲು ಎಲ್ಲವೂ ಇದ್ದಿತು. ಆದ್ದರಿಂದ ಈ ಮೋಕ್ಷವು ಒಂದು ದಿನ ಜನ್ಯವಾಗುವುದು ಎಂಬ ಅರ್ಥದಲ್ಲಿ ಅದು ಅನಿತ್ಯವಾದ ಮೋಕ್ಷ. ಆದ್ದರಿಂದ ಜೀವನು ಅನಿತ್ಯಮುಕ್ತ. ದೇವರಿಗೆ ಅನಾದಿ ಕಾಲದಿಂದಲೂ ಬಂಧಾದಿಗಳು ಇಲ್ಲದಿರುವುದರಿಂದ ಅವನು ನಿತ್ಯಮುಕ್ತ. ಮೋಕ್ಷದಲ್ಲಿ ಇಬ್ಬರೂ ಮುಕ್ತರೇ ಆದರೂ, ಒಬ್ಬ ನಿತ್ಯ ಮುಕ್ತ ಮತ್ತು ಇನ್ನೊಬ್ಬ ಅನಿತ್ಯಮುಕ್ತ ಎಂಬ ಭೇದವು ಮೋಕ್ಷದಲ್ಲಿಯೂ ಇದೆ. ಆದ್ದರಿಂದ ಯಾವ ಕಾಲದಲ್ಲಿಯೂ ಭೇದವನ್ನು ನಿರಾಕರಣೆ ಮಾಡಲು ಸಾಧ್ಯವಿಲ್ಲ ಎಂದು ತಾತ್ಪರ್ಯ.

ಬಂಧಾನ್ಮುಕ್ತಸ್ತು ಯೋ ಜೀವೋ ನಿತ್ಯಮುಕ್ತಃ ಕಥಂ ಹ್ಯಸೌ ।
ಅತೋ ಬೋದ್ಧೃತ್ವಶೂನ್ಯೈವ ಬೋಧ್ಯಬ್ರಹ್ಮೈಕ್ಯವಾಕ್ ತವ ॥ ೮೫೩ ॥

**ಅರ್ಥ–** ಯಃ ಜೀವಃ= ಯಾವ ಜೀವನು, ಬಂಧಾನ್ಮುಕ್ತಃ ತು= ಬಂಧದಿಂದ ಬಿಡುಗಡೆಯನ್ನು ಹೊಂದಿದ್ದಾನೆಯೋ, ಅಸೌ= ಅವನು, ಕಥಂ= ಹೇಗೆ, ನಿತ್ಯಮುಕ್ತಃ= ನಿತ್ಯಮುಕ್ತನಾಗುತ್ತಾನೆ? ಅತಃ= ಆದ್ದರಿಂದ, ತವ= ನಿನ್ನ, ಬೋಧ್ಯಬ್ರಹ್ಮೈಕ್ಯವಾಕ್= ಬೋಧ್ಯನಾದ ಬ್ರಹ್ಮನಿಂದ ಜೀವನಿಗೆ ಐಕ್ಯವನ್ನು ಹೇಳುವ ಮಾತು, ಬೋದ್ಧೃತ್ವ ಶೂನ್ಯೈವ= ವಿವೇಕ ಶೂನ್ಯವೇ ಆಗಿದೆ.

**ಅನುವಾದ–** ಜೀವನಾದರೂ ಬಂಧದಿಂದ ಒಂದು ದಿನ ಮುಕ್ತನಾದವನು. ಅವನು ಹೇಗೆ ನಿತ್ಯಮುಕ್ತನಾದ ಪರಮಾತ್ಮನೇ ಆಗುತ್ತಾನೆ? ಆದ್ದರಿಂದ ಬೋದ್ಧೃವಾದ ಜೀವನಿಗೆ ಬೋಧ್ಯನಾದ ಬ್ರಹ್ಮನ ಐಕ್ಯವನ್ನು ಹೇಳುವ ನಿನ್ನ ಮಾತು ವಿವೇಕಶೂನ್ಯವಾದುದು.

**ಭಾವವಿಲಾಸಿನೀ–** ಅತಃ ಉಕ್ತರೀತ್ಯಾ ಬ್ರಹ್ಮೈಕ್ಯಾಯೋಗಾತ್ ॥ ೮೫೩ ॥

ಯದಿ ಬ್ರಹ್ಮೈಕ್ಯಬೋದ್ಧಾ ತ್ವಂ ಕಥಮೈಕ್ಯಂ ಭವೇತ್ ತವ ।
ಯದಿ ಬ್ರಹ್ಮೈಕ್ಯಬೋದ್ಧಾ ನ ಕಥಮೈಕ್ಯಕಥಾ ತವ ॥ ೮೫೪ ॥

**ಅರ್ಥ–** ಯದಿ= ಒಂದು ಪಕ್ಷ, ತ್ವಂ= ನೀನು, ಬ್ರಹ್ಮೈಕ್ಯಬೋದ್ಧಾ= ಬ್ರಹ್ಮೈಕ್ಯವನ್ನು ತಿಳಿದಿರುವಿಯಾದರೆ, ತವ= ನಿನಗೆ, ಐಕ್ಯಂ= ಬ್ರಹ್ಮನಿಂದ ಐಕ್ಯವು, ಕಥಂ ಭವೇತ್= ಹೇಗೆ ಉಂಟಾಗುತ್ತದೆ, ಯದಿ= ಒಂದು ಪಕ್ಷ, ತ್ವಂ= ನೀನು, ಬ್ರಹ್ಮೈಕ್ಯಬೋದ್ಧಾನ= ಬ್ರಹ್ಮೈಕ್ಯವನ್ನು ತಿಳಿಯದಿದ್ದರೆ, ತವ= ನಿನ್ನ, ಐಕ್ಯ ಕಥಾ= ಜೀವ ಬ್ರಹ್ಮೈಕ್ಯವಾದವು, ಕಥಂ= ಹೇಗೆ ಕೂಡುತ್ತದೆ?

**ಅನುವಾದ–** ನೀನು ಬ್ರಹ್ಮೈಕ್ಯವನ್ನು ತಿಳಿದಿದ್ದರೆ ನಿನಗೂ ಮತ್ತು ಬ್ರಹ್ಮನಿಗೂ ಹೇಗೆ ಐಕ್ಯವುಂಟಾಗುತ್ತದೆ? ಮತ್ತು ನೀನು ಬ್ರಹ್ಮೈಕ್ಯವನ್ನು ತಿಳಿಯದಿದ್ದರೆ ಹೇಗೆ ಜೀವ ಬ್ರಹ್ಮೈಕ್ಯದ ಮಾತುಗಳನ್ನು ಆಡುತ್ತೀಯೇ?

**ಭಾವವಿಲಾಸಿನೀ–** ಅತ್ರೋಭಯತಃ ಪಾಶಾರಜ್ಜುಂ ಕರೋತಿ – ಯದೀತಿ ॥ ಬ್ರಹ್ಮಣೋ ಬೋಧ್ಯತ್ವೇನ ಬೋದ್ಧಾತ್ವಯಾ ಸಹೈಕ್ಯಾಯೋಗಾದಿತಿ ಭಾವಃ । ದ್ವಿತೀಯಪಕ್ಷೇ ಮನಸಾ ಜ್ಞಾತಸ್ಯೈವ ವಚಸಾ ವಕ್ತವ್ಯತ್ವಾದಿತಿ ಭಾವಃ ॥ ೮೫೪ ॥

**ವಿವರಣೆ–** ಜೀವಬ್ರಹ್ಮೈಕ್ಯವನ್ನು ಹೇಳುವ ಅದ್ವೈತಿಯನ್ನು ಇಲ್ಲಿ ಉಭಯ ಪಾಶಾರಜ್ಜುವಿನಿಂದ ಕಟ್ಟುತ್ತಾರೆ. ನೀನು ಬ್ರಹ್ಮೈಕ್ಯವನ್ನು ತಿಳಿದಿದ್ದರೆ ಬ್ರಹ್ಮನು ಬೋಧ್ಯ ಮತ್ತು ನೀನು ಬೋದ್ಧ ಎಂದಾಯಿತು. ಆದ್ದರಿಂದ ಬೋಧರೂಪಕ್ರಿಯೆಯಲ್ಲಿ ಬ್ರಹ್ಮನು ಕರ್ಮ, ನೀನು ಕರ್ತೃ. ಕರ್ತೃ ಕರ್ಮವಿರೋಧವಿರುವುದರಿಂದ ಜೀವಬ್ರಹ್ಮೈಕ್ಯವನ್ನು ಹೇಳಲು ಸಾಧ್ಯವಿಲ್ಲ. ನೀನೇ ಬ್ರಹ್ಮೈಕ್ಯವನ್ನು ತಿಳಿಯದಿದ್ದರೆ 'ಅರ್ಥಂ ಬುದ್ಧ್ವಾಶಬ್ದ ರಚನಾ' ಅರ್ಥವನ್ನು ತಿಳಿದು ಶಬ್ದದ ಪ್ರಯೋಗ ಎಂದು ಇರುವುದರಿಂದ, ನಿನಗೇ ತಿಳಿಯದಿರುವ ಜೀವ ಬ್ರಹ್ಮೈಕ್ಯವನ್ನು ನೀನು ಹೇಗೆ ಮಾತನಾಡುತ್ತೀಯೆ ಎಂದು ತಾತ್ಪರ್ಯ.

**ಕಿಂ ಚೈಕ್ಯಂ ಯದಿ ಮಿಥ್ಯಾ ಸ್ಯಾತ್ ತರ್ಹಿ ಭೇದಶ್ರುತೀಃ ಸತೀ ।**
**ವಿರುದ್ಧಶ್ರುತಿದೌರ್ಬಲ್ಯಾತ್ ಸ್ವಬೋಧ್ಯಂ ಬೋಧಯೇದ್ ಬಲಾತ್ ॥ ೮೫೫ ॥**

**ಅರ್ಥ–** ಕಿಂಚ= ಮತ್ತು, ಐಕ್ಯಂ= ಐಕ್ಯವು, ಯದಿ ಮಿಥ್ಯಾ ಸ್ಯಾತ್= ಒಂದು ಪಕ್ಷ ಮಿಥ್ಯೆಯಾದರೆ, ತರ್ಹಿ= ಆಗ, ಸತೀ ಭೇದಶ್ರುತೀಃ= ನಿರ್ದುಷ್ಟವಾದ ಭೇದಶ್ರುತಿಯು, ವಿರುದ್ಧ ಶ್ರುತಿ ದೌರ್ಬಲ್ಯಾತ್= ತನಗೆ ವಿರುದ್ಧವಾದ ಅರ್ಥವನ್ನು ಹೇಳುವ ಶ್ರುತಿಯು ದುರ್ಬಲವಾದ ಕಾರಣ, ಬಲಾತ್= ತನ್ನ ಸಾಮರ್ಥ್ಯದಿಂದ, ಸ್ವಬೋಧ್ಯಂ= ತನ್ನಿಂದ ಪ್ರತಿಪಾದ್ಯವಾದ ಭೇದವನ್ನು, ಬೋಧಯೇತ್= ಬೋಧಿಸುತ್ತದೆ.

**ಅನುವಾದ–** ಐಕ್ಯವು ಮಿಥ್ಯೆಯಾದರೆ ಆಗ ನಿರ್ದುಷ್ಟವಾದ ಭೇದಶ್ರುತಿಯು ತನ್ನ ಅರ್ಥಕ್ಕೆ ವಿರುದ್ಧವಾದ ಅರ್ಥವನ್ನು ಪ್ರತಿಪಾದಿಸುವ ಐಕ್ಯ ಶ್ರುತಿಯು

**ಅನುವಾದ–** ಪುನರ್ಜನ್ಮ ಸ್ವಪ್ನ ಬಂಧ ದುಃಖಾದಿಗಳಿಂದ ಯಾವಾಗಲೂ ರಹಿತನಾದವನು ಬ್ರಹ್ಮ. ಯಾವುದೋ ಒಂದು ಕಾಲದಿಂದ ಅವುಗಳಿಂದ ರಹಿತರಾದವರು ಜೀವರು ಎಂಬ ಕಾರಣದಿಂದ ಮೋಕ್ಷದಲ್ಲಿಯೂ ನಿತ್ಯಮುಕ್ತನಾದ ಹರಿಗೂ ಅನಿತ್ಯ ಮುಕ್ತರಾದ ಜೀವರಿಗೂ ಭೇದವೇ ಇದೆ.

**ಭಾವವಿಲಾಸಿನೀ–** ಕೇನ ಸಾರೂಪ್ಯಮಿತ್ಯತ ಆಹ – **ಪುನರ್ಜನ್ಮೇತಿ** ॥ ತತ್ರ ಮುಕ್ತೌ ॥ ೮೫೨ ॥

**ವಿವರಣೆ–** ಜೀವನು ಮುಕ್ತನಾದರೂ ಮುಕ್ತನಾದ ಮೇಲೆ ಅವನಿಗೆ ಜನ್ಮಾದಿ ದೋಷಗಳು ಇಲ್ಲ. ಅದಕ್ಕಿಂತ ಮೊದಲು ಎಲ್ಲವೂ ಇದ್ದಿತು. ಆದ್ದರಿಂದ ಈ ಮೋಕ್ಷವು ಒಂದು ದಿನ ಜನ್ಯವಾಗುವುದು ಎಂಬ ಅರ್ಥದಲ್ಲಿ ಅದು ಅನಿತ್ಯವಾದ ಮೋಕ್ಷ. ಆದ್ದರಿಂದ ಜೀವನು ಅನಿತ್ಯಮುಕ್ತ. ದೇವರಿಗೆ ಅನಾದಿ ಕಾಲದಿಂದಲೂ ಬಂಧಾದಿಗಳು ಇಲ್ಲದಿರುವುದರಿಂದ ಅವನು ನಿತ್ಯಮುಕ್ತ. ಮೋಕ್ಷದಲ್ಲಿ ಇಬ್ಬರೂ ಮುಕ್ತರೇ ಆದರೂ, ಒಬ್ಬ ನಿತ್ಯ ಮುಕ್ತ ಮತ್ತು ಇನ್ನೊಬ್ಬ ಅನಿತ್ಯಮುಕ್ತ ಎಂಬ ಭೇದವು ಮೋಕ್ಷದಲ್ಲಿಯೂ ಇದೆ. ಆದ್ದರಿಂದ ಯಾವ ಕಾಲದಲ್ಲಿಯೂ ಭೇದವನ್ನು ನಿರಾಕರಣೆ ಮಾಡಲು ಸಾಧ್ಯವಿಲ್ಲ ಎಂದು ತಾತ್ಪರ್ಯ.

ಬಂಧಾನ್ಮುಕ್ತಸ್ತು ಯೋ ಜೀವೋ ನಿತ್ಯಮುಕ್ತಃ ಕಥಂ ಹ್ಯಸೌ ।
ಅತೋ ಬೋದ್ಧೃತ್ವಶೂನ್ಯೈವ ಬೋಧ್ಯಬ್ರಹ್ಮೈಕ್ಯವಾಕ್ ತವ ॥ ೮೫೩ ॥

**ಅರ್ಥ–** ಯಃ ಜೀವಃ= ಯಾವ ಜೀವನು, ಬಂಧಾನ್ಮುಕ್ತಃ ತು= ಬಂಧದಿಂದ ಬಿಡುಗಡೆಯನ್ನು ಹೊಂದಿದ್ದಾನೆಯೋ, ಅಸೌ= ಅವನು, ಕಥಂ= ಹೇಗೆ, ನಿತ್ಯಮುಕ್ತಃ= ನಿತ್ಯಮುಕ್ತನಾಗುತ್ತಾನೆ? ಅತಃ= ಆದ್ದರಿಂದ, ತವ= ನಿನ್ನ, ಬೋಧ್ಯಬ್ರಹ್ಮೈಕ್ಯವಾಕ್= ಬೋಧ್ಯನಾದ ಬ್ರಹ್ಮನಿಂದ ಜೀವನಿಗೆ ಐಕ್ಯವನ್ನು ಹೇಳುವ ಮಾತು, ಬೋದ್ಧೃತ್ವ ಶೂನ್ಯೈವ= ವಿವೇಕ ಶೂನ್ಯವೇ ಆಗಿದೆ.

**ಅನುವಾದ–** ಜೀವನಾದರೂ ಬಂಧದಿಂದ ಒಂದು ದಿನ ಮುಕ್ತನಾದವನು. ಅವನು ಹೇಗೆ ನಿತ್ಯಮುಕ್ತನಾದ ಪರಮಾತ್ಮನೇ ಆಗುತ್ತಾನೆ? ಆದ್ದರಿಂದ ಬೋದ್ಧೃವಾದ ಜೀವನಿಗೆ ಬೋಧ್ಯನಾದ ಬ್ರಹ್ಮನ ಐಕ್ಯವನ್ನು ಹೇಳುವ ನಿನ್ನ ಮಾತು ವಿವೇಕಶೂನ್ಯವಾದುದು.

**ಭಾವವಿಲಾಸಿನೀ–** ಅತಃ ಉಕ್ತರೀತ್ಯಾ ಬ್ರಹ್ಮೈಕ್ಯಾಯೋಗಾತ್ ॥ ೮೫೩ ॥

ಯದಿ ಬ್ರಹ್ಮೈಕ್ಯಬೋದ್ಧಾ ತ್ವಂ ಕಥಮೈಕ್ಯಂ ಭವೇತ್ ತವ ।
ಯದಿ ಬ್ರಹ್ಮೈಕ್ಯಬೋದ್ಧಾ ನ ಕಥಮೈಕ್ಯಕಥಾ ತವ ॥ ೮೫೪ ॥

**ಅರ್ಥ–** ಯದಿ= ಒಂದು ಪಕ್ಷ, ತ್ವಂ= ನೀನು, ಬ್ರಹ್ಮೈಕ್ಯಬೋದ್ಧಾ= ಬ್ರಹ್ಮೈಕ್ಯವನ್ನು ತಿಳಿದಿರುವಿಯಾದರೆ, ತವ= ನಿನಗೆ, ಐಕ್ಯಂ= ಬ್ರಹ್ಮನಿಂದ ಐಕ್ಯವು, ಕಥಂ ಭವೇತ್= ಹೇಗೆ ಉಂಟಾಗುತ್ತದೆ, ಯದಿ= ಒಂದು ಪಕ್ಷ, ತ್ವಂ= ನೀನು, ಬ್ರಹ್ಮೈಕ್ಯಬೋದ್ಧಾನ= ಬ್ರಹ್ಮೈಕ್ಯವನ್ನು ತಿಳಿಯದಿದ್ದರೆ, ತವ= ನಿನ್ನ, ಐಕ್ಯ ಕಥಾ= ಜೀವ ಬ್ರಹ್ಮೈಕ್ಯವಾದವು, ಕಥಂ= ಹೇಗೆ ಕೂಡುತ್ತದೆ?

**ಅನುವಾದ–** ನೀನು ಬ್ರಹ್ಮೈಕ್ಯವನ್ನು ತಿಳಿದಿದ್ದರೆ ನಿನಗೂ ಮತ್ತು ಬ್ರಹ್ಮನಿಗೂ ಹೇಗೆ ಐಕ್ಯವುಂಟಾಗುತ್ತದೆ? ಮತ್ತು ನೀನು ಬ್ರಹ್ಮೈಕ್ಯವನ್ನು ತಿಳಿಯದಿದ್ದರೆ ಹೇಗೆ ಜೀವ ಬ್ರಹ್ಮೈಕ್ಯದ ಮಾತುಗಳನ್ನು ಆಡುತ್ತೀಯೇ?

**ಭಾವವಿಲಾಸಿನೀ–** ಅತ್ರೋಭಯತಃ ಪಾಶಾರಜ್ಜುಂ ಕರೋತಿ – **ಯದೀತಿ** ॥ ಬ್ರಹ್ಮಣೋ ಬೋಧ್ಯತ್ವೇನ ಬೋದ್ಧಾತ್ವಯಾ ಸಹೈಕ್ಯಾಯೋಗಾದಿತಿ ಭಾವಃ । ದ್ವಿತೀಯಪಕ್ಷೇ ಮನಸಾ ಜ್ಞಾತಸ್ಯೈವ ವಚಸಾ ವಕ್ತವ್ಯತ್ವಾದಿತಿ ಭಾವಃ ॥ ೮೫೪ ॥

**ವಿವರಣೆ–** ಜೀವಬ್ರಹ್ಮೈಕ್ಯವನ್ನು ಹೇಳುವ ಅದ್ವೈತಿಯನ್ನು ಇಲ್ಲಿ ಉಭಯ ಪಾಶಾರಜ್ಜುವಿನಿಂದ ಕಟ್ಟುತ್ತಾರೆ. ನೀನು ಬ್ರಹ್ಮೈಕ್ಯವನ್ನು ತಿಳಿದಿದ್ದರೆ ಬ್ರಹ್ಮನು ಬೋಧ್ಯ ಮತ್ತು ನೀನು ಬೋದ್ಧೃ ಎಂದಾಯಿತು. ಆದ್ದರಿಂದ ಬೋಧರೂಪಕ್ರಿಯೆಯಲ್ಲಿ ಬ್ರಹ್ಮನು ಕರ್ಮ, ನೀನು ಕರ್ತೃ. ಕರ್ತೃ ಕರ್ಮವಿರೋಧವಿರುವುದರಿಂದ ಜೀವಬ್ರಹ್ಮೈಕ್ಯವನ್ನು ಹೇಳಲು ಸಾಧ್ಯವಿಲ್ಲ. ನೀನೇ ಬ್ರಹ್ಮೈಕ್ಯವನ್ನು ತಿಳಿಯದಿದ್ದರೆ 'ಅರ್ಥಂ ಬುದ್ಧ್ವಾಶಬ್ದ ರಚನಾ' ಅರ್ಥವನ್ನು ತಿಳಿದು ಶಬ್ದದ ಪ್ರಯೋಗ ಎಂದು ಇರುವುದರಿಂದ, ನಿನಗೇ ತಿಳಿಯದಿರುವ ಜೀವ ಬ್ರಹ್ಮೈಕ್ಯವನ್ನು ನೀನು ಹೇಗೆ ಮಾತನಾಡುತ್ತೀಯೆ ಎಂದು ತಾತ್ಪರ್ಯ.

**ಕಿಂ ಚೈಕ್ಯಂ ಯದಿ ಮಿಥ್ಯಾ ಸ್ಯಾತ್ ತರ್ಹಿ ಭೇದಶ್ರುತೀಃ ಸತೀ ।**
**ವಿರುದ್ಧಶ್ರುತಿದೌರ್ಬಲ್ಯಾತ್ ಸ್ವಬೋಧ್ಯಂ ಬೋಧಯೇದ್ ಬಲಾತ್ ॥ ೮೫೫ ॥**

**ಅರ್ಥ–** ಕಿಂಚ= ಮತ್ತು, ಐಕ್ಯಂ= ಐಕ್ಯವು, ಯದಿ ಮಿಥ್ಯಾ ಸ್ಯಾತ್= ಒಂದು ಪಕ್ಷ ಮಿಥ್ಯೆಯಾದರೆ, ತರ್ಹಿ= ಆಗ, ಸತೀ ಭೇದಶ್ರುತೀಃ= ನಿರ್ದುಷ್ಟವಾದ ಭೇದಶ್ರುತಿಯು, ವಿರುದ್ಧ ಶ್ರುತಿ ದೌರ್ಬಲ್ಯಾತ್= ತನಗೆ ವಿರುದ್ಧವಾದ ಅರ್ಥವನ್ನು ಹೇಳುವ ಶ್ರುತಿಯು ದುರ್ಬಲವಾದ ಕಾರಣ, ಬಲಾತ್= ತನ್ನ ಸಾಮರ್ಥ್ಯದಿಂದ, ಸ್ವಬೋಧ್ಯಂ= ತನ್ನಿಂದ ಪ್ರತಿಪಾದ್ಯವಾದ ಭೇದವನ್ನು, ಬೋಧಯೇತ್= ಬೋಧಿಸುತ್ತದೆ.

**ಅನುವಾದ–** ಐಕ್ಯವು ಮಿಥ್ಯೆಯಾದರೆ ಆಗ ನಿರ್ದುಷ್ಟವಾದ ಭೇದಶ್ರುತಿಯು ತನ್ನ ಅರ್ಥಕ್ಕೆ ವಿರುದ್ಧವಾದ ಅರ್ಥವನ್ನು ಪ್ರತಿಪಾದಿಸುವ ಐಕ್ಯ ಶ್ರುತಿಯು

ದುರ್ಬಲವಾದ ಕಾರಣದಿಂದ ತನ್ನಿಂದ ಪ್ರತಿಪಾದ್ಯವಾದ ಭೇದವನ್ನು ತನ್ನ ಸಾಮರ್ಥ್ಯದಿಂದಲೇ ಬೋಧಿಸುತ್ತದೆ.

**ಭಾವವಿಲಾಸಿನೀ–** ಅಧುನೈಕ್ಯಂ ಮಿಥ್ಯಾ ಸತ್ಯಂ ವಾ, ದ್ವಿತೀಯೇಽಪಿ ಬ್ರಹ್ಮಣೋ ಭಿನ್ನಮಭಿನ್ನಂ ವೇತಿ ವಿಕಲ್ಪ್ಯ ಸರ್ವಪಕ್ಷೇಽಪಿ ದೂಷಣಮಾಹ – **ಕಿಂಚೇತಿ** ॥ ವಿರುದ್ಧಶ್ರುತಿದೌರ್ಬಲ್ಯಾತ್ ಮಿಥ್ಯಾಭೂತಾರ್ಥಕತ್ವೇನ ಸ್ವವಿರುದ್ಧೈಕ್ಯಶ್ರುತೇರ್ದೌರ್ಬಲ್ಯಾತ್ । ಸ್ವಬೋಧ್ಯಂ ಭೇದಂ ಬಲಾತ್ ಸತ್ಯಾರ್ಥಪ್ರತಿಪಾದಕತ್ವಸತ್ತ್ವಾತ್ ॥ ೮೫೫ ॥

**ವಿವರಣೆ–** ಐಕ್ಯವು ಮಿಥ್ಯೆ ಎಂದಾದರೆ ಅಂತಹ ಐಕ್ಯವನ್ನು ಪ್ರತಿಪಾದಿಸುವ ಐಕ್ಯಶ್ರುತಿಯು ಅತತ್ತ್ವಾವೇದಕವಾಗಿ ದುರ್ಬಲವಾಗುವುದರಿಂದ ಅದು ಭೇದಶ್ರುತಿಗೆ ವಿರೋಧವನ್ನು ಮಾಡುವುದಿಲ್ಲ. ಆಗ ಭೇದಶ್ರುತಿಯು ತನ್ನ ಸಾಮರ್ಥ್ಯದಿಂದಲೇ ಭೇದವನ್ನು ಪ್ರತಿಪಾದನೆ ಮಾಡುತ್ತದೆ ಎಂದು ಅಭಿಪ್ರಾಯ.

**ಸತ್ಯಂ ಚೇದ್ ಬ್ರಹ್ಮಣೋ ಭಿನ್ನಮಭಿನ್ನಂ ವಾ ನಿಗದ್ಯತಾಮ್ ।**
**ಭೇದೇ ತೇನೈವ ತೇಽದ್ವೈತಶ್ರುತೇಃ ಸ್ಯಾದ್ ವ್ಯಾಹತಿಃ ಸ್ಫುಟಾ ॥ ೮೫೬ ॥**

**ಅರ್ಥ–** ಸತ್ಯಂ ಚೇತ್= ಐಕ್ಯವು ಸತ್ಯವಾದರೆ, ಬ್ರಹ್ಮಣಃ ಭಿನ್ನಂ ಅಭಿನ್ನಂ ವಾ= ಬ್ರಹ್ಮನಿಂದ ಭಿನ್ನವೇ ಅಥವಾ ಅಭಿನ್ನವೇ ಎಂದು, ನಿಗದ್ಯತಾಂ= ಹೇಳು (ಹೇಳಲ್ಪಡಲಿ), ಭೇದೇ= ಬ್ರಹ್ಮನಿಂದ ಭಿನ್ನವಾದರೆ, ತೇನೈವ= ಐಕ್ಯದಿಂದಲೇ, ತೇಽದ್ವೈತಶ್ರುತೇಃ= ನಿನ್ನ ಅದ್ವೈತ ಶ್ರುತಿಗೆ, ಸ್ಫುಟಾ= ಸ್ಪಷ್ಟವಾದ, ವ್ಯಾಹತಿಃ ಸ್ಯಾತ್= ವ್ಯಾಹತಿಯು ಉಂಟಾಗುತ್ತದೆ.

**ಅನುವಾದ–** ಐಕ್ಯವು ಸತ್ಯ ಎಂದು ಅಂಗೀಕರಿಸಿದರೆ ಅದು ಬ್ರಹ್ಮನಿಂದ ಭಿನ್ನವೋ ಅಥವಾ ಅಭಿನ್ನವೋ ಎಂದು ಹೇಳು. ಬ್ರಹ್ಮನಿಂದ ಭಿನ್ನವೆಂದು ಅಂಗೀಕರಿಸಿದರೆ ಆ ಐಕ್ಯದಿಂದಲೇ ಅದ್ವೈತ ಶ್ರುತಿಗೆ ಸ್ಪಷ್ಟವಾದ ವ್ಯಾಹತಿಯು ಬರುತ್ತದೆ.

**ಭಾವವಿಲಾಸಿನೀ–** ತೇನೈವ ಐಕ್ಯೇನೈವ । ದ್ವಿತೀಯಂ ನಾಸ್ತೀತಿ ಶ್ರುತೇರ್ಯತ್ಕಿಂಚಿತ್ ದ್ವಿತೀಯಸದ್ಭಾವೇ ವ್ಯಾಘಾತಾಪರಿಹಾರಾತ್ । ಸತ್ಯತ್ವೇ ಸದದ್ವೈತಭಂಗಪ್ರಸಂಗಾತ್ । ಮಿಥ್ಯಾತ್ವೇ ಪ್ರಾಗುಕ್ತದೋಷಾನುಷಂಗಾಚ್ಚ ॥ ೮೫೬ ॥

**ವಿವರಣೆ–** ಅದ್ವೈತವೆಂದರ ಸತ್ಯವಾದ ವಸ್ತುವು ಒಂದೇ ಎಂದು ಅಂಗೀಕರಿಸುವುದು. ಈಗ ಐಕ್ಯವನ್ನು ಬ್ರಹ್ಮಭಿನ್ನವೆಂದು ಮತ್ತು ಸತ್ಯ ಎಂದು ಅಂಗೀಕರಿಸಿದರೆ, ಎರಡು ಸತ್ಯವಸ್ತುವನ್ನು ಅಂಗೀಕರಿಸುವುದರಿಂದ ಅದ್ವೈತ ಶ್ರುತಿಗೆ ಸ್ಪಷ್ಟವಾದ ವಿರೋಧವು ಬರುತ್ತದೆ ಎಂದು ಅಭಿಪ್ರಾಯ.

**ಪ್ರತಿಯೋಗ್ಯನುಯೋಗಿಭ್ಯಾಂ ನಿರೂಪ್ಯಸ್ಯಾನಿರೂಪ್ಯತಃ ।**
**ಅಮತಸ್ಯ ಮತಾತ್ ಶಾಸ್ತ್ರಬೋಧ್ಯಸ್ಯ ತದಬೋಧ್ಯತಃ ॥ ೮೫೭ ॥**

ಐಕ್ಯಮೈಕ್ಯಸ್ಯ ಘಟತೇ ಕಥಂ ಯುಕ್ತಿವಿದಾಂ ಮತೇ ।
ತವಾಪಿ ನ ವಿರುದ್ಧೈಕ್ಯಂ ಲಕ್ಷಣಾಪೇಕ್ಷಿಣಃ ಕ್ವಚಿತ್ ॥ ೮೫೮ ॥

**ಅರ್ಥ–** ಪ್ರತಿಯೋಗ್ಯನುಯೋಗಿಭ್ಯಾಂ= ಪ್ರತಿಯೋಗಿ ಮತ್ತು ಅನುಯೋಗಿಗಳಿಂದ, ನಿರೂಪ್ಯಸ್ಯ= ನಿರೂಪಿತವಾದಂತಹ, ಅಮತಸ್ಯ= ಅಜ್ಞಾತವಾದಂತಹ, ಶಾಸ್ತ್ರಬೋಧ್ಯಸ್ಯ= ಕೇವಲ ಶಾಸ್ತ್ರದಿಂದಲೇ ಪ್ರತಿಪಾದ್ಯವಾದಂತಹ, ಐಕ್ಯಸ್ಯ= ಐಕ್ಯಕ್ಕೆ, ಅನಿರೂಪ್ಯತಃ= ಪ್ರತಿಯೋಗಿ, ಅನುಯೋಗಿಗಳಿಂದ ನಿರೂಪಿಸಲ್ಪಡದ, ಮತಾತ್= ಸ್ವಪ್ರಕಾಶತ್ವದ ಕಾರಣ ಎಲ್ಲರಿಂದಲೂ ಜ್ಞಾತನಾದ, ತದಬೋಧ್ಯತಃ= ಸ್ವಪ್ರಕಾಶನಾದುದರಿಂದಲೇ ಶಾಸ್ತ್ರ ಬೋಧ್ಯನಲ್ಲದ, ಬ್ರಹ್ಮನಿಂದ, ಐಕ್ಯಂ= ಐಕ್ಯವು, ಯುಕ್ತಿವಿದಾಂ ಮತೇ= ಯುಕ್ತಿಯನ್ನು ತಿಳಿದವರ ಮತದಲ್ಲಿ, ಕಥಂ ಘಟತೇ= ಹೇಗೆ ಉಪಪನ್ನವಾಗುತ್ತದೆ, ಲಕ್ಷಣಾಪೇಕ್ಷಿಣಃ= ತತ್ತ್ವಮಸ್ಯಾದಿ ವಾಕ್ಯದಲ್ಲಿ ಲಕ್ಷಣಾವೃತ್ತಿಯನ್ನು ಅಂಗೀಕರಿಸುವ, ತವಾಪಿ= ನಿನಗೂ ಸಹ, ವಿರುದ್ಧೈಕ್ಯಂ= ವಿರುದ್ಧವಾದ ವಸ್ತುಗಳ ಐಕ್ಯವು, ಕ್ವಚಿತ್ ನ= ಎಲ್ಲಿಯೂ ಅಂಗೀಕೃತವಾಗುವುದಿಲ್ಲವಷ್ಟೇ.

**ಅನುವಾದ–** ಐಕ್ಯವು ಪ್ರತಿಯೋಗಿ ಮತ್ತು ಅನುಯೋಗಿಗಳಿಂದ ನಿರೂಪಿತವಾಗುತ್ತದೆ. ಬ್ರಹ್ಮನು ಪ್ರತಿಯೋಗಿ ಮತ್ತು ಅನುಯೋಗಿಗಳಿಂದ ನಿರೂಪಿತನಾಗುವುದಿಲ್ಲ. ಐಕ್ಯವು ಅಜ್ಞಾತವಾಗಿದೆ. ಬ್ರಹ್ಮನು ಅಹಂ ಎಂಬ ಪ್ರತ್ಯಯದಲ್ಲಿ ಜ್ಞಾತನಾಗಿದ್ದಾನೆ. ಐಕ್ಯವು ಶಾಸ್ತ್ರಮಾತ್ರದಿಂದ ಪ್ರತಿಪಾದ್ಯ. ಬ್ರಹ್ಮನು ಸ್ವಪ್ರಕಾಶನಾದುದರಿಂದ ಯಾವ ಪ್ರಮಾಣದಿಂದಲೂ ವೇದ್ಯನಲ್ಲ. ಇಂತಹ ಐಕ್ಯಕ್ಕೂ ಮತ್ತು ಬ್ರಹ್ಮನಿಗೂ ಯುಕ್ತಿಯನ್ನು ತಿಳಿದವರ ಮತದಲ್ಲಿ ಹೇಗೆ ಐಕ್ಯವು ಉಪಪನ್ನವಾಗುತ್ತದೆ? ತತ್ತ್ವಮಸ್ಯಾದಿ ವಾಕ್ಯಗಳಲ್ಲಿ ಲಕ್ಷಣಾವೃತ್ತಿಯನ್ನು ಆಶ್ರಯಿಸುವ ನೀನೂ ಸಹ ಎಲ್ಲಿಯೂ ವಿರುದ್ಧವಸ್ತುಗಳಿಗೆ ಐಕ್ಯವನ್ನು ಅಂಗೀಕರಿಸುವುದಿಲ್ಲವಷ್ಟೇ?

**ಭಾವವಿಲಾಸಿನೀ–** ಅನಿರೂಪ್ಯತಃ ಪ್ರತಿಯೋಗ್ಯನುಯೋಗ್ಯನಿರೂಪ್ಯಾತ್ । ಮತಾತ್ ಸರ್ವಸಂಪ್ರತಿಪನ್ನಾತ್ । ತದಬೋಧ್ಯತಃ ಸ್ವಪ್ರಕಾಶತಯಾ ಶಾಸ್ತ್ರಾಪ್ರತಿಪಾದ್ಯಾಚ್ಚ ಬ್ರಹ್ಮಣಃ ಐಕ್ಯಮಿತಿ ಸಂಬಂಧಃ । ಷಷ್ಠ್ಯಂತಪದತ್ರಯಸ್ಯ ತ್ವೈಕ್ಯಸ್ಯೇತ್ಯನೇನ ಸಂಬಂಧಃ । ಅಮತಸ್ಯಾ-ಸಂಪ್ರತಿಪನ್ನಸ್ಯ । ಕಥಂ ಸ್ಯಾತ್ । ನ ಕಥಂಚಿತ್ । ಉಕ್ತವಿಧಯಾ ಪ್ರಕಾರತ್ರಯೇಣ ಪರಸ್ಪರ-ವಿರುದ್ಧಯೋರೈಕ್ಯಬ್ರಹ್ಮಣೋರೈಕ್ಯಾಯೋಗಾದಿತಿ ಭಾವಃ ॥ ೮೫೭ ॥ ವಿರುದ್ಧಯೋರೈಕ್ಯಂ ತವಾಪಿ ಮತಂ ನೇತ್ಯಾಹ – **ತವೇತಿ** ॥ ಲಕ್ಷಣಾಪೇಕ್ಷಿಣಃ ಸರ್ವಜ್ಞಾಸರ್ವಜ್ಞಯೋರ್ಜೀವ-ಬ್ರಹ್ಮಣೋರೈಕ್ಯಾಯೋಗೇನ ತತ್ತ್ವಂಪದಯೋರ್ಜಹದಜಹಲ್ಲಕ್ಷಣಾಪೇಕ್ಷಿಣಃ ॥ ೮೫೮ ॥

**ವಿವರಣೆ–** ಐಕ್ಯ ಮತ್ತು ಬ್ರಹ್ಮ ಇವು ಪರಸ್ಪರ ವಿರುದ್ಧ ಧರ್ಮಗಳುಳ್ಳವು. ಆದ್ದರಿಂದ ಅವುಗಳಿಗೆ ಐಕ್ಯವನ್ನು ಹೇಳಲು ಬರುವುದಿಲ್ಲ. ವಿರುದ್ಧ ಧರ್ಮವುಳ್ಳ ವಸ್ತುಗಳಿಗೆ

ಐಕ್ಯವನ್ನು ಹೇಳಲು ಬರುವುದಿಲ್ಲ ಎಂಬ ಕಾರಣದಿಂದಲೇ ನೀನು 'ತತ್ತ್ವಮಸಿ' ವಾಕ್ಯದಲ್ಲಿ ತತ್ ಪದಕ್ಕೂ ತ್ವಂ ಪದಕ್ಕೂ ಲಕ್ಷಣಾವೃತ್ತಿಯನ್ನು ಆಶ್ರಯಿಸುತ್ತೀಯೆ. ಹೀಗಿರುವಾಗ ವಿರುದ್ಧ ಧರ್ಮಾಧಿಕರಣಗಳಾದ ಐಕ್ಯ ಮತ್ತು ಬ್ರಹ್ಮರಿಗೆ ಹೇಗೆ ಐಕ್ಯವು ಉಂಟಾಗುತ್ತದೆ ಎಂದು ಅಭಿಪ್ರಾಯ.

**ವಿರುದ್ಧಾಂಶಪರಿತ್ಯಾಗೇ ನ ಸಾ ಜೀವೇಶ್ವರೈಕತಾ ।**
**ರುಣದ್ಧಿ ಸೈವ ಶ್ರುತ್ಯುಕ್ತಾ ಜೀವೇಶ್ವರಭಿದಾ ಶ್ರುತಿಂ ।**
**ಸಾ ಚೇನ್ನಾಸ್ತಿ ತದಾ ಭೇದಶ್ರುತೇಃ ಕಿಂ ಪ್ರತಿಬಂಧಕಂ ॥ ೮೫ ॥**

**ಅರ್ಥ–** ವಿರುದ್ಧಾಂಶಪರಿತ್ಯಾಗೇ= ತತ್ ಪದಾರ್ಥ ಮತ್ತು ತ್ವಂ ಪದಾರ್ಥಗಳ ವಿರುದ್ಧ ಅಂಶಗಳನ್ನು ಪರಿತ್ಯಾಗ ಮಾಡಿದರೆ, ಸಾ= ಚೇತನಕ್ಕೆ ಚೇತನದ ಐಕ್ಯವು, ಜೀವೇಶ್ವರೈಕತಾ ನ= ಜೀವೇಶ್ವರರ ಐಕ್ಯವಲ್ಲ, ಶ್ರುತ್ಯುಕ್ತಾ= ಶ್ರುತಿಯಲ್ಲಿ ಹೇಳಲ್ಪಟ್ಟ, ಸೈವ= ಆ ಜೀವೇಶ್ವರ ಅಭೇದವೇ, ಜೀವೇಶ್ವರಭಿದಾ ಶ್ರುತಿಂ= ಜೀವೇಶ್ವರ ಭೇದ ಶ್ರುತಿಯನ್ನು, ರುಣದ್ಧಿ= ವಿರೋಧಿಸುತ್ತದೆ, ಸಾ ಚೇನ್ನಾಸ್ತಿ= ಅಂತಹ ಐಕ್ಯ ಶ್ರುತಿಯು ಇಲ್ಲವೆಂದಾದರೆ, ತದಾ= ಆಗ, ಭೇದಶ್ರುತೇಃ= ಭೇದಶ್ರುತಿಗೆ, ಕಿಂ ಪ್ರತಿಬಂಧಕಂ= ಯಾವ ಪ್ರತಿಬಂಧಕವಿದೆ?

**ಅನುವಾದ–** ತತ್ ತ್ವಂ ಪದಗಳಿಗೆ ವಿರುದ್ಧಾಂಶಗಳನ್ನು ಪರಿತ್ಯಾಗ ಮಾಡಿ, ಲಕ್ಷಣಾವೃತ್ತಿಯನ್ನು ಆಶ್ರಯಿಸಿ ಚಿತ್ ಚಿದ್ ಅಭಿನ್ನ ಎಂಬ ಅರ್ಥವನ್ನು ಹೇಳಿದರೆ ಅದು ಜೀವೇಶ್ವರ ಅಭೇದವಲ್ಲ. ಶ್ರುತಿಯು ಜೀವೇಶ್ವರಾಭೇದವನ್ನು ಹೇಳಿದರೆ ಮಾತ್ರ ಅದು ಜೀವೇಶ್ವರ ಭೇದ ಶ್ರುತಿಯನ್ನು ಪ್ರತಿಬಂಧಿಸುತ್ತದೆ. ಜೀವೇಶ್ವರ ಅಭೇದ ಶ್ರುತಿಯೇ ಇಲ್ಲವೆಂದ ಮೇಲೆ ಆಗ ಭೇದ ಶ್ರುತಿಗೆ ತನ್ನ ಅರ್ಥವಾದ ಭೇದವನ್ನು ಪ್ರತಿಪಾದನೆ ಮಾಡುವುದಕ್ಕೆ ಯಾವ ಪ್ರತಿಬಂಧಕವಿದೆ?

**ಭಾವವಿಲಾಸಿನೀ–** ನನ್ವತ್ರಾಪಿ ಸಪ್ರತಿಯೋಗಿಕತ್ವಾದಿವಿರುದ್ಧ ಧರ್ಮತ್ಯಾಗೇನೈಕ್ಯಮುಚ್ಯತ ಇತಿ ಚೇತ್। ತತ್ರಾಹ – ವಿರುದ್ಧಾಂಶೇತಿ ॥ ಜೀವಪ್ರತಿಯೋಗಿಕತ್ವಬ್ರಹ್ಮಾನುಯೋಗಿಕತ್ವ ಪರಿತ್ಯಾಗೇ । ಸಾ ಏಕತಾ ಜೀವೇಶ್ವರೈಕತಾ ನ । ಸೈವ ಜೀವಬ್ರಹ್ಮಣೋರೇಕತ್ವೈವ । ಏವಪದೇನ ಮುಂಡಿತಾಂ ಯಾಂ ಕಾಂಚನ ಏಕತಾಂ ವ್ಯವಚ್ಛಿನತ್ತಿ । ಜೀವಬ್ರಹ್ಮಣೋರೈಕ್ಯಸ್ಯೈವ ಸತ್ಯತ್ವೇ ಬ್ರಹ್ಮಸ್ವರೂಪತ್ವೇ ಚ ಭೇದಶ್ರುತೇರ್ವಿರೋಧಃ। ಜೀವಬ್ರಹ್ಮನಿರೂಪಿತೈಕ್ಯಸ್ಯ ಚಾಭಾವೇ ಯಸ್ಯ ಕಸ್ಯಚಿದೈಕ್ಯಸ್ಯೈವ ಸತ್ಯತ್ವೇ ಚ ಜೀವಬ್ರಹ್ಮಣೋರೇಕತ್ವನಿಷೇಧಕಭೇದಶ್ರುತೇರ್ನ ಕೋಽಪಿ ಪ್ರತಿಮಲ್ಲಃ । ಜೀವ-ಬ್ರಹ್ಮಭೇದವಾದಿನಾಪಿ ಬ್ರಹ್ಮಣಿ ಬ್ರಹ್ಮೈಕ್ಯಸ್ಯಾಂಗೀಕಾರಾದಿತಿ ಭಾವಃ । ಕಿಂ ಪ್ರತಿಬಂಧಕಮ್ । ನ ಕಿಂಚಿದಿತ್ಯರ್ಥಃ । ನಹಿ ಯಸ್ಯ ಕಸ್ಯಚಿಚ್ಚೇತನಸ್ಯ ಶಿಷ್ಟತ್ವಂ ಚೋರತ್ವಾಕ್ರಾಂತಚೇತನಶಿರಶ್ಛೇದಸ್ಯ ವಿರೋಧೀತಿ ಭಾವಃ ॥ ೮೫ ॥

**ವಿವರಣೆ–** ತತ್ತ್ವಮಸಿ ವಾಕ್ಯದಲ್ಲಿಯೂ ವಿರುದ್ಧಾಂಶವನ್ನು ಪರಿತ್ಯಾಗ ಮಾಡಿ ಐಕ್ಯವನ್ನು ಹೇಳುತ್ತೇವೆ ಎಂಬ ಶಂಕೆಗೆ ಇಲ್ಲಿ ಉತ್ತರವನ್ನು ಹೇಳುತ್ತಾರೆ. ವಿರುದ್ಧಾಂಶವನ್ನು ಪರಿತ್ಯಾಗ ಮಾಡಿದರೆ ಅದು ಜೀವೇಶ್ವರ ಅಭೇದವೇ ಅಲ್ಲ ಚಿತ್ ಚಿದ್ ಅಭೇದ ಮಾತ್ರ. ಆದರಿಂದ ಜೀವೇಶ್ವರ ಭೇದಕ್ಕೆ ಯಾವ ಬಾಧಕವೂ ಇಲ್ಲ. ಆದ್ದರಿಂದ ಭೇದ ಶ್ರುತಿಯು ತನ್ನ ಅರ್ಥವಾದ ಭೇದ ಪ್ರತಿಪಾದನೆ ಮಾಡಲು ಯಾವ ಪ್ರತಿಬಂಧಕವೂ ಇಲ್ಲ ಎಂದು ಅಭಿಪ್ರಾಯ. ಇದನ್ನು ಸುರೋತ್ತಮತೀರ್ಥರು ಯಾವುದೋ ಒಬ್ಬ ಪುರುಷನ ಶಿಷ್ಟತ್ವವು ಚೋರನ ಶಿರಚ್ಛೇದಕ್ಕೆ ವಿರೋಧಿಯಾಗುವುದಿಲ್ಲವಷ್ಟೇ ಎಂಬ ಸಮಾನಾಂತರ ದೃಷ್ಟಾಂತದ ಮೂಲಕ ತಿಳಿಸುತ್ತಾರೆ.

**ಅತೋ ಜೀವೇಶ್ವರಾಭೇದೋ ಹ್ಯಾತ್ಮಭಿನ್ನೋ ಮೃಷೈವ ತೇ ।**
**ಯತ್ಕಿಂಚಿದೈಕ್ಯಸ್ಯೈಕ್ಯೇ ವಾ ಸತ್ವೇ ವಾ ನ ಪರಸ್ಯ ಭೀಃ ॥ ೮೬೦ ॥**

**ಅರ್ಥ–** ಅತಃ= ಆದ್ದರಿಂದ, ಆತ್ಮಭಿನ್ನಃ= ಬ್ರಹ್ಮ ಭಿನ್ನವಾದ, ಜೀವೇಶ್ವರಾಭೇದಃ= ಜೀವೇಶ್ವರಾಭೇದವು, ತೇ= ನಿನ್ನ ಮತದಂತೆ, ಮೃಷೈವ ಹಿ= ಮಿಥ್ಯೆಯೇ ಆಗಬೇಕು, ಯತ್ಕಿಂಚಿದೈಕ್ಯಸ್ಯ= ಯಾವುದೋ ಒಂದು ಐಕ್ಯಕ್ಕೆ, ಐಕ್ಯೇ= ಧರ್ಮಿಯಿಂದ ಐಕ್ಯವಿದ್ದರೆ, ಸತ್ವೇ ವಾ= ಅಥವಾ ಸತ್ಯತ್ವವಿದ್ದರೆ, ಪರಸ್ಯ=, ಜೀವೇಶ್ವರ ಭೇದವನ್ನು ಹೇಳುವ ನಮಗೆ, ನ ಭೀಃ= ಯಾವ ಹೆದರಿಕೆಯೂ ಇಲ್ಲ.

**ಅನುವಾದ–** ಆದ್ದರಿಂದ ಜೀವೇಶ್ವರಾಭೇದವು ಆತ್ಮಭಿನ್ನವೆಂದೂ, ಮಿಥ್ಯೆ ಎಂದೂ ನೀನು ಅಂಗೀಕರಿಸಬೇಕು. ಯಾವುದೋ ಒಂದು ಐಕ್ಯಕ್ಕೆ ಧರ್ಮಿಯಿಂದ ಐಕ್ಯವಿದ್ದರೆ ಅಥವಾ ಸತ್ಯತ್ವವಿದ್ದರೆ ಜೀವೇಶ್ವರ ಭೇದವನ್ನು ಹೇಳುವ ಪ್ರತಿವಾದಿಗಳಾದ ನಮಗೆ ಯಾವ ಭಯವೂ ಇಲ್ಲ.

**ಭಾವವಿಲಾಸಿನೀ–** ಏತದೇವ ವಿಶದಯನ್ನುಕ್ತಾರ್ಥೇ ದೃಷ್ಟಾಂತಾವಪ್ಯಾಹ – **ಅತ ಇತ್ಯಾದಿನಾ ॥**
ಅತಃ ಪ್ರತಿಯೋಗ್ಯನುಯೋಗಿಭ್ಯಾಮನಿರೂಪಿತೈಕ್ಯಸ್ಯೈವ ಸತ್ಯತ್ವಾದ್ಯಂಗೀಕಾರಾತ್ । ಜೀವೇಶ್ವರಾಭೇದಃ ಜೀವೇಶ್ವರನಿರೂಪಿತಾಭೇದಃ ॥ ೮೬೦ ॥

**ವಿವರಣೆ–** ವಿರುದ್ಧಾಂಶವನ್ನು ಪರಿತ್ಯಾಗ ಮಾಡಿ ಚೈತನ್ಯಕ್ಕೆ ಹೇಳುವ ಐಕ್ಯವು ಭೇದ ಶ್ರುತಿಗೆ ವಿರೋಧಿಯಲ್ಲ. ಆ ಐಕ್ಯವು ಉದಾಸೀನವಾದುದು. ಅಂತಹ ಐಕ್ಯವು ಬ್ರಹ್ಮ ಸ್ವರೂಪವಾಗಿರಲಿ ಅಥವಾ ಸತ್ಯವೇ ಆಗಿರಲಿ ಅದು ಭೇದ ಶ್ರುತಿಗೆ ವಿರೋಧವನ್ನು ಮಾಡುವುದಿಲ್ಲ ಎಂದು ಅಭಿಪ್ರಾಯ.

**ಸ್ವರೂಪೈಕ್ಯೇ ಸತಿ ಘಟೇ ಪಟಾದಿಭ್ಯೋ ನ ಕಿಂ ಭಿದಾ ।**
**ಸ್ವರೂಪೈಕ್ಯೇ ಸತಿ ಪರಂ ಸ್ವರೂಪಾದ್ ಭಿನ್ನತಾಪಿ ನ ॥ ೮೬೧ ॥**

**ಅರ್ಥ–** ಘಟೇ= ಘಟದಲ್ಲಿ, ಸ್ವರೂಪೈಕ್ಯೇ ಸತಿ= ಸ್ವರೂಪೈಕ್ಯವಿದ್ದರೂ, ಪಟಾದಿಭ್ಯಃ= ಪಟಾದಿಗಳಿಂದ, ಭಿದಾ ಕಿಂ ನ= ಭೇದವಿಲ್ಲವೇನು? ಪರಂ= ಆದರೆ, ಸ್ವರೂಪೈಕ್ಯೇ ಸತಿ= ಸ್ವರೂಪೈಕ್ಯವಿದ್ದರೆ, ಸ್ವರೂಪಾದ್ಭಿನ್ನತಾಪಿ= ಸ್ವರೂಪದಿಂದ ಭೇದವೂ, ನ= ಇರುವುದಿಲ್ಲ.

**ಅನುವಾದ–** ಘಟದಲ್ಲಿ ಸ್ವರೂಪೈಕ್ಯವಿದ್ದರೂ ಪಟಾದಿಗಳಿಂದ ಭೇದವಿಲ್ಲವೇನು? ಆದರೆ ಸ್ವರೂಪೈಕ್ಯವಿದ್ದರೆ ಸ್ವರೂಪದಿಂದಲೇ ಭೇದವಿರುವುದಿಲ್ಲ.

**ವಿವರಣೆ–** ಸ್ವರೂಪೈಕ್ಯವು ತನ್ನಿಂದ ತನ್ನಲ್ಲಿ ಭೇದವಿರುವುದಕ್ಕಷ್ಟೇ ವಿರೋಧಿಯೇ ಹೊರತು ಇನ್ನೊಂದರ ಭೇದವು ತನ್ನಲ್ಲಿರುವುದಕ್ಕೆ ವಿರೋಧಿಯಲ್ಲ. ಆದ್ದರಿಂದ ಬ್ರಹ್ಮನಲ್ಲಿ ತನ್ನ ಸ್ವರೂಪವಾದ ಐಕ್ಯದ ಅಭೇದವಿದ್ದರೂ ಅನ್ಯಪ್ರತಿಯೋಗಿಕವಾದ ಭೇದವಿರುವುದಕ್ಕೆ ಯಾವ ಬಾಧಕವೂ ಇಲ್ಲವೆಂದು ಅಭಿಪ್ರಾಯ.

**ತಾಭ್ಯಾಂ ವ್ಯಾವರ್ತಿತೈಕ್ಯಸ್ಯಾಪ್ಯೈಕ್ಯಪಕ್ಷೋ ನ ಶೋಭತೇ ।**
**ತದೇವ ಹ್ಯುಪಲಕ್ಷ್ಯತ್ವಂ ನ ಚೇಚ್ಛುಷ್ಕೈಕ್ಯಮಾಪತೇತ್ ॥ ೮೬೨ ॥**

**ಏವಂ ಚ ಕಥಮೈಕ್ಯಂ ಸ್ಯಾದವ್ಯಾವೃತ್ತೇ ಪರಾತ್ಮನಿ ।**
**ವ್ಯಾವರ್ತ್ಯಾವ್ಯಾವರ್ತ್ಯತಾಭ್ಯಾಮೇವ ಯತ್ತೌ ವಿರೋಧಿನೌ ॥ ೮೬೩ ॥**

**ಅರ್ಥ–** ತಾಭ್ಯಾಂ= ಆ ಜೀವೇಶ್ವರರಿಂದ, ವ್ಯಾವರ್ತಿತೈಕ್ಯಸ್ಯಾಪಿ= ವ್ಯಾವರ್ತಿತವಾದ ಐಕ್ಯಕ್ಕೂ, ಐಕ್ಯಪಕ್ಷಃ= ಬ್ರಹ್ಮನಿಂದ ಐಕ್ಯ ಎಂಬ ಪಕ್ಷವು, ನ ಶೋಭತೇ= ಶೋಭಿಸುವುದಿಲ್ಲ, ತದೇವ ಹ್ಯುಪಲಕ್ಷ್ಯತ್ವಂ= ಆ ವ್ಯಾವರ್ತ್ಯತ್ವವೇ ಉಪಲಕ್ಷ್ಯತ್ವರೂಪವಾದುದು, ನ ಚೇತ್= ಆ ವ್ಯಾವರ್ತ್ಯತ್ವವು ಇಲ್ಲವೆಂದರೆ, ಶುಷ್ಕೈಕ್ಯಂ= ಯಾವುದೋ ಉದಾಸೀನವಾದ ಐಕ್ಯವು, ಆಪತೇತ್= ಸಿದ್ಧವಾದೀತು, ಏವಂ ಚ= ಆದ್ದರಿಂದ, ಅವ್ಯಾವೃತ್ತೇ= ಅವ್ಯಾವೃತ್ತನಾದ, ಪರಾತ್ಮನಿ= ಪರಮಾತ್ಮನಲ್ಲಿ, ಕಥಂ ಐಕ್ಯಂ= ಆ ವ್ಯಾವೃತ್ತವಾದ ಐಕ್ಯಕ್ಕೆ ಹೇಗೆ ಐಕ್ಯವು ಕೂಡುತ್ತದೆ, ಯತ್= ಏಕೆಂದರೆ, ತೌ= ಐಕ್ಯ ಮತ್ತು ಪರಮಾತ್ಮರು, ವ್ಯಾವರ್ತ್ಯಾವ್ಯಾವರ್ತ್ಯತಾಭ್ಯಾಂ= ವ್ಯಾವರ್ತ್ಯತ್ವ ಮತ್ತು ಅವ್ಯಾವರ್ತ್ಯತ್ವ ಧರ್ಮಗಳಿಂದ, ವಿರೋಧಿನೌ= ವಿರೋಧಿಗಳೇ ಆಗಿದ್ದಾರೆ.

**ಅನುವಾದ–** ಜೀವೇಶ್ವರರಿಂದ ವ್ಯಾವರ್ತಿತವಾದ ಐಕ್ಯಕ್ಕೆ ಬ್ರಹ್ಮನಿಂದ ಐಕ್ಯವಿದೆ ಎಂಬ ಪಕ್ಷವು ಶೋಭಿಸುವುದಿಲ್ಲ. ಏಕೆಂದರೆ ಆ ಐಕ್ಯವು ಜೀವೇಶ್ವರರಿಂದ ಉಪಲಕ್ಷಿತವಾಗಿದೆಯಷ್ಟೇ. ಉಪಲಕ್ಷಿತವೆಂದರೂ, ವ್ಯಾವರ್ತಿತವೆಂದರೂ ಒಂದೇ ಅರ್ಥ. ಜೀವೇಶ್ವರೈಕ್ಯವು ಜೀವೇಶ್ವರರಿಂದ ಉಪಲಕ್ಷಿತವಾಗಿಲ್ಲವೆಂದು ಹೇಳಿದರೆ ಅದು ಯಾವುದೋ ಉದಾಸೀನವಾದ ಐಕ್ಯವಾಯಿತು. ಜೀವೇಶ್ವರರಿಂದ ಉಪಲಕ್ಷಿತವೆಂದು ಹೇಳಿದರೆ ಬ್ರಹ್ಮನು ಯಾವುದರಿಂದಲೂ ಉಪಲಕ್ಷಿತನಲ್ಲ

(ವ್ಯಾವರ್ತಿತನಲ್ಲ). ಐಕ್ಯವು ಮಾತ್ರ ಉಪಲಕ್ಷಿತವಾಗಿದೆ. ಹೀಗೆ ಉಪಲಕ್ಷಿತತ್ವ ಮತ್ತು ಅನುಪಲಕ್ಷಿತತ್ವ ರೂಪ ವಿರುದ್ಧ ಧರ್ಮಗಳಿರುವುದರಿಂದ ಐಕ್ಯ ಮತ್ತು ಬ್ರಹ್ಮರು ವಿರುದ್ಧರೇ ಆಗುತ್ತಾರೆ. ಅವೆರಡು ವಸ್ತುಗಳಿಗೆ ಐಕ್ಯವು ಉಪಪನ್ನ-ವಾಗುವುದಿಲ್ಲ.

**ಭಾವವಿಲಾಸಿನೀ–** ತಾಭ್ಯಾಮುಪಲಕ್ಷಣಭೂತಾಭ್ಯಾಂ ಜೀವೇಶ್ವರಾಭ್ಯಾಂ ವ್ಯಾವರ್ತಿತಸ್ಯ ತವೈಕ್ಯಸ್ಯಾವ್ಯಾವರ್ತಿತ ಬ್ರಹ್ಮಣೈಕ್ಯಾಯೋಗಾದಿತಿ ಭಾವಃ । ತದೇವ ವ್ಯಾವರ್ತ್ಯತ್ವಮೇವ । ನ ಚೇದ್ ವ್ಯಾವರ್ತ್ಯತ್ವಮಪಿ ನಚೇತ್ । ಶುಷ್ಕೈಕ್ಯಮಾಪತೇತ್ । ತಚ್ಚ ನ ವಿರುದ್ಧಮಿತ್ಯುಕ್ತಮ್ । ಏವಂ ಐಕ್ಯಸ್ಯ ವ್ಯಾವರ್ತ್ಯತ್ವಾಖ್ಯೋಪಲಕ್ಷ್ಯತ್ವೇ ಸತಿ । ಐಕ್ಯಂ ತಸ್ಯೈಕ್ಯಸ್ಯೈಕ್ಯಮ್ । ತೌ ಐಕ್ಯ-ಪರಮಾತ್ಮಾನೌ ॥ ೮೬೩ ॥

**ವಿವರಣೆ–** ಜೀವೇಶ್ವರೈಕ್ಯವು ಜೀವೇಶ್ವರರಿಂದ ಉಪಲಕ್ಷಿತವಲ್ಲವೆಂದರೆ ಉದಾಸೀನವಾದ ಐಕ್ಯವೆಂದಾಯಿತು. ಅದು ಯಾವುದಕ್ಕೂ ವಿರೋಧಿಯಲ್ಲವೆಂದು ಹಿಂದಿನ ಶ್ಲೋಕದಲ್ಲಿ ಹೇಳಿದ್ದಾಗಿದೆ. ಐಕ್ಯವು ಉಪಲಕ್ಷಿತವೆಂದು ಹೇಳಿದರೆ ಬ್ರಹನು ಅನುಪಲಕ್ಷಿತನಾದ್ದರಿಂದ ಈ ಉಪಲಕ್ಷಿತತ್ವ ಮತ್ತು ಅನುಪಲಕ್ಷಿತತ್ವ ರೂಪವಾದ ವಿರುದ್ಧ ಧರ್ಮಗಳಿರುವುದರಿಂದ ಐಕ್ಯಕ್ಕೂ ಮತ್ತು ಬ್ರಹ್ಮನಿಗೂ ಭೇದವೇ ಇರಬೇಕೆಂದು ಸಿದ್ಧವಾಗುತ್ತದೆ.

ಕಿಂಚೈಕಂ ಬ್ರಹ್ಮ ತದ್ಭಾವೋ ಹ್ಯೈಕ್ಯಂ ಶಬ್ದವಿದಾಂ ಮತೇ ।
ತಯೋಶ್ಚ ಧರ್ಮಧರ್ಮಿತ್ವಾತ್ ಕಥಮೈಕ್ಯಂ ವಿರುದ್ಧಯೋಃ ॥ ೮೬೪ ॥

**ಅರ್ಥ–** ಕಿಂಚ= ಮತ್ತು, ಬ್ರಹ್ಮ= ಬ್ರಹ್ಮನು, ಏಕಂ= ಏಕವಸ್ತುವು, ತದ್ಭಾವಃ= ಏಕವಸ್ತುವಿನ ಧರ್ಮವು, ಶಬ್ದವಿದಾಂ ಮತೇ= ಶಬ್ದ ಜ್ಞಾನವುಳ್ಳವರ ಮತದಲ್ಲಿ, ಐಕ್ಯಂ= ಐಕ್ಯವೆನಿಸುತ್ತದೆ, ತಯೋಶ್ಚ= ಐಕ್ಯ ಮತ್ತು ಬ್ರಹ್ಮರಿಗೆ, ಧರ್ಮಧರ್ಮಿತ್ವಾತ್= ಧರ್ಮ ಧರ್ಮಿಭಾವವಿರುವುದರಿಂದ, ವಿರುದ್ಧಯೋಃ= ವಿರುದ್ಧವಾದ ಅವುಗಳಿಗೆ, ಕಥಮೈಕ್ಯಂ= ಹೇಗೆ ಐಕ್ಯವು ಉಪಪನ್ನವಾಗುತ್ತದೆ?

**ಅನುವಾದ–** ಮತ್ತು ಬ್ರಹ್ಮನು ಏಕ. ಶಬ್ದ ಜ್ಞಾನವುಳ್ಳವರು ಏಕವಸ್ತುವಿನ ಭಾವವು ಎಂದರೆ ಧರ್ಮವು ಏಕತ್ವ ಎಂದರೆ ಐಕ್ಯವೆಂದು ಹೇಳುತ್ತಾರೆ. ಬ್ರಹ್ಮನು ಧರ್ಮಿಯಾಗಿದ್ದಾನೆ. ಐಕ್ಯವು ಧರ್ಮವಾಗಿದೆ. ಹೀಗೆ ವಿರುದ್ಧವಾದ ಧರ್ಮಧರ್ಮಿಭಾವವಿರುವುದರಿಂದ ಅವುಗಳಿಗೆ ಐಕ್ಯವು ಉಪಪನ್ನವಾಗುವುದಿಲ್ಲ.

**ಭಾವವಿಲಾಸಿನೀ–** ಕಿಂಚ ಯಾದೃಶತಾದೃಶಮೈಕ್ಯಂ ಭವತು ತಸ್ಯ ಸತ್ಯತ್ವಂ ಬ್ರಹ್ಮಣೈಕ್ಯಂ ಚ ತವ ಮತೇ ನ ಘಟತ ಇತ್ಯಾಹ – **ಕಿಂಚೇತಿ** ॥ ತಯೋಶ್ಚ ಐಕ್ಯಪರಮಾತ್ಮನೋಃ ಧರ್ಮಧರ್ಮಿತ್ವಾತ್

ಏಕಸ್ಯ ಧರ್ಮತ್ವಾದಪರಸ್ಯ ಧರ್ಮಿತ್ವಾದಿತ್ಯರ್ಥಃ । ವಿರುದ್ಧಯೋಃ ಧರ್ಮಧರ್ಮಿಭಾವೇನೈಕ್ಯಾನರ್ಹಯೋಃ ॥ ೮೬೪ ॥

**ವಿವರಣೆ–** ಐಕ್ಯವು ಉದಾಸೀನದ್ದೇ ಆಗಿರಲಿ, ಯಾವುದೇ ಆಗಿರಲಿ, ಯಾವ ಐಕ್ಯಕ್ಕೂ ಸತ್ಯತ್ವವನ್ನಾಗಲೀ ಬ್ರಹ್ಮನಿಂದ ಅಭೇದವನ್ನಾಗಲೀ ಅಂಗೀಕರಿಸಲು ಸಾಧ್ಯವಿಲ್ಲವೆಂದು ಇಲ್ಲಿ ಹೇಳುತ್ತಾರೆ. ಐಕ್ಯವು ಎಲ್ಲೇ ಇದ್ದರೂ ಅದು ಧರ್ಮವಾಗಿರುವುದರಿಂದ ಧರ್ಮಿಯ ಜೊತೆಯಲ್ಲಿ ಅದಕ್ಕೆ ಐಕ್ಯವು ಅನುಪಪನ್ನವಾದುದು ಎಂದು ಅಭಿಪ್ರಾಯ.

ಏವಂ ಚ ನೈಕ್ಯಮೈಕ್ಯಸ್ಯ ತದಭಾವೇ ನ ತತ್ವತಾ ।
ಅತತ್ವಾವೇದಕಂ ಶಾಸ್ತ್ರಮಮಾನಂ ತಜ್ಜಿತಂ ಪರೈಃ ॥ ೮೬೫ ॥

**ಅರ್ಥ–** ಏವಂ ಚ= ಒಟ್ಟಿನಲ್ಲಿ, ಐಕ್ಯಸ್ಯ= ಜೀವೇಶ್ವರ ಐಕ್ಯಕ್ಕೆ, ಐಕ್ಯಂ ನ= ಬ್ರಹ್ಮನಿಂದ ಐಕ್ಯವಿಲ್ಲ, ತದಭಾವೇ= ಐಕ್ಯವು ಇಲ್ಲವೆಂದಮೇಲೆ, ನ ತತ್ವತಾ= ಐಕ್ಯವು ತತ್ವವಾಗುವುದಿಲ್ಲ, ಶಾಸ್ತ್ರಂ= ಅಂತಹ ಐಕ್ಯವನ್ನು ಪ್ರತಿಪಾದಿಸುವ ಶಾಸ್ತ್ರವು, ಅತತ್ವಾವೇದಕಂ= ಅತತ್ವಾವೇದಕವಾದ್ದರಿಂದ, ಅಮಾನಂ= ಅಪ್ರಮಾಣವಾಗುತ್ತದೆ, ತತ್= ಆದ್ದರಿಂದ, ಪರೈಃ= ಪ್ರತಿವಾದಿಗಳಿಂದ, ಜಿತಂ= ಜಯಿಸಲ್ಪಡುತ್ತೀಯೇ.

**ಅನುವಾದ–** ಈ ಎಲ್ಲ ಕಾರಣಗಳಿಂದ ಜೀವಬ್ರಹ್ಮೈಕ್ಯಕ್ಕೆ ಬ್ರಹ್ಮನಿಂದ ಐಕ್ಯವಿಲ್ಲ. ಐಕ್ಯವು ಇಲ್ಲವೆಂದ ಮೇಲೆ ಐಕ್ಯವು ತತ್ತ್ವವಲ್ಲ ಅತತ್ತ್ವ ಎಂದಾಯಿತು. ಅಂತಹ ಐಕ್ಯವನ್ನು ಪ್ರತಿಪಾದಿಸುವ ನಿನ್ನ ಶಾಸ್ತ್ರವು ಅತತ್ವಾವೇದಕವಾದುದರಿಂದ ಅಪ್ರಮಾಣವಾಗುತ್ತದೆ. ಆದ್ದರಿಂದ ನೀನು ಪ್ರತಿವಾದಿಗಳಿಂದ ಸುಲಭವಾಗಿ ಜಯಿಸಲ್ಪಡುತ್ತೀಯೇ.

**ಭಾವವಿಲಾಸಿನೀ–** ಐಕ್ಯಂ ಬ್ರಹ್ಮೈಕ್ಯಮ್ । ತದಭಾವೇ ಐಕ್ಯಾಭಾವೇ । ತತ್ತಸ್ಮಾತ್ ಐಕ್ಯ ಪ್ರತಿಪಾದಕಶಾಸ್ತ್ರಸ್ಯಾಮಾನತ್ವಾತ್ ॥ ೮೬೫ ॥

**ವಿವರಣೆ–** ಐಕ್ಯವನ್ನು ಪ್ರತಿಪಾದಿಸುವ ಶಾಸ್ತ್ರವು ಅಪ್ರಮಾಣವೆಂದಾದರೆ ಭೇದ ಪ್ರತಿಪಾದಕ ವಾಕ್ಯಗಳಿಗೆ ಯಾವ ವಿರೋಧವೂ ಇಲ್ಲವಾದ್ದರಿಂದ ಭೇದವನ್ನು ಪ್ರತಿಪಾದನೆ ಮಾಡುವ ಪ್ರತಿವಾದಿಗಳು ಜಯಿಸುತ್ತಾರೆ ಎಂದು ಅಭಿಪ್ರಾಯ.

ವಿರುದ್ಧೈಕ್ಯೇ ತು ಸಾರ್ವಜ್ಞಪೂರ್ವಧರ್ಮಾ ಜಿಜೃಂಭಿರೇ ।
ನಿರ್ಗುಣೋಕ್ತೇಸ್ತದೇಕತ್ವಗುಣೇನಾತಾಡಯನ್ಮುಖಂ ।
ಸ್ವಾಭೇದಸಂಭವಾದ್ಭಿನ್ನಗುಣಾಭಾವಾರ್ಥತಾಂ ದದುಃ ॥ ೮೬೬ ॥

**ಅರ್ಥ–** ವಿರುದ್ಧೈಕ್ಯೇ= ವಿರುದ್ಧವಾದ ಜೀವೇಶ್ವರರಿಗೂ ಐಕ್ಯವನ್ನು ಹೇಳಿದರೆ, ಸಾರ್ವಜ್ಞ ಪೂರ್ವಧರ್ಮಾಃ= ಸರ್ವಜ್ಞತ್ವ ಮೊದಲಾದ ಧರ್ಮಗಳು, ಜಿಜೃಂಭಿರೇ=

ಉಲ್ಲಾಸಗೊಳ್ಳುತ್ತವೆ, ಆ ಸರ್ವಜ್ಞತ್ವಾದಿ ಧರ್ಮಗಳು, ತದೇಕತ್ವಗುಣೇನ= ತಮ್ಮ ಮಧ್ಯಪತಿತವಾದ ಐಕ್ಯ ಎಂಬ ಭಾವರೂಪವಾದ ಗುಣದಿಂದ, ನಿರ್ಗುಣೋಕ್ತೇಃ= ನಿರ್ಗುಣ ವಚನದ, ಮುಖಂ= ಮುಖವನ್ನು (ಮುಖಕ್ಕೆ), ಅತಾಡಯನ್= ಹೊಡೆದವು, ಸ್ವಾಭೇದಸಂಭವಾತ್= ಸರ್ವಜ್ಞತ್ವಾದಿ ಗುಣಗಳ ಅಭೇದವು ಬ್ರಹ್ಮನಲ್ಲಿ ಸಂಭಾವಿತ ವಾದುದರಿಂದ, ನಿರ್ಗುಣೋಕ್ತೇಃ= ನಿರ್ಗುಣ ವಾಕ್ಯಕ್ಕೆ, ಭಿನ್ನಗುಣಾಭಾವಾರ್ಥತಾಂ= ಭಿನ್ನ ಗುಣಗಳ ಅಭಾವ ಎಂಬ ಅರ್ಥವನ್ನು, ದದುಃ= ಕೊಟ್ಟವು.

**ಅನುವಾದ– ವಿರುದ್ಧವಾದ ಜೀವೇಶ್ವರರಿಗೂ ಐಕ್ಯವನ್ನು ಹೇಳಿದರೆ ಸರ್ವಜ್ಞತ್ವ ಮೊದಲಾದ ಗುಣಗಳು ವಿಕಸಿತವಾಗುತ್ತವೆ. ಆ ಸರ್ವಜ್ಞತ್ವಾದಿ ಗುಣಗಳು ತಮ್ಮ ಮಧ್ಯಪತಿತವಾದ ಏಕತ್ವರೂಪವಾದ ಭಾವರೂಪವಾದ ಗುಣದಿಂದ ನಿರ್ಗುಣೋಕ್ತಿಯ ಮುಖವನ್ನು ತಾಡಿಸಿದವು ಮತ್ತು ತಮ್ಮ ಅಭೇದವು ಬ್ರಹ್ಮನಲ್ಲಿ ಕೂಡುವುದರಿಂದ ನಿರ್ಗುಣೋಕ್ತಿಗೆ ಭಿನ್ನ ಗುಣಾಭಾವ ಎಂಬ ಹೊಸ ಅರ್ಥವನ್ನು ತಂದುಕೊಟ್ಟವು.**

**ಭಾವವಿಲಾಸಿನೀ–** ವಿರುದ್ಧಯೋರೈಕ್ಯಂ ಪರೋ ನ ವದತ್ಯೇವ । ಕಶ್ಚಿದೌದ್ಧತ್ಯಾದ್ವದತಿ ಚೇತ್ತಸ್ಯಾಪುತ್ತರಮಾಹ – **ವಿರುದ್ಧೈಕ್ಯ ಇತಿ** ॥ ಪೂರ್ವಪದೇನ ಭೇದಸರ್ವೇಶ್ವರತ್ವಾದಯೋ ಗೃಹ್ಯಂತೇ । ಜಜೃಂಭಿರೇ ಸ್ವಮಿಥ್ಯಾತ್ವಕಾರಣಾಭಾವಾತ್ ವಿರುದ್ಧಯೋಃ ಸಿಂಹದೇವ-ದತ್ತಯೋರಿವ ಮುಖ್ಯೈಕ್ಯಾಯೋಗಾಚ್ಚ ವಿಕಸಿತಾ ಅಭೂವನ್ನಿತ್ಯರ್ಥಃ । ನನು ನಿರ್ಗುಣೋಕ್ತಿ-ಸದ್ಭಾವಾತ್ಕಥಂ ಗುಣಾನಾಂ ಜೃಂಭಣಮಿತ್ಯತ ಆಹ – **ನಿರ್ಗುಣೋಕ್ತೇರಿತಿ** ॥ ತದೇಕತ್ವಗುಣೇನ ತಸ್ಯ ಬ್ರಹ್ಮಣಃ ಜೀವಾದೇಕತ್ವಾಖ್ಯಗುಣೇನ । ಮಾಯಾವಾದ್ಯಭಿಮತ ಭಾವರೂಪೈಕ್ಯಾಖ್ಯ-ಗುಣಮಧ್ಯಪತಿತಾನಸ್ಮಾನ್ ಕಥಂ ನಿಷೇಧಸೀತಿ ಮುಖಮುದ್ರಣಂ ಚಕ್ರುರಿತಿ ಭಾವಃ । ಅಪೌರುಷೇಯವಾಕ್ಯತ್ವಾತ್ ಭಿನ್ನಗುಣಾ ಭಾವರೂಪಾರ್ಥೇಽವಕಾಶಂ ದದುರಿತ್ಯಾಹ – **ಸ್ವಾಭೇದೇತಿ** ॥ ಸ್ವೇಷಾಂ ಬ್ರಹ್ಮಣಾ ಸಹಾಭೇದಃ ಸ್ವಾಭೇದಃ । ತತ್ಸಂಭವಾತ್ ನಿಷೇಧ-ಬಹಿರ್ಭಾವಸಂಭವಾತ್ । (ಯದ್ವಾ ಸ್ವೇಷಾಮೈಕ್ಯವದ್ಧರ್ಮಧರ್ಮಿಭಾವೇಽಪ್ಯಭೇದ-ಸಂಭವಾತ್ । ಅಭಿನ್ನೈಕ್ಯಾನಿಷೇಧ್ಯಾತದ್ವದಸ್ಮದನಿಷೇಧಸ್ಯ ಸಂಭವಾತ್) ಭಿನ್ನಗುಣಾರ್ಥತಾಂ ದದುರಿತ್ಯನ್ವಯಃ ॥ ೮೬೬ ॥

**ವಿವರಣೆ–** ಮಾಯಾವಾದಿಗಳು ವಿರುದ್ಧೈಕ್ಯವನ್ನು ಹೇಳುವುದಿಲ್ಲ. ಆದರೂ ಯಾರಾದರೂ ನಾಚಿಕೆಯನ್ನು ಬಿಟ್ಟು ವಿರುದ್ಧೈಕ್ಯವನ್ನು ಹೇಳಿದರೆ ಅದಕ್ಕೆ ಇಲ್ಲಿ ಉತ್ತರವನ್ನು ಹೇಳುತ್ತಾರೆ. ನಿರ್ಗುಣೋಕ್ತಿ ಇರುವುದರಿಂದ ಸರ್ವಜ್ಞತ್ವಾದಿ ಗುಣಗಳಿಗೆ ಎಂದರೆ ಸರ್ವಜ್ಞತ್ವ, ಜೀವಭೇದ, ಸರ್ವೇಶ್ವರತ್ವಾದಿ ಗುಣಗಳಿಗೆ ಹೇಗೆ ವಿಕಾಸ ಉಂಟಾಗುತ್ತವೆ ಎಂಬ ಶಂಕೆಗೆ ಸರ್ವಜ್ಞತ್ವ ಗುಣಗಳು ಭಾವರೂಪವಾದುದು, ಐಕ್ಯವೂ ಭಾವರೂಪವಾದುದು. ಆದ್ದರಿಂದ ಸರ್ವಜ್ಞತ್ವವನ್ನು ನಿಷೇಧ ಮಾಡಿದರೆ ಐಕ್ಯವು ನಿಷೇಧಿ

ಸಲ್ಪಡುತ್ತದೆ. ಐಕ್ಯವನ್ನು ಉಳಿಸಿಕೊಳ್ಳಬೇಕಾದರೆ ಸರ್ವಜ್ಞತ್ವಾದಿಗಳನ್ನೂ ಉಳಿಸಿಕೊಳ್ಳಬೇಕು ಎಂದು ಐಕ್ಯವನ್ನು ಮುಂದೆ ಮಾಡಿಕೊಂಡು ಅದರಿಂದ ಸರ್ವಜ್ಞತ್ವಾದಿ ಗುಣಗಳೇ ನಿರ್ಗುಣ ಶ್ರುತಿಯ ಮುಖವನ್ನು ಹೊಡೆಯುತ್ತವೆ ಎಂಬ ಉತ್ತರವನ್ನು ಕೊಡುತ್ತಾರೆ. ನಿರ್ಗುಣ ಶ್ರುತಿಯ ಮುಖವನ್ನು ಹೊಡೆಯುತ್ತವೆ ಎಂದರೆ ನಿರ್ಗುಣ ಶ್ರುತಿಗೆ ಆಪಾತತಃ ತೋರುವ ಅರ್ಥವನ್ನು ಬಿಡಿಸುತ್ತವೆ ಎಂದು ಅರ್ಥ. ಆದ್ದರಿಂದ ನಿರ್ಗುಣ ಶ್ರುತಿಯು ಭಿನ್ನ ಗುಣಾಭಾವವನ್ನು ಹೇಳುತ್ತದೆ ಎಂದು ಅರ್ಥವನ್ನು ಮಾಡಬೇಕು ಎಂಬುದನ್ನು ಸರ್ವಜ್ಞತ್ವಾದಿ ಗುಣಗಳೇ ಸಾಧಿಸಿಕೊಡುತ್ತವೆ. ಬ್ರಹ್ಮನಿಂದ ಅಭಿನ್ನವಾದ ಗುಣಗಳು ಇವೆ, ಬ್ರಹ್ಮನಿಂದ ಭಿನ್ನವಾದ ಗುಣಗಳು ಇಲ್ಲ ಎಂದು ತಮಗೆ ಅಭೇದವನ್ನೂ ಭಿನ್ನಗುಣಗಳ ನಿಷೇಧವನ್ನೂ ಸಾಧಿಸಿಕೊಡುತ್ತವೆ ಎಂದು ತಾತ್ಪರ್ಯ.

ಜಡಂ ಜಗಚ್ಚ ಸತ್ಯಂ ಸ್ಯಾತ್ತದೈಕ್ಯಂ ಚೈಕತೈಕ್ಯವತ್ ।
ಮಿಥ್ಯಾಶ್ರುತೇಸ್ತು ಭೇದೇನಾಸತ್ತ್ವಮರ್ಥೋಽಸ್ತ್ವಭೇದಿಷು ।
ತದಭಾವೇ ತು ನೈಕ್ಯಸ್ಯಾಪ್ಯೈಕ್ಯಮಿತ್ಯತಿಸಂಕಟಮ್ ॥ ೮೬೭ ॥

**ಅರ್ಥ–** ಜಡಂ ಜಗಚ್ಚ= ಜಡವಾದ ಜಗತ್ತೂ ಸಹ, ಸತ್ಯಂ= ಸತ್ಯವಾಗಲಿ, ತದೈಕ್ಯಂ ಚ= ಜಡದ ಐಕ್ಯವು, ಏಕತೈಕ್ಯವತ್= ಜೀವೈಕ್ಯದ ಐಕ್ಯದಂತೆ, ಸತ್ಯಂ ಸ್ಯಾತ್= ಸತ್ಯವೇ ಆಗಲಿ, ಅಭೇದಿಷು= ಹಾಗೆ ಅಭೇದವುಳ್ಳ ಜಡಗಳಲ್ಲಿ, ಮಿಥ್ಯಾಶ್ರುತೇಸ್ತು= ಮಿಥ್ಯಾಶ್ರುತಿಗೆ, ಭೇದೇನಾಸತ್ತ್ವಂ= ಭೇದೇನ ಅಸತ್ತ್ವವು, ಅರ್ಥೋಽಸ್ತು= ಅರ್ಥವಾಗಲಿ, ತದಭಾವೇ= ಜಡ ಜಗತ್ತಿಗೂ ಮತ್ತು ಬ್ರಹ್ಮನಿಗೂ ಐಕ್ಯವಿಲ್ಲದಿದ್ದರೆ, ಐಕ್ಯಸ್ಯಾಪಿ= ಜೀವೈಕ್ಯಕ್ಕೂ ಸಹ, ಐಕ್ಯಂ ನ= ಐಕ್ಯವಿಲ್ಲ ಎಂದು, ಅತಿಸಂಕಟಂ= ಅತಿ ಕ್ಲೇಶವು ಪ್ರಾಪ್ತವಾಗುತ್ತದೆ.

**ಅನುವಾದ–** ಜಡ ಜಗತ್ತೂ ಸತ್ಯವೇ ಆಗಲಿ. ಆ ಜಗತ್ತಿನ ಐಕ್ಯವು ಜೀವೈಕ್ಯದ ಐಕ್ಯದಂತೆಯೇ ಸತ್ಯವಾಗಲಿ. ಮಿಥ್ಯಾಶ್ರುತಿಯಾದರೂ ಬ್ರಹ್ಮನ ಅಭೇದವುಳ್ಳ ಜಡಗಳಲ್ಲಿ ಬ್ರಹ್ಮ ಭೇದೇನ (ವ್ಯತಿರೇಕೇಣ) ಅಸತ್ತ್ವರೂಪವಾದ ಅರ್ಥವನ್ನು ಹೇಳಲಿ. ಜಡವಾದ ಜಗತ್ತಿಗೂ ಮತ್ತು ಬ್ರಹ್ಮನಿಗೂ ಐಕ್ಯವಿಲ್ಲದಿದ್ದರೆ ಜೀವೈಕ್ಯಕ್ಕೂ ಸಹ ಬ್ರಹ್ಮನಿಂದ ಐಕ್ಯವಿರಲು ಸಾಧ್ಯವಿಲ್ಲವೆಂಬ ಅತಿಸಂಕಟವು ಪ್ರಾಪ್ತವಾಗುತ್ತದೆ.

**ಭಾವವಿಲಾಸಿನೀ–** ತದೈಕ್ಯಂ ಜಡಜಗದೈಕ್ಯಮ್ । ಏಕತೈಕ್ಯವತ್ ಐಕ್ಯಸ್ಯೈಕ್ಯವತ್ । ಯಥಾ ವಿರುದ್ಧಯೋರೈಕ್ಯಬ್ರಹ್ಮಣೋರೈಕ್ಯಮುಚ್ಯತೇ ತಥಾ ಜಡಬ್ರಹ್ಮಣೋರೈಕ್ಯಮುಚ್ಯತಾಮಿತಿ ಭಾವಃ। ಅಥವಾ ಐಕ್ಯಂ ತಾವಚ್ಚೇತನಧರ್ಮತ್ವಾನ್ನ ಚೇತನಃ । ತದೈಕ್ಯವತ್ ಅಚೇತನಜಗದೈಕ್ಯಮಪಿ ಕುತೋ ನೋಚ್ಯತ ಇತ್ಯರ್ಥಃ। ನನು ಜಡಸ್ಯಾಪಿ ಸತ್ಯತ್ವೇ ಬ್ರಹ್ಮಾಭಿನ್ನತ್ವೇ ಚ ಮಿಥ್ಯಾಶ್ರುತೇಃ ಕಾ ಗತಿರಿತ್ಯತ ಆಹ – **ಮಿಥ್ಯೇತಿ** ॥ ಅಭೇದಿಷು ಅಭೇದವತ್ಸು ಜಡೇಷು । ತದಭಾವೇ ಜಡಜಗದೈಕ್ಯಾಭಾವೇ । ದ್ವಯೋರಪ್ಯಚೇತನತ್ವಾವಿಶೇಷಾದಿತಿ ಭಾವಃ ॥ ೮೬೭ ॥

**ವಿವರಣೆ–** ಜೀವೈಕ್ಯ ಮತ್ತು ಬ್ರಹ್ಮರು ವಿರುದ್ಧವಾದರೂ ಹೇಗೆ ಐಕ್ಯವನ್ನು ಹೇಳುತ್ತೀಯೋ ಹಾಗೆಯೇ ಜಡಜಗತ್ತು ಮತ್ತು ಬ್ರಹ್ಮರು ವಿರುದ್ಧವಾದರೂ ಅಲ್ಲಿಯೂ ಐಕ್ಯವನ್ನು ಹೇಳು. ಅಥವಾ ಐಕ್ಯವು ಚೇತನ ಧರ್ಮ. ಆದ್ದರಿಂದ ಅದು ಚೇತನವಲ್ಲ. ಆ ಐಕ್ಯಕ್ಕೂ ಬ್ರಹ್ಮನಿಗೂ ಐಕ್ಯವನ್ನು ಹೇಳುವುದಾದರೆ ಅದರಂತೆ ಜಡವಾದ ಜಗತ್ತಿಗೂ ಮತ್ತು ಬ್ರಹ್ಮನಿಗೂ ಐಕ್ಯವನ್ನು ಹೇಳು ಎಂಬ ಅತಿಪ್ರಸಂಗವನ್ನು ಹೇಳುತ್ತೇವೆ. ಜಡವೂ ಸಹ ಸತ್ಯವಾಗಿ ಬ್ರಹ್ಮಾಭಿನ್ನವಾದರೆ ಮಿಥ್ಯಾಶ್ರುತಿಗೆ ಏನು ಗತಿ ಎಂದು ಕೇಳಿದರೆ, ಮಿಥ್ಯಾಶ್ರುತಿಗೆ ಜಡಗಳಿಗೆ ಬ್ರಹ್ಮಾಭೇದವಿದ್ದರೂ ಬ್ರಹ್ಮಭಿನ್ನತ್ವೇನ ಅಸತ್ತ್ವರೂಪವಾದ ಅರ್ಥವನ್ನು ಹೇಳು. ವಿರುದ್ಧವಾದ ಜಡಕ್ಕೂ ಮತ್ತು ಬ್ರಹ್ಮನಿಗೂ ಐಕ್ಯವನ್ನು ಹೇಳಲು ಸಾಧ್ಯವಿಲ್ಲದಿದ್ದರೆ ವಿರುದ್ಧವಾದ ಜೀವೈಕ್ಯಕ್ಕೂ ಮತ್ತು ಬ್ರಹ್ಮನಿಗೂ ಐಕ್ಯವನ್ನು ಹೇಳಲು ಸಹ ಸಾಧ್ಯವಿಲ್ಲ. ಆದ್ದರಿಂದ ಜೀವೈಕ್ಯಕ್ಕೆ ಐಕ್ಯವನ್ನು ಉಳಿಸಿಕೊಳ್ಳಬೇಕಾದರೆ, ಜಡೈಕ್ಯವು ಪ್ರಾಪ್ತವಾಗುತ್ತದೆ. ಜಡೈಕ್ಯವನ್ನು ನಿಷೇಧ ಮಾಡಿದರೆ ಜೀವೈಕ್ಯದ ಐಕ್ಯವು ಹೊರಟು ಹೋಗುತ್ತದೆ ಎಂದು ಅತ್ಯಂತ ಸಂಕಟವು ಪ್ರಾಪ್ತವಾಗುತ್ತದೆ ಎಂದು ಅಭಿಪ್ರಾಯ.

**ಯದಿ ಚೇತನಸಂಬಂಧಾಚ್ಚಿತೋರೈಕ್ಯಂ ಚ ಚಿದ್ಭವೇತ್ ।**
**ತದಾ ಜಡಂ ಜಗಚ್ಚಿತ್ಸ್ಯಾನ್ನ್ಯಾಯಸಾಮ್ಯಾನ್ನಚೇನ್ನ ಚ ॥ ೮೬೮ ॥**

**ಅರ್ಥ–** ಯದಿ= ಒಂದು ಪಕ್ಷ, ಚೇತನಸಂಬಂಧಾತ್= ಚೇತನ ಸಂಬಂಧ ವಿರುವುದರಿಂದ, ಚಿತೋರೈಕ್ಯಂ= ಚೇತನಗಳ ಐಕ್ಯವು, ಚಿದ್ಭವೇತ್= ಚೈತನ್ಯರೂಪವೇ ಎಂದಾದರೆ, ತದಾ= ಆಗ, ನ್ಯಾಯಸಾಮ್ಯಾತ್= ಸಮಾನ ನ್ಯಾಯದಿಂದ, ಜಡಂ ಜಗತ್= ಜಡವಾದ ಜಗತ್ತು, ಚಿತ್ ಸ್ಯಾತ್= ಚೇತನವೇ ಆಗಲಿ, ನ ಚೇತ್= ಜಡವಾದ ಜಗತ್ತು ಚಿದ್ರೂಪವಾಗದಿದ್ದರೆ, ನ ಚ= ಐಕ್ಯವೂ ಚಿದ್ರೂಪವಾಗುವುದಿಲ್ಲ.

**ಅನುವಾದ– ಒಂದು ಪಕ್ಷ ಚೇತನ ಸಂಬಂಧವಿರುವುದರಿಂದ ಚಿತ್‌ಗಳ ಐಕ್ಯವು ಚಿದ್ರೂಪವಾಗುವುದಾದರೆ ಆಗ ಅದೇ ನ್ಯಾಯದಿಂದ ಜಡವೂ ಚಿದ್ರೂಪವಾಗಲಿ. ಜಡವು ಚಿದ್ರೂಪವಾಗದಿದ್ದರೆ ಐಕ್ಯವೂ ಚಿದ್ರೂಪವಾಗುವುದಿಲ್ಲ.**

**ಭಾವವಿಲಾಸಿನೀ– ಚಿತ್‌ಸಂಬಂಧಾದೈಕ್ಯಸ್ಯಾಪಿ ಚಿತ್ತ್ವೇಽಜ್ಞಾನಾದಿಜಡಸ್ಯಾಪಿ ತತ್‌ಸ್ಯಾದಿತ್ಯಾಹ –ಯದೀತಿ ॥ ೮೬೮ ॥**

**ವಿವರಣೆ–** ಹಿಂದಿನ ಶ್ಲೋಕದಲ್ಲಿ ಚೇತನಧರ್ಮವಾದ ಐಕ್ಯವು ಜಡವಾದುದರಿಂದ ಅದಕ್ಕೂ ಮತ್ತು ಬ್ರಹ್ಮನಿಗೂ ಐಕ್ಯವು ಉಪಪನ್ನವಾಗುವುದಿಲ್ಲ ಎಂಬ ಆಕ್ಷೇಪವನ್ನು ಹೇಳಿದ್ದರು. ಅದನ್ನು ಪರಿಹಾರ ಮಾಡುವುದಕ್ಕಾಗಿ ಐಕ್ಯಕ್ಕೂ ಚಿದ್ರೂಪತ್ವವನ್ನು ಒಪ್ಪುತ್ತೇವೆ ಎಂದು ಪ್ರತಿವಾದಿಯು ಹೇಳಿದರೆ ಅದಕ್ಕೆ ಇಲ್ಲಿ ಉತ್ತರವನ್ನು ಹೇಳುತ್ತಾರೆ. ಚೈತನ್ಯ ಸಂಬಂಧವಿರುವ ಮಾತ್ರದಿಂದ ಐಕ್ಯವು ಚಿದ್ರೂಪವಾಗುವುದಾದರೆ ಜಡವಾದ ಜಗತ್ತೂ

ಸಹ ಚೈತನ್ಯದಲ್ಲೇ ಆರೋಪಿತವಾಗಿರುವುದರಿಂದ ಅದಕ್ಕೂ ಚೈತನ್ಯ ಸಂಬಂಧವಿರುವುದಷ್ಟೇ? ಅಥವಾ ಚೈತನ್ಯದಲ್ಲಿ ಆರೋಪಿತವಾದ ಅಜ್ಞಾನ ರೂಪವಾದ ಕಾರಣವನ್ನು ಹೊಂದಿರುವುದರಿಂದಲೂ ಚೈತನ್ಯ ಸಂಬಂಧವಿರುವುದಷ್ಟೇ? ಆದ್ದರಿಂದ ಚಿದೈಕ್ಯವು ಚಿದ್ರೂಪವಾದಂತೆ ಜಡೈಕ್ಯವೂ ಚಿದ್ರೂಪವೇ ಆಗಲಿ. ಆಗ ಒಂದು ಚೇತನ ಒಂದು ಜಡ ಎಂದು ಹೇಳುವ ವಿಲಕ್ಷಣ ಬರುವುದಿಲ್ಲ. ಆಗ ಎರಡೂ ಐಕ್ಯವನ್ನೂ ಒಪ್ಪಬೇಕು ಅಥವಾ ಎರಡೂ ಐಕ್ಯಗಳನ್ನೂ ಪರಿತ್ಯಜಿಸಬೇಕು. ಜಡೈಕ್ಯವನ್ನಂತೂ ನೀನು ಒಪ್ಪುವುದಿಲ್ಲ. ಆದ್ದರಿಂದ ಚೈತನ್ಯದ ಐಕ್ಯವೂ ಸಿದ್ಧವಾಗುವುದಿಲ್ಲ ಎಂದು ಅಭಿಪ್ರಾಯ.

**ವಿರುದ್ಧೈಕ್ಯಂ ಚಾಂತತಸ್ತತ್ಸ್ವಾಸ್ಥ್ಯೈಕ್ಯೇ ಪರ್ಯವಸ್ಯತಿ ।**
**ಸವಿಶೇಷಬ್ರಹ್ಮವಾದೇ ನಾಯಂ ದೋಷೋ ಭವಿಷ್ಯತಿ ॥ ೮೬೯ ॥**

**ಅರ್ಥ–** ವಿರುದ್ಧೈಕ್ಯಂ= ವಿರುದ್ಧವಸ್ತುಗಳ ಐಕ್ಯವು, ಅಂತತಃ= ಕೊನೆಯಲ್ಲೇ ಆದರೂ, ತತ್ಸ್ವಾಸ್ಥ್ಯೈಕ್ಯೇ= ಅವುಗಳ ಸ್ವಾಸ್ಥ್ಯೈಕ್ಯದಲ್ಲಿ, ಪರ್ಯವಸ್ಯತಿ= ಪರ್ಯವಸಾನವನ್ನು ಹೊಂದುತ್ತದೆ, ಸವಿಶೇಷ ಬ್ರಹ್ಮವಾದೇ= ಬ್ರಹ್ಮನಲ್ಲಿ ವಿಶೇಷವನ್ನು ಒಪ್ಪುವ ನಮ್ಮ ಮತದಲ್ಲಿ, ಅಯಂ ದೋಷಃ= ಈ ದೋಷವು, ನ ಭವಿಷ್ಯತಿ= ಬರುವುದಿಲ್ಲ.

**ಅನುವಾದ– ವಿರುದ್ಧ ವಸ್ತುಗಳ ಐಕ್ಯವು ಕೊನೆಯಲ್ಲಾದರೂ ಅವುಗಳ ಸ್ವಾಸ್ಥ್ಯೈಕ್ಯದಲ್ಲೇ ಪರ್ಯವಸಾನವನ್ನು ಹೊಂದುತ್ತದೆ. ಬ್ರಹ್ಮನಿಗೆ ಸವಿಶೇಷತ್ವವನ್ನು ಒಪ್ಪುವ ನಮ್ಮ ಮತದಲ್ಲಿ ಈ ದೋಷವು ಉಂಟಾಗುವುದಿಲ್ಲ.**

**ಭಾವವಿಲಾಸಿನೀ–** ತರ್ಹಿ ಭವತಾಂ ಮತೇಽಪಿ ಸಾಪೇಕ್ಷಭೇದಸಾರ್ವಜ್ಞಾದಿಧರ್ಮಾಣಾಂ ಕಥಂ ಬ್ರಹ್ಮಣ್ಯಭೇದ ಇತ್ಯಾಶಂಕ್ಯನಾಯಮಸ್ಮಾಕಂ ದೋಷ ಇತ್ಯಾಹ – **ಸವಿಶೇಷೇತಿ** ॥ ೮೬೯ ॥

**ವಿವರಣೆ–** ಹಾಗಾದರೆ ನಿಮ್ಮ ಮತದಲ್ಲಾದರೂ ಸಾಪೇಕ್ಷವಾದ ಸರ್ವಜ್ಞತ್ವಾದಿಗಳಿಗೂ, ನಿರಪೇಕ್ಷವಾದ ಬ್ರಹ್ಮನಿಗೂ ಹೇಗೆ ಅಭೇದವನ್ನು ಒಪ್ಪುತ್ತೀರಿ ಎಂಬ ಅದ್ವೈತಿಗಳ ಪ್ರಶ್ನೆಗೆ ಇಲ್ಲಿ ಉತ್ತರವನ್ನು ಹೇಳುತ್ತಾರೆ. ನಾವು ಸವಿಶೇಷ ಬ್ರಹ್ಮವಾದಿಗಳು. ಆದ್ದರಿಂದ ಅಭೇದವಿದ್ದರೂ ವಿಶೇಷದ ಸಾಮರ್ಥ್ಯದಿಂದ ಸಾಪೇಕ್ಷತ್ವ ನಿರಪೇಕ್ಷತ್ವರೂಪವಾದ ವಿರುದ್ಧವಾದ ಧರ್ಮಗಳನ್ನು ನಿರ್ವಹಿಸುತ್ತೇವೆ ಎಂದು ಅಭಿಪ್ರಾಯ.

**ಭೇದಹೀನೇಪಿ ಭೇದಸ್ಯ ಕಾರ್ಯಂ ಸ ಕುರುತೇ ಯತಃ ।**
**ಅತಃ ಸಾಪೇಕ್ಷಭೇದಸ್ಯಾಪ್ಯಭೇದೋ ಭೇದಿತಾ ಚ ನಃ ॥ ೮೭೦ ॥**

**ಅರ್ಥ–** ಯತಃ= ಯಾವ ಕಾರಣದಿಂದ, ಸಃ= ಆ ವಿಶೇಷವು, ಭೇದಹೀನೇಪಿ= ಭೇದವು ಇಲ್ಲದಿರುವ ಸ್ಥಳದಲ್ಲಿಯೂ ಸಹ, ಭೇದಸ್ಯ ಕಾರ್ಯಂ= ಭೇದದ ಕಾರ್ಯವನ್ನು, ಕುರುತೇ= ಮಾಡುತ್ತದೆಯೋ, ಅತಃ= ಆ ಕಾರಣದಿಂದ, ಸತಃ= ಸತ್ಯವಾದ, ಸಾಪೇಕ್ಷಭೇದಸ್ಯಾಪಿ=

ಸಾಪೇಕ್ಷವಾದ ಭೇದಕ್ಕೂ ಸಹ, ನಃ= ನಮಗೆ, ಅಭೇದಃ= ಧರ್ಮಿಯಿಂದ ಅಭೇದವು, ಭೇದಿತಾ= ವಸ್ತುವಿಗೆ ಭೇದ ಧರ್ಮಿತ್ವವು ಉಪಪನ್ನವಾಗುತ್ತವೆ.

**ಅನುವಾದ–** ವಿಶೇಷವು ಭೇದವಿಲ್ಲದ ಸ್ಥಳದಲ್ಲಿಯೂ ಪ್ರಮಿತವಾದ ಭೇದದ ಕಾರ್ಯವನ್ನು ನಿರ್ವಹಿಸುವುದರಿಂದ ಸತ್ಯವಾದ ಮತ್ತು ಪ್ರತಿಯೋಗಿ ನಿರೂಪ್ಯವಾದ ಕಾರಣದಿಂದ ಸಾಪೇಕ್ಷವಾದ ಭೇದಕ್ಕೂ ಸಹ ಧರ್ಮಿಯಿಂದ ಅಭೇದವೂ, ಆ ಧರ್ಮಿಗೆ ಭೇದವನ್ನು ಕುರಿತು ಧರ್ಮಿತ್ವವೂ ಉಪಪನ್ನವಾಗುತ್ತವೆ.

**ಭಾವವಿಲಾಸಿನೀ–** ಸಃ ವಿಶೇಷಃ । ಭೇದಿತಾ ಅಭೇದೇऽಪಿ ಭೇದಭೇದಿಭಾವ ಇತ್ಯರ್ಥಃ ॥೮೭೦॥

ಭೇದಸ್ಯ ಭಿನ್ನತಾವಾದೀ ತತ್ಸತ್ಯತ್ವಂ ವದೇದ್ಯದಾ ।
ತದಾ ಕಿಂ ದೂಷಣಂ ತಸ್ಯ ಸದದ್ವೈತಂ ಯತೋಽಸ್ಯ ನ ॥ ೮೭೧ ॥

ನಿರ್ವಿಶೇಷಬ್ರಹ್ಮವಾದೇ ಸಾಪೇಕ್ಷನಿರಪೇಕ್ಷಯೋಃ ।
ಜೀವೈಕ್ಯಬ್ರಹ್ಮಣೋರೈಕ್ಯೇ ದೋಷಸ್ಯಾಸ್ಯಾಸ್ತಿ ನೌಷಧಮ್ ॥ ೮೭೨ ॥

**ಅರ್ಥ–** ಭೇದಸ್ಯ ಭಿನ್ನತಾವಾದೀ= ಭೇದಕ್ಕೆ ಭಿನ್ನತ್ವವನ್ನು ಹೇಳುವ ವಾದಿಯು, ಯದಾ= ಯಾವಾಗ, ತತ್ ಸತ್ಯತ್ವಂ= ಅದಕ್ಕೆ ಸತ್ಯತ್ವವನ್ನೂ, ವದೇತ್= ಹೇಳುತ್ತಾನೆಯೋ, ತದಾ= ಆಗ, ತಸ್ಯ= ಅವನಿಗೆ, ಕಿಂ ದೂಷಣಂ= ಯಾವ ದೂಷಣವಿದೆ, ಯತಃ= ಏಕೆಂದರೆ, ಅಸ್ಯ= ಅವನಿಗೆ, ಸದದ್ವೈತಂ= ಸದದ್ವೈತವು, ನ= ಅಭಿಪ್ರೇತವಲ್ಲ, ನಿರ್ವಿಶೇಷ ಬ್ರಹ್ಮವಾದೇ= ನಿರ್ವಿಶೇಷ ಬ್ರಹ್ಮವಾದದಲ್ಲಾದರೂ, ಸಾಪೇಕ್ಷನಿರಪೇಕ್ಷಯೋಃ= ಸಾಪೇಕ್ಷ ಮತ್ತು ನಿರಪೇಕ್ಷವಾದ, ಜೀವೈಕ್ಯಬ್ರಹ್ಮಣೋಃ= ಜೀವೈಕ್ಯ ಮತ್ತು ಬ್ರಹ್ಮರ, ಐಕ್ಯೇ= ಐಕ್ಯದ ವಿಷಯದಲ್ಲಿ ಬರುವ, ಅಸ್ಯ ದೋಷಸ್ಯ= ಈ ವಿರುದ್ಧತ್ವ ರೂಪವಾದ ದೋಷಕ್ಕೆ, ಔಷಧಂ ನಾಸ್ತಿ= ಪರಿಹಾರಕವಾದುದು ಯಾವುದೂ ಇಲ್ಲ.

**ಅನುವಾದ–** ಭೇದವು ಭಿನ್ನ ಎಂದು ಹೇಳುವ ತಾರ್ಕಿಕನು ಅದಕ್ಕೆ ಸತ್ಯತ್ವವನ್ನು ಹೇಳುವಾಗ ಅದಕ್ಕೆ ಯಾವ ದೂಷಣವಿದೆ? ಏಕೆಂದರೆ, ಸದದ್ವೈತವು ಅವನಿಗೆ ಅಭಿಪ್ರೇತವಲ್ಲ. ನಿರ್ವಿಶೇಷ ಬ್ರಹ್ಮವಾದದಲ್ಲಾದರೂ ಜೀವೈಕ್ಯವು ಸಾಪೇಕ್ಷವಾಗಿರುವುದರಿಂದ ಬ್ರಹ್ಮಸ್ವರೂಪವು ನಿರಪೇಕ್ಷವಾಗಿರುವುದರಿಂದ ಅವುಗಳಿಗೆ ಐಕ್ಯವನ್ನು ಹೇಳಿದರೆ ಬರುವ ವಿರೋಧ ರೂಪವಾದ ದೋಷವನ್ನು ಪರಿಹರಿಸಲು ಯಾವ ಔಷಧಿಯೂ (ಉಪಾಯವೂ) ಇಲ್ಲ.

**ಭಾವವಿಲಾಸಿನೀ–** ಭೇದಸ್ಯ ಭಿನ್ನತಾವಾದೀ ತಾರ್ಕಿಕಃ । ತಸ್ಯ ಜಗತ್‌ಸತ್ಯತ್ವವಾದಿನಃ ॥ ೮೭೨ ॥

**ವಿವರಣೆ–** ನಾವು ಭೇದಕ್ಕೂ ಮತ್ತು ಧರ್ಮಿಗೂ ಅಭೇದವನ್ನು ಹೇಳುವುದರಿಂದ ಸಾಪೇಕ್ಷ, ನಿರಪೇಕ್ಷವಾದವುಗಳಿಗೆ ಹೇಗೆ ಅಭೇದ ಎಂಬ ಪ್ರಶ್ನೆಯನ್ನು ನೀನು ಕೇಳಿದೆ.

ಆದರೆ ತಾರ್ಕಿಕನು ಭೇದವನ್ನು ಸತ್ಯ ಮತ್ತು ಭಿನ್ನ ಎಂದು ಹೇಳುವುದರಿಂದ ಅವನನ್ನು ಕುರಿತು ಈ ಸಾಪೇಕ್ಷತ್ವ, ನಿರಪೇಕ್ಷತ್ವರೂಪವಾದ ಯುಕ್ತಿಯು ಅಪ್ರಯೋಜಕವಾದುದು. ನೀನು ಅವನನ್ನೂ ನಿರಾಕರಣೆ ಮಾಡಬೇಕಷ್ಟೇ? ಅವನಿಗೆ ಏನು ದೋಷವನ್ನು ಹೇಳುತ್ತೀಯೇ? ಅಂತಹ ದೋಷವು ಯಾವುದೂ ಇಲ್ಲ ಎಂದು ಅದ್ವೈತಿಗಳಿಗೆ ಉತ್ತರವನ್ನು ಕೊಡುತ್ತಾರೆ. ಆದರೆ ತಾರ್ಕಿಕರನ್ನು ಕುರಿತು ಯಾವ ದೋಷವೂ ಇಲ್ಲವೆಂದು ಅರ್ಥವಲ್ಲ. ಭೇದಕ್ಕೆ ಭಿನ್ನತ್ವವನ್ನು ಒಪ್ಪುವ ಅವನಿಗೆ ಅನವಸ್ಥಾದೋಷವು ಇದ್ದೇ ಇದೆ. ಆದರೆ ಇಲ್ಲಿ ಪ್ರಕೃತ ಸಂಗತವಲ್ಲ ಎಂದು ಇಲ್ಲಿ ಹೇಳಿಲ್ಲ. ನಿರ್ವಿಶೇಷ ಬ್ರಹ್ಮವಾದದಲ್ಲಂತೂ ಈ ವಿರೋಧ ರೂಪವಾದ ಬಾಧಕವನ್ನು ಪರಿಹಾರ ಮಾಡಲು ಸಾಧ್ಯವೇ ಇಲ್ಲ ಎಂದು ಅಭಿಪ್ರಾಯ.

ತಸ್ಮಾದ್ಭೇದಶ್ರುತೇರಗ್ರೇ ನೈಕ್ಯಶ್ರುತಿಶತಸ್ಯ ತೇ ।
ಸ್ವಾರ್ಥಸ್ಯ ಸಾಧನೇ ಶಕ್ತಿಃ ಕಿಮುತಾನ್ಯಸ್ಯ ಬಾಧನೇ ॥ ೮೭೩ ॥

**ಅರ್ಥ–** ತಸ್ಮಾತ್= ಆದ್ದರಿಂದ, ಭೇದಶ್ರುತೇಃ ಅಗ್ರೇ= ಭೇದಶ್ರುತಿಯ ಎದುರಿನಲ್ಲಿ, ತೇ= ನಿನ್ನ, ಐಕ್ಯಶ್ರುತಿಶತಸ್ಯ= ನೂರು ಐಕ್ಯಶ್ರುತಿಗಳಿಗೂ ಸಹ, ಸ್ವಾರ್ಥಸ್ಯ ಸಾಧನೇ= ತಮ್ಮ ಅರ್ಥವನ್ನು ಪ್ರತಿಪಾದನೆ ಮಾಡುವುದಕ್ಕೆ, ಶಕ್ತಿಃ ನ= ಸಾಮರ್ಥ್ಯವಿಲ್ಲ, ಅನ್ಯಸ್ಯ ಬಾಧನೇ= ಭೇದವನ್ನು ಬಾಧಿಸುವುದಕ್ಕೆ, ಕಿಮುತ= ಶಕ್ತಿ ಇಲ್ಲವೆಂದು ಪುನಃ ಹೇಳಬೇಕೇನು?

**ಅನುವಾದ–** ಆದ್ದರಿಂದ ಭೇದಶ್ರುತಿಯ ಎದುರಿನಲ್ಲಿ ನಿನ್ನ ನೂರು ಐಕ್ಯಶ್ರುತಿಗಳಿದ್ದರೂ ಅವುಗಳಿಗೆ ಸ್ವಾರ್ಥವನ್ನು ಸಾಧನೆ ಮಾಡಲು ಸಾಧ್ಯವಿಲ್ಲ. ಇನ್ನು ಅವು ಭೇದವನ್ನು ಬಾಧಿಸುವುದು ಹೇಗೆ?

**ಭಾವವಿಲಾಸಿನೀ–** ತಸ್ಮಾತ್ ಉಕ್ತರೀತ್ಯಾ ಐಕ್ಯಸ್ಯ ವಿಕಲ್ಪಾಸಹತ್ವಾತ್ । ಅನ್ಯಸ್ಯ ಭೇದಸ್ಯ ॥ ೮೭೩ ॥

**ವಿವರಣೆ–** ಐಕ್ಯವು ಅನುಪಪನ್ನವಾಗುವುದರಿಂದ ಶ್ರುತಿಯು ಎಂದೂ ಅನುಪಪನ್ನವಾದ ಅರ್ಥವನ್ನು ಹೇಳಲು ಸಾಧ್ಯವಿಲ್ಲವಾದ್ದರಿಂದ ನೂರು ಶ್ರುತಿಗಳಿದ್ದರೂ ಐಕ್ಯವನ್ನು ಹೇಳಲಾರವು. ಆದ್ದರಿಂದ ಭೇದವು ಹೇಗೆ ಬಾಧಿತವಾಗುತ್ತದೆ ಎಂದು ಅಭಿಪ್ರಾಯ.

ಕಿಂಚೈಕಮೇವಾದ್ವಿತೀಯಂ ನೇಹನಾನೇತಿ ಚ ಶ್ರುತಿಃ ।
ಸರ್ವಂ ಬ್ರಹ್ಮೇತಿ ವಾಕ್ ಚ ಸ್ಯಾದ್ಯದಿ ವಿಶ್ವಸ್ಯಬಾಧಿಕಾ ॥ ೮೭೪ ॥

ತದಾ ಭೇದಪರೈವಾಭೂನ್ನಾಭೇದಪರತಾ ಶ್ರುತೇಃ ।
ಅಬಾಧ್ಯಬಾಧ್ಯಯೋರ್ಭೇದೋ ಯತೋಽವಶ್ಯಮಪೇಕ್ಷಿತಃ ॥ ೮೭೫ ॥

**ಅರ್ಥ–** ಕಿಂಚ= ಮತ್ತು, ಏಕಮೇವಾದ್ವಿತೀಯಂ= ಏಕಮೇವಾದ್ವಿತೀಯಂ ಎಂಬ ಶ್ರುತಿಯು, ನೇಹನಾನೇತಿ ಚ ಶ್ರುತಿಃ= ನೇಹನಾನಾಸ್ತಿ ಕಿಂಚನ ಎಂಬ ಶ್ರುತಿಯು, ಸರ್ವಂ ಬ್ರಹ್ಮೇತಿ ವಾಕ್ ಚ= ಮತ್ತು ಸರ್ವಂ ಖಲ್ವಿದಂ ಬ್ರಹ್ಮ ಎಂಬ ಶ್ರುತಿಯು, ಯದಿ= ಒಂದು ಪಕ್ಷ, ವಿಶ್ವಸ್ಯ= ವಿಶ್ವಕ್ಕೆ, ಬಾಧಿಕಾಸ್ಯಾತ್= ಬಾಧಕವಾಗುವುದಾದರೆ, ತದಾ= ಆಗ, ಶ್ರುತಿಃ= ಶ್ರುತಿಯು, ಭೇದಪರ್ಯೆವಾಭೂತ್= ಭೇದಪರವೇ ಆಯಿತು, ನಾಭೇದಪರತಾ= ಅಭೇದ ಪರವಾಗುವುದಿಲ್ಲ, ಯತಃ= ಏಕೆಂದರೆ, ಅಬಾಧ್ಯಬಾಧ್ಯಯೋಃ= ಅಬಾಧ್ಯ ಮತ್ತು ಬಾಧ್ಯವಾದ ವಸ್ತುಗಳಿಗೆ, ಅವಶ್ಯಂ= ಅವಶ್ಯವಾಗಿ, ಭೇದಃ= ಭೇದವು, ಅಪೇಕ್ಷಿತಃ= ಅಪೇಕ್ಷಿತವಷ್ಟೇ.

**ಅನುವಾದ– ಮತ್ತು ಏಕಮೇವಾದ್ವಿತೀಯಂ ಎಂಬ ಶ್ರುತಿಯು, ನೇಹನಾನಾಸ್ತಿ ಕಿಂಚನ ಎಂಬ ಶ್ರುತಿಯು, ಸರ್ವಂ ಖಲ್ವಿದಂ ಬ್ರಹ್ಮ ಎಂಬ ಶ್ರುತಿಯು ವಿಶ್ವಕ್ಕೆ ಬಾಧಕವಾಗುವುದಾದರೆ ಆಗ ಶ್ರುತಿಯು ಭೇದಪರವೇ ಆಗುತ್ತದೆ, ಅಭೇದ ಪರವಾಗುವುದಿಲ್ಲ. ಏಕೆಂದರೆ ಅಬಾಧ್ಯ ಮತ್ತು ಬಾಧ್ಯಗಳಿಗೆ ಅವಶ್ಯವಾಗಿ ಭೇದವು ಇರಲೇಬೇಕಷ್ಟೇ?**

**ಭಾವವಿಲಾಸಿನೀ–** ಪ್ರಕಾರಾಂತರೇಣಾಪ್ಯೈಕ್ಯಶ್ರುತೀನಾಂ ದೂಷಣಮಾಹ – **ಕಿಂಚೇತಿ** ॥ ವಿಶ್ವಸ್ಯ ಬಾಧಿಕಾ ಬ್ರಹ್ಮವ್ಯತಿರೇಕೇಣಾಸತ್ತ್ವರೂಪಮರ್ಥಮಾದಾಯ ವಿಶ್ವಮಿಥ್ಯಾತ್ವಪರಾ ಸ್ಯಾದಿ-ತ್ಯರ್ಥಃ ॥ ೮೭೪ ॥

ಭೇದಪರಾ ಜಗದ್‌ಭೇದಪರಾ । ಕುತ ಇತ್ಯತ ಆಹ – **ಅಬಾಧ್ಯಬಾಧ್ಯಯೋರಿತಿ** ॥ ೮೭೫ ॥

**ವಿವರಣೆ–** ಈ ಶ್ರುತಿಗಳು ಬಾಧಕವಾಗುತ್ತವೆ ಎಂದು ಹೇಳಿದರೆ ಬಾಧಕ್ಕೆ ಒಂದು ಅವಧಿಯು ಇರಬೇಕಾಗಿರುವುದರಿಂದ ಆ ಅವಧಿಯು ಬಾಧ್ಯವಾಗುವುದಿಲ್ಲವಾದ್ದರಿಂದ ಅಬಾಧ್ಯವಾದ ಅವಧಿಯನ್ನು ಮತ್ತು ಬಾಧ್ಯವಾದ ವಿಶ್ವವನ್ನು ಒಪ್ಪಬೇಕಾಗುತ್ತದೆ. ಹಾಗಿಲ್ಲದೇ ಬಾಧವನ್ನು ಉಪಪಾದನೆ ಮಾಡಲು ಬರುವುದಿಲ್ಲ. ಆಗ ಬಾಧ್ಯಾಬಾಧ್ಯಗಳಿಗೆ ಭೇದವೇ ಸಿದ್ಧವಾಗುತ್ತದೆ. ನೇದಂ ರಜತಂ ಎಂದು ಬಾಧಜ್ಞಾನದ ಆಕಾರ. ಅಲ್ಲಿ ಇದಂ ಎಂಬುದು ಅವಧಿ. ಅವಧಿಯು ಅಬಾಧ್ಯವೆಂದೂ, ಅವಧಿಯು ಇಲ್ಲದ ಒಂದು ಬಾಧಜ್ಞಾನವು ಇಲ್ಲವೆಂದು ಅದ್ವೈತಿಗಳೂ ಒಪ್ಪುತ್ತಾರೆ. ಆದ್ದರಿಂದ ಬಾಧ ಎಂದ ತಕ್ಷಣ ಅಬಾಧ್ಯ ಮತ್ತು ಬಾಧ್ಯಗಳ ಭೇದವು ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

ಜೀವಭೇದೇ ತ್ವಭೇದಾಪ್ತ್ಯಾ ಬಾಧ್ಯತ್ವಾಶಾಸ್ತು ವಾ ತವ ।
ಅಭೇದೋ ಯಸ್ಯ ನೈವ ಸ್ಯಾತ್ತದ್ಭೇದಃ ಕೇನ ಬಾಧ್ಯತೇ ॥ ೮೭೬ ॥

**ಅರ್ಥ–** ಜೀವಭೇದೇ ತು= ಜೀವಭೇದದ ವಿಷಯದಲ್ಲಾದರೂ, ಅಭೇದಾಪ್ತ್ಯಾ= ಅಭೇದವು ಉಂಟಾಗುವುದರಿಂದ, ತವ= ನಿನಗೆ, ಬಾಧ್ಯತ್ವಾಶಾ= ಬಾಧ್ಯತ್ವದ ಆಶೆಯು, ಅಸ್ತು ವಾ= ಬೇಕಾದರೆ ಇರಲಿ, ಯಸ್ಯ= ಯಾವ ಜಡಕ್ಕೆ, ಅಭೇದಃ= ಅಭೇದವು, ನೈವಸ್ಯಾತ್= ಉಂಟಾಗುವುದೇ ಇಲ್ಲವೋ, ತದ್ಭೇದಃ= ಅಂತಹ ಜಡದ ಭೇದವು, ಕೇನ ಬಾಧ್ಯತೇ= ಯಾವುದರಿಂದ ಬಾಧಿಸಲ್ಪಡುತ್ತದೆ.

**ಅನುವಾದ–** ಜೀವನಿಗೆ ಒಂದು ದಿನ ಬ್ರಹ್ಮಾಭೇದವು ಉಂಟಾಗುತ್ತದೆ ಎಂದು ಹೇಳುವುದರಿಂದ ನಿನಗೆ ಜೀವಭೇದಕ್ಕೆ ಬಾಧ್ಯತ್ವಾಶೆಯು ಬೇಕಾದರೆ ಇರಲಿ. ಆದರೆ ಜಡಾಭೇದವು ಎಂದೂ ಉಂಟಾಗುವುದಿಲ್ಲವಾದ್ದರಿಂದ ಜಡಭೇದಕ್ಕೆ ಯಾವುದರಿಂದ ಬಾಧವುಂಟಾಗುತ್ತದೆ?

**ಭಾವವಿಲಾಸಿನೀ–** ನನ್ವಸ್ತಿ ಭೇದಃ ಸೋಽಪಿ ವ್ಯಾವಹಾರಿಕತಯಾ ಬಾಧ್ಯ ಇತಿ ಚೇತ್ತತ್ರಾಹ – **ಜೀವಭೇದ ಇತಿ ॥** ಅಭೇದಾಪ್ತ್ಯಾ ಭೇದವಿರುದ್ಧೈಕ್ಯಾಪ್ತ್ಯಾ । ತವ ಮತೇ ಯಸ್ಯ ಜಡಸ್ಯ । ತದ್ಭೇದಃ ಜಡಬ್ರಹ್ಮಾಭೇದಃ । ಕೇನ ಕಾರಣೇನ । ತವಾಪಿ ಮತೇ ಮುಕ್ತೌ ಜೀವೈಕ್ಯಪ್ರಾಪ್ತ್ಯಾ ಜೀವಭೇದಮಾತ್ರಸ್ಯ ಬಾಧೋಽಸ್ತು। ಜಡೈಕ್ಯಪ್ರಾಪ್ತೇರೇವಾಭಾವಾತ್ ಉಕ್ತರೀತ್ಯಾ ಶ್ರುತಿಸಿದ್ಧಸ್ಯ ಜಡಭೇದಸ್ಯ ಬ್ರಹ್ಮವತ್‌ಪಾರಮಾರ್ಥ್ಯಮೇವಾಭೂತ್ । ಬಾಧಕತ್ವೇನಾಭಿಮತತತ್ವಮಸ್ಯಾದಿ-ವಾಕ್ಯಾನಾಮುಕ್ತರೀತ್ಯಾ ಭೇದಸಾಧಕತ್ವಸ್ಯೈವ ಪ್ರಾಪ್ತೇರಿತಿ ಭಾವಃ ॥ ೮೭೬ ॥

**ವಿವರಣೆ–** ಸಂಸಾರಾವಸ್ಥೆಯಲ್ಲಿ ಜೀವದಿಂದಲೂ ಜಡದಿಂದಲೂ ಭೇದವಿದೆ. ಅದ್ವೈತಿಗಳು ಆ ಭೇದವನ್ನು ವ್ಯಾವಹಾರಿಕವೆಂದು ಹೇಳುತ್ತಾರೆ. ವ್ಯಾವಹಾರಿಕವೆಂದರೆ ಬಾಧ್ಯ ಎಂದು ಅರ್ಥ. ಈಗ ಜೀವಭೇದವಿದ್ದರೂ ಮುಂದೆ ಜೀವಾಭೇದವು ಉಂಟಾಗುವುದರಿಂದ ಜೀವಭೇದವು ಬಾಧ್ಯವಾದುದು ಎಂದು ಒಂದು ಪಕ್ಷ ಹೇಳಬಹುದು (ಅದೂ ಸರಿಯಲ್ಲ ಅದು ಬೇರೆಯ ವಿಷಯ). ಏಕೆಂದರೆ ಸ್ವತಃ-ಪ್ರಾಮಾಣ್ಯದಿಂದ ಪ್ರಾಪ್ತವಾದ ಪ್ರಾಮಾಣ್ಯವು ಬಾಧದಿಂದ ಅಪವಾದಿಸಲ್ಪಡುತ್ತದಷ್ಟೇ? ಆದರೆ ಬ್ರಹ್ಮನಲ್ಲಿ ಎಂದೂ ಜಡಾಭೇದವು ಉಂಟಾಗುವುದಿಲ್ಲವಾದ ಕಾರಣ ಇಲ್ಲಿ ಪ್ರತೀತವಾದ ಜಡಾಭೇದಕ್ಕೆ ಬಾಧಕವೇ ಇರುವುದಿಲ್ಲ. ಅದು ಬ್ರಹ್ಮನಂತೆ ಪಾರಮಾರ್ಥಿಕ ಸತ್ಯವಾಗಲು ಏನು ಬಾಧಕವಿದೆ ಎಂದು ಪ್ರಶ್ನೆ ಮಾಡುತ್ತಾರೆ.

ವಿಶ್ವಬಾಧೇಪಿ ವಿಶ್ವಸ್ಮಾದ್ಯೋ ಭೇದೋ ಬ್ರಹ್ಮಣಿ ಸ್ಥಿತಃ ।
ಧರ್ಮ್ಯಭಿನ್ನಸ್ಯ ತಸ್ಯಾಲಂ ಕಥಂ ಬಾಧಾಯತೇ ಶ್ರುತಿಃ ॥ ೮೭೭ ॥

**ಅರ್ಥ–** ವಿಶ್ವಬಾಧೇಪಿ= ವಿಶ್ವವು ಬಾಧಿತವಾದರೂ, ಬ್ರಹ್ಮಣಿ ಸ್ಥಿತಃ= ಬ್ರಹ್ಮನಲ್ಲಿರುವ, ಯಃ ವಿಶ್ವಸ್ಮಾದ್ಯೋ ಭೇದೋ= ಯಾವ ವಿಶ್ವಪ್ರತಿಯೋಗಿಕ ಭೇದವಿದೆಯೋ, ಧರ್ಮ್ಯಭಿನ್ನಸ್ಯ ತಸ್ಯ= ಧರ್ಮಿಯಿಂದ ಅಭಿನ್ನವಾದ ಅದಕ್ಕೆ, ಶ್ರುತಿಃ= ಶ್ರುತಿಯು, ಕಥಂ ಬಾಧಾಯತೇ= ಹೇಗೆ ಬಾಧಕವಾಗುತ್ತದೆ.

**ಅನುವಾದ–** ವಿಶ್ವಕ್ಕೆ ಬಾಧವುಂಟಾದರೂ ಬ್ರಹ್ಮಧರ್ಮಿಕವಾದ ವಿಶ್ವಪ್ರತಿಯೋಗಿಕವಾದ ಭೇದವು ಧರ್ಮಿಯಾದ ಬ್ರಹ್ಮನಿಂದ ಅಭಿನ್ನವಾಗಿರುವುದರಿಂದ ಶ್ರುತಿಯು ಅದಕ್ಕೆ ಹೇಗೆ ಬಾಧಕವಾಗುತ್ತದೆ?

**ಭಾವವಿಲಾಸಿನೀ–** ನನು ಧರ್ಮಿಣೋ ವಿಶ್ವಸ್ಯ ಬಾಧೇ ತದ್ಧರ್ಮಭೂತಭೇದಸ್ಯ ಕಥಮವಶೇಷ ಇತಿ ಶಂಕಾಂ ದ್ವೇಧಾ ಪರಿಹರತಿ – **ವಿಶ್ವೇತಿ ॥** ಧರ್ಮ್ಯಭಿನ್ನಸ್ಯೇತಿ ವದತಾ ಬ್ರಹ್ಮವ್ಯತಿರೇಕೇಣಾ-ಸತ್ತ್ವಪ್ರತಿಪಾದಿಕಾಪಿ ಶ್ರುತಿರ್ನ ಬಾಧಿಕೇತಿ ಸೂಚಯತಿ ॥ ೮೭೭ ॥

**ವಿವರಣೆ–** 'ನೇಹ ನಾನಾಸ್ತಿ ಕಿಂಚನ' ಮೊದಲಾದ ಶ್ರುತಿಯು ವಿಶ್ವಕ್ಕೆ ಬ್ರಹ್ಮವ್ಯತಿರೇಕೇಣ ಅಸತ್ತ್ವವನ್ನು ಪ್ರತಿಪಾದನೆ ಮಾಡುತ್ತದೆ. ಅದು ಧರ್ಮಿಯಿಂದ ಅಭಿನ್ನವಾದ ವಿಶ್ವಭೇದಕ್ಕೆ ಬಾಧಕವಾಗುವುದಿಲ್ಲ ಎಂದು ಇಲ್ಲಿ ಸೂಚಿಸುತ್ತಾರೆ.

**ಧರ್ಮಿನಾಶೇಪಿ ಭೇದೋಽಯಮವಿನಾಶೀ ಮತೇ ತವ ।**
**ತದ್ಬಾಧ್ಯಜಗತೋ ಭೇದೋಪ್ಯಬಾಧ್ಯಃ ಸ್ಯಾತ್ ಸುಖೇನ ತೇ ॥ ೮೭೮ ॥**

**ಅರ್ಥ–** ಧರ್ಮಿನಾಶೇಪಿ= ಧರ್ಮಿಯು ನಾಶವಾದರೂ, ತವ ಮತೇ= ನಿನ್ನ ಮತದಲ್ಲಿ, ಅಯಂ ಭೇದಃ= ಈ ಭೇದವು, ಅವಿನಾಶೀ= ನಾಶರಹಿತವಾದುದು, ತತ್= ಆದ್ದರಿಂದ, ಬಾಧ್ಯಜಗತೋ ಭೇದಃ= ಬಾಧ್ಯವಾದ ಜಗತ್ಪ್ರತಿಯೋಗಿಕ ಭೇದವು, ತೇ= ನಿನಗೆ, ಸುಖೇನ= ಅನಾಯಾಸವಾಗಿಯೇ, ಅಬಾಧ್ಯಃ ಸ್ಯಾತ್= ಅಬಾಧ್ಯವಾಗುತ್ತದೆ.

**ಅನುವಾದ–** ಧರ್ಮಿನಾಶವಾದರೂ ನಿನ್ನಮತದಲ್ಲಿ ಈ ಭೇದವು ನಾಶವನ್ನು ಹೊಂದುವುದಿಲ್ಲ. ಆದ್ದರಿಂದ ಬಾಧ್ಯವಾದ ಜಗತ್ ಪ್ರತಿಯೋಗಿಕ ಭೇದವು ಅನಾಯಾಸವಾಗಿ ನಿನ್ನ ರೀತಿಯಿಂದಲೇ ಅಬಾಧ್ಯವೆಂದು ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ತತ್ ತಸ್ಮಾತ್ । ಅನ್ಯೋನ್ಯಾಭಾವಸ್ಯ ನಿತ್ಯಾತ್ವಾಂಗೀಕಾರಾತ್ । ತೇ ಮತೇ ॥ ೮೭೮ ॥

**ವಿವರಣೆ–** ಅದ್ವೈತಿಗಳು ಅನ್ಯೋನ್ಯಾಭಾವಕ್ಕೆ ನಿತ್ಯತ್ವವನ್ನು ಹೇಳಿರುವುದರಿಂದ ಅದು ನಾಶ ಶೂನ್ಯವಾದುದು ಎಂದು ಅರ್ಥ.

**ಅಭಾವದ್ವೈತವಾದೇ ತೇ ನಾನ್ಯೋನ್ಯಾಭಾವಬಾಧಿಕಾ ।**
**ಶ್ರುತಿರೇಷಾ ಯುಕ್ತಬಾಧೋ ಯುಕ್ತೋ ನಾಯುಕ್ತಬಾಧನಂ ॥ ೮೭೯ ॥**

**ಅರ್ಥ–** ಅಭಾವದ್ವೈತವಾದೇ= ಒಂದಕ್ಕಿಂತ ಹೆಚ್ಚಿನ ಸತ್ಯವನ್ನು ಅಭಾವವೆಂದು ಒಪ್ಪುವ ನಿನ್ನ ಪಕ್ಷದಲ್ಲಿ, ಏಷಾ ತೇ ಶ್ರುತಿಃ= ಈ ನಿನ್ನ ಅದ್ವೈತ ಶ್ರುತಿಯು, ಅನ್ಯೋನ್ಯಾಭಾವಬಾಧಿಕಾ ನ= ಅನ್ಯೋನ್ಯಾಭಾವವನ್ನು ಬಾಧಿಸುವುದಿಲ್ಲ, ಯುಕ್ತ ಬಾಧಃ= ಯೋಗ್ಯವಾದುದಕ್ಕೇ

ಬಾಧವು, ಯುಕ್ತಃ= ಉಪಪನ್ನವಾಗುತ್ತದೆ, ಅಯುಕ್ತ ಬಾಧನಂ ನ= ಬಾಧಕ್ಕೆ ಅಯೋಗ್ಯವಾದುದಕ್ಕೆ ಬಾಧವು ಇರುವುದಿಲ್ಲ.

**ಅನುವಾದ–** ಅಭಾವ ದ್ವೈತವನ್ನು ಅಂಗೀಕರಿಸುವ ನಿನ್ನ ಪಕ್ಷದಲ್ಲಿ ಈ ಅದ್ವೈತ ಶ್ರುತಿಯು ಅನ್ಯೋನ್ಯಾಭಾವಕ್ಕೆ ಬಾಧಕವಾಗುವುದಿಲ್ಲ. ಬಾಧಕ್ಕೆ ಯೋಗ್ಯವಾದುದಷ್ಟೇ ಬಾಧಿತವಾಗುತ್ತದೆ. ಬಾಧಕ್ಕೆ ಅಯೋಗ್ಯವಾದುದು ಬಾಧಿತವಾಗುವುದಿಲ್ಲ.

**ಭಾವವಿಲಾಸಿನೀ–** ಅಸ್ಮಿನ್ ಪಕ್ಷೇಽಪ್ಯದ್ವೈತವಾಕ್ಯಸ್ಯಾಬಾಧಕತ್ವಂ ದ್ವೇಧೋಪಪಾದಯತಿ ॥ **ಅಭಾವದ್ವೈತೇತಿ**॥ ಅಯುಕ್ತಬಾಧನಮ್ । ಬಾಧ್ಯಾಬಾಧ್ಯಭೇದಸ್ಯಾವಶ್ಯಕತಯಾ ಯುಕ್ತಿವಿರುದ್ಧಂ ತದ್ಬಾಧನಮಿತ್ಯರ್ಥಃ । ನಹಿ ಘಟೋ ನಾಸ್ತೀತಿ ನಿಷೇಧತಾ ಯುಕ್ತಿಪ್ರಾಪ್ತಸ್ತದಭಾವೋಽಪಿ ನಿಷೇದ್ಧುಂ ಶಕ್ಯತ ಇತಿ ಭಾವಃ ॥ ೮೭೯ ॥

**ವಿವರಣೆ–** ಅಭಾವದ್ವೈತವಾದದಲ್ಲಿ ಭಾವವು ಮಾತ್ರ ಬಾಧಿತವಾಗುತ್ತದೆ, ಅಭಾವವು ಬಾಧಿತವಾಗುವುದಿಲ್ಲ. ಆದ್ದರಿಂದ ಆಗಲೂ ಭಾವಾಭಾವಗಳ ಭೇದವು ಅವಶ್ಯಕವಾದುದರಿಂದ ಆ ಪಕ್ಷದಲ್ಲಿಯೂ ಅದ್ವೈತ ಶ್ರುತಿಯು ಭೇದವನ್ನು ಬಾಧಿಸುವುದಿಲ್ಲ. ಘಟೋ ನಾಸ್ತಿ ಎಂದು ಹೇಳುವವನು ಆ ವಾಕ್ಯದಿಂದ ಪ್ರಾಪ್ತವಾದ ಘಟಾಭಾವವನ್ನು ನಿಷೇಧಿಸುವುದಿಲ್ಲವಷ್ಟೇ?

ನ ಚೇಜ್ಜೀವೋಽಪಿ ಬಾಧ್ಯಃ ಸ್ಯಾದತೋ ಭೇದೋ ನ ಚಾಲ್ಯತೇ ।
ಭೇದಮಿಥ್ಯಾತ್ವಾನುಮಾನೇ ತತೋತ್ರ ವ್ಯಭಿಚಾರಿಣಿ ॥ ೮೮೦ ॥

**ಅರ್ಥ–** ನ ಚೇತ್= ಅಯುಕ್ತವಾದುದು ಬಾಧಿತವಾಗಬಹುದಾದರೆ, ಜೀವೋಽಪಿ= ಜೀವನೂ ಸಹ, ಬಾಧ್ಯಃ ಸ್ಯಾತ್= ಬಾಧ್ಯನಾಗಲಿ, ತತಃ= ಆದ್ದರಿಂದ, ಅತ್ರ= ಈ ಅಬಾಧ್ಯವಾದ ಜಗದ್ಭೇದದಲ್ಲಿ, ಭೇದಮಿಥ್ಯಾತ್ವಾನುಮಾನೇ= ಭೇದಮಿಥ್ಯಾತ್ವಾನುಮಾನವು, ವ್ಯಭಿಚಾರಿಣಿ= ವ್ಯಭಿಚಾರಿಯಾಗುತ್ತಿರಲು, ಭೇದಃ= ಭೇದವು, ನ ಚಾಲ್ಯತೇ= ಅಲುಗಾಡಿಸಲ್ಪಡುವುದಿಲ್ಲ(ಬಾಧಿಸಲ್ಪಡುವುದಿಲ್ಲ).

**ಅನುವಾದ–** ಯುಕ್ತವಾದುದೂ ಬಾಧಿತವಾಗುವುದಾದರೆ ಜೀವನೂ ಬಾಧಿತನಾಗಲಿ. ಆದ್ದರಿಂದ ಭೇದ ಮಿಥ್ಯಾತ್ವ ಸಾಧಕವಾದ ನಿನ್ನ ಅನುಮಾನವು ಜಗದ್ಭೇದದಲ್ಲಿ ವ್ಯಭಿಚಾರಿ ಆದುದರಿಂದ ಭೇದವು ಬಾಧಿತವಾಗುವುದಿಲ್ಲ.

**ಭಾವವಿಲಾಸಿನೀ–** ನಚೇತ್ ಯುಕ್ತಬಾಧನಮೇವ ನಚೇತ್ । ಅಯುಕ್ತಮಪಿ ಬಾಧನಂ ಕ್ರಿಯತೇ ಚೇದಿತ್ಯರ್ಥಃ । ಬ್ರಹ್ಮವ್ಯತಿರೇಕೇಣ ಕಿಮಪಿ ನಾಸ್ತೀತಿ ವಾಕ್ಯಸ್ಯ ಜಗದಭಾವವಜ್ಜೀವಾಭಾವೇಽಪಿ ನ್ಯಾಯಪ್ರಾಪ್ತತ್ವಾತ್ । ಜೀವಾಭಾವೇ ಕಸ್ಯ ಮುಕ್ತಿಃ ಸ್ಯಾದಿತಿ ಯುಕ್ತಿವಿರೋಧೇನ ಹಿ ತದ್ಬಾಧೋ ನ ಕ್ರಿಯತೇ । ತಸ್ಮಾದಿಹಾಪಿ ನಾಯುಕ್ತಬಾಧನಮಿತಿ ಭಾವಃ । ಅತಃ ಭೇದಬಾಧಸ್ಯ

ಯುಕ್ತಿವಿರುದ್ಧತ್ವಾತ್ । ತತಃ ಯುಕ್ತಭೇದಸ್ಯ ಸತ್ಯತ್ವಾತ್ । ಅತ್ರಾಬಾಧ್ಯೇ ಜಗತೋ ಭೇದೇ ॥ ೮೮೦ ॥

**ವಿವರಣೆ–** ಬ್ರಹ್ಮ ವ್ಯತಿರಿಕ್ತವಾಗಿ ಯಾವುದೂ ಇಲ್ಲ ಎಂಬ ವಾಕ್ಯವು ಜಗದಭಾವವನ್ನು ಹೇಳುವಂತೆ ಜೀವಾಭಾವವನ್ನೂ ಹೇಳುತ್ತದೆ ಎಂಬುದು ನ್ಯಾಯ ಪ್ರಾಪ್ತವಾಗುತ್ತದೆ. ಆದರೂ ಜೀವನೇ ಇಲ್ಲದಿದ್ದರೆ ಮೋಕ್ಷವು ಯಾರಿಗೆ ಎಂಬ ಪ್ರಶ್ನೆಯು ಬರುವುದರಿಂದ ಜೀವನಿಗೆ ಬಾಧವನ್ನು ಹೇಳದೇ ಜಡಕ್ಕೇ ಬಾಧವನ್ನು ಹೇಳುತ್ತೀರಿ. ಜೀವನ ಬಾಧವು ಯುಕ್ತಿ ವಿರುದ್ಧವಾದುದರಿಂದ ಅದನ್ನು ಒಪ್ಪದಿರುವಂತೆ ಭೇದದ ಬಾಧವೂ ಸಹ ಯುಕ್ತಿ ವಿರುದ್ಧವಾಗಿದೆ. ಅದನ್ನು ಒಪ್ಪಲು ಸಾಧ್ಯವಿಲ್ಲ. ಭೇದೋ ಮಿಥ್ಯಾ ಭೇದತ್ವಾತ್ ಎಂಬ ನಿಮ್ಮ ಅನುಮಾನವು ಜಗದ್ಭೇದದಲ್ಲಿ ವ್ಯಭಿಚಾರಿಯಾಗಿದೆ. ಆದ್ದರಿಂದ ಭೇದಮಿಥ್ಯಾತ್ವವು ಸಿದ್ಧಿಸುವುದಿಲ್ಲ ಎಂದು ಅಭಿಪ್ರಾಯ.

**ಯದ್ಯಭೇದಪರೈವೇಯಂ ಶ್ರುತಿಃ ಸರ್ವಾ ಮತೇ ತವ ।**
**ತದಾ ಜಗದಬಾಧ್ಯಂ ಸ್ಯಾನ್ಮಿಥ್ಯಾತ್ವಾಶಾ ಗತಾ ತವ ।**
**ಅಬಾಧ್ಯಾಭೇದಮಾಪನ್ನಃ ಕಥಂ ಬಾಧ್ಯೋ ಭವಿಷ್ಯತಿ ॥ ೮೮೧ ॥**

**ಅರ್ಥ–** ಯದಿ= ಒಂದು ಪಕ್ಷ, ಸರ್ವಾ ಇಯಂ ಶ್ರುತಿಃ= ಈ ಎಲ್ಲಾ ಶ್ರುತಿಯೂ, ತವ ಮತೇ= ನಿನ್ನ ಅಭಿಪ್ರಾಯದಂತೆ, ಅಭೇದಪರೈವ= ಅಭೇದ ಪರವೇ ಆದರೆ, ತದಾ= ಆಗ, ಜಗತ್= ಪ್ರಪಂಚವು, ಅಬಾಧ್ಯಂ ಸ್ಯಾತ್= ಅಬಾಧ್ಯವಾದೀತು, ತವ= ನಿನ್ನ, ಮಿಥ್ಯಾತ್ವಾಶಾ= ಮಿಥ್ಯಾತ್ವಾಶೆಯು, ಗತಾ= ನಾಶವಾಯಿತು, ಅಬಾಧ್ಯಾಭೇದಮಾಪನ್ನಃ= ಯಾವ ವಸ್ತುವು ಅಬಾಧ್ಯವಸ್ತುವಿನಿಂದ ಅಭಿನ್ನವಾಗಿರುತ್ತದೆಯೋ ಅದು, ಕಥಂ= ಹೇಗೆ, ಬಾಧ್ಯೋ ಭವಿಷ್ಯತಿ= ಬಾಧ್ಯವಾಗುತ್ತದೆ?

**ಅನುವಾದ–** ಈ ಎಲ್ಲ ಶ್ರುತಿಯೂ ನಿನ್ನ ಮತದಂತೆ ಅಭೇದ ಪರವೇ ಎಂದು ಹೇಳಿದರೆ ಆಗ ಜಗತ್ತು ಅಬಾಧ್ಯವೆಂದಾಗುತ್ತದೆ. ನಿನ್ನ ಮಿಥ್ಯಾತ್ವಾಶೆಯು ನಾಶವಾಗುತ್ತದೆ. ಅಬಾಧ್ಯವಾದ ಬ್ರಹ್ಮನಿಂದ ಅಭಿನ್ನವಾದ ಜಗತ್ತು ಹೇಗೆ ಬಾಧ್ಯವಾಗುತ್ತದೆ?

**ಭಾವವಿಲಾಸಿನೀ–** ಶ್ರುತೀನಾಂ ಮಿಥ್ಯಾತ್ವಪರತ್ವೇ ದೋಷಮುಕ್ತ್ವಾ ಐಕ್ಯಪರತ್ವೇಽಪಿ ದೋಷಮಾಹ – ಯದಿತಿ ॥ ೮೮೧ ॥

**ವಿವರಣೆ–** ಅದ್ವೈತ ಶ್ರುತಿಗಳಿಗೆ ಮಿಥ್ಯಾತ್ವಪರತ್ವವನ್ನು ಒಪ್ಪಿದರೆ ದೋಷವನ್ನು ಹೇಳಿ ಈಗ ಅಭೇದಪರತ್ವವನ್ನು ಹೇಳಿದರೆ ದೋಷವನ್ನು ಹೇಳುತ್ತಾರೆ. ಅದ್ವೈತ ಶ್ರುತಿಗಳು ಅಭೇದವನ್ನು ಹೇಳುತ್ತವೆ ಎಂದಾದರೆ ಬ್ರಹ್ಮನಿಗೂ ಮತ್ತು ಜಗತ್ತಿಗೂ ಅಭೇದವನ್ನು ಹೇಳುತ್ತವೆ ಎಂದಾಯಿತು. ಜಗತ್ತು ಅಬಾಧ್ಯವಾದ ಬ್ರಹ್ಮನಿಂದ ಅಭಿನ್ನವಾಗಿರುವುದರಿಂದ ಅದಕ್ಕೆ ಬಾಧವು ಉಂಟಾಗಲು ಸಾಧ್ಯವಿಲ್ಲ ಎಂದು ಇಲ್ಲಿ ಉಪಪಾದಿಸುತ್ತಾರೆ.

ವ್ಯತಿರೇಕೇಣ ಚಾಸತ್ತ್ವಮಸತ್ತ್ವಂ ಚೇತ್ ಸ್ಮರೋದಿತಮ್ ।
ಸತ್ತ್ವಮವ್ಯತಿರೇಕೇಣ ಯದಿ ತರ್ಹಿ ನ ಬಾಧ್ಯತಾ ॥ ೮೮೨ ॥

**ಅರ್ಥ–** ವ್ಯತಿರೇಕೇಣ ಅಸತ್ತ್ವಂ= ಬ್ರಹ್ಮ ವ್ಯತಿರೇಕೇಣ ಅಸತ್ತ್ವವೇ, ಅಸತ್ತ್ವಂ ಚೇತ್= ಜಗನ್ಮಿಥ್ಯಾತ್ವ ಎಂದಾದರೆ, ಉದಿತಂ= ಹಿಂದೆ ಹೇಳಿದ ಭೇದಸತ್ಯತ್ವವನ್ನು, ಸ್ಮರ= ಜ್ಞಾಪಿಸಿಕೋ, ಯದಿ= ಒಂದು ಪಕ್ಷ, ಅವ್ಯತಿರೇಕೇಣ ಸತ್ತ್ವಂ= ಬ್ರಹ್ಮ ಅವ್ಯತಿರೇಕೇಣ ಸತ್ತ್ವವು ಅದ್ವೈತ ಶ್ರುತಿಯ ಅರ್ಥ ಎಂದು ಒಪ್ಪಿದರೆ, ತರ್ಹಿ= ಆಗ, ನ ಬಾಧ್ಯತಾ= ಜಗತ್ತಿಗೆ ಬಾಧ್ಯತ್ವವು ಉಂಟಾಗುವುದಿಲ್ಲ.

**ಅನುವಾದ–** ಬ್ರಹ್ಮವ್ಯತಿರೇಕೇಣ ಅಸತ್ತ್ವವೇ ಐಕ್ಯ ಎಂದು ಹೇಳಿದರೆ ಹಿಂದಿನ ಶ್ಲೋಕದಲ್ಲಿ ದೋಷಗಳನ್ನು ಹೇಳಿದ್ದಾರೆ. ಆದ್ದರಿಂದ ಅದನ್ನು ಬಿಟ್ಟು ಬ್ರಹ್ಮವ್ಯತಿರೇಕೇಣ ಅಸತ್ತ್ವವೇ ಮಿಥ್ಯಾತ್ವರೂಪವಾದುದು ಎಂದು ಹೇಳಿದರೆ ಇಲ್ಲಿ ಜಗನ್ಮಿಥ್ಯಾತ್ವ ಪಕ್ಷದಲ್ಲಿ ಹಿಂದೆ ಹೇಳಿದ ಭೇದ ಸತ್ಯತ್ವ ಪ್ರಾಪ್ತಿಯನ್ನು ಸ್ಮರಿಸಿಕೋ ಎಂದು ಹೇಳುತ್ತಾರೆ. ಜಗತ್ತು ಬ್ರಹ್ಮವ್ಯತಿರೇಕೇಣ ಅಸತ್ ಎಂದು ಹೇಳಿದರೆ ಅವ್ಯತಿರೇಕೇಣ ಸತ್ ಎಂದಾಗುತ್ತದೆ ಎಂದರೆ ಬ್ರಹ್ಮಾಭಿನ್ನ ಎಂದಾಗುತ್ತದೆ. ಬ್ರಹ್ಮನು ಅಬಾಧ್ಯನಾಗಿರುವಾಗ ತದಭಿನ್ನವಾದ ಜಗತ್ತು ಬಾಧ್ಯವಾಗಲು ಸಾಧ್ಯವಿಲ್ಲ ಎಂದು ಅಭಿಪ್ರಾಯ.

**ಭಾವವಿಲಾಸಿನೀ–** ವ್ಯತಿರೇಕೇಣಾಸತ್ತ್ವಂ ಐಕ್ಯಂ ಚೇತ್ ಜಗತ್‌ಸತ್ಯತ್ವಮಾಪತೇದಿತ್ಯುಕ್ತಮ್ । ಏತದ್ಭಿಯಾ ವ್ಯತಿರೇಕೇಣಾಸತ್ತ್ವಮ್ ಅಸತ್ತ್ವಂ ಚೇತ್ ಜಗನ್ಮಿಥ್ಯಾತ್ವಂ ಚೇತ್ ಉದಿತಂ ತದ್ಭೇದ-ಸತ್ಯತ್ವಂ ಸ್ಮರೇದಿತಿ ಸಂಬಂಧಃ । ಅವ್ಯತಿರೇಕೇಣ ಸತ್ತ್ವಂ ಐಕ್ಯೇನ ಸತ್ತ್ವಮಿತ್ಯರ್ಥಃ ॥ ೮೮೨ ॥

ಸರ್ವೈಕ್ಯಂ ಸರ್ವಬಾಧಂ ವಾ ಸೇಯಂ ಶ್ರೌತಪದಾವಲೀ ।
ವದೇಜ್ಜೀವೈಕತಾವಾರ್ತಾ ನೈಷು ವಾಕ್ಯೇಷು ಶೋಭತೇ ॥ ೮೮೩ ॥

**ಅರ್ಥ–** ಸೇಯಂ ಶ್ರೌತಪದಾವಲೀ= ಪೂರ್ವೋಕ್ತವಾದ ಈ ವೇದವಾಕ್ಯದ ಪದ ಸಮೂಹವು, ಸರ್ವೈಕ್ಯಂ= ಸರ್ವೈಕ್ಯವನ್ನಾಗಲೀ, ಸರ್ವಬಾಧಂ ವಾ= ಅಥವಾ ಸರ್ವಬಾಧವನ್ನಾಗಲೀ, ವದೇತ್= ಹೇಳುತ್ತದೆ, ಏಷು ವಾಕ್ಯೇಷು= ಸರ್ವಂ ಖಲ್ವಿದಂ ಬ್ರಹ್ಮ ಇತ್ಯಾದಿ ವಾಕ್ಯಗಳಲ್ಲಿ, ಜೀವೈಕತಾ ವಾರ್ತಾ= ಜೀವೈಕ್ಯ ಕಥನವು, ನ ಶೋಭತೇ= ಶೋಭಿಸುವುದಿಲ್ಲ.

**ಅನುವಾದ–** ಹಿಂದೆ ಹೇಳಿದ ಶ್ರುತಿಗಳ ಪದಸಮೂಹವು ಸರ್ವೈಕ್ಯವನ್ನಾಗಲೀ ಅಥವಾ ಸರ್ವಮಿಥ್ಯಾತ್ವವನ್ನಾಗಲೀ ಹೇಳುತ್ತದೆ. 'ಸರ್ವಂ ಖಲ್ವಿದಂ ಬ್ರಹ್ಮ' ಇತ್ಯಾದಿ ಹಿಂದೆ ಉದಾಹರಿಸಿದ ಮೂರು ವಾಕ್ಯಗಳಲ್ಲಿ ಜೀವೈಕ್ಯ ಕಥನವು ಉಪಪನ್ನವಾಗುವುದಿಲ್ಲ.

**ಭಾವವಿಲಾಸಿನೀ–** ಏಷು ಸರ್ವಂ ಬ್ರಹ್ಮೇತ್ಯಾದಿಷು । ಪ್ರಥಮಪಕ್ಷೇ ಜಗತ್ಸತ್ಯತ್ವಸ್ಥೈರ್ಯಂ ದ್ವಿತೀಯಪಕ್ಷೇ ಭೇದಸ್ಯ ಸ್ಥೈರ್ಯಮ್ । ಏವಂಚ ಪಕ್ಷದ್ವಯೇಽಪಿ ತವ ಹಾನಿರೇವ । ಅತೋ ನೇಮಾನಿ ವಾಕ್ಯಾನಿ ತ್ವಯಾ ಪುರಸ್ಕರ್ತವ್ಯಾನಿ । ತ್ವದಭಿಲಷಿತಜೀವಮಾತ್ರೈಕ್ಯಸ್ಯ ವಾರ್ತಾಪ್ಯತ್ರ ನಾಸ್ತೀತಿ ಭಾವಃ ॥ ೮೮೩ ॥

**ವಿವರಣೆ–** ಸರ್ವೈಕ್ಯವನ್ನು ಹೇಳಿದರೆ ಹಿಂದೆ ಹೇಳಿದಂತೆ ಜಗತ್ಸತ್ಯತ್ವವೇ ಸಿದ್ಧವಾಗುತ್ತದೆ. ಸರ್ವಮಿಥ್ಯಾತ್ವವನ್ನು ಹೇಳಿದರೆ ಭೇದವು ಸತ್ಯವೆಂದು ಸಿದ್ಧವಾಗುತ್ತದೆ. ಹೀಗೆ ನಿನಗೆ ಎರಡು ಪಕ್ಷಗಳಲ್ಲಿಯೂ ಅನಿಷ್ಟವಿರುವುದರಿಂದ ಈ ವಾಕ್ಯಗಳನ್ನು ನೀನು ಪುರಸ್ಕರಿಸಬಾರದು. ನಿನಗೆ ಇಷ್ಟವಾದ ಜೀವೈಕ್ಯದ ಸುದ್ದಿಯೂ ಈ ವಾಕ್ಯಗಳಲ್ಲಿ ಇಲ್ಲ.

**ತತ್ವಮಸ್ಯಾದಿವಾಕ್ಯೇ ಸ್ಯಾತ್ ಕಥಾ ತಸ್ಯಾಃ ಕಥಂಚನ ।**
**ನಞಾ ಭಿನ್ನಪದಾ ಸಾನ್ಯೈರ್ನತ್ವದರ್ಥೇ ಪದಂ ಕ್ಷಿಪೇತ್ ॥ ೮೮೪ ॥**

**ಅರ್ಥ–** ತತ್ವಮಸ್ಯಾದಿವಾಕ್ಯೇ= ತತ್ವಮಸಿ ಮೊದಲಾದ ವಾಕ್ಯಗಳಲ್ಲಿ, ತಸ್ಯಾಃ= ಆ ಜೀವೈಕ್ಯದ, ಕಥಾ= ವಾರ್ತೆಯು, ಕಥಂಚನ= ಬಹಳ ಕಷ್ಟದಿಂದ, ಸ್ಯಾತ್= ಕೂಡಬಹುದು, ಅನ್ಯೈಃ= ತತ್ತ್ವವಾದಿಗಳಾದ ನಮ್ಮಿಂದ, ನಞಾ ಭಿನ್ನಪದ= ನಞ್ ಸಹಿತವಾಗಿ ಪದಚ್ಛೇದವನ್ನು ಹೊಂದಿದ ಆ ವಾಕ್ಯವು (ಕಾಲುಗಳು ಕತ್ತರಿಸಲ್ಪಟ್ಟಿದ್ದಾಗಿ) ತ್ವದರ್ಥೇ= ನಿನಗೆ ಅಭಿಮತವಾದ ಅರ್ಥದಲ್ಲಿ, ಪದಂ= ತತ್ ಎಂಬ ಪದವನ್ನು (ಪಾದವನ್ನು), ನ ಕ್ಷಿಪೇತ್= ಇಡುವುದಿಲ್ಲ.

**ಅನುವಾದ– ತತ್ತ್ವಮಸಿ ಮೊದಲಾದ ವಾಕ್ಯಗಳಲ್ಲಿ ಜೀವೈಕ್ಯದ ಸುದ್ದಿಯನ್ನು ಕಥಂಚಿತ್ ಕೂಡಿಸಬಹುದು. ಆದರೆ ತತ್ತ್ವವಾದಿಗಳಾದ ನಮ್ಮಿಂದ ನಞ್ ಅನ್ನು ಸೇರಿಸಿ ಪದಚ್ಛೇದವನ್ನು ಹೊಂದಿದ ಆ ವಾಕ್ಯವು ನಿನಗೆ ಅಭಿಮತವಾದ ಅರ್ಥದಲ್ಲಿ ಹೇಳುವುದಕ್ಕೆ ತತ್ ಪದಕ್ಕೆ ಅವಕಾಶವನ್ನು ಕೊಡುವುದಿಲ್ಲ. (ಕಾಲು ಮುರಿದ ವ್ಯಕ್ತಿಯು ಹೆಜ್ಜೆ ಇಡಲು ಸಾಧ್ಯವಾಗದಂತೆ ನಿನಗೆ ಅಭಿಮತವಾದ ಅರ್ಥವನ್ನು ಸಾಧಿಸಿಕೊಡಲು ತತ್ ಪದವು ಉದ್ಯುಕ್ತವಾಗುವುದಿಲ್ಲ).**

**ಭಾವವಿಲಾಸಿನೀ–** ತಸ್ಯಾಃ ಜೀವೈಕತಾಯಾಃ । ಕಥಂಚನೇತಿ ವದತಾ ಶ್ವೇತಕೇತುಮಾತ್ರೈಕ್ಯ ಪ್ರತಿಪಾದಿಕಾ ಸ್ಯಾತ್ ಕಥಂಚಿತ್ । ಸಾ ಚ ನ ತ್ವದಭಿಲಷಿತಸಕಲಜೀವೈಕ್ಯಪ್ರತಿಪಾದ-ನಾಯಾಲಮಿತಿ ಸೂಚಿತಮ್ । ಅನ್ಯೈಃ ತತ್ವವಾದಿಭಿಃ । ಪದಂ ತದಿತಿ ಪದಮ್ ॥ ೮೮೪ ॥

**ವಿವರಣೆ–** 'ಕಥಂ ಚಿತ್ ಸ್ಯಾತ್' ಎಂದು ಹೇಳಿರುವುದರಿಂದ ಈ ವಾಕ್ಯದಿಂದಲೂ ಶ್ವೇತಕೇತುವಾದ ಒಬ್ಬ ಜೀವನಿಗೂ ಮತ್ತು ಬ್ರಹ್ಮನಿಗೂ ಐಕ್ಯವನ್ನು ಹೇಳಬಹುದು. ಆದರೆ ನಿನಗೆ ಅಭಿಮತವಾದ ಸಕಲ ಜೀವರ ಮತ್ತು ಬ್ರಹ್ಮರ ಐಕ್ಯವು ಇದರಿಂದಲೂ

ಸಿದ್ಧವಾಗುವುದಿಲ್ಲ ಎಂದು ಸೂಚಿಸುತ್ತಾರೆ. ಕಾಲುಮುರಿದ ವ್ಯಕ್ತಿಯು ಮುಂದೆ ಹೋಗಲು ಸಾಧ್ಯವಾಗದಂತೆ 'ಅತತ್ತ್ವಮಸಿ' ಎಂಬ ಪದಚ್ಛೇದವನ್ನು ಪಡೆದ ವಾಕ್ಯವು ನಿನಗೆ ಅಭಿಮತವಾದ ಅರ್ಥವನ್ನು ಹೇಳಲು ಒಂದು ಹೆಜ್ಜೆಯೂ ಮುಂದೆ ಬರುವುದಿಲ್ಲ ಎಂಬ ಧ್ವನಿಯು ಇಲ್ಲಿದೆ.

ತನ್ಮಹಾವಾಕ್ಯರಾಶೇಸ್ತೇ ಮಿಥ್ಯಾತ್ವೈಕ್ಯಪರತ್ವಯೋಃ ।
ಭೇದಸ್ಯ ಸತ್ಯತಾ ವಿಶ್ವಸತ್ಯತಾ ವಾ ಭವೇದ್ಧ್ರುವಂ ॥ ೮೮೫ ॥

**ಅರ್ಥ–** ತತ್= ಆದ್ದರಿಂದ, ತೇ= ನಿನ್ನ, ಮಹಾವಾಕ್ಯರಾಶೇಃ= ಮಹಾವಾಕ್ಯ ಸಮೂಹಕ್ಕೆ, ಮಿಥ್ಯಾತ್ವ ಐಕ್ಯಪರತ್ವಯೋಃ= ಮಿಥ್ಯಾತ್ವವು ಅಥವಾ ಐಕ್ಯವು ಅರ್ಥವಾದರೆ, ಭೇದಸ್ಯ ಸತ್ಯತಾ= ಭೇದಸತ್ಯತ್ವವಾಗಲೀ, ವಿಶ್ವಸತ್ಯತಾ ವಾ= ಅಥವಾ ವಿಶ್ವಸತ್ಯತ್ವವಾಗಲೀ, ಧ್ರುವಂ= ನಿಶ್ಚಿತವಾಗಿ, ಭವೇತ್= ಆಗುತ್ತದೆ.

**ಅನುವಾದ–** ಆದ್ದರಿಂದ ನಿನ್ನ ಮಹಾವಾಕ್ಯಸಮೂಹಕ್ಕೆ ಮಿಥ್ಯಾತ್ವ ಪ್ರತಿಪಾದಕತ್ವವನ್ನು ಅಥವಾ ಐಕ್ಯಪ್ರತಿಪಾದಕತ್ವವನ್ನು ಒಪ್ಪಿದರೂ (ಹಿಂದೆ ಹೇಳಿದಂತೆ) ಭೇದದ ಸತ್ಯತ್ವವಾಗಲೀ ಅಥವಾ ಜಗತ್ತಿನ ಸತ್ಯತ್ವವಾಗಲೀ ಕ್ರಮವಾಗಿ ನಿಶ್ಚಿತವಾಗಿ ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ತತ್ತಸ್ಸಾತ್ಕಾರಣಾತ್ ॥ ೮೮೫ ॥

ಜೀವೈಕ್ಯಮಾತ್ರವಾಕ್ಪ್ರಾಯಃ ಶ್ರುತೌ ನ ಶ್ರೂಯತೇ ಕ್ವಚಿತ್ ।
ಸರ್ವಸ್ಯೈಕ್ಯೇ ಮೃಷಾತ್ವೇ ವಾ ನೋಕ್ತದೋಷದ್ವಯೌಷಧಂ ॥ ೮೮೬ ॥

**ಅರ್ಥ–** ಶ್ರುತೌ= ವೇದದಲ್ಲಿ, ಜೀವೈಕ್ಯಮಾತ್ರವಾಕ್= ಎಲ್ಲಾ ಜೀವರಿಗೂ ಮತ್ತು ಬ್ರಹ್ಮನಿಗೂ ಐಕ್ಯವನ್ನು ಹೇಳುವ ವಾಕ್ಯವು, ಪ್ರಾಯಃ= ಪ್ರಾಯಶಃ, ಕ್ವಚಿತ್ ನ ಶ್ರೂಯತೇ= ಎಲ್ಲಿಯೂ ಕೇಳಿ ಬರುವುದಿಲ್ಲ, ಸರ್ವಸ್ಯ ಐಕ್ಯೇ= ಎಲ್ಲಾ ಜಗತ್ತಿನ ಐಕ್ಯವನ್ನಾಗಲೀ, ಮೃಷಾತ್ವೇ= ಮಿಥ್ಯಾತ್ವವನ್ನಾಗಲೀ, ಆ ವಾಕ್ಯಗಳು ಹೇಳಿದರೆ, ಉಕ್ತದೋಷದ್ವಯೌಷಧಂ= ಹಿಂದೆ ಹೇಳಿದ ಎರಡು ದೋಷಗಳಿಗೆ ಪರಿಹಾರವು, ನ= ಇರುವುದಿಲ್ಲ.

**ಅನುವಾದ–** ಶ್ರುತಿಯಲ್ಲಿ ಪ್ರಾಯಶಃ ಎಲ್ಲ ಜೀವರಿಗೂ ಮತ್ತು ಬ್ರಹ್ಮನಿಗೂ ಐಕ್ಯವನ್ನು ಹೇಳುವ ಮಾತು ಎಲ್ಲೂ ಕಂಡುಬರುವುದಿಲ್ಲ. ಇರುವ ವಾಕ್ಯಗಳು ಸರ್ವೈಕ್ಯವನ್ನಾಗಲೀ ಅಥವಾ ಸರ್ವಮಿಥ್ಯಾತ್ವವನ್ನಾಗಲೀ ಹೇಳಿದರೆ ಹಿಂದೆ ಹೇಳಿದ ವಿಷಯ ಸತ್ಯತ್ವಾಪತ್ತಿ ಮತ್ತು ಭೇದ ಸತ್ಯತ್ವಾಪತ್ತಿ ದೋಷಗಳನ್ನು ಪರಿಹಾರ ಮಾಡಲು ನಿನ್ನ ಬಳಿ ಯಾವ ಔಷಧವೂ (ಉಪಾಯವೂ) ಇಲ್ಲ.

**ಭಾವವಿಲಾಸಿನೀ–** ಪ್ರಾಕ್‌ಸೂಚಿತಮರ್ಥಂ ವಿಶದಯತಿ **– ಜೀವೇತಿ ॥** ಜೀವೈಕ್ಯಮಾತ್ರವಾಕ್ ಸಕಲಜೀವೈಕ್ಯ ಪ್ರತಿಪಾದಕವಾಕ್ ತತ್ತ್ವಮಸಿ, ಅಹಂ ಬ್ರಹ್ಮ ಸೋಽಹಮಸ್ಮೀತ್ಯಾದಿವಾಕ್ ತಸ್ಯ ತಸ್ಯೈಕೈಕಜೀವಸ್ಯೈವಾಭೇದವಮಾತ್ರೇ ತ್ವಯಾಪಿ ವಕ್ತುಂ ಶಕ್ಯತೇ । ಜಡಜಗದಸಂಗೃಹ್ಯ ಸರ್ವಜೀವಾಂಶ್ಚ ಸಂಗೃಹ್ಯ ತವಾಪೇಕ್ಷಿತಮೈಕ್ಯಂ ನ ಕಾಪಿ ಶ್ರುತಿರ್ವಕ್ತೀತಿ ಭಾವಃ ॥ ೮೮೬ ॥

**ವಿವರಣೆ–** 'ತತ್ತ್ವಮಸಿ', 'ಅಹಂ ಬ್ರಹ್ಮಾಸ್ಮಿ', 'ಸೋಹಮಸ್ಮಿ' ಮುಂತಾದ ವಾಕ್ಯಗಳು ಒಂದು ಜೀವನಿಗೆ ಬ್ರಹ್ಮೈಕ್ಯವನ್ನು ಹೇಳಬಹುದೇ ಹೊರತು ಜಡಗಳನ್ನು ಬಿಟ್ಟು ಎಲ್ಲಾ ಜೀವರನ್ನೂ ಸಂಗ್ರಹಿಸಿ ಅವರಿಗೆ ಐಕ್ಯವನ್ನು ಹೇಳುವ ಮಾತು ಶ್ರುತಿಯಲ್ಲಿ ಎಲ್ಲೂ ಕಂಡು ಬರುವುದಿಲ್ಲ ಎಂದು ಅಭಿಪ್ರಾಯ.

ಕ್ವಚಿಜ್ಜೀವೈಕ್ಯವಾಕ್ ತತ್ತದ್ಧರ್ಮಾಣಾಂ ಸತ್ಯತಾಂ ದಿಶೇತ್ ।
ವಿಶಿಷ್ಟೈಕ್ಯೇ ನಚೇನ್ಮಿಥ್ಯಾಭೂತಧರ್ಮಭಿದಾಂ ದಿಶೇತ್ ॥ ೮೮೭ ॥

**ಅರ್ಥ–** ಕ್ವಚಿತ್= ಯಾವುದೋ ಮೂಲೆಯಲ್ಲಿರುವ, ಜೀವೈಕ್ಯವಾಕ್= ಜೀವಬ್ರಹ್ಮೈಕ್ಯ ವಚನವು, ತತ್ತದ್ಧರ್ಮಾಣಾಂ= ಜೀವ ಧರ್ಮಗಳಿಗೆ ಮತ್ತು ಬ್ರಹ್ಮಧರ್ಮಗಳಿಗೆ, ಸತ್ಯತಾಂ= ಸತ್ಯತ್ವವನ್ನು, ದಿಶೇತ್= ಕೊಡುತ್ತದೆ (ಹೇಳುತ್ತದೆ), ವಿಶಿಷ್ಟೈಕ್ಯೇ= ಇದು ವಿಶಿಷ್ಟೈಕ್ಯವನ್ನು ಹೇಳಿದರೆ ಮಾತ್ರ. ನ ಚೇತ್= ವಿಶಿಷ್ಟೈಕ್ಯವನ್ನು ಹೇಳದಿದ್ದರೆ, ಮಿಥ್ಯಾಭೂತಧರ್ಮ ಭಿದಾಂ= ಮಿಥ್ಯಾಭೂತವಾದ ಧರ್ಮಗಳಿಗೆ ಭೇದವನ್ನು, ದಿಶೇತ್= ಹೇಳುತ್ತದೆ.

**ಅನುವಾದ–** ಯಾವುದಾದರೂ ಮೂಲೆಯಲ್ಲಿರುವ ಜೀವಬ್ರಹ್ಮೈಕ್ಯ ವಚನವು ವಿಶಿಷ್ಟೈಕ್ಯ ಪರವೆಂದು ಅಂಗೀಕಾರ ಮಾಡಿದರೆ ಜೀವಧರ್ಮಗಳಿಗೆ ಮತ್ತು ಬ್ರಹ್ಮಧರ್ಮಗಳಿಗೆ ಸತ್ಯತ್ವವನ್ನೇ ಹೇಳುತ್ತದೆ. ವಿಶಿಷ್ಟೈಕ್ಯವನ್ನು ಅಂಗೀಕರಿಸದಿದ್ದರೆ ವಿರುದ್ಧ ಧರ್ಮಗಳಿಗೆ ಮಿಥ್ಯಾತ್ವವನ್ನು ಹೇಳಿ ಚಿನ್ಮಾತ್ರೈಕ್ಯವನ್ನು ಹೇಳಿದರೆ ಮಿಥ್ಯಾಭೂತವಾದ ವಿರುದ್ಧ ಧರ್ಮಗಳ ಭೇದವು ಮಾತ್ರ ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ಸರ್ವೈಕ್ಯಪ್ರತಿಪಾದಕವಾಕ್ಯೇಷೂಕ್ತದೋಷಂ ಏಕಜೀವೈಕ್ಯಪ್ರತಿಪಾದಕ ವಾಕ್ಯೇಽಪ್ಯತಿದಿಶತಿ **– ಕ್ವಚಿದಿತಿ ॥** ಕೋಣ ಇತ್ಯರ್ಥಃ । ತತ್ತದ್ಧರ್ಮಾಣಾಂ ತಸ್ಯ ಜೀವಸ್ಯ ತಸ್ಯ ಬ್ರಹ್ಮಣಶ್ಚ ಧರ್ಮಾಣಾಮ್ । ವಿಶಿಷ್ಟೈಕ್ಯೇ ಸರ್ವಜ್ಞತ್ವಾಲ್ಪಜ್ಞತ್ವಾದಿವಿರುದ್ಧಧರ್ಮ ವಿಶಿಷ್ಟಯೋರೈಕ್ಯೇ । ನಚೇತ್ ವಿಶಿಷ್ಟೈಕ್ಯಂ ನಚೇತ್ । ವಿರುದ್ಧಧರ್ಮಾಣಾಂ ಮಿಥ್ಯಾತ್ವಮುಕ್ತ್ವಾ ಚಿನ್ಮಾತ್ರೈಕ್ಯಮುಚ್ಯತೇ ಚೇದಿತ್ಯರ್ಥಃ ॥ ೮೮೭ ॥

**ವಿವರಣೆ–** ಸರ್ವೈಕ್ಯ ಪ್ರತಿಪಾದಕ ವಾಕ್ಯಗಳಲ್ಲಿ ಹೇಳಿದ ದೋಷಗಳನ್ನು ಏಕಜೀವೈಕ್ಯ ಪ್ರತಿಪಾದಕ ವಾಕ್ಯದಲ್ಲಿಯೂ ಇಲ್ಲಿ ಅತಿದೇಶ ಮಾಡುತ್ತಾರೆ. 'ತದ್ಗುಣಸಾರತ್ವಾತ್ ತು ತದ್ವ್ಯಪದೇಶಃ' ಎಂಬ ಬ್ರಹ್ಮಸೂತ್ರದಲ್ಲಿ ಜೀವನಲ್ಲಿ ಬ್ರಹ್ಮಶಬ್ದದ ವ್ಯಪದೇಶವಿದೆ ಅದಕ್ಕೆ

ಬ್ರಹ್ಮನ ಗುಣಗಳಿಗೆ ಸದೃಶವಾದ ಶ್ರೇಷ್ಠಗುಣಗಳು ಜೀವನ ಸ್ವರೂಪವಾಗಿರುವುದು ಕಾರಣ ಎಂದು ಹೇಳಿರುವುದರಿಂದ ಅಂತಹ ಅಭೇದವಾಕ್ಯದಿಂದ ಧರ್ಮಗಳಿಗೆ ಭೇದವೇ ಸಿದ್ಧವಾಗುತ್ತದೆ. ಏಕೆಂದರೆ ಭೇದವಿದ್ದಲ್ಲಿಯೇ ಸಾದೃಶ್ಯದ ವ್ಯಪದೇಶವಿದೆ ಎಂದು ಅಭಿಪ್ರಾಯ.

**ಅದ್ವಿತೀಯಮಿತಿ ಶ್ರುತ್ಯಾ ದ್ವಿತೀಯಾದ್ಭಿನ್ನತೈವ ಹಿ ।**
**ಸಿದ್ಧ್ಯೇದನಶ್ವ ಇತ್ಯುಕ್ತ್ಯಾ ಯಥಾಶ್ವಾದನ್ಯತಾ ಗಜೇ ॥ ೮೮೮ ॥**

**ಅರ್ಥ–** ಅದ್ವಿತೀಯಂ ಇತಿ ಶ್ರುತ್ಯಾ= ಅದ್ವಿತೀಯಂ ಎಂಬ ಪದದಿಂದ, ದ್ವಿತೀಯಾದ್ಭಿನ್ನತೈವ ಹಿ= ದ್ವಿತೀಯ ಭಿನ್ನತ್ವವೇ, ಸಿದ್ಧ್ಯೇದ್ ಹಿ= ಸಿದ್ಧವಾಗುತ್ತದೆ, ಯಥಾ= ಹೇಗೆ, ಅನಶ್ವ ಇತ್ಯುಕ್ತ್ಯಾ= ಅನಶ್ವ ಎಂಬ ಮಾತಿನಿಂದ, ಗಜೇ= ಗಜದಲ್ಲಿ, ಅಶ್ವಾದನ್ಯತಾ= ಅಶ್ವಭೇದವೇ ಸಿದ್ಧವಾಗುತ್ತದೆಯೋ ಅದರಂತೆ.

**ಅನುವಾದ–** ಹೇಗೆ ಅನಶ್ವ ಎಂಬ ಶಬ್ದದಿಂದ ಗಜದಲ್ಲಿ ಅಶ್ವಭೇದವೇ ಸಿದ್ಧವಾಗುತ್ತದೆಯೋ ಅದರಂತೆ ಅದ್ವಿತೀಯ ಎಂಬ ಶಬ್ದದಿಂದ ಬ್ರಹ್ಮನಲ್ಲಿ ದ್ವಿತೀಯಭೇದವೇ ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ಸಕಲವಾಕ್ಯಾನುಸ್ಯೂತದೋಷಮುಕ್ತ್ವಾ ಪ್ರತ್ಯೇಕಂ ಚ ದೂಷಯತಿ – **ಅದ್ವಿತೀಯಮಿತೀತಿ ॥** ಯಥೇತ್ಯಸ್ಯ ತಥಾ ದ್ವಿತೀಯಾತ್ ಭಿನ್ನತೈವ ಬ್ರಹ್ಮಣಃ ಸಿದ್ಧ್ಯೇದಿತಿ ಸಂಬಂಧಃ ॥ ೮೮೮ ॥

**ವಿವರಣೆ–** ಇದುವರೆಗೆ ಸಕಲ ಅದ್ವೈತ ವಾಕ್ಯಗಳಿಗೆ ಸಾಧಾರಣವಾದ ದೋಷವನ್ನು ಹೇಳಿ ಈಗ ಒಂದೊಂದು ವಾಕ್ಯವನ್ನೂ ವಿಮರ್ಶೆ ಮಾಡಿ ದೋಷವನ್ನು ಹೇಳುತ್ತಾರೆ. ಮೊದಲು 'ಏಕಮೇವಾದ್ವಿತೀಯಂ ಬ್ರಹ್ಮ' ಎಂಬ ವಾಕ್ಯವನ್ನು ವಿಮರ್ಶೆ ಮಾಡುತ್ತಾರೆ.

**ಅಶ್ವೋ ನೇತಿ ಹ್ಯನಶ್ವೋಭೂದ್ಗಜಸ್ತತ್ಪುರುಷಾಜ್ಞಯಾ ।**
**ಬಹಿರಂಗಾದ್ಬಹುವ್ರೀಹೇಃ ಸಮಾಸಃ ಪ್ರಬಲೋಹ್ಯಯಂ ॥ ೮೮೯ ॥**

**ಅರ್ಥ–** ತತ್ಪುರುಷಾಜ್ಞಯಾ= ತತ್ಪುರುಷ ಸಮಾಸದ ಬಲದಿಂದ, ಅಶ್ವೋ ನ ಇತಿ= ಅಶ್ವವಲ್ಲ ಎಂಬ ವಿಗ್ರಹವಾಕ್ಯದಿಂದ, ಅನಶ್ವಃ ಅಭೂದ್ ಹಿ= ಅನಶ್ವ ಎಂಬ ಪದವಾಯಿತಷ್ಟೇ, ಅಯಂ ಸಮಾಸಃ= ಈ ತತ್ಪುರುಷ ಸಮಾಸವು, ಬಹಿರಂಗಾದ್ಬಹು– ವ್ರೀಹೇಃ= ಅನ್ಯ ಪದಾರ್ಥ ಪ್ರತಿಪಾದಕವಾದ ಬಹುವ್ರೀಹಿಗಿಂತಲೂ, ಪ್ರಬಲಃ= ಪ್ರಬಲವಾದುದು.

**ಅನುವಾದ–** ತತ್ಪುರುಷ ಸಮಾಸದ ಸಾಮರ್ಥ್ಯದಿಂದ ಅಶ್ವವು ಅಲ್ಲ ಎಂಬ ವಿಗ್ರಹವಾಕ್ಯದಿಂದ ಅನಶ್ವ ಎಂದು ಸಮಾಸವಾಗುತ್ತದೆ. ಈ ತತ್ಪುರುಷ ಸಮಾಸವು ಅನ್ಯಪದಾರ್ಥ ಪ್ರಧಾನವಾದ ಬಹುವ್ರೀಹಿ ಸಮಾಸಕ್ಕಿಂತಲೂ ಪ್ರಬಲವಾದುದು.

**ಭಾವವಿಲಾಸಿನೀ–** ದೃಷ್ಟಾಂತಂ ದ್ರಢಯತಿ – **ಅಶ್ವ ಇತಿ** ॥ ತತ್ಪುರುಷಾಜ್ಞಯಾ ತತ್ಪುರುಷಾಖ್ಯ ಸಮಾಸಬಲೇನೇತ್ಯರ್ಥಃ। ರಾಜಪುರುಷಾಜ್ಞಯೇತಿ ಧ್ವನಿಃ। ತತ್ಪುರುಷಸ್ಯ ಕಥಂ ಪ್ರಾಬಲ್ಯಮಿತ್ಯತ ಆಹ – **ಬಹಿರಂಗಾದಿತಿ** ॥ ಬಹಿರಂಗಾತ್ ಶ್ರೌತಪದದ್ವಯಬಹಿ- ರ್ಭೂತಾನ್ಯ-ಪದಾರ್ಥಪ್ರಧಾನಾತ್ । ನ ವಿದ್ಯತೇ ದ್ವಿತೀಯಂ ಯಸ್ಯೇತಿ ಸಮಾಸೇ ಶ್ರೌತನಞರ್ಥಂ ದ್ವಿತೀಯಪದಾರ್ಥಂ ಚೋಲ್ಲಂಘ್ಯ ಯಸ್ಯೇತ್ಯಶ್ರೌತಬಾಹ್ಯಪದಾರ್ಥಸ್ಯೈವ ತದಿತಿ ಸಮಾಸನಿರೂಪಣಫಲತಯಾಽಂತತಃ ಸ್ವೀಕಾರಾತ್ ಬಹಿರಂಗತ್ವಮಿತಿ ಭಾವಃ । ಅಯಂ ತತ್ಪುರುಷಃ । ನ ದ್ವಿತೀಯಮದ್ವಿತೀಯಮಿತಿ ಸಮಾಸೇ ಶ್ರೌತನಞರ್ಥ ಏವ ಪರ್ಯವಸಾ-ನೇನಾಂತರಂಗತ್ವಾದಿತಿ ಹೇತುಂ ಹಿಶಬ್ದೇನ ಸೂಚಯತಿ ॥ ೮೮೯ ॥

**ವಿವರಣೆ–** ತತ್ಪುರುಷ ಸಮಾಸದಲ್ಲಿ ಸಮಾಸ ಘಟಕ ಪದಗಳ ಅರ್ಥವನ್ನು ಸ್ವೀಕರಿಸಿ ಸಾಮಾನ್ಯವಾಗಿ ಉತ್ತರ ಪದದ ಅರ್ಥವನ್ನು ಮುಖ್ಯವಾಗಿ ಸ್ವೀಕರಿಸುತ್ತೇವೆ. ಬಹುವ್ರೀಹಿ ಸಮಾಸದಲ್ಲಾದರೂ ಸಮಾಸ ಘಟಕ ಪದಗಳ ಅರ್ಥವನ್ನು ಬಿಟ್ಟು, ಆ ಪದಾರ್ಥವನ್ನು ಉಳ್ಳ ಸಮಸ್ಯಮಾನದಲ್ಲಿಲ್ಲದ ಇನ್ನೊಂದು ಪದದ ಅರ್ಥವನ್ನು ಮುಖ್ಯವಾಗಿ ತೆಗೆದುಕೊಳ್ಳುತ್ತೇವೆ. 'ರಾಜ ಪುರುಷಃ' ಎಂಬಲ್ಲಿ ತತ್ಪುರುಷ ಸಮಾಸದಿಂದ ರಾಜ ಸಂಬಂಧಿಯಾದ ಪುರುಷ ಎಂಬ ಅರ್ಥವು ದೊರೆಯುತ್ತದೆ. 'ನ ಅಶ್ವಃ' ಎಂದು ತತ್ಪುರುಷ ಸಮಾಸವನ್ನು ಮಾಡಿದರೆ ಅಶ್ವಭಿನ್ನ ಎಂದು ನಞ್ ಪದದ ಅರ್ಥವು ಮುಖ್ಯವಾಗಿ ತೋರುತ್ತದೆ. ಅನಶ್ವ ಎಂದು ಬಹುವ್ರೀಹಿಯನ್ನು ಮಾಡಿದರೆ ಯಾವ ವಸ್ತುವಿಗೆ ಅಶ್ವವು ಇಲ್ಲವೋ ಅದು ಎಂದು ಅರ್ಥವು ದೊರೆತು ಆ ಪದಾರ್ಥವು ಅಶ್ವಪದದ ಅರ್ಥವೂ ಆಗಿರದೆ, ನಞ್ ಪದದ ಅರ್ಥವೂ ಆಗಿರದೆ ಇನ್ನೊಂದು ಪದದ ಅರ್ಥವಾಗಿರುತ್ತದೆ. ಆದ್ದರಿಂದ ತತ್ಪುರುಷವು ಪ್ರಬಲ, ಬಹುವ್ರೀಹಿಯು ದುರ್ಬಲವೆಂದು ಹೇಳುತ್ತಾರೆ.

**ದ್ವಿತೀಯಾದ್ಭಿನ್ನತೈವ ಸ್ಯಾದ್ದ್ವಿತೀಯಂ ನೇತಿ ವಿಗ್ರಹೇ ।**
**ನ ಘಟೋಽಯಮಿತಿ ಪ್ರೋಕ್ತೇ ಘಟಭೇದೋ ಯಥಾ ಪಟೇ॥ ೮೯೦ ॥**

**ಅರ್ಥ–** ದ್ವಿತೀಯಂ ನ ಇತಿ ವಿಗ್ರಹೇ= ದ್ವಿತೀಯವು ಅಲ್ಲ ಎಂದು ವಿಗ್ರಹವನ್ನು ಮಾಡಿದರೆ, ದ್ವಿತೀಯಾದ್ಭಿನ್ನತೈವ= ದ್ವಿತೀಯದಿಂದ ಭೇದವೇ, ಸ್ಯಾತ್= ಸಿದ್ಧವಾಗುತ್ತದೆ, ಯಥಾ= ಹೇಗೆ, ಪಟೇ= ಪಟದಲ್ಲಿ, ಘಟೋಽಯಂ ನ ಇತಿ ಪ್ರೋಕ್ತೇ= ಇದು ಘಟವಲ್ಲ ಎಂದು ಹೇಳಿದರೆ, ಘಟಭೇದಃ= ಘಟಭೇದವು ಸಿದ್ಧವಾಗುತ್ತದೆಯೋ (ಅದರಂತೆ).

**ಅನುವಾದ–** ಹೇಗೆ ಪಟದಲ್ಲಿ ಇದು ಘಟವಲ್ಲ ಎಂದು ಪ್ರಯೋಗ ಮಾಡಿದರೆ ಘಟಭೇದವೇ ಸಿದ್ಧವಾಗುತ್ತದೆಯೋ, ಅದರಂತೆ ಬ್ರಹ್ಮನಲ್ಲಿ ಇದು ದ್ವಿತೀಯವಲ್ಲ ಎಂದು ವಿಗ್ರಹ ಮಾಡಿ, ಅದ್ವಿತೀಯ ಎಂದು ಹೇಳಿದರೆ ದ್ವಿತೀಯ ಭೇದವೇ ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ಸರ್ವಲೋಕಪ್ರಸಿದ್ಧಂ ನಿದರ್ಶನಾಂತರಂ ವದನುಕ್ತಮೇವಾರ್ಥಂ ವಿಶದಯತಿ – **ದ್ವಿತೀಯಾದಿತಿ ॥** ಅಯಂ ಪಟಃ ಘಟೋ ನೇತಿ ಪ್ರೋಕ್ತ ಇತಿ ಸಂಬಂಧಃ । ತಥೇತಿ ಪೂರ್ವೇಣಾನ್ವಯಃ । ಅನ್ಯೋನ್ಯಾಭಾವವ್ಯವಹಾರಸ್ಯ ಸರ್ವಪ್ರಸಿದ್ಧೋದಾಹರಣತ್ವಾದಿ-ದಮುದಿತಮ್ । ಏವಮೇವ ಏಕಂ ಸ್ವಗತಭೇದವರ್ಜಿತಂ ಸತ್ವದೋಕ್ತಂ ಬ್ರಹ್ಮೈವಾದ್ವಿತೀಯಂ ದ್ವಿತೀಯಂ ಜಗನ್ನೇತ್ಯುಕ್ತೇ ದ್ವಿತೀಯಾಜ್ಜಗತೋಽಪಿ ಭೇದ ಏವ ಬ್ರಹ್ಮಣಿ ಸಿದ್ಧ್ಯೇತ್ । ಬ್ರಹ್ಮಣ ಏವ ದ್ವಿತೀಯಜಗದ್ಭಿನ್ನತಯಾಽನ್ಯಸ್ಯ ಸರ್ವಸ್ಯ ದ್ವಿತೀಯಾಂತಃ ಪಾತಿತ್ವೇನ ತತೋ ಭೇದಾಭಾವಾತ್ ತದ್ವ್ಯವಚ್ಛೇದಾಯೈವಕಾರಃ । ಏವಂಚ ಸ್ಪಷ್ಟಂ ಭೇದಪ್ರತಿಪಾದಕಮಿದಂ ವಾಕ್ಯಮಭೇದೇ ನ ಯನ್ ಸ್ವಸ್ಯಾಪ್ಯವ್ಯುತ್ಪನ್ನಾದಭೇದಮೇವಾರ್ಥಾತ್ ಸಾಧಯೇತ್ । ನತು ಬ್ರಹ್ಮಾಭೇದಮಿತಿ ಭಾವಃ ॥ ೮೯೦ ॥

**ವಿವರಣೆ–** 'ಏಕಮೇವಾದ್ವಿತೀಯಂ ಬ್ರಹ್ಮ' ಎಂಬ ಶ್ರುತಿಯಲ್ಲಿ ಏಕಂ ಎಂದರೆ ಸ್ವಗತ ಭೇದವಿವರ್ಜಿತವಾದ ಸತ್ವದೋಕ್ತನಾದ ಬ್ರಹ್ಮನು ಅದ್ವಿತೀಯ ದ್ವಿತೀಯನಲ್ಲ ಎಂದರೆ ದ್ವಿತೀಯವಾದ ಜಗತ್ತಲ್ಲ ಎಂಬ ಅರ್ಥವೇ ಸಿದ್ಧವಾಗುತ್ತದೆ. ಇಲ್ಲಿ ಏವಕಾರವಿದೆ. ಆ ಏವಕಾರವು ಬ್ರಹ್ಮನೊಬ್ಬನೇ ಸರ್ವಜಗದ್ಭಿನ್ನನಾದವನು. ಘಟ ಪಟಾದಿ ವಸ್ತುಗಳು ಸರ್ವಜಗದಂತಃ ಪಾತಿಯಾದ್ದರಿಂದ ಅವು ಸರ್ವಜಗದ್ಭಿನ್ನವಲ್ಲ ಎಂಬ ಅರ್ಥವನ್ನು ಹೇಳುತ್ತವೆ. ಆದ್ದರಿಂದ ಭೇದ ಪ್ರತಿಪಾದಕವಾದ ಈ ವಾಕ್ಯವನ್ನು ಅಭೇದ ಪರವಾಗಿ ವ್ಯಾಖ್ಯಾನ ಮಾಡುವ ಪರವಾದಿಯು ಅವ್ಯುತ್ಪನ್ನನಾದವನು ಎಂದು ಅಭಿಪ್ರಾಯ (ತನ್ನಲ್ಲಿ ಅವ್ಯುತ್ಪನ್ನನ ಅಭೇದವನ್ನು ಸಾಧಿಸಬಹುದೇ ಹೊರತಾಗಿ ಬ್ರಹ್ಮಾಭೇದವನ್ನು ಸಾಧಿಸಲು ಸಾಧ್ಯವಿಲ್ಲ ಎಂದು ಅಭಿಪ್ರಾಯ).

ಕಿಂಚಾದ್ವಿತೀಯಶಬ್ದೋಽಯಂ ಲಯಸ್ಥಬ್ರಹ್ಮಗೋಚರಃ ।
ಅತೋ ಜಗತ್ಪ್ರಾಗಭಾವಧ್ವಂಸೌ ನಞ್ವಕ್ತಿ ನಾಪರಂ ॥ ೮೯೧ ॥

ದ್ವಿತೀಯಧ್ವಂಸವದ್ವಾ ತತ್ಪ್ರಾಗಭಾವವದೇವ ವಾ ।
ಬ್ರಹ್ಮ ಸ್ಯಾನ್ನಹಿ ಮಿಥ್ಯಾತ್ವಲಬ್ಧಿರೇತಾವತಾ ತವ ॥ ೮೯೨ ॥

ನಞೋ ದುರಾಗ್ರಹೋ ನಾಸ್ತಿ ವಿರುದ್ಧಸ್ಯೈವ ಬೋಧನೇ ॥ ೮೯೩ ॥

**ಅರ್ಥ–** ಕಿಂಚ= ಮತ್ತು, ಅಯಂ ಅದ್ವಿತೀಯ ಶಬ್ದಃ= ಈ ಅದ್ವಿತೀಯ ಶಬ್ದವು, ಲಯಸ್ಥ ಬ್ರಹ್ಮಗೋಚರಃ= ಪ್ರಳಯಕಾಲದಲ್ಲಿರುವ ಬ್ರಹ್ಮನ ವಿಷಯದಲ್ಲಿ ಪ್ರಯೋಗಿಸಲ್ಪಟ್ಟಿದೆ, ಅತಃ=

ಆದ್ದರಿಂದ, ನಞ್= ನಞ್ ಪದವು, ಜಗತ್ಪ್ರಾಗಭಾವಧ್ವಂಸೌ= ಜಗತ್ಪ್ರಾಗಭಾವವನ್ನಾಗಲೀ, ಜಗತ್‌ಧ್ವಂಸವನ್ನಾಗಲೀ, ವಕ್ತಿ= ಹೇಳುತ್ತದೆ, ಅಪರಂ ನ= ಬೇರೆಯದನ್ನು ಹೇಳುವುದಿಲ್ಲ, ಆಗ, ಬ್ರಹ್ಮ= ಬ್ರಹ್ಮನು, ದ್ವಿತೀಯಧ್ವಂಸವದ್ವಾ= ದ್ವಿತೀಯಧ್ವಂಸ ವಿಶಿಷ್ಟನಾಗಲೀ, ತತ್ಪ್ರಾಗಭಾವವದೇವ ವಾ= ಅಥವಾ ದ್ವಿತೀಯ ಪ್ರಾಗಭಾವ ವಿಶಿಷ್ಟನಾಗಲೀ, ಸ್ಯಾತ್= ಆಗುತ್ತಾನೆ, ಏತಾವತಾ= ಇಷ್ಟು ಮಾತ್ರದಿಂದ, ತವ= ನಿನಗೆ, ಮಿಥ್ಯಾತ್ವಲಬ್ಧಿಃ= ಮಿಥ್ಯಾತ್ವಸಿದ್ಧಿಯು, ನಹಿ ಸ್ಯಾತ್= ಉಂಟಾಗುವುದಿಲ್ಲ, ನಞಃ= ನಞ್ ಪದಕ್ಕೆ, ವಿರುದ್ಧಸ್ಯೈವ ಬೋಧನೇ= ವಿರುದ್ಧವಾದುದನ್ನೇ ಹೇಳುವ ವಿಷಯದಲ್ಲಿ, ದುರಾಗ್ರಹಃ ನಾಸ್ತಿ= ದುರಾಗ್ರಹವಿಲ್ಲ.

**ಅನುವಾದ–** ಮತ್ತು ಈ ಅದ್ವಿತೀಯ ಶಬ್ದವು ಪ್ರಳಯಕಾಲದಲ್ಲಿರುವ ಬ್ರಹ್ಮನ ವಿಷಯದಲ್ಲಿ ಪ್ರತಿಯೋಗಿಸಲ್ಪಟ್ಟಿದೆ. ಆದ್ದರಿಂದ ಈ ನಞ್ ಪದವು ಜಗತ್ಪ್ರಾಗಭಾವವನ್ನಾಗಲೀ, ಜಗತ್ ಧ್ವಂಸವನ್ನಾಗಲೀ ಹೇಳುತ್ತದೆ. ಬೇರೆಯದನ್ನು ಹೇಳುವುದಿಲ್ಲ. ಆದ್ದರಿಂದ ಬ್ರಹ್ಮನು ದ್ವಿತೀಯ ಧ್ವಂಸವುಳ್ಳವನು ಎಂದಾಗಲೀ, ದ್ವಿತೀಯ ಪ್ರಾಗಭಾವವುಳ್ಳವನು ಎಂದಾಗಲೀ ಅರ್ಥವಾಗುತ್ತದೆ. ಇಷ್ಟರಿಂದಲೂ ನಿನಗೆ ಅಭಿಮತವಾದ ಮಿಥ್ಯಾತ್ವದ ಲಾಭವು ಆಗುವುದಿಲ್ಲ. ನಞ್ ಪದಕ್ಕೆ ವಿರುದ್ಧವಾದುದನ್ನೇ ಹೇಳುವ ದುರಾಗ್ರಹವೇನೂ ಇಲ್ಲ.

**ಭಾವವಿಲಾಸಿನೀ–** ಬಹುವ್ರೀಹ್ಯಾಶ್ರಯಣೇಽಪಿ ಪ್ರಕರಣವಿರೋಧಾನ್ನ ತ್ವದಭಿಲಷಿತಸಿದ್ಧಿರಿತ್ಯಾಹ **–ಕಿಂಚೇತಿ ॥** ಸದೇವೇದಮಗ್ರ ಆಸೀದಿತಿ ಪ್ರಾಥಮಿಕವಾಕ್ಯೇ ಇದಮಗ್ರೇ ಅಸ್ಯಾಗ್ರ ಇತಿ ಪ್ರಲಯಸ್ಯ ಪ್ರಸ್ತುತತ್ವಾದಿತಿ ಭಾವಃ । ಅತಃ ಪ್ರಲಯಕಾಲೀನಬ್ರಹ್ಮಗೋಚರತ್ವಾತ್ । ಅಪರ-ಮತ್ಯಂತಾಭಾವಮ್ । ನ ವಿದ್ಯತೇ ದ್ವಿತೀಯಂ ಯಸ್ಯೇತಿ ಸಮಾಸೇಽಪಿ ನಞಃ ಪ್ರಲಯಕಾಲೀನಃ ಪೂರ್ವಜಗದ್‌ಧ್ವಂಸೋ ವಾ ಉತ್ತರಜಗತ್‌ಪ್ರಾಗಭಾವೋ ವಾಽರ್ಥಃಸ್ಯಾತ್ । ತದಾನೀ-ಮುಭಯೋರಪಿ ಜಾಗರೂಕತ್ವಾತ್ । ನಞರ್ಥಯೋಗ್ಯತ್ವಾಚ್ಚ । ನಹಿ ತಂತುಸಂಯೋಗ-ನಾಶಜನ್ಯಪಟಧ್ವಂಸದಶಾಯಾಮಿಹ ತಂತುಷು ಪಟೋ ನೇತಿ ನಿಷೇಧಃ ಪ್ರಾಚೀನಪಟಧ್ವಂಸಂ ವಾ ತತ್ರೈವ ಭಾವಿಪಟಾಂತರಪ್ರಾಗಭಾವಂ ವಾ ವಿನಾ ಪಟಸ್ಯಾತ್ಯಂತಾಭಾವಮೇವ ವದನ್ ಕ್ವಾಪಿ ದೃಷ್ಟ ಇತಿ ಭಾವಃ । ಏತಾವತಾ ಧ್ವಂಸಪ್ರಾಗಭಾವವತ್ತ್ವಮಾತ್ರೇಣಾತ್ಯಂತಾಭಾವಸ್ಯೈವ ಮಿಥ್ಯಾತ್ವೇನ ತ್ವಯಾ ವಿವಕ್ಷಿತತ್ವಾದಿತಿ ಭಾವಃ ॥ ೯೧-೯೩ ॥

**ವಿವರಣೆ–** ಬಹುವ್ರೀಹಿ ಸಮಾಸವನ್ನು ಆಶ್ರಯಿಸಿದರೂ ಮಿಥ್ಯಾತ್ವ ಸಿದ್ಧಿಯಾಗುವುದಿಲ್ಲವೆಂದು ಇಲ್ಲಿ ಉಪಪಾದನೆ ಮಾಡುತ್ತಾರೆ. ಈ ಪ್ರಕರಣದಲ್ಲಿ 'ಸದೇವ ಸೌಮ್ಯೇದಮಗ್ರ ಆಸೀತ್' ಎಂಬ ವಾಕ್ಯವಿದೆ. ಈ ಜಗತ್ತಿನ ಸೃಷ್ಟಿಗಿಂತಲೂ ಮೊದಲು ಎಂದರೆ ಪ್ರಳಯ ಕಾಲದಲ್ಲಿ ಬ್ರಹ್ಮನೇ ಇದ್ದನು ಎಂದು ಆದರ ಅರ್ಥ. ಆದ್ದರಿಂದ 'ಏಕಮೇವಾದ್ವಿತೀಯಂ' ಎಂಬ ವಾಕ್ಯವು ಪ್ರಳಯಕಾಲೀನನಾದ ಬ್ರಹ್ಮನ

ವಿಷಯವಾಗಿದೆ. ಆಗ ಹಿಂದಿನ ಜಗತ್ತಿನ ಧ್ವಂಸವು ಮುಂದೆ ಉಂಟಾಗುವ ಜಗತ್ತಿನ ಪ್ರಾಗಭಾವವೂ ಇದೆ. ಅದ್ವಿತೀಯ ಶಬ್ದಕ್ಕೆ ಬಹುವ್ರೀಹಿಯನ್ನು ಆಶ್ರಯಿಸಿ ದ್ವಿತೀಯಾಭಾವವನ್ನು ಉಳ್ಳವನು ಎಂದು ಅರ್ಥವನ್ನು ಮಾಡಿದರೂ ಆಗ ಬ್ರಹ್ಮನ ಜೊತೆಯಲ್ಲಿ ದ್ವಿತೀಯವಾದ ಜಗತ್ತಿನ ಪ್ರಾಗಭಾವವಾಗಲೀ ಅಥವಾ ಧ್ವಂಸವಾಗಲೀ ಸಿದ್ಧವಾಗುತ್ತದೆ. ಯದ್ಯಪಿ ನಞ್ ಪದಕ್ಕೆ ಅತ್ಯಂತಾಭಾವವೆಂದೂ ಅರ್ಥವನ್ನು ಮಾಡಬಹುದು. ಅದು ಪ್ರತಿಯೋಗಿಗೆ ಅತ್ಯಂತ ವಿರುದ್ಧವಾದುದು. ಆದರೆ ಅತ್ಯಂತಾಭಾವರೂಪವಾದ ಅರ್ಥವನ್ನೇ ಹೇಳಬೇಕೆಂದು ನಿರ್ಬಂಧವೇನೂ ಇಲ್ಲ. ಅಭಾವ ಎಂಬುದು ಸಾಮಾನ್ಯವಾದ ಅರ್ಥ. ಧ್ವಂಸಪ್ರಾಗಭಾವವನ್ನು ತೆಗೆದುಕೊಂಡೇ ಅಭಾವ ಎಂಬ ಅರ್ಥವನ್ನು ಕೂಡಿಸಲು ಬರುವಾಗ ಅತ್ಯಂತಾಭಾವವನ್ನು ತೆಗೆದುಕೊಳ್ಳಬೇಕಾದ ಪ್ರಸಂಗವಿಲ್ಲ. ಅತ್ಯಂತಾಭಾವವನ್ನು ತೆಗೆದುಕೊಂಡರೆ ಮಾತ್ರ ನಿನಗೆ ಮಿಥ್ಯಾತ್ವವು ಸಿದ್ಧವಾಗುತ್ತದೆ. ಅಂತಹ ನಿರ್ಬಂಧವಿಲ್ಲವಾದ್ದರಿಂದ ಈ ವಾಕ್ಯದಿಂದ ಮಿಥ್ಯಾತ್ವವು ಸಿದ್ಧವಾಗುವುದಿಲ್ಲ ಎಂದು ಅಭಿಪ್ರಾಯ. ತಂತು ಸಂಯೋಗದಿಂದ ಉಂಟಾಗುವ ಪಟನಾಶದಲ್ಲಿ ಈ ತಂತುವಿನಲ್ಲಿ ಪಟವಿಲ್ಲ ಎಂದು ನಿಷೇಧ ಮಾಡಿದರೆ ಅದು ಹಿಂದೆ ಇದ್ದ ಪಟದ ನಾಶವನ್ನಾಗಲೀ ಅಥವಾ ಮುಂದೆ ಅದೇ ತಂತುಗಳಿಂದ ಉಂಟಾಗುವ ಪಟದ ಪ್ರಾಗಭಾವವನ್ನಾಗಲೀ ಹೇಳುತ್ತದೆಯೇ ಹೊರತು ಪಟದ ಅತ್ಯಂತಾಭಾವವನ್ನು ಎಂದೂ ಹೇಳುವುದಿಲ್ಲ. ಅದರಂತೆ ಅದ್ವಿತೀಯ ಪದದಲ್ಲಿಯೂ ಸಹ ಹಾಗೆಯೇ ಅರ್ಥ ಮಾಡಬೇಕು ಎಂದು ಅಭಿಪ್ರಾಯ.

ತ್ರಿಕಾಲಾಸತ್ತ್ವರೂಪಂ ತೇ ಮಿಥ್ಯಾತ್ವಂ ಹಿ ಸತಃ ಪುರಾ ।
ಲಯೇ ಲೀನಸ್ಯ ನೈವಾಭೂನ್ನಾಪಿ ಪಶ್ಚಾದ್ಭವಿಷ್ಯತಃ ॥ ೮೯೪ ॥

**ಅರ್ಥ–** ತೇ= ನಿನಗೆ, ಮಿಥ್ಯಾತ್ವಂ= ಮಿಥ್ಯಾತ್ವವು, ತ್ರಿಕಾಲಾಸತ್ತ್ವರೂಪಂ ಹಿ= ಕಾಲತ್ರಯದಲ್ಲಿ ಅಸತ್ತ್ವರೂಪವಾದುದಷ್ಟೇ, ಪುರಾ= ಹಿಂದೆ, ಸತಃ= ವಿದ್ಯಮಾನವಾದ, ಲಯೇ= ಪ್ರಳಯದಲ್ಲಿ, ಲೀನಸ್ಯ= ಧ್ವಂಸವನ್ನು ಹೊಂದಿದ ಜಗತ್ತಿಗೆ, ಅಂತಹ ತ್ರಿಕಾಲಾಸತ್ತ್ವವು, ನೈವಾಭೂತ್= ಇಲ್ಲವೇ ಇಲ್ಲ, ಪಶ್ಚಾತ್= ಅನಂತರ, ಭವಿಷ್ಯತಃ= ಸೃಷ್ಟಿಯನ್ನು ಹೊಂದುವ ಜಗತ್ತಿಗೂ, ನೈವಾಭೂತ್= ತ್ರಿಕಾಲಾಸತ್ತ್ವವು ಇಲ್ಲವೇ ಇಲ್ಲ.

**ಅನುವಾದ–** ನಿನಗೆ ಅಭಿಮತವಾದ ಮಿಥ್ಯಾತ್ವವು ಕಾಲತ್ರಯದಲ್ಲಿ ಅಸತ್ತ್ವರೂಪವಾದುದು. ಅಂತಹ ಮಿಥ್ಯಾತ್ವವು ಪ್ರಳಯಕಾಲಕ್ಕಿಂತ ಹಿಂದೆ ಇದ್ದು, ಪ್ರಳಯ ಕಾಲದಲ್ಲಿ ನಾಶವನ್ನು ಹೊಂದಿರುವ ಹಿಂದಿನ ಜಗತ್ತಿಗಾಗಲೀ ಅಥವಾ ಪ್ರಳಯಕಾಲದಲ್ಲಿ ಇರದೆ ಮುಂದೆ ಉತ್ಪತ್ತಿಯನ್ನು ಹೊಂದುವ ಮುಂದಿನ ಜಗತ್ತಿಗಾಗಲೀ ಇಲ್ಲವೇ ಇಲ್ಲ.

**ಭಾವವಿಲಾಸಿನೀ–** ವಿರುದ್ಧಸ್ಯಾಭಾವಸ್ಯ ವಿರೋಧಮೇವೋಪಪಾದಯತಿ – **ತ್ರಿಕಾಲೇತಿ** ॥ ಪುರಾ ಪ್ರಲಯಾತ್ ಪೂರ್ವಮ್ । ಸತಃ ವಿದ್ಯಮಾನಸ್ಯ । ಲಯೇ ಪ್ರಲಯೇ । ಲೀನಸ್ಯ ಪ್ರಧ್ವಸ್ತಸ್ಯ ಜಗತಃ । ಪ್ರಧ್ವಂಸಸ್ಯ ಪ್ರಾಕ್‌ಪ್ರತಿಯೋಗಿಸತ್ತ್ವನಿಯಮಾತ್ । ಪುರಾ ಸತ ಇತ್ಯುಕ್ತಮ್ । ಪಶ್ಚಾತ್‌ಪ್ರಲಯೋತ್ತರಸೃಷ್ಟಿಕಾಲೇ । ಪ್ರಾಗಭಾವಸ್ಯ ಪಶ್ಚಾತ್‌ಪ್ರತಿಯೋಗಿಸತ್ತ್ವನಿಯಮಾದಿತಿ ಭಾವಃ ॥ ೮೯೪ ॥

**ವಿವರಣೆ–** ಆದ್ದರಿಂದ ಅಲ್ಲಿ ಹಿಂದಿನ ಜಗತ್ತಿನ ಧ್ವಂಸವನ್ನು ಅಥವಾ ಮುಂದಿನ ಜಗತ್ತಿನ ಪ್ರಾಗಭಾವವನ್ನು ಹೇಳಬೇಕೇ ಹೊರತು ಜಗತ್ತಿನ ಅತ್ಯಂತಾಭಾವವನ್ನು ಹೇಳಲು ಬರುವುದಿಲ್ಲ ಎಂದು ಅಭಿಪ್ರಾಯ.

ಜಗಚ್ಚ ಸರ್ವಮೇತಾದೃಗನೀದೃಕ್ ಶೃಂಗಮಸ್ತಿ ತೇ ॥ ೮೯೫ ॥

**ಅರ್ಥ–** ಸರ್ವಂ ಜಗತ್= ಎಲ್ಲ ಜಗತ್ತು, ಏತಾದೃಗ್= ಈ ರೀತಿಯಾದುದೇ, ಅನೀದೃಕ್= ಈ ರೀತಿ ಅಲ್ಲದುದು, ತೇ= ನಿನ್ನ, ಶೃಂಗಂ ಅಸ್ತಿ= ಶೃಂಗವಾದಿದೆ.

**ಅನುವಾದ–** ಜಗತ್ತೆಲ್ಲವೂ ಪ್ರಾಗಭಾವ ಪ್ರತಿಯೋಗಿ ಅಥವಾ ಧ್ವಂಸ ಪ್ರತಿಯೋಗಿಯಾಗಿದೆ. ಹಾಗಲ್ಲದೇ ಕಾಲತ್ರಯವೃತ್ತಿಯಾದ ಅತ್ಯಂತಾಭಾವಕ್ಕೆ ಪ್ರತಿಯೋಗಿಯಾಗಿರುವುದು ನಿನ್ನ ಕೊಂಬು ಮಾತ್ರ.

**ಭಾವವಿಲಾಸಿನೀ–** ಸರ್ವಮತಿ ತಮನಾಗತಂ ಚ । ಏತಾದೃಕ್ ಏಕಂ ಪ್ರಧ್ವಂಸಪ್ರತಿಯೋಗಿತಯಾ ಪ್ರಾಕ್‌ಸತ್ । ಅಪರಂ ಪ್ರಾಗಭಾವಪ್ರತಿಯೋಗಿ- ತಯೋತ್ತರತ್ರ ಸತ್ । ಅನೀದೃಕ್ ಪ್ರಾಗಪ್ಯಸತ್ । ಉತ್ತರತ್ರಾಪ್ಯಸತ್ । ತದಾನೀಮಪ್ಯಸತ್ ॥ ೮೯೫ ॥

**ವಿವರಣೆ–** ಅನುಭವಕ್ಕೆ ವಿರುದ್ಧವಾಗಿ ಆಗ್ರಹದಿಂದ ಮಾತನಾಡುವವನು ಪಶು ಎಂದು ಇಲ್ಲಿ ಅಪಹಾಸ ಮಾಡುತ್ತಾರೆ.

ಯದಿ ತಸ್ಯೈವ ಮಿಥ್ಯಾತ್ವಮಾಶಾಸ್ಸೇ ಪಶುತಾ ತದಾ ।
ತ್ವತ್ತೋ ಗತೇತಿ ಜೀವೈಕ್ಯವಾದೋ ಭಗ್ನಸ್ತವೈವ ಹಿ ॥ ೮೯೬ ॥

**ಅರ್ಥ–** ಯದಿ= ಒಂದು ಪಕ್ಷ, ತಸ್ಯೈವ= ಆ ಶೃಂಗಕ್ಕೇ, ಮಿಥ್ಯಾತ್ವಂ= ಮಿಥ್ಯಾತ್ವವನ್ನು, ಆಶಾಸ್ಸೇ= ನೀನು ಬಯಸುವುದಾದರೆ, ತದಾ= ಆಗ, ತ್ವತ್ತಃ= ನಿನ್ನಿಂದ, ಪಶುತಾ= ಪಶುತ್ವವು, ಗತೇತಿ= ಹೊರಟು ಹೋಯಿತು ಎಂಬ ಕಾರಣದಿಂದ, ತವ= ನಿನ್ನ, ಜೀವೈಕ್ಯವಾದಃ= ಜೀವೈಕ್ಯವಾದವು, ಭಗ್ನ ಏವ ಹಿ= ಭಗ್ನವೇ ಆಯಿತಷ್ಟೇ.

**ಅನುವಾದ–** ಒಂದು ಪಕ್ಷ ಆ ಶೃಂಗಕ್ಕೇ ಮಿಥ್ಯಾತ್ವವನ್ನು ನೀನು ಬಯಸುವುದಾದರೆ ಆಗ ಪಶುತ್ವದ ಅತ್ಯಂತಾಭಾವವು ಸಿದ್ಧವಾಗುವುದರಿಂದ ನಿನ್ನಿಂದ ಪಶುತ್ವವು ಹೊರಟು

ಹೋಯಿತು. ಆದ್ದರಿಂದ ಪಶುಗಳಿಗೆ ಮತ್ತು ಪಶುತ್ವವಿಲ್ಲದ ನಿನಗೂ ಭೇದವೇ ಸಿದ್ಧವಾಗುವುದರಿಂದ ನಿನಗೆ ಅಭಿಮತವಾದ ಜೀವೈಕ್ಯವು ಭಗ್ನವೇ ಆಯಿತು.

**ಭಾವವಿಲಾಸಿನೀ–** ನನು ತರ್ಹಿ ತಸ್ಯೈವ ಶೃಂಗಸ್ಯ ಮಿಥ್ಯಾತ್ವಂ ವದಿಷ್ಯಾಮೀತ್ಯತಸ್ತವಮತೇ ತದಪ್ಯಶಕ್ಯಮಿತ್ಯಾಹ – **ಯದೀತಿ** ॥ ಜೀವೈಕ್ಯಂ ಪಶುಜೀವೈಕ್ಯಮ್ ॥ ೮೯೬ ॥

ಅಗ್ರಶಬ್ದೋಕ್ತಕಾಲಸ್ಯ ಸತ್ತ್ವಾತ್ತತ್ಸಮಯೇಽಪಿ ಚ ।
ದ್ವಿತೀಯಶೂನ್ಯಂ ತದ್ ಬ್ರಹ್ಮ ನ ತದಾ ನಾನ್ಯದಾಪ್ಯಭೂತ್ ॥ ೮೯೭ ॥

**ಅರ್ಥ–** ತತ್ ಸಮಯೇಽಪಿ= ಆ ಪ್ರಳಯಕಾಲದಲ್ಲಿಯೂ ಸಹ, ಅಗ್ರಶಬ್ದೋಕ್ತಕಾಲಸ್ಯ= ಅಗ್ರ ಶಬ್ದದಿಂದ ಹೇಳಲ್ಪಟ್ಟ ಕಾಲವು, ಸತ್ತ್ವಾತ್= ಇರುವುದರಿಂದ, ತದ್ಬ್ರಹ್ಮ= ಆ ಬ್ರಹ್ಮನು, ತದಾ= ಆಗ, ದ್ವಿತೀಯಶೂನ್ಯಂ= ದ್ವಿತೀಯ ವಸ್ತುಶೂನ್ಯನಾಗಿ, ನ ಅಭೂತ್= ಆಗಲಿಲ್ಲ, ಅನ್ಯದಾಪಿ= ಬೇರೆ ಸಮಯದಲ್ಲಿಯೂ ಸಹ ದ್ವಿತೀಯ ಶೂನ್ಯನಾಗಿ, ನ ಅಭೂತ್= ಆಗುವುದಿಲ್ಲ.

**ಅನುವಾದ–** ಪ್ರಳಯ ಕಾಲದಲ್ಲಿಯೂ ಸಹ 'ಇದಂ ಅಗ್ರೇ' ಎಂಬ ವಾಕ್ಯದಲ್ಲಿ ಅಗ್ರಶಬ್ದದಿಂದ ಹೇಳಿದ ಕಾಲವು ಇರುವುದರಿಂದ ಆಗಲೂ ಬ್ರಹ್ಮನು ದ್ವಿತೀಯ ಶೂನ್ಯನಾಗಿರಲಿಲ್ಲ. ಕಾಲವು ನಿತ್ಯವಾದುದರಿಂದ ಎಂದೂ ಬ್ರಹ್ಮನು ದ್ವಿತೀಯಶೂನ್ಯನಾಗಿರುವುದಿಲ್ಲ.

**ಭಾವವಿಲಾಸಿನೀ–** ದ್ವಿತೀಯಶಬ್ದೇನಾನಿತ್ಯಜಗದ್ವಿವಕ್ಷಾಯಾಮುಕ್ತೈವ ಗತಿಃ । ನಿತ್ಯ-ಜಗದ್ವಿವಕ್ಷಾಯಾಂತು ತಸ್ಯ ಪ್ರಲಯಕಾಲೇಽಪಿ ವಿದ್ಯಮಾನತ್ವೇನೋಕ್ತವಿಧಯಾಪಿ ನಿಷೇಧಾ-ಯೋಗಾತ್ । ತ್ರಿಕಾಲಸ್ಥಾಯಿನಿ ನಿತ್ಯೇ ತ್ವದಭಿಮತತ್ರೈಕಾಲಿಕನಿಷೇಧಸ್ಯ ಸುತರಾಮಯೋಗಾತ್ ಸಮಾಭ್ಯಧಿಕಾರಾಹಿತ್ಯಮೇವಾದ್ವಿತೀಯಶಬ್ದಾರ್ಥೋ ವಕ್ತವ್ಯ ಇತ್ಯಾಹ – **ಅಗ್ರೇತಿ** ॥ ತದಾ ಪ್ರಲಯಕಾಲೇ । ಅನ್ಯದಾ ಸೃಷ್ಟಿಕಾಲೇ ॥ ೮೯೭ ॥

**ವಿವರಣೆ–** ಅದ್ವಿತೀಯ ಎಂಬ ಶಬ್ದದಲ್ಲಿ ಘಟಕವಾದ ದ್ವಿತೀಯ ಎಂಬ ಶಬ್ದದಿಂದ ಅನಿತ್ಯ ಜಗತ್ತನ್ನು ವಿವಕ್ಷೆಮಾಡಿದರೆ ಹಿಂದೆ ಹೇಳಿದಂತೆ ಧ್ವಂಸಪ್ರಾಗಭಾವಗಳನ್ನೇ ಅಂಗೀಕರಿಸಬೇಕಾಗುತ್ತದೆ. ನಿತ್ಯ ಜಗತ್ತನ್ನು ವಿವಕ್ಷೆಮಾಡಿದರೆ ನಿತ್ಯವಾದ ಜಗತ್ತಿಗೆ ಪ್ರಳಯಕಾಲದಲ್ಲಿಯೂ ಸತ್ತ್ವವಿರುವುದರಿಂದ ಅದಕ್ಕೆ ಧ್ವಂಸ ಪ್ರಾಗಭಾವಗಳೂ ಇಲ್ಲವೆಂದು ಇಲ್ಲಿ ಹೇಳುತ್ತಾರೆ. ನಿತ್ಯವಾದ ಜಗತ್ತು ಕಾಲತ್ರಯದಲ್ಲಿ ಸತ್ತ್ವವುಳ್ಳದ್ದು ಅದಕ್ಕೆ ಕಾಲತ್ರಯ ಅಸತ್ತ್ವರೂಪವಾದ ಮಿಥ್ಯಾತ್ವವು ಬರುವುದು ಸುತರಾಂ ಅಸಾಧ್ಯ ಎಂದು ಅಭಿಪ್ರಾಯ.

**ಸ್ವಾಸಿನೈವ ಸ್ವಯಂ ಛಿನ್ನಃ ಕಾಲಸ್ಯ ಕುಟಿಲಾ ಗತಿಃ ।**
**ಯತ್ಸ್ವಾಭಿಮತವಾಕ್ಯೇನ ಸ್ವಸ್ಯೈವಾಭೂತ್ಪರಾಭವಃ ॥ ೮೯೮ ॥**

**ಅರ್ಥ–** ಸ್ವಾಸಿನೈವ= ತನ್ನ ಕತ್ತಿಯಿಂದಲೇ, ಸ್ವಯಂ= ತಾನು, ಛಿನ್ನಃ= ಕತ್ತರಿಸಲ್ಪಟ್ಟನು, ಕಾಲಸ್ಯ ಕುಟಿಲಾ ಗತಿಃ= ಕಾಲದ ಗತಿಯು ವಕ್ರವಾದುದು, ಯತ್= ಏಕೆಂದರೆ, ಸ್ವಾಭಿಮತ ವಾಕ್ಯೇನ= ತನಗೆ ಇಷ್ಟವಾದ ವಾಕ್ಯದಿಂದ, ಸ್ವಸ್ಯೈವ= ತನಗೇ, ಪರಾಭವಃ ಅಭೂತ್= ಸೋಲು ಉಂಟಾಯಿತು.

**ಅನುವಾದ–** ತನಗೆ ಅಭಿಮತವಾದ ಏಕಮೇವಾದ್ವಿತೀಯಂ ಎಂಬ ವಾಕ್ಯದಿಂದಲೇ ತನಗೆ ಪರಾಭವ ಉಂಟಾದ ಕಾರಣ ತನ್ನ ಕತ್ತಿಯಿಂದಲೇ ತಾನು ಕತ್ತರಿಸಿಕೊಂಡಂತಾಯಿತು. ಕಾಲದ ಗತಿಯು ವಕ್ರವಾದುದಷ್ಟೇ!

**ಭಾವವಿಲಾಸಿನೀ–** ಸ್ವಾಸಿನಾ ಸ್ವಸ್ಯಾಸಿಸಮೇನ ಪರನಿರಾಕರಣಾರ್ಥಮಸಿತ್ವೇನಾಭಿಮತೇನ ವಾಕ್ಯೇನ । ಅದ್ವಿತೀಯತ್ವಪ್ರತಿಪಾದಕವಾಕ್ಯ ಏವ ಕಾಲಾಖ್ಯದ್ವಿತೀಯಸ್ಯೋಕ್ತತ್ವಾತ್ ಸ್ವಯಂ ಮಾಯೀ ಛಿನ್ನಃ । ತತ್ರ ಲೌಕಿಕಮಾಭಾಣಕಂ ಸಂವಾದಯತಿ ॥ **ಕಾಲಸ್ಯೇತಿ** ॥ ಕಾಲವಶಾತ್ ಕಸ್ಮಿಂಶ್ಚಿದನಿಷ್ಟ ಆಗತೇ ಕಾಲಸ್ಯ ಕುಟಿಲಾ ಗತಿರಿತಿ ಸರ್ವೇ ವದಂತಿ। ಅಗ್ರಶಬ್ದೋಕ್ತಕಾಲಮಹಿಮ್ನೇವ ಮತ ಹಾನ್ಯಾಖ್ಯಾನಿಷ್ಟಪ್ರಾಪ್ತೇರಸ್ಯೋದಾಹರಣಂ ಮಾಯಾವಾದ್ಯೇವೇತಿ ಭಾವಃ । ಯತ್ ಯಸ್ಮಾತ್ ॥ ೮೯೮ ॥

**ವಿವರಣೆ–** ಏನಾದರೂ ಅನಿಷ್ಟ ಒದಗಿದಾಗ ಲೋಕದಲ್ಲಿ 'ಕಾಲಸ್ಯ ಕುಟಿಲಾಗತಿಃ' ಎಂದು ಹೇಳುತ್ತಾರೆ. ಕಾಲದ ಗತಿ ವಕ್ರವಾದುದು ಎಂದು ಅಭಿಪ್ರಾಯ. 'ಏಕಮೇವಾದ್ವಿತೀಯಂ' ವಾಕ್ಯದಿಂದ ಮಿಥ್ಯಾತ್ವವನ್ನು ಸಾಧಿಸಲು ಹೊರಟ ಅದ್ವೈತಿಯು ಆಗ ಕಾಲರೂಪವಾದ ದ್ವಿತೀಯದ ಸತ್ತ್ವವನ್ನು ಅಂಗೀಕಾರ ಮಾಡಬೇಕಾಗುವುದರಿಂದ ಸೋಲನ್ನು ಒಪ್ಪುವ ಮಹಾ ಅನಿಷ್ಟ ಪ್ರಸಂಗವು ಉಂಟಾಗುತ್ತದೆ. ಆದ್ದರಿಂದ ಕಾಲಸ್ಯ ಕುಟಿಲಾಗತಿಃ ಎಂದು ಅಪಹಾಸ ಮಾಡುತ್ತಾರೆ.

**ನಷ್ಟಿರ್ಮಹದವಜ್ಞಾಯಾಮರ್ಥಸ್ಯ ಸ್ಯಾತ್ ಪದೇ ಪದೇ ।**
**ಯದುಚ್ಯುತಸ್ಯ ನೀಚೈಕ್ಯವಾದೈಃ ಕುಪ್ಯೇತ್ ಪದಾವಲೀ ॥ ೮೯೯ ॥**

**ಅರ್ಥ–** ಮಹದವಜ್ಞಾಯಾಂ= ಮಹಾತ್ವನನ್ನು ಅವಮಾನ ಮಾಡಿದರೆ, ಅರ್ಥಸ್ಯ= ಧನದ ಮತ್ತು ಪದದ ಅರ್ಥದ, ನಷ್ಟಿಃ= ನಾಶವು, ಪದೇ ಪದೇ= ಹೆಜ್ಜೆ ಹೆಜ್ಜೆಗೂ, ಪ್ರತಿಯೊಂದು ಪದದಲ್ಲಿಯೂ, ಸ್ಯಾತ್= ಆಗುತ್ತದೆ, ಯತ್= ಏಕೆಂದರೆ, ಅಚ್ಯುತಸ್ಯ= ಹರಿಗೆ, ನೀಚೈಕ್ಯವಾದೈಃ= ನೀಚರಾದ ಜೀವರ ಐಕ್ಯವನ್ನು ಹೇಳುವ ವಾದದಿಂದ, ಪದಾವಲೀ= ಪದಸಮೂಹವು, ಕುಪ್ಯೇತ್= ಕೋಪಗೊಳ್ಳುತ್ತದೆ.

**ಅನುವಾದ–** ಉತ್ತಮರಿಗೆ ಅವಮಾನವನ್ನು ಮಾಡಿದರೆ ಹೆಜ್ಜೆ ಹೆಜ್ಜೆಗೂ ಅರ್ಥದ ನಾಶವಾಗುತ್ತದೆ. (ಪ್ರತಿಯೊಂದು ಪದದಲ್ಲಿಯೂ ಇಷ್ಟವಾದ ಅರ್ಥವನ್ನು ಪರಿತ್ಯಾಗ ಮಾಡಬೇಕಾಗುತ್ತದೆ). ಏಕೆಂದರೆ ಅಚ್ಯುತನಾದ ಹರಿಗೆ ನೀಚೈಕ್ಯವನ್ನು ಹೇಳಿದರೆ ಪದಸಮೂಹಗಳು ಕೋಪಗೊಳ್ಳುತ್ತವೆ.

**ಭಾವವಿಲಾಸಿನೀ–** ಏವಂಚ ದುರ್ನೀತಿವಿಷಯೋऽಪಿ ಸ ಏವಾಭೂದಿತ್ಯಾಹ – ನಷ್ಟಿರಿತಿ ॥ ಮಹದವಜ್ಞಾಯಾಂ ಮಹತಃ ಪೂಜ್ಯಾಸ್ಯಾವಜ್ಞಾಯಾಮ್ । ಅರ್ಥಪದೇನ ದ್ರವ್ಯಂ ಶಬ್ದಾರ್ಥಶ್ಚ ಗೃಹ್ಯತೇ। ಪದಶಬ್ದೇನ ಚಾಂಘ್ರಿವಿಕ್ಷೇಪಃ, ಸುಪ್ತಿಙಂತಂ ಪದಂ ಚ ಗೃಹ್ಯತೇ । ಯದ್ಯಸ್ಮಾತ್ । ಪದಾವಲೀ ಅಗ್ರಾ ದ್ವಿತೀಯಾದಿಪದಾವಲೀ ಕುಪ್ಯೇತ ಪರೋದೀರಿತಮರ್ಥಂ ನ ಸಹತ ಇತ್ಯರ್ಥಃ । ವಾಕ್ಯಸ್ಥಪದ ವಿರುದ್ಧತ್ವಾತ್ ಪರಸ್ಯಾರ್ಥೋ ನಷ್ಟ ಇತಿ ಭಾವಃ ॥ ೪೯೯ ॥

**ವಿವರಣೆ–** 'ಏಕಮೇವಾದ್ವಿತೀಯಂ' ಎಂಬ ವಾಕ್ಯದಿಂದ ಜೀವೈಕ್ಯವನ್ನು ಹೇಳಿದರೆ ಹರಿಗೆ ಅವಮಾನ ಮಾಡಿದಂತೆ. ಪ್ರಕರಣದ ಆದಿಯಲ್ಲಿರುವ ಅಗ್ರ ಎಂಬ ಪದವು ಮತ್ತು ಇದೇ ವಾಕ್ಯದಲ್ಲಿರುವ ಅದ್ವಿತೀಯ ಎಂಬ ಪದವು ಜೀವೈಕ್ಯಕ್ಕೆ ವಿರೋಧಿಗಳಾದ್ದರಿಂದ ಅವುಗಳು ಕೋಪಗೊಳ್ಳುತ್ತವೆ ಎಂದರೆ ನಿನಗೆ ಅಭಿಮತವಾದ ಜೀವೈಕ್ಯರೂಪವಾದ ಅರ್ಥವು ನಾಶವನ್ನು ಹೊಂದುತ್ತದೆ, ಅದು ದೊರೆಯುವುದಿಲ್ಲ ಎಂದು ಅಭಿಪ್ರಾಯ.

ನೇಹನಾನೇತಿ ವಾಕ್ಯಂ ನಾನಾಭೂತಂ ನ ಕಿಂಚನ ।
ಬ್ರಹ್ಮಣೀತ್ಯಾಹ ತೇನೈಕ್ಯಂ ಸರ್ವಸ್ಯ ಜಗತೋ ಭವೇತ್ ॥ ೬೦೦ ॥

**ಅರ್ಥ–** ನೇಹನಾನೇತಿ ವಾಕ್ಯಂ ಚ= ನೇಹನಾನಾಸ್ತಿ ಕಿಂಚನ ಎಂಬ ವಾಕ್ಯವಾದರೂ, ಬ್ರಹ್ಮಣಿ= ಬ್ರಹ್ಮನಲ್ಲಿ, ನಾನಾಭೂತಂ= ಭಿನ್ನವಾದುದು, ಕಿಂಚನ ನ= ಯಾವುದೂ ಇಲ್ಲ, ಇತ್ಯಾಹ= ಎಂದು ಹೇಳುತ್ತದೆ, ತೇನ= ಅದರಿಂದ, ಸರ್ವಸ್ಯ ಜಗತಃ= ಎಲ್ಲ ಜಗತ್ತಿಗೂ, ಐಕ್ಯಂ= ಐಕ್ಯವು, ಭವೇತ್= ಉಂಟಾದೀತು.

**ಅನುವಾದ–** 'ನೇಹನಾನಾಸ್ತಿ ಕಿಂಚನ' ಎಂಬ ವಾಕ್ಯವಾದರೂ ಬ್ರಹ್ಮನಲ್ಲಿ ಭಿನ್ನವಾದ ಯಾವ ವಸ್ತುವೂ ಇಲ್ಲ ಎಂದು ಅರ್ಥವನ್ನು ಹೇಳುವುದರಿಂದ ಜಡ ಚೇತನಾತ್ಮಕ ಸರ್ವಜಗತ್ತಿಗೂ ಬ್ರಹ್ಮನಿಂದ ಐಕ್ಯವು ಉಂಟಾದೀತು.

**ಭಾವವಿಲಾಸಿನೀ–** ನೇಹನಾನೇತಿ ವಾಕ್ಯಂ ನೇಹನಾನಾಸ್ತಿ ಕಿಂಚನೇತಿ ವಾಕ್ಯಮ್ । ತೇನ ಬ್ರಹ್ಮಣಿ ಸರ್ವಸ್ಯ ನಾನಾಭಾವನಿಷೇಧೇನ । ಸವಿಶೇಷಣೇ ವಿಧಿನಿಷೇಧೌ ವಿಶೇಷಣಮುಪಸಂಕ್ರಾಮತ ಇತಿ ನ್ಯಾಯಾತ್ ಸರ್ವಸ್ಯ ಜಗತಃ ಐಕ್ಯಂ ಭವೇದಿತಿ ಯೋಜನಾ ॥ ೬೦೦ ॥

**ವಿವರಣೆ–** ಸವಿಶೇಷಣೇ ಹಿ ವಿಧಿನಿಷೇಧೌ ವಿಶೇಷಣ ಮುಪಸಂಕ್ರಾಮತಃ ಎಂಬ ನ್ಯಾಯದಿಂದ ಭಿನ್ನವಾದುದು ಇಲ್ಲ ಎಂದು ಹೇಳಿದರೆ ವಿಶೇಷಣವಾದ ಭಿನ್ನತೆಯು ಇಲ್ಲ

ಎಂದು ಪರ್ಯಸಾನವನ್ನು ಹೊಂದಿ ಸರ್ವ ಜಗತ್ತೂ ಬ್ರಹ್ಮನಿಂದ ಅಭಿನ್ನವೆಂದು ಸಿದ್ಧವಾಗುತ್ತದೆ. ಆದರೆ ಜಡಾಭೇದವು ಪರನಿಗೆ ಅನಿಷ್ಟವಾದುದು ಎಂದು ಅಭಿಪ್ರಾಯ.

**ಅನೃತಸ್ಯ ಜಡಸ್ಯಾಸ್ಯ ಸರ್ವಸ್ಯೈಕ್ಯಂ ತವಾಪಿ ನ ।**
**ಕಿಂಚನೇತಿ ಪದಸ್ಯಾರ್ಥಶ್ಚಿನ್ಮಾತ್ರಂ ನ ಕಥಂಚನ ॥ ೯೦೧ ॥**

**ಅರ್ಥ–** ತವಾಪಿ= ನಿನಗೂ ಸಹ, ಅನೃತಸ್ಯ= ಮಿಥ್ಯಾಭೂತವಾದ, ಸರ್ವಸ್ಯ ಜಡಸ್ಯ ಐಕ್ಯಂ= ಎಲ್ಲಾ ಜಡಗಳ ಐಕ್ಯವು, ಅಸ್ಯ= ಈ ಬ್ರಹ್ಮನಿಗೆ, ನ= ಸಮ್ಮತವಲ್ಲ, ಚಿನ್ಮಾತ್ರಂ= ಚಿನ್ಮಾತ್ರವು, ಕಿಂಚನೇತಿ ಪದಸ್ಯ= ಕಿಂಚನ ಎಂಬ ಪದಕ್ಕೆ, ಕಥಂಚನ ನ ಅರ್ಥಃ= ಯಾವ ರೀತಿಯಲ್ಲಿಯೂ ಅರ್ಥವಾಗುವುದಿಲ್ಲ.

**ಅನುವಾದ– ನಿನ್ನ ರೀತಿಯಿಂದಲೂ ಕೂಡ ಈ ಬ್ರಹ್ಮನಿಗೆ ಮಿಥ್ಯಾಭೂತವಾದ ಸಮಸ್ತ ಜಡಗಳಿಂದ ಐಕ್ಯವಿಲ್ಲ. ಕಿಂಚನ ಎಂಬ ಶಬ್ದಕ್ಕಂತೂ ಚಿನ್ಮಾತ್ರ ಎಂಬ ಅರ್ಥವು ಯಾವ ರೀತಿಯಲ್ಲಿಯೂ ದೊರೆಯುವುದಿಲ್ಲ.**

**ಭಾವವಿಲಾಸಿನೀ– ಅಸ್ಯ ಜಗತಃ । ಕಿಂಚನ ಕಿಮಪೀತಿ ಸರ್ವಗ್ರಾಹಿ । ಕಿಂಚನಪದಮಹಿಮ್ನಾ ಚಿನ್ಮಾತ್ರಮಸ್ಮಿನ್ವಾಕ್ಯೇ ಗೃಹೀತುಂ ನ ಶಕ್ಯಮಿತಿ ಭಾವಃ ॥ ೯೦೧ ॥**

**ವಿವರಣೆ–** 'ಕಿಂಚನ ನಾಸ್ತಿ' ಎಂದರೆ ಯಾವುದೂ ಇಲ್ಲ ಎಂದು ಅರ್ಥವಾಗುತ್ತದೆ. ಯಾವುದೂ ಎಂದರೆ ಜಡವೂ ಮತ್ತು ಚೇತನವೂ ಇಲ್ಲ ಎಂದು ಅರ್ಥವನ್ನು ಮಾಡಬೇಕು. ಭಿನ್ನವಾಗಿಲ್ಲ ಎಂದು ಇಷ್ಟು ನಿಷೇಧವನ್ನು ಮಾಡಿದರೆ ಹಿಂದೆ ಹೇಳಿದಂತೆ ಭೇದವೇ ನಿಷೇಧ್ಯವಾಗುತ್ತದೆ. ಆದನ್ನು ಬಿಟ್ಟು ಈ ವಾಕ್ಯವು ಜಡವನ್ನು ಮಾತ್ರ ನಿಷೇಧ ಮಾಡುತ್ತದೆ. ಚೇತನವನ್ನು ನಿಷೇಧ ಮಾಡುವುದಿಲ್ಲ. ಆದ್ದರಿಂದ ಚಿನ್ಮಾತ್ರವು ಮಾತ್ರ ಉಳಿಯುತ್ತದೆ ಎಂದು ಅರ್ಥವನ್ನು ಹೇಳುವುದಕ್ಕೆ ಯಾವ ಅವಕಾಶವೂ ಇಲ್ಲ ಎಂದು ಅಭಿಪ್ರಾಯ.

**ಅತೋ ನೈಕ್ಯಶ್ರುತಿರಿಯಂ ನಾಪಿ ಮಿಥ್ಯಾತ್ವವಾದಿನೀ ।**
**ನಾನಾ ಪದೇನ ಚೇಹೇತಿ ಪದೇನ ಚ ವಿರೋಧತಃ ॥ ೯೦೨ ॥**

**ಅರ್ಥ–** ಅತಃ= ಆದ್ದರಿಂದ, ಇಯಂ= ಈ ನೇಹನಾನಾಸ್ತಿ ಎಂಬ ವಾಕ್ಯವು, ಐಕ್ಯ ಶ್ರುತಿಃ ನ= ಐಕ್ಯಶ್ರುತಿಯಲ್ಲ, ನಾಪಿ ಮಿಥ್ಯಾತ್ವವಾದಿನೀ= ಮಿಥ್ಯಾತ್ವವನ್ನು ಹೇಳುವ ವಾಕ್ಯವೂ ಅಲ್ಲ, ಏಕೆಂದರೆ, ನಾನಾ ಪದೇನ= ನಾನಾ ಪದದಿಂದಲೂ, ಇಹೇತಿ ಪದೇನ ಚ= ಇಹ ಎಂಬ ಪದದಿಂದಲೂ, ವಿರೋಧತಃ= ವಿರೋಧವು ಉಂಟಾಗುತ್ತದೆ.

**ಅನುವಾದ–** ನಾನಾ ಪದದಿಂದಲೂ ಮತ್ತು ಇಹ ಎಂಬ ಪದದಿಂದಲೂ ವಿರೋಧವು ಉಂಟಾಗುವುದರಿಂದ ನೇಹನಾನಾಸ್ತಿ ಕಿಂಚನ ಎಂಬ ವಾಕ್ಯವು ಐಕ್ಯ ಶ್ರುತಿಯೂ ಅಲ್ಲ ಮಿಥ್ಯಾತ್ವವನ್ನು ಹೇಳುವ ಶ್ರುತಿಯೂ ಅಲ್ಲ.

**ಭಾವವಿಲಾಸಿನೀ–** ಅತಃ ಸರ್ವೈಕ್ಯಾಯೋಗಾತ್ । ಚಿನ್ಮಾತ್ರೈಕ್ಯಸ್ಯ ಉಕ್ತರೀತ್ಯಾऽತ್ರಾಲಾಭಾಚ್ಚ ॥ ೯೦೨ ॥

**ವಿವರಣೆ–** ಇಹ ಎಂಬ ಪದವು ಬ್ರಹ್ಮನಿಗೆ ಆಧಾರತ್ವವನ್ನು, ಉಳಿದ ಜಗತ್ತಿಗೆ ಆಧೇಯತ್ವವನ್ನು ಹೇಳುವುದರಿಂದ ಭೇದವೇ ಸಿದ್ಧವಾಗುತ್ತದೆ. ಆದ್ದರಿಂದ ಐಕ್ಯಶ್ರುತಿಯಲ್ಲ. ನಾನಾ ನಾಸ್ತಿ ಎಂಬಲ್ಲಿ ನಾನಾ ಎಂಬ ಪದವು ಭೇದವನ್ನು ನಿಷೇಧ ಮಾಡುವುದರಿಂದ ಬ್ರಹ್ಮ ಭಿನ್ನವಾಗಿ ಇಲ್ಲ, ಬ್ರಹ್ಮರೂಪವಾಗಿ ಇದೆ ಎಂದು ಅರ್ಥವು ದೊರೆಯುವುದರಿಂದ, ಬ್ರಹ್ಮವು ಸತ್ಯವಾಗಿರುವುದರಿಂದ ಮಿಥ್ಯಾತ್ವವು ಸಿದ್ಧವಾಗುವುದಿಲ್ಲ ಎಂದು ಅಭಿಪ್ರಾಯ. ಬ್ರಹ್ಮನಲ್ಲಿ ಯಾವುದೂ ಇಲ್ಲ ಎಂದು ಹೇಳಬೇಕಾಗಿದ್ದರೆ 'ನೇಹ ಕಿಂಚನಾಸ್ತಿ' ಎಂದು ಇಷ್ಟೇ ಸಾಕಾಗುತ್ತಿತ್ತು. ಆದರೆ 'ನಾನಾ ನಾಸ್ತಿ' ಎಂದು ಹೇಳಿದ್ದರಿಂದ ಇನ್ನೊಂದು ಪದಾರ್ಥವಿದೆ, ಅದರಲ್ಲಿ ನಾನಾತ್ವವಿಲ್ಲ ಎಂದಿಷ್ಟೇ ಸಿದ್ಧವಾಗುತ್ತದೆ ಹೊರತಾಗಿ ದ್ವಿತೀಯ ಪದಾರ್ಥದ ಅಭಾವವೇ ಸಿದ್ಧವಾಗುವುದಿಲ್ಲ ಎಂದು ಅಭಿಪ್ರಾಯ.

**ಅಭಿನ್ನಸತ್ತ್ವಮನ್ಯತ್ರಸತ್ತ್ವಂ ವಾ ಯತ್ತಯೋರ್ಮತಂ ।**
**ಅತಃ ಸ್ವಗತಧರ್ಮೇಷು ಸ್ವಾವತಾರೇಷು ಕಿಂಚನ ।**
**ನಾನಾಭೂತಂ ನೇತಿ ಹರೇಸ್ತೈರೈಕ್ಯಂ ವಕ್ತಿ ವಾಗಿಯಂ ॥ ೯೦೩ ॥**

**ಅರ್ಥ–** ತಯೋಃ= ಆ ಪದಗಳಿಗೆ, ಅಭಿನ್ನಸತ್ತ್ವಂ ವಾ= ಅಭಿನ್ನಸತ್ತ್ವವಾಗಲೀ, ಅನ್ಯತ್ರಸತ್ತ್ವಂ ವಾ= ಅನ್ಯತ್ರ ಸತ್ತ್ವವಾಗಲೀ, ಮತಂ= ಅಭಿಪ್ರೇತವಾಗಿರುತ್ತದೆ, ಅತಃ= ಆದ್ದರಿಂದ, ಇಯಂ ವಾಕ್= ಈ ವಾಕ್ಯವು, ಹರೇಃ= ಹರಿಯ, ಸ್ವಗತಧರ್ಮೇಷು= ಸ್ವಗತ ಧರ್ಮಗಳಲ್ಲಿ, ಸ್ವಾವತಾರೇಷು= ತನ್ನ ಅವತಾರಗಳಲ್ಲಿ, ಕಿಂಚನ= ಯಾವುದೂ, ನಾನಾಭೂತಂ ನೇತಿ= ಭಿನ್ನವಾದುದು ಇಲ್ಲ ಎಂದು, ಸ್ತೈಃ= ತನ್ನ ಆ ಧರ್ಮಗಳಿಂದಲೂ ಮತ್ತು ಅವತಾರಗಳಿಂದಲೂ, ಐಕ್ಯಂ ವಕ್ತಿ= ಅಭೇದವನ್ನು ಹೇಳುತ್ತದೆ.

**ಅನುವಾದ–** ಆ ಪದಗಳು ಅಭಿನ್ನ ಸತ್ತ್ವವನ್ನಾಗಲೀ ಅಥವಾ ಅನ್ಯತ್ರ ಸತ್ತ್ವವನ್ನಾಗಲೀ ಹೇಳುತ್ತವೆ. ಆದ್ದರಿಂದ 'ನೇಹ ನಾನಾಸ್ತಿ ಕಿಂಚನ' ಎಂಬ ಈ ವಾಕ್ಯವು ಹರಿಗೆ ಸ್ವಗತ ಧರ್ಮಗಳಲ್ಲಾಗಲೀ ಸ್ವಾವತಾರಗಳಲ್ಲಾಗಲೀ ಭಿನ್ನವಾದುದು ಯಾವುದೂ ಇಲ್ಲವೆಂದು ಹೇಳಿ ಧರ್ಮಗಳಿಂದಲೂ ಮತ್ತು ಅವತಾರಗಳಿಂದಲೂ ಐಕ್ಯವನ್ನೇ ಹೇಳುತ್ತದೆ.

**ಭಾವವಿಲಾಸಿನೀ–** ಯದ್ಯಸ್ಮಾತ್ತಯೋಃ ಪದಯೋಃ । ನಾನಾಭೂತಂ ನಾಸ್ತೀತ್ಯುಕ್ತೇಽಭಿನ್ನಮಸ್ತೀತ್ಯರ್ಥಸ್ಯ ಪರ್ಯವಸಾನಾತ್ ಇಹ ನಾಸ್ತೀತುಕ್ತೇಽನ್ಯತ್ರಾಸ್ತೀತ್ಯರ್ಥಸ್ಯ ಚ ಪರ್ಯವಸಾನಾತ್ ಮಿಥ್ಯಾತ್ವಮುಪ್ಯಸ್ಮಿನ್ವಾಕ್ಯೇ ವಕ್ತುಂ ನ ಶಕ್ಯಮಿತಿ ಭಾವಃ । ಅತಃ ಪರಾಭಿಲಷಿತ ಜೀವೈಕ್ಯ-ಜಗನ್ಮಿಥ್ಯಾತ್ವಾರ್ಥಯೋರಸಂಭವಾತ್ । ಕಿಂಚನಶಬ್ದಸ್ಯಾರ್ಥಂ ವಾಸಯಿತುಂ ಸ್ವಗತಧರ್ಮೇಷು ಸ್ವಾವತಾರೇಷ್ವಿತ್ಯುಕ್ತಮ್ । ಅನಂತಗುಣೇಷ್ವನಂತಾವತಾರೇಷು ಚ ಕಿಂಚನ ಕಿಮಪಿ ನಾನಾಭೂತಂ ನಾಸ್ತೀತಿ ಸರ್ವೈಕ್ಯಕಥನಾಯ ಸಾರ್ಥಕ್ಯಾದಿತಿ ಭಾವಃ । ಏವಂ ಸತಿ ಪರಾಭಿಲಷಿತಸಂಕೋಚಃ ಕುತೋ ನೇತಿ ಚೇನ್ನ । ಅಸ್ಮಿನ್‌ಗ್ರಾಮೇ ಕಿಂಚನೇತ್ಯುಕ್ತೇ ತತ್ ಗ್ರಾಮಸ್ಥಸರ್ವಲಾಭವತ್ । ಇಹ ಕಿಂಚನೇತ್ಯುಕ್ತೇ ಬ್ರಹ್ಮಗತಸರ್ವಲಾಭಸ್ಯೈವ ನ್ಯಾಯ್ಯತ್ವಾತ್ । ತೈರ್ಧರ್ಮೈರವತಾರೈಶ್ಚ ॥೯೦೩॥

**ವಿವರಣೆ–** ಇಹ ನಾಸ್ತಿ ಎಂದು ಹೇಳಿದರೆ ಇಲ್ಲಿ ಇಲ್ಲ ಎಂದರೆ ಇನ್ನೊಂದು ಕಡೆ ಇದೆ ಎಂದು ಸಿದ್ಧವಾಗಿರುವುದರಿಂದ ಅನ್ಯತ್ರ ಸತ್ತ್ವವು ಅರ್ಥವಾಗಿ ದೊರೆಯುತ್ತದೆ. ನಾನಾ ನಾಸ್ತಿ ಎಂದು ಹೇಳಿದರೆ ಭಿನ್ನವಾದುದು ಇಲ್ಲ ಎಂದು ಅರ್ಥವಾಗುವುದರಿಂದ ಅಭಿನ್ನ ಸತ್ತ್ವವು ಇದೆ ಎಂಬ ಅರ್ಥವು ದೊರೆಯುತ್ತದೆ. ಪರಾಭೀಪ್ಸಿತ ಮಿಥ್ಯಾತ್ವವನ್ನಂತೂ ಈ ವಾಕ್ಯವು ಎಂದೂ ಹೇಳುವುದಿಲ್ಲ. ಶ್ರುತಿಯಲ್ಲಿರುವ ಕಿಂಚನ ಶಬ್ದವನ್ನು ವಿವರಿಸಲು ರಾಜರು ಸ್ವಗತ ಧರ್ಮೇಷು, ಸ್ವಾವತಾರೇಷು ಎಂದು ಹೇಳಿದ್ದಾರೆ. ಅನಂತ ಗುಣಗಳಲ್ಲಿ ಅನಂತ ಅವತಾರಗಳಲ್ಲಿ ಯಾವುದೂ ಭಿನ್ನವಾಗಿಲ್ಲ ಎಂದು ಸರ್ವೈಕ್ಯವನ್ನು ಹೇಳಲು ಕಿಂಚನ ಪದವು ಸಾರ್ಥಕವಾಗುತ್ತದೆ ಎಂದು ಅಭಿಪ್ರಾಯ. ಅಸ್ಮಿನ್ ಗ್ರಾಮೇ ಕಿಂಚನ ಎಂದು ಹೇಳಿದರೆ ಆ ಗ್ರಾಮದಲ್ಲಿರುವ ಎಲ್ಲವೂ ಹೇಗೆ ಸಂಗ್ರಹೀತವಾಗುತ್ತದೆಯೋ ಅದರಂತೆ ಇಹ ಕಿಂಚನ ಎಂದು ಹೇಳಿದರೆ ಬ್ರಹ್ಮನಲ್ಲಿರುವ ಎಲ್ಲವೂ ಸಂಗ್ರಹೀತವಾಗುತ್ತದೆ. ಎಲ್ಲವೂ ಎಂದರೆ ಅವನ ಗುಣಗಳು, ಕ್ರಿಯೆಗಳು, ಅವತಾರಗಳು. ಆದ್ದರಿಂದ ಕಿಂಚನ ಶಬ್ದಕ್ಕೆ ಅದ್ವೈತಿಗಳು ಹೇಳುವಂತೆ ನಾವು ಜಡಮಾತ್ರ ನಿಷೇಧ ಪರವಾಗಿ ಸಂಕೋಚವನ್ನು ಮಾಡುವುದಿಲ್ಲ ಎಂದು ಅಭಿಪ್ರಾಯ.

**ಘಟೇ ನ ಜಲಮಿತ್ಯುಕ್ತಿರ್ಯಥಾ ತದ್ಗಂ ಜಲಂ ಕ್ಷಿಪೇತ್ ।**
**ನೇಹನಾನೇತಿ ವಾಕ್ತದ್ವತ್ ಸ್ವಗತಂ ಭೇದಮಾಕ್ಷಿಪೇತ್ ॥ ೯೦೪ ॥**

**ಅರ್ಥ–** ಘಟೇ= ಘಟದಲ್ಲಿ, ಜಲಂ ನ= ನೀರು ಇಲ್ಲ, ಇತ್ಯುಕ್ತಿಃ= ಎಂಬ ವಚನವು, ಯಥಾ= ಹೇಗೆ, ತದ್ಗಂ ಜಲಂ= ಘಟದಲ್ಲಿರುವ ನೀರನ್ನು, ಕ್ಷಿಪೇತ್= ನಿರಾಕರಿಸುತ್ತದೆಯೋ, ತದ್ವತ್= ಅದರಂತೆ, ನೇಹನಾನೇತಿ ವಾಕ್= ನೇಹನಾನಾ ಎಂಬ ವಾಕ್ಯವು, ಸ್ವಗತಂ= ಬ್ರಹ್ಮಗತವಾದ, ಭೇದಂ= ಭೇದವನ್ನು, ಆಕ್ಷಿಪೇತ್= ನಿರಾಕರಿಸುತ್ತದೆ.

**ಅನುವಾದ–** ಘಟದಲ್ಲಿ ನೀರಿಲ್ಲ ಎಂದು ಹೇಳಿದರೆ, ಹೇಗೆ ಘಟದಲ್ಲಿರುವ ನೀರು ಮಾತ್ರ ನಿಷಿದ್ಧವಾಗುತ್ತದೆಯೋ, ಅದರಂತೆ ನೇಹ ನಾನಾ ಎಂಬ ವಾಕ್ಯವು ತನ್ನಲ್ಲಿರುವ ಭೇದವನ್ನು ಮಾತ್ರ ನಿರಾಕರಣೆ ಮಾಡುತ್ತದೆ.

**ಭಾವವಿಲಾಸಿನೀ–** ಶ್ರುತೇರರ್ಥಾಂತರಂ ವಕ್ತುಂ ದೃಷ್ಟಾಂತಮಾಹ – **ಘಟ ಇತಿ** ॥ ತದ್ಗಂ ಘಟಗತಮ್ । ಕ್ಷಿಪೇತ್ ನಿಷೇಧತಿ । ಸ್ವಗತಂ ಬ್ರಹ್ಮಗತಮ್ ॥ ೯೦೪ ॥

**ವಿವರಣೆ–** ಘಟದಲ್ಲಿ ನೀರು ಇಲ್ಲವೆಂದು ಹೇಳಿದರೆ ಬೇರೆ ಕಡೆಯಲ್ಲಿ ನೀರು ಇಲ್ಲವೆಂದು ಅರ್ಥವಾಗುವುದಿಲ್ಲ. ಅದರಂತೆ ಬ್ರಹ್ಮನಲ್ಲಿ ಭೇದವಿಲ್ಲ ಎಂದು ಹೇಳಿದರೆ ಬ್ರಹ್ಮನಲ್ಲಿ ತನ್ನ ಭೇದವಿಲ್ಲವೆಂದೇ ಅರ್ಥ ಹೊರತಾಗಿ, ಬ್ರಹ್ಮನಲ್ಲಿ ಅನ್ಯಪ್ರತಿಯೋಗಿಕ ಭೇದವಿಲ್ಲವೆಂದು ಅರ್ಥವಾಗುವುದಿಲ್ಲ ಅಥವಾ ಅನ್ಯ ಪದಾರ್ಥದಲ್ಲಿ ಬ್ರಹ್ಮ ಪ್ರತಿಯೋಗಿಕ ಭೇದವಿಲ್ಲವೆಂದೂ ಅರ್ಥವಾಗುವುದಿಲ್ಲ.

**ಅತಃ ಕಾಚನ ನಾನೇಹ ನೇತ್ಯರ್ಥೋ ವಾ ಭವೇಚ್ಛ್ರುತೇಃ ॥ ೯೦೫ ॥**

**ಅರ್ಥ–** ಅತಃ= ಆದ್ದರಿಂದ, ಇಹ= ಬ್ರಹ್ಮನಲ್ಲಿ, ಕಾಚನ ನಾನಾ= ಯಾವ ಭೇದವೂ, ನ ಇತಿ= ಇಲ್ಲವೆಂದು, ಶ್ರುತೇಃ= ಶ್ರುತಿಗೆ, ಅರ್ಥಃ ಭವೇತ್= ಅರ್ಥವಾದರೂ ಆಗುತ್ತದೆ.

**ಅನುವಾದ– ಅಥವಾ ಆ ಕಾರಣದಿಂದ ಬ್ರಹ್ಮನಲ್ಲಿ ಯಾವ ಭೇದವೂ ಇಲ್ಲವೆಂದು ಶ್ರುತಿಗೆ ಅರ್ಥವು ಆಗುತ್ತದೆ.**

**ಭಾವವಿಲಾಸಿನೀ–** ಅತಃ ಸ್ವನಿಷ್ಠಭೇದಸ್ಯೈವ ನಿಷೇಧಸಂಭವಾತ್ । ಕಿಂಚನಪದಸ್ಯೈವಾರ್ಥಃ **ಕಾಚನೇತಿ** । ಇಹ ಬ್ರಹ್ಮಣಿ ನಾನಾಭೂತಂ ಕಿಂಚನ ಧರ್ಮಾದಿಕಂ ನಾಸ್ತೀತಿ ವಾ ಶ್ರುತೇರರ್ಥಃ ಸಂಭವತಿ । ಕಾಚನ ನಾನಾ ಭಿದಾ ನೇತಿ ವಾ ಶ್ರುತೇರರ್ಥಃ ಸಂಭವತಿ । ಉಭಯತ್ರಾಪೀಹ-ಪದಮಹಿಮ್ನಾ ಘಟೇ ಭೇದೋ ನೇತ್ಯುಕ್ತೇ ಸ್ವಾವಯವಯೋರೇವ ಮಿಥೋ ಭೇದ-ನಿಷೇಧವತ್ ಸ್ವಗತಸ್ವ ಗುಣಭೇದಸ್ಯೈವ ನಿಷೇಧ ಇತಿ ಭಾವಃ ॥ ೯೦೫ ॥

**ವಿವರಣೆ–** ನಾನಾ ಶಬ್ದಕ್ಕೆ ಭಿನ್ನ ಎಂದೂ, ಭೇದವೆಂದೂ ಅರ್ಥವನ್ನು ಮಾಡಬಹುದು. ಭಿನ್ನ ಎಂದು ಅರ್ಥ ಮಾಡಿದರೆ ಬ್ರಹ್ಮನಲ್ಲಿ ಭಿನ್ನವಾದ ಧರ್ಮವು ಇಲ್ಲವೆಂದು ಅರ್ಥ. ಭೇದವೆಂದು ಅರ್ಥ ಮಾಡಿದರೆ ಬ್ರಹ್ಮನಲ್ಲಿ ಭೇದವು ಇಲ್ಲವೆಂದರ್ಥ. 'ಘಟೇ ಭೇದೋ ನ' ಎಂದು ಹೇಳಿದರೆ ಘಟದ ಅವಯವಗಳಿಗೂ ಮತ್ತು ಘಟಕ್ಕೂ ಭೇದವು ನಿಷೇಧಿಸಲ್ಪಡುತ್ತದೆಯೇ ಹೊರತು, ಘಟದಲ್ಲಿರುವ ಪಟಭೇದವು ನಿಷೇಧಿಸಲ್ಪಡುವುದಿಲ್ಲ. ಅದರಂತೆ 'ಇಹ ಬ್ರಹ್ಮಣಿ ಭೇದೋ ನ' ಎಂದು ಹೇಳಿದರೆ ಬ್ರಹ್ಮನಲ್ಲಿರುವ ಬ್ರಹ್ಮನಿಗೂ ಮತ್ತು ಬ್ರಹ್ಮನ ಅವಯವಗಳಿಗೂ ಅಥವಾ ಧರ್ಮಗಳಿಗೂ, ಕ್ರಿಯೆಗಳಿಗೂ ಭೇದವು ನಿಷೇಧಿಸಲ್ಪಡುತ್ತದೆಯೇ ಹೊರತು, ಬ್ರಹ್ಮನಲ್ಲಿರುವ ಅನ್ಯಭೇದವು ನಿಷೇಧಿಸಲ್ಪಡುವುದಿಲ್ಲ ಎಂದು ಅಭಿಪ್ರಾಯ.

**ಅಥವಾ ನೇಹನಾನೇತಿ ಪ್ರತಿಷಿಧ್ಯ ಭಿದಾಂ ಹರೌ ।**
**ಭೇದವ್ಯವಹೃತೇರಸ್ತಿ ಕಿಂಚನಾಲಂಬನಂ ತ್ವಿತಿ ।**
**ಶ್ರುತಿರ್ವಿಶೇಷಮಾಚಷ್ಟ ಪದಸ್ವಾರಸ್ಯಸಂಪದಾ ॥ ೯೦೬ ॥**

**ಅರ್ಥ–** ಅಥವಾ= ಅಥವಾ, ಪದಸ್ವಾರಸ್ಯಸಂಪದಾ= ಪದಸ್ವಾರಸ್ಯಕ್ಕೆ ಅನುಗುಣವಾಗಿ, ಶ್ರುತಿಃ= ಈ ಶ್ರುತಿಯು, ನೇಹನಾನೇತಿ= ನೇಹನಾನಾ ಎಂದು, ಹರೌ= ಹರಿಯಲ್ಲಿ, ಭಿದಾಂ= ಭೇದವನ್ನು, ಪ್ರತಿಷಿಧ್ಯ= ನಿಷೇಧಿಸಿ, ಭೇದವ್ಯವಹೃತೇಃ= ಭೇದವ್ಯವಹಾರಕ್ಕೆ, ಆಲಂಬನಂ= ಆಧಾರವಾದುದಾದರೋ, ಅಸ್ತಿ ಕಿಂಚನ ಇತಿ= ಅಲ್ಪವಾದ ಒಂದು ವಸ್ತುವಿದೆ ಎಂದು ಹೇಳಿ, ವಿಶೇಷಮಾಚಷ್ಟ= ವಿಶೇಷವನ್ನು ಹೇಳುತ್ತದೆ.

**ಅನುವಾದ–** ಅಥವಾ ಈ ಶ್ರುತಿಯು ಮೊದಲು ನೇಹನಾನಾ ಎಂದು ಹೇಳಿ ಹರಿಯಲ್ಲಿ ಭೇದವನ್ನು ನಿಷೇಧಿಸಿ ಅನಂತರ ಭೇದವ್ಯವಹಾರಕ್ಕೆ ಆಧಾರವಾದ ಒಂದು ಅಲ್ಪವಸ್ತುವಿದೆ ಎಂದು ಅಸ್ತಿ ಕಿಂಚನ ಎಂಬ ವಾಕ್ಯಶೇಷದಿಂದ ವಿಶೇಷವನ್ನು ಹೇಳುತ್ತದೆ.

**ಭಾವವಿಲಾಸಿನೀ–** ಭೇದಪ್ರತಿನಿಧಿಂ ಚೈತತ್ ಶ್ರುತ್ಯೈವ ಶ್ರೌತಂ ಕರ್ತುಮರ್ಥಾಂತರಮಾಹ – **ಅಥವೇತಿ** ॥ ಪದಸ್ವಾರಸ್ಯಸಂಪದಾ ಯಥಾಸ್ಥಿತಪದಸಂಪದಾ । ಇಹ ನಾನಾ ಭೇದೋ ನಾಸ್ತೀತಿ ಪೂರ್ವವಾಕ್ಯಖಂಡಸ್ಯಾಪಿ । ಯಥಾಸ್ಥಿತಪದೈರೇಕಾರ್ಥಮುಕ್ತ್ವಾ ತರ್ಹಿ ಭೇದವ್ಯವಹಾರಸ್ಯ ಕಿಮಾಲಂಬನಮಿತಿ ಶಂಕಾಯಾಂ ಅಸ್ತಿ ಕಿಂಚನೇತಿ ವಾಕ್ಯಶೇಷೇಣ ವಿಶಿಷ್ಯ ವಕ್ತುಮಶಕ್ಯಂ ವಿಶೇಷಾಖ್ಯಾಲಂಬನಂ ಕಿಂಚನೇತಿ ಸಾಮಾನ್ಯಪದೇನೋಕ್ತ್ವಾಽಸ್ತೀತಿ ವಿಧಾನಾತ್ ಅಯಮಪ್ಯರ್ಥಃ ಸಾಧೀಯಾನಿತಿ ಭಾವೇನೋಕ್ತಂ ಪದಸ್ವಾರಸ್ಯಸಂಪದೇತಿ ॥ ೯೦೬ ॥

**ವಿವರಣೆ–** ಅಥವಾ ನೇಹನಾನಾ, ಅಸ್ತಿ ಕಿಂಚನ ಎಂದು ವಾಕ್ಯವಿಭಾಗವನ್ನು ಮಾಡಿ, ಮೊದಲಿನ ವಾಕ್ಯ ಖಂಡವು ಹರಿಯಲ್ಲಿ ಭೇದವಿಲ್ಲವೆಂದು ಹೇಳುತ್ತದೆ. ಭೇದವಿಲ್ಲದಿದ್ದರೆ ಆನಂದಂ ಬ್ರಹ್ಮಣಃ ಮೊದಲಾದ ಭೇದವ್ಯವಹಾರವನ್ನು ಕುರಿತು ಯಾವುದು ಕಾರಣ ಎಂಬ ಪ್ರಶ್ನೆ ಬಂದರೆ ಅದಕ್ಕೆ ಅಸ್ತಿ ಕಿಂಚನ ಎಂಬ ವಾಕ್ಯಶೇಷದಿಂದ ಅಲ್ಪವಾದ ಒಂದು ವಸ್ತು ಇದೆ ಎಂದು ಭೇದವಿಲ್ಲದ ಕಡೆಯಲ್ಲಿ ಭೇದವ್ಯವಹಾರಕ್ಕೆ ಕಾರಣವಾದ ವಿಶೇಷವೆಂಬ ಪದಾರ್ಥವನ್ನು ನಿರೂಪಿಸುತ್ತದೆ ಎಂದು ಅಭಿಪ್ರಾಯ.

ನೇಹನಾನೇತಿ ವಾಕ್ಯಾಚ್ಚ ಯದಿ ನಾಸ್ತ್ಯೇವ ತೇ ಜಗತ್ ।
ಅಸತ್ತ್ವಾತ್ ಪಾರಮಾರ್ಥ್ಯೇನ ನಾಸ್ತೀತಿ ತು ಪದಾಂತರಂ ॥ ೯೦೭ ॥

ಕುತೋ ಅಧ್ಯಾಹ್ರಿಯತೇ ತರ್ಹಿ ಭ್ರಾಂತ್ಯೇತಿ ಪದಮಾಹರ ।
ಏವಂ ಸರ್ವಸ್ಯ ಜಗತೋ ರಕ್ಷಯಾಬೈಕ್ಷವಾನ್ ಭವ ॥ ೯೦೮ ॥

**ಅರ್ಥ–** ಯದಿ= ಒಂದು ಪಕ್ಷ, ನೇಹನಾನೇತಿ ವಾಕ್ಯಾಚ್ಚ= ನೇಹನಾನಾ ಎಂಬ ವಾಕ್ಯದಿಂದಲೂ, ತೇ= ನಿನಗೆ, ಜಗತ್ ನಾಸ್ತ್ಯೇವ= ಜಗತ್ತು ಇಲ್ಲವೆಂದೇ ಆದರೆ, ಅಸತ್ತ್ವಾತ್= ಜಗತ್ತು ಅಸತ್ ಆದೀತು, ಪಾರಮಾರ್ಥ್ಯೇನ= ಪಾರಮಾರ್ಥಿಕವಾಗಿ, ನಾಸ್ತಿ ಇತಿ ತು= ಇಲ್ಲ

ಎಂದು, ಪದಾಂತರಂ= ಪಾರಮಾರ್ಥಿಕವೆಂಬ ಇನ್ನೊಂದು ಪದವನ್ನು, ಕುತಃ= ಏಕೆ, ಅಧ್ಯಾಹ್ರಿಯತೇ= ಅಧ್ಯಾಹಾರವನ್ನುಮಾಡುತ್ತೀಯೇ, ತರ್ಹಿ= ಹಾಗಾದರೆ, ಭ್ರಾಂತ್ಯಾ ಇತಿ= ಭ್ರಾಂತಿಯಿಂದ ಎಂಬ, ಪದಂ= ಪದವನ್ನು, ಆಹರ= ಅಧ್ಯಾಹಾರ ಮಾಡು, ಏವಂ= ಹಾಗೆ ಮಾಡಿದರೆ, ಸರ್ವಸ್ಯ ಜಗತಃ ರಕ್ಷಯಾ= ಎಲ್ಲ ಜಗತ್ತು ರಕ್ಷಿಸಲ್ಪಡುವುದರಿಂದ, ಭೈಕ್ಷವಾನ್= ಭಿಕ್ಷವುಳ್ಳವನಾಗಿ, ಭವ= ಆಗು.

**ಅನುವಾದ–** ನೇಹನಾನೇತಿ ವಾಕ್ಯದಿಂದಲೂ ಜಗತ್ತು ಇಲ್ಲವೇ ಇಲ್ಲ ಎಂದು ಹೇಳಿದರೆ ಜಗತ್ತು ಅಸತ್ ಆದೀತು. ಪಾರಮಾರ್ಥಿಕ ಪದವನ್ನು ಅಧ್ಯಾಹಾರ ಮಾಡಿ, ಪಾರಮಾರ್ಥಿಕವಾಗಿ ಇಲ್ಲ ಎಂದು ಹೇಳಿದರೆ ಅದರ ಬದಲು ಭ್ರಾಂತ್ಯಾ ಎಂಬ ಪದವನ್ನು ಅಧ್ಯಾಹಾರ ಮಾಡಿ ಭ್ರಾಂತಿಯಿಂದ ಮಾತ್ರ ಇಲ್ಲ ಎಂದು ಅರ್ಥವನ್ನು ಹೇಳು. ಹಾಗೆ ಮಾಡಿದರೆ ಎಲ್ಲ ಜಗತ್ತೂ ಉಳಿಯುವುದರಿಂದ ನಿನಗೆ ಭಿಕ್ಷೆಯು ದೊರೆಯುತ್ತದೆ.

**ಭಾವವಿಲಾಸಿನೀ–** ಪರಾರ್ಥೇ ದೂಷಣಾಂತರಂ ಚಾಹ – **ನೇಹೇತಿ ॥** ತರ್ಹ್ಯಸತ್ತ್ವಾತ್ ಅತ್ಯಂತಾಸತ್ತ್ವಾತ್ । ತ್ರಿಕಾಲನಾಸ್ತಿತಾಯಾ ಏವ ನಞರ್ಥತಯಾ ತ್ವಯಾಂಗೀಕಾರಾದಿತಿ ಭಾವಃ । ಆಹರ ಅಧ್ಯಾಹರ । ತಥಾ ಚ ಕಿಮಪಿ ಭ್ರಾಂತ್ಯಾ ನಾಸ್ತೀತ್ಯುಕ್ತೇಽಭ್ರಾಂತ್ಯೈವ ಸರ್ವಸ್ಯ ಸತ್ತ್ವಂ ಸಿದ್ಧ್ಯತೀತಿ ಭಾವಃ । ಭೈಕ್ಷವಾನ್ ಭವೇತಿ ವದತಾ ಪರಾರ್ಥೇಽನನ್ಸ್ಯಾಪಿ ಮಿಥ್ಯಾತ್ವಾದ್ಭಿಕ್ಷಾಪಿ ನ ಲಭ್ಯತ ಇತಿ ಸೂಚಿತಮ್ । ಇದಮಪ್ಯುಪಲಕ್ಷಣಮ್ । ಪಾರಮಾರ್ಥ್ಯೇನ ನಾಸ್ತೀತ್ಯುಕ್ತೇಽಪಾರಮಾರ್ಥ್ಯೇನಾಸ್ತೀತ್ಯರ್ಥೋ ಲಭ್ಯತೇ । ತಚ್ಚ ವ್ಯಾಹತಮ್ ಅತೋ ನ ಭಿಕ್ಷಾಭಾವಮಾತ್ರಂ ಕಿಂತು ವ್ಯಾಹತಭಾಷಿಣಸ್ತವ ಕಪೋಲೇ ತಾಡನಮಪಿ ಸ್ಯಾದಿತಿ ದ್ರಷ್ಟವ್ಯಮ್ ॥ ೯೦೭-೯೦೮ ॥

**ವಿವರಣೆ–** ನಾಸ್ತಿ ಎಂಬಲ್ಲಿ ತ್ರಿಕಾಲ ಅತ್ಯಂತಾಭಾವವನ್ನೇ ನೀನು ನಞ್ ಪದದ ಅರ್ಥವಾಗಿ ಸ್ವೀಕರಿಸುವುದರಿಂದ ಜಗತ್ತಿಗೆ ಅಸತ್ತ್ವವೇ ಪ್ರಾಪ್ತವಾಗುತ್ತದೆ. ಭ್ರಾಂತ್ಯಾ ಎಂಬ ಪದವನ್ನು ಅಧ್ಯಾಹಾರ ಮಾಡು. 'ಭ್ರಾಂತ್ಯಾ ಕಿಮಪಿ ನಾಸ್ತಿ' ಭ್ರಾಂತಿಯಿಂದ ಯಾವುದೂ ಇಲ್ಲ ಎಂದು ಅರ್ಥವಾಗುತ್ತದೆ. ಹಾಗಾದರೆ ಪ್ರಾಮಾಣಿಕವಾಗಿ ಎಲ್ಲವೂ ಇದೆ ಎಂದು ಸಿದ್ಧವಾಗುತ್ತದೆ. ಜಗತ್ತು ಉಳಿಯುವುದರಿಂದ ನಿನ್ನ ಭಿಕ್ಷೆಯು, ಜೀವನ ಯಾತ್ರೆಯು ನಡೆಯುತ್ತದೆ ಎಂದು ಅಭಿಪ್ರಾಯ.

**ಯದೇವೇಹ ತದೇವಾಮುತ್ರೇತ್ಯಾದ್ಯಂ ವಾಕ್ಯಮೀಶಿತುಃ ।**
**ಅವತೀರ್ಣಸ್ಯ ವೈಕುಂಠವಾಸಿನಶ್ಚಾಭಿದಾಂ ಜಗೌ ॥ ೯೦೮ ॥**

**ಅರ್ಥ–** ಯದೇವೇಹ ತದಮುತ್ರ= ಯಾವುದು ಇಲ್ಲಿದೆಯೋ ಅದೇ ಅಲ್ಲಿಯೂ ಇದೆ, ಇತ್ಯಾದ್ಯಂ= ಇದೇ ಮೊದಲಾದ, ವಾಕ್ಯಂ= ವಾಕ್ಯವು, ಅವತೀರ್ಣಸ್ಯ= ಅವತಾರವನ್ನು

ಹೊಂದಿದ, ವೈಕುಂಠವಾಸಿನಶ್ಚ= ಮತ್ತು ವೈಕುಂಠವಾಸಿಯಾದ, ಈಶಿತುಃ= ಪ್ರಭುವಾದ ನಾರಾಯಣನಿಗೆ, ಅಭಿದಾಂ= ಅಭೇದವನ್ನು, ಜಗೌ= ಹೇಳುತ್ತದೆ.

**ಅನುವಾದ–** **'ಯದೇವೇಹ ತದಮುತ್ರ' ಎಂಬ ವಾಕ್ಯವು ಅವತಾರ ರೂಪನಾದ ಹರಿಗೂ ಮತ್ತು ವೈಕುಂಠವಾಸಿಯಾದ ಹರಿಗೂ ಅಭೇದವನ್ನೇ ಹೇಳುತ್ತದೆ.**

**ಭಾವವಿಲಾಸಿನೀ–** ಕಿಂ ಚೋಪಕ್ರಮಾನುಸಾರಿತ್ವಾಚ್ಚಾಸ್ಮದುಕ್ತ ಏವ ವಾಕ್ಯಾರ್ಥೋ ನ ತ್ವದುಕ್ತ ಇತಿ ವಕ್ತುಮುಪಕ್ರಮವಾಕ್ಯಂ ಪಠತಿ – **ಯದೇವೇಹೇತಿ** ॥ ಅನೇನ ಯದೇವೇಹ ತದಮುತ್ರ ಯದಮುತ್ರ ತದನು ಇಹ ಮೃತ್ಯೋಸ್ಸ ಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತೀತಿ ವಾಕ್ಯಂ ಸಂಗೃಹ್ಣಾತಿ । ಆದ್ಯಂ ವಾಕ್ಯಮುಪಕ್ರಮವಾಕ್ಯಮಿತ್ಯರ್ಥಃ । ಅವತೀರ್ಣಸ್ಯೇಶಿತುರಿತಿ ಸಂಬಂಧಃ ॥ ೯೦೯ ॥

**ವಿವರಣೆ–** ಈಗ ಉಪಕ್ರಮಕ್ಕೆ ಅನುಗುಣವಾಗಿರುವುದರಿಂದ ನಮ್ಮ ಅರ್ಥವೇ ಯುಕ್ತವಾದುದು. ನಿನ್ನ ಅರ್ಥವು ಯುಕ್ತವಾಗಿಲ್ಲ ಎಂದು ಹೇಳುವುದಕ್ಕೋಸ್ಕರ ಉಪಕ್ರಮ ವಾಕ್ಯವನ್ನು ಪಠಿಸುತ್ತಾರೆ. 'ಯದೇವೇಹ ತದಮುತ್ರ ಯದಮುತ್ರ ತದನ್ವಿಹ । ಮೃತ್ಯೋಃ ಸ ಮೃತ್ಯು ಮಾಪ್ನೋತಿ ಯ ಇಹ ನಾನೇವ ಪಶ್ಯತಿ' ಎಂಬುದು ಉಪಕ್ರಮ ವಾಕ್ಯ. ಅಲ್ಲಿ ಯಾವುದು ಅವತಾರ ರೂಪದಿಂದ ಭೂಮಿಯ ಮೇಲೆ ಇದೆಯೋ ಅದೇ ವೈಕುಂಠ ವಾಸಿಯಾಗಿದೆ. ಯಾವುದು ವೈಕುಂಠ ವಾಸಿಯಾಗಿದೆಯೋ ಅದೇ ಅವತಾರ ರೂಪದಿಂದ ಭೂಮಿಯ ಮೇಲಿದೆ ಎಂದು ಅವಧಾರಣಪೂರ್ವಕವಾಗಿ ಹೇಳಿ ಹರಿಯ ರೂಪದಲ್ಲಿಯೇ ಭೇದವನ್ನು ನಿಷೇಧ ಮಾಡುತ್ತದೆ. ಇದು ನಮ್ಮ ಅರ್ಥಕ್ಕೆ ಅನುಗುಣವಾಗಿದೆ ಎಂದು ಅಭಿಪ್ರಾಯ.

**ತದ್ಭೇದದರ್ಶನಸ್ಯಾನರ್ಥೋಕ್ತ್ಯಾ ಸೈವ ನ್ಯವಾರಯತ್ ।**
**ಭೇದಾಭೇದನಿವೃತ್ತ್ಯರ್ಥಂ ಭಿದಾಂ ತಸ್ಯ ಪರಾತ್ಮನಃ ॥ ೯೧೦ ॥**

**ಅರ್ಥ–** ತದ್ಭೇದ ದರ್ಶನಸ್ಯ= ಅವನಲ್ಲಿ ಮಾಡುವ ಭೇದ ದರ್ಶನಕ್ಕೆ, ಅನರ್ಥೋಕ್ತ್ಯಾ= ಅನರ್ಥ ಫಲವನ್ನು ಹೇಳಿ, ಸೈವ= ಅದೇ ಶ್ರುತಿಯೇ, ಭೇದಾಭೇದನಿವೃತ್ತ್ಯರ್ಥಂ= ಭೇದಾಭೇದವನ್ನು ನಿಷೇಧ ಮಾಡುವುದಕ್ಕೋಸ್ಕರ, ತಸ್ಯ ಪರಾತ್ಮನಃ= ಆ ಪರಮಾತ್ಮನ, ಭಿದಾಂ= ಭೇದವನ್ನು, ನ್ಯವಾರಯತ್= ನಿಷೇಧ ಮಾಡಿತು.

**ಅನುವಾದ–** **ಅದೇ ಶ್ರುತಿಯೇ ಭೇದಾಭೇದವನ್ನು ನಿಷೇಧ ಮಾಡುವುದಕ್ಕೋಸ್ಕರ ಭೇದ ದರ್ಶನಕ್ಕೆ ಅನರ್ಥ ಫಲವನ್ನು ಹೇಳಿ ಪರಮಾತ್ಮನಲ್ಲಿ ಭೇದವನ್ನು ನಿಷೇಧ ಮಾಡಿತು.**

**ಭಾವವಿಲಾಸಿನೀ–** ತದ್ಭೇದದರ್ಶನಸ್ಯ ಮೂಲರೂಪಾವತಾರರೂಪಭೇದದರ್ಶನಸ್ಯ । ಸಾ ಉಪನಿಷತ್ । ತಸ್ಯ ಪರಮಾತ್ಮನಃ ಭಿದಾಂ ನ್ಯವಾರಯದಿತಿ ಸಂಬಂಧಃ । ಅಭೇದಸ್ಯ

ಪ್ರಾಗ್ಸಿದ್ಧತತ್ವಾತ್ ಭೇದಾಭೇದನಿಷೇಧೋಽಪಿ ಭೇದನಿಷೇಧ ಏವ ಪರ್ಯವಸ್ಯತೀತಿ ಭಾವಃ ॥ ೯೧೦ ॥

**ವಿವರಣೆ–** ಅಭೇದವು ಹಿಂದೆ ಹೇಳಲ್ಪಟ್ಟಿರುವುದರಿಂದ ಅಭೇದವನ್ನು ನಿಷೇಧ ಮಾಡಬೇಕಾಗಿಲ್ಲ. ಭೇದಾಭೇದವನ್ನು ನಿಷೇಧ ಮಾಡಿದರೆ ಅದರಲ್ಲಿ ಅಭೇದ ನಿಷೇಧವಿಲ್ಲದಿರುವುದರಿಂದ ಅದು ಭೇದ ನಿಷೇಧದಲ್ಲಿಯೇ ಪರ್ಯವಸಾನವನ್ನು ಹೊಂದುತ್ತದೆ. ಆದ್ದರಿಂದ ಆ ಮಂತ್ರದ ಉತ್ತರ ಭಾಗವು ಭೇದಾಭೇದವನ್ನು ನಿವಾರಣೆ ಮಾಡುವುದಕ್ಕೋಸ್ಕರ ಭೇದ ನಿಷೇಧವನ್ನು ಮಾಡುತ್ತದೆ ಎಂದು ಅಭಿಪ್ರಾಯ.

**ತತ್ರಾಪಿ ಕಾರಣಂ ವಕ್ತುಂ ನೇಹನಾನೇತಿವಾಕ್ಪುನಃ ।**
**ತದ್ಭೇದಮಾಕ್ಷಿಪಚ್ಚೇತಿ ಯುಕ್ತಂ ಪ್ರಕ್ರಮವಿಕ್ರಮಾತ್ ॥ ೯೧೧ ॥**

**ಅರ್ಥ–** ತತ್ರಾಪಿ= ಆ ಭೇದ ದರ್ಶನ ನಿಂದೆಗೆ, ಕಾರಣಂ ವಕ್ತುಂ= ಕಾರಣವನ್ನು ಹೇಳುವುದಕ್ಕಾಗಿ, ನೇಹನಾನೇತಿವಾಕ್= ನೇಹನಾನೇತಿ ವಾಕ್ಯವು, ಪುನಃ ತದ್ಭೇದಮಾಕ್ಷಿಪತ್ ಚ= ಪುನಃ ಆ ಭೇದವನ್ನು ನಿರಾಕರಣೆ ಮಾಡಿತು, ಇತಿ= ಎಂದು, ಪ್ರಕ್ರಮವಿಕ್ರಮಾತ್= ಉಪಕ್ರಮಾನುಗುಣ್ಯದಿಂದಲೇ, ಯುಕ್ತಂ= ಯುಕ್ತವಾಗುತ್ತದೆ.

**ಅನುವಾದ–** ಭೇದ ದರ್ಶನವಾದರೂ ಏಕೆ ನಿಂದಿತವಾಗುತ್ತದೆ ಎಂದು ಕಾರಣವನ್ನು ಹೇಳಲು ನೇಹನಾನೇತಿ ವಾಕ್ಯವು ಅವನಲ್ಲಿ ಭೇದವಿಲ್ಲ ಎಂದು ಹೇಳಿ ಭೇದವನ್ನು ನಿರಾಕರಣೆ ಮಾಡಿತು ಎಂಬ ಅರ್ಥವು ಉಪಕ್ರಮಕ್ಕೆ ಅನುಗುಣವಾಗಿರುತ್ತದೆ.

**ಭಾವವಿಲಾಸಿನೀ–** ತತ್ರಾಪಿ ಭೇದದರ್ಶನನಿಂದಾಯಾಮಪಿ । ಪ್ರಕ್ರಮವಿಕ್ರಮಾತ್ ಉಪಕ್ರಮಸಾಮರ್ಥ್ಯಾತ್ ॥ ೯೧೧ ॥

**ವಿವರಣೆ–** ಭೇದವು ಇಲ್ಲದಿರುವ ಸ್ಥಳದಲ್ಲಿ ಭೇದವನ್ನು ತಿಳಿದರೆ ಅನರ್ಥವಾಗುತ್ತದೆ ಎಂಬ ವಾಕ್ಯಾರ್ಥವು ಯುಕ್ತಿಯುಕ್ತವಾಗಿ ಉಪಕ್ರಮಕ್ಕೆ ಅನುಗುಣವಾಗಿರುತ್ತದೆ ಎಂದು ಅಭಿಪ್ರಾಯ.

**ಅತೋ ಭೇದಸ್ಯ ಮಿಥ್ಯಾತ್ವಾದೇವ ಧರ್ಮೇಷು ಭೇದದೃಕ್ ।**
**ವಿನಿಂದಿತಾ ಯತೋ ನಾಸ್ತೀತ್ಯಾದೌ ಸೈವ ತಮಚ್ಛಿನತ್ ॥ ೯೧೨ ॥**

**ಅರ್ಥ–** ಅತಃ= ಆದ್ದರಿಂದ, ಭೇದಸ್ಯ ಮಿಥ್ಯಾತ್ವಾದೇವ= ಭೇದವು ಮಿಥ್ಯೆಯಾದುದರಿಂದಲೇ, ಧರ್ಮೇಷು= ಧರ್ಮಗಳಲ್ಲಿ, ಭೇದದೃಕ್= ಭೇದದರ್ಶನವು, ವಿನಿಂದಿತಾ= ನಿಂದಿಸಲ್ಪಟ್ಟಿದೆ, ಯತಃ= ಏಕೆಂದರೆ, ನಾಸ್ತೀತ್ಯಾದೌ= ನೇಹನಾನಾಸ್ತಿ ಎಂಬ ಮೊದಲಿನ ವಾಕ್ಯದಲ್ಲಿ, ಸೈವ= ಆ ಶ್ರುತಿಯೇ, ತಂ= ಆ ಭೇದವನ್ನು, ಅಚ್ಛಿನತ್= ನಿರಾಕರಿಸಿದೆ.

**ಅನುವಾದ**– ನೇಹ ನಾನಾಸ್ತಿ ಕಿಂಚನ ಎಂಬ ಮೊದಲಿನ ವಾಕ್ಯದಲ್ಲಿ ಶ್ರುತಿಯೇ ಭೇದವನ್ನು ನಿರಾಕರಿಸಿರುವುದರಿಂದ ಯಥೋದಕಂ ಎಂಬ ವಾಕ್ಯದಲ್ಲಿಯೂ ಭೇದವು ಮಿಥ್ಯೆಯಾದ ಕಾರಣದಿಂದಲೇ ಭಗವತ್‌ಧರ್ಮಗಳಲ್ಲಿ ಭೇದದರ್ಶನವು ನಿಂದಿತವಾಗಿದೆ.

**ಭಾವವಿಲಾಸಿನೀ**– ಅತಃ ಪೂರ್ವಂ ಮಿಥ್ಯಾದೃಷ್ಟಿತ್ವೇನೈವ ಭೇದದರ್ಶನನಿಂದನಾತ್ । ಧರ್ಮೇಷ್ವಪಿ ಮಿಥ್ಯಾದೃಷ್ಟಿತ್ವಾದೇವ ಭೇದದರ್ಶನಸ್ಯ ನಿಂದನಮ್ । ಅನ್ಯಥಾ ಪ್ರಾಯಪಾಠವಿರೋಧಾದಿತಿ ಭಾವಃ । ನನು ಭೇದನಿಷೇಧಕವಾಕ್ಯಬಲಾತ್ತತ್ರೈವ ಭೇದೋ ನಾಂಗೀಕ್ರಿಯತೇ ನ ತ್ವನ್ಯತ್ರೇತಿ ಚೇತ್ ತತ್ರಾಹ – **ಯತ ಇತಿ** ॥ ಸೈವ(ಸ್ವಕಾ)ಸಕಾರಣನಿಂದಿತಭೇದಾ ಯಾ ಸಾ ಇಹ ನಾನಾ ನೇತಿ ಸಾಮಾನ್ಯತೋ ನಿಷೇಧ್ರೀ ನೇಹ ನಾನಾಸ್ತಿ ಕಿಂಚನೇತಿ ವಾಗೇವ । ತಂ ಧರ್ಮ-ಭೇದಮ್ । ಉಭಯೋರ್ವಾಕ್ಯಯೋರ್ಮಧ್ಯಗತಾ ಸಾ ವಾಗ್ದೇಹಲೀದೀಪನ್ಯಾಯೇನ ಧರ್ಮ-ಭೇದಮಪಿ ನಿಷೇಧತೀತಿ ಭಾವಃ । ಇಹ ಭೂಲೋಕೇ ಯದೇವ ರೂಪಂ ಭಗವದ್ರೂಪೇಷ್ವೇ-ವಾವತೀರ್ಣಂ ತತ್ತದೇವಾಮುತ್ರಾಮುಷ್ಮಿನ್ವೈಕುಂಠಲೋಕೇ ಅಸ್ತಿ । ಯತ್ ಅಮುತ್ರ ವೈಕುಂಠ-ಲೋಕೇ ತತ್ತದೇವ ಅನು ಕಿಂಚಿತ್‌ಕಾರ್ಯಮನುಸೃತ್ಯ ಇಹ ಭೋಲೋಕೇಽವತೀರ್ಣಂ ಭವತೀತ್ಯುಭಯವಿಧ್ಯಪ್ರತ್ಯಭಿಜ್ಞಯಾ ಪರಮಾತ್ಮನೋ ಮೂಲರೂಪಸ್ಯಾವತಾರರೂಪಸ್ಯ ಚಾತ್ಯಂತಾಭೇದಂ ಸಮರ್ಥ್ಯ ಪುನರ್ಭೇದಾಭೇದವಾದಿನಾಂ ಮತಂ ನಿಷೇದ್ಧುಂ ಮೃತ್ಯೋಃ ಸ ಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತೀತಿ ವಾಕ್ಯೇ ಯಃ ಇಹ ರೂಪದ್ವಯೇ ನಾನೇವ ಪಶ್ಯತಿ । ಭೇದೇಽಸ್ವರಸಂ ಸೂಚಯಿತುಮಿವ ಶಬ್ದಃ । ಸಃ ಮೃತ್ಯೋರ್ಮಾರಕಸಂಸಾರಾ-ದಪ್ಯತಿಶಯೇನ ಮೃತ್ಯು ಶಸ್ತ್ರತಾಡನಾದಿನಾ ಮಾರಕಮಂಧಂತಮಃ ಪ್ರಾಪ್ನೋತೀತಿ ಭಗವದ್ರೂಪೇಷು ಭೇದದರ್ಶಿನೋ ನಿಂದಾ ಕೃತಾ । ಅಭೇದಂ ಸಮರ್ಥ್ಯ ತತ್ರ ಪುನರ್ಭೇದಸ್ಯ ನಿಂದಾಯಾಮತ್ಯಂತಾಭೇದಸ್ಯೈವ ಲಾಭಾತ್ । ಭೇದದರ್ಶನನಿಂದಾ ತು ನ ನಗ್ನಸ್ತ್ರೀದರ್ಶನ-ನಿಂದಾವನ್ನಿಮಿತ್ತಾಂತರೇಣ । ಕಿಂತು ಮಿಥ್ಯಾದೃಷ್ಟಿತ್ವಾದೇವೇತಿ ಪ್ರದರ್ಶನಾಯ ನಾಸ್ತಿ ಕಿಂಚನೇತಿ ವಾಕ್ಯೇನ ಪ್ರಾಗುಕ್ತಂ ತದ್ಗತಭೇದಮೇವ ನಿಷೇಧತೀತ್ಯುಪಕ್ರಮೋಪಸಂಹಾರನುಗುಣ್ಯೇನಾರ್ಥೋ ಲಭ್ಯತೇ । ಏವಂ ಧರ್ಮಾನ್‌ಪೃಥಕ್ಪಶ್ಯಂಸ್ತಾನೇವಾನುವಿಧಾವತೀತ್ಯುತ್ತರವಾಕ್ಯೇನ ಚೈವಮಿತಿ ಪೂರ್ವೋಕ್ತಭಗವದ್ರೂಪಭೇದದರ್ಶನಂ ದೃಷ್ಟಾಂತೀಕೃತ್ಯ ಭಗವದ್ಧರ್ಮಭೇದದರ್ಶಿನೋಽಪಿ ತಾನೇವಾನುವಿಧಾವತೀತಿ ರೂಪಭೇದದರ್ಶನಫಲತಯೋಕ್ತಾನ್ಮೃತ್ಯೂನೇವಾನುವಿಧಾವತೀತಿ ಸಮಾನಫಲತ್ವಮುಚ್ಯತೇ । ಅತೋ ನೇಹನಾನೇತಿ ಶ್ರುತಿಃ ತಸ್ಯಾಪಿ ಭೇದದರ್ಶನಸ್ಯ ಮಿಥ್ಯಾದೃಷ್ಟಿತ್ವೇನೈವ ನಿಂದನಮಿತಿ ದರ್ಶಯಿತುಂ ತಮಪಿ ಭೇದಮುಪೋದ್ಘಾತಪ್ರಕ್ರಿಯಯಾ ನಿಷೇಧತಿ । ಅತ ಏವೇಹೇತ್ಯುಭಯೋರಪಿ ಧರ್ಮಿಭೂತಬ್ರಹ್ಮಣ ಏವ ಸಾಮಾನ್ಯತೋ ನಿರ್ದೇಶಃ । ಏವಂಚ ಬ್ರಹ್ಮಣಿ ಸ್ವರೂಪಧರ್ಮಭೇದಾಖ್ಯಸ್ವಗತಭೇದದ್ವಯಸ್ಯಾಪ್ಯುಪಕ್ರಮೋಪ ಸಂಹಾರಾನುಗುಣ್ಯೇನ ನಿಷೇಧೋ ಲಭ್ಯತೇ । ಯಥೋದಕಮಿತ್ಯತ್ರೋಕ್ತಯಥೇತಿ ಪದಮಹಿಮ್ನೈವ ತಥೇತಿ ಪದಲಾಭಾತ್ ಮಧ್ಯಸ್ಥಿತವಾಕ್ಯಸ್ಯೋಭಯವಿಧಭೇದ- ಪ್ರತಿಷೇಧಕತ್ವ-

ಲಾಭಾಯೈಕವಾಕ್ಯತಯಾ ವ್ಯಾಖ್ಯಾನೇ, ಏವಂ ಧರ್ಮಿವದ್ಧರ್ಮಾನ್ ಪೃಥಕ್‌ಪಶ್ಯಂಸ್ತಥಾ ತಾನನುವಿಧಾವತೀತ್ಯರ್ಥಲಾಭೇನ ಏವಂಪದಸ್ಯ ಯಥಾವಿನ್ಯಾಸಮೇವ ವ್ಯಾಖ್ಯಾನಾಖ್ಯ-ಗುಣಾಚ್ಚ ಬಹ್ವರ್ಥಕವೇದವಾಕ್ಯಸ್ಯೇಯಮಪ್ಯೇಕಾ ಯೋಜನಾ । ಜೀವೇಶ್ವರಭೇದನಿಷೇಧಸ್ಯ ತು ವಾರ್ತಾಪ್ಯತ್ರ ನ ಶೋಭತೇ । ಯತಶ್ಚೋದೇತಿ ಸೂರ್ಯೋಽಸ್ತಂ ಯತ್ರ ಚ ಗಚ್ಛತಿ । ತಂ ದೇವಾಃಸರ್ವೇ ಅರ್ಪಿತಾಸ್ತದು ನಾತ್ಯೇತಿ ಕಶ್ಚನೇತಿ ವಾಕ್ಯೇ ಅಸ್ಯಾಮೇವೋಪನಿಷದಿ ಸೂರ್ಯಾದಿದೇವಾನಾಂ ಚ ಸ್ವವ್ಯಾಪಾರೇಷು ಭಗವದಧೀನತ್ವಶ್ರವಣೇನ ತದುನಾತ್ಯೇತಿ ಕಶ್ಚನೇತಿ ಸರ್ವಸ್ಯಾಪಿ ತದಧೀನತ್ವಶ್ರವಣೇನ ಚ ಸತಾತ್ಪರ್ಯಂ ಜೀವೇಶ್ವರಭೇದಸ್ಥಾಪನೇನ ಪುನಸ್ತಸ್ಯೈವ ನಿಷೇಧಾಯೋಗಾತ್ । ದೇವಾಃ ಸರ್ವೇ ತಮನುಸೃತ್ಯ ಸ್ವಸ್ವಸ್ಥಾನೇಷ್ವರ್ಪಿತಾಃ । ತತ್ರ ನಿದರ್ಶನತಯಾ ಸೂರ್ಯಸ್ಯೋದಾಹರಣಮ್ । ಏವಂಚ ತ್ರೇಧಾಽಭೇದಸ್ಯಾಭ್ಯಾಸಾತ್ ಕಥಂ ನ ಮಹಾತಾತ್ಪರ್ಯಮ್ ॥ ೯೧೨ ॥

**ವಿವರಣೆ—** ಮೊದಲು ಅವತಾರಗಳಲ್ಲಿ ಭೇದದರ್ಶನವು ಮಿಥ್ಯಾದರ್ಶನವಾದ್ದರಿಂದಲೇ ಭೇದದರ್ಶನವು ನಿಂದಿತವಾಗಿದೆ. ಅದರಂತೆ ಅನಂತರ ಧರ್ಮಗಳಲ್ಲಿ ಭೇದ ದರ್ಶನವೂ ಸಹ ಧರ್ಮಭೇದವು ಮಿಥ್ಯೆಯಾದ ಕಾರಣದಿಂದಲೇ ನಿಂದಿತವಾಗಿದೆ. ಇಲ್ಲದಿದ್ದರೆ ಪ್ರಾಯ ಪಾಠದ ವಿರೋಧ ಬರುತ್ತದೆ. ಭೇದ ನಿಷೇಧಕ ವಾಕ್ಯವು ಅವತಾರ ಭೇದಗಳನ್ನು ಮಾತ್ರ ನಿಷೇಧಿಸುತ್ತದೆ, ಧರ್ಮಭೇದವನ್ನು ನಿಷೇಧಿಸುವುದಿಲ್ಲ ಎಂದು ಹೇಳುವುದು ಯುಕ್ತವಲ್ಲ. ಏಕೆಂದರೆ ವಾಕ್ಯಗಳ ಕ್ರಮವು ಈ ರೀತಿ ಇದೆ. ಯದೇವೇಹ ತದಮುತ್ರ ಎಂಬುದು ಮೊದಲಿನ ವಾಕ್ಯ. ನೇಹನಾನಾಸ್ತಿ ಕಿಂಚನ ಎಂಬುದು ಮಧ್ಯದ ವಾಕ್ಯ. ಯಥೋದಕಂ ದುರ್ಗೇವೃಷ್ಟಂ' ಎಂಬುದು ಕೊನೆಯ ವಾಕ್ಯ. ಆದ್ದರಿಂದ ಭೇದ ನಿಂದಕವಾದ ಉಭಯ ವಾಕ್ಯಗಳ ಮಧ್ಯೆ ಇರುವ ನೇಹನಾನಾಸ್ತಿ ಕಿಂಚನ ಎಂಬ ವಾಕ್ಯವು ರೂಪಭೇದವನ್ನು ಮತ್ತು ಧರ್ಮಭೇದವನ್ನು ದೇಹಲೀದೀಪ ನ್ಯಾಯದಿಂದ ಸಾಮಾನ್ಯವಾಗಿ ನಿಷೇಧಿಸುತ್ತದೆ ಎಂದು ಸಿದ್ಧವಾಗುತ್ತದೆ. ಯದೇವೇಹ ಎಂಬ ವಾಕ್ಯದ ಅರ್ಥವು ಹೀಗಿದೆ :- ಇಹ= ಭೂಲೋಕದಲ್ಲಿ, ಯದೇವ= ಭಗವದ್ರೂಪಗಳಲ್ಲಿ ಯಾವ ರೂಪವು ಅವತಾರವನ್ನು ಹೊಂದಿದೆಯೋ, ತತ್= ಅದೇ ರೂಪವೇ, ಅಮುತ್ರ= ವೈಕುಂಠ ಲೋಕದಲ್ಲಿ, ಅಸ್ತಿ= ಇದೆ. ಯತ್= ಯಾವ ರೂಪವು, ಅಮುತ್ರ= ವೈಕುಂಠದಲ್ಲಿ ಇದೆಯೋ, ತತ್= ಅದೇ, ಅನು= ಯಾವುದೋ ಒಂದು ಕಾರ್ಯವನ್ನು ಅನುಸರಿಸಿ, ಇಹ= ಭೂಲೋಕದಲ್ಲಿ, ಅವತೀರ್ಣವಾಗಿದೆ. ಹೀಗೆ ಎರಡು ವಿಧವಾದ ಪ್ರತ್ಯಭಿಜ್ಞೆಯಿಂದ ಭಗವಂತನ ಮೂಲ ರೂಪಗಳಿಗೂ ಅವತಾರ ರೂಪಗಳಿಗೂ ಭೇದವಿಲ್ಲವೆಂದು ಮೊದಲಿನ ವಾಕ್ಯವು ಸಮರ್ಥಿಸುತ್ತದೆ. ಪುನಃ ಮಧ್ಯದಲ್ಲಿರುವ ವಾಕ್ಯವಾದ ನೇಹನಾನಾಸ್ತಿ ವಾಕ್ಯವು ಭೇದಾಭೇದವಾದಿಗಳ ಮತವನ್ನು ನಿರಾಕರಿಸಲು ಪ್ರವೃತ್ತವಾಗಿದೆ. ಅದರ ಅರ್ಥ ಹೀಗಿದೆ :- ಯಃ= ಯಾವನು, ಇಹ= ಈ ಭಗವಂತನ ರೂಪಗಳಲ್ಲಿ ಮತ್ತು

ಧರ್ಮಗಳಲ್ಲಿ, ನಾನೇವ= ಭೇದವನ್ನು, ಪಶ್ಯತಿ= ನೋಡುತ್ತಾನೆಯೋ (ಇವ ಶಬ್ದವು ಭೇದದಲ್ಲಿ ಅಸ್ವಾರಸ್ಯವನ್ನು ಸೂಚಿಸುತ್ತದೆ), ಸಃ= ಅವನು, ಮೃತ್ಯೋಃ= ದುಃಖರೂಪವಾದ ಸಂಸಾರಕ್ಕಿಂತಲೂ, ಮೃತ್ಯುಂ= ಶಸ್ತ್ರ ತಾಡನಾದಿ ಕಾರಣಗಳಿಂದ ಅತಿಶಯವಾಗಿ ಮಾರಕವಾದಂತಹ ಅಂಧಃತಮಸ್ಸನ್ನು, ಆಪ್ನೋತಿ= ಹೊಂದುತ್ತಾನೆ. ಇಲ್ಲಿ ಭಗವದ್ರೂಪಗಳಲ್ಲಿ ಭೇದವನ್ನು ನೋಡುವವನು ನಿಂದಿಸಲ್ಪಟ್ಟಿದ್ದಾನೆ. ಮೊದಲನೇ ವಾಕ್ಯದಿಂದ ಅಭೇದವನ್ನು ಸಮರ್ಥನೆ ಮಾಡಿ, ಇಲ್ಲಿ ಭೇದವನ್ನು ನಿಂದಿಸಿದರೆ ಈ ಅಭೇದವು ಭೇದ ಅಸಹಿಷ್ಣುವಾದ ಅಭೇದ ಎಂದು ಸಿದ್ಧವಾಗಿರುವುದರಿಂದ ಅತ್ಯಂತಾಭೇದವೇ ಸಿದ್ಧವಾಗುತ್ತದೆ. ರೂಪಗಳಲ್ಲಿ ಭೇದ ದರ್ಶನ ನಿಂದನೆಯು ನಗ್ನ ಸ್ತ್ರೀ ದರ್ಶನ ನಿಂದನೆಯಂತೆ, ಕಾರಣಾಂತರದಿಂದ ಅಲ್ಲ. ನಗ್ನ ಸ್ತ್ರೀ ದರ್ಶನದಿಂದ ಪಾಪವು ಉಂಟಾಗುತ್ತದೆ ಎಂಬ ಕಾರಣದಿಂದ ನಗ್ನ ಸ್ತ್ರೀ ದರ್ಶನವು ನಿಂದಿತವಾಗಿದೆ ಹೊರತಾಗಿ ನಗ್ನ ಸ್ತ್ರೀ ಎಂಬ ವಸ್ತುವೇ ಮಿಥ್ಯಾ ಎಂಬ ಕಾರಣದಿಂದಲ್ಲ. ಆದರೆ ಭೇದ ದರ್ಶನ ನಿಂದನೆಯು ಹಾಗಲ್ಲ. ಭೇದವು ಮಿಥ್ಯೆಯಾದುದರಿಂದಲೇ ಭೇದ ದರ್ಶನವು ನಿಂದಿತವಾಗಿದೆ ಎಂದು ತೋರಿಸುವುದಕ್ಕಾಗಿ ನಾಸ್ತಿ ಕಿಂಚನ ಎಂಬ ವಾಕ್ಯ ಭಾಗವು ಭೇದವನ್ನೇ ನಿಷೇಧ ಮಾಡುತ್ತದೆ. ಈ ರೀತಿಯಲ್ಲಿ ಉಪಕ್ರಮ ಮತ್ತು ಉಪಸಂಹಾರಗಳಿಗೆ ಅನುಗುಣವಾದ ಅರ್ಥವು ದೊರೆಯುತ್ತದೆ. ಏವಂ ಧರ್ಮಾನ್ ಪೃಥಕ್ ಪಶ್ಯನ್ ಎಂಬ ಕೊನೆಯ ವಾಕ್ಯವು, ಏವಂ ಎಂಬ ಪದದಿಂದ ಹಿಂದೆ ಹೇಳಿದ ಭಗವಂತನ ರೂಪಭೇದ ದರ್ಶನವನ್ನು ದೃಷ್ಟಾಂತೀಕರಿಸಿ ಭಗವಂತನ ಧರ್ಮಗಳಲ್ಲಿ ಭೇದ ದರ್ಶನವನ್ನು ಹೊಂದಿದವನಿಗೂ ಅದೇ ಫಲವಾಗುತ್ತದೆ ಎಂದು ರೂಪ ಭೇದ ದರ್ಶನಕ್ಕೂ, ಧರ್ಮಭೇದ ದರ್ಶನಕ್ಕೂ ಸಮಾನವಾದ ಫಲವನ್ನೇ ಹೇಳುತ್ತದೆ. ಆದ್ದರಿಂದ ಧರ್ಮಭೇದ ದರ್ಶನವೂ ಸಹ ಧರ್ಮಭೇದವು ಮಿಥ್ಯೆಯಾಗಿರುವ ಕಾರಣದಿಂದಲೇ ನಿಂದಿತವಾಗಿದೆ ಎಂದು ತೋರಿಸಲು ನೇಹನಾನಾ ಎಂಬ ಮಧ್ಯದ ವಾಕ್ಯವು ಉಪೋದ್ಘಾತ ರೂಪದಲ್ಲಿ ಧರ್ಮಭೇದವನ್ನೂ ನಿಂದಿಸುತ್ತದೆ ಎಂದು ಅಂಗೀಕರಿಸಬೇಕು. ಆದ್ದರಿಂದಲೇ ಯದೇವೇಹ ಎಂಬ ಮೊದಲಿನ ವಾಕ್ಯದಲ್ಲಿಯೂ ಯ ಇಹ ಎಂಬ ಈ ವಾಕ್ಯದಲ್ಲಿಯೂ ಇಹ ಎಂಬ ಶಬ್ದದಿಂದ ಧರ್ಮಿಯಾದ ಬ್ರಹ್ಮನನ್ನೇ ಸಾಮಾನ್ಯವಾಗಿ ನಿರ್ದೇಶ ಮಾಡಿದೆ. ಆದ್ದರಿಂದ ಉಪಕ್ರಮ ಮತ್ತು ಉಪಸಂಹಾರಕ್ಕೆ ಅನುಗುಣವಾಗಿ ರೂಪಭೇದನಿಷೇಧವು ಮತ್ತು ಧರ್ಮಭೇದ ನಿಷೇಧವು ಲಭ್ಯವಾಗುತ್ತದೆ. ಯಥೋದಕಂ ಎಂಬ ಕೊನೆಯ ವಾಕ್ಯದಲ್ಲಿ ಇರುವ ಯಥಾ ಎಂಬ ಪದದ ಬಲದಿಂದಲೇ ತಥಾ ಎಂಬ ಪದವು ದೊರೆಯುವುದರಿಂದ ಮಧ್ಯದ ನೇಹನಾನಾ ಎಂಬ ವಾಕ್ಯವು ಉಭಯ ವಿಧವಾದ ಭೇದವನ್ನು ಪ್ರತಿಷೇಧ ಮಾಡುತ್ತದೆ ಎಂದು ವ್ಯಾಖ್ಯಾನ ಮಾಡಿದರೆ ಮಾತ್ರ ಕೊನೆಯ ವಾಕ್ಯದಿಂದ ಅದಕ್ಕೆ ಏಕವಾಕ್ಯತ್ವವು ಉಂಟಾಗುತ್ತದೆ. ಆಗ ಏವಂ, ಧರ್ಮಿಯಾದ ಬ್ರಹ್ಮನ ರೂಪಗಳಲ್ಲಿ ಭೇದ ದರ್ಶನವನ್ನು ಮಾಡಿದಂತೆ ಧರ್ಮಗಳಲ್ಲಿಯೂ ಭೇದ ದರ್ಶನವನ್ನು ಮಾಡಿದರೆ ಅವನಿಗೆ

ದುರ್ಗತಿಯಾಗುತ್ತದೆ ಎಂಬ ಅರ್ಥವು ದೊರೆಯುವುದರಿಂದ ಈ ಏವಂ ಎನ್ನುವ ಪದಕ್ಕೆ ಅದು ಇರುವ ಸ್ಥಳದಲ್ಲಿಯೇ ಅದನ್ನು ಇರಿಸಿ ಉಚಿತವಾದ ವ್ಯಾಖ್ಯಾನವನ್ನು ಮಾಡಿದ ಕಾರಣದಿಂದ ಈ ಯೋಜನೆಯು ಪ್ರಶಸ್ತವಾಗುತ್ತದೆ. ಈ ವಾಕ್ಯಗಳಿಂದ ಜೀವೇಶ್ವರ ಭೇದ ನಿಷೇಧವಂತೂ ಎಂದೂ ಸಿದ್ಧವಾಗುವುದಿಲ್ಲ. ಏಕೆಂದರೆ ಇಲ್ಲಿ ಇರುವ 'ಯತಶ್ಚೋದೇತಿ ಸೂರ್ಯಃ ಅಸ್ತಂ ಯತ್ರ ಚ ಗಚ್ಛತಿ । ತಂ ದೇವಾಃ ಸರ್ವೇ ಅರ್ಪಿತಾಃ ತದು ನಾತ್ಯೇತಿ ಕಶ್ಚನ' ಎಂಬ ವಾಕ್ಯದಲ್ಲಿ ಸೂರ್ಯಾದಿ ದೇವತೆಗಳಿಗೆ ತಮ್ಮ ತಮ್ಮ ವ್ಯಾಪಾರದಲ್ಲಿ ಭಗವದಧೀನತ್ವವನ್ನು ತದುನಾತ್ಯೇತಿ ಕಶ್ಚನ ಎಂದು ಎಲ್ಲ ಜೀವರಿಗೂ ಭಗವದಧೀನತತ್ವವನ್ನು, ತಂ ದೇವಾಃ ಸರ್ವೇ ಅರ್ಪಿತಾ ಎಂಬಲ್ಲಿ ಎಲ್ಲ ದೇವತೆಗಳು ಅವನಿಂದಲೇ ತಮ್ಮ ತಮ್ಮ ಸ್ಥಾನದಲ್ಲಿ ಇಡಲ್ಪಟ್ಟಿದ್ದಾರೆಂಬ ಅರ್ಥವನ್ನು, ತಾತ್ಪರ್ಯ ಪೂರ್ವಕವಾಗಿ ಹೇಳಿ ಜೀವೇಶ್ವರಭೇದವನ್ನೇ ಸ್ಥಾಪನೆ ಮಾಡಿರುವುದರಿಂದ ಪುನಃ ಭೇದವನ್ನು ನಿಷೇಧ ಮಾಡಲು ಸಾಧ್ಯವಿಲ್ಲ. ಹೀಗೆ ಉಪಕ್ರಮದಲ್ಲಿಯೂ, ಉಪಸಂಹಾರದಲ್ಲಿಯೂ ಮತ್ತು ಮಧ್ಯದ ವಾಕ್ಯದಲ್ಲಿಯೂ ಅಭೇದವನ್ನೇ ಹೇಳುವುದರಿಂದ ದೇವರ ರೂಪಗಳಿಗೂ ಮತ್ತು ದೇವರಿಗೂ ಹಾಗೂ ದೇವರ ಧರ್ಮಗಳಿಗೂ ದೇವರಿಂದ ಅಭೇದವೇ ಇದೆ ಎನ್ನುವ ವಿಷಯದಲ್ಲಿ ಉಪನಿಷತ್ತಿನಲ್ಲಿ ಮಹಾತಾತ್ಪರ್ಯವಿದೆ ಎಂದು ಸಿದ್ಧವಾಗುತ್ತದೆ.

**ಈಶಾನೋ ಭೂತಭವ್ಯಸ್ಯೇತ್ಯುಪಸಂಹಾರವಾಕ್ ಚ ತೇ ।**
**ಅನೀಶಜಗದದ್ವೈತಂ ಭಿನತ್ತೀತಿ ಮತಿರ್ಮಮ ।**
**ತತ್ರೈವ ತಾದೃಗೇವೇತಿ ಯತ್ಫಲೋಕ್ತಿಶ್ಚ ಭೇದವಾಕ್ ॥ ೯೧೩ ॥**

**ಅರ್ಥ–** ಈಶಾನೋ ಭೂತಭವ್ಯಸ್ಯ ಇತಿ= ಈಶಾನೋ ಭೂತಭವ್ಯಸ್ಯ ಎಂಬ, ಉಪಸಂಹಾರವಾಕ್ ಚ= ಉಪಸಂಹಾರ ವಾಕ್ಯವೂ ಸಹ, ತೇ= ನಿನಗೆ ಅಭಿಮತವಾದ, ಅನೀಶಜಗದದ್ವೈತಂ= ಅನೀಶವಾದ ಜಗತ್ತಿನ ಭೇದವನ್ನು, ಭಿನತ್ತೀತಿ= ಬಾಧಿಸುತ್ತದೆ ಎಂದು, ಮಮ ಮತಿಃ= ನನ್ನ ಅಭಿಪ್ರಾಯ, ತತ್ರೈವ= ಅಲ್ಲಿಯೇ, ತಾದೃಗೇವೇತಿ= ತಾದೃಗೇವ ಭವತಿ ಎಂಬ, ಫಲೋಕ್ತಿಶ್ಚ= ಫಲವಾಕ್ಯವೂ ಸಹ, ಭೇದವಾಕ್= ಭೇದವಾಕ್ಯವೇ ಆಗಿದೆ.

**ಅನುವಾದ–** 'ಈಶಾನೋ ಭೂತಭವ್ಯಸ್ಯ' ಎಂದರೆ ವರ್ತಮಾನ ಮತ್ತು ಅತೀತವಾದ ಜಗತ್ತಿಗೆ ಒಡೆಯ ಎಂಬ ಉಪಸಂಹಾರ ವಾಕ್ಯವೂ ಸಹ ಅನೀಶವಾದ ಜಗತ್ತಿನ ಭೇದವನ್ನು ಬಾಧಿಸುತ್ತದೆ ಎಂದು ನನ್ನ ಅಭಿಪ್ರಾಯ. ಹಾಗೆಯೇ ಅಲ್ಲಿಯೇ ಇರುವ 'ತಾದೃಗೇವ ಭವತಿ' ಅವನಂತೆಯೇ ಆಗುತ್ತಾನೆ ಎಂಬ ಫಲೋಕ್ತಿಯೂ ಸಹ ಭೇದವಾಕ್ಯವೇ ಆಗಿರುವುದರಿಂದ ಅದೂ ನಿನ್ನ ಅದ್ವೈತವನ್ನು ಬಾಧಿಸುತ್ತದೆ ಎಂದು ನನ್ನ ಅಭಿಪ್ರಾಯ.

**ಭಾವವಿಲಾಸಿನೀ–** ಜೀವೇಶ್ವರಭೇದನಿಷೇಧಕಥನೇ ಬಾಧಕಾಂತರಾಣಿ ಚಾಹ – **ಈಶಾನ ಇತ್ಯಾದಿನಾ** ॥ ತತ್ರ ತಸ್ಯಾಮುಪನಿಷದಿ ॥ ತಾದೃಗೇವೇತ್ಯನೇನ ಯಥೋದಕಂ ಶುದ್ಧೇ ಶುದ್ಧಮಾಸಿಕ್ತಂ ತಾದೃಗೇವ ಭವತಿ। ಏವಂ ಮುನೇರ್ವಿಜಾನತ ಆತ್ಮಾ ಭವತಿ ಗೌತಮೇತಿ ಶ್ರುತಿಮುಪಾದತ್ತೇ। ಇಯಂ ಹಿ ಶ್ರುತಿಃ ಶುದ್ಧಜಲೇ ಶುದ್ಧಜಲಾಂತರಸ್ಯ ಲೋಡನೇಽಪ್ಯುಭಯೋಃ ಸಾದೃಶ್ಯಮೇವ ಸ್ಯಾತ್ ನ ತ್ವೈಕ್ಯಮಿತಿ ಪರಾಭಿಲಷಿತದೃಷ್ಟಾಂತಮಪಿ ವಿಘಟಯಂತೀ ಆತ್ಮ-ಪದೋದಿತಜೀವಸ್ವರೂಪಸ್ಯ ಬ್ರಹ್ಮಣಿ ಪ್ರವೇಶಾಖ್ಯಸಾಯುಜ್ಯೇಽಪಿ ಏವಂ ಭವತೀತಿ ಉಭಯೋಃ ಸಾದೃಶ್ಯಮೇವ ಸ್ಯಾತ್ ನ ತ್ವೈಕ್ಯಮಿತಿ ಪರಮಮಮೋಕ್ಷೇಽಪಿ ಭೇದಮಾಹ। ಅತೋ ಜೀವೇಶ್ವರ-ಭೇದೇ ಶ್ರುತೇರ್ಮಹಾ ತಾತ್ಪರ್ಯವತ್ತ್ವಾನ್ನ ಕ್ವಾಪಿ ತನ್ನಿಷೇಧೋ ಘಟತೇ। ಕಿಂತು ನಿರವಕಾಶೈತ-ಚ್ಛ್ರುತ್ಯನುಸಾರೇಣೈವ ಸರ್ವಾಃ ಶ್ರುತಯೋ ವ್ಯಾಖ್ಯೇಯಾ ಇತಿ ಭಾವಃ ॥ ೯೧೩ ॥

**ವಿವರಣೆ–** 'ಈಶಾನೋ ಭೂತಭವ್ಯಸ್ಯ ಸ ಏವಾದ್ಯಃ ಸಉ ಶ್ವಃ' ಎಂಬುದು ಉಪಸಂಹಾರ ವಾಕ್ಯ. ಇಲ್ಲಿ ಅತೀತ ಮತ್ತು ವರ್ತಮಾನ ಜಗತ್ತಿನ ಸ್ವಾಮಿತ್ವವು ಬ್ರಹ್ಮನಿಗೆ ಹೇಳಲ್ಪಟ್ಟಿದೆ. ಜಗತ್ತು ಅವನ ಅಧೀನವಾದುದರಿಂದ ಜಗತ್ತಿಗೂ ಬ್ರಹ್ಮನಿಗೂ ಭೇದವೇ ಸಿದ್ಧವಾಗುತ್ತದೆ. ಮತ್ತು ಅಲ್ಲಿಯೇ ಫಲವಾಕ್ಯವು ಈ ರೀತಿ ಇದೆ. 'ಯಥೋದಕಂ ಶುದ್ಧೇ ಶುದ್ಧ ಮಾಸಿಕ್ತಂ ತಾದೃಗೇವ ಭವತಿ। ಏವಂ ಮುನೇರ್ವಿಜಾನತ ಆತ್ಮಾ ಭವತಿ ಗೌತಮ' ಎಂದು. ಯಾರು ಪರಮಾತ್ಮನು ತಿಳಿಯುತ್ತಾನೆಯೋ ಅಂತಹ ಮುನಿಯ ಆತ್ಮಾ ಎಂದರೆ ಸ್ವರೂಪವು ಶುದ್ಧವಾದ ನೀರಿಗೆ ಶುದ್ಧವಾದ ನೀರನ್ನು ಬೆರೆಸಿದರೆ ಆಗುವಂತೆ ಪರಮಾತ್ಮನಿಗೆ ಸದೃಶವೇ ಆಗುತ್ತದೆ ಎಂದು ಅರ್ಥ. ಈ ಫಲವಾಕ್ಯದಲ್ಲಿ ಪರಮಾತ್ಮನೇ ಆಗುತ್ತಾನೆ ಎಂದು ಹೇಳದೆ ಪರಮಾತ್ಮನಿಗೆ ಸದೃಶನಾಗುತ್ತಾನೆ ಎಂದು ಹೇಳಿರುವುದರಿಂದ ಇದರಿಂದಲೂ ಅಭೇದವು ಬಾಧಿತವಾಗುತ್ತದೆ ಎಂದು ಅಭಿಪ್ರಾಯ.

ಕಿಂಚ ನಾಸ್ತೀತ್ಯಭಾವಸ್ಯ ವರ್ತಮಾನತ್ವಮಾತ್ರತಾ ।
ಕೀರ್ತ್ಯತೇಽತಸ್ತ್ರಿಕಾಲಸ್ಥಾ ಭಾವವಾರ್ತಾಪಿ ನಾತ್ರ ತೇ ॥ ೯೧೪ ॥

ಮಿಥ್ಯಾತ್ವಪರತಾ ತಸ್ಮಾದಸ್ಮಿನ್ ವಾಕ್ಯೇ ನ ಶೋಭತೇ ॥ ೯೧೫ ॥

**ಅರ್ಥ–** ಕಿಂಚ= ಮತ್ತು, ನಾಸ್ತಿ ಇತಿ= ನಾಸ್ತಿ ಎಂಬ ಪದದಿಂದ, ಅಭಾವಸ್ಯ= ಅಭಾವಕ್ಕೆ, ವರ್ತಮಾನ ಮಾತ್ರತಾ= ವರ್ತಮಾನ ಕಾಲೀನತ್ವವು ಮಾತ್ರ, ಕೀರ್ತ್ಯತೇ= ಹೇಳಲ್ಪಡುತ್ತದೆ, ಅತಃ= ಆದ್ದರಿಂದ, ಅತ್ರ= ಇಲ್ಲಿ, ತೇ= ನಿನ್ನ, ತ್ರಿಕಾಲಸ್ಥಾಭಾವವಾರ್ತಾಪಿ= ಕಾಲತ್ರಯ ವೃತ್ತಿ ಅಭಾವದ ವಾರ್ತೆಯೂ ಕೂಡ, ನ= ಇಲ್ಲ, ತಸ್ಮಾತ್= ಆದ್ದರಿಂದ, ಅಸ್ಮಿನ್ ವಾಕ್ಯೇ= ಈ ವಾಕ್ಯದಲ್ಲಿ, ಮಿಥ್ಯಾತ್ವಪರತಾ= ಮಿಥ್ಯಾತ್ವಪರತ್ವವು, ನ ಶೋಭತೇ= ಶೋಭಿಸುವುದಿಲ್ಲ.

**ಅನುವಾದ–** ನೇಹ ನಾನಾಸ್ತಿ ಎಂಬ ಶ್ರುತಿಯಲ್ಲಿ ನಾಸ್ತಿ ಎಂಬ ಲಟ್ ಪ್ರತ್ಯಯಾಂತ ಕ್ರಿಯಾ ಪದವು ಅಭಾವಕ್ಕೆ ವರ್ತಮಾನತ್ವ ಮಾತ್ರವನ್ನು ಹೇಳುತ್ತದೆ. ತ್ರಿಕಾಲ ವೃತ್ತಿ

ಅಭಾವವನ್ನು ಹೇಳುವುದಿಲ್ಲ. ಆದ್ದರಿಂದ ಇಲ್ಲಿ ನಿನಗೆ ಅಪೇಕ್ಷಿತವಾದ ತ್ರಿಕಾಲವೃತ್ತಿ ಅಭಾವರೂಪವಾದ ಮಿಥ್ಯಾತ್ವ ವಾರ್ತೆಯೂ ಇಲ್ಲಿ ಇಲ್ಲ. ಆದ್ದರಿಂದ ಈ ವಾಕ್ಯದಲ್ಲಿ ಮಿಥ್ಯಾತ್ವಪರತ್ವವು ಶೋಭಿಸುವುದಿಲ್ಲ.

**ಭಾವವಿಲಾಸಿನೀ–**ಪ್ರಕಾರಾಂತರೇಣಾಪಿ ಶ್ರುತೇರ್ಮಿಥ್ಯಾತ್ವಪರತಾಂ ನಿರಾಕರೋತಿ–**ಕಿಂಚೇತಿ** ॥ ಅತಃ ಲಟೋ ವರ್ತಮಾನಾಭಾವಮಾತ್ರಪರತ್ವಾತ್ । ಅತ್ರ ಶ್ರುತೌ ॥ ೯೧೪ ॥

ತಸ್ಮಾತ್ ತ್ರೈಕಾಲಿಕಾಭಾವಬೋಧಕಪದಾಭಾವಾತ್ । ಅಸ್ಮಾಕಂ ತು ಪ್ರಾಗೇವೇತಿ ಪದಮಹಿಮ್ನಾ ರೂಪೇಷ್ವತ್ಯಂತಾಭೇದಸ್ಯೋಕ್ತತ್ವೇನ ವಾಕ್ಯದ್ವಯೇ ಭೇದದರ್ಶನಸ್ಯ ನಿಂದಿತತ್ವೇನ ಚ ರೂಪ-ಭೇದಾದೇಃ ಶ್ರುತ್ಯನಭಿಪ್ರೇತತಯಾ ಅರ್ಥಾದತ್ಯಂತಾಭಾವಸ್ಯೈವ ಸಿದ್ಧೇಃ । (ಅಭೇದೇನಾಸ್ತಿತೇ) ಭೇದೇನ ನಾಸ್ತಿತಾಮಾತ್ರೇಣಾಪಿ ವಾಕ್ಯಯೋಜನಾತ್ (ನಾತ್ರೋದ್ಯತಾನಾಂ) ಮಿಥ್ಯಾತ್ವೇ ಭರಾಭಾವಾಚ್ಚ ॥ ೯೧೫ ॥

**ವಿವರಣೆ–** ನಮಗಾದರೆ ಯದೇವೇಹ ಎಂಬಲ್ಲಿ ಏವ ಪದದಿಂದ ರೂಪಗಳಿಗೆ ಅತ್ಯಂತ ಅಭೇದವು ಹೇಳಲ್ಪಟ್ಟಿರುವುದರಿಂದಲೂ, ಎರಡು ವಾಕ್ಯಗಳಲ್ಲಿಯೂ ಸಹ ಭೇದ ದರ್ಶನವನ್ನು ನಿಂದಿಸಿರುವುದರಿಂದಲೂ ರೂಪಭೇದಾದಿಗಳು ಶ್ರುತಿಗೆ ಅನಭಿಪ್ರೇತ-ವಾದುದರಿಂದ ರೂಪಭೇದಾದಿಗಳ ಅತ್ಯಂತಾಭಾವವೇ ಸಿದ್ಧವಾಗುತ್ತದೆ.

ಯದಸ್ತಿ ತತ್ಕಥಂ ನಾಸ್ತಿ ತತೋ ಬ್ರಹ್ಮಣಿ ಯಚ್ಛ್ರುತಂ ।
ಜಡಂ ಜಗದಭೇದಾನರ್ಹಂ ಚ ಗರ್ಹ್ಯಾತ್ರ ತತ್ಕಥಾ ॥ ೯೧೬ ॥

**ಅರ್ಥ–** ಯದಸ್ತಿ= ಯಾವುದು ಇದೆಯೋ, ತತ್= ಅದು, ಕಥಂ ನಾಸ್ತಿ= ಹೇಗೆ ಇಲ್ಲವೆಂದಾಗುತ್ತದೆ, ತತಃ= ಆದ್ದರಿಂದ, ಬ್ರಹ್ಮಣಿ= ಬ್ರಹ್ಮನಲ್ಲಿ, ಶ್ರುತಂ= ಹೇಳಲ್ಪಟ್ಟ ಯತ್= ಯಾವ, ಜಗದಭೇದಾನರ್ಹಂ= ಚೇತನ ಅಭೇದಕ್ಕೆ ಅಯೋಗ್ಯವಾದ, ಜಡಂ= ಜಡವಿದೆಯೋ, ತತ್ಕಥಾ= ಅದರ ವಾರ್ತೆಯು, ಅತ್ರ= ಇಲ್ಲಿ, ಗರ್ಹ್ಯ= ನಿಂದಿತವಾದುದು.

**ಅನುವಾದ–** ಯಾವುದು ಇದೆಯೋ ಅದೇ ಇಲ್ಲವೆಂದು ಹೇಗಾಗುತ್ತದೆ? ಆದ್ದರಿಂದ ಬ್ರಹ್ಮನಲ್ಲಿ ಶ್ರುತವಾದ ಚೇತನಾಭೇದಕ್ಕೆ ಅಯೋಗ್ಯವಾದ ಯಾವ ಜಡವಿದೆಯೋ ಅದರ ವಾರ್ತೆಯು ಇಲ್ಲಿ ಅತ್ಯಂತ ಗರ್ಹಿತವಾದುದು.

**ಭಾವವಿಲಾಸಿನೀ–** ಕಿಂಚ ಯಸ್ಮಿನ್ನಿದಂ ಸಂ ಚ ವಿಚೈತಿ ಸರ್ವಂ ಯಸ್ಮಿನ್‌ದೇವಾ ಅಧಿವಿಶ್ವೇ ನಿಷೇದುರಿತಿ ಶ್ರುತೌ ಬ್ರಹ್ಮಣ್ಯೇವ ಶ್ರುತಂ ಜಗತ್ಪುನರನಯಾ ಶ್ರುತ್ಯಾ ಕಥಂ ತತ್ರೈವ ನಾಸ್ತೀತ್ಯುಚ್ಯತೇ। ಶ್ರುತ್ಯೋಃ ಪರಸ್ಪರವಿರೋಧಪ್ರಸಂಗಾತ್ । ಅತೋಽಪ್ಯಸ್ಮದುಕ್ತ ಏವ ವಾಕ್ಯಾರ್ಥ ಇತ್ಯಾಹ – **ಯದಸ್ತೀತಿ** ॥ ಜಗಚ್ಚೇತನಂ ಜಡಂ ಜಡತ್ವಾದೇವಾಭೇದಾನರ್ಹಮ್ । ಯಸ್ಮಿನ್‌ದೇವ ಅಧಿ ವಿಶ್ವೇ ನಿಷೇದುರಿತಿ ಶ್ರುತೌ ಮಹಾಚೇತನಾನಾಮಪಿ ದೇವಾನಾಂ ಬ್ರಹ್ಮಣ್ಯಾಶ್ರಯಾಶ್ರಯಿ-

ಭಾವಶ್ರವಣಾತ್ ಜಗದಪ್ಯಭೇದಾನರ್ಹಮ್ । ಅತ್ರ ವಾಕ್ಯೇ । ತತ್ಕಥಾ ಜಗತ್ಕಥಾ ಗರ್ಹ್ಯಾ । ಸ್ವರೂಪನಿಷೇಧಮುಖೇನ ಭೇದನಿಷೇಧಮುಖೇನ ವಾ ಉಕ್ತರೀತ್ಯಾ ಜಗತೋಽತ್ರ ವಕ್ತುಮಶಕ್ಯತ್ವಾದಿತಿ ಭಾವಃ ॥ ೯೧೬ ॥

**ವಿವರಣೆ–** ಈಗ 'ಯಸ್ಮಿನ್ ಇದಂ ಸಂಚವಿಚೈತಿ ಸರ್ವಂ । ಯಸ್ಮಿನ್ ದೇವಾ ಅಧಿ ವಿಶ್ವೇ ನಿಷೇದುಃ' ಎಂಬ ಶ್ರುತಿಯಲ್ಲಿ ಬ್ರಹ್ಮನಲ್ಲಿಯೇ ಜಗತ್ತು ಇದೆ ಎಂದು ಹೇಳಲ್ಪಟ್ಟಿರುವುದರಿಂದ ನೇಹನಾನಾ ಎಂಬ ಶ್ರುತಿಯು ಬ್ರಹ್ಮನಲ್ಲಿಯೇ ಜಗತ್ತನ್ನು ನಿಷೇಧ ಮಾಡಲು ಸಾಧ್ಯವಿಲ್ಲ ಎಂದು ಉಪಪಾದನೆ ಮಾಡುತ್ತಾರೆ. ಹಾಗೆ ನಿಷೇಧ ಮಾಡಿದರೆ ಶ್ರುತಿಗಳಿಗೆ ಪರಸ್ಪರ ವಿರೋಧವು ಬರುವುದಷ್ಟೇ. ಈ ಶ್ರುತಿಯಲ್ಲಿ ಈ ಶ್ಲೋಕದಲ್ಲಿ ಜಗತ್ ಎಂದರೆ ಚಲಿಸುವಂತಹ ಚೇತನ ಎಂದು ಅರ್ಥ. ಯಸ್ಮಿನ್ ದೇವಾ ಅಧಿವಿಶ್ವೇ ನಿಷೇದುಃ ಎಂಬ ಉತ್ತರ ವಾಕ್ಯ ಖಂಡದಲ್ಲಿ ದೇವತಾರೂಪರಾದ ಮಹಾ ಚೇತನಗಳಿಗೇ ಬ್ರಹ್ಮಾಶ್ರಿತತ್ವವನ್ನು ಹೇಳಿರುವುದರಿಂದ ಅವರಿಗೂ ಬ್ರಹ್ಮಾಭೇದದ ಪ್ರಸಕ್ತಿ ಇಲ್ಲ. ಹೀಗಿರುವಾಗ ಜಗತ್ತಿಗೆ ಬ್ರಹ್ಮಾಭೇದವು ಅತ್ಯಂತ ಅಯೋಗ್ಯವಾದುದು, ಇಲ್ಲಿ ಅದರ ಪ್ರಸಕ್ತಿ ಇಲ್ಲ ಎಂದು ಅಭಿಪ್ರಾಯ.

**ಅಸ್ತಿತ್ವಸ್ಯಾನೃತತ್ವೇನ ನಾಸ್ತಿತ್ವಘಟನಾ ಯದಿ ।**
**ತರ್ಹ್ಯನ್ಯೋನ್ಯಾಶ್ರಯೋ ದೋಷೋ ಹನ್ಯಾದನ್ಯಾಯವಾದಿನಃ ॥ ೯೧೭ ॥**

**ಅರ್ಥ–** ಅಸ್ತಿತ್ವಸ್ಯ= ಅಸ್ತಿತ್ವವು, ಅನೃತತ್ವೇನ= ಅನೃತವಾದ ಕಾರಣದಿಂದ, ಯದಿ= ಒಂದು ಪಕ್ಷ, ನಾಸ್ತಿತ್ವಘಟನಾ= ಅಭಾವದ ಘಟನೆಯೂ ಆಗುವುದಿದ್ದರೆ, ತರ್ಹಿ= ಆಗ, ಅನ್ಯಾಯವಾದಿನಂ= ನ್ಯಾಯವನ್ನು ಮೀರಿ ಮಾತನಾಡುವ ನಿನ್ನನ್ನು, ಅನ್ಯೋನ್ಯಾಶ್ರಯ ದೋಷಃ= ಅನ್ಯೋನ್ಯಾಶ್ರಯ ದೋಷವು, ಹನ್ಯಾತ್= ಕೊಲ್ಲುತ್ತದೆ.

**ಅನುವಾದ–** ಅಸ್ತಿತ್ವವು ಮಿಥ್ಯೆಯಾದುದರಿಂದ ಅಭಾವವು ಕೂಡುತ್ತದೆ ಎಂದು ಹೇಳಿದರೆ ಆಗ ಅನ್ಯಾಯವಾಗಿ ಮಾತನಾಡುವ ನಿನ್ನನ್ನು ಅನ್ಯೋನ್ಯಾಶ್ರಯ ದೋಷವು ಕೊಲ್ಲುತ್ತದೆ.

**ಭಾವವಿಲಾಸಿನೀ–** ಅಸ್ತಿತ್ವಸ್ಯಾನೃತತ್ವಾನ್ನ ವಿರೋಧ ಇತ್ಯತ ಆಹ – **ಅಸ್ತಿತ್ವಸ್ಯೇತಿ** ॥ ೯೧೭ ॥

**ವಿವರಣೆ–** ಯಸ್ಮಿನ್ ಇದಂ ಸಂಚ ವಿಚೈಧಿ ಎಂಬ ಇದೇ ವಾಕ್ಯದ ಪೂರ್ವಭಾಗದಲ್ಲಿ ಜಗತ್ತು ಬ್ರಹ್ಮನಲ್ಲಿ ಇದೆ ಎಂದು ಹೇಳಲ್ಪಟ್ಟಿದೆ. ಹೀಗಿರುವಾಗ ಅಲ್ಲಿ ನೇಹನಾನಾ ವಾಕ್ಯವು ಬ್ರಹ್ಮನಲ್ಲಿ ಜಗತ್ತು ಇಲ್ಲ ಎಂದು ಹೇಳಲು ಸಾಧ್ಯವಿಲ್ಲ. ಆ ಅಸ್ತಿತ್ವವು ಮಿಥ್ಯಾಭೂತವಾದುದು ಎಂದು ಹೇಳಿ ಅಭಾವವನ್ನು ಘಟನೆ ಮಾಡಲು ಹೊರಟರೆ ಅನ್ಯೋನ್ಯಾಶ್ರಯವು ಬರುತ್ತದೆ ಎಂದು ಅಭಿಪ್ರಾಯ.

**ಅಸ್ತಿತ್ವಸ್ಯಾನೃತತ್ವೇ ಸ್ಯಾನ್ನಾಸ್ತಿತ್ವಘಟನಾ ತವ ।**
**ನಾಸ್ತಿತ್ವಘಟನಾಯಾಂ ಸ್ಯಾದಸ್ತಿತ್ವಸ್ಯಾನೃತಾತ್ಮತಾ ॥ ೬೧೮ ॥**

**ಅರ್ಥ–** ಅಸ್ತಿತ್ವಸ್ಯ ಅನೃತತ್ವೇ= ಅಸ್ತಿತ್ವಕ್ಕೆ ಅನೃತತ್ವವು ಸಿದ್ಧವಾದರೆ, ತವ= ನಿನಗೆ, ನಾಸ್ತಿತ್ವ ಘಟನಾ= ಅಭಾವದ ಘಟನೆಯು, ಸ್ಯಾತ್= ಆಗುತ್ತದೆ, ನಾಸ್ತಿತ್ವಘಟನಾಯಾಂ= ಅಭಾವದ ಘಟನೆಯಾದರೆ, ಅಸ್ತಿತ್ವಸ್ಯ= ಅಸ್ತಿತ್ವಕ್ಕೆ, ಅನೃತಾತ್ಮತಾ= ಮಿಥ್ಯಾತ್ವವು, ಸ್ಯಾತ್= ಸಿದ್ಧವಾಗುತ್ತದೆ.

**ಅನುವಾದ–** ಅಸ್ತಿತ್ವಕ್ಕೆ ಮಿಥ್ಯಾತ್ವವು ಸಿದ್ಧವಾದರೆ ಆಗ ನಿನಗೆ ಅಭಾವದ ಘಟನೆಯು ಕೂಡುತ್ತದೆ. ಅಭಾವದ ಘಟನೆಯು ಕೂಡಿದರೆ ಆಗ ಅಸ್ತಿತ್ವಕ್ಕೆ ಮಿಥ್ಯಾತ್ವವು ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ಅನ್ಯೋನ್ಯಾಶ್ರಯಮೇವೋಪಪಾದಯತಿ – **ಅಸ್ತಿತ್ವಸ್ಯೇತಿ** ॥ ೬೧೮ ॥

**ವಿವರಣೆ–** ಅಸ್ತಿತ್ವವು ಮಿಥ್ಯೆ ಎಂದು ಸಿದ್ಧವಾದರೆ ಅಭಾವವನ್ನು ಹೇಳುವ ನೇಹನಾನಾ ವಾಕ್ಯಕ್ಕೆ ವಾಕ್ಯಾಂತರ ವಿರೋಧವಿಲ್ಲವಾದ್ದರಿಂದ ಅದು ಅಭಾವವನ್ನು ಹೇಳುತ್ತದೆ. ನೇಹ ನಾನೇತಿ ವಾಕ್ಯವು ಅಭಾವವನ್ನು ಹೇಳುತ್ತದೆ ಎಂದು ಸಿದ್ಧವಾದರೆ, ಅದಕ್ಕೆ ವಿರುದ್ಧವಾದ ಯಸ್ಮಿನ್ ಇದಂ ಎಂಬ ವಾಕ್ಯದಲ್ಲಿ ಹೇಳಲ್ಪಡುವ ಅಸ್ತಿತ್ವವು ಮಿಥ್ಯೆ ಎಂದು ಸಿದ್ಧವಾಗುತ್ತದೆ. (ಇಲ್ಲದಿದ್ದರೆ ವಿರೋಧವು ಪರಿಹಾರವಾಗುವುದಿಲ್ಲ) ಎಂದು ಹಿಂದಿನ ಶ್ಲೋಕದಲ್ಲಿ ಹೇಳಿದ ಅನ್ಯೋನ್ಯಾಶ್ರಯವನ್ನೇ ಇಲ್ಲಿ ಉಪಪಾದನೆ ಮಾಡುತ್ತಿದ್ದಾರೆ.

**ಅತಃ ಸಾ ರೂಪಭೇದಸ್ಯ ಧರ್ಮಭೇದಸ್ಯ ವಾ ಹರೌ ।**
**ನಿಷೇಧಾಯ ಪ್ರವೃತ್ತೇತಿ ಪ್ರಾಂಚೋಽರ್ಥಂ ಚೋದಯಂತಿ ನಃ॥ ೬೧೯ ॥**

**ಅರ್ಥ–** ಅತಃ= ಆ ಕಾರಣದಿಂದ, ಸಾ= ಆ ನೇಹನಾನೇತಿ ವಾಕ್ಯವು, ಹರೌ= ಹರಿಯಲ್ಲಿ, ರೂಪಭೇದಸ್ಯ= ರೂಪಭೇದದ, ಧರ್ಮಭೇದಸ್ಯ ವಾ= ಅಥವಾ ಧರ್ಮಭೇದದ, ನಿಷೇಧಾಯ= ನಿಷೇಧಕ್ಕೋಸ್ಕರ, ಪ್ರೋಕ್ತೇತಿ= ಪ್ರೋಕ್ತವಾಗಿದೆ ಎಂದು, ನಃ ಪ್ರಾಂಚಃ= ನಮ್ಮ ಪ್ರಾಚೀನರು, ಅರ್ಥಂ ಚೋದಯಂತಿ= ಅರ್ಥವನ್ನು ಹೇಳುತ್ತಾರೆ.

**ಅನುವಾದ–** ಆದ್ದರಿಂದ ನೇಹನಾನಾ ಎಂಬ ವಾಕ್ಯವು ಹರಿಯಲ್ಲಿ ರೂಪಭೇದವನ್ನು ನಿಷೇಧ ಮಾಡುವುದಕ್ಕೆ ಮತ್ತು (ಅಥವಾ) ಧರ್ಮಭೇದವನ್ನು ನಿಷೇಧ ಮಾಡುವುದಕ್ಕೆ ಪ್ರವೃತ್ತವಾಗಿದೆ ಎಂದು ನಮ್ಮ ಪ್ರಾಚೀನರು ಅರ್ಥವನ್ನು ಹೇಳುತ್ತಾರೆ.

**ಭಾವವಿಲಾಸಿನೀ–** ಅತಃ ಅನ್ಯಾರ್ಥಾಸಂಭವಾತ್ । ಸಾ ನೇಹನಾನೇತಿ ಶ್ರುತಿಃ ॥ ೬೧೯ ॥

**ಇಹೇತ್ಯೇತತ್ಪದಂ ನೋ ಚೇನ್ನೇಹ ಸ್ಯಾದಿತಿ ಮೇ ಮತಿಃ ।**
**ನಾನಾಪದಂ ಚಾನ್ಯಥಾ ಸ್ಯಾನ್ನಾನಾನರ್ಥಪ್ರದಂ ತವ ॥ ೯೨೦ ॥**

**ಅರ್ಥ–** ನೋ ಚೇತ್= ಬ್ರಹ್ಮನಲ್ಲಿ ಸ್ವಗತ ಭೇದವನ್ನು ನಿಷೇಧ ಮಾಡುವ ಅಭಿಪ್ರಾಯವಿಲ್ಲದಿದ್ದರೆ, ಇಹ= ನೇಹನಾನಾ ಎಂಬ ವಾಕ್ಯದಲ್ಲಿ, ಇಹೇತಿ ಏತತ್ಪದಂ= ಇಹ ಎಂಬ ಈ ಪದವು, ನ ಸ್ಯಾತ್= ಇರಬಾರದಾಗಿದ್ದಿತು, ಇತಿ= ಎಂದು, ಮೇ ಮತಿಃ= ನನ್ನ ಅಭಿಪ್ರಾಯ, ಅನ್ಯಥಾ= ನಮ್ಮ ಅರ್ಥವನ್ನು ಒಪ್ಪದಿದ್ದರೆ, ನಾನಾಪದಂ= ಅದೇ ವಾಕ್ಯದಲ್ಲಿರುವ ನಾನಾ ಎಂಬ ಪದವು, ತವ= ನಿನಗೆ, ನಾನಾ ಅನರ್ಥಪ್ರದಂ= ಅನೇಕ ಅನರ್ಥಗಳನ್ನು ಕೊಡುವುದಾಗಿ, ಸ್ಯಾತ್= ಆಗುತ್ತದೆ.

**ಅನುವಾದ– ಈ ಶ್ರುತಿಗೆ ಬ್ರಹ್ಮನಲ್ಲಿ ಸ್ವಗತ ಭೇದವನ್ನು ನಿಷೇಧ ಮಾಡುವ ಅಭಿಪ್ರಾಯವಿಲ್ಲದಿದ್ದರೆ, ಇಹ ಎಂಬ ಪದವು ಇಲ್ಲಿ ವ್ಯರ್ಥವಾಗುತ್ತದೆ ಎಂದು ನನ್ನ ಅಭಿಪ್ರಾಯ. ಹಾಗೆಯೇ ನಾವು ಹೇಳಿದ ಅರ್ಥವನ್ನು ಒಪ್ಪದಿದ್ದರೆ, ನಾನಾಪದವೂ ಸಹ ನಿನಗೆ ಅನೇಕ ಅನರ್ಥಗಳನ್ನು ಉಂಟುಮಾಡುತ್ತದೆ ಎಂದೂ ನನ್ನ ಅಭಿಪ್ರಾಯ.**

**ಭಾವವಿಲಾಸಿನೀ–** ನೋಚೇತ್ ಬ್ರಹ್ಮಣಿ ಸ್ವಗತಭೇದಪರತ್ವಂ ನೋಚೇತ್ । ಇಹ ಶ್ರುತೌ । ಮಿಥ್ಯಾತ್ವಪರತ್ವೇ ಕಿಂಚನ ನಾಸ್ತೀತ್ಯೇತಾವತಾ ಪೂರ್ತೇಃ ಇಹಪದಸ್ಯ ನಾನಾಪದಸ್ಯ ಚ ವೈಯರ್ಥ್ಯಾತ್ । ಅನ್ಯತ್ರ ಸತ್ತ್ವಪ್ರಾಪಕತಯಾ ಪ್ರಕಾರಾಂತರೇಣ ಸತ್ತ್ವಪ್ರಾಪಕತಯಾ ಚ ವಿರುದ್ಧತ್ವಾಚ್ಚೇತಿ ಭಾವಃ ॥ ೯೨೦ ॥

**ವಿವರಣೆ–** ದ್ವಿತೀಯ ವಸ್ತುವನ್ನೇ ನಿಷೇಧ ಮಾಡುವುದಾದರೆ 'ಕಿಂಚನ ನಾಸ್ತಿ' ಇಂದಿಷ್ಟೇ ಸಾಕಾಗುತ್ತಿತ್ತು. ಇಹ ಎಂಬ ಪದಕ್ಕೆ ಸಾರ್ಥಕ್ಯವಿಲ್ಲ. ಇಹ ಎಂಬುದಕ್ಕೆ ಬ್ರಹ್ಮನಲ್ಲಿ ಎಂದು ಅರ್ಥವನ್ನು ಹೇಳಬೇಕಾಗುವುದರಿಂದ ಇಹ ಪದದ ಬಲದಿಂದ ಇಲ್ಲಿ ಇಲ್ಲದಿದ್ದರೆ ಇನ್ನೊಂದು ಕಡೆ ಇರಬಹುದಾದ್ದರಿಂದ ಮಿಥ್ಯಾತ್ವವು ಸಿದ್ಧವಾಗುವುದಿಲ್ಲ. ಹಾಗೆಯೇ ನಾನಾ ನಾಸ್ತಿ ಎಂದು ಹೇಳಬೇಕಾದ ಅಗತ್ಯವಿರಲಿಲ್ಲ. ಆದರೆ ಭಿನ್ನವಾದುದು ಇಲ್ಲ ಎಂದು ನಾನಾ ಪದದ ಬಲದಿಂದ ತಿಳಿಯುವುದರಿಂದ, ಅಭಿನ್ನವಾದುದು ಇದೆ ಎಂಬ ಅರ್ಥವು ಬರುತ್ತದೆ. ಆದ್ದರಿಂದ ಸರ್ವಜ್ಞತ್ವಾದಿ ಗುಣಗಳಿಗೆ ಅಭೇದವು ಸಿದ್ಧವಾಗುತ್ತದೆ. ಜಗತ್ತಿನ ಮಿಥ್ಯಾತ್ವವು ಸಿದ್ಧವಾಗುವುದಿಲ್ಲ ಎಂದು ಅಭಿಪ್ರಾಯ.

**ಅಥಾಪಿ ಜಗದರ್ಥತ್ವೇ ಯದಿ ತೇಽಸ್ತಿ ಮಹಾನ್ ಭರಃ ।**
**ತರ್ಹಿ ಕಿಂಚನ ನೇಹಾಸ್ತಿ ಕಿಂತು ಸರ್ವಂ ಚ ನಃ ಪ್ರಭೌ ।**
**ಸರ್ವಾಧಾರೇ ಹರಾವಸ್ತೀತ್ಯರ್ಥೋಽಸ್ತ್ವತಿಮನೋಹರಃ ॥ ೯೨೧ ॥**

**ಅರ್ಥ–** ಅಥಾಪಿ= ಆದರೂ ಕೂಡ, ತೇ= ನಿನಗೆ, ಯದಿ= ಒಂದು ಪಕ್ಷ, ಜಗದರ್ಥತ್ವೇ= ಕಿಂಚನ ಶಬ್ದಕ್ಕೆ ಜಗತ್ತು ಎಂದು ಅರ್ಥವನ್ನು ಹೇಳಬೇಕು ಎಂಬ ವಿಷಯದಲ್ಲಿ, ಮಹಾನ್ ಭರಃ= ಬಹಳ ಆಗ್ರಹವಿರುವುದಾದರೆ, ತರ್ಹಿ= ಆಗ, ಇಹ= ಬ್ರಹ್ಮನಲ್ಲಿ, ಕಿಂಚನ= ಸ್ವಲ್ಪವು ಮಾತ್ರ, ನಾಸ್ತಿ= ಇಲ್ಲ, ಕಿಂತು= ಆದರೆ, ಸರ್ವಾಧಾರೇ= ಸರ್ವಾಶ್ರಯನಾದ, ನಃ ಪ್ರಭೌ= ನಮ್ಮ ಸ್ವಾಮಿಯಲ್ಲಿ, ಸರ್ವಂ ಚ ನಾಸ್ತಿ= ಎಲ್ಲವೂ ಇದೆ, ಇತಿ= ಎಂಬ, ಅತಿಮನೋಹರಃ= ಅತಿ ಮನೋಹರವಾದ, ಅರ್ಥಃ= ಅರ್ಥವು, ಅಸ್ತು= ಇರಲಿ.

**ಅನುವಾದ–** ಇಷ್ಟಾದರೂ ಕಿಂಚನ ಶಬ್ದಕ್ಕೆ ಜಗತ್ತು ಎಂಬ ಅರ್ಥವನ್ನೇ ಹೇಳಬೇಕೆಂದು ನಿನಗೆ ದೊಡ್ಡ ಆಗ್ರಹವಿದ್ದರೆ ಕಿಂಚನ ಶಬ್ದದಿಂದ ಜಗತ್ತನ್ನೇ ಹೇಳು. ಆದರೆ ಕಿಂಚನ ಶಬ್ದವು ಅಲ್ಪ ಎಂದು ಹೇಳುವುದರಿಂದ ಈ ಬ್ರಹ್ಮನಲ್ಲಿ ಅಲ್ಪವಾದ ಜಗತ್ತು ಇಲ್ಲ, ಆದರೆ ಸರ್ವಾಧಾರನಾದ ನಮ್ಮ ಪ್ರಭುವಾದ ಹರಿಯಲ್ಲಿ ಸಕಲ ಜಗತ್ತೂ ಇದೆ ಎಂದು ಅತ್ಯಂತ ಮನೋಹರವಾದ ಅರ್ಥವೇ ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ಶ್ರುತೇರ್ಜಗದ್ವಿಷಯತಾಯಾಮಪ್ಯನುಕೂಲಮರ್ಥಮಾಹ – **ಅಥಾಪೀತಿ** ॥ ನಾನಾಭೂತಂ ಜಗತ್ ಇಹ ಬ್ರಹ್ಮಣಿ ಕಿಂಚನ ಕಿಂಚಿನ್ನಾಸ್ತಿ । ಕಿಂತು ಸರ್ವಂ ಚಾಸ್ತೀತ್ಯರ್ಥಸ್ಯ ಪದಸ್ವಾರಸ್ಯೇನೈವ ಲಬ್ಧೇಃ ಸರ್ವಶ್ರುತ್ಯವಿರುದ್ಧತ್ವಾಚ್ಚಾತಿಮನೋಹರ ಇತ್ಯುಕ್ತಮ್ ॥ ೯೧೯ ॥

**ವಿವರಣೆ–** ಕಿಂಚನ ಶಬ್ದಕ್ಕೆ ಜಗತ್ತು ಎಂದು ಅರ್ಥ ಮಾಡಿದರೂ ಅಷ್ಟೇ ಅರ್ಥವನ್ನು ಮಾಡಲು ಬರುವುದಿಲ್ಲ. ಕಿಂಚನ ಶಬ್ದವು ಅಲ್ಪವನ್ನೂ ಹೇಳುತ್ತದಾದ್ದರಿಂದ ಅಲ್ಪವಸ್ತುವಾದ ಜಗತ್ತು ಎಂದೇ ಅರ್ಥವನ್ನು ಮಾಡಬೇಕು. ಅದನ್ನು ನಿಷೇಧ ಮಾಡಿದರೆ ಬ್ರಹ್ಮನಲ್ಲಿ ಅಲ್ಪವಾದ ಜಗತ್ತಿಲ್ಲ, ಸರ್ವ ಜಗತ್ತೂ ಇದೆ ಎಂದು ಬ್ರಹ್ಮನ ಮಹಾ ಮಹಿಮೆಯೇ ಸಿದ್ಧವಾಗುತ್ತದೆ. ಇದು ಅತಿಮನೋಹರವಾದುದು ಎಂದು ಅಭಿಪ್ರಾಯ.

**ಬ್ರಹ್ಮಾಹಮಸ್ಮೀತಿ ವಾಕ್ಯೇ ಕಥಮೈಕ್ಯಭ್ರಮಸ್ತವ ।**
**ಸುಪಾಂಸುಲುಗಿತಿ ಸೂತ್ರೇಣ ಪ್ರಥಮಾ ಸಪ್ತಮೀ ಯತಃ ॥ ೯೨೨ ॥**

**ಅರ್ಥ–** ಬ್ರಹ್ಮಾಹಮಸ್ಮೀತಿ ವಾಕ್ಯೇ= ಬ್ರಹ್ಮಾಹಮಸ್ಮಿ ಎಂಬ ವಾಕ್ಯದಲ್ಲಿ, ತವ= ನಿನಗೆ, ಕಥಂ= ಹೇಗೆ, ಐಕ್ಯಭ್ರಮಃ= ಐಕ್ಯಭ್ರಮವು ಉಂಟಾಗುತ್ತದೆ, ಯತಃ= ಏಕೆಂದರೆ, ಸುಪಾಂಸುಲುಗಿತಿ ಸೂತ್ರೇಣ= ಸುಪಾಂ ಸು ಲುಕ್ ಎಂಬ ಸೂತ್ರದಿಂದ ಅಲ್ಲಿ, ಪ್ರಥಮಾ= ಪ್ರಥಮಾ ವಿಭಕ್ತಿಯು, ಸಪ್ತಮೀ= ಸಪ್ತಮೀ ಅರ್ಥದಲ್ಲಿ ಬಂದಿದೆ.

**ಅನುವಾದ–** 'ಬ್ರಹ್ಮಾಹಮಸ್ಮಿ' ಎಂಬ ವಾಕ್ಯದಲ್ಲಿ ನಿನಗೆ ಹೇಗೆ ಐಕ್ಯಭ್ರಮ ಉಂಟಾಗುತ್ತದೆ? ಏಕೆಂದರೆ ಅಲ್ಲಿ ಸುಪಾಂಸುಲುಕ್ ಎಂಬ ಸೂತ್ರದಿಂದ ಸಪ್ತಮೀ ವಿಭಕ್ತಿಯ ಅರ್ಥದಲ್ಲಿ ಪ್ರಥಮಾ ವಿಭಕ್ತಿಯು ಬಂದಿದೆ.

**ಭಾವವಿಲಾಸಿನೀ–** ಬ್ರಹ್ಮಾಹಮಸ್ಮಿ ಸೋಹಮಸ್ಮೀತ್ಯಾದಿವಾಕ್ಯಾನಾಮಪಿ ಅನುಕೂಲಮರ್ಥಂ ಸಪ್ರಮಾಣಕಮಾಹ – ಬ್ರಹ್ಮಾಹಮಿತಿ ॥ ೯೨೨ ॥

**ವಿವರಣೆ–** 'ಬ್ರಹ್ಮಾಹಮಸ್ಮಿ' ಎಂಬಲ್ಲಿ ಬ್ರಹ್ಮ ಪದದ ಮೇಲೆ ಪ್ರಥಮಾ ವಿಭಕ್ತಿ ಇದೆ. ಸುಪಾಂಸುಲುಕ್ ಎಂಬ ಸೂತ್ರವು ಎಲ್ಲಾ ಏಳು ವಿಭಕ್ತಿ ಪ್ರತ್ಯಯಗಳಿಗೂ ಸುಪ್ರತ್ಯಯವು ಆದೇಶವಾಗಿ ಬರುತ್ತದೆ ಎಂದು ಹೇಳುತ್ತದೆ. ಆದ್ದರಿಂದ ಈ ಪ್ರಥಮಾ ವಿಭಕ್ತಿಯು ಸಪ್ತಮೀ ವಿಭಕ್ತಿಯ ಪ್ರತ್ಯಯಕ್ಕೆ ಆದೇಶವಾಗಿ ಬಂದಿರುವುದು. ಆದ್ದರಿಂದ ಸಪ್ತಮೀ ವಿಭಕ್ತಿಯ ಅರ್ಥವನ್ನೇ ಹೇಳಬೇಕು. ಆಗ 'ಬ್ರಹ್ಮಣಿ ಅಹಮಸ್ಮಿ' 'ಬ್ರಹ್ಮನಲ್ಲಿ ನಾನು ಇದ್ದೇನೆ' ಎಂದು ಅರ್ಥವಾಗುತ್ತದೆ. ಇಲ್ಲಿ ಆಧಾರಾಧೇಯಭಾವವು ತೋರುವುದರಿಂದ ಐಕ್ಯ ಭ್ರಮವು ಬರಲು ಸಾಧ್ಯವಿಲ್ಲ ಎಂದು ಅಭಿಪ್ರಾಯ.

**ಅತೋ ಬ್ರಹ್ಮಣಿ ವರ್ತೇಽಹಮಿತ್ಯರ್ಥೇ ಶಾಸ್ತ್ರಸಮ್ಮತೇ ।**
**ಸತಿ ಸರ್ವವಿರುದ್ಧೈಕ್ಯೇ ನ ಕ್ವಚಿದ್ವಿಭ್ರಮಂ ಕುರು ॥ ೯೨೩ ॥**

**ಅರ್ಥ–** ಅತಃ= ಆದ್ದರಿಂದ, ಅಹಂ= ನಾನು, ಬ್ರಹ್ಮಣಿ= ಬ್ರಹ್ಮನಲ್ಲಿ, ವರ್ತೇ= ಇದ್ದೇನೆ, ಇತಿ= ಎಂದು, ಶಾಸ್ತ್ರಸಮ್ಮತೇ= ಶಾಸ್ತ್ರಸಮ್ಮತವಾದ, ಅರ್ಥೇ ಸತೀ= ಅರ್ಥವು ಇರುವಾಗ, ಸರ್ವವಿರುದ್ಧೈಕ್ಯೇ= ಸರ್ವಪ್ರಮಾಣ ವಿರುದ್ಧವಾದ ಐಕ್ಯದ ವಿಷಯದಲ್ಲಿ, ಕ್ವಚಿತ್= ಎಲ್ಲಿಯೂ, ವಿಭ್ರಮಂ ನ ಕುರುಂ= ಭ್ರಾಂತಿಯನ್ನು ಹೊಂದಬೇಡ.

**ಅನುವಾದ–** ಆದ್ದರಿಂದ ನಾನು ಬ್ರಹ್ಮನಲ್ಲಿ ಇದ್ದೇನೆ ಎಂಬ ಶಾಸ್ತ್ರಸಮ್ಮತವಾದ ಅರ್ಥವು ಇರುವಾಗ ಸರ್ವಪ್ರಮಾಣವಿರುದ್ಧವಾದ ಜೀವಬ್ರಹ್ಮೈಕ್ಯದ ವಿಷಯದಲ್ಲಿ ಎಂದೂ ಭ್ರಾಂತಿಯನ್ನು ಹೊಂದಬೇಡ.

**ಕಿಂಚ ಚಿನ್ಮಾತ್ರಯೋರೈಕ್ಯೇ ಕಾರ್ಯಂ ದ್ವಿಪದಶಿಕ್ಷಣಂ ।**
**ಖಂಜವದ್ವಾಚರೇತ್ ಸ್ವಾರ್ಥೇ ವಾಕ್ಯಂ ತತ್ರೈಕರಕ್ಷಣೇ ॥ ೯೨೪ ॥**

**ಅರ್ಥ–** ಕಿಂಚ= ಮತ್ತು, ಚಿನ್ಮಾತ್ರಯೋಃ ಐಕ್ಯೇ= ಚಿನ್ಮಾತ್ರಗಳಿಗೆ ಐಕ್ಯವನ್ನು ಹೇಳುವುದಾದರೆ, ದ್ವಿಪದಶಿಕ್ಷಣಂ= ಎರಡು ಪದಗಳಿಗೂ ಶಿಕ್ಷೆಯು, ಕಾರ್ಯಂ= ಮಾಡಲ್ಪಡಬೇಕಾಗುತ್ತದೆ, ತತ್ರ= ಆ ಎರಡು ಪದಗಳಲ್ಲಿ, ಏಕರಕ್ಷಣೇ= ಒಂದನ್ನು ರಕ್ಷಿಸಿದರೆ, ವಾಕ್ಯಂ= ಆ ವಾಕ್ಯವು, ಖಂಜವದ್ವಾ= ಒಂದು ಕಾಲಿಲ್ಲದ ಕುಂಟನಂತಾದರೂ, ಸ್ವಾರ್ಥೇ= ತನ್ನ ವಿಷಯದ ಕಡೆಗೆ, ಚರೇತ್= ಹೋಗುತ್ತದೆ.

**ಅನುವಾದ–** ಮತ್ತು ಚಿನ್ಮಾತ್ರಗಳಿಗೆ ಐಕ್ಯವನ್ನು ಹೇಳುವುದಾದರೆ ಎರಡು ಪದಗಳಿಗೂ ಲಕ್ಷಣಾವೃತ್ತಿ ಆಶ್ರಯಣರೂಪವಾದ ಶಿಕ್ಷೆಯನ್ನು ಮಾಡಬೇಕಾಗುತ್ತದೆ. ಎರಡು ಪದಗಳಲ್ಲಿ ಒಂದು ಪದವನ್ನು ರಕ್ಷಿಸಿದರೂ ಈ ವಾಕ್ಯವು ಒಂದು ಕಾಲಿಲ್ಲದ

ಕುಂಟನಂತೆ ತನ್ನ ಅರ್ಥದ ಕಡೆಗೆ ಹೋಗುತ್ತದೆ ಎಂದರೆ ತನ್ನ ಅರ್ಥವನ್ನು ಪ್ರತಿಪಾದಿಸುತ್ತದೆ.

**ಭಾವವಿಲಾಸಿನೀ–** ಪ್ರಕಾರಾಂತರೇಣಾಪಿ ಪರಕೀಯಾರ್ಥೇ ದೋಷಂ ವದನ್ ಸ್ವಮೇವೋಪಪಾದಯತಿ – **ಕಿಂಚೇತಿ** ॥ ದ್ವಿಪದಶಿಕ್ಷಣಂ ಅಹಂಪದಸ್ಯ ಬ್ರಹ್ಮಪದಸ್ಯ ಚ ಮುಖ್ಯಾರ್ಥಪರಿತ್ಯಾಗಾಖ್ಯ ಶಿಕ್ಷಣಮ್ । ಖಂಜವತ್ ಏಕಪಾದವತ್ । ತತ್ರ ಪದದ್ವಯಮಧ್ಯೇ । ಏಕರಕ್ಷಣೇ ಏಕಪದಮಾತ್ರಲಕ್ಷಣಾಂ ಕೃತ್ವಾ ಪದಾಂತರಸ್ಯ ಮುಖ್ಯಾರ್ಥಾಪರಿತ್ಯಾಗಾಖ್ಯರಕ್ಷಣೇ ॥ ೯೨೪ ॥

**ವಿವರಣೆ–** 'ಬ್ರಹ್ಮಾಹಮಸ್ಮಿ' ಎಂಬುದು ಈಗ ವಿಚಾರ ಮಾಡುತ್ತಿರುವ ವಾಕ್ಯ. ಕೇವಲ ಚೈತನ್ಯಗಳಿಗೆ ಐಕ್ಯವನ್ನು ಹೇಳುವುದಾದರೆ ಬ್ರಹ್ಮಪದಕ್ಕೆ ಸರ್ವಜ್ಞತ್ವವಿಶಿಷ್ಟಚೈತನ್ಯವೆಂಬ ಸ್ವಾಭಾವಿಕ ಅರ್ಥದಲ್ಲಿ ಸರ್ವಜ್ಞತ್ವ ವಿಶಿಷ್ಟಾಂಶವನ್ನು ತ್ಯಜಿಸಿ ಕೇವಲ ಚೈತನ್ಯ ಎಂದು ಅರ್ಥಮಾಡಬೇಕು. ಹಾಗೆಯೇ ಅಹಂ ಶಬ್ದಕ್ಕೆ ಅಂತಃಕರಣ ವಿಶಿಷ್ಟ ಚೈತನ್ಯ ಎಂಬ ಮುಖ್ಯಾರ್ಥವನ್ನು ಬಿಟ್ಟು ಕೇವಲ ಚೈತನ್ಯ ಎಂದು ಅರ್ಥವನ್ನು ಮಾಡಬೇಕು. ಹೀಗೆ ಮಾಡಿ ಎರಡು ಪದಗಳಿಗೂ ಲಕ್ಷಣಾವೃತ್ತಿಯನ್ನು ಆಶ್ರಯಿಸಿದರೆ ಅವುಗಳ ಅರ್ಥವನ್ನು ಕತ್ತರಿಸುವುದರಿಂದ ಎರಡು ಪದಗಳಿಗೂ ಶಿಕ್ಷೆಯನ್ನು ಕೊಟ್ಟಂತೆ ಆಗುತ್ತದೆ. ಅದರ ಬದಲು ಅವುಗಳಲ್ಲಿ ಒಂದಾದ ಬ್ರಹ್ಮ ಪದಕ್ಕೆ ಬ್ರಹ್ಮನಲ್ಲಿ ಎಂದು ಅರ್ಥ ಮಾಡಿದರೆ ಆಗ ಆ ವಾಕ್ಯವು ನಾನು ಬ್ರಹ್ಮನಲ್ಲಿ ಇದ್ದೇನೆ ಎಂಬ ಅಬಾಧಿತವಾದ ಅರ್ಥವನ್ನು ಹೇಳುತ್ತದೆ. ಅಹಂ ಪದಕ್ಕೆ ನಾವು ಲಕ್ಷಣಾಶ್ರಯವನ್ನು ಮಾಡುವುದಿಲ್ಲ. ಎರಡು ಪದಗಳಿಗೂ ಲಕ್ಷಣಾಶ್ರಯವನ್ನು ಮಾಡುವುದಕ್ಕಿಂತಲೂ, ಒಂದೇ ಪದಕ್ಕೆ ಲಕ್ಷಣಾಶ್ರಯವನ್ನು ಮಾಡುವುದು ಶ್ರೇಷ್ಠವಾದುದು ಎಂದು ಅಭಿಪ್ರಾಯ.

**ಅತೋ ಬ್ರಹ್ಮಾಭಿಸಂಬಂಧಾದ್ಬ್ರಹ್ಮಶಬ್ದೋಽಸ್ತು ಜೀವಗಃ ।**
**ಅಹಂ ಬ್ರಹ್ಮನಿಯಮ್ಯೋಽಸ್ಮೀತ್ಯರ್ಥಶ್ಚ ತ್ವಖಿಲಪ್ರಿಯಃ ॥ ೯೨೫ ॥**

**ಅಂಗೀಕೃತ್ಯೇದಮುದಿತಂ ವಸ್ತುತಸ್ತ್ವನುಶಾಸನೇ ।**
**ಅನುಶಿಷ್ಟಾರ್ಥಕಥನಾತ್ ಸ್ವಾರ್ಥತ್ಯಾಗೋ ನ ಮೇ ಕ್ವಚಿತ್ ॥ ೯೨೬ ॥**

**ಅರ್ಥ–** ಅತಃ= ಆದ್ದರಿಂದ, ಬ್ರಹ್ಮಾಭಿಸಂಬಂಧಾತ್= ಬ್ರಹ್ಮನ ಸಂಬಂಧವು ಇರುವ ಕಾರಣದಿಂದ, ಬ್ರಹ್ಮಶಬ್ದಃ= ಈ ಬ್ರಹ್ಮಶಬ್ದವು, ಜೀವಗಃ= ಜೀವನನ್ನು ಹೇಳಲಿ, ಅಹಂ ಬ್ರಹ್ಮನಿಯಮ್ಯೋಽಸ್ಮಿ ಇತಿ= ನಾನು ಬ್ರಹ್ಮನಿಂದ ನಿಯಮ್ಯನಾಗಿದ್ದೇನೆ ಎಂಬ, ಅಖಿಲಪ್ರಿಯಃ= ಎಲ್ಲರಿಗೂ ಪ್ರಿಯವಾದ, ಅರ್ಥಃ= ಅರ್ಥವು, ಅಸ್ತಿ= ಇರಲಿ, ಇದಂ= ಈ ಬ್ರಹ್ಮಶಬ್ದಕ್ಕೆ ಲಕ್ಷಣಾವೃತ್ತಿಯು, ಅಂಗೀಕೃತ್ಯ ಉದಿತಂ= ಅಂಗೀಕಾರವಾದದಿಂದ ಹೇಳಲ್ಪಟ್ಟಿದೆ, ವಸ್ತುತಸ್ತು= ನಿಜವಾಗಿ ವಿಚಾರ ಮಾಡಿದರೆ, ಅನುಶಾಸನೇ= ವ್ಯಾಕರಣದಲ್ಲಿ,

ಅನುಶಿಷ್ಟಾರ್ಥಕಥನಾತ್= ಹೇಳಿದ ಅರ್ಥವನ್ನೇ ಹೇಳುವುದರಿಂದ, ಮೇ= ನನಗೆ, ಕ್ವಚಿತ್= ಎಲ್ಲಿಯೂ, ಸ್ವಾರ್ಥತ್ಯಾಗಃ ನ= ಸ್ವಾರ್ಥಪರಿತ್ಯಾಗವಿಲ್ಲ.

**ಅನುವಾದ–** ಆದ್ದರಿಂದ ಬ್ರಹ್ಮ ಶಬ್ದವು ಬ್ರಹ್ಮನ ಸಂಬಂಧವಿರುವ ಕಾರಣ ಜೀವನನ್ನು ಹೇಳಲಿ. ಈ ವಾಕ್ಯಕ್ಕೆ ನಾನು ಬ್ರಹ್ಮನಿಂದ ನಿಯಮ್ಯನಾಗಿದ್ದೇನೆ ಎಂಬ ಅಖಿಲಪ್ರಿಯವಾದ ಅರ್ಥವೇ ಇರಲಿ. ಇದನ್ನು ಲಕ್ಷಣಾವೃತ್ತಿ ಎಂದು ಅಂಗೀಕರಿಸಿ ಹೇಳುತ್ತಿದ್ದೇವೆ. ಆದರೆ ನಿಜವಾಗಿ ಲಕ್ಷಣಾವೃತ್ತಿ ಇಲ್ಲ. ಏಕೆಂದರೆ ವ್ಯಾಕರಣದಲ್ಲಿ ಹೇಳಿದ ಅರ್ಥವನ್ನೇ ನಾವು ಹೇಳುತ್ತಿರುವುದರಿಂದ ನಮಗೆ ಎಂದೂ ಸ್ವಾರ್ಥತ್ಯಾಗವಿಲ್ಲ.

**ಭಾವವಿಲಾಸಿನೀ–** ಅತಃ ಏಕಪದರಕ್ಷಣಸ್ಯ ನ್ಯಾಯ್ಯತ್ವಾತ್ । ಬ್ರಹ್ಮ ಬ್ರಹ್ಮಸಂಬಂಧೀತಿ ಜೀವಗೋಽಸ್ತು ಜೀವಪ್ರತಿಪಾದಕೋಽಸ್ತು । ಅಹಂ ಬ್ರಹ್ಮ ಲಕ್ಷಣಯಾ ಬ್ರಹ್ಮಪದಪ್ರತಿಪಾದ್ಯೋಽಸ್ಮೀತಿ ವಾಕ್ಯಾರ್ಥೋಽಸ್ತು। ಪದದ್ವಯಲಕ್ಷಣಾಪಕ್ಷಾದಪ್ಯೇಕ-ಪದಲಕ್ಷಣಾಯಾ ಏವ ನ್ಯಾಯ್ಯತ್ವಾದಿತಿ ಭಾವಃ ॥ ಅಯಮಪ್ಯಂಗೀಕಾರವಾದ ಇತ್ಯಾಹ – **ಅಂಗೀಕೃತ್ಯೇತಿ** ॥ ಅನುಶಾಸನೇ ಸಪ್ತಸು ಪ್ರಥಮೇತ್ಯಾದಿಶಬ್ದಾನುಶಾಸನಶಾಸ್ತ್ರೇ । ಅನುಶಿಷ್ಟಶ್ಚ ಮುಖ್ಯಾರ್ಥ ಏವೇತಿ ಭಾವಃ ॥ ೯೨೫-೯೨೬ ॥

**ವಿವರಣೆ–** ಎರಡು ಪದಗಳಿಗೂ ಲಕ್ಷಣಾ ಮಾಡುವುದಕ್ಕಿಂತಲೂ ಒಂದೇ ಪದಕ್ಕೆ ಲಕ್ಷಣಾ ಮಾಡುವುದು ಶ್ರೇಷ್ಠವಾದ್ದರಿಂದ ಬ್ರಹ್ಮಶಬ್ದಕ್ಕೆ ಬ್ರಹ್ಮಸಂಬಂಧಿ ಎಂದು ಅರ್ಥವನ್ನು ಮಾಡಿ ನಾನು ಬ್ರಹ್ಮಸಂಬಂಧಿಯಾಗಿದ್ದೇನೆ ಎಂಬ ಅರ್ಥವನ್ನು ತೆಗೆದುಕೊಂಡು ಎಲ್ಲರಿಗೂ ಪ್ರಿಯವಾದ ನಾನು ಬ್ರಹ್ಮನಿಯಮ್ಯನಾಗಿದ್ದೇನೆ ಎಂಬ ಅರ್ಥವನ್ನೇ ಹೇಳು. ಲಕ್ಷಣಾವೃತ್ತಿಯನ್ನು ಅಂಗೀಕರಿಸಿ ನಾನು ಇದನ್ನು ಹೇಳುತ್ತಿದ್ದೇನೆ. ಆದರೆ ವ್ಯಾಕರಣದಲ್ಲಿ ಈ ಅರ್ಥವು ಹೇಳಲ್ಪಟ್ಟಿರುವುದರಿಂದ ನಾನು ಸ್ವಾರ್ಥಪರಿತ್ಯಾಗವನ್ನು ಮಾಡುವುದಿಲ್ಲವಾದ ಕಾರಣ ನಾನು ಲಕ್ಷಣಾವೃತ್ತಿಯನ್ನೇ ಅನುಸರಿಸುವುದಿಲ್ಲ. 'ಬ್ರಹ್ಮಾಹಮಸ್ಮಿ' ಎಂಬ ವಾಕ್ಯದಲ್ಲಿ ಬ್ರಹ್ಮಶಬ್ದಕ್ಕೆ ಬ್ರಹ್ಮಸಂಬಂಧಿ ಎಂದು ಲಕ್ಷಣಾವೃತ್ತಿಯನ್ನು ಅಂಗೀಕರಿಸಿದರೂ ಒಂದೇ ಪದಕ್ಕೆ ಲಕ್ಷಣಾವೃತ್ತಿಯನ್ನು ಒಪ್ಪುವುದರಿಂದ ನನ್ನ ಮತವೇ ಶ್ರೇಷ್ಠವಾಗುತ್ತದೆ. ವಸ್ತುತಸ್ತು ಒಂದು ಪದಕ್ಕೂ ಲಕ್ಷಣಾವೃತ್ತಿ ಇಲ್ಲ. ಏಕೆಂದರೆ ಸಪ್ತಸು ಪ್ರಥಮಾ ಎಂಬ ಸೂತ್ರವು ಪ್ರಥಮಾ ವಿಭಕ್ತಿಗೆ ಏಳು ವಿಭಕ್ತಿಗಳ ಅರ್ಥಗಳನ್ನೂ ಹೇಳುತ್ತಾ ಷಷ್ಠಿ ವಿಭಕ್ತಿಯ ಅರ್ಥವಿದೆ ಎಂದೂ ಹೇಳುತ್ತದೆ. ಷಷ್ಠಿ ವಿಭಕ್ತಿಯ ಅರ್ಥವೇ ಸಂಬಂಧ. ಆದ್ದರಿಂದ ಬ್ರಹ್ಮ ಶಬ್ದಕ್ಕೆ ಬ್ರಹ್ಮಸಂಬಂಧವುಳ್ಳವನು ಎಂದು ಅರ್ಥವನ್ನು ಮಾಡಿದರೆ ಅದು ವಾಚ್ಯಾರ್ಥವೇ ಹೊರತು ಲಕ್ಷ್ಯಾರ್ಥವಾಗುವುದಿಲ್ಲ. ಆದ್ದರಿಂದ ಒಂದು ಪದಕ್ಕೂ ಲಕ್ಷಣಾವೃತ್ತಿಯನ್ನು ಆಶ್ರಯಿಸದೇ ನಮ್ಮ ಅರ್ಥವೇ ಶ್ರೇಷ್ಠವಾದುದು ಎಂದು ಅಭಿಪ್ರಾಯ.

**ಹಿರಣ್ಯಶೃಂಗಂ ವರುಣಂ ಪ್ರಪದ್ಯೇ ಸ ಪುನಾತು ಮಾಂ ।**
**ಇತ್ಯರ್ಥನಂ ಚ ತತ್ರೋಕ್ತಂ ಗಚ್ಛೇದ್ಬ್ರಹ್ಮ ಸಲೋಕತಾಂ ।**
**ಇತ್ಯುಕ್ತಬ್ರಹ್ಮಸಾಲೋಕ್ಯಂ ಮುಖ್ಯೈಕ್ಯೇ ನ ಹಿ ಶೋಭತೇ ॥ ೯೨೭ ॥**

**ಅರ್ಥ–** ಮುಖ್ಯೈಕ್ಯೇ= ಜೀವಬ್ರಹ್ಮರಿಗೆ ಮುಖ್ಯವಾದ ಅಭೇದವನ್ನು ಅಂಗೀಕರಿಸಿದರೆ, ತತ್ರೋಕ್ತಂ= ಅಲ್ಲಿಯೇ ಹೇಳಲ್ಪಟ್ಟ, ಹಿರಣ್ಯಶೃಂಗಂ ವರುಣಂ ಪ್ರಪದ್ಯೇ ಸ ಪುನಾತು ಮಾಂ= ಹಿರಣ್ಯ ಶೃಂಗವುಳ್ಳ ವರುಣನನ್ನು ಶರಣುಹೊಂದುತ್ತೇನೆ, ಅವನು ನನ್ನನ್ನು ರಕ್ಷಿಸಲಿ, ಇತ್ಯರ್ಥನಂ= ಎಂಬ ಪ್ರಾರ್ಥನೆಯೂ, ಗಚ್ಛೇದ್ಬ್ರಹ್ಮಸಲೋಕತಾಂ= ಬ್ರಹ್ಮನ ಸಮಾನ ಲೋಪವನ್ನು ಹೊಂದುತ್ತಾನೆ, ಇತ್ಯುಕ್ತಬ್ರಹ್ಮಸಾಲೋಕ್ಯಂ= ಎಂದು ಹೇಳಲ್ಪಟ್ಟ ಬ್ರಹ್ಮಸಾಲೋಕ್ಯರೂಪವಾದ ಫಲವೂ, ನ ಶೋಭತೇ ಹಿ= ಶೋಭಿಸುವುದಿಲ್ಲವಷ್ಟೇ.

**ಅನುವಾದ– ಜೀವಬ್ರಹ್ಮರಿಗೆ ಮುಖ್ಯವಾದ ಐಕ್ಯವನ್ನೇ ಅಂಗೀಕರಿಸಿದರೆ ಅದೇ ಸೂಕ್ತದಲ್ಲಿ ಹೇಳಿದ ಹಿರಣ್ಯಶೃಂಗನಾದ ವರುಣನನ್ನು ಶರಣು ಹೊಂದುತ್ತೇನೆ, ಅವನು ನನ್ನನ್ನು ರಕ್ಷಿಸಲಿ ಎಂಬ ಪ್ರಾರ್ಥನೆಯೂ ಅಧಿಕಾರಿಯು ಬ್ರಹ್ಮಸಾಲೋಕ್ಯವನ್ನು ಹೊಂದುತ್ತಾನೆ ಎಂದು ಹೇಳಿದ ಬ್ರಹ್ಮಸಾಲೋಕ್ಯ-ರೂಪವಾದ ಫಲವೂ ಸಹ ಉಪಪನ್ನವಾಗುವುದಿಲ್ಲವಷ್ಟೇ?**

**ಭಾವವಿಲಾಸಿನೀ–** ಅಸ್ತು ವೈದಿಕಪದಾನಾಮನುಶಾಸನಬಲಾದರ್ಥದ್ವಯಮಪಿ ಮುಖ್ಯಮ್ । ತಥಾಪಿ ಭವದುಕ್ತಾರ್ಥಸ್ಯೈವಾಂಗೀಕಾರೇ ಕೋ ಹೇತುರಿತ್ಯತ ಆಹ – **ಹಿರಣ್ಯಶೃಂಗಮಿತಿ** ॥ ಅರ್ಥನಂ ತೀರ್ಥಪ್ರಾರ್ಥನಮ್ । ಮನೋವಾಕ್ಕಾಯಕೃತಪಾಪಪರಿಹಾರಪ್ರಾರ್ಥನಂ ಚ । ಯಜುರ್ವೇದೋಪನಿಷದಿ ಅಘಮರ್ಷಣಸೂಕ್ತಸ್ಥಂ ಹಿ ಬ್ರಹ್ಮಾಹಮಸ್ಮೀತಿ ವಾಕ್ಯಮ್ । ತತ್ರ ಹಿ ವರುಣಪ್ರಾರ್ಥನಾದಿಕಂ ಬಹುಧಾ ಜೀವಸ್ಯೋಚ್ಯತೇ । ತಚ್ಚ ಸಾಕ್ಷಾತ್ ಬ್ರಹ್ಮತ್ವೇ ನ ಘಟತೇ । ಅತಃ ಸಪ್ತಮೀಸ್ವೀಕಾರ ಇತಿ ಭಾವಃ ॥ ೯೨೭ ॥

**ವಿವರಣೆ–** ಬ್ರಹ್ಮ ಎಂಬಲ್ಲಿರುವ ಪ್ರಥಮಾ ವಿಭಕ್ತಿಗೆ ಪ್ರಥಮಾವಿಭಕ್ತಿಯ ಅರ್ಥವನ್ನೂ ಹೇಳಬಹುದು, ಸಪ್ತಮೀ ವಿಭಕ್ತಿಯ ಅರ್ಥವನ್ನೂ ಹೇಳಬಹುದು. ನೀವು ಹೇಳುವಂತೆ ಸಪ್ತಮೀ ವಿಭಕ್ತಿಯ ಅರ್ಥವನ್ನೇ ಹೇಳುವುದಕ್ಕೆ ಏನು ನಿಯಾಮಕ ಎಂದು ಕೇಳಿದರೆ ಅದಕ್ಕೆ ಇಲ್ಲಿ ಉತ್ತರವನ್ನು ಹೇಳುತ್ತಾರೆ. ಸಪ್ತಮೀ ವಿಭಕ್ತಿಯ ಅರ್ಥವನ್ನು ಅಂಗೀಕರಿ-ಸದಿದ್ದರೆ ಇದೇ ಸೂಕ್ತದಲ್ಲಿ ಹೇಳಿದ ಪ್ರಾರ್ಥನೆಯು ಮತ್ತು ಫಲವು ಅನುಪಪನ್ನ-ವಾಗುವುದರಿಂದ ಸಪ್ತಮೀ ಅರ್ಥವನ್ನು ಆಶ್ರಯಿಸಬೇಕು ಎಂದು ತಾತ್ಪರ್ಯ.

**ಅಹಮೇವಾಹಮಿತ್ಯನ್ಯಾತ್ಮತಾಮಂತೇ ಪ್ರತಿಕ್ಷಿಪನ್ ।**
**ಜೀವೋ ಜ್ಯೋತಿಃ ಪುರಾದ್ರೋಽಹಮಿತ್ಯೇವೋಕ್ತ್ವಾ ಸ ಮಜ್ಜತಿ ।**
**ಯದ್ವ್ಯಹಿಂ ಜಾತಿಜೀವಾದಾವನುಶಾಸ್ತಿ ಸ ಪಾಣಿನಿಃ ॥ ೯೨೮ ॥**

**ಅರ್ಥ–** ಅಹಮೇವ ಅಹಂ= ನಾನು ನಾನೇ ಎಂದು, ಅನ್ಯಾತ್ಮತಾಂ= ಅನ್ಯಸ್ವರೂಪತ್ವವನ್ನು, ಪ್ರತಿಕ್ಷಿಪನ್= ನಿರಾಕರಿಸುವ, ಜ್ಯೋತಿಃ ಜೀವಃ= ಜ್ಯೋತಿರೂಪನಾದ ಜೀವನು, ಪುರಾ= ಮೊದಲು, ಆರ್ದ್ರೋಽಹಂ= ನಾನು ಒದ್ದೆಯಾಗಿದ್ದೇನೆ, ಇತ್ಯೇವೋಕ್ತ್ವಾ= ಎಂದಿಷ್ಟೇ ಹೇಳಿ, ಸಃ= ಅವನು, ಮಜ್ಜತಿ= ಮುಳುಗುತ್ತಾನೆ, ಯತ್= ಏಕೆಂದರೆ, ಬೃಹಿಂ= ಬೃಹ ಧಾತುವನ್ನು, ಸ ಪಾಣಿನಿಃ= ಆ ಪಾಣಿನಿಯು, ಜಾತಿಜೀವಾದೌ= ಜಾತಿ ಜೀವ ಮೊದಲಾದ ಅರ್ಥಗಳಲ್ಲಿ, ಅನುಶಾಸ್ತಿ= ಅನುಶಾಸನವನ್ನು ಮಾಡುತ್ತಾನೆ.

**ಅನುವಾದ–** ಸ್ನಾನ ಮಾಡುವ ಜ್ಯೋತೀರೂಪವಾದ ಜೀವನು ಕೊನೆಯಲ್ಲಿ ನಾನು ನಾನೇ ಆಗಿದ್ದೇನೆ ಎಂದು ಹೇಳಿ ಅನ್ಯಸ್ವರೂಪತ್ವವನ್ನು ನಿರಾಕರಣೆ ಮಾಡಿ ನೀರಿನಲ್ಲಿ ಮುಳುಗುತ್ತಾನೆ. ಆ ಪಾಣಿನಿಯು ಬೃಹಿ ಧಾತುವನ್ನು ಜಾತಿ, ಜೀವ ಮೊದಲಾದ ಅರ್ಥಗಳಲ್ಲಿ ಅನುಶಾಸನ ಮಾಡಿರುವುದರಿಂದ (ಬ್ರಹ್ಮಶಬ್ದಕ್ಕೆ ಜೀವವೆಂದೇ ಅರ್ಥವಾಗುತ್ತದೆ).

**ಭಾವವಿಲಾಸಿನೀ– ಯುಕ್ತ್ಯಂತರಂ ಚಾಹ – ಅಹಮೇವಾಹಮಿತಿ ॥** ಅನ್ಯಾತ್ಮತಾಂ ಅಹಮಿತ್ಯುಕ್ತ-ಸ್ವಸ್ವರೂಪಾದನ್ಯಸ್ಯ ಪರಬ್ರಹ್ಮಣೋಽಪಿ ಸ್ವಸ್ವರೂಪತಾಮ್ ಅಂತೇ ಉಪಸಂಹಾರೇ । ಪುರಾ ಪೂರ್ವವಾಕ್ಯೇ । ಅಹಂಪದಸ್ಯ ಸರ್ವತ್ರ ಸಂಬಂಧಾತ್ । ಬ್ರಹ್ಮಾಹಮಸ್ಮೀತ್ಯಾದಿವಾಕ್ಯೇ ಜೀವೋಽಹಮಸ್ಮೀತ್ಯಾದ್ಯೇವೋಕ್ತ್ವೇತ್ಯರ್ಥಃ । ನತು ಸ್ವಸ್ಯ ಪರಬ್ರಹ್ಮಣಾ ಸಹೈಕ್ಯಮಿತ್ಯೇವ-ಕಾರೇಣಾಹ । ಸಃ ಸ್ನಾತಾ। ಯದ್ಯಸ್ಮಾತ್ । ಬೃಹಿಂ ಬೃಹಧಾತುಮ್ । ಬೃಹಜಾತಿಜೀವ-ಕಮಲಾಸನಶಬ್ದರಾಶಿಷ್ವಿತಿ ಪಾಣಿನೇರನುಶಾಸನಾದಿತಿ ಭಾವಃ । ಅಯಮಾಶಯಃ । ಆರ್ದ್ರಂ ಜ್ವಲತಿ ಜ್ಯೋತಿರಹಮಸ್ಮಿ । ಜ್ಯೋತಿರ್ಜ್ವಲತಿ ಬ್ರಹ್ಮಾಹಮಸ್ಮಿ । ಯೋಽಹಮಸ್ಮಿ ಬ್ರಹ್ಮಾಹಮಸ್ಮಿ । ಅಹಮಸ್ಮಿ ಬ್ರಹ್ಮಾಹಮಸ್ಮಿ । ಅಹಮೇವಾಹಂ ಮಾಂ ಜುಹೋಮಿ ಸ್ವಾಹೇತಿ ಶ್ರುತಾವುಪ-ಸಂಹಾರವಾಕ್ಯೇಽಹಮೇವಾಹಂ ಮಾಂ ಜುಹೋಮಿ ಸ್ವಾಹೇತಿ ಶ್ರೂಯತೇ । ತತ್ರ ಚ ವಿಶೇಷ್ಯಸಂಗತೈವಕಾರಸ್ಯಾನ್ಯಯೋಗವ್ಯಚ್ಛೇದಾರ್ಥಕತ್ವಾತ್ ಅಹಮೇವಹಮಸ್ಮಿ ನ ತ್ವನ್ಯಃ ಪರಮಾತ್ಮಾಪ್ಯಹಮಸ್ಮಿ । ತೇನ ಕಾರಣೇನ ಮಯಿ ಪಾಪಾನಾಂ ಸಂಭಾವಿತತ್ವಾತ್ ಮನ್ನಿಷ್ಠಪಾಪಾಖ್ಯತೂಲದಾಹಾಯ ಮಾಂ ತ್ವಯಿ ಜುಹೋಮಿ ಸ್ವಾಹೇತ್ಯರ್ಥಲಾಭಾತ್ ಬ್ರಹ್ಮಾಹಮಸ್ಮೀತಿ ಪೂರ್ವವಾಕ್ಯೇಽಪಿ ಜೀವೋಽಹಮಸ್ಮೀತ್ಯೇವಾರ್ಥೋ ವಾಚ್ಯಃ। ಬ್ರಹ್ಮಶಬ್ದಸ್ಯ ಜೀವೇಽಪ್ಯನುಶಾಸನಾತ್ । ನತು ಪರಂ ಬ್ರಹ್ಮಾಹಮಸ್ಮೀತ್ಯರ್ಥೋ ವಕ್ತುಂ ಯುಕ್ತಃ । ತಸ್ಯೋಕ್ತವಿಧಯೋಪಸಂಹಾರವಾಕ್ಯವಿರುದ್ಧತ್ವಾತ್ । ಮಜ್ಜತೀತ್ಯುಕ್ತಸ್ನಾನರೂಪಕ್ರಿಯಾ-ವಿರೋಧಾಚ್ಚೇತಿ । ಇದಂ ಚೋಪಲಕ್ಷಣಮ್ । ಬ್ರಹ್ಮಾಹಮಸ್ಮೀತಿ ಪ್ರಾಕ್‌ಸ್ವೇನೈವೋಕ್ತವಾಕ್ಯಸ್ಯ ಯೋಹಮಸ್ಮಿ ಬ್ರಹ್ಮಾಹಮಸ್ಮಿ ಅಹಮಸ್ಮಿ ಬ್ರಹ್ಮಾಹಮಸ್ಮೀತ್ಯುತ್ತರವಾಕ್ಯದ್ವಯೇ ಸ್ವೇನೈವಾವಶ್ಯಕ-ಕ್ರಿಯಾಧ್ಯಾಹಾರೇಣ ಬ್ರಹ್ಮಾಹಮಸ್ಮಿ ಬ್ರಹ್ಮಾಹಮಸ್ಮೀತಿ ತತ್ರ ತತ್ರ ಯೋ ವದತಿ ಸಃ ಬ್ರಹ್ಮಶಬ್ದಸ್ಯ ಜೀವೇಽಪ್ಯನುಶಾಸನಾತ್ ಅಹಮಸ್ಮ್ಯಹಮಸ್ಮೀತ್ಯೇವಾಹ । ಅಹಂಶಬ್ದವಾಚ್ಯೋ

ಜೀವೋऽಸ್ಮೀತ್ಯೇವಾಹೇತಿ ಯಾವತ್ । ಏತದ್ವಾಕ್ಯಸಮಾನಾರ್ಥಕಂ ತದ್ವಾಕ್ಯಮಿತಿ ಭಾವಃ । ನತು ಪರಬ್ರಹ್ಮಾಹಮಸ್ಮೀತ್ಯಾಹೇತಿ ವ್ಯಾಖ್ಯಾ । ತಸ್ಮಾದಹಮೇವಾಹಂ ನತ್ವನ್ಯೋऽಪ್ಯಹಮಿತ್ಯುಪಸಂಹಾರಾತ್ । ಅನ್ಯಥಾಹಮಸ್ಮೀತ್ಯಸ್ಯ ಸಿದ್ಧಾನುವಾದಕತ್ವೇನ ಸ್ಥಾನದ್ವಯೇ ಚ ವೈಯರ್ಥ್ಯಾತ್ । ಬ್ರಹ್ಮಾಹಮಸ್ಮೀತಿ ಸ್ಥಾನದ್ವಯಸ್ಥವಾಕ್ಯಯೋರಪಿ ಜ್ಯೋತಿರ್ಜ್ವಲತಿ ಬ್ರಹ್ಮಾಹಮಸ್ಮೀತಿ ಪೂರ್ವವಾಕ್ಯೋಕ್ತಾರ್ಥಾನುವಾದಕತ್ವೇನ ವೈಯರ್ಥ್ಯಾತ್ । ನ ಚಾಭ್ಯಾಸಾರ್ಥಂ ಪುನರ್ವಚನಮಿತಿ ವಾಚ್ಯಮ್ । ಅನುವಾದಾಪ್ರಾಮಾಣ್ಯ ಪಕ್ಷೇऽಭ್ಯಾಸಸ್ಯಾಪ್ಯಪ್ರಯೋಜಕತ್ವಾದಿತ್ಯಪಿ ದ್ರಷ್ಟವ್ಯಮ್ । ಪ್ರಕರಣಾನುಸಾರೇಣೈವ ಪುರೇತ್ಯುಕ್ತಮ್ । ವಸ್ತುಗತ್ಯಾऽನಯೋರ್ವಾಕ್ಯಯೋರರ್ಥಪರ್ಯಾಲೋಚನಾಯಾಮ್ ಅಹಮೇವಾಹಂ ನ ತ್ವನ್ಯ ಇತಿ ವಾಕ್ಯೇऽಹಂಪದವಾಚ್ಯಜೀವಸ್ಯ ನ ಕ್ವಾಪಿ ಪರಬ್ರಹ್ಮಭಾವ ಇತ್ಯರ್ಥಲಾಭಾತ್ । ಯೋಽಹಮಸ್ಮೀತಿ ವಾಕ್ಯೇ ವೀಪ್ಸಯಾ ಸಾರ್ವತ್ರಿಕಾಣಾಂ ಬ್ರಹ್ಮಾಹಮಸ್ಮೀತಿ ವಾಕ್ಯಾನಾಮಪ್ಯನ್ಯಾರ್ಥಕಥನಾತ್ ನ ಕ್ವಾಪಿ ಜೀವಪರಮಾತ್ಮೈಕ್ಯಾವಕಾಶ ಇತ್ಯಪ್ಯನುಸಂಧೇಯಮ್ ॥ ೯೨೮ ॥

**ವಿವರಣೆ**— ಇವು ಯಜುರ್ವೇದದ ಅಘಮರ್ಷಣ ಸೂಕ್ತದ ಸಂದರ್ಭದಲ್ಲಿ ಬರುವ ವಾಕ್ಯಗಳು. ಆ ವಾಕ್ಯಗಳ ರೀತಿ ಹೀಗಿದೆ :- 'ಆರ್ದ್ರಂ ಜ್ವಲತಿ ಜ್ಯೋತಿರಹಮಸ್ಮಿ । ಜ್ಯೋತಿರ್ಜ್ವಲತಿ ಬ್ರಹ್ಮಾಹಮಸ್ಮಿ । ಯೋಽಹಮಸ್ಮಿ ಬ್ರಹ್ಮಾಹಮಸ್ಮಿ । ಅಹಮಸ್ಮಿ ಬ್ರಹ್ಮಾಹಮಸ್ಮಿ ಅಹಮೇವಾಹಂ ಮಾಂ ಜುಹೋಮಿಸ್ವಾಹಾ ॥' ಈ ಪ್ರಕರಣದಲ್ಲಿ ಕೊನೆಯಲ್ಲಿ ಅಹಮೇವಾಹಂ ಮಾಂ ಜುಹೋಮಿಸ್ವಾಹಾ ಎಂಬ ವಾಕ್ಯವಿದೆ. ಅಲ್ಲಿ ಅಹಮೇವ ಎಂಬಲ್ಲಿ ಏವಕಾರವು ವಿಶೇಷ್ಯ ಸಂಗತವಾಗಿದೆ. ವಿಶೇಷ್ಯ ಸಂಗತವಾದ ಏವಕಾರಕ್ಕೆ ಅನ್ಯಯೋಗ ವ್ಯವಚ್ಛೇದವು ಅರ್ಥ. ಆದ್ದರಿಂದ ನಾನು ನಾನೇ ಇನ್ನೊಬ್ಬನಲ್ಲ ಎಂಬ ಅರ್ಥವು ದೊರೆಯುತ್ತದೆ. ಆದ್ದರಿಂದ ನಾನು ಬ್ರಹ್ಮನಲ್ಲ ಎಂಬ ಅರ್ಥವು ಲಭಿಸುತ್ತದೆ. 'ನಾನು ಬ್ರಹ್ಮನಲ್ಲದ ಕಾರಣದಿಂದಲೇ ನನ್ನಲ್ಲಿ ಪಾಪಗಳು ಇರಬಹುದಾದ ಕಾರಣದಿಂದ ನನ್ನಲ್ಲಿರುವ ಪಾಪಗಳೆಂಬ ಹತ್ತಿಯನ್ನು ಧಹಿಸುವುದಕ್ಕಾಗಿ ನನ್ನನ್ನೇ ನಾನು ನಿನ್ನಲ್ಲಿ ಹೋಮ ಮಾಡುತ್ತೇನೆ, ಇದು ನಿನಗೆ ಪ್ರೀತಿಯಾಗಲಿ' ಎಂದು ಉಪಸಂಹಾರವಾಕ್ಯದ ಅರ್ಥವಾಗುತ್ತದೆ. ಆದ್ದರಿಂದ 'ಬ್ರಹ್ಮಾಹಮಸ್ಮಿ' ಎಂಬ ಪೂರ್ವ ವಾಕ್ಯದಲ್ಲಿಯೂ 'ನಾನು ಜೀವನಾಗಿದ್ದೇನೆ' ಎಂಬ ಅರ್ಥವನ್ನೇ ಮಾಡಬೇಕು. ವ್ಯಾಕರಣದಿಂದಲೇ ಬ್ರಹ್ಮಶಬ್ದಕ್ಕೆ ಜೀವ ಎಂಬ ಅರ್ಥವು ಸಿದ್ಧವಾಗುವುದರಿಂದ ಇದರಲ್ಲಿ ಯಾವ ಕ್ಲೇಶವೂ ಇಲ್ಲ. ಆದರೆ 'ನಾನು ಪರಬ್ರಹ್ಮನಾಗಿದ್ದೇನೆ' ಎಂಬ ಅರ್ಥವನ್ನು ಮಾಡಬಾರದು. ಏಕೆಂದರೆ ಆ ಅರ್ಥವು ಉಪಸಂಹಾರ ವಾಕ್ಯಕ್ಕೆ ವಿರುದ್ಧವಾಗುತ್ತದೆ. ಅಲ್ಲದೇ, ಮಜ್ಜತಿ ಎಂದು ಹೇಳಿದ ಸ್ನಾನ ರೂಪ ಕ್ರಿಯೆಯ ವಿರೋಧವೂ ಉಂಟಾಗುತ್ತದೆ. ಪರಬ್ರಹ್ಮನು ಕ್ರಿಯಾಹೀನನಷ್ಟೇ? ಇದನ್ನು ಉಪಲಕ್ಷಣವಾಗಿ ತೆಗೆದುಕೊಳ್ಳಬೇಕು. 'ಬ್ರಹ್ಮಾಹಮಸ್ಮಿ' ಎಂದು ತಾನೇ ಮೊದಲು ಹೇಳಿದ ವಾಕ್ಯಕ್ಕೆ ಪುನಃ

ಸೋಹಮಸ್ಮಿ ಬ್ರಹ್ಮಾಹಮಸ್ಮಿ ಅಹಮಸ್ಮಿ ಬ್ರಹ್ಮಾಹಮಸ್ಮಿ ಎಂಬ ಉತ್ತರ ವಾಕ್ಯದ್ವಯದಲ್ಲಿ ಪುನಃ ಪುನಃ ಹೇಳುವುದರಿಂದ ಅಭ್ಯಾಸದಿಂದಲೂ ಮೊದಲನೇ ಬ್ರಹ್ಮಾಹಮಸ್ಮಿ ಎಂಬ ವಾಕ್ಯಕ್ಕೆ ನಾನು ಜೀವನಾಗಿದ್ದೇನೆ ಎಂಬ ಅರ್ಥವಿರುವುದರಿಂದ ಪುನಃ ಪುನಃ ಹೇಳಿದ ಎಲ್ಲಾ ವಾಕ್ಯಗಳಿಗೂ ನಾನು ಜೀವನಾಗಿದ್ದೇನೆ ಎಂಬ ಅರ್ಥವೇ ದೊರೆಯುತ್ತಿದೆ. ಅಹಮಸ್ಮಿ ಎಂಬುದು ಬ್ರಹ್ಮಾಹಮಸ್ಮಿ ಎಂಬುದು ಸಮಾನಾರ್ಥವನ್ನು ಹೇಳುವ ವಾಕ್ಯಗಳು. ಇಲ್ಲದಿದ್ದರೆ ಇವುಗಳಲ್ಲಿ ಪರಸ್ಪರ ವಿರೋಧವು ಉಂಟಾಗುತ್ತದೆ. ಹೀಗೆ ತಾತ್ಪರ್ಯವನ್ನು ಅಂಗೀಕರಿಸದಿದ್ದರೆ ಅಹಮಸ್ಮಿ ಎಂಬ ವಾಕ್ಯವು ಸಿದ್ಧವಾದುದನ್ನು ಅನುವಾದ ಮಾಡುವುದರಿಂದ ಅದು ಎರಡು ಸ್ಥಾನಗಳಲ್ಲಿಯೂ ವ್ಯರ್ಥವಾಗುತ್ತದೆ ಮತ್ತು ಎರಡು ವಾಕ್ಯಗಳಲ್ಲಿಯೂ ಇರುವ ಬ್ರಹ್ಮಾಹಮಸ್ಮಿ ಎಂಬ ವಾಕ್ಯ ಖಂಡಗಳು ಹಿಂದಿನ ವಾಕ್ಯದಲ್ಲಿ ಹೇಳಿದ ಜ್ಯೋತಿರ್ಜ್ವಲತಿ ಬ್ರಹ್ಮಾಹಮಸ್ಮಿ ಎಂಬ ಅರ್ಥದ ಅನುವಾದತ್ವವು ಬರುವುದರಿಂದ ಅವೂ ವ್ಯರ್ಥವಾಗುತ್ತವೆ. ಜೀವನಿಗೇ ಬ್ರಹ್ಮಭಾವವನ್ನು ಹೇಳುವುದಕ್ಕೋಸ್ಕರ ಈ ಅಭ್ಯಾಸವು ಇದೆ ಎಂಬುದು ಸರಿಯಲ್ಲ. ಅನುವಾದಕ್ಕೆ ಅಪ್ರಾಮಾಣ್ಯವನ್ನು ಅಂಗೀಕರಿಸುವ ನೀನು ಅಭ್ಯಾಸಕ್ಕೂ ಅಪ್ರಾಮಾಣ್ಯವನ್ನಾಗಲೀ ಅಥವಾ ವೈಯರ್ಥ್ಯವನ್ನಾಗಲೀ ಅಂಗೀಕರಿಸಬೇಕಾಗುತ್ತದೆ ಎಂದು ಅಭಿಪ್ರಾಯ.

**ಆದ್ರಂ ತೀರ್ಥಾಂಬುನಿ ಸ್ನಾತಂ ರೂಪಂ ಮೇಽಘವಿವರ್ಜಿತಂ ।**
**ಜ್ವಲತ್ಯನಲವತ್ತೇನ ಜ್ಯೋತಿರಸ್ಮೀತಿ ಚಾಬ್ರವೀತ್ ॥ ೯೨ ॥**

**ಅರ್ಥ–** ತೀರ್ಥಾಂಬುನಿ= ತೀರ್ಥೋದಕದಲ್ಲಿ, ಸ್ನಾತಂ= ಸ್ನಾನವನ್ನು ಮಾಡಿ, ಆರ್ದ್ರಂ= ಆರ್ದ್ರವಾದ, ಅಘವಿಮರ್ಜಿತಂ= ಪಾಪರಹಿತವಾದ, ಮೇ ರೂಪಂ= ನನ್ನ ರೂಪವು, ಜ್ವಲನವತ್= ಅಗ್ನಿಯಂತೆ, ಜ್ವಲತಿ= ಪ್ರಕಾಶಿಸುತ್ತದೆ, ತೇನ= ಆ ಕಾರಣದಿಂದ, ಜ್ಯೋತಿರಸ್ಮಿ= ನಾನು ಜ್ಯೋತಿಯಾಗಿದ್ದೇನೆ, ಇತಿ= ಎಂದು, ಅಬ್ರವೀತ್= ಪುರುಷನು (ಮಂತ್ರದ್ರಷ್ಟಾರನಾದ ಋಷಿಯು) ಹೇಳುತ್ತಾನೆ.

**ಅನುವಾದ–** ತೀರ್ಥೋದಕದಲ್ಲಿ ಮಿಂದು ಆರ್ದ್ರವಾದ ಪಾಪವಿರಹಿತವಾದ ಈ ನನ್ನ ಸ್ವರೂಪವು ಅಗ್ನಿಯಂತೆ ಜ್ವಲಿಸುತ್ತಿದೆ. ಆದ್ದರಿಂದ ನಾನು ಜ್ಯೋತಿಯಾಗಿದ್ದೇನೆ ಎಂಬ ಅರ್ಥವನ್ನು (ಸ್ನಾನ ಮಾಡುವ ಅಧಿಕಾರಿಯು ಅಥವಾ ಮಂತ್ರದ್ರಷ್ಟಾರನಾದ ಋಷಿಯು) ಹೇಳುತ್ತಾನೆ.

**ಭಾವವಿಲಾಸಿನೀ–** ಆದ್ರಾಪದಾರ್ಥಮಾಹ – **ಆರ್ದ್ರಂ ತೀರ್ಥಾಂಬುನಿಸ್ನಾತಮಿತಿ** ॥ ಮೇ ಮಮ ರೂಪಮಿತಿ ಸ್ನಾತುರ್ಜೀವಸ್ಯ ವಚನಮ್ । ಜ್ಯೋತಿಃ ಪದಾರ್ಥಮಾಹ–**ಅಘವಿವರ್ಜಿತಮಿತಿ** ॥ ತೇನ ಮಾಲಿನ್ಯಹೇತುಪಾಪಪರಿಹಾರೇ ಸತಿ ತೇಜೋರೂಪಜೀವಸ್ಯಾಗ್ನಿವಜ್ಜ್ವಲನೇನ ಕಾರಣೇನ ತೀರ್ಥಸ್ನಾನ್ನೇನ ಪಾಪಪರಿಹಾರೇ ಸತಿ ಪ್ರಕಾಶಮಾನರೂಪತ್ವಾಜ್ಜ್ಯೋತಿರಹಮಸ್ಮೀತ್ಯಾಹೇತಿ

ಭಾವಃ । ಚಶಬ್ದೇನ ಯಸ್ಮಾದ್ ಜ್ಯೋತಿಃ ಜ್ಯೋತೀರೂಪಂ ಜೀವಸ್ವರೂಪಂ ಜ್ವಲತಿ ಪ್ರಕಾಶಕ-ಪುಣ್ಯಾಭಿವರ್ಧನೇನ ಬ್ರಹ್ಮಧ್ಯಾನೇನಾಭಿವೃದ್ಧಬ್ರಹ್ಮವರ್ಚಸೇನ ಚ ಜ್ವಲತಿ ಅತಿಶಯಿತಪ್ರಕಾಶಂ ಭವತಿ । ತೇನ ಕಾರಣೇನ ಬೃಹಧಾತೋರ್ವೃದ್ಧ್ಯರ್ಥಕತ್ವಾಜ್ಜೀವೇ ರೂಢತ್ವಾಚ್ಚ ಯೋಗರೂಢ್ಯಾ ಬ್ರಹ್ಮ ಅತಿತೇಜಸ್ವೀ ಜೀವೋಹಮಸ್ಮೀತ್ಯಬ್ರವೀದಿತ್ಯಪಿ ದ್ರಷ್ಟವ್ಯಮ್ ॥ ೯೨೯ ॥

**ವಿವರಣೆ–** ತೇಜೋ ರೂಪನಾದ ಜೀವನು ಪಾಪದಿಂದ ಆವೃತನಾಗಿರುವುದರಿಂದ ಮೊದಲು ಪ್ರಕಾಶಿಸುವುದಿಲ್ಲ. ತೀರ್ಥಸ್ನಾನವನ್ನು ಮಾಡಿ ಪಾಪ ಪರಿಹಾರವಾದ ಮೇಲೆ ಪ್ರಕಾಶಮಾನರೂಪವುಳ್ಳವನಾದ್ದರಿಂದ ನಾನು ಜ್ಯೋತಿ ಎಂದು ಹೇಳುತ್ತಾನೆ. 'ಜ್ಯೋತಿರ್ಜ್ವಲತಿ ಬ್ರಹ್ಮಾಹಮಸ್ಮಿ' ಎಂಬ ವಾಕ್ಯವಿದೆಯಷ್ಟೆ. ಅದಕ್ಕೆ ಹೀಗೆ ಯೋಜನೆ. ಜ್ಯೋತಿರೂಪವಾದ ನನ್ನ ಸ್ವರೂಪವು ಜ್ವಲತಿ= ಪ್ರಕಾಶವಾದ ಪುಣ್ಯದ ಅಭಿವೃದ್ಧಿಯಿಂದ ಮತ್ತು ಬ್ರಹ್ಮಧ್ಯಾನದಿಂದ ಅಭಿವೃದ್ಧಿಯಾದ ಬ್ರಹ್ಮವರ್ಚಸ್ಸಿನಿಂದ ಅತಿಶಯವಾಗಿ ಪ್ರಕಾಶಿಸುತ್ತಿದೆ ಆ ಕಾರಣದಿಂದ, ಅಹಂ= ನಾನು, ಬ್ರಹ್ಮ= ಪ್ರಕಾಶದಿಂದಲೂ ಬ್ರಹ್ಮಧ್ಯಾನದಿಂದಲೂ ಅಭಿವೃದ್ಧನಾಗಿದ್ದೇನೆ ಎಂಬ ಯೋಜನೆಯೇ ಉಪಪನ್ನವಾಗುತ್ತದೆ. ಬೃಹ ಧಾತುವಿಗೆ ವೃದ್ಧಿ ಎಂಬ ಅರ್ಥವು ಇರುವುದರಿಂದ ಈ ಯೋಜನೆಯಲ್ಲಿ ಯಾವ ಪದಕ್ಕೂ ಲಕ್ಷಣಾವೃತ್ತಿ ಇಲ್ಲ ಎಂದು ಅಭಿಪ್ರಾಯ.

**ಪರಂಬ್ರಹ್ಮ ಪರಂಜ್ಯೋತಿಃ ಪರಾರ್ದ್ರೋ ಯಃ ಕೃಪಾರ್ಣವೇ ।**
**ನಾಸಾವಹಮಿತಿ ಪ್ರಾಹ ಯೋಸೌ ಸ್ವಸ್ಯಾಘಮರ್ಷಣಃ ॥ ೯೩೦ ॥**

**ಅರ್ಥ–** ಯಃ= ಯಾವ, ಪರಂಬ್ರಹ್ಮ= ಪರಬ್ರಹ್ಮನು, ಪರಂಜ್ಯೋತಿಃ= ಪರಂಜ್ಯೋತಿಯು, ಕೃಪಾರ್ಣವೇ= ಕೃಪಾಸಮುದ್ರದಲ್ಲಿ, ಪರಾರ್ದ್ರೋ= ಅತಿಶಯವಾಗಿ ಆರ್ದ್ರನೋ, ಯಃ ಅಸೌ= ಯಾವ ಬ್ರಹ್ಮನು, ಸ್ವಸ್ಯ= ತನಗೆ, ಅಘಮರ್ಷಣಃ= ಪಾಪ ಪರಿಹಾರಕನಾಗಿದ್ದಾನೆಯೋ, ಅಹಂ= ನಾನು, ಅಸೌ ನ= ಅವನಲ್ಲ, ಇತಿ= ಎಂದು, ಪ್ರಾಹ= ಹೇಳುತ್ತಾನೆ.

**ಅನುವಾದ–** ಯಾವನು ಪರಬ್ರಹ್ಮನೋ, ಪರಂಜ್ಯೋತಿಯೋ, ಕೃಪಾಸಾಗರದಲ್ಲಿ ಅತಿಶಯವಾಗಿ ಆರ್ದ್ರನೋ ಮತ್ತು ಯಾವನು ನನ್ನ ಪಾಪಪರಿಹಾರಕನೋ ನಾನು ಅವನಲ್ಲ ಎಂದು ಮಂತ್ರದ್ರಷ್ಟನಾದ ಋಷಿಯು ಹೇಳುತ್ತಾನೆ.

**ಭಾವವಿಲಾಸಿನೀ–** ಸಾಮಾನ್ಯಾಕಾರೇಣ ಸ್ವವ್ಯವಹಾರಸ್ಯಾತಿಶಯಿತರೂಪಾಭಾವೇ ತಾತ್ಪರ್ಯಸ್ಯ ಲೋಕೇ ದರ್ಶನಾದಾರ್ದ್ರಾದಿಸಾಮಾನ್ಯಪದತ್ರಯವ್ಯಾವರ್ತ್ಯಾರ್ಥಮಾಹ–ಪರಂ ಬ್ರಹ್ಮೇತಿ ॥ ಅಸೌ ವಾಸುದೇವಃ ಪರಂ ಬ್ರಹ್ಮ, ನಾರಾಯಣಃ ಪರಂ ಬ್ರಹ್ಮ, ಪರಂ ಜ್ಯೋತಿರುಪಸಂಪದ್ಯ, ಕೃಪಯಾ ಪರಯಾವಿಷ್ಟ ಇತ್ಯಾದೌ ಪರಬ್ರಹ್ಮಾದಿಪದಾಭಿಧೇಯತಯಾ ಲೋಕವೇದಯೋಃ

ಪ್ರಸಿದ್ಧಃ। ಯುಕ್ತ್ಯಂತರಂ ಚಾಹ– **ಯೋಽಸಾವಿತಿ** ॥ ಸ್ವಾಘಪರಿಹಾರಾಯ ಯಂ ಪ್ರಾರ್ಥಯತೇ। ಕಥಂ ತದಭೇದಃ ಸ್ವಸ್ಯೇತಿ ಭಾವಃ ॥ ೯೩೦ ॥

**ವಿವರಣೆ–** ಈ ವಾಕ್ಯಗಳಲ್ಲಿ ಜ್ಯೋತಿ ಎಂಬ ಶಬ್ದವು ಆರ್ದ್ರ ಎಂಬ ಶಬ್ದವು ಬ್ರಹ್ಮ ಎಂಬ ಶಬ್ದವು ಜೀವನನ್ನೇ ಹೇಳುತ್ತವೆ. ಶಾಸ್ತ್ರಗಳು ಪರಮಾತ್ಮನನ್ನು ಪರಬ್ರಹ್ಮನೆಂದೂ, ಪರಂಜ್ಯೋತಿ ಎಂದೂ ಮತ್ತು ಕೃಪಾಸಾಗರದಲ್ಲಿ ಆರ್ದ್ರನಾದವನೆಂದೂ ಹೇಳುತ್ತವೆ. ಈ ವೈಲಕ್ಷಣ್ಯವಿರುವುದರಿಂದ ಇಲ್ಲಿ ಋಷಿಯು ಜ್ಯೋತಿ ಮುಂತಾದ ಶಬ್ದಗಳಿಂದ ತನ್ನಲ್ಲಿ ಬ್ರಹ್ಮಭೇದವನ್ನೇ ಹೇಳುತ್ತಾನೆ. ಅಲ್ಲದೇ, ಬ್ರಹ್ಮನು ಪಾಪಪರಿಹಾರಕನಾಗಿದ್ದಾನೆ, ಋಷಿಯು ಪಾಪದಿಂದ ಆವೃತನಾಗಿದ್ದಾನೆ. ಪಾಪ ಪರಿಹಾರಕನಿಗೂ ಪಾಪಾಶ್ರಯನಿಗೂ ಭೇದವೇ ಇರಬೇಕಷ್ಟೇ? ಆದ್ದರಿಂದ ಈ ಮಂತ್ರವನ್ನು ಹೇಳುವ ಋಷಿಯು ಎಂದೂ ಜೀವಬ್ರಹ್ಮ ಅಭೇದವನ್ನು ಹೇಳುವುದಿಲ್ಲ ಎಂದು ಅಭಿಪ್ರಾಯ.

**ಕಿಂಚಾಹಮರ್ಥೋ ನಾತ್ಮಾ ತೇ ಬ್ರಹ್ಮಾಹಮಿತಿ ವಾಕ್ತತಃ ।**
**ಜಡಾಹಂಕೃತ್ಯೈಕ್ಯಮಾಹ ನ ಜೀವೈಕ್ಯಂ ಭವನ್ಮತೇ ॥ ೯೩೧ ॥**

**ಅರ್ಥ–** ಕಿಂಚ= ಮತ್ತು, ತೇ= ನಿನಗೆ, ಅಹಮರ್ಥಃ= ಅಹಂ ಎಂಬ ಅರ್ಥವು, ಅನಾತ್ಮಾ= ಆತ್ಮಭಿನ್ನವಾಗಿ ಜಡವಾದುದು, ತತಃ= ಆ ಕಾರಣದಿಂದ, ಬ್ರಹ್ಮಾಹಮಿತಿ ವಾಕ್= ಬ್ರಹ್ಮಾಹಮಸ್ಮಿ ಎಂಬ ವಾಕ್ಯವು, ಭವನ್ಮತೇ= ನಿನ್ನ ಮತದಲ್ಲಿ, ಜಡಾಹಂಕೃತ್ಯಾ= ಜಡವಾದ ಅಹಂಕಾರದಿಂದ, ಐಕ್ಯಮಾಹ= ಐಕ್ಯವನ್ನು ಹೇಳುತ್ತದೆ, ಜೀವೈಕ್ಯಂ= ಜೀವೈಕ್ಯವನ್ನು ನ ಆಹ= ಹೇಳುವುದಿಲ್ಲ.

**ಅನುವಾದ–** ಅದೂ ಅಲ್ಲದೇ ನಿನ್ನ ಮತದಲ್ಲಿ ಅಹಂ ಎಂಬ ಪದಾರ್ಥವು ಆತ್ಮಭಿನ್ನವಾದ ಜಡ. ಆದ್ದರಿಂದ ಬ್ರಹ್ಮಾಹಮಸ್ಮಿ ಎಂಬ ವಾಕ್ಯವು ಅಹಂ ಪದಾರ್ಥಕ್ಕೂ ಮತ್ತು ಬ್ರಹ್ಮನಿಗೂ ಅಭೇದವನ್ನು ಹೇಳಿದರೆ ಜಡಬ್ರಹ್ಮೈಕ್ಯವೇ ಸಿದ್ಧವಾದೀತೇ ಹೊರತು, ನಿನ್ನ ಮತದಂತೆಯೇ ಜೀವಬ್ರಹ್ಮೈಕ್ಯವು ಸಿದ್ಧವಾಗುವುದಿಲ್ಲ.

**ಭಾವವಿಲಾಸಿನೀ–** ಪರಪಕ್ಷೇ ದೂಷಣಾನಂತರಂ ಚಾಹ – **ಕಿಂಚೇತಿ** ॥ ತತಃ ಅಹಮರ್ಥಸ್ಯಾತ್ಮಭಿನ್ನತ್ವಾತ್ ॥ ೯೩೧ ॥

**ವಿವರಣೆ–** ಅದ್ವೈತಿಗಳು ಅಹಂ ಪದಾರ್ಥವನ್ನು ಚಿದಚಿತ್ ಸಂವಲನ ಎಂದು ಹೇಳುತ್ತಾರೆ. ಎಂದರೆ ಚಿತ್ ಮತ್ತು ಅಚಿತ್ ಗಳ ಮಿಶ್ರಣ ಎಂದು ಅರ್ಥ. ಈ ವಿಶಿಷ್ಟರೂಪವು ವಿಶಿಷ್ಟಾಕಾರದಿಂದ ಮಿಥ್ಯೆಯಾದುದರಿಂದ ಆದು ಜಡವೇ ಆಗಿದೆ. ಆದ್ದರಿಂದ ಈ ವಾಕ್ಯದಿಂದ ಜಡಬ್ರಹ್ಮೈಕ್ಯವು ಸಿದ್ಧವಾದರೂ ನಿನಗೆ ಅಭಿಮತವಾದ ಜೀವಬ್ರಹ್ಮೈಕ್ಯವು ಸಿದ್ಧವಾಗುವುದಿಲ್ಲ ಎಂದು ತಾತ್ಪರ್ಯ.

ಭಾವಃ । ಚಶಬ್ದೇನ ಯಸ್ಮಾದ್ ಜ್ಯೋತಿಃ ಜ್ಯೋತೀರೂಪಂ ಜೀವಸ್ವರೂಪಂ ಜ್ವಲತಿ ಪ್ರಕಾಶಕ-ಪುಣ್ಯಾಭಿವರ್ಧನೇನ ಬ್ರಹ್ಮಧ್ಯಾನೇನಾಭಿವೃದ್ಧಬ್ರಹ್ಮವರ್ಚಸೇನ ಚ ಜ್ವಲತಿ ಅತಿಶಯಿತಪ್ರಕಾಶಂ ಭವತಿ । ತೇನ ಕಾರಣೇನ ಬೃಹಧಾತೋರ್ವೃದ್ಧ್ಯರ್ಥಕತ್ವಾಜ್ಜೀವೇ ರೂಢತ್ವಾಚ್ಚ ಯೋಗರೂಢ್ಯಾ ಬ್ರಹ್ಮ ಅತಿತೇಜಸ್ವೀ ಜೀವೋಹಮಸ್ಮೀತ್ಯಬ್ರವೀದಿತ್ಯಪಿ ದ್ರಷ್ಟವ್ಯಮ್ ॥ ೯೨೯ ॥

**ವಿವರಣೆ–** ತೇಜೋ ರೂಪನಾದ ಜೀವನು ಪಾಪದಿಂದ ಆವೃತನಾಗಿರುವುದರಿಂದ ಮೊದಲು ಪ್ರಕಾಶಿಸುವುದಿಲ್ಲ. ತೀರ್ಥಸ್ನಾನವನ್ನು ಮಾಡಿ ಪಾಪ ಪರಿಹಾರವಾದ ಮೇಲೆ ಪ್ರಕಾಶಮಾನರೂಪವುಳ್ಳವನಾದ್ದರಿಂದ ನಾನು ಜ್ಯೋತಿ ಎಂದು ಹೇಳುತ್ತಾನೆ. 'ಜ್ಯೋತಿರ್ಜ್ವಲತಿ ಬ್ರಹ್ಮಾಹಮಸ್ಮಿ' ಎಂಬ ವಾಕ್ಯವಿದೆಯಷ್ಟೆ. ಅದಕ್ಕೆ ಹೀಗೆ ಯೋಜನೆ. ಜ್ಯೋತಿರೂಪವಾದ ನನ್ನ ಸ್ವರೂಪವು ಜ್ವಲತಿ= ಪ್ರಕಾಶವಾದ ಪುಣ್ಯದ ಅಭಿವೃದ್ಧಿಯಿಂದ ಮತ್ತು ಬ್ರಹ್ಮಧ್ಯಾನದಿಂದ ಅಭಿವೃದ್ಧಿಯಾದ ಬ್ರಹ್ಮವರ್ಚಸ್ಸಿನಿಂದ ಅತಿಶಯವಾಗಿ ಪ್ರಕಾಶಿಸುತ್ತಿದೆ ಆ ಕಾರಣದಿಂದ, ಅಹಂ= ನಾನು, ಬ್ರಹ್ಮ= ಪ್ರಕಾಶದಿಂದಲೂ ಬ್ರಹ್ಮಧ್ಯಾನದಿಂದಲೂ ಅಭಿವೃದ್ಧನಾಗಿದ್ದೇನೆ ಎಂಬ ಯೋಜನೆಯೇ ಉಪಪನ್ನವಾಗುತ್ತದೆ. ಬೃಹ ಧಾತುವಿಗೆ ವೃದ್ಧಿ ಎಂಬ ಅರ್ಥವು ಇರುವುದರಿಂದ ಈ ಯೋಜನೆಯಲ್ಲಿ ಯಾವ ಪದಕ್ಕೂ ಲಕ್ಷಣಾವೃತ್ತಿ ಇಲ್ಲ ಎಂದು ಅಭಿಪ್ರಾಯ.

ಪರಂಬ್ರಹ್ಮ ಪರಂಜ್ಯೋತಿಃ ಪರಾರ್ದ್ರೋ ಯಃ ಕೃಪಾರ್ಣವೇ ।
ನಾಸಾವಹಮಿತಿ ಪ್ರಾಹ ಯೋಸೌ ಸ್ವಸ್ಯಾಘಮರ್ಷಣಃ ॥ ೯೩೦ ॥

**ಅರ್ಥ–** ಯಃ= ಯಾವ, ಪರಂಬ್ರಹ್ಮ= ಪರಬ್ರಹ್ಮನು, ಪರಂಜ್ಯೋತಿಃ= ಪರಂಜ್ಯೋತಿಯು, ಕೃಪಾರ್ಣವೇ= ಕೃಪಾಸಮುದ್ರದಲ್ಲಿ, ಪರಾರ್ದ್ರೋ= ಅತಿಶಯವಾಗಿ ಆರ್ದ್ರನೋ, ಯಃ ಅಸೌ= ಯಾವ ಬ್ರಹ್ಮನು, ಸ್ವಸ್ಯ= ತನಗೆ, ಅಘಮರ್ಷಣಃ= ಪಾಪ ಪರಿಹಾರಕನಾಗಿದ್ದಾನೆಯೋ, ಅಹಂ= ನಾನು, ಅಸೌ ನ= ಅವನಲ್ಲ, ಇತಿ= ಎಂದು, ಪ್ರಾಹ= ಹೇಳುತ್ತಾನೆ.

**ಅನುವಾದ–** ಯಾವನು ಪರಬ್ರಹ್ಮನೋ, ಪರಂಜ್ಯೋತಿಯೋ, ಕೃಪಾಸಾಗರದಲ್ಲಿ ಅತಿಶಯವಾಗಿ ಆರ್ದ್ರನೋ ಮತ್ತು ಯಾವನು ನನ್ನ ಪಾಪಪರಿಹಾರಕನೋ ನಾನು ಅವನಲ್ಲ ಎಂದು ಮಂತ್ರದ್ರಷ್ಟನಾದ ಋಷಿಯು ಹೇಳುತ್ತಾನೆ.

**ಭಾವವಿಲಾಸಿನೀ–** ಸಾಮಾನ್ಯಾಕಾರೇಣ ಸ್ವವ್ಯವಹಾರಸ್ಯಾತಿಶಯಿತರೂಪಾಭಾವೇ ತಾತ್ಪರ್ಯಸ್ಯ ಲೋಕೇ ದರ್ಶನಾದಾದ್ರ್ರಾದಿಸಾಮಾನ್ಯಪದತ್ರಯವ್ಯಾವರ್ತ್ಯಾರ್ಥಮಾಹ–**ಪರಂ ಬ್ರಹ್ಮೇತಿ** ॥ ಅಸೌ ವಾಸುದೇವಃ ಪರಂ ಬ್ರಹ್ಮ, ನಾರಾಯಣಃ ಪರಂ ಬ್ರಹ್ಮ, ಪರಂ ಜ್ಯೋತಿರುಪಸಂಪದ್ಯ, ಕೃಪಯಾ ಪರಯಾವಿಷ್ಟ ಇತ್ಯಾದೌ ಪರಬ್ರಹ್ಮಾದಿಪದಾಭಿಧೇಯತಯಾ ಲೋಕವೇದಯೋಃ

ಪ್ರಸಿದ್ಧಃ। ಯುಕ್ತ್ಯಂತರಂ ಚಾಹ– **ಯೋऽಸಾವಿತಿ** ॥ ಸ್ವಾಘಪರಿಹಾರಾಯ ಯಂ ಪ್ರಾರ್ಥಯತೇ। ಕಥಂ ತದಭೇದಃ ಸ್ಪಷ್ಟೇತಿ ಭಾವಃ ॥ ೯೩೦ ॥

**ವಿವರಣೆ–** ಈ ವಾಕ್ಯಗಳಲ್ಲಿ ಜ್ಯೋತಿ ಎಂಬ ಶಬ್ದವು ಆರ್ದ್ರ ಎಂಬ ಶಬ್ದವು ಬ್ರಹ್ಮ ಎಂಬ ಶಬ್ದವು ಜೀವನನ್ನೇ ಹೇಳುತ್ತವೆ. ಶಾಸ್ತ್ರಗಳು ಪರಮಾತ್ಮನನ್ನು ಪರಬ್ರಹ್ಮನೆಂದೂ, ಪರಂಜ್ಯೋತಿ ಎಂದೂ ಮತ್ತು ಕೃಪಾಸಾಗರದಲ್ಲಿ ಆರ್ದ್ರನಾದವನೆಂದೂ ಹೇಳುತ್ತವೆ. ಈ ವೈಲಕ್ಷಣ್ಯವಿರುವುದರಿಂದ ಇಲ್ಲಿ ಋಷಿಯು ಜ್ಯೋತಿ ಮುಂತಾದ ಶಬ್ದಗಳಿಂದ ತನ್ನಲ್ಲಿ ಬ್ರಹ್ಮಭೇದವನ್ನೇ ಹೇಳುತ್ತಾನೆ. ಅಲ್ಲದೇ, ಬ್ರಹ್ಮನು ಪಾಪಪರಿಹಾರಕನಾಗಿದ್ದಾನೆ, ಋಷಿಯು ಪಾಪದಿಂದ ಆವೃತನಾಗಿದ್ದಾನೆ. ಪಾಪ ಪರಿಹಾರಕನಿಗೂ ಪಾಪಾಶ್ರಯನಿಗೂ ಭೇದವೇ ಇರಬೇಕಷ್ಟೇ? ಆದ್ದರಿಂದ ಈ ಮಂತ್ರವನ್ನು ಹೇಳುವ ಋಷಿಯು ಎಂದೂ ಜೀವಬ್ರಹ್ಮ ಅಭೇದವನ್ನು ಹೇಳುವುದಿಲ್ಲ ಎಂದು ಅಭಿಪ್ರಾಯ.

**ಕಿಂಚಾಹಮರ್ಥೋಽನಾತ್ಮಾ ತೇ ಬ್ರಹ್ಮಾಹಮಿತಿ ವಾಕ್ತತಃ ।**
**ಜಡಾಹಂಕೃತ್ಯೈಕ್ಯಮಾಹ ನ ಜೀವೈಕ್ಯಂ ಭವನ್ಮತೇ ॥ ೯೩೧ ॥**

**ಅರ್ಥ–** ಕಿಂಚ= ಮತ್ತು, ತೇ= ನಿನಗೆ, ಅಹಮರ್ಥಃ= ಅಹಂ ಎಂಬ ಅರ್ಥವು, ಅನಾತ್ಮಾ= ಆತ್ಮಭಿನ್ನವಾಗಿ ಜಡವಾದುದು, ತತಃ= ಆ ಕಾರಣದಿಂದ, ಬ್ರಹ್ಮಾಹಮಿತಿ ವಾಕ್= ಬ್ರಹ್ಮಾಹಮಸ್ಮಿ ಎಂಬ ವಾಕ್ಯವು, ಭವನ್ಮತೇ= ನಿನ್ನ ಮತದಲ್ಲಿ, ಜಡಾಹಂಕೃತ್ಯಾ= ಜಡವಾದ ಅಹಂಕಾರದಿಂದ, ಐಕ್ಯಮಾಹ= ಐಕ್ಯವನ್ನು ಹೇಳುತ್ತದೆ, ಜೀವೈಕ್ಯಂ= ಜೀವೈಕ್ಯವನ್ನು ನ ಆಹ= ಹೇಳುವುದಿಲ್ಲ.

**ಅನುವಾದ–** ಅದೂ ಅಲ್ಲದೇ ನಿನ್ನ ಮತದಲ್ಲಿ ಅಹಂ ಎಂಬ ಪದಾರ್ಥವು ಆತ್ಮಭಿನ್ನವಾದ ಜಡ. ಆದ್ದರಿಂದ ಬ್ರಹ್ಮಾಹಮಸ್ಮಿ ಎಂಬ ವಾಕ್ಯವು ಅಹಂ ಪದಾರ್ಥಕ್ಕೂ ಮತ್ತು ಬ್ರಹ್ಮನಿಗೂ ಅಭೇದವನ್ನು ಹೇಳಿದರೆ ಜಡಬ್ರಹ್ಮೈಕ್ಯವೇ ಸಿದ್ಧವಾದೀತೇ ಹೊರತು, ನಿನ್ನ ಮತದಂತೆಯೇ ಜೀವಬ್ರಹ್ಮೈಕ್ಯವು ಸಿದ್ಧವಾಗುವುದಿಲ್ಲ.

**ಭಾವವಿಲಾಸಿನೀ–** ಪರಪಕ್ಷೇ ದೂಷಣಾನಂತರಂ ಚಾಹ – **ಕಿಂಚೇತಿ** ॥ ತತಃ ಅಹಮರ್ಥಸ್ಯಾತ್ಮಭಿನ್ನತ್ವಾತ್ ॥ ೯೩೧ ॥

**ವಿವರಣೆ–** ಅದ್ವೈತಿಗಳು ಅಹಂ ಪದಾರ್ಥವನ್ನು ಚಿದಚಿತ್ ಸಂವಲನ ಎಂದು ಹೇಳುತ್ತಾರೆ. ಎಂದರೆ ಚಿತ್ ಮತ್ತು ಅಚಿತ್ ಗಳ ಮಿಶ್ರಣ ಎಂದು ಅರ್ಥ. ಈ ವಿಶಿಷ್ಟರೂಪವು ವಿಶಿಷ್ಟಾಕಾರದಿಂದ ಮಿಥ್ಯೆಯಾದುದರಿಂದ ಅದು ಜಡವೇ ಆಗಿದೆ. ಆದ್ದರಿಂದ ಈ ವಾಕ್ಯದಿಂದ ಜಡಬ್ರಹ್ಮೈಕ್ಯವು ಸಿದ್ಧವಾದರೂ ನಿನಗೆ ಅಭಿಮತವಾದ ಜೀವಬ್ರಹ್ಮೈಕ್ಯವು ಸಿದ್ಧವಾಗುವುದಿಲ್ಲ ಎಂದು ತಾತ್ಪರ್ಯ.

**ಮಾನಸಾಹಂಕೃತೇರಾರೋಪಾಧಿಷ್ಠಾನಚಿತ್ಯೈವ ಹಿ ।**
**ಸಿದ್ಧ್ಯೇಲ್ಲಕ್ಷಣಯಾಪ್ಯೈಕ್ಯಂ ನ ತು ಜೀವಚಿತಾ ಸಹ ॥ ೯೩೨ ॥**

**ಅರ್ಥ–** ಮಾನಸಾಹಂಕೃತೇಃ= ಮನೋರೂಪವಾದ ಅಹಂಕಾರಕ್ಕೆ, ಲಕ್ಷಣಯಾಪಿ= ಲಕ್ಷಣಾವೃತ್ತಿಯಿಂದಲೂ ಸಹ, ಆರೋಪಾಧಿಷ್ಠಾಚಿತ್ಯೈವ= ಆರೋಪಾಧಿಷ್ಠಾನವಾದ ಚೈತನ್ಯದಿಂದಲೇ, ಐಕ್ಯಂ ಸಿದ್ಧ್ಯೇತ್= ಐಕ್ಯವು ಸಿದ್ಧವಾಗುತ್ತದೆ, ಜೀವಚಿತಾ ಸಹ= ಜೀವಚೈತನ್ಯದ ಜೊತೆಯಲ್ಲಿ, ಐಕ್ಯಂ= ಐಕ್ಯವು, ನ ತು= ಸಿದ್ಧವಾಗುವುದಿಲ್ಲ.

**ಅನುವಾದ–** ಮಾನಸ ಅಹಂಕಾರಕ್ಕೆ ಆರೋಪಾಧಿಷ್ಠಾನ ಚೈತನ್ಯದಲ್ಲಿ ಲಕ್ಷಣಾವೃತ್ತಿಯನ್ನು ಸ್ವೀಕರಿಸಿದರೂ ಚೈತನ್ಯೈಕ್ಯವೇ ಸಿದ್ಧವಾದೀತೇ ಹೊರತು ಜೀವೈಕ್ಯವು ಸಿದ್ಧವಾಗುವುದಿಲ್ಲ.

**ಭಾವವಿಲಾಸಿನೀ–** ನನು ಲಕ್ಷಣಯಾ ಬ್ರಹ್ಮಪರತ್ವಮಂಗೀಕ್ರಿಯತ ಇತ್ಯತ ಆಹ – **ಮಾನಸೇತಿ** ॥ ಅಹಂಕಾರೇ ಆರೋಪಾಧಿಷ್ಠಾನಬ್ರಹ್ಮಚೈತನ್ಯಪ್ರವೇಶೇಽಪಿ ಜೀವಚೈತನ್ಯಸ್ಯ ವಾರ್ತಾಪಿ ನಾಸ್ತೀತಿ ಸೂಚನಾಯೋಕ್ತಂ ಮಾನಸೇತಿ । ಲಕ್ಷಣಾಬೀಜಸಂಬಂಧಸ್ಯ ಜೀವಚೈತನ್ಯೇಽಭಾವಾದಿತ್ಯರ್ಥಃ । ತಸ್ಮಾದಹಂ ಬ್ರಹ್ಮೇತ್ಯಾದಿವಾಕ್ಯಾನಾಂ ಜೀವಬ್ರಹ್ಮೈಕ್ಯಪರತ್ವಶಂಸನಂ ಸ್ವಮತಹಿಂಸನಮೇವೇತಿ ಭಾವಃ ॥ ೯೩೨ ॥

**ವಿವರಣೆ–** ಅಹಂ ಎಂಬ ಪದಾರ್ಥವು ಚಿದಚಿತ್ ಮಿಶ್ರಣರೂಪವಾದುದು. ಅಲ್ಲಿ ಚಿತ್ ಎಂಬುದು ಚೈತನ್ಯ, ಅಚಿತ್ ಆದುದು ಮನಸ್ಸು. ಈ ಮಿಶ್ರವಾದುದು ಜಡವಾದರೂ ಈ ಮಿಶ್ರಕ್ಕೂ ಚೈತನ್ಯಕ್ಕೂ ವಿಶಿಷ್ಟಾರೋಪಾಧಿಷ್ಠಾನರೂಪವಾದ ಸಂಬಂಧವಿರುವುದರಿಂದ ಅಹಂ ಎಂಬ ಪದಕ್ಕೆ ಚೈತನ್ಯ ಎಂದು ಅರ್ಥಮಾಡುತ್ತೇವೆ ಎಂದು ಹೇಳಿದರೆ ಆಗ ಅಹಂ ಬ್ರಹ್ಮಾಸ್ಮಿ ಎಂಬ ವಾಕ್ಯದಿಂದ ಚೈತನ್ಯಕ್ಕೂ ಮತ್ತು ಬ್ರಹ್ಮನಿಗೂ ಅಭೇದವು ಸಿದ್ಧವಾಗುತ್ತದೆಯೇ ಹೊರತು ಜೀವನಿಗೂ ಮತ್ತು ಬ್ರಹ್ಮನಿಗೂ ಅಭೇದವು ಸಿದ್ಧವಾಗುವುದಿಲ್ಲ. ಅಹಂ ಪದದಿಂದ ಲಕ್ಷಣಾವೃತ್ತಿಯಿಂದ ಜೀವನನ್ನು ತೆಗೆದುಕೊಳ್ಳಲು ಚೈತನ್ಯದಲ್ಲಿ ಆರೋಪಾಧಿಷ್ಠಾನರೂಪವಾದ ಸಂಬಂಧವಿರುವಂತೆ ಜೀವನಲ್ಲಿ ಯಾವ ಸಂಬಂಧವೂ ಇಲ್ಲದಿರುವುದರಿಂದ ಅಹಂ ಪದಕ್ಕೆ ಜೀವನಲ್ಲಿ ಲಕ್ಷಣಾವೃತ್ತಿಯನ್ನು ಅಂಗೀಕರಿಸಲು ಸಾಧ್ಯವಿಲ್ಲ. ಆದ್ದರಿಂದ ಜೀವಬ್ರಹ್ಮೈಕ್ಯವು ಸಿದ್ಧವಾಗುವುದಿಲ್ಲ ಎಂದು ಅಭಿಪ್ರಾಯ.

**ಮಣಿಂ ಸೂತ್ರನಿರೂಢಂ ಚ ತ್ಯಕ್ತ್ವಾ ಕಃ ಕಾಚಮಾಶ್ರಯೇತ್ ।**
**ಕಥಂ ಶಕ್ರಸ್ಯ ಪದವೀಂ ಭಿಕ್ಷುಕೋ ರೋಢುಮಿಚ್ಛತಿ ॥ ೯೩೩ ॥**

**ಅರ್ಥ–** ಸೂತ್ರನಿರೂಢಂ= ವ್ಯಾಕರಣಸೂತ್ರಬದ್ಧವಾದ, ಮಣಿಂ= ಮಣಿಯನ್ನು (ಶ್ರೇಷ್ಠವಾದ ಅರ್ಥವನ್ನು), ತ್ಯಕ್ತ್ವಾ= ಪರಿತ್ಯಜಿಸಿ, ಕಃ= ಯಾವನು, ಕಾಚಂ= ಅತ್ಯಂತ

ಮಲಿನವಾದ ಒಂದು ಹೊಳೆಯುವ ವಸ್ತುವನ್ನು, ಆಶ್ರಯೇತ್= ಆಶ್ರಯಿಸುತ್ತಾನೆ, ಶಕ್ರಸ್ಯ ಪದವೀಂ= ಇಂದ್ರನ ಪದವಿಯನ್ನು, ಭಿಕ್ಷುಕಃ= ಭಿಕ್ಷುಕನು, ಕಥಂ= ಹೇಗೆ, ರೋಢುಮಿಚ್ಛತಿ= ಏರಲು ಬಯಸುತ್ತಾನೆ?

**ಅನುವಾದ–** ವ್ಯಾಕರಣ ಸೂತ್ರನಿಬದ್ಧವಾದ ನಿರ್ಮಲವಾದ ಮಣಿಯನ್ನು ಬಿಟ್ಟು ಯಾವ ವಿವೇಕಿಯಾದವನು ಕಾಚವನ್ನು ಆಶ್ರಯಿಸುತ್ತಾನೆ? ಭಿಕ್ಷುಕನಾದವನು ಹೇಗೆ ಇಂದ್ರನ ಪದವಿಗೆ ಏರಲು ಬಯಸುತ್ತಾನೆ?

**ಭಾವವಿಲಾಸಿನೀ–** ಸೂತ್ರನಿರೂಢಂ ವ್ಯಾಕರಣಸೂತ್ರನಿರೂಢಮ್ । ಮಣಿಂ ಮಣಿವನ್ನಿರ್ಮಲಂ ಬ್ರಹ್ಮಾಶ್ರಿತತ್ವರೂಪಮರ್ಥಮ್ । ಕಾಚಂ ಕಾಚವನ್ಮಲಿನಂ ಬ್ರಹ್ಮೈಕ್ಯರೂಪಮರ್ಥಮ್ । ಕಥಂ ಶಕ್ರಸ್ಯೇತ್ಯನೇನ ಯಥಾ ಶಕ್ರಪದವೀ ಭಿಕ್ಷುಕಸ್ಯಾಯೋಗ್ಯಾ ತತೋಽಪ್ಯತ್ಯಂತಾಯೋಗ್ಯಾ ಪರಬ್ರಹ್ಮಪದವೀತಿ ಸೂಚಯತಿ ॥ ೯೩೩ ॥

**ವಿವರಣೆ–** ವ್ಯಾಕರಣ ಶಾಸ್ತ್ರಕ್ಕೆ ಅನುಸಾರವಾಗಿಯೇ ಪ್ರಥಮಾ ವಿಭಕ್ತಿಗೆ ಸಪ್ತಮೀ ವಿಭಕ್ತಿಯ ಅರ್ಥವನ್ನು ಹೇಳಿ ಯಾವ ಪ್ರಮಾಣ ವಿರೋಧವೂ ಇಲ್ಲದ ಅರ್ಥವನ್ನು ಅಂಗೀಕರಿಸಲು ಬರುವಾಗ ಸರ್ವಪ್ರಮಾಣ ವಿರುದ್ಧವಾದ ಆದ್ದರಿಂದ ಮಲಿನವಾದ ಜೀವಬ್ರಹ್ಮೈಕ್ಯವನ್ನು ಅಂಗೀಕರಿಸುವುದು ಯುಕ್ತವಲ್ಲ. ಭಿಕ್ಷುಕನಾದವನಿಗೆ ಇಂದ್ರನ ಪದವಿಯ ಆಸೆ ಹೇಗೆ ಅಯುಕ್ತವಾದುದೋ ಅದಕ್ಕಿಂತಲೂ ಅಯುಕ್ತವಾದುದು ನೀಚನಾದ ಜೀವನಿಗೆ ಪರಬ್ರಹ್ಮ ಪದವಿಯ ಆಸೆ ಎಂದು ಅಭಿಪ್ರಾಯ.

**ಯತಸ್ತದಾತ್ಮಾನಮೇವಾವೇದಿತ್ಯವದಧಾರ ವಾಕ್ ।**
**ಅಹಂ ಬ್ರಹ್ಮಾಸ್ಮೀತಿ ವಾಕ್ಯಂ ಬ್ರಹ್ಮವಾಕ್ಯತಯಾ ಸ್ಫುಟಂ ॥ ೯೩೪ ॥**

**ಅತಃ ಸಾ ಕೇವಲಂ ತಸ್ಯೈಕಸ್ಯೈವ ಬ್ರಹ್ಮತಾಂ ವದೇತ್ ।**
**ಅನ್ಯಯೋಗವ್ಯವಚ್ಛೇತ್ರೀ ಹನ್ಯಾದವಧೃತಿರ್ನ ಚೇತ್ ॥ ೯೩೫ ॥**

**ಅರ್ಥ–** ಯತಃ= ಯಾವ ಕಾರಣದಿಂದ, ವಾಕ್= ಶ್ರುತಿಯು, ತದಾತ್ಮಾನಮೇವ ಅವೇದಿತಿ= ಆ ಬ್ರಹ್ಮನು ತನ್ನನ್ನೇ ತಿಳಿದನು ಎಂದು, ಅಹಂ ಬ್ರಹ್ಮಾಸ್ಮೀತಿ ವಾಕ್ಯಂ= ಅಹಂ ಬ್ರಹ್ಮಾಸ್ಮಿ ಎಂಬ ವಾಕ್ಯವು, ಬ್ರಹ್ಮವಾಕ್ಯತಯಾ= ಬ್ರಹ್ಮವಾಕ್ಯವೆಂದು, ಸ್ಫುಟಂ= ಸ್ಪಷ್ಟವಾಗಿ, ಅವದಧಾರ= ನಿರ್ಣಯವನ್ನು ಮಾಡಿತೋ, ಅತಃ= ಆದ್ದರಿಂದ, ಸಾ= ಆ ಅಹಂ ಬ್ರಹ್ಮಾಸ್ಮಿ ಎಂಬ ವಾಕ್ಯವು, ಕೇವಲ ತಸ್ಯೈಕಸ್ಯ= ಕೇವಲ ಆ ಬ್ರಹ್ಮನೊಬ್ಬನಿಗೇ, ಬ್ರಹ್ಮತಾಂ= ಬ್ರಹ್ಮತ್ವವನ್ನು, ವದೇತ್= ಹೇಳುತ್ತದೆ, ನ ಚೇತ್= ಇಲ್ಲದಿದ್ದರೆ, ಅನ್ಯಯೋಗವ್ಯವಚ್ಛೇತ್ರೀ= ಅನ್ಯಯೋಗವ್ಯವಚ್ಛೇದ ಮಾಡುವ, ಅವಧೃತಿಃ= ಏವ ಶಬ್ದದಿಂದ ಉಕ್ತವಾದ ಅವಧಾರಣವು, ಹನ್ಯಾತ್= ಕೊಲ್ಲುತ್ತದೆ.

**ಅನುವಾದ–** ಯಾವ ಕಾರಣದಿಂದ 'ತದಾತ್ಮಾನಮೇವ ಅವೇತ್' ಎಂಬ ವಾಕ್ಯವು 'ಅಹಂ ಬ್ರಹ್ಮಾಸ್ಮಿ' ಎಂಬ ವಾಕ್ಯವನ್ನು ಬ್ರಹ್ಮವಾಕ್ಯವೆಂದು ಸ್ಪಷ್ಟವಾಗಿ ನಿರ್ಧರಿಸಿತೋ ಆ ಕಾರಣದಿಂದ ಆ ವಾಕ್ಯವು ಕೇವಲ ಬ್ರಹ್ಮನೊಬ್ಬನಿಗೇ ಬ್ರಹ್ಮತ್ವವನ್ನು ಹೇಳುತ್ತದೆ. ಇಲ್ಲದಿದ್ದರೆ ಅನ್ಯಯೋಗ ವ್ಯವಚ್ಛೇದಾರ್ಥವಾದ ಏವ ಶಬ್ದೋಕ್ತವಾದ ಅವಧಾರಣವು ಕೊಲ್ಲುತ್ತದೆ. (ವಿರೋಧಿಸುತ್ತದೆ).

**ಭಾವವಿಲಾಸಿನೀ–** ಯುಕ್ತ್ಯಂತರೇಣಾಪಿ ಯತ್ರ ಕ್ವಾಪಿ ಸ್ಥಿತಸ್ಯಾಹಂ ಬ್ರಹ್ಮೇತಿ ವಾಕ್ಯಸ್ಯ ಪರಬ್ರಹ್ಮ-ವಾಕ್ಯತ್ವೈವ ನ ಜೀವವಾಕ್ಯತೇತ್ಯಾಹ – **ಯತ ಇತಿ** ॥ ವಾಕ್ । ತದಾತ್ಮಾನಮೇವಾವೇದಹಂ ಬ್ರಹ್ಮಾಸ್ಮೀತಿ ಮಾಧ್ಯಂದಿನಶ್ರುತಿಃ । ತದ್‌ಬ್ರಹ್ಮ ಅಹಂ ಬ್ರಹ್ಮಾಸ್ಮೀತಿ ಆತ್ಮಾನಮೇವಾವೇದ್ ನ ತ್ವನ್ಯಮಿತಿ ಅಹಂ ಬ್ರಹ್ಮೇತಿ ವಾಕ್ಯಂ ಬ್ರಹ್ಮವಾಕ್ಯತಯಾಽವದಧಾರ । ಅತಃ ಕಾರಣಾತ್ । ಸಾ ವಾಕ್ । ತಸ್ಯ ಬ್ರಹ್ಮಣಃ । ನಚೇತ್ ಬ್ರಹ್ಮಣ ಏವ ವಾಕ್ಯಂ ನಚೇತ್ ॥ ೯೩೪-೯೩೫ ॥

**ವಿವರಣೆ–** ಈಗ 'ತದಾತ್ಮಾನಮೇವ ಅವೇತ್ ಅಹಂ ಬ್ರಹ್ಮಾಸ್ಮಿ ಇತಿ' ಎಂಬ ಮಾಧ್ಯಂದಿನ ಶ್ರುತಿಯ ಮತ್ತು ಕಾಣ್ವಶ್ರುತಿಯ ವಾಕ್ಯವನ್ನು ವಿಮರ್ಶೆ ಮಾಡುತ್ತಾರೆ. ವಾಕ್ಯದ ಯೋಜನೆಯು ಹೀಗಿದೆ. ತತ್= ಬ್ರಹ್ಮನು, ಅಹಂ ಬ್ರಹ್ಮಾಸ್ಮಿ ಇತಿ= ನಾನು ಬ್ರಹ್ಮನೆಂದು, ಆತ್ಮಾನಮೇವ= ತನ್ನನ್ನೇ, ಅವೇತ್= ತಿಳಿದನು ಎಂದು, ತನ್ನನ್ನೇ ಬ್ರಹ್ಮನೆಂದು ತಿಳಿದನು, ಅನ್ಯವಸ್ತುವನ್ನು ಬ್ರಹ್ಮನೆಂದು ತಿಳಿಯಲಿಲ್ಲ ಎಂದು ಅನ್ಯಯೋಗಚ್ಛೇದಕವಾದ ಏವ ಕಾರದ ಬಲದಿಂದ ಸಿದ್ಧವಾಗುತ್ತದೆ. ಇನ್ನೊಬ್ಬನಿಗೂ ಬ್ರಹ್ಮತ್ವವಿದ್ದರೆ ಆತ್ಮಾನಮೇವ ಎಂಬ ಅವಧಾರಣವು ಕೂಡುವುದಿಲ್ಲ. ಆದ್ದರಿಂದ ಈ ವಾಕ್ಯದಿಂದ ಜೀವೈಕ್ಯವು ಸಿದ್ಧವಾಗುವುದಿಲ್ಲ ಎಂದು ಅಭಿಪ್ರಾಯ.

ವಿಶೇಷ್ಯ ಸಂಗತಸ್ಯೈವಕಾರಸ್ಯ ಬುಧಮಂಡಲೀ ।
ಅನ್ಯಯೋಗವ್ಯವಚ್ಛೇದಮರ್ಥಂ ಯತ್ಪ್ರತ್ಯಪದ್ಯತ ॥ ೯೩೬ ॥

ಅತೋ ಜೀವಬ್ರಹ್ಮತಾಯಾಂ ನ ತಾಂ ಯುಂಜೀತ ಬುದ್ಧಿಮಾನ್ ।
ಯತ್ತೇಷ್ವಬ್ರಹ್ಮತಾಪ್ಯರ್ಥಾತ್ ಪ್ರಾಪ್ತಾ ತದ್ಭೇದವಾಗಿಯಮ್ ॥ ೯೩೭ ॥

**ಅರ್ಥ–** ಯತ್= ಯಾವ ಕಾರಣದಿಂದ, ವಿಶೇಷ್ಯ ಸಂಗತಸ್ಯ ಏವಕಾರಸ್ಯ= ವಿಶೇಷ್ಯ ಸಂಗತವಾದ ಏವಕಾರಕ್ಕೆ, ಬುಧಮಂಡಲೀ= ವಿದ್ವಾಂಸರ ಸಮೂಹವು, ಅನ್ಯಯೋಗವ್ಯವಚ್ಛೇದಂ= ಅನ್ಯಯೋಗ ವ್ಯವಚ್ಛೇದವನ್ನು, ಅರ್ಥಂ ಪ್ರತ್ಯಪದ್ಯತ= ಅರ್ಥವೆಂದು ಪರಿಗಣಿಸಿತೋ, ಅತಃ= ಆದ್ದರಿಂದ, ಬುದ್ಧಿಮಾನ್= ವಿವೇಕಿಯಾದವನು, ಜೀವಬ್ರಹ್ಮತಾಯಾಂ= ಜೀವನಿಗೆ ಬ್ರಹ್ಮೈಕ್ಯವನ್ನು ಹೇಳುವುದಕ್ಕೆ, ತಾಂ= ಆ ಶ್ರುತಿಯನ್ನು, ನ ಯುಂಜೀತ= ಉಪಯೋಗಿಸಬಾರದು, ಯತ್= ಏಕೆಂದರೆ, ತೇಷು= ಆ ಜೀವರಲ್ಲಿ,

ಅರ್ಥಾತ್= ಆರ್ಥಿಕವಾಗಿ, ಅಬ್ರಹ್ಮತಾ= ಬ್ರಹ್ಮಭಿನ್ನತ್ವವು, ಪ್ರಾಪ್ತಾ= ಪ್ರಾಪ್ತವಾಗುತ್ತದೆ, ತತ್= ಆದ್ದರಿಂದ, ಇಯಂ= ಈ ವಾಕ್ಯವು, ಭೇದವಾಕ್= ಭೇದಪ್ರತಿಪಾದನೆಯನ್ನು ಮಾಡುವ ವಾಕ್ಯವಾಗಿದೆ.

**ಅನುವಾದ–** ವಿಶೇಷ್ಯ ಸಂಗತವಾದ ಏವಕಾರಕ್ಕೆ ಬುಧಮಂಡಲಿಯು ಅನ್ಯಯೋಗ ವ್ಯವಚ್ಛೇದವೇ ಅರ್ಥ ಎಂದು ನಿರ್ಣಯಿಸಿದ ಕಾರಣದಿಂದ ವಿವೇಕಿಯಾದವನು ಜೀವರಿಗೆ ಬ್ರಹ್ಮೈಕ್ಯವನ್ನು ಹೇಳಲು ಆ ವಾಕ್ಯವನ್ನು ಉಪಯೋಗಿಸಬಾರದು. ಏಕೆಂದರೆ ಆ ವಾಕ್ಯದಿಂದಲೇ ಜೀವರಲ್ಲಿ ಬ್ರಹ್ಮಭೇದವು ಆರ್ಥಿಕವಾಗಿ ಪ್ರಾಪ್ತವಾಗುತ್ತದೆ. ಆದ್ದರಿಂದ ಇದು ಭೇದಪ್ರತಿಪಾದಕ ವಾಕ್ಯವೇ ಆಗುತ್ತದೆ.

**ಭಾವವಿಲಾಸಿನೀ–** ವಿಶೇಷ್ಯಸ್ಯೈವ ಬ್ರಹ್ಮಣಃ ಆತ್ಮಾನಮಿತಿ ಕರ್ಮತ್ವೋಕ್ತೇಸ್ತತ್ಸಂಗತಸ್ಯಾಪ್ಯೇ - ವಕಾರಸ್ಯ ವಿಶೇಷ್ಯಸಂಗತತ್ವಮುಕ್ತಮ್ । ತದೇವಾತ್ಮಾನಂ ಬ್ರಹ್ಮಾಹಮಸ್ಮೀತ್ಯಾವೇದ ತದಾತ್ಮಾನಮೇವ ಬ್ರಹ್ಮಾಹಮಸ್ಮೀತ್ಯಾವೇದೇತಿ ವಾ ವಾಕ್ಯದ್ವಯಸ್ಯ ಚ ಪಾರ್ಥ ಏವಾತ್ಮಾನಂ ಧನುರ್ಧರಂ ಮೇನೇ ಪಾರ್ಥ ಆತ್ಮಾನಮೇವ ಧನುರ್ಧರಂ ಮೇನ ಇತಿ ವಾಕ್ಯದ್ವಯವತ್ ಫಲತಃ ಸಾಮ್ಯಾದಿತಿ ಭಾವಃ । ಅಥವಾ ಏವಶಬ್ದಸ್ಯ ತದಿತ್ಯನೇನೈವ ಸಂಬಂಧಾತ್ ವಿಶೇಷ್ಯಸಂಗತತ್ವಂ ದ್ರಷ್ಟವ್ಯಮ್ । ಅತಃ ಪರಬ್ರಹ್ಮೈಕ್ಯವಾಕ್ಯತ್ವಾತ್ । ತಾಂ ಶ್ರುತಿಮ್ । ಯದ್ಯಸ್ಮಾತ್ । ತೇಷು ಜೀವೇಷು ಅರ್ಥಾತ್ ಆತ್ಮಾನಮೇವ ಬ್ರಹ್ಮೇತ್ಯಾವೇದೇತ್ಯುಕ್ತೇಽನ್ಯೇಷು ಬ್ರಹ್ಮತಾ ನಾಸ್ತಿ । ಅಸ್ತಿ ಚೇತ್ತಾನಪಿ ಬ್ರಹ್ಮತಯಾ ಕುತೋ ನ ವೇತ್ತಿ । ವಿದ್ಯಮಾನಸ್ಯ ವೇದನಯೋಗ್ಯತ್ವಾತ್ । ಅತೋ ನಾಸ್ತ್ಯೇವೇತ್ಯರ್ಥಃ । ಅನೇನೈವ ವಾಕ್ಯೇನ ಜೀವಾನಾಮಬ್ರಹ್ಮತ್ವಸ್ಯಾಪಿ ಸಿದ್ಧೇರಿತಿ ಭಾವಃ । ತತ್ತಸ್ಮಾತ್ ॥ ೯೩೬-೯೩೭ ॥

**ವಿವರಣೆ–** 'ತದಾತ್ಮಾನಮೇವ ಅವೇತ್ ಅಹಂ ಬ್ರಹ್ಮಾಸ್ಮಿ ಇತಿ' ಎಂದು ವಾಕ್ಯವಿದೆ. ಅಲ್ಲಿ ಇರುವ ಏವಕಾರವನ್ನು ತತ್ ಶಬ್ದದಿಂದಲಾಗಲೀ ಅಥವಾ ಅರ್ಥಶಬ್ದದಿಂದಲಾಗಲೀ ಅನ್ವಯಿಸಬಹುದು. ಆಗ 'ತದೇವ ಆತ್ಮಾನಂ ಬ್ರಹ್ಮಾಹಮಸ್ಮಿ ಇತ್ಯವೇತ್' ಎಂದಾಗಲೀ 'ತದ್ ಆತ್ಮಾನಮೇವ ಬ್ರಹ್ಮಾಹಮಸ್ಮಿ ಇತಿ ಅವೇತ್' ಎಂದಾಗಲೀ ಯೋಜನೆ ಉಂಟಾಗುತ್ತದೆ. ಅದರ ಅರ್ಥವನ್ನು ನಿರ್ಧರಿಸುವುದಕ್ಕಾಗಿ ಪಾರ್ಥ ಏವ ಧನುರ್ಧರಃ' ಎಂಬ ವಾಕ್ಯದ ಅರ್ಥವನ್ನು ಹಾಗೆಯೇ ಉಳಿಸಿಕೊಂಡು 'ಪಾರ್ಥ ಏವ ಆತ್ಮಾನಂ ಧನುರ್ಧರಂ ಮೇನೇ' - ಪಾರ್ಥನೇ ತನ್ನನ್ನು ಧನುರ್ಧರನೆಂದು ತಿಳಿದನು ಎಂದಾಗಲೀ, 'ಪಾರ್ಥ ಆತ್ಮಾನಂ ಧನುರ್ಧರಂ ಮೇನೇ' - ಪಾರ್ಥನು ತನ್ನನ್ನೇ ಧನುರ್ಧರನೆಂದು ತಿಳಿದನು ಎಂಬ ಎರಡು ಅರ್ಥಗಳನ್ನು ಹೇಳಬಹುದು. ಪಾರ್ಥನೇ ತನ್ನನ್ನು ಧನುರ್ಧರನೆಂದು ತಿಳಿದನು ಎಂಬ ಮೊದಲನೇ ಯೋಜನೆಯಲ್ಲಿ ಇನ್ನೊಬ್ಬನು ತನ್ನನ್ನು ಧನುರ್ಧರನೆಂದು ತಿಳಿಯಲಿಲ್ಲ ಎಂದು

ಅರ್ಥಾತ್ ಸಿದ್ಧವಾಗುವುದರಿಂದ ಧನುರ್ಧರತ್ವವು ಪಾರ್ಥನಲ್ಲಿಯೇ ಇದೆ, ಬೇರೆ ಕಡೆಯಲ್ಲಿ ಇಲ್ಲ ಎಂದು ಸಿದ್ಧವಾಗುತ್ತದೆ. ಪಾರ್ಥನು ತನ್ನನ್ನೇ ಧನುರ್ಧರನೆಂದು ತಿಳಿದನು ಎಂಬ ಎರಡನೇ ಯೋಜನೆಯಲ್ಲಿ ತನ್ನನ್ನೇ ಧನುರ್ಧರನೆಂದು ತಿಳಿದನು, ಇನ್ನೊಬ್ಬನನ್ನು ಧನುರ್ಧರನೆಂದು ತಿಳಿಯಲಿಲ್ಲ ಎಂದು ಪಾರ್ಥನಲ್ಲಿಯೇ ಧನುರ್ಧರತ್ವವು ಸಿದ್ಧವಾಗುತ್ತದೆ. ಹೀಗೆ ಏವಕಾರವು ಪಾರ್ಥನನ್ನು ಬಿಟ್ಟು ಬೇರೆ ಕಡೆಯಲ್ಲಿ ಧನುರ್ಧರತ್ವ ಸಂಬಂಧವನ್ನು ವ್ಯವಚ್ಛೇದ ಮಾಡುತ್ತದೆ. ಹಾಗೆಯೇ ಇಲ್ಲಿ ಬ್ರಹ್ಮನೇ ತನ್ನನ್ನು 'ಅಹಂ ಬ್ರಹ್ಮಾಸ್ಮಿ' ಎಂದು ತಿಳಿದುಕೊಂಡನು ಎಂದು ಅರ್ಥಮಾಡಿದರೂ ಜೀವನು ತಾನು ಬ್ರಹ್ಮನಲ್ಲ ಎಂದು ಅರ್ಥಾತ್ ಸಿದ್ಧವಾಗುವುದರಿಂದ ಈ ವಾಕ್ಯವು ಬ್ರಹ್ಮವಾಕ್ಯವೆಂದೇ ಸಿದ್ಧವಾಗುತ್ತದೆ. ಫಲತಃ ಬ್ರಹ್ಮತ್ವವು ಜೀವನಲ್ಲಿಲ್ಲ, ಅಬ್ರಹ್ಮತ್ವವೇ ಇದೆ ಎಂದು ಸಿದ್ಧವಾಗುತ್ತದೆ. ಅದರಂತೆ ಬ್ರಹ್ಮನು ತನ್ನನ್ನೇ ಅಹಂ ಬ್ರಹ್ಮಾಸ್ಮಿ ಎಂದು ತಿಳಿದುಕೊಂಡನು ಎಂದು ಯೋಜನೆಯನ್ನು ಮಾಡಿದರೂ, ಜೀವನನ್ನು ಅಹಂ ಬ್ರಹ್ಮಾಸ್ಮಿ ಎಂದು ತಿಳಿದುಕೊಳ್ಳಲಿಲ್ಲ ಎಂದು ಅರ್ಥಾತ್ ಸಿದ್ಧವಾಗುವುದರಿಂದ ಫಲತಃ ಜೀವನಲ್ಲಿ ಬ್ರಹ್ಮತ್ವವು ಸಿದ್ಧವಾಗುವುದಿಲ್ಲ. ಅಷ್ಟೇ ಅಲ್ಲ, ಇಲ್ಲಿಯೂ ಜೀವನಲ್ಲಿ ಅಬ್ರಹ್ಮತ್ವವೇ ಸಿದ್ಧವಾಗುತ್ತದೆ. ಆದ್ದರಿಂದ 'ಅಹಂ ಬ್ರಹ್ಮಾಸ್ಮಿ ಇತಿ' ಎನ್ನುವ ಜೊತೆಯಲ್ಲಿ ಅದರ ಶೇಷವಾದ 'ತದ್ಆತ್ಮಾನಮವೇತ್' ಎಂಬುದನ್ನು ಜೋಡಿಸಿದಾಗ ಈ ವಾಕ್ಯವು ಜೀವಬ್ರಹ್ಮರ ಭೇದವನ್ನೇ ಹೇಳುತ್ತದೆ ಎಂದು ಸಿದ್ಧವಾಗುತ್ತದೆ.

**ಋಷಯೋನುವದಂತ್ಯೇತಾಂ ಪ್ರಭೋರ್ವಾಕ್ಯತ್ವತಃ ಕ್ವಚಿತ್ ।**
**ಮತ್ತಃ ಪರತರಂ ನಾಸ್ತೀತ್ಯಾದಿ ವಾಕ್ಯಾನುವಕ್ತೃವತ್ ॥ ೯೩೮ ॥**

**ಅರ್ಥ–** ಮತ್ತಃ ಪರತರಂ ನಾಸ್ತಿ= ನನಗಿಂತ ಶ್ರೇಷ್ಠವಾದುದು ಇಲ್ಲ, ಇತ್ಯಾದಿ ವಾಕ್ಯಾನುವಕ್ತೃವತ್= ಮುಂತಾದ ಕೃಷ್ಣನ ವಾಕ್ಯವನ್ನು ಪಠಿಸುವವರಂತೆ, ಋಷಯಃ= ಋಷಿಗಳು, ಪ್ರಭೋಃ ವಾಕ್ಯತ್ವತಃ= ಪ್ರಭುವಿನ ವಾಕ್ಯವೆಂದು, ಕ್ವಚಿತ್= ಅಲ್ಲಲ್ಲಿ, ಏತಾಂ= ಈ ವಾಕ್ಯವನ್ನು, ಅನುವದಂತಿ= ಅನುವಾದ ಮಾಡುತ್ತಾರೆ.

**ಅನುವಾದ–** 'ಮತ್ತಃ ಪರತರಂ ನಾನ್ಯತ್ ಕಿಂಚಿದಸ್ತಿ ಧನಂಜಯ' ಎಂಬ ಕೃಷ್ಣನ ಮಾತನ್ನು ಪಾರಾಯಣ ಮಾಡುವವರು ಹೇಗೆ ಅನುವಾದ ಮಾಡುತ್ತಾರೆಯೋ, ಅದರಂತೆಯೇ 'ಅಹಂ ಬ್ರಹ್ಮಾಸ್ಮಿ' ಎಂಬ ಬ್ರಹ್ಮನ ವಾಕ್ಯವನ್ನು ಋಷಿಗಳು ಪ್ರಭುವಿನ ವಾಕ್ಯವೆಂದು ಅನುವಾದ ಮಾಡುತ್ತಾರೆ.

**ಭಾವವಿಲಾಸಿನೀ–** ತರ್ಹಿ ಕ್ವಚಿತ್ ಕ್ವಚಿತ್ ಪ್ರದೇಶೇ ಋಷಿಭಿರಪಿ ಬ್ರಹ್ಮಾಹಮಸ್ಮಿ ಸೋಹಮಸ್ಮೀತ್ಯಾದ್ಯುಚ್ಯತೇ । ತಸ್ಯ ಕಾ ಗತಿರಿತ್ಯತ ಆಹ – ಋಷಯ ಇತಿ ॥ ಮತ್ತಃ ಪರತರಂ

ನಾನ್ಯದಿತಿ ಕೃಷ್ಣವಾಕ್ಯಸ್ಯಾನ್ಯೈರಪಿ ಭಕ್ತ್ಯಾ ದಿನೇ ದಿನೇ ಪಾಠೇಽಪಿ ಯಥಾ ತೇಷಾಂ ಸರ್ವೋತ್ತಮತಾ ನಾಯಾತಿ । ತಥೇದಮಪಿ । ತಸ್ಮಾದಘಮರ್ಷಣಸೂಕ್ತಸ್ಥವಾಕ್ಯಮಪಿ ನ ಜೀವಾನಾಂ ಬ್ರಹ್ಮೈಕ್ಯಸಂಪಾದಕಮಿತಿ ಭಾವಃ ॥ ೯೩೮ ॥

**ವಿವರಣೆ–** ಹಾಗಾದರೆ ಋಷಿಗಳು ಹೇಳುವ ಅಲ್ಲಲ್ಲಿ ಕಂಡುಬರುವ 'ಅಹಂ ಬ್ರಹ್ಮಾಸ್ಮಿ' ಎಂಬ ವಾಕ್ಯಕ್ಕೆ ಏನು ಗತಿ ಎಂಬ ಶಂಕೆಯು ಬಂದರೆ ಅದಕ್ಕೆ ಇಲ್ಲಿ ಸಮಾಧಾನವನ್ನು ಹೇಳುತ್ತಾರೆ. 'ಮತ್ತಃ ಪರತರಂ ನಾನ್ಯತ್' ಎಂಬ ಕೃಷ್ಣನ ವಾಕ್ಯವನ್ನು ಪ್ರತಿದಿನವೂ ಪಾರಾಯಣ ಮಾಡಿದರೂ ಅದರಿಂದ ಹೇಗೆ ಸರ್ವೋತ್ತಮತ್ವವು ಬರುವುದಿಲ್ಲವೋ ಅದರಂತೆ 'ಅಹಂ ಬ್ರಹ್ಮಾಸ್ಮಿ' ಎಂಬ ವಾಕ್ಯವು ದೇವರ ವಾಕ್ಯವೆಂದು ತಿಳಿದು ಋಷಿಗಳು ಅನುವಾದ ಮಾಡಿದರೂ ಅವರಿಗೆ ಬ್ರಹ್ಮತ್ವವು ಸಿದ್ಧವಾಗುವುದಿಲ್ಲ. ಪುಣ್ಯವಿಶೇಷಪ್ರಾಪ್ತಿಗಾಗಿ ದೇವರ ವಾಕ್ಯವೆಂದೇ ಅವರು ಅದನ್ನು ಅನುವಾದ ಮಾಡುತ್ತಾರೆ. ಆದ್ದರಿಂದ ಅಘಮರ್ಷಣಸೂಕ್ತದಲ್ಲಿರುವ 'ಅಹಂ ಬ್ರಹ್ಮಾಸ್ಮಿ' ಅಥವಾ 'ಬ್ರಹ್ಮಾಹಮಸ್ಮಿ' ಎಂಬ ವಾಕ್ಯವೂ ಸಹ ಜೀವರಿಗೆ ಬ್ರಹ್ಮೈಕ್ಯವನ್ನು ಸಾಧಿಸುವುದಿಲ್ಲ ಎಂದು ಅಭಿಪ್ರಾಯ.

**ಸೋಽಹಮಿತ್ಯಾದಿ ವಾಕ್ಯಸ್ಯಾಪ್ಯೇವಮೇವ ಗತಿರ್ಭವೇತ್ ।**
**ಯೋ ವೇತ್ತಿ ವೇದಮರ್ಯಾದಾಂ ತದ್ಭೀತ್ಯೈ ನೇದೃಶಂ ವಚಃ ॥ ೯೩೯ ॥**

**ಅರ್ಥ–** ಸೋಽಹಮಿತ್ಯಾದಿ ವಾಕ್ಯಸ್ಯಾಪಿ= ಸೋಽಹಮಸ್ಮಿ ಸ ಏವಾಹಮಸ್ಮಿ ಇತ್ಯಾದಿ ವಾಕ್ಯಗಳಿಗೂ ಸಹ, ಏವಮೇವ= ಈ ರೀತಿಯೇ, ಗತಿಃ= ಯೋಜನೆಯು, ಭವೇತ್= ಉಂಟಾಗುತ್ತದೆ, ಯಃ= ಯಾವನು, ವೇದಮರ್ಯಾದಾಂ= ವೇದಮರ್ಯಾದೆಯನ್ನು ವೇತ್ತಿ= ತಿಳಿಯುತ್ತಾನೆಯೋ, ಈದೃಶಂ ವಚಃ= ಇಂತಹ ವಾಕ್ಯವು, ತದ್ಭೀತ್ಯೈ= ಅವನಿಗೆ ಭಯವನ್ನು ಉಂಟುಮಾಡುವುದಾಗಿ, ನ= ಆಗುವುದಿಲ್ಲ.

**ಅನುವಾದ–** ಸೋಽಹಮಸ್ಮಿ, ಸ ಏವಾಹಮಸ್ಮಿ ಎಂಬ ವಾಕ್ಯಗಳ ಯೋಜನೆಯನ್ನೂ ಇದೇ ರೀತಿಯಲ್ಲಿ ಮಾಡಬೇಕು. ಯಾವನು ವೇದಮರ್ಯಾದೆಯನ್ನು ತಿಳಿದಿದ್ದಾನೆಯೋ ಅವನಿಗೆ ಇಂತಹ ವಾಕ್ಯಗಳಿಂದ ಭಯವಿಲ್ಲ.

**ವಿವರಣೆ–** 'ಸೋಽಹಮಸ್ಮಿ, ಸ ಏವಾಹಮಸ್ಮಿ' ಎಂಬಲ್ಲಿಯೂ ಸಹ ಸಃ ಎಂಬ ಪದದಲ್ಲಿ ಇರುವ ಪ್ರಥಮಾ ವಿಭಕ್ತಿಗೆ ಸಪ್ತಮೀ ವಿಭಕ್ತಿಯ ಅರ್ಥವನ್ನು ಹೇಳಿ ಅವನಲ್ಲಿ ನಾನಿದ್ದೇನೆ, ಅವನಲ್ಲಿಯೇ ನಾನಿದ್ದೇನೆ ಎಂದು ಜೀವನಿಗೆ ಬ್ರಹ್ಮಾಶ್ರಿತತ್ವವನ್ನು, ಬ್ರಹ್ಮವ್ಯತಿರಿಕ್ತಾನಾಶ್ರಿ-ತತ್ವವನ್ನು ಅರ್ಥವೆಂದು ಹೇಳಬೇಕು ಎಂದು ಅಭಿಪ್ರಾಯ.

**ಸರ್ವಂ ಬ್ರಹ್ಮೇತಿ ವಾಕ್ಯಾಚ್ಚ ಕಿಂ ಜಡಬ್ರಹ್ಮತಾಪಿ ತೇ ।**
**ಬಾಧಾತ್ತತಸ್ತು ಸಂಕೋಚೇ ಜೀವಾದಪ್ಯಸ್ತು ಬಾಧಿತಾತ್ ॥ ೯೪೦ ॥**

ಅರ್ಥಾತ್ ಸಿದ್ಧವಾಗುವುದರಿಂದ ಧನುರ್ಧರತ್ವವು ಪಾರ್ಥನಲ್ಲಿಯೇ ಇದೆ, ಬೇರೆ ಕಡೆಯಲ್ಲಿ ಇಲ್ಲ ಎಂದು ಸಿದ್ಧವಾಗುತ್ತದೆ. ಪಾರ್ಥನು ತನ್ನನ್ನೇ ಧನುರ್ಧರನೆಂದು ತಿಳಿದನು ಎಂಬ ಎರಡನೇ ಯೋಜನೆಯಲ್ಲಿ ತನ್ನನ್ನೇ ಧನುರ್ಧರನೆಂದು ತಿಳಿದನು, ಇನ್ನೊಬ್ಬನನ್ನು ಧನುರ್ಧರನೆಂದು ತಿಳಿಯಲಿಲ್ಲ ಎಂದು ಪಾರ್ಥನಲ್ಲಿಯೇ ಧನುರ್ಧರತ್ವವು ಸಿದ್ಧವಾಗುತ್ತದೆ. ಹೀಗೆ ಏವಕಾರವು ಪಾರ್ಥನನ್ನು ಬಿಟ್ಟು ಬೇರೆ ಕಡೆಯಲ್ಲಿ ಧನುರ್ಧರತ್ವ ಸಂಬಂಧವನ್ನು ವ್ಯವಚ್ಛೇದ ಮಾಡುತ್ತದೆ. ಹಾಗೆಯೇ ಇಲ್ಲಿ ಬ್ರಹ್ಮನೇ ತನ್ನನ್ನು 'ಅಹಂ ಬ್ರಹ್ಮಾಸ್ಮಿ' ಎಂದು ತಿಳಿದುಕೊಂಡನು ಎಂದು ಅರ್ಥಮಾಡಿದರೂ ಜೀವನು ತಾನು ಬ್ರಹ್ಮನಲ್ಲ ಎಂದು ಅರ್ಥಾತ್ ಸಿದ್ಧವಾಗುವುದರಿಂದ ಈ ವಾಕ್ಯವು ಬ್ರಹ್ಮವಾಕ್ಯವೆಂದೇ ಸಿದ್ಧವಾಗುತ್ತದೆ. ಫಲತಃ ಬ್ರಹ್ಮತ್ವವು ಜೀವನಲ್ಲಿಲ್ಲ, ಅಬ್ರಹ್ಮತ್ವವೇ ಇದೆ ಎಂದು ಸಿದ್ಧವಾಗುತ್ತದೆ. ಅದರಂತೆ ಬ್ರಹ್ಮನು ತನ್ನನ್ನೇ ಅಹಂ ಬ್ರಹ್ಮಾಸ್ಮಿ ಎಂದು ತಿಳಿದುಕೊಂಡನು ಎಂದು ಯೋಜನೆಯನ್ನು ಮಾಡಿದರೂ, ಜೀವನನ್ನು ಅಹಂ ಬ್ರಹ್ಮಾಸ್ಮಿ ಎಂದು ತಿಳಿದುಕೊಳ್ಳಲಿಲ್ಲ ಎಂದು ಅರ್ಥಾತ್ ಸಿದ್ಧವಾಗುವುದರಿಂದ ಫಲತಃ ಜೀವನಲ್ಲಿ ಬ್ರಹ್ಮತ್ವವು ಸಿದ್ಧವಾಗುವುದಿಲ್ಲ. ಅಷ್ಟೇ ಅಲ್ಲ, ಇಲ್ಲಿಯೂ ಜೀವನಲ್ಲಿ ಅಬ್ರಹ್ಮತ್ವವೇ ಸಿದ್ಧವಾಗುತ್ತದೆ. ಆದ್ದರಿಂದ 'ಅಹಂ ಬ್ರಹ್ಮಾಸ್ಮಿ ಇತಿ' ಎನ್ನುವ ಜೊತೆಯಲ್ಲಿ ಅದರ ಶೇಷವಾದ 'ತದ್ಮಾತ್ಮಾನಮವೇತ್' ಎಂಬುದನ್ನು ಜೋಡಿಸಿದಾಗ ಈ ವಾಕ್ಯವು ಜೀವಬ್ರಹ್ಮರ ಭೇದವನ್ನೇ ಹೇಳುತ್ತದೆ ಎಂದು ಸಿದ್ಧವಾಗುತ್ತದೆ.

**ಋಷಯೋನುವದಂತ್ಯೇತಾಂ ಪ್ರಭೋರ್ವಾಕ್ಯತ್ವತಃ ಕ್ವಚಿತ್ ।**
**ಮತ್ತಃ ಪರತರಂ ನಾಸ್ತೀತ್ಯಾದಿ ವಾಕ್ಯಾನುವಕ್ತೃವತ್ ॥ ೯೩೮ ॥**

**ಅರ್ಥ–** ಮತ್ತಃ ಪರತರಂ ನಾಸ್ತಿ= ನನಗಿಂತ ಶ್ರೇಷ್ಠವಾದುದು ಇಲ್ಲ, ಇತ್ಯಾದಿ ವಾಕ್ಯಾನುವಕ್ತೃವತ್= ಮುಂತಾದ ಕೃಷ್ಣನ ವಾಕ್ಯವನ್ನು ಪಠಿಸುವವರಂತೆ, ಋಷಯಃ= ಋಷಿಗಳು, ಪ್ರಭೋಃ ವಾಕ್ಯತ್ವತಃ= ಪ್ರಭುವಿನ ವಾಕ್ಯವೆಂದು, ಕ್ವಚಿತ್= ಅಲ್ಲಲ್ಲಿ, ಏತಾಂ= ಈ ವಾಕ್ಯವನ್ನು, ಅನುವದಂತಿ= ಅನುವಾದ ಮಾಡುತ್ತಾರೆ.

**ಅನುವಾದ–** 'ಮತ್ತಃ ಪರತರಂ ನಾನ್ಯತ್ ಕಿಂಚಿದಸ್ತಿ ಧನಂಜಯ' ಎಂಬ ಕೃಷ್ಣನ ಮಾತನ್ನು ಪಾರಾಯಣ ಮಾಡುವವರು ಹೇಗೆ ಅನುವಾದ ಮಾಡುತ್ತಾರೆಯೋ, ಅದರಂತೆಯೇ 'ಅಹಂ ಬ್ರಹ್ಮಾಸ್ಮಿ' ಎಂಬ ಬ್ರಹ್ಮನ ವಾಕ್ಯವನ್ನು ಋಷಿಗಳು ಪ್ರಭುವಿನ ವಾಕ್ಯವೆಂದು ಅನುವಾದ ಮಾಡುತ್ತಾರೆ.

**ಭಾವವಿಲಾಸಿನೀ–** ತರ್ಹಿ ಕ್ವಚಿತ್ ಕ್ವಚಿತ್ ಪ್ರದೇಶೇ ಋಷಿಭಿರಪಿ ಬ್ರಹ್ಮಾಹಮಸ್ಮಿ ಸೋಹಮಸ್ಮೀತ್ಯಾದ್ಯುಚ್ಯತೇ । ತಸ್ಯ ಕಾ ಗತಿರಿತ್ಯತ ಆಹ – ಋಷಯ ಇತಿ ॥ ಮತ್ತಃ ಪರತರಂ

ನಾನ್ಯದಿತಿ ಕೃಷ್ಣವಾಕ್ಯಸ್ಯಾನ್ಯೈರಪಿ ಭಕ್ತ್ಯಾ ದಿನೇ ದಿನೇ ಪಾಠೇऽಪಿ ಯಥಾ ತೇಷಾಂ ಸರ್ವೋತ್ತಮತಾ ನಾಯಾತಿ । ತಥೇದಮಪಿ । ತಸ್ಮಾದಘಮರ್ಷಣಸೂಕ್ತಸ್ಥವಾಕ್ಯಮಪಿ ನ ಜೀವಾನಾಂ ಬ್ರಹ್ಮೈಕ್ಯಸಂಪಾದಕಮಿತಿ ಭಾವಃ ॥ ೯೩೮ ॥

**ವಿವರಣೆ–** ಹಾಗಾದರೆ ಋಷಿಗಳು ಹೇಳುವ ಅಲ್ಲಲ್ಲಿ ಕಂಡುಬರುವ 'ಅಹಂ ಬ್ರಹ್ಮಾಸ್ಮಿ' ಎಂಬ ವಾಕ್ಯಕ್ಕೆ ಏನು ಗತಿ ಎಂಬ ಶಂಕೆಯು ಬಂದರೆ ಅದಕ್ಕೆ ಇಲ್ಲಿ ಸಮಾಧಾನವನ್ನು ಹೇಳುತ್ತಾರೆ. 'ಮತ್ತಃ ಪರತರಂ ನಾನ್ಯತ್' ಎಂಬ ಕೃಷ್ಣನ ವಾಕ್ಯವನ್ನು ಪ್ರತಿದಿನವೂ ಪಾರಾಯಣ ಮಾಡಿದರೂ ಅದರಿಂದ ಹೇಗೆ ಸರ್ವೋತ್ತಮತ್ವವು ಬರುವುದಿಲ್ಲವೋ ಅದರಂತೆ 'ಅಹಂ ಬ್ರಹ್ಮಾಸ್ಮಿ' ಎಂಬ ವಾಕ್ಯವು ದೇವರ ವಾಕ್ಯವೆಂದು ತಿಳಿದು ಋಷಿಗಳು ಅನುವಾದ ಮಾಡಿದರೂ ಅವರಿಗೆ ಬ್ರಹ್ಮತ್ವವು ಸಿದ್ಧವಾಗುವುದಿಲ್ಲ. ಪುಣ್ಯವಿಶೇಷಪ್ರಾಪ್ತಿಗಾಗಿ ದೇವರ ವಾಕ್ಯವೆಂದೇ ಅವರು ಅದನ್ನು ಅನುವಾದ ಮಾಡುತ್ತಾರೆ. ಆದ್ದರಿಂದ ಅಘಮರ್ಷಣಸೂಕ್ತದಲ್ಲಿರುವ 'ಅಹಂ ಬ್ರಹ್ಮಾಸ್ಮಿ' ಅಥವಾ 'ಬ್ರಹ್ಮಾಹಮಸ್ಮಿ' ಎಂಬ ವಾಕ್ಯವೂ ಸಹ ಜೀವರಿಗೆ ಬ್ರಹ್ಮೈಕ್ಯವನ್ನು ಸಾಧಿಸುವುದಿಲ್ಲ ಎಂದು ಅಭಿಪ್ರಾಯ.

**ಸೋಹಮಿತ್ಯಾದಿ ವಾಕ್ಯಸ್ಯಾಪ್ಯೇವಮೇವ ಗತಿರ್ಭವೇತ್ ।**
**ಯೋ ವೇತ್ತಿ ವೇದಮರ್ಯಾದಾಂ ತದ್ಭೀತ್ಯೈ ನೇದೃಶಂ ವಚಃ ॥ ೯೩೯ ॥**

**ಅರ್ಥ–** ಸೋಹಮಿತ್ಯಾದಿ ವಾಕ್ಯಸ್ಯಾಪಿ= ಸೋಹಮಸ್ಮಿ ಸ ಏವಾಹಮಸ್ಮಿ ಇತ್ಯಾದಿ ವಾಕ್ಯಗಳಿಗೂ ಸಹ, ಏವಮೇವ= ಈ ರೀತಿಯೇ, ಗತಿಃ= ಯೋಜನೆಯು, ಭವೇತ್= ಉಂಟಾಗುತ್ತದೆ, ಯಃ= ಯಾವನು, ವೇದಮರ್ಯಾದಾಂ= ವೇದಮರ್ಯಾದೆಯನ್ನು ವೇತ್ತಿ= ತಿಳಿಯುತ್ತಾನೆಯೋ, ಈದೃಶಂ ವಚಃ= ಇಂತಹ ವಾಕ್ಯವು, ತದ್ಭೀತ್ಯೈ= ಅವನಿಗೆ ಭಯವನ್ನು ಉಂಟುಮಾಡುವುದಾಗಿ, ನ= ಆಗುವುದಿಲ್ಲ.

**ಅನುವಾದ– ಸೋಹಮಸ್ಮಿ, ಸ ಏವಾಹಮಸ್ಮಿ ಎಂಬ ವಾಕ್ಯಗಳ ಯೋಜನೆಯನ್ನೂ ಇದೇ ರೀತಿಯಲ್ಲಿ ಮಾಡಬೇಕು. ಯಾವನು ವೇದಮರ್ಯಾದೆಯನ್ನು ತಿಳಿದಿದ್ದಾನೆಯೋ ಅವನಿಗೆ ಇಂತಹ ವಾಕ್ಯಗಳಿಂದ ಭಯವಿಲ್ಲ.**

**ವಿವರಣೆ–** 'ಸೋಹಮಸ್ಮಿ, ಸ ಏವಾಹಮಸ್ಮಿ' ಎಂಬಲ್ಲಿಯೂ ಸಹ ಸಃ ಎಂಬ ಪದದಲ್ಲಿ ಇರುವ ಪ್ರಥಮಾ ವಿಭಕ್ತಿಗೆ ಸಪ್ತಮೀ ವಿಭಕ್ತಿಯ ಅರ್ಥವನ್ನು ಹೇಳಿ ಅವನಲ್ಲಿ ನಾನಿದ್ದೇನೆ, ಅವನಲ್ಲಿಯೇ ನಾನಿದ್ದೇನೆ ಎಂದು ಜೀವನಿಗೆ ಬ್ರಹ್ಮಾಶ್ರಿತತ್ವವನ್ನು, ಬ್ರಹ್ಮವ್ಯತಿರಿಕ್ತಾನಾಶ್ರಿತತ್ವವನ್ನು ಅರ್ಥವೆಂದು ಹೇಳಬೇಕು ಎಂದು ಅಭಿಪ್ರಾಯ.

**ಸರ್ವಂ ಬ್ರಹ್ಮೇತಿ ವಾಕ್ಯಾಚ್ಚ ಕಿಂ ಜಡಬ್ರಹ್ಮತಾಪಿ ತೇ ।**
**ಬಾಧಾತ್ತತಸ್ತು ಸಂಕೋಚೇ ಜೀವಾದಪ್ಯಸ್ತು ಬಾಧಿತಾತ್ ॥ ೯೪೦ ॥**

**ಅರ್ಥ–** ಸರ್ವಂ ಬ್ರಹ್ಮೇತಿ ವಾಕ್ಯಾಚ್ಚ= ಸರ್ವಂ ಖಲ್ವಿದಂಬ್ರಹ್ಮ ಎಂಬ ವಾಕ್ಯದಿಂದಲೂ, ತೇ= ನಿನಗೆ, ಜಡಬ್ರಹ್ಮತಾಪಿ= ಜಡಬ್ರಹ್ಮೈಕ್ಯವೂ ಕೂಡ, ಕಿಂ= ಇದೆಯೇ, ಬಾಧಾತ್= ಬಾಧವಿರುವುದರಿಂದ, ತತಃ= ಆ ಜಡವನ್ನು ಬಿಟ್ಟು, ಸಂಕೋಚೇ ತು= ಸಂಕೋಚವನ್ನು ಮಾಡುವುದಾದರೆ, ಬಾಧಿತಾತ್= ಬಾಧಿತವಾದ, ಜೀವಾದಪಿ= ಜೀವನಿಂದಲೂ, ಅಸ್ತು= ಸಂಕೋಚವೇ ಇರಲಿ.

**ಅನುವಾದ–** 'ಸರ್ವಂ ಖಲ್ವಿದಂ ಬ್ರಹ್ಮ' ಎಂಬ ವಾಕ್ಯದಿಂದಲೂ ನಿನಗೆ ಜಡಬ್ರಹ್ಮೈಕ್ಯವು ಸಿದ್ಧವಾಗುತ್ತದೆಯೇ? ಜಡಬ್ರಹ್ಮೈಕ್ಯವು ಬಾಧಿತವಾಗುವುದರಿಂದ ಜಡವನ್ನು ಬಿಟ್ಟು ವಿಶ್ವದಲ್ಲಿ ಉಳಿದ ಚೈತನ್ಯಪರವಾಗಿ ಸರ್ವ ಶಬ್ದವನ್ನು ಸಂಕೋಚ ಮಾಡುವುದಾದರೆ ಜೀವನ ಐಕ್ಯವನ್ನು ಹೇಳಿದರೂ ಬಾಧವು ಬರುವುದರಿಂದ ಸರ್ವ ಪದಾರ್ಥದಿಂದ ಜೀವನನ್ನೂ ಪೃಥಕ್ಕರಿಸಿ ಸಂಕೋಚವನ್ನು ಮಾಡು.

**ಭಾವವಿಲಾಸಿನೀ–** ಸರ್ವಂ ಖಲ್ವಿದಂ ಬ್ರಹ್ಮೇತಿ ವಾಕ್ಯಸ್ಯ ಪ್ರಾಕ್‌ದೂಷಿತತ್ವೇಽಪಿ ತತ್ರಾನುಕ್ತ ದೋಷಮಪಿ ವಕ್ತುಂ ಪುನರಾಹ – **ಸರ್ವಮಿತ್ಯಾದಿನಾ** ॥ ತತಃ ಜಡಾತ್ । ಬಾಧಿತಾತ್ । ಜೀವಾದಪಿ । ಅಸ್ತು ಸಂಕೋಚೋಸ್ತು । ನಾಹಂ ಸರ್ವಜ್ಞ ಇತಿ ಜೀವೈಕ್ಯಸ್ಯಾಪಿ ಬಾಧಿತತ್ವಾತ್ । ಕಿಂಚ ಜಡೇ ನಾಹಂ ಸರ್ವಜ್ಞ ಇತಿ ಪ್ರತ್ಯಕ್ಷಾಭಾವೇನ ಜೀವಭೇದಸ್ಯೇವ ಸಾಕ್ಷಿರೂಪಾತಿಪ್ರಬಲಸ್ವಪ್ರತ್ಯಕ್ಷಬಾಧಾಭಾವಾತ್ ಅತೀಂದ್ರಿಯೇಷು ಜಡೇಷು ಪ್ರಾಯಃ ಪರಪ್ರತ್ಯಕ್ಷಸ್ಯಾಭಾವಾತ್ ಜಡಸ್ಯ ಬ್ರಹ್ಮೈಕ್ಯೇ ಯುಕ್ತಿಬಾಧ ಏವ ನ ತು ಪ್ರತ್ಯಕ್ಷಬಾಧಃ । ಈಶ್ವರಪ್ರತ್ಯಕ್ಷಸ್ಯ ಚಾಸ್ಮಾಭಿರದರ್ಶನಾತ್ । ಜೀವಾಭೇದಸ್ತೂಕ್ತಸಯುಕ್ತಿಕಪ್ರಬಲಪ್ರತ್ಯಕ್ಷಬಾಧಿತತ್ವಾತ್ ಸರ್ವಥಾ ಪರಿತ್ಯಾಜ್ಯ ಇತಿ ಭಾವೋ ವಿಜ್ಞೇಯಃ ॥ ೯೪೦ ॥

**ವಿವರಣೆ–** ಈಗ ಹಿಂದೆ ದೋಷವನ್ನು ಹೇಳಿದ್ದರೂ ಹೊಸ ದೋಷವನ್ನು ಹೇಳುವುದಕ್ಕೋಸ್ಕರ ಇನ್ನೊಮ್ಮೆ 'ಸರ್ವಂ ಖಲ್ವಿದಂ ಬ್ರಹ್ಮ' ಎಂಬ ವಾಕ್ಯವನ್ನು ವಿಮರ್ಶೆ ಮಾಡುತ್ತಾರೆ. ಸರ್ವಶಬ್ದಾರ್ಥದಲ್ಲಿ ಜಡಚೇತನಗಳೆರಡೂ ಸೇರಿದರೂ ಜಡಚೇತನಗಳ ಐಕ್ಯವು ಬಾಧಿತವಾದ್ದರಿಂದ ಸರ್ವ ಶಬ್ದದ ಅರ್ಥದಲ್ಲಿ ಸೇರಿದ ಜಡವನ್ನು ಬಿಟ್ಟು ಚೇತನ ಮಾತ್ರಕ್ಕೆ ಬ್ರಹ್ಮನ ಐಕ್ಯವನ್ನು ಹೇಳುತ್ತೇವೆ ಎಂದು ಅದ್ವೈತಿಗಳ ಅಭಿಪ್ರಾಯ. ಹಾಗೆ ಹೇಳುವುದಾದರೆ ಜೀವನಿಗೆ ಬ್ರಹ್ಮೈಕ್ಯವನ್ನು ಹೇಳಿದರೂ ನಾಹಂ ಸರ್ವಜ್ಞಃ, ನಾಹಂ ನಿರ್ದುಖಃ ಮೊದಲಾದ ಪ್ರತ್ಯಕ್ಷ ಬಾಧವು ಬರುವುದರಿಂದ ಜೀವನ ಐಕ್ಯವೂ ಬಾಧಿತವಾಗುತ್ತದೆ. ಆದ್ದರಿಂದ ಜೀವನನ್ನೂ ಹೊರಗಿಟ್ಟು ಸರ್ವಶಬ್ದಕ್ಕೆ ಸಂಕೋಚವನ್ನು ಮಾಡು ಎಂದು ಹೇಳುತ್ತಾರೆ. ಮತ್ತು ಜಡಕ್ಕಾದರೆ ನಾಹಂ ಸರ್ವಜ್ಞಃ ಎಂಬ ಪ್ರತ್ಯಕ್ಷವಿರಲು ಸಾಧ್ಯವಿಲ್ಲ. ಆದ್ದರಿಂದ ಬ್ರಹ್ಮನಿಗೆ ಜಡೈಕ್ಯವು ಹೇಳಿದರೆ ಕೇವಲ ಯುಕ್ತಿಬಾಧವು ಮಾತ್ರ ಇರುತ್ತದೆ. ಆದರೆ ಜೀವೈಕ್ಯವನ್ನು ಹೇಳಿದರೆ ಈಶ್ವರನಲ್ಲಿರುವ ಪ್ರತ್ಯಕ್ಷವು ನಮಗೆ ಗೋಚರಿಸಿದ್ದರೂ ಜೀವನಲ್ಲಿರುವ 'ನಾಹಂ ಸರ್ವಜ್ಞಃ' ಮುಂತಾದ ಸಾಕ್ಷಿ ಪ್ರತ್ಯಕ್ಷವು

ನಮಗೆ ಗೋಚರವಾಗುತ್ತದೆ. ಇದು ಸ್ಪಷ್ಟವಾಗಿ ಈಶ್ವರನಿಂದ ಭೇದವನ್ನೇ ವಿಷಯೀಕರಿಸುತ್ತದೆ. ಬ್ರಹ್ಮನಿಗೆ ಜೀವನ ಐಕ್ಯವನ್ನು ಹೇಳಿದರೆ ಈ ಪ್ರತ್ಯಕ್ಷದಿಂದಲೂ ಮತ್ತು ಸರ್ವಜ್ಞತ್ವ, ಅಲ್ಪಜ್ಞತ್ವ ರೂಪವಾದ ವಿರುದ್ಧ ಧರ್ಮಾಧಿಕರಣತ್ವರೂಪವಾದ ಯುಕ್ತಿಯಿಂದಲೂ ವಿರೋಧ ಬರುವುದರಿಂದ ಜಡಕ್ಕಿಂತಲೂ ಹೆಚ್ಚಾಗಿ ಜೀವನನ್ನೇ ಸರ್ವ ಶಬ್ದಾರ್ಥದಿಂದ ಹೊರಗಿಡಬೇಕು ಎಂದು ಅಭಿಪ್ರಾಯ.

**ಇದಂ ಪದಾರ್ಥೋ ಹಿ ಜಡಮನಿದಂ ಬ್ರಹ್ಮ ತೇ ಮತೇ ।**
**ಅತೋ ಜಡಪರಿತ್ಯಾಗೇ ಪದಂ ತದ್ಧಿ ಪ್ರಕುಪ್ಯತಿ ॥ ೯೪೧ ॥**

**ಅರ್ಥ–** ತೇ ಮತೇ= ನಿನ್ನ ಮತದಲ್ಲಿ, ಇದಂ ಪದಾರ್ಥಃ= ಇದು ಎಂಬ ಪದಾರ್ಥವು, ಜಡಂ ಹಿ= ಜಡವಷ್ಟೇ, ಅನಿದಂ= ಇದಂ ಎಂದು ಹೇಳಲ್ಪಡದಿರುವುದು, ಬ್ರಹ್ಮ= ಬ್ರಹ್ಮನಷ್ಟೇ, ಅತಃ= ಆದ್ದರಿಂದ, ಜಡಪರಿತ್ಯಾಗೇ= ಜಡವನ್ನು ಪರಿತ್ಯಜಿಸಿದರೆ, ತತ್ಪದಂ= ಆ ಇದಂ ಎಂಬ ಪದವು, ಪ್ರಕುಪ್ಯತಿ= ಬಹಳ ಕೋಪಗೊಳ್ಳುತ್ತದೆ.

**ಅನುವಾದ–** ನಿನ್ನ ಮತದಲ್ಲಿ 'ಇದಂ' ಎಂದು ನಿರ್ದೇಶಿಸಲ್ಪಡುವ ಪದಾರ್ಥವು ಜಡವಾಗಿದೆ ಮತ್ತು 'ಇದಂ' ಎಂದು ನಿರ್ದೇಶಿಸಲ್ಪಡದಿರುವ ಪದಾರ್ಥವು ಬ್ರಹ್ಮವಾಗಿದೆಯಷ್ಟೇ. ಆದ್ದರಿಂದ ಜಡವನ್ನು ಪರಿತ್ಯಜಿಸಿದರೆ ಆ 'ಇದಂ' ಎಂಬ ಪದವು ಬಹಳ ಕೋಪಗೊಳ್ಳುತ್ತದೆ (ವಿರುದ್ಧವಾಗುತ್ತದೆ).

**ಭಾವವಿಲಾಸಿನೀ–** ಯುಕ್ತ್ಯಂತರಂ ಚಾಹ – **ಇದಂಪದಾರ್ಥ ಇತಿ** ॥ ತತ್ ಪದಮ್ ಇದಂ-ಪದಮ್ । ಜಡಪರಿತ್ಯಾಗ ಇತ್ಯುಪಲಕ್ಷಣಮ್ । ಚೇತನಾಂಗೀಕಾರೇಽಪಿ ಪ್ರಕುಪ್ಯತೀತಿ ದ್ರಷ್ಟವ್ಯಮ್ ॥ ೯೪೧ ॥

**ವಿವರಣೆ–** ಅದ್ವೈತಿಗಳು ಜಡವು 'ಇದಂ' ಎಂಬ ನಿರ್ದೇಶಕ್ಕೆ ವಿಷಯವೆಂದೂ, ಆತ್ಮನು ಇದಂ ಎಂಬ ನಿರ್ದೇಶಕ್ಕೆ ವಿಷಯನಲ್ಲವೆಂದೂ ಹೇಳುತ್ತಾರೆ. ಆದ್ದರಿಂದ ಇದಂ ಶಬ್ದವು ಮುಖ್ಯವಾಗಿ ಜಡವನ್ನೇ ಹೇಳುತ್ತದೆ. ಆದ್ದರಿಂದ ಜಡವನ್ನು ಪರಿತ್ಯಾಗ ಮಾಡಿದರೆ 'ಇದಂ' ಪದದ ವಿರೋಧವು ಬರುತ್ತದೆ ಎಂದು ಅಭಿಪ್ರಾಯ. ಅಷ್ಟೇ ಅಲ್ಲ ಚೈತನ್ಯೈಕ್ಯವನ್ನು ಅಂಗೀಕರಿಸಿದರೂ ಸಹ ಜಡವಾಚಿಯಾದ 'ಇದಂ' ಪದಾರ್ಥದ ವಿರೋಧವು ಬರುತ್ತದೆ ಎಂದು ಇಟ್ಟುಕೊಳ್ಳಬೇಕು.

**ಜಡಸ್ಯ ಚೈಕ್ಯಂ ಮುಖ್ಯಂ ನ ತತೋನ್ಯಾರ್ಥಃ ತವಾಪಿ ಹಿ ॥ ೯೪೨ ॥**

**ಅರ್ಥ–** ಜಡಸ್ಯ ಚ= ಜಡಕ್ಕಾದರೂ, ಮುಖ್ಯಂ ಐಕ್ಯಂ ನ= ಮುಖ್ಯವಾದ ಐಕ್ಯವಿಲ್ಲ, ತತಃ= ಆದ್ದರಿಂದ, ತವಾಪಿ= ನಿನಗೂ ಸಹ, ಅನ್ಯಾರ್ಥಃ ಹಿ= ಬೇರೆಯೇ ಅರ್ಥವೇ ಮಾಡಲ್ಪಡಬೇಕಷ್ಟೇ.

**ಅನುವಾದ–** ಜಡಕ್ಕೆ ಮುಖ್ಯವಾದ ಐಕ್ಯವಿಲ್ಲ. ಆದ್ದರಿಂದ ನೀನೂ ಸಹ ಬೇರೆ ಅರ್ಥವನ್ನೇ ಮಾಡಬೇಕು.

**ಭಾವವಿಲಾಸಿನೀ–** ತತಃ ಮುಖ್ಯಾರ್ಥಾಯೋಗಾತ್ ॥ ೯೪೨ ॥

**ವಿವರಣೆ–** ಮುಖ್ಯವಾದ ಐಕ್ಯವೆಂದರೆ ಅಭೇದ. ಜಡಕ್ಕೂ ಮತ್ತು ಬ್ರಹ್ಮನಿಗೂ ಅಭೇದವು ಬಾಧಿತವಾದುದು. ಆದ್ದರಿಂದ ಐಕ್ಯಶಬ್ದಕ್ಕೆ ತದ್ವ್ಯತಿರೇಕೇಣ ಅಸತ್ತ್ವ ಎಂಬ ಗೌಣಾರ್ಥವನ್ನು ಅದ್ವೈತಿಗಳು ಸ್ವೀಕರಿಸುತ್ತಾರೆ. ಆಗ ಮುಖ್ಯಾರ್ಥವನ್ನು ನೀನೂ ಬಿಟ್ಟಿರುವಾಗ ನಮಗೆ ಮುಖ್ಯಾರ್ಥ ತ್ಯಾಗರೂಪವಾದ ದೋಷವನ್ನು ಹೇಳಬಾರದು ಎಂದು ಅಭಿಪ್ರಾಯ.

**ಯತಃ ಸರ್ವಂ ಸಮಾಪ್ನೋಷಿ ತತಸ್ಸರ್ವೋಽಸೀತಿ ಭಾರತೇ ।**
**ಗೀತೋಕ್ತಿಸ್ತದ್ಬಲಾತ್ ಸರ್ವವ್ಯಾಪಿತೈವಾರ್ಥ ಈರ್ಯತಾಂ ॥ ೯೪೩ ॥**

**ಅರ್ಥ–** ಯತಃ = ಯಾವ ಕಾರಣದಿಂದ, ಸರ್ವಂ ಸಮಾಪ್ನೋಷಿ ತತಸ್ಸರ್ವೋಽಸಿ ಇತಿ= ಸರ್ವಂ ಸಮಾಪ್ನೋಷಿ ತತೋಽಸಿ ಸರ್ವಃ ಎಂದು, ಭಾರತೇ= ಭಾರತದಲ್ಲಿ, ಗೀತೋಕ್ತಿಃ= ಗೀತಾ ವಚನವಿದೆಯೋ, ತದ್ಬಲಾತ್= ಅದರ ಬಲದಿಂದ, ಸರ್ವವ್ಯಾಪಿತೈವ= ಸರ್ವವ್ಯಾಪ್ತಿಯೇ, ಅರ್ಥಃ= ಸರ್ವಶಬ್ದಾರ್ಥವೆಂದು, ಈರ್ಯತಾಂ= ಹೇಳಲ್ಪಡಲಿ.

**ಅನುವಾದ–** ಭಾರತದಲ್ಲಿ ಗೀತೆಯಲ್ಲಿ ಯಾವ ಕಾರಣದಿಂದ ನೀನು ಸರ್ವವನ್ನು ವ್ಯಾಪಿಸಿದ್ದೀಯೋ ಆದ್ದರಿಂದ ಸರ್ವನೆಂದು ಕರೆಯಲ್ಪಡುತ್ತೀಯೆ ಎಂಬ ವಚನವಿರುವುದರಿಂದ ಅದರ ಬಲದಿಂದ ಸರ್ವವ್ಯಾಪ್ತತ್ವವೇ ಸರ್ವ-ಶಬ್ದಾರ್ಥವೆಂದು ಹೇಳು.

**ಭಾವವಿಲಾಸಿನೀ–** ಸಪ್ರಮಾಣಕಂ ಸ್ವಾಭಿಮತಾರ್ಥಮಾಹ – ಯತ ಇತಿ ॥ ಅನೇನ ಸರ್ವಂ ಸಮಾಪ್ನೋಷಿ ತತೋಽಸಿ ಸರ್ವ ಇತಿ ವಾಕ್ಯಂ ಸಂಗೃಹ್ಣಾತಿ । ಯತಸ್ತ್ವಂ ಸರ್ವಜಗತ್ ಸಮಾಪ್ನೋಷಿ ಸಮ್ಯಗಾಪ್ನೋಷಿ । ಆಪ್ಲೃವ್ಯಾಪ್ತಾವಿತಿ ಧಾತುಃ । ಸಮಾಪ್ತ್ಯರ್ಥಕತ್ವಮೇವ ಗ್ರಾಹ್ಯಮ್ । ಅನ್ಯಥಾ ಸಕರ್ಮಕತಾ ನ ಸ್ಯಾತ್। ಕಿಂತು ತ್ವಂ ಸಮಾಪ್ತೋ ಭವಸೀತ್ಯೇವ ಪ್ರಯೋಗಃ ಸ್ಯಾತ್ । ತತಸ್ಸರ್ವವ್ಯಾಪ್ತತ್ವಾತ್ ಸರ್ವಃ ಸರ್ವಶಬ್ದವಾಚ್ಯೋಽಸೀತಿ ಕೃಷ್ಣಂ ಪ್ರತ್ಯರ್ಜುನವಾಕ್ಯಮ್ ॥ ೯೪೩ ॥

**ವಿವರಣೆ–** ಗೀತೆಯಲ್ಲಿ 'ಸರ್ವಂ ಸಮಾಪ್ನೋಷಿ' ಎಂದು ಹೇಳಿ ಸರ್ವಶಬ್ದದ ಪ್ರವೃತ್ತಿ ನಿಮಿತ್ತವನ್ನು ಹೇಳಿದ್ದಾರೆ. ಸಮಾಪ್ನೋಷಿ ಎಂಬ ಶಬ್ದಕ್ಕೆ ವ್ಯಾಪ್ತನಾಗಿದ್ದೀಯೆ ಎಂದು ಅರ್ಥ. ಆಪ್ಲೃ ವ್ಯಾಪ್ತೌ ಎಂದು ಧಾತು. ಸಮಾಪ್ತಿ ಎಂಬ ಅರ್ಥವನ್ನು ಹೇಳುವುದಾಗಿದ್ದರೆ ಸಮಾಪಯಸಿ ಎಂಬ ಣಿಜಂತ ಪ್ರಯೋಗವು ಇರಬೇಕಾಗಿತ್ತು.

ಅಥವಾ 'ತ್ವಂ ಸಮಾಪ್ನೋ ಭವಸಿ' ನೀನು ಸಮಾಪ್ತನಾಗುತ್ತೀಯೆ ಎಂದಾದರೂ ಇರಬೇಕಾಗಿತ್ತು. ಆಗ ಸಕರ್ಮಕತ್ವವಿರುತ್ತಿರಲಿಲ್ಲ. ಇಲ್ಲಿ ಸರ್ವಂ ಸಮಾಪ್ನೋಷಿ ಎಂದು ಸರ್ವ ಶಬ್ದದ ಮೇಲೆ ಕರ್ಮತ್ವವಾಚಕವಾದ ದ್ವಿತೀಯಾ ವಿಭಕ್ತಿಯನ್ನು ಪ್ರಯೋಗಿಸಿದ್ದಾರೆ. ಆದ್ದರಿಂದ ವ್ಯಾಪಿಸಿದ್ದೀಯೆ ಎಂದೇ ಅರ್ಥವನ್ನು ಹೇಳಬೇಕು. ಆದ್ದರಿಂದ ಪ್ರಮಾಣ ಸಿದ್ಧವಾದ ಈ ಅರ್ಥವನ್ನೇ ಅಂಗೀಕರಿಸಿ ಪ್ರಮಾಣ ವಿರುದ್ಧವಾದ ಐಕ್ಯವನ್ನು ಏಕೆ ಹೇಳುತ್ತೀಯೆ ಎಂದು ಅಭಿಪ್ರಾಯ.

**ಐಂದ್ರಂ ವ್ಯಾಕರಣಂ ಯಸ್ಯ ಮೂಲರೂಪಂ ನ್ಯರೂರುಪತ್ ।**
**ಸ ಪಾರ್ಥಃ ಶಬ್ದಶಕ್ತಿಜ್ಞಃ ಶಕ್ತಿಜ್ಞಶ್ಚ ಪರಾತ್ಮನಃ ॥ ೯೪೪ ॥**

**ಅರ್ಥ–** ಯಸ್ಯ= ಯಾವ ಅರ್ಜುನನ, ಮೂಲರೂಪಂ= ಮೂಲರೂಪವಾದ ಇಂದ್ರನು, ಐಂದ್ರಂ ವ್ಯಾಕರಣಂ= ಐಂದ್ರವ್ಯಾಕರಣವನ್ನು, ನ್ಯರೂರುಪತ್= ನಿರೂಪಿಸಿದನೋ (ನಿರ್ಮಿಸಿದನೋ), ಸ ಪಾರ್ಥಃ= ಆ ಅರ್ಜುನನು, ಶಬ್ದಶಕ್ತಿಜ್ಞಃ= ಶಬ್ದಶಕ್ತಿಯನ್ನು ತಿಳಿದವನು, ಚ= ಮತ್ತು, ಪರಾತ್ಮನಃ ಶಕ್ತಿಜ್ಞಃ= ಪರಮಾತ್ಮನ ಶಕ್ತಿಯನ್ನೂ ತಿಳಿದವನು.

**ಅನುವಾದ–** ಯಾವ ಅರ್ಜುನನ ಮೂಲರೂಪವಾದ ಇಂದ್ರನು ಐಂದ್ರ ವ್ಯಾಕರಣವನ್ನು ನಿರ್ಮಿಸಿದ್ದಾನೆಯೋ, ಅಂತಹ ಆ ಅರ್ಜುನನು ಶಬ್ದಶಕ್ತಿಯನ್ನು ತಿಳಿದವನು ಮತ್ತು ಪರಮಾತ್ಮನ ಸರ್ವಶಬ್ದ ವಾಚ್ಯತ್ವರೂಪವಾದ ಶಕ್ತಿಯನ್ನೂ ತಿಳಿದವನು.

**ಭಾವವಿಲಾಸಿನೀ–** ವ್ಯಾಕರಣಕರ್ತೃತ್ವಾದರ್ಜುನಕೃತಶಬ್ದಾನುಶಾಸನಂ ಮಾನ್ಯಮಿತ್ಯಾಹ – ಐಂದ್ರಮಿತಿ ॥ ಯಸ್ಯಾರ್ಜುನಸ್ಯ ಮೂಲರೂಪಮಿಂದ್ರಃ । ನ್ಯರೂರುಪತ್ ನಿರೂಪಯಾಮಾಸ । ಅತಃ ವ್ಯಾಕರಣಕರ್ತೃತ್ವಾತ್ । ಶಬ್ದಶಕ್ತಿಜ್ಞ ಇತ್ಯನೇನ ಮುಖ್ಯ ಏವಾಯಂ ಪ್ರಯೋಗಃ ನ ತ್ವಮುಖ್ಯ ಇತಿ ಸೂಚಯತಿ । ಯತಸ್ತತ ಇತಿ ಶಬ್ದಪ್ರವೃತ್ತಿನಿಮಿತ್ತಕಥನಾತ್ ಪ್ರವೃತ್ತಿನಿಮಿತ್ತವತಿ ಚ ಪ್ರಯೋಗಸ್ಯ ಮುಖ್ಯತ್ವಾದಿತಿ ಭಾವಃ । ಪರಾತ್ಮನಃ ಶಕ್ತಿಜ್ಞ ಇತ್ಯನೇನ ನಾಮಾನಿ ಸರ್ವಾಣಿ ಯಮಾವಿಶಂತೀತ್ಯಾದಿನೋಕ್ತಸರ್ವಶಬ್ದಮುಖ್ಯವಾಚ್ಯತ್ವರೂಪಭಗವತ್‌ಶಕ್ತಿಜ್ಞತ್ವಾಚ್ಚ ಮುಖ್ಯಮೇವ ಪ್ರಯೋಗಮನುಶಾಸ್ತೀತಿ ಭಾವಃ ॥ ೯೪೪ ॥

**ವಿವರಣೆ–** ಅರ್ಜುನನು ಮೂಲರೂಪದಲ್ಲಿ ವ್ಯಾಕರಣ ಕರ್ತೃವಾದ್ದರಿಂದ ಅವನು ಹೇಳಿದ ಶಬ್ದಾರ್ಥವನ್ನು ಅಂಗೀಕರಿಸಬೇಕು ಎಂದು ಹೇಳುತ್ತಾರೆ. 'ಸರ್ವಂ ಸಮಾಪ್ನೋಷಿ ತತೋಽಸಿ ಸರ್ವಃ' ಎಂದು ತತಃ ಎಂದು ಕಾರಣತ್ವವನ್ನು ಹೇಳಿರುವುದರಿಂದ ಸರ್ವವ್ಯಾಪ್ತಿ ಎಂಬುದು ಸರ್ವಶಬ್ದದ ಪ್ರವೃತ್ತಿ ನಿಮಿತ್ತವೆಂದು ತಿಳಿಯುತ್ತದೆ. ಪ್ರವೃತ್ತಿ ನಿಮಿತ್ತವು ಇರುವ ಕಡೆಯಲ್ಲಿ ಶಬ್ದದ ಪ್ರಯೋಗವು ಮುಖ್ಯವೇ ಆಗಿರುತ್ತದೆ. ಅಲ್ಲದೇ, ಅರ್ಜುನನು

'ನಾಮಾನಿ ಸರ್ವಾಣಿ ಯಮಾ ವಿಶಂತಿ ತಂ ವೈ ವಿಷ್ಣುಂ ಪರಮಮುದಾಹರಂತಿ' ಎಂಬ ಶ್ರುತಿಯು ಹೇಳುವ ಪರಮಾತ್ಮನ ಸರ್ವಶಬ್ದವಾಚ್ಯತ್ವರೂಪವಾದ ಸಾಮರ್ಥ್ಯವನ್ನು ತಿಳಿದಿದ್ದಾನೆ. ಆದ್ದರಿಂದ ಈ ಪ್ರಯೋಗವು ಮುಖ್ಯವಾದ ಪ್ರಯೋಗವೇ ಆಗಿದೆ. ಇಲ್ಲಿ ಲಕ್ಷಣಾವೃತ್ತಿಗೆ ಅವಕಾಶವಿಲ್ಲ ಮತ್ತು ಇದು ಭೇದವನ್ನೇ ಹೇಳುತ್ತದೆ ಎಂದು ಅಭಿಪ್ರಾಯ.

**ತಜ್ಜಲಾನಿತಿ ಶಾಂತಃ ಸನ್ನುಪಾಸೀತೇತಿ ಪೂರ್ವವಾಕ್ ।**
**ಉಪಾಸ್ಯೋಪಾಸಕತ್ವಂ ಹಿ ಪ್ರಾಹ ತಚ್ಚ ಕಥಂ ತವ ॥ ೯೪೫ ॥**

**ಅರ್ಥ–** ತಜ್ಜಲಾನಿತಿ= ತಜ್ಜಲಾನ್ ಎಂದು ತಿಳಿದು, ಶಾಂತಃ ಸನ್= ಶಾಂತನಾಗಿ, ಉಪಾಸೀತ= ಉಪಾಸನೆಯನ್ನು ಮಾಡು, ಇತಿ= ಎಂಬ, ಪೂರ್ವವಾಕ್= ಹಿಂದಿನ ವಾಕ್ಯವು, ಉಪಾಸ್ಯೋಪಾಸಕತ್ವಂ= ಬ್ರಹ್ಮನಿಗೆ ಉಪಾಸ್ಯತ್ವವನ್ನು ಜೀವನಿಗೆ ಉಪಾಸಕತ್ವವನ್ನು, ಪ್ರಾಹ ಹಿ= ಹೇಳುವುದಷ್ಟೇ, ತಚ್ಚ= ಅದಾದರೂ, ತವ= ನಿನಗೆ, ಕಥಂ= ಹೇಗೆ ಉಪಪನ್ನವಾಗುತ್ತದೆ?

**ಅನುವಾದ–** 'ಸರ್ವಂ ಖಲ್ವಿದಂ ಬ್ರಹ್ಮ' ಎನ್ನುವ ವಾಕ್ಯಕ್ಕಿಂತ ಮೊದಲು ಇರುವ 'ತಜ್ಜಲಾನಿತಿ ಶಾಂತ ಉಪಾಸೀತ' ಎಂಬ ವಾಕ್ಯವು ಪರಮಾತ್ಮನಿಗೆ ಉಪಾಸ್ಯತ್ವವನ್ನೂ ಜೀವನಿಗೆ ಉಪಾಸಕತ್ವವನ್ನೂ ಹೇಳುತ್ತದೆ. ನಿನ್ನ ಮತದಲ್ಲಿ ಅದು ಹೇಗೆ ಕೂಡುತ್ತದೆ?

**ಭಾವವಿಲಾಸಿನೀ–** ಐಕ್ಯಾರ್ಥಕತ್ವೇ ಉಪಕ್ರಮವಾಕ್ಯವಿರೋಧಂ ಚಾಹ – **ತಜ್ಜಲಾನಿತೀತಿ ॥** ಅನೇನ ತಜ್ಜಲಾನಿತಿ ಶಾಂತ ಉಪಾಸೀತೇತಿ ವಾಕ್ಯಂ ಸಂಗೃಹ್ಣಾತಿ । ಇತಿ ಅನೇನ ಪ್ರಕಾರೇಣ । ಸರ್ವಂ ಖಲ್ವಿದಂ ಬ್ರಹ್ಮೇತ್ಯತಃ ಪೂರ್ವವಾಕ್ ತದೇತದ್ ದೃಷ್ಟಂ ಚ ಶ್ರುತಂ ಚೇತ್ಯುಪಾಸೀತೇತಿ ವಾಕ್ । ಉಪಾಸೀತೇತಿ ಪದಸ್ಯೋಭಯತ್ರ ಸಾಮ್ಯಾದೇಕಪ್ರಕಾರತ್ವಂ ಉಪಾಸ್ತಿವಿಧಾಯಕೋಪ-ಕ್ರಮೋಪಸಂಹಾರವಾಕ್ಯದ್ವಯವಿರೋಧಸ್ಫೋರಣಾಯ ವಕ್ರಮುದ್ರಯಾ ಪ್ರವೃತ್ತಿಃ । ಏವಂ ಚೋಪಾಸ್ತಿವಿಧಾಯಕವಾಕ್ಯದ್ವಯಮಧ್ಯಸ್ಥವಾಚಸ್ತದ್ವಿರುದ್ಧಮೈಕ್ಯಂ ಅರ್ಥಂ ವದನ್ ಪೂರ್ವೋತ್ತರವಿವೇಕಶೂನ್ಯ ಇತಿ ಭಾವಃ ॥ ೯೪೫ ॥

**ವಿವರಣೆ–** ಐಕ್ಯಾರ್ಥವನ್ನು ಹೇಳಿದರೆ ಉಪಕ್ರಮದ ವಿರೋಧವು ಬರುವುದೆಂದು ಇಲ್ಲಿ ತಿಳಿಸುತ್ತಾರೆ. 'ತಜ್ಜಲಾನಿತಿ ಶಾಂತ ಉಪಾಸೀತ' ಎಂಬುದು ಪೂರ್ವವಾಕ್ಯ. ಪ್ರಪಂಚವು ಬ್ರಹ್ಮನಿಂದ ಜನ್ಯವೆಂದು, ಬ್ರಹ್ಮನಲ್ಲಿಯೇ ಲಯವನ್ನು ಹೊಂದುವುದೆಂದು ಮತ್ತು ಬ್ರಹ್ಮನಿಂದಲೇ ಚೇಷ್ಟೆಯನ್ನು ಹೊಂದುವುದೆಂದೂ ತಿಳಿದು ಶಾಂತನಾಗಿ ಅವನನ್ನು ಉಪಾಸನೆ ಮಾಡು ಎಂಬ ಅರ್ಥವೇ ಶಾಂಕರಭಾಷ್ಯದಲ್ಲಿ ಹೇಳಲ್ಪಟ್ಟಿದೆ. ಸರ್ವಂ ಖಲ್ವಿದಂ ಬ್ರಹ್ಮ ಎಂಬುದು ಈಗ ವಿಚಾರ ಮಾಡುತ್ತಿರುವ ಮಧ್ಯದ ವಾಕ್ಯ. 'ತದೇತದ್ ದೃಷ್ಟಂ ಚ ಶ್ರುತಂ ಚೇತ್ಯುಪಾಸೀತ' ಎಂಬುದು ಉತ್ತರವಾಕ್ಯ. ಪೂರ್ವವಾಕ್ಯದಲ್ಲಿಯೂ

ಮತ್ತು ಉತ್ತರವಾಕ್ಯದಲ್ಲಿಯೂ ಉಪಾಸೀತ ಎಂದು ಉಪಾಸನೆಯನ್ನು ವಿಧಾನ ಮಾಡುವ ವಾಕ್ಯಗಳು ಉಪಾಸ್ಯನಿಗೆ ಉಪಾಸಕನಿಗೆ ಮತ್ತು ಭೇದವನ್ನೇ ಹೇಳುತ್ತವೆ. ಅದರ ಮಧ್ಯದಲ್ಲಿರುವ ಸರ್ವಂ ಖಲ್ವಿದಂ ಬ್ರಹ್ಮ ಎಂಬ ವಾಕ್ಯವು ಜೀವಬ್ರಹ್ಮರಿಗೆ ಭೇದವನ್ನೇ ಹೇಳಬೇಕು. ಇಲ್ಲದಿದ್ದರೆ ಉಪಕ್ರಮ, ಉಪಸಂಹಾರದ ವಿರೋಧವು ಬರುತ್ತದೆ ಎಂದು ಅಭಿಪ್ರಾಯ.

**ಜೀವ ಇತ್ಯೇವ ಲಕ್ಷ್ಯತ್ವೇ ಪದಯೋಃ ಸುವಿರುದ್ಧತಾ ।**
**ಚಿನ್ಮಾತ್ರಸ್ಯ ತು ಲಕ್ಷ್ಯತ್ವೇ ವ್ಯರ್ಥಂ ಸರ್ವಪದಂ ತವ ॥ ೯೪೬ ॥**

**ಅರ್ಥ–** ಜೀವ ಇತ್ಯೇವ ಲಕ್ಷ್ಯತ್ವೇ= ಇದಂ ಪದಕ್ಕೆ ಜೀವನಲ್ಲಿ ಮಾತ್ರ ಲಕ್ಷಣಾವನ್ನು ಮಾಡಿದರೆ, ಪದಯೋಃ= ಇದಂ ಪದಕ್ಕೂ ಮತ್ತು ಬ್ರಹ್ಮಪದಕ್ಕೂ, ಸುವಿರುದ್ಧತಾ= ಅತ್ಯಂತ ವಿರೋಧವು ಉಂಟಾಗುತ್ತದೆ, ಚಿನ್ಮಾತ್ರಸ್ಯ ಲಕ್ಷ್ಯತ್ವೇ ತು= ಚಿನ್ಮಾತ್ರವು ಲಕ್ಷ್ಯವೆಂದು ಹೇಳುವುದಾದರೆ, ತವ= ನಿನಗೆ, ಸರ್ವಪದಂ= ಸರ್ವ ಎಂಬ ಪದವು, ವ್ಯರ್ಥಂ= ವ್ಯರ್ಥವಾಗುತ್ತದೆ.

**ಅನುವಾದ–** ಇದಂ ಪದಕ್ಕೆ ಜೀವನಲ್ಲಿ ಮಾತ್ರ ಲಕ್ಷಣಾವನ್ನು ಮಾಡಿದರೆ ಇದಂ ಮತ್ತು ಬ್ರಹ್ಮ ಶಬ್ದಗಳು ಅಲ್ಪಜ್ಞತ್ವ ಮತ್ತು ಸರ್ವಜ್ಞತ್ವ ವಿಶಿಷ್ಟ ಚೈತನ್ಯವನ್ನು ಹೇಳುವುದರಿಂದ ಆ ಪದಗಳು ಪರಸ್ಪರ ವಿರುದ್ಧವಾಗುತ್ತವೆ. ಇದಂ ಪದಕ್ಕೆ ಚಿನ್ಮಾತ್ರದಲ್ಲಿ ಲಕ್ಷಣಾ ಎಂದು ಹೇಳಿದರೆ ಆಗ ಸರ್ವಪದವು ವ್ಯರ್ಥವಾಗುತ್ತದೆ.

**ಭಾವವಿಲಾಸಿನೀ–** ಲಕ್ಷತ್ವೇ ಸರ್ವಪದಲಕ್ಷ್ಯತ್ವೇ । ವ್ಯರ್ಥಂ ಚಿನ್ಮಾತ್ರೇऽನೇಕತ್ವಾ- ಭಾವಾದ್ವ್ಯರ್ಥ- ಮಿತ್ಯರ್ಥಃ ॥ ೯೪೬ ॥

**ವಿವರಣೆ–** ಚಿನ್ಮಾತ್ರದಲ್ಲಿ ಭೇದ ಪ್ರಸಕ್ತಿ ಇದ್ದರೆ ಆಗ ಬ್ರಹ್ಮನಿಂದ ಐಕ್ಯವನ್ನು ಹೇಳಬೇಕು. ಚಿನ್ಮಾತ್ರದಲ್ಲಿ ಅನೇಕತ್ವವೇ ಇಲ್ಲದಿರುವುದರಿಂದ ಐಕ್ಯವನ್ನು ಹೇಳಬೇಕಾದ ಅವಶ್ಯಕತೆ ಇಲ್ಲ. ಚೈತನ್ಯವು ಒಂದೇ ಇರುವುದರಿಂದ ಸರ್ವಶಬ್ದವೂ ಅನುಪಪನ್ನವಾಗುತ್ತದೆ ಎಂದು ಅಭಿಪ್ರಾಯ.

**ಯದಿ ಸರ್ವಭ್ರಮಾಧಿಷ್ಠಾನತ್ವಂ ಸರ್ವಪದೋದಿತಂ ।**
**ತದಾ ಮುಖ್ಯಾರ್ಥಸಂತ್ಯಾಗಃ ಸರ್ವಾಧಿಷ್ಠಾನತೈವ ಚ ॥ ೯೪೭ ॥**

**ಅರ್ಥೋऽಸ್ತು ಲಾಘವಾನ್ಮಧ್ಯೇ ಭ್ರಮಃ ಕಸ್ಮಾನ್ನಿವೇಶ್ಯತೇ ।**
**ಪೂರ್ವಶ್ರುತಾವುಕ್ತಸೂತ್ರರೀತ್ಯಾ ವಾऽರ್ಥೋऽಭವಿಷ್ಯತಿ ॥ ೯೪೮ ॥**

**ಅರ್ಥ–** ಯದಿ= ಒಂದು ಪಕ್ಷ, ಸರ್ವಭ್ರಮಾಧಿಷ್ಠಾನತ್ವಂ= ಸರ್ವಭ್ರಮಾಧಿಷ್ಠಾನತ್ವವು, ಸರ್ವಪದೋದಿತಂ= ಸರ್ವಪದದಿಂದ ಹೇಳಲ್ಪಟ್ಟರೆ, ತದಾ= ಆಗ, ಮುಖ್ಯಾರ್ಥ ಸಂತ್ಯಾಗಃ=

ಮುಖ್ಯಾರ್ಥವನ್ನು ಪರಿತ್ಯಾಗವನ್ನೇ ಮಾಡಿದ್ದಾಯಿತು, ಹಾಗಾದರೆ, ಸರ್ವಾಧಿಷ್ಠಾನತ್ವೈವ= ಸರ್ವಾಧಿಷ್ಠಾನತ್ವವೇ, ಲಾಘವಾತ್= ಲಾಘವವಾಗಿರುವುದರಿಂದ, ಅರ್ಥೋಸ್ತು= ಸರ್ವಶಬ್ದದ ಅರ್ಥವಾಗಲಿ, ಭ್ರಮಃ= ಭ್ರಮವನ್ನು, ಕಸ್ಮಾತ್= ಏಕೆ, ನಿವೇಶ್ಯತೇ= ಮಧ್ಯೆ ಸೇರಿಸುತ್ತೀಯೇ. ಪೂರ್ವಶ್ರುತೌ= ಸ ಏವಾಹಮಸ್ಮಿ ಎಂಬ ಶ್ರುತಿಯಲ್ಲಿ, ಉಕ್ತಸೂತ್ರರೀತ್ಯಾ ವಾ= ಹೇಳಿದ ವ್ಯಾಕರಣ ಸೂತ್ರದ ರೀತಿಯಿಂದಲಾದರೂ, ಅರ್ಥೋ ಭವಿಷ್ಯತಿ= ಅರ್ಥವು ಆಗುತ್ತದೆ.

**ಅನುವಾದ–** ಒಂದು ಪಕ್ಷ ಸರ್ವಭ್ರಮಾಧಿಷ್ಠಾನತ್ವವು ಸರ್ವಪದದಿಂದ ಹೇಳಲ್ಪಡುತ್ತದೆ ಎಂದು ಹೇಳಿದರೆ ಆಗ ಸರ್ವಶಬ್ದದ ಮುಖ್ಯಾರ್ಥ ತ್ಯಾಗವು ಉಂಟಾಗುತ್ತದೆ. ಮುಖ್ಯಾರ್ಥವನ್ನು ಬಿಟ್ಟ ಮೇಲೆ ಸರ್ವಾಧಿಷ್ಠಾನತ್ವವೇ ಸರ್ವಶಬ್ದಾರ್ಥವೆಂದು ಹೇಳು. ಆಗ ಲಾಘವವು ಇರುತ್ತದೆ. ಮಧ್ಯೆ ಸರ್ವಭ್ರಮಾಧಿಷ್ಠಾನತ್ವ ಎಂದು ಹೇಳಿ ಭ್ರಮವನ್ನು ಏಕೆ ಸೇರಿಸುತ್ತೀಯೆ? ಅಥವಾ ಸ ಏವಾಹಮಸ್ಮಿ ಎಂಬ ಶ್ರುತಿಯ ವಿಚಾರದಲ್ಲಿ ಹೇಳಿದ ರೀತಿಯಲ್ಲಿ ಸುಪಾಂ ಸುಲುಕ್ ಎಂಬ ವ್ಯಾಕರಣ ಸೂತ್ರದ ರೀತಿಯಿಂದ ಬ್ರಹ್ಮನಲ್ಲಿ ಸರ್ವವೂ ಇದೆ ಎಂದು ಅರ್ಥವಾಗುತ್ತದೆ.

**ಭಾವವಿಲಾಸಿನೀ–** ಸರ್ವಾಧಿಷ್ಠಾನತಾ ಸರ್ವಾಧಾರತಾ । ಲಾಘವಾತ್ ಸರ್ವಭ್ರಮಾಧಿಷ್ಠಾನತ್ವಾಪೇಕ್ಷಯಾ ಸರ್ವಾಧಿಷ್ಠಾನತ್ವಸ್ಯ ಲಘುತ್ವಾತ್ । ಜೀವಪಕ್ಷೇ ಜಡಪಕ್ಷೇ ಚೈಕಾರ್ಥ್ಯಲಾಭೇನ ಲಘುತ್ವಾಚ್ಚ ॥ ೯೪೭-೯೪೮ ॥

**ವಿವರಣೆ–** ಸರ್ವ ಶಬ್ದಕ್ಕೆ ಎಲ್ಲಾ ಎಂಬ ಅರ್ಥವು ಮುಖ್ಯಾರ್ಥ. ಅದನ್ನು ಬಿಟ್ಟು ಸರ್ವ ಭ್ರಮಾಧಿಷ್ಠಾನ ಎಂಬ ಅರ್ಥವನ್ನು ಹೇಳಿದರೆ ಮುಖ್ಯಾರ್ಥವನ್ನು ಬಿಟ್ಟದ್ದೇ ಆಯಿತು. ಹಾಗಾದರೆ ಅದಕ್ಕಿಂತ ಲಘುವಾದ ಸರ್ವಾಧಿಷ್ಠಾನ ಎಂಬ ಅರ್ಥವನ್ನೇ ಹೇಳು. ಬ್ರಹ್ಮನು ಸರ್ವಾಧಾರಎಂದು ಸಿದ್ಧವಾಗುತ್ತದೆ. ಅಥವಾ ಹಿಂದಿನ ಶ್ರುತಿಯಲ್ಲಿ ಹೇಳಿದಂತೆ ಬ್ರಹ್ಮಶಬ್ದದಲ್ಲಿ ಹೇಳಿದ ಪ್ರಥಮಾವಿಭಕ್ತಿಗೆ ಸಪ್ತಮೀವಿಭಕ್ತಿಯ ಅರ್ಥವನ್ನು ಹೇಳಿ ಸರ್ವವೂ ಬ್ರಹ್ಮನಲ್ಲಿದೆ ಎಂದರೆ ಸರ್ವವೂ ಬ್ರಹ್ಮಸರ್ವಕ್ಕೂ ಆಧಾರ ಎಂಬ ಅರ್ಥವನ್ನೇ ಹೇಳು. ಆಗ ಮುಖ್ಯವಾದ ಅರ್ಥವೇ ದೊರೆಯುತ್ತದೆ. ಆಗ ಲಕ್ಷಣಾವೃತ್ತಿಯನ್ನು ಆಶ್ರಯಿಸುವ ಅವಶ್ಯಕತೆ ಇಲ್ಲ ಎಂದು ಅಭಿಪ್ರಾಯ.

**ಸಪ್ತಸು ಪ್ರಥಮಾ ಯಸ್ಮಾತ್ ಕ್ಲೃಪ್ತಾವೇದೇಷು ವೈದಿಕೈಃ ।**
**ತಸ್ಮಾದದ್ವೈತವಾಕ್ಯಾನಾಂ ಲಕ್ಷಾದಪಿ ನ ಭೀರ್ಮಮ ॥ ೯೪೯ ॥**

**ಅರ್ಥ–** ವೈದಿಕೈಃ= ವೈದಿಕರಿಂದ, ವೇದೇಷು= ವೇದಗಳಲ್ಲಿ, ಯಸ್ಮಾತ್= ಯಾವ ಕಾರಣದಿಂದ, ಸಪ್ತಸು= ಏಳು ವಿಭಕ್ತಿಗಳಲ್ಲಿಯೂ, ಪ್ರಥಮಾ= ಪ್ರಥಮಾ ವಿಭಕ್ತಿಯು,

ಕ್ಲೃಪ್ತಾ= ಕ್ಲೃಪ್ತವಾಗಿದೆಯೋ, ತಸ್ಮಾತ್= ಆದ್ದರಿಂದ, ಅದ್ವೈತವಾಕ್ಯಾನಾಂ ಲಕ್ಷಾದಪಿ= ಒಂದು ಲಕ್ಷ ಅದ್ವೈತವಾಕ್ಯಗಳಿಂದಲೂ, ಮಮ= ನನಗೆ, ಭೀಃ ನ= ಭಯವಿಲ್ಲ.

**ಅನುವಾದ–** ವೈದಿಕರು ವೇದಗಳಲ್ಲಿ ಸಪ್ತಸು ಪ್ರಥಮಾ ಎಂದು ಹೇಳಿ ಪ್ರಥಮಾ ವಿಭಕ್ತಿಗೆ ಸಪ್ತ ವಿಭಕ್ತಿಗಳ ಅರ್ಥವನ್ನು ಹೇಳಿರುವುದರಿಂದ ನನಗೆ ಒಂದು ಲಕ್ಷ ಅದ್ವೈತ-ವಾಕ್ಯಗಳಿಂದಲೂ ಭಯವಿಲ್ಲ.

**ಭಾವವಿಲಾಸಿನೀ–** ತದೇವ ಸೂತ್ರಂ ಪ್ರದರ್ಶಯನ್ ಸಕಲಾದ್ವೈತವಾಕ್ಯೇಽಪ್ಯಾಪಾತಪ್ರತೀತಾರ್ಥ ಬಾಧೇನಾಸ್ಯೈವ ನ್ಯಾಯಸ್ಯ ಸರ್ವತ್ರ ಸಂಚಾರಯಿತುಂ ಶಕ್ಯತ್ವಾತ್ ಪರಾಭಿಲಷಿತೈಕ್ಯಸ್ಯ ನ ಕ್ವಾಪ್ಯವಕಾಶ ಇತ್ಯಾಹ – **ಸಪ್ತಸ್ವಿತಿ** ॥ ತಸ್ಮಾತ್ತ್ವಮಸಿ ತಸ್ಮಿಂಸ್ತ್ವಮಸಿ । ಅಹಂ ಬ್ರಹ್ಮಣ್ಯಸ್ಮಿ ಅಹಂ ತಸ್ಮಿನ್ನಸ್ಮಿ । ಸರ್ವಸ್ಮಿನ್ ಬ್ರಹ್ಮ ಇತ್ಯಾದಿ ಪ್ರಕಾರೇಣ ಸಕಲಾದ್ವೈತವಾಕ್ಯೇಽಪಿ ಅಬಾಧಿತಾರ್ಥಸ್ಯೈವ ವಿದ್ಯಮಾನತ್ವೇನ ಬಾಧಿತೈಕ್ಯಾರ್ಥಸ್ಯ ಕ್ವಾಪ್ಯನವಕಾಶಾತ್ ॥ ೯೪೯ ॥

**ವಿವರಣೆ–** 'ತತ್ತ್ವಮಸಿ' ಎಂಬಲ್ಲಿ 'ತಸ್ಮಾತ್ ತ್ವಮಸಿ, ತಸ್ಮಿನ್ ತ್ವಮಸಿ' ಎಂದು ಪಂಚಮೀ ವಿಭಕ್ತಿ ಸಪ್ತಮೀ ವಿಭಕ್ತಿಗಳ ಅರ್ಥವನ್ನು ಹೇಳಿ, ಅವನಿಂದ ನೀನು ಜನಿಸಿದ್ದೀಯೆ. ಅವನನ್ನು ನೀನು ಆಶ್ರಯಿಸಿದ್ದೀಯೆ ಎಂಬ ಅರ್ಥವನ್ನು ಹೇಳಿ ಭೇದವನ್ನೇ ಸಾಧಿಸಬಹುದು. 'ಅಹಂ ಬ್ರಹ್ಮಾಸ್ಮಿ' ಎಂಬ ಶ್ರುತಿಯಲ್ಲಿ ಬ್ರಹ್ಮ ಶಬ್ದಕ್ಕೆ ಬ್ರಹ್ಮನಲ್ಲಿ ಎಂಬ ಅರ್ಥವಿವಕ್ಷೆ ಮಾಡಿ ಅಲ್ಲಿಯೂ ಭೇದವು ಸಿದ್ಧವಾಗುತ್ತದೆ. 'ಸರ್ವಂ ಖಲ್ವಿದಂ ಬ್ರಹ್ಮ' ಎಂಬಲ್ಲಿ ಬ್ರಹ್ಮಶಬ್ದಕ್ಕೆ ಬ್ರಹ್ಮನಲ್ಲಿ ಎಂದು ಅರ್ಥವನ್ನು ಮಾಡಿ ಬ್ರಹ್ಮನಲ್ಲಿ ಎಲ್ಲವೂ ಇದೆ ಎಂದು ಭೇದಪರವಾಗಿ ಅರ್ಥವನ್ನು ಮಾಡಬಹುದು. ಅಥವಾ ಸರ್ವ ಶಬ್ದಕ್ಕೆ ಸಪ್ತಮೀ ಅರ್ಥವನ್ನು ಹೇಳಿ ಸರ್ವವಸ್ತುಗಳಲ್ಲಿ ಬ್ರಹ್ಮನಿದ್ದಾನೆ ಎಂದು ಬ್ರಹ್ಮನಿಗೆ ಸರ್ವಾಂತರ್ಯಾಮಿತ್ವವನ್ನು ಹೇಳಿಯೂ ಭೇದವನ್ನು ಸಾಧನೆ ಮಾಡಬಹುದು. ಅದ್ವೈತಕ್ಕೆ ಎಲ್ಲಿಯೂ ಅವಕಾಶವಿಲ್ಲ ಎಂದು ಅಭಿಪ್ರಾಯ.

**ಯಥಾಶ್ರುತಪದಸ್ಯಾರ್ಥಸ್ಯಾಯೋಗೇ ಪೂರ್ವಯೋಗಿಭಿಃ ।**
**ವ್ಯತ್ಯಾಸಶಾಸನಾನ್ನಾತಿಪ್ರಸಂಗೋ ಯತ್ರ ಕುತ್ರಚಿತ್ ॥ ೯೫೦ ॥**

**ಅರ್ಥ–** ಯಥಾಶ್ರುತಪದಸ್ಯ ಅರ್ಥಸ್ಯ= ಒಂದು ಪದದ ಯಥಾಶ್ರುತವಾದ ಅರ್ಥಕ್ಕೆ, ಅಯೋಗೇ= ಅನುಪಪತ್ತಿ ಇರುವಾಗ, ಪೂರ್ವಯೋಗಿಭಿಃ= ಪೂರ್ವಯೋಗಿಗಳಿಂದ, ವ್ಯತ್ಯಾಸಶಾಸನಾತ್= ವ್ಯತ್ಯಾಸವು ಹೇಳಲ್ಪಟ್ಟಿರುವುದರಿಂದ, ಯತ್ರ ಕುತ್ರಚಿತ್= ಎಲ್ಲಿಯೂ, ಅತಿಪ್ರಸಂಗ= ಅತಿಪ್ರಸಂಗವು, ನ= ಇಲ್ಲ.

**ಅನುವಾದ–** ಪೂರ್ವಯೋಗಿಗಳು ಒಂದು ಪದದ ಯಥಾಶ್ರುತವಾದ ಅರ್ಥಕ್ಕೆ ಅನುಪಪತ್ತಿ ಇದ್ದಾಗ ಮಾತ್ರ ವ್ಯತ್ಯಾಸವನ್ನು ಹೇಳಿರುವುದರಿಂದ ಎಲ್ಲಿಯೂ ಅತಿಪ್ರಸಂಗವಿಲ್ಲ.

**ಭಾವವಿಲಾಸಿನೀ–** ತರ್ಹಿ ಪ್ರಥಮಾವಿಭಕ್ತೇರ್ನ ಕ್ವಾಪ್ಯವಕಾಶ ಇತ್ಯತ ಆಹ – ಯಥಾಶ್ರುತೇತಿ ॥ ಯಥಾಶ್ರುತವಾಕ್ಯಾರ್ಥಬಾಧಾಭಾವೇ ಪ್ರಥಮಾದಿವಿಭಕ್ತೀನಾಂ ನ ವ್ಯತ್ಯಾಸ ಇತಿ ತತ್ರ ಸರ್ವತ್ರ ತಾಸಾಮೇವಾವಕಾಶ ಇತಿ ಭಾವಃ ॥ ೯೫೦ ॥

**ವಿವರಣೆ–** ಪ್ರಥಮಾ ವಿಭಕ್ತಿಗೆ ಸಪ್ತಮೀ ವಿಭಕ್ತಿಯ ಅರ್ಥವನ್ನು ಹೇಳುವುದಾದರೆ, ಪ್ರಥಮಾ ವಿಭಕ್ತಿಯ ಅರ್ಥಕ್ಕೆ ಎಲ್ಲಿಯೂ ಅವಕಾಶವಿರುವುದಿಲ್ಲ ಎಂಬ ಶಂಕೆಗೆ ಉತ್ತರವನ್ನು ಹೇಳುತ್ತಾರೆ. ನಾವು ಎಲ್ಲ ಕಡೆಗಳಲ್ಲಿಯೂ ಪ್ರಥಮಾವಿಭಕ್ತಿಗೆ ಸಪ್ತಮೀವಿಭಕ್ತಿಯ ಅರ್ಥವನ್ನು ಹೇಳುವುದಿಲ್ಲ. ಎಲ್ಲಿ ಪ್ರಥಮಾ ವಿಭಕ್ತಿಯ ಅರ್ಥವನ್ನು ಸ್ವೀಕರಿಸುವುದಕ್ಕೆ ಅನುಪಪತ್ತಿ ಇದೆಯೋ ಅಲ್ಲಿ ಮಾತ್ರ ವ್ಯಾಕರಣ ಸಮ್ಮತಿಯಿಂದ ಸಪ್ತಮೀ ಅರ್ಥವನ್ನು ಹೇಳುತ್ತೇವೆ. ಆದ್ದರಿಂದ ಉಳಿದ ಕಡೆಗಳಲ್ಲಿ ಪ್ರಥಮಾ ವಿಭಕ್ತಿಗೆ ಅವಕಾಶವು ಇದ್ದೇ ಇದೆ ಎಂದು ಅಭಿಪ್ರಾಯ.

**ಅತಸ್ತವಾಯುಧಂ ಸರ್ವಂ ಬಲಾನ್ನೀತಂ ಪರೈರ್ಯುಧಿ ॥ ೯೫೧ ॥**

**ಅರ್ಥ–** ಅತಃ= ಆದ್ದರಿಂದ, ತವಾಯುಧಂ ಸರ್ವಂ= ನಿನ್ನ ಎಲ್ಲಾ ಆಯುಧಗಳು, ಯುಧಿ= ಯುದ್ಧದಲ್ಲಿ, ಪರೈಃ= ನಿನ್ನ ಶತ್ರುಗಳಿಂದ, ಬಲಾತ್= ತಮ್ಮ ಸಾಮರ್ಥ್ಯದಿಂದ, ನೀತಂ= ಅಪಹರಿಸಲ್ಪಟ್ಟವು.

**ಅನುವಾದ–** ಆದ್ದರಿಂದ ನಿನ್ನ ಎಲ್ಲಾ ಆಯುಧಗಳೂ ಯುದ್ಧದಲ್ಲಿ ಶತ್ರುಗಳಿಂದ ಅಪಹರಿಸಲ್ಪಟ್ಟವು.

**ಭಾವವಿಲಾಸಿನೀ–** ಅತಃ ಸರ್ವಾದ್ವೈತವಾಕ್ಯಾನಾಂ ಸ್ವಾನುಕೂಲೀಕರಣಾತ್ ॥ ೯೫೧ ॥

**ವಿವರಣೆ–** ನಮ್ಮ ಜೊತೆಯಲ್ಲಿ ವಾಗ್ಯುದ್ಧದಲ್ಲಿ ಪ್ರವೃತ್ತನಾದ ನೀನು ಅವಲಂಬಿಸಿದ ಎಲ್ಲಾ ಶ್ರುತಿಗಳಿಗೂ ಶಾಸ್ತ್ರಸಮ್ಮತವಾದ ಭೇದಪರವಾದ ಅರ್ಥಾಂತರವನ್ನು ಹೇಳಿ ಅವುಗಳನ್ನು ನಾವೇ ತೆಗೆದುಕೊಂಡಿರುವುದರಿಂದ ನಮ್ಮನ್ನು ಜಯಿಸುವುದಕ್ಕೆ ನಿನ್ನ ಬಳಿ ಯಾವ ಆಯುಧವೂ ಇಲ್ಲ. ಎಂದರೆ ಯುಕ್ತಿಯಾಗಲೀ, ವಾಕ್ಯವಾಗಲೀ ಇಲ್ಲ ಎಂದು ಅಭಿಪ್ರಾಯ.

**ಯದೇಕಜ್ಞಾನತಃ ಸರ್ವವಿಜ್ಞಾನಂ ಚ ಶ್ರುತೌ ಶ್ರುತಂ ।**
**ಅತೋಽಪಿ ನ ಪರಮಾತ್ಮೈಕ್ಯಂ ಸಿದ್ಧ್ಯೇದದ್ವೈತವಾದಿನಾಂ ॥ ೯೫೨ ॥**

**ಅರ್ಥ–** ಯತ್= ಯಾವ ಕಾರಣದಿಂದ, ಶ್ರುತೌ= ಶ್ರುತಿಯಲ್ಲಿ, ಏಕಜ್ಞಾನತಃ= ಏಕ ವಿಜ್ಞಾನದಿಂದ, ಸರ್ವವಿಜ್ಞಾನಂ ಚ= ಸರ್ವವಿಜ್ಞಾನವು, ಶ್ರುತಂ= ಶ್ರುತವಾಗಿದೆಯೋ, ಅತೋಽಪಿ= ಆ ಕಾರಣದಿಂದಲೂ, ಅದ್ವೈತವಾದಿನಾಂ= ಅದ್ವೈತವಾದಿಗಳಿಗೆ, ಪರಮಾತ್ಮೈಕ್ಯಂ = ಪರಮಾತ್ಮೈಕ್ಯವು, ನ ಸಿದ್ಧ್ಯೇತ್= ಸಿದ್ಧಿಸುವುದಿಲ್ಲ.

**ಅನುವಾದ–** ಶ್ರುತಿಯಲ್ಲಿ ಏಕವಿಜ್ಞಾನದಿಂದ ಸರ್ವವಿಜ್ಞಾನವನ್ನು ಹೇಳಿರುವ ಕಾರಣದಿಂದಲೂ ಅದ್ವೈತ ವಾದಿಗಳಿಗೆ ಪರಮಾತ್ಮೈಕ್ಯವು ಸಿದ್ಧವಾಗುವುದಿಲ್ಲ.

**ಭಾವವಿಲಾಸಿನೀ–** ಉತ ತಮಾದೇಶಮಪ್ರಾಕ್ಷ್ಯೋ ಯೇನಾಶ್ರುತಂ ಶ್ರುತಂ ಭವತ್ಯಮತಂ ಮತಮವಿಜ್ಞಾತಂ ವಿಜ್ಞಾತಂ ಇತಿ ಶ್ರುತೌ ಬ್ರಹ್ಮವಿಜ್ಞಾನೇನ ಸರ್ವವಿಜ್ಞಾನಮುಚ್ಯತೇ । ತಚ್ಚ ಸರ್ವಸ್ಯ ಬ್ರಹ್ಮಸ್ವರೂಪತ್ವಮಭಿಪ್ರೇತ್ಯೈವೇತಿ ಮಾಯಾವಾದಿನೋ ವದಂತಿ । ತದಪಿ ನ ಯುಕ್ತ-ಮಿತ್ಯಾಹ – **ಯದೇಕೇತಿ** ॥ ಶ್ರುತೌ ಶ್ರುತಂ ಯತ್ ಅತೋಽಪೀತಿ ಸಂಬಂಧಃ ॥ ೯೫೨ ॥

**ವಿವರಣೆ–** ಈಗ 'ಉತತಮಾದೇಶಮಪ್ರಾಕ್ಷ್ಯೋ ಯೇನಾ ಶ್ರುತಂ ಶ್ರುತಂ ಭವತಿ ಅಮತಂ ಮತಂ ಅವಿಜ್ಞಾತಂ ವಿಜ್ಞಾತಂ' ಎಂಬ ಶ್ರುತಿಯನ್ನು ವಿಮರ್ಶೆ ಮಾಡುತ್ತಾರೆ. ಈ ಶ್ರುತಿಯು ಬ್ರಹ್ಮವಿಜ್ಞಾನದಿಂದ ಸರ್ವವಿಜ್ಞಾನವನ್ನು ಹೇಳುತ್ತಿದೆ. ಆದ್ದರಿಂದ ಸರ್ವಕ್ಕೂ ಬ್ರಹ್ಮಸ್ವರೂಪತ್ವವನ್ನು ಒಪ್ಪಬೇಕೆಂದು ಮಾಯಾವಾದಿಗಳು ಹೇಳುತ್ತಾರೆ. ಈ ಅರ್ಥವು ಸರಿ ಇಲ್ಲವೆಂದು ಈ ಪ್ರಕರಣದಲ್ಲಿ ಗ್ರಂಥಕಾರರು ಉಪಪಾದನೆ ಮಾಡುತ್ತಾರೆ.

ಯದಿ ಸ್ಯಾದ್ಬ್ರಹ್ಮವಿಜ್ಞಾನೇ ಜ್ಞೇಯಂ ಜಗದಿದಂ ಚ ತೇ ।
ತದಾ ಶಂಕಾವಕಾಶಃ ಸ್ಯಾನ್ನೈವಂ ಕಿಲ ಭವನ್ಮತಂ ॥ ೯೫೩ ॥

**ಅರ್ಥ–** ಯದಿ= ಒಂದು ಪಕ್ಷ, ಬ್ರಹ್ಮವಿಜ್ಞಾನೇ= ಬ್ರಹ್ಮವಿಜ್ಞಾನವಾದಾಗ, ತೇ= ನಿನ್ನ ಮತದಂತೆ, ಇದಂ ಜಗತ್= ಈ ಜಗತ್ತು, ಜ್ಞೇಯಂ ಸ್ಯಾತ್= ತಿಳಿಯಲ್ಪಡುವುದಾದರೆ, ತದಾ= ಆಗ, ಶಂಕಾವಕಾಶಃ ಸ್ಯಾತ್= ಶಂಕೆಗೆ ಅವಕಾಶವಿರುತ್ತದೆ, ಭವನ್ಮತಂ= ನಿನ್ನ ಮತವು, ನೈವಂ ಕಿಲ= ಹೀಗಿಲ್ಲವಷ್ಟೇ.

**ಅನುವಾದ–** ಬ್ರಹ್ಮಜ್ಞಾನದಲ್ಲಿ ನಿನ್ನ ಮತದಂತೆ ಈ ಜಗತ್ತು ವಿಷಯವಾಗುವುದಾದರೆ ಆಗ ಶಂಕೆಗೆ ಅವಕಾಶವಿರುತ್ತದೆ. ಆದರೆ ನಿನ್ನ ಮತವು ಹಾಗಿಲ್ಲವಷ್ಟೇ?

**ಭಾವವಿಲಾಸಿನೀ–** ಕುತೋ ನ ಸಿದ್ಧ್ಯೇದಿತ್ಯತ ಆಹ – **ಯದೀತಿ** ॥ ಭವನ್ಮತಂ ಏವಂ ಪೂರ್ವೋಕ್ತಪ್ರಕಾರೇಣ ನ ಕಿಲ ॥ ೯೫೩ ॥

**ವಿವರಣೆ–** ಬ್ರಹ್ಮಜ್ಞಾನದಿಂದ ಜಗತ್‌ಜ್ಞಾನವು ಉಂಟಾಗುತ್ತದೆ ಎಂದು ಒಪ್ಪಿದರೆ ಮಾತ್ರ ವಿರೋಧವು ಬರುವುದರಿಂದ ಅರ್ಥಾಪತ್ತಿಯಿಂದ ನೀನು ಅಭೇದವನ್ನು ಹೇಳಬೇಕು. ಆದರೆ ನಿನ್ನ ಮತದ ರೀತಿಯಲ್ಲಿಯೇ ಬ್ರಹ್ಮಜ್ಞಾನದಲ್ಲಿ ಸರ್ವವು ತೋರುವುದಿಲ್ಲವಾದ್ದರಿಂದ ಇಲ್ಲಿ ವಿರೋಧಮೂಲವಾದ ಅರ್ಥಾಪತ್ತಿಗೆ ಅವಕಾಶವೇ ಇಲ್ಲ ಎಂದು ಹೇಳುತ್ತಾರೆ.

ನಿಷ್ಪ್ರಕಾರಕಚಿನ್ಮಾತ್ರನಿರ್ವಿಕಲ್ಪಕದೃಕ್ತವ ।
ಬ್ರಹ್ಮದೃಗ್ಗತೋ ಜ್ಞಾನಂ ತದಾ ಕಸ್ಯಾಸ್ತಿ ಕಥ್ಯತಾಂ ॥ ೯೫೪ ॥

**ಅರ್ಥ–** ತವ= ನಿನ್ನ ಮತದಲ್ಲಿ, ನಿಷ್ಪ್ರಕಾರಕಚಿನ್ಮಾತ್ರನಿರ್ವಿಕಲ್ಪಕದೃಕ್= ನಿಷ್ಪ್ರಕಾರಕವಾದ, ಚಿನ್ಮಾತ್ರ ವಿಷಯಕವಾದ, ನಿರ್ವಿಕಲ್ಪವಾದ ಜ್ಞಾನವು, ಬ್ರಹ್ಮದೃಕ್= ಬ್ರಹ್ಮಜ್ಞಾನವಾಗಿದೆ, ತದಾ= ಆಗ, ಜಗತಃ ಜ್ಞಾನಂ= ಜಗತ್‌ಜ್ಞಾನವು, ಕಸ್ಯಾಸ್ತಿ= ಯಾರಿಗೆ ಇದೆ ಎಂದು, ಕಥ್ಯತಾಂ= ಹೇಳಲ್ಪಡಲಿ.

**ಅನುವಾದ–** ನಿನ್ನ ಮತದಲ್ಲಿ ಬ್ರಹ್ಮಜ್ಞಾನವೆಂದರೆ ನಿಷ್ಪ್ರಕಾರಕವಾದ ಚಿನ್ಮಾತ್ರ ವಿಷಯಕವಾದ ನಿರ್ವಿಕಲ್ಪಕವಾದ ಜ್ಞಾನ. ಆಗ ಯಾರಿಗೆ ಜಗತ್‌ಜ್ಞಾನವಿದೆ ಎಂದು ಹೇಳು.

**ಭಾವವಿಲಾಸಿನೀ– ತರ್ಹಿ ಕಥಮಿತ್ಯತ ಆಹ – ನಿಷ್ಪ್ರಕಾರಕೇತಿ ॥** ತವ ಮತೇ ಬ್ರಹ್ಮದೃಕ್ ಬ್ರಹ್ಮಾಪರೋಕ್ಷಜ್ಞಾನಂ। ನಿಷ್ಪ್ರಕಾರಕಸ್ಯ ನಿರ್ಧರ್ಮಕಸ್ಯ ಚಿನ್ಮಾತ್ರಸ್ಯ ಬ್ರಹ್ಮಚಿನ್ಮಾತ್ರಸ್ಯ ಚಿತ್ತ್ವರೂಪ-ಧರ್ಮಸ್ಯಾಪಿ ವ್ಯಾವೃತ್ತ್ಯರ್ಥಂ ಮಾತ್ರಪದಮ್ । ನಿರ್ವಿಕಲ್ಪಕದೃಕ್ಕಿಲ ನಿರ್ವಿಕಲ್ಪಕರೂಪಾ-ಪರೋಕ್ಷಜ್ಞಾನಂ ಕಿಲ । ತದಾ ಏತಾದೃಶನಿರ್ವಿಕಲ್ಪಕಜ್ಞಾನದಶಾಯಾಮ್ । ಕಸ್ಯ ಜಗತ ಇತಿ ಸಂಬಂಧಃ । ತವ ಮತೇ ಬ್ರಹ್ಮಾಪರೋಕ್ಷಜ್ಞಾನರೂಪೇ ಶ್ರವಣಮನನೋತ್ತರಕಾಲೀನೇ ಏಕವಿಜ್ಞಾನೇ ಬ್ರಹ್ಮಧರ್ಮಾಣಾಮಪಿ ನ ಭಾನಮ್ । ಅಂತತಶ್ಚಿತ್ತ್ವಸ್ಯಾಪಿ ನ ಭಾನಮಿತಿ ಪ್ರಕ್ರಿಯಾ । ತದಾ ಸರ್ವಸ್ಯ ಜಗತೋ ಜ್ಞಾನಂ ಕಥಂ ಸಂಭಾವಿತಮಿತಿ ಭಾವಃ ॥ ೯೫೪ ॥

**ವಿವರಣೆ–** ಇಲ್ಲಿ ಹೇಳುವ ಏಕವಿಜ್ಞಾನವು ಶ್ರವಣಮನನಾನಂತರದಲ್ಲಿ ಉಂಟಾಗುವ ಚರಮಜ್ಞಾನ. ಅದು ನಿರ್ವಿಕಲ್ಪಕವಾದುದು. ಅದರಲ್ಲಿ ಯಾವ ಧರ್ಮವೂ ತೋರುವುದಿಲ್ಲ. ಅಷ್ಟೇ ಏಕೆ? ಚಿತ್ತ್ವವೂ ತೋರುವುದಿಲ್ಲ. ಹೀಗಿರುವಾಗ ಅದರಲ್ಲಿ ಜಗತ್ತಿನ ಭಾನವು ಅಸಂಭಾವಿತವಾದುದು ಎಂದು ಅಭಿಪ್ರಾಯ.

ಅಪಿ ಚಾರೋಪಿತಜ್ಞಾನಂ ನಾಧಿಷ್ಠಾನಸ್ಯ ದರ್ಶನೇ ।
ಅತೋಽಪಿ ನ ಜಗದ್‌ಜ್ಞಾನಂ ಬ್ರಹ್ಮಜ್ಞಾನಂ ಭವನ್ಮತೇ ॥ ೯೫೫ ॥

ಚರಮಬ್ರಹ್ಮವಿಜ್ಞಾನಪ್ರಶಂಸಾರ್ಥಂ ಖಲು ಶ್ರುತಿಃ ।
ಅರ್ಥವಾದಮಿಮಂ ವಕ್ತಿ ತತಶ್ಚರಮಮೇವ ತತ್ ।
ವಾಚ್ಯಂ ತ್ವಯೈಕವಿಜ್ಞಾನಂ ಕಥಂ ತತ್ರಾನ್ಯದರ್ಶನಂ ॥ ೯೫೬ ॥

**ಅರ್ಥ–** ಅಪಿ ಚ= ಮತ್ತು, ಅಧಿಷ್ಠಾನಸ್ಯ ದರ್ಶನೇ= ಅಧಿಷ್ಠಾನದ ಯಥಾರ್ಥ ಜ್ಞಾನವಿದ್ದಾಗ, ಆರೋಪಿತ ಜ್ಞಾನಂ ನ= ಆರೋಪಿತದ ಜ್ಞಾನವು ಇರುವುದಿಲ್ಲ, ಅತೋಽಪಿ= ಆ ಕಾರಣದಿಂದಲೂ, ಭವನ್ಮತೇ= ನಿನ್ನ ಮತದಲ್ಲಿ, ಬ್ರಹ್ಮಜ್ಞಾನಂ= ಬ್ರಹ್ಮಜ್ಞಾನವು, ನ ಜಗದ್‌ಜ್ಞಾನಂ= ಜಗಜ್‌ಜ್ಞಾನವಾಗುವುದಿಲ್ಲ, ಶ್ರುತಿಃ= ಉತತಮಾದೇಶಂ ಎಂಬ ಶ್ರುತಿಯು, ಚರಮಬ್ರಹ್ಮವಿಜ್ಞಾನಪ್ರಶಂಸಾರ್ಥಂ= ಚರಮಬ್ರಹ್ಮಜ್ಞಾನವನ್ನು ಪ್ರಶಂಸೆ

ಮಾಡುವುದಕ್ಕಾಗಿಯೇ, ಇಮಂ ಅರ್ಥವಾದಂ= ಈ ಅರ್ಥವಾದವನ್ನು, ವಕ್ತಿ ಖಲು= ಹೇಳುವುದಷ್ಟೇ, ತತಃ= ಆದ್ದರಿಂದ, ತತ್ ಏಕವಿಜ್ಞಾನಂ= ಆ ಏಕಜ್ಞಾನವು, ಚರಮಮೇವ= ಚರಮ ಜ್ಞಾನವೆಂದೇ, ತ್ವಯಾ= ನಿನ್ನಿಂದ, ವಾಚ್ಯಂ= ಹೇಳಲ್ಪಡಬೇಕು, ತತ್ರ= ಆ ಏಕವಿಜ್ಞಾನದಲ್ಲಿ, ಅನ್ಯದರ್ಶನಂ= ಜಗದ್ವಿಷಯಕತ್ವವು, ಕಥಂ= ಹೇಗೆ ಉಂಟಾಗುತ್ತದೆ?

**ಅನುವಾದ–** ಮತ್ತು ಅಧಿಷ್ಠಾನದ ಯಥಾರ್ಥಜ್ಞಾನವು ಬಂದಾಗ ಆರೋಪಿತ ಜ್ಞಾನವು ಇರುವುದಿಲ್ಲ. ಆದ್ದರಿಂದಲೂ ನಿನ್ನ ಮತದಲ್ಲಿ ಬ್ರಹ್ಮಜ್ಞಾನವು ಜಗಜ್‌ಜ್ಞಾನವಾಗುವುದಿಲ್ಲ. ಉತತಮಾದೇಶಮಪ್ರಾಕ್ಷ್ಯಃ ಎಂಬ ಈ ಶ್ರುತಿಯು ಚರಮಬ್ರಹ್ಮಜ್ಞಾನವನ್ನು ಪ್ರಶಂಸೆ ಮಾಡುವುದಕ್ಕಾಗಿಯೇ ಈ ಅರ್ಥವಾದವನ್ನು ಹೇಳುತ್ತಿದೆಯಷ್ಟೇ? ಆದ್ದರಿಂದ ಇಲ್ಲಿ ಹೇಳಲ್ಪಟ್ಟ ಏಕವಿಜ್ಞಾನವು ಚರಮವಿಜ್ಞಾನವೆಂದೇ ನೀನು ಅಂಗೀಕರಿಸಬೇಕು. ಆ ಚರಮವಿಜ್ಞಾನದಲ್ಲಿ ಜಗಜ್‌ಜ್ಞಾನವು ಹೇಗೆ ಉಂಟಾಗುತ್ತದೆ?

**ಭಾವವಿಲಾಸಿನೀ–** ಯುಕ್ತ್ಯಂತರಂ ಚಾಹ – **ಅಪಿ ಚೇತಿ** ॥ ಆರೋಪಿತಸ್ಯ ರಜತಸ್ಯ ಅಧಿಷ್ಠಾನಸ್ಯ ಶುಕ್ತಿಶಕಲಸ್ಯ । ಅಧಿಷ್ಠಾನಯಾಥಾತ್ಮ್ಯಜ್ಞಾನದಶಾಯಾಂ ಆರೋಪಿತಜ್ಞಾನಂ ಕುತ್ರಾಪಿ ನ ಭಾತೀತ್ಯರ್ಥಃ । ಭವನ್ಮತೇ ಬ್ರಹ್ಮಣಿ ಜಗತಃ ಕಲ್ಪಿತತ್ವಮತೋ ಬ್ರಹ್ಮತತ್ವಜ್ಞಾನದಶಾಯಾಂ ತತ್ರಾ-ರೋಪಿತಜಗತ್‌ಜ್ಞಾನಂ ಕಥಂ ತವ ಮತೇ ಸ್ಯಾದಿತಿ ಭಾವಃ ॥ ಅತ್ರೋಕ್ತಂ ಜ್ಞಾನಂ ಚರಮ-ಜ್ಞಾನಮೇವೇತ್ಯತ್ರ ಯುಕ್ತಿಮಾಹ – **ಚರಮೇತಿ** ॥ ಇಮಂ ಯೇನಾಶ್ರುತಮಿತ್ಯಾದಿಕಮ್ । ಉಪಲಕ್ಷಣಂ ಚೈತತ್ । ಅಶ್ರುತಂ ಶ್ರುತಮಮತಂ ಮತಮಿತ್ಯುಕ್ತಶ್ರವಣ-ಮನನೋತ್ತರಕಾಲೀನತ್ವಾತ್ । ವೀತ್ಯುಪಸರ್ಗಬಲಾಚ್ಚೇತ್ಯಪಿ ದ್ರಷ್ಟವ್ಯಮ್ । ತದೈಕವಿಜ್ಞಾನಮಿತಿ ಸಂಬಂಧಃ । ತತ್ರ ಏಕವಿಜ್ಞಾನೇ । ಅನ್ಯದರ್ಶನಂ ಜಗದ್ದರ್ಶನಮ್ ॥ ೯೫೫-೯೫೬ ॥

**ವಿವರಣೆ–** ಭ್ರಮವನ್ನು ಕುರಿತು ಅಧಿಷ್ಠಾನಜ್ಞಾನವು ಕಾರಣವಾದುದರಿಂದ ಭ್ರಮದಲ್ಲಿ ಅಧಿಷ್ಠಾನ ಜ್ಞಾನವು ಮತ್ತು ಆರೋಪಿತಜ್ಞಾನವೂ ಇರಬಹುದು. ಆದರೆ ಅಧಿಷ್ಠಾನ ಯಥಾರ್ಥಜ್ಞಾನವು ಭ್ರಮನಿರ್ವತಕವಾದ್ದರಿಂದ ಅಧಿಷ್ಠಾನ ಯಥಾರ್ಥಜ್ಞಾನವು ಬರುವಾಗ ಅದರಲ್ಲಿ ಆರೋಪಿತವು ತೋರುವುದಿಲ್ಲ. ನಿನಗೆ ಅಭಿಪ್ರೇತವಾದ ಈ ಚರಮಜ್ಞಾನವು ಯಥಾರ್ಥಜ್ಞಾನರೂಪವಾದುದು. ಏಕೆಂದರೆ ಅದನ್ನು ಪ್ರಶಂಸಿಸು ವುದಕ್ಕಾಗಿಯೇ ಈ ಅರ್ಥವಾದ ಹೊರಟಿದೆ. ಆದ್ದರಿಂದ ಅಂತಹ ಜ್ಞಾನದಲ್ಲಿ ಜಗತ್ತು ತೋರುವುದಿಲ್ಲ. ಅದು ನಿರ್ವಿಕಲ್ಪಕವೆಂದು ಮೊದಲೇ ನೀನೇ ಹೇಳಿದ್ದೀಯೆ. ಆದ್ದರಿಂದ ನಿನಗೆ ಅಭಿಪ್ರೇತವಾದ ಅಭೇದವು ಇಲ್ಲಿ ಅರ್ಥಾಪತ್ತಿಯಿಂದ ಸಿದ್ಧವಾಗುವುದಿಲ್ಲ.

ಅತೋ ಭ್ರಾಂತಜಗಜ್‌ಜ್ಞಾನಮಧಿಷ್ಠಾನಾತ್ಮದರ್ಶನೇ ।
ಜಾತಮಿತ್ಯಪಿ ನೈಕಸ್ಯ ಜ್ಞಾನಾತ್ ಸರ್ವಸ್ಯ ದೃಕ್ ತವ ॥ ೯೫೭ ॥

**ತಸ್ಮಾದ್ಭ್ರಮಸ್ಯ ದ್ವಾವಂಶೌ ಸ್ತ ಇತ್ಯಪಿ ನ ತೇ ಗತಿಃ ।**
**ಭ್ರಮಾನುಕೂಲಸಾಮಾನ್ಯಧೀರ್ವಿಜ್ಞಾನಂ ಕಥಂ ವದ ॥ ೯೫೮ ॥**

**ಅರ್ಥ–** ಅತಃ= ಆದ್ದರಿಂದ, ಅಧಿಷ್ಠಾನಾತ್ಮದರ್ಶನೇ= ಅಧಿಷ್ಠಾನಭೂತನಾದ ಆತ್ಮನ ಜ್ಞಾನದಲ್ಲಿ, ಭ್ರಾಂತಜಗಜ್‌ಜ್ಞಾನಂ= ಆರೋಪಿತವಾದ ಜಗತ್ತಿನ ಜ್ಞಾನವು, ಜಾತಂ ಇತ್ಯಪಿ= ಉಂಟಾಯಿತು ಎಂಬ ಕಾರಣದಿಂದಲೂ, ತವ= ನಿನಗೆ, ಏಕಸ್ಯಜ್ಞಾನಾತ್= ಏಕವಿಜ್ಞಾನದಿಂದ, ಸರ್ವಸ್ಯದೃಕ್= ಸರ್ವವಿಜ್ಞಾನವು, ನ= ಇಲ್ಲ, ತಸ್ಮಾತ್= ಆದ್ದರಿಂದ, ಭ್ರಮಸ್ಯ= ಭ್ರಮಕ್ಕೆ, ದ್ವಾವಂಶೌ= ಎರಡು ಅಂಶಗಳು, ಸ್ತಃ ಇತ್ಯಪಿ= ಇರುತ್ತವೆ ಎಂಬುದರಿಂದಲೂ, ನ ತೇ ಗತಿಃ= ನಿನಗೆ ಪರಿಹಾರವು ದೊರೆಯುವುದಿಲ್ಲ, ಭ್ರಮಾನುಕೂಲಸಾಮಾನ್ಯ ಧೀಃ= ಭ್ರಮಕ್ಕೆ ಕಾರಣವಾದ ಸಾಮಾನ್ಯ ಧರ್ಮಜ್ಞಾನವು, ಕಥಂ ವಿಜ್ಞಾನಂ= ಹೇಗೆ ವಿಜ್ಞಾನವಾಗುತ್ತದೆ ಎಂದು ಹೇಳು.

**ಅನುವಾದ–** ಆದ್ದರಿಂದ ಅಧಿಷ್ಠಾನ ಭೂತನಾದ ಆತ್ಮನ ದರ್ಶನ ಉಂಟಾದಾಗ ಆರೋಪಿತವಾದ ಜಗಜ್‌ಜ್ಞಾನವು ಉಂಟಾಗಿದೆ ಎಂಬ ಕಾರಣದಿಂದ ನೀನು ಏಕವಿಜ್ಞಾನದಿಂದ ಸರ್ವವಿಜ್ಞಾನವನ್ನು ಹೇಳಲು ಬರುವುದಿಲ್ಲ. ಭ್ರಮದಲ್ಲಿ ಅಧಿಷ್ಠಾನ ಮತ್ತು ಆರೋಪಿತ ಎಂಬ ಎರಡು ಅಂಶಗಳಿವೆ ಎಂದು ಹೇಳಿದರೂ ಅದರಿಂದ ನಿನಗೆ ಬಂದ ದೋಷವು ಪರಿಹಾರವಾಗುವುದಿಲ್ಲ. ಭ್ರಮ ಕಾರಣವಾದ ಸಾಮಾನ್ಯಜ್ಞಾನವು ಹೇಗೆ ವಿಜ್ಞಾನವಾಗುತ್ತದೆ ಎಂಬುದನ್ನು ಹೇಳು.

**ಭಾವವಿಲಾಸಿನೀ–** ಅತಃ ಏಕವಿಜ್ಞಾನಸ್ಯ ಚರಮಾಪರೋಕ್ಷಜ್ಞಾನತ್ವಾತ್ । ಭ್ರಾಂತಜಗತ್‌ಜ್ಞಾನಂ ಜಗದ್‌ಭ್ರಮರೂಪಜ್ಞಾನಮಿತಿ ಯಾವತ್ । ಅಧಿಷ್ಠಾನಾತ್ಮದರ್ಶನೇ ಅಧಿಷ್ಠಾನಭೂತ-ಬ್ರಹ್ಮದರ್ಶನೇ ಸತ್ಯೇವ ಜಾತಂ ನ ತ್ವನ್ಯಥಾ । ಭ್ರಾಂತೇರಧಿಷ್ಠಾನಜ್ಞಾನನಿಯತತ್ವಾದಿತ್ಯರ್ಥಃ । ಇತ್ಯಪಿ ಇತಿ ಹೇತೋರಪಿ । ತವ ಮತೇ । ಏಕಸ್ಯ ಜ್ಞಾನಂ ಸರ್ವಸ್ಯ ದೃಕ್ ನಾಭೂತ್ । ಜಗದಾರೋಪದಶಾಯಾಂ ಯದಧಿಷ್ಠಾನಬ್ರಹ್ಮಜ್ಞಾನಂ ತದೇವ ಏಕವಿಜ್ಞಾನಮಸ್ತು । ತದಾ ಸರ್ವವಿಜ್ಞಾನಮಪ್ಯಸ್ತ್ಯೇವ । ಅಯಮೇವ ಶ್ರುತ್ಯರ್ಥ ಇತ್ಯಪಿ ತ್ವಯಾ ವಕ್ತುಂ ನ ಶಕ್ಯತೇ । ಏಕವಿಜ್ಞಾನಪದೇನ ಮೋಕ್ಷಹೇತುಭೂತಬ್ರಹ್ಮಾಪರೋಕ್ಷಜ್ಞಾನಸ್ಯೈವ ಶ್ರುತ್ಯಾ ಅಭಿಪ್ರೇತತ್ವಾದಿತಿ ಭಾವಃ ॥ ತಸ್ಮಾತ್ ಭ್ರಮಕಾಲೀನಾಧಿಷ್ಠಾನಜ್ಞಾನರೂಪಬ್ರಹ್ಮಜ್ಞಾನಸ್ಯಾಪ್ರಸ್ತುತತ್ವಾತ್ । ದೋಷಾಂತರಂ ಚಾಹ – **ಭ್ರಮೇತಿ** ॥ ತಥಾ ಸತಿ ವೀತ್ಯುಪಸರ್ಗವೈಯರ್ಥ್ಯಂ ಚ ಸ್ಯಾದಿತಿ ಭಾವಃ ॥ ೯೫೭-೯೫೮ ॥

**ವಿವರಣೆ–** ಅಧಿಷ್ಠಾನ ಯಥಾರ್ಥಜ್ಞಾನವು ಇದ್ದಾಗ ಎಂದರೆ ಬಾಧ ಸಮಯದಲ್ಲಿ ಆರೋಪಿತ ಜಗಜ್‌ಜ್ಞಾನವು ಇರುವುದಿಲ್ಲ ಎಂದು ಹಿಂದೆ ಹೇಳಿದರು. ಅದನ್ನು ಪರಿಹರಿಸುವುದಕ್ಕೋಸ್ಕರ ಬ್ರಹ್ಮದೆಶೆಯಲ್ಲಿಯೇ ಬ್ರಹ್ಮಜ್ಞಾನ ಮತ್ತು ಜಗಜ್‌ಜ್ಞಾನ ಎರಡೂ

ಇರುವುದರಿಂದ ಏಕವಿಜ್ಞಾನದಿಂದ ಸರ್ವವಿಜ್ಞಾನವನ್ನು ಹೇಳುತ್ತೇವೆ ಎಂದು ಶಂಕಿಸಿದರೆ ಅದಕ್ಕೆ ಇಲ್ಲಿ ಉತ್ತರವನ್ನು ಹೇಳುತ್ತಾರೆ. ಭ್ರಮದೆಶೆಯಲ್ಲಿ ಇರುವ ಜ್ಞಾನವು ಸಾಮಾನ್ಯ ಜ್ಞಾನ. ಯಥಾರ್ಥ ಜ್ಞಾನವಲ್ಲ. ಆದ್ದರಿಂದಲೇ ಭ್ರಮವು ಇದೆ. ಅಂತಹ ಜ್ಞಾನವನ್ನು ವಿಜ್ಞಾನ ಎಂದು ಹೇಳುವುದು ಹೇಗೆ? ಅದು ಯಥಾರ್ಥ ಜ್ಞಾನವಲ್ಲವಷ್ಟೇ. ಇಲ್ಲಿ ಪ್ರಸ್ತುತವಾಗಿರುವುದು ಮೋಕ್ಷಹೇತುವಾದ ಬ್ರಹ್ಮಜ್ಞಾನ. ಅದು ಚರಮಜ್ಞಾನವೇ ಆಗಬೇಕು. ಭ್ರಮಕಾಲೀನ ಬ್ರಹ್ಮಜ್ಞಾನವು ಇಲ್ಲಿ ಪ್ರಸ್ತುತವೇ ಆಗಿಲ್ಲವಾದ್ದರಿಂದ ಅದರಿಂದ ಸರ್ವವಿಜ್ಞಾನವನ್ನು ಸಾಧಿಸುವುದು ಅಸಂಗತ ಮತ್ತು ವಿರುದ್ಧ ಎಂದು ಅಭಿಪ್ರಾಯ.

ಏವಮಪ್ಯಖಿಲಭ್ರಾಂತಜಗದೈಕ್ಯಂ ಭವೇತ್ಪರಂ ।
ಅಪ್ರಶಂಸ್ಯಪ್ರಶಂಸಾ ಸ್ಯಾತ್ ಪ್ರಕ್ರಮಸ್ಯಾಪ್ಯತಿಕ್ರಮಃ ॥ ೯೫ ॥

**ಅರ್ಥ–** ಏವಮಪಿ= ಭ್ರಮಕಾಲೀನ ಅಧಿಷ್ಠಾನ ಜ್ಞಾನವೇ ಏಕವಿಜ್ಞಾನವೆಂದು ಒಪ್ಪಿದರೆ, ಪರಂ= ಕೇವಲ, ಭ್ರಾಂತಜಗದೈಕ್ಯಂ ಭವೇತ್= ಆರೋಪಿತವಾದ ಜಗತ್ತಿನ ಐಕ್ಯವು ಸಿದ್ಧವಾದೀತು, ಅಪ್ರಶಂಸ್ಯ ಪ್ರಶಂಸಾ ಸ್ಯಾತ್= ಪ್ರಶಂಸೆಗೆ ಯೋಗ್ಯವಲ್ಲದ ಭ್ರಾಂತಿರೂಪವಾದ ಜ್ಞಾನದ ಪ್ರಶಂಸೆ ಎಂದಾಯಿತು, ಪ್ರಕ್ರಮಸ್ಯಾಪಿ ಅತಿಕ್ರಮಃ= ಉಪಕ್ರಮದ ವಿರೋಧವೂ ಬರುತ್ತದೆ.

**ಅನುವಾದ–** ಭ್ರಮಕಾಲೀನ ಬ್ರಹ್ಮವಿಜ್ಞಾನವನ್ನೇ ಏಕವಿಜ್ಞಾನವೆಂದು ಅಂಗೀಕರಿಸಿದರೆ ಇಲ್ಲಿ ಮೂರು ದೋಷವನ್ನು ಹೇಳುತ್ತಾರೆ. ಆರೋಪಿತ ಜಗದೈಕ್ಯವೇ ಬರುತ್ತದೆ. ಜೀವೈಕ್ಯವಲ್ಲ ಎಂಬುದು ಮೊದಲನೆಯ ದೋಷ. ಭ್ರಮವು ಎಂದೂ ಪ್ರಶಂಸನೀಯವಾದುದಲ್ಲವಾದ್ದರಿಂದ ಅದರ ಪ್ರಶಂಸೆ ಉಂಟಾಗುತ್ತದೆ ಎಂಬುದು ಎರಡನೆಯ ದೋಷ. ಮೋಕ್ಷಹೇತುವಾದ ಬ್ರಹ್ಮಜ್ಞಾನವು ಉಪಕ್ರಮದಲ್ಲಿ ಪ್ರಸ್ತುತವಾಗಿರುವುದರಿಂದ ಭ್ರಮರೂಪಜ್ಞಾನವು ಮೋಕ್ಷಹೇತುವಲ್ಲವಾದ್ದರಿಂದ ಉಪಕ್ರಮದ ವಿರೋಧವು ಬರುತ್ತದೆ ಎಂಬುದು ಮೂರನೆಯ ದೋಷ ಎಂದು ಅಭಿಪ್ರಾಯ.

**ಭಾವವಿಲಾಸಿನೀ–ಪುನರಪಿ ದೋಷತ್ರಯಮಾಹ–ಏವಮಿತಿ ॥** ಏವಮಪಿ ಭ್ರಮಕಾಲೀನಾಧಿಷ್ಠಾನಜ್ಞಾನಸ್ಯೈಕವಿಜ್ಞಾನತ್ವೇಽಪಿ । ಅನೇನೈಕವಿಜ್ಞಾನೇ ಸತಿ ಸರ್ವವಿಜ್ಞಾನೇನ ಭ್ರಾಂತಿಕಲ್ಪಿತಜಗದೈಕ್ಯಮೇವ ಬ್ರಹ್ಮಣೋ ಭವೇತ್ । ಅಸ್ಮಿನ್ನೇಕವಿಜ್ಞಾನೇ ತಸ್ಯೈವ ಸರ್ವಸ್ಯ ಭ್ರಾಂತ್ಯಾ ಪ್ರತೀಯಮಾನತ್ವಾತ್ । ತಚ್ಚ ವಿರುದ್ಧಮಿತಿ ಭಾವಃ । ಅಪ್ರಶಂಸ್ಯಸ್ಯ ಸಂಸಾರಹೇತುತಯಾ ನಿಂದ್ಯಸ್ಯ । ಪ್ರಕ್ರಮಸ್ಯ ಮೋಕ್ಷೋಪಯೋಗಿಬ್ರಹ್ಮಜ್ಞಾನೋಪಕ್ರಮಸ್ಯ ॥೯೫॥

ಏಕಜ್ಞಾನೇನ ಸರ್ವಸ್ಯ ಜ್ಞಾನಂ ಕಾಣ್ವಶ್ರುತಿಃ ಪುರಾ ।
ಪ್ರಸ್ತಾವ್ಯ ಪುನರಾಹೈತದಮೃತತ್ವಮಿತಿ ಸ್ಫುಟಮ್ ॥ ೯೬ ॥

**ಅರ್ಥ—** ಕಾಣ್ವಶ್ರುತಿಃ= ಕಾಣ್ವಶ್ರುತಿಯು, ಪುರಾ= ಮೊದಲು, ಏಕಜ್ಞಾನೇನ ಸರ್ವಸ್ಯ ಜ್ಞಾನಂ= ಏಕವಿಜ್ಞಾನದಿಂದ ಸರ್ವವಿಜ್ಞಾನವನ್ನು, ಪ್ರಸ್ತಾವ್ಯ= ಪ್ರಸ್ತಾಪ ಮಾಡಿ, ಪುನಃ= ಮತ್ತು ಕೊನೆಯಲ್ಲಿ, ಸ್ಫುಟಂ= ಸ್ಪಷ್ಟವಾಗಿ, ಏಕದಮೃತತ್ವಂ= ಇದು ಮೋಕ್ಷ, ಇತಿ= ಎಂದು, ಆಹ= ಹೇಳಿದೆ.

**ಅನುವಾದ—** ಮೊದಲು ಏಕವಿಜ್ಞಾನದಿಂದ ಸರ್ವವಿಜ್ಞಾನವನ್ನು ಪ್ರಸ್ತಾಪಿಸಿ, ಕೊನೆಯಲ್ಲಿ ಸ್ಪಷ್ಟವಾಗಿ ಇದು ಮೋಕ್ಷ ಎಂದು ಹೇಳಿದೆ.

**ಭಾವವಿಲಾಸಿನೀ—** ಶ್ರುತ್ಯಂತರಸಮಾಖ್ಯಯಾ ಚ ಮೋಕ್ಷೋಪಯೋಗಿಬ್ರಹ್ಮಜ್ಞಾನ- ಮೇವೇದ- ಮೇಕವಿಜ್ಞಾನಮಿತ್ಯಾಹ – **ಏಕಜ್ಞಾನೇನೇತಿ** ॥ ಕಾಣ್ವಶ್ರುತಿಃ ಆತ್ಮನಿ ವಿಜ್ಞಾತೇ ಸರ್ವಮಿದಂ ಖಲು ವಿಜ್ಞಾತಂ ಸ್ಯಾದಿತಿ ಶ್ರುತಿರಿತ್ಯರ್ಥಃ । ಏತದಮೃತತ್ವಮಿತ್ಯನೇನ ಏತಾವದರೇ ಖಲ್ವಮೃತತ್ವಮಿತಿ ಶ್ರುತಿಂ ಸಂಗೃಹ್ಣಾತಿ । ಅರೇ ಗಾರ್ಗಿ ಏತಾವತ್ ಏತಾದೃಶಮಾಹಾತ್ಮ್ಯಸಹಿತಂ ಏತತ್ ಜ್ಞಾನಮಿತ್ಯರ್ಥಃ । ಅಮೃತತ್ವಂ ಮುಕ್ತಿಃ ಖಲು । ಇತಿ ವಾಕ್ಯಯೋಜನಾ ॥ ೯೬೦ ॥

**ವಿವರಣೆ—** ಶ್ರುತ್ಯಂತರ ಸಮಾಖ್ಯೆಯಿಂದಲೂ ಈ ಏಕವಿಜ್ಞಾನವು ಮೋಕ್ಷೋಪಯೋಗಿಯಾದ ಬ್ರಹ್ಮಜ್ಞಾನವೇ ಎಂದು ಹೇಳುತ್ತಾರೆ. ಕಾಣ್ವಶ್ರುತಿಯಲ್ಲಿ 'ಆತ್ಮನಿ ವಿಜ್ಞಾತೇ ಸರ್ವಮಿದಂ ಖಲು ವಿಜ್ಞಾತಂ ಸ್ಯಾತ್' ಎಂದು ಮೊದಲು ಪ್ರಸ್ತಾಪಿಸಿ (ಆತ್ಮನು ವಿಜ್ಞಾತವಾದರೆ ಎಲ್ಲವೂ ವಿಜ್ಞಾತವಾಗುತ್ತದೆ ಎಂದು ಶ್ರುತಿಯ ಅರ್ಥ). ಕೊನೆಯಲ್ಲಿ 'ಏತಾವದರೇ ಖಲ್ವಮೃತತ್ವಂ' ಇಷ್ಟೇ ಮೋಕ್ಷ ಎಂದು ತಾನು ಹೇಳಿದ ಎಲ್ಲ ಪ್ರಮೇಯವನ್ನು ಸಂಗ್ರಹ ಮಾಡಿದೆ. ಆದ್ದರಿಂದ ಚರಮ ಜ್ಞಾನವು ಮೋಕ್ಷೋಪಿಯೋಗಿ ಜ್ಞಾನವೆಂದೇ ಸಿದ್ಧವಾಗುತ್ತದೆ.

ಲಾಂಗಲಂ ಜೀವನಮಿತಿ ಪ್ರೋಕ್ತೇ ಜೀವನಹೇತುತಾ ।
ಯಥಾಯಾತಿ ತಥಾಮುಕ್ತಿಹೇತುತಾ ವಾಗಿಯಂ ಕಿಲ ॥ ೯೬೧ ॥

**ಅರ್ಥ—** ಲಾಂಗಲಂ ಜೀವನಮಿತಿ ಪ್ರೋಕ್ತೇ= ನೇಗಿಲು ನನ್ನ ಜೀವನ ಎಂದು ಹೇಳಿದರೆ, ಜೀವನ ಹೇತುತಾ= ಜೀವನ ಕಾರಣತ್ವವು, ಯಥಾ ಆಯಾತಿ= ಹೇಗೆ ಸಿದ್ಧವಾಗುತ್ತದೆಯೋ, ತಥಾ= ಅದರಂತೆ, ಇಯಂ= ಇದು, ಮುಕ್ತಿಹೇತುಕಾ ವಾಕ್ ಕಿಲ= ಮೋಕ್ಷ ಸಾಧನವನ್ನು ಹೇಳುವ ವಾಕ್ಯವಷ್ಟೇ?

**ಅನುವಾದ—** ನೇಗಿಲು ನನ್ನ ಜೀವನ ಎಂದು ಹೇಳಿದರೆ ಹೇಗೆ ಜೀವನಕ್ಕೆ ಕಾರಣ ಎಂಬ ಅರ್ಥವು ಲಭ್ಯವಾಗುತ್ತದೆಯೋ, ಅದರಂತೆ ಇದೇ ಮೋಕ್ಷ ಎಂದು ಹೇಳಿದರೆ ಇದು ಮೋಕ್ಷ ಸಾಧನವೆಂಬ ಅರ್ಥವೇ ಲಭ್ಯವಾಗುವುದರಿಂದ ಈ ವಾಕ್ಯವು ಮೋಕ್ಷ ಸಾಧನವನ್ನು ಹೇಳುವ ವಾಕ್ಯವೇ ಆಗಿದೆ.

**ಭಾವವಿಲಾಸಿನೀ–** ಅಸ್ಯಾರ್ಥಂ ಸದೃಷ್ಟಾಂತಮಾಹ – **ಲಾಂಗಲಮಿತಿ ॥ ಮುಕ್ತಿಹೇತುತಾವಾಕ್** ಜ್ಞಾನಸ್ಯ ಮುಕ್ತಿಹೇತುತಾವಾಕ್ ಇಯಂ ಏತಾವದರೇಖಲ್ವಮೃತತ್ವಮಿತಿ ಶ್ರುತಿಃ । ಯಥಾ ಲಾಂಗಲಂ ಜೀವನಮಿತಿ ಸಾಮಾನಾಧಿಕರಣ್ಯೋಕ್ತಾವಪಿ ಲಾಂಗಲಸ್ಯ ಜೀವನ-ಹೇತುತ್ವೈವಾರ್ಥಃ । ತಥಾ ಏತಾವದೇವಾಮೃತತ್ವಮಿತ್ಯುಕ್ತೇಽಪಿ ಪೂರ್ವೋಕ್ತಜ್ಞಾನ-ಸ್ಯಾಮೃತತ್ವಹೇತುತ್ವೈವಾರ್ಥ ಇತಿ ಭಾವಃ। ಕಿಲೇತ್ಯನೇನ ಆತ್ಮನಿ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಸ್ಯಾತ್ । ಏತಾವದರೇ ಖಲ್ವಮೃತತ್ವಮಿತ್ಯುಪಸಂಹಾರಾತ್ ಅಮೃತತ್ವ ಸಾಧನಮಾತ್ಮದರ್ಶನಂ ದ್ರಷ್ಟವ್ಯ ಇತ್ಯನೂದ್ಯೇತಿ ವಿವರಣೋಕ್ತಂ ಲಾಂಗಲಂ ಜೀವನಮಿತಿ ತತ್ವದೀಪನೋಕ್ತ-ದೃಷ್ಟಾಂತವಚನಂ ಸೂಚಯತಿ ॥ ೯೬೧ ॥

**ವಿವರಣೆ–** 'ಏತಾವದೇವ ಅಮೃತತ್ವಂ' ಎಂಬ ಮಾತಿಗೆ ಪೂರ್ವೋಕ್ತ ಜ್ಞಾನಕ್ಕೆ ಮೋಕ್ಷ ಹೇತುತ್ವವಿದೆ ಎಂದೇ ಅರ್ಥ. ಇದು ಲಾಂಗಲ ದೃಷ್ಟಾಂತದಿಂದ ತಿಳಿದುಬರುತ್ತದೆ. 'ಕಿಲ ಎಂಬ ಶಬ್ದದಿಂದ 'ಅಮೃತತ್ವ ಸಾಧನಂ ಆತ್ಮದರ್ಶನಂ ದೃಷ್ಟವ್ಯಃ ಇತ್ಯನೂದ್ಯ' ಎಂಬ ವಿವರಣ ವಾಕ್ಯವನ್ನೂ 'ಲಾಂಗಲಂ ಜೀವನಮಿತಿ' ಎಂಬ ತತ್ತ್ವದೀಪನ ಗ್ರಂಥಕಾರರ ವಾಕ್ಯವನ್ನೂ ಸೂಚಿಸುತ್ತಾರೆ. ವಿವರಣಕಾರರು ಈ ಆತ್ಮದರ್ಶನವು ಮೋಕ್ಷ ಸಾಧನವೆಂದು ಸ್ಪಷ್ಟವಾಗಿ ಈ ವಾಕ್ಯದಲ್ಲಿ ಹೇಳಿದ್ದಾರೆ. ಅದರಂತೆ ತತ್ತ್ವಪ್ರದೀಪನಕಾರರು ಜೀವನವೆಂದರೆ ಜೀವನಸಾಧನವೆಂದು ಅರ್ಥವನ್ನು ಹೇಳಿರುವುದರಿಂದ ನಿಮ್ಮ ಸಮ್ಮತದಿಂದಲೇ ಅಮೃತತ್ವವೆಂದರೆ ಮೋಕ್ಷಸಾಧನತ್ವ ಎಂಬ ಅರ್ಥವು ಲಭ್ಯವಾಗುತ್ತದೆ ಎಂದು ಅಭಿಪ್ರಾಯ.

ಅತಃ ಪ್ರಮೈವ ವಾಚ್ಯೇಯಂ ಸಾ ತೇ ಚಿನ್ಮಾತ್ರಗೋಚರಾ ।
ಏಕಜ್ಞಾನೇನ ಸರ್ವಸ್ಯ ಜ್ಞಾನಂ ತಸ್ಮಾತ್ಕಥಂ ವದ ॥ ೯೬೨ ॥

**ಅರ್ಥ–** ಅತಃ= ಆದ್ದರಿಂದ, ಇಯಂ= ಈ ಚರಮಜ್ಞಾನವನ್ನು, ಪ್ರಮೈವ ವಾಚ್ಯಾ= ಪ್ರಮಾ ಎಂದೇ ಹೇಳಬೇಕು, ಸಾ= ಆ ಚರಮಸಾಕ್ಷಾತ್ಕಾರರೂಪವಾದ ಪ್ರಮೆಯಾದರೂ, ತೇ= ನಿನ್ನ ಮತದಲ್ಲಿ, ಚಿನ್ಮಾತ್ರಗೋಚರಾ= ಕೇವಲ ಚೈತನ್ಯವಿಷಯಕವಾದುದು, ತಸ್ಮಾತ್= ಅದರಿಂದ, ಏಕಜ್ಞಾನೇನ ಸರ್ವಸ್ಯ ಜ್ಞಾನಂ= ಏಕವಿಜ್ಞಾನದಿಂದ ಸರ್ವವಿಜ್ಞಾನವು, ಕಥಂ= ಹೇಗೆ ಆಗುತ್ತದೆಂದು, ವದ= ಹೇಳು.

**ಅನುವಾದ–** ಆದ್ದರಿಂದ, ಈ ಚರಮಜ್ಞಾನವನ್ನು ನೀನು ಪ್ರಮಾ ಎಂದೇ ಹೇಳಬೇಕು. ಈ ಚರಮ ಸಾಕ್ಷಾತ್ಕಾರವು ಪ್ರಮೆಯಾದರೂ ನಿನ್ನ ಮತದಲ್ಲಿ ಚೈತನ್ಯಮಾತ್ರ ವಿಷಯಕವಾದುದು. ಅದರಿಂದ ಏಕವಿಜ್ಞಾನದಿಂದ ಸರ್ವ- ವಿಜ್ಞಾನವು ಹೇಗೆ ಸಿದ್ಧವಾಗುವುದೆಂದು ಹೇಳು?

**ಭಾವವಿಲಾಸಿನೀ–** ಅತಃ ಸ್ವಮತ ಏವ ಸಿದ್ಧತ್ವಾತ್ । ಪ್ರಮಾ ಚರಮಾಪರೋಕ್ಷಪ್ರಮಾ । ಇಯಂ ಏಕವಿಜ್ಞಾನರೂಪಾ । ಸಾ ಚರಮಾಪರೋಕ್ಷಪ್ರಮಾ । ತೇ ಮತೇ । ತಸ್ಮಾತ್ ಚಿನ್ಮಾತ್ರ-ಗೋಚರತ್ವಾತ್ ॥ ೯೬೨ ॥

**ವಿವರಣೆ–** ಚರಮಜ್ಞಾನವು ಮೋಕ್ಷಹೇತುಜ್ಞಾನವಾದ್ದರಿಂದ ಅದು ಭ್ರಾಂತಿ-ಜ್ಞಾನವಾಗಲು ಸಾಧ್ಯವಿಲ್ಲ. ಅದನ್ನು ಪ್ರಮಾ ಎಂದೇ ಅಂಗೀಕರಿಸಬೇಕು. ಅದು ಕೇವಲ ಚೈತನ್ಯ ವಿಷಯಕವಾಗುತ್ತದೆ. ಜಗತ್ತು ಅದಕ್ಕೆ ವಿಷಯವಾಗುವುದಿಲ್ಲ. ಆದ್ದರಿಂದ ಏಕವಿಜ್ಞಾನದಿಂದ ಸರ್ವವಿಜ್ಞಾನವು ಉಪಪನ್ನವಾಗುವುದಿಲ್ಲ ಎಂದು ಅಭಿಪ್ರಾಯ.

ತದನಾರೋಪರೂಪೈವ ವಾಚ್ಯಾ ಸಾ ಚರಮಾ ಪ್ರಮಾ ।
ಸರ್ವಸ್ಯ ನಾಸ್ತಿತಾ ಜ್ಞಾನಮಪಿ ತತ್ರ ನ ತೇ ಮತೇ ॥ ೯೬೩ ॥

**ಅರ್ಥ–** ತತ್= ಮೋಕ್ಷಹೇತುವಾದ ಕಾರಣದಿಂದ, ಸಾ ಚರಮಾ ಪ್ರಮಾ= ಆ ಚರಮ ಪ್ರಮೆಯು, ಅನಾರೋಪರೂಪೈವ= ಆರೋಪವಲ್ಲವೆಂದೇ, ವಾಚ್ಯಾ= ಹೇಳಲ್ಪಡಬೇಕು, ತೇ ಮತೇ= ನಿನ್ನ ಮತದಲ್ಲಿ, ತತ್ರ= ಆ ಚರಮಪ್ರಮೆಯಲ್ಲಿ, ಸರ್ವಸ್ಯ ನಾಸ್ತಿತಾ ಜ್ಞಾನಮಪಿ= ಸರ್ವಾಭಾವಜ್ಞಾನವೂ ಸಹ, ನ= ಇಲ್ಲ.

**ಅನುವಾದ–** ಚರಮಜ್ಞಾನವು ಮೋಕ್ಷಹೇತುವಾದುದರಿಂದ ಅದು ಭ್ರಾಂತಿರೂಪವಲ್ಲ ಎಂದೇ ಅಂಗೀಕರಿಸಬೇಕು. ನಿನ್ನ ಮತದಲ್ಲಿ ಆ ಜ್ಞಾನದಲ್ಲಿ ಸರ್ವಜಗದಭಾವವೂ ತೋರುವುದಿಲ್ಲ.

**ಭಾವವಿಲಾಸಿನೀ–** ತನ್ಮೋಕ್ಷಹೇತುತ್ವಾತ್ । ಸಾ ಏಕಪ್ರತೀತಿಃ ಅನಾರೋಪರೂಪಾ ಚರಮಪ್ರಮೈವ ವಾಚ್ಯೇತಿ ಸಂಬಂಧಃ । ನನು ಸರ್ವಸ್ಯ ನಾಸ್ತಿತಾಜ್ಞಾನಂ ಹಿ ಬಾಧಃ । ಅತೋ ಬಾಧರೂಪೇ ಚರಮಜ್ಞಾನೇ ನಿಷೇಧ್ಯತಯಾ ಸರ್ವಜ್ಞಾನಮಪ್ಯಸ್ತೀತಿ ಶಂಕಾಂ ನಿರಾಕರೋತಿ – **ಸರ್ವಸ್ಯೇತಿ** ॥ ತೇ ನಿಷ್ಪ್ರಕಾರಕಚರಮಜ್ಞಾನವಾದಿನಃ । ಬ್ರಹ್ಮಚಿನ್ಮಾತ್ರನಿರ್ವಿಕಲ್ಪಕರೂಪೇ ಚರಮಜ್ಞಾನೇ ಸರ್ವಜ್ಞಾನಮಪಿ ನ ಶೋಭತೇ ॥ ೯೬೩ ॥

**ವಿವರಣೆ–** ಚರಮ ಜ್ಞಾನವು ಬಾಧರೂಪವಾದುದು. ಬಾಧವೆಂದರೆ ನಾಸ್ತಿತ್ವಜ್ಞಾನ. ಚರಮ ಪ್ರಮೆಯಲ್ಲಿ ಸರ್ವನಾಸ್ತಿತ್ವವು ತೋರುವುದರಿಂದ ನಿಷೇಧ ವಿಷಯವಾಗಿ ಸರ್ವಜ್ಞಾನವು ಇದ್ದೇ ಇದೆ ಎಂಬ ಶಂಕೆಗೆ ಇಲ್ಲಿ ಉತ್ತರವನ್ನು ಕೊಡುತ್ತಾರೆ. ಬ್ರಹ್ಮಜ್ಞಾನವು ನಿರ್ವಿಕಲ್ಪಕ ಎಂದು ನೀನು ಅಂಗೀಕರಿಸುವುದರಿಂದ ನಿಷೇಧ ಪ್ರತಿಯೋಗಿ ರೂಪದಿಂದಲೂ ಅದರಲ್ಲಿ ಸರ್ವಜ್ಞಾನವಿಲ್ಲ ಎಂದು ಅಭಿಪ್ರಾಯ.

ಯತೋ ಹ್ಯಭಾವವಿಷಯಂ ನ ಪ್ರಾಹುರ್ನಿರ್ವಿಕಲ್ಪಕಮ್ ।
ಸರ್ವಸ್ಯಾಭಾವಧೀಃ ಸಾ ಸ್ಯಾತ್ಸರ್ವಜ್ಞಾನಂ ತು ತತ್ಕಥಮ್ ॥ ೯೬೪ ॥

**ಅರ್ಥ–** ಯತಃ= ಯಾವ ಕಾರಣದಿಂದ, ಅಭಾವ ವಿಷಯಂ= ಅಭಾವ ವಿಷಯಕ ಜ್ಞಾನವನ್ನು, ನಿರ್ವಿಕಲ್ಪಕಂ= ನಿರ್ವಿಕಲ್ಪಕವೆಂದು, ನ ಪ್ರಾಹುಃ= ಹೇಳುವುದಿಲ್ಲವೋ, ತತ್= ಆ ಕಾರಣದಿಂದ, ಸಾ ಸರ್ವಸ್ಯಾಭಾವಧೀಃ= ಸರ್ವಾಭಾವವಿಷಯಕವಾದ ಆ ಚರಮಜ್ಞಾನವು, ಸರ್ವಜ್ಞಾನಂ= ಸರ್ವಜ್ಞಾನವಾಗಿ, ಕಥಂ ಸ್ಯಾತ್= ಹೇಗೆ ಆಗುತ್ತದೆ?

**ಅನುವಾದ–** ಯಾವ ವಾದಿಗಳೂ ಅಭಾವ ವಿಷಯದ ನಿರ್ವಿಕಲ್ಪಕ ಜ್ಞಾನವನ್ನು ಅಂಗೀಕರಿಸುವುದಿಲ್ಲ. ಆದ್ದರಿಂದ ನಿರ್ವಿಕಲ್ಪಕವಾದ ಚರಮಜ್ಞಾನದಲ್ಲಿ ಅಭಾವವು ವಿಷಯವಾಗುವುದಿಲ್ಲ. ಇನ್ನು ಸರ್ವಾಭಾವಜ್ಞಾನವು ಸರ್ವಜ್ಞಾನವಾಗುವುದು ಹೇಗೆ?

**ಭಾವವಿಲಾಸಿನೀ–** ಸರ್ವಾಭಾವಜ್ಞಾನಂ ತು ಸುತರಾಂ ನ ಘಟತ ಇತ್ಯಾಹ – **ಯತ ಇತಿ ॥** ಅಸ್ಮಿನ್‌ಪಕ್ಷೇ ದೋಷಾಂತರಂ ಚಾಹ – **ಸರ್ವಸ್ಯಾಭಾವಧೀರಿತಿ** ॥ ೯೬೪ ॥

**ಘಟಸ್ಯ ನಾಸ್ತಿತಾಜ್ಞಾನಂ ಘಟಜ್ಞಾನಂ ಹಿ ಕೋ ವದೇತ್ ।**
**ನ ಚೇದದ್ವೈತವಿಜ್ಞಾನೀ ಪರಃ ಸ್ಯಾತ್ ತ್ವಂ ತು ಭೇದದೃಕ್ ॥ ೯೬೫ ॥**

**ಅರ್ಥ–** ಘಟಸ್ಯ ನಾಸ್ತಿತಾಜ್ಞಾನಂ= ಘಟಾಭಾವದ ಜ್ಞಾನವನ್ನು, ಘಟಜ್ಞಾನಂ= ಘಟಜ್ಞಾನವೆಂದು, ಕೋ ಹಿ ವದೇತ್= ಯಾವನು ತಾನೇ ಹೇಳುತ್ತಾನೆ? ನ ಚೇತ್= ಇಲ್ಲದಿದ್ದರೆ, ಪರಃ= ನಿನ್ನ ಪ್ರತಿವಾದಿಯಾದ ದ್ವೈತವಾದಿಯು, ಅದ್ವೈತವಿಜ್ಞಾನೀ= ಅದ್ವೈತವಿಜ್ಞಾನಿಯೆಂದೂ, ತ್ವಂ ತು= ನೀನು ಮಾತ್ರ ಭೇದಜ್ಞಾನಿಯೆಂದೂ (ಅಂಗೀಕರಿಸು).

**ಅನುವಾದ–** ಘಟಾಭಾವಜ್ಞಾನವನ್ನು ಘಟಜ್ಞಾನವೆಂದು ಯಾರು ಹೇಳುತ್ತಾರೆ? ಯಾರೂ ಹೇಳುವುದಿಲ್ಲ. ಇಲ್ಲದಿದ್ದರೆ ಅದ್ವೈತಾಭಾವರೂಪವಾದ ದ್ವೈತವನ್ನು ತಿಳಿದ ನಿನ್ನ ಪ್ರತಿವಾದಿಯು ಅದ್ವೈತಜ್ಞಾನಿಯೆಂದು ಭೇದಾಭಾವರೂಪವಾದ ಅದ್ವೈತವನ್ನು ತಿಳಿದ ನೀನು ಭೇದಜ್ಞಾನಿ ಎಂದೂ ಅಂಗೀಕರಿಸಬೇಕಾದ ಪ್ರಸಂಗವು ಬರುತ್ತದೆ.

**ಭಾವವಿಲಾಸಿನೀ–** ನಚೇತ್ ಅಭಾವಜ್ಞಾನಮಭಾವಜ್ಞಾನಮೇವ ನಚೇತ್ । ಭಾವಜ್ಞಾನಂ ಚ ಭವೇಚ್ಚೇದಿತ್ಯರ್ಥಃ । ಪರಃ ಪ್ರತಿವಾದೀ ॥ ೯೬೫ ॥

**ತದಭಾವಕಥಾಂ ವಕ್ತುಂ ತದ್ಭಾವಂ ಕಥಯೇದ್ಧಿ ಕಃ ।**
**ಅರ್ಥಾಭಾವಜ್ಞಮರ್ಥಜ್ಞಂ ವಕ್ತಿ ಕೋ ವಾ ಪುಮಾನ್ ಭುವಿ ॥ ೯೬೬ ॥**

**ಅರ್ಥ–** ತದಭಾವಕಥಾಂ ವಕ್ತುಂ= ಆ ವಸ್ತುವು ಇಲ್ಲ ಎಂದು ಹೇಳುವುದಕ್ಕೋಸ್ಕರ, ಕಃ= ಯಾವನು, ತದ್ಭಾವಂ= ಆ ವಸ್ತುವಿನ ಸತ್ತ್ವವನ್ನು, ಕಥಯೇತ್= ಹೇಳುತ್ತಾನೆ,

ಅರ್ಥಾಭಾವಜ್ಞಂ= ಅರ್ಥಾಭಾವವನ್ನು ತಿಳಿದವನನ್ನು, ಅರ್ಥಜ್ಞಂ= ಅರ್ಥವನ್ನು ತಿಳಿದವನೆಂದು, ಭುವಿ= ಭೂಮಿಯಲ್ಲಿ, ಕೋ ವಾ ಪುಮಾನ್= ಯಾವ ಮನುಷ್ಯನು ತಾನೇ, ವಕ್ತಿ= ಹೇಳುತ್ತಾನೆ.

**ಅನುವಾದ–** ಆ ವಸ್ತುವು ಇಲ್ಲ ಎಂದು ಹೇಳುವುದಕ್ಕೋಸ್ಕರವಾಗಿ ಯಾರು ಆ ವಸ್ತುವು ಇದೆ ಎಂದು ಹೇಳುತ್ತಾನೆ? ಭೂಮಿಯಲ್ಲಿ ಯಾವ ಮನುಷ್ಯನು ತಾನೇ ಅರ್ಥಾಭಾವಜ್ಞಾನಿಯನ್ನು ಅರ್ಥಜ್ಞಾನಿ ಎಂದು ಹೇಳುತ್ತಾನೆ?

**ಭಾವವಿಲಾಸಿನೀ–** ಬಾಧಕಾಂತರಮಪ್ಯಾಹ–**ತದಭಾವೇತಿ ||** ಅಭಾವಾಭಾವಸ್ಯ ಭಾವರೂಪತ್ವೇನ ಭಾವಕಥಾಯಾಮಭಾವಸ್ಯಾಪಿ ನಿಷೇಧ್ಯತಯಾ ಕಥ್ಯಮಾನತ್ವಾತ್ ರಾವಣಾಭಾವಂ ವಕ್ತುಂ ರಾವಣಸದ್ಭಾವಮೇವ ಕಥಯೇದಿತಿ ಭಾವಃ । ತಥಾ ಅಂಜನಭೂಖನನಾದಿಪ್ರಯತ್ನೇऽಪ್ಯರ್ಥಾಭಾವದರ್ಶೀ ಅರ್ಥದರ್ಶೀ ಸ್ಯಾತ್ । ಏವಂಚ ಸರ್ವವ್ಯವಹಾರ- ಸಾಂಕರ್ಯಂ ಸ್ಯಾದಿತಿ ಭಾವಃ || ೯೬೬ ||

**ವಿವರಣೆ–** ಛಾಂದೋಗ್ಯೋಪನಿಷತ್ತಿನಲ್ಲಿ ಏಕವಿಜ್ಞಾನದಿಂದ ಸರ್ವವಿಜ್ಞಾನವನ್ನು ಪ್ರತಿಪಾದನೆ ಮಾಡಿ, ಅನಂತರ ಜಗತ್ಸೃಷ್ಟಿಯನ್ನು ನಿರೂಪಣೆ ಮಾಡಲಾಗಿದೆ. ಜಗತ್ತು ಇಲ್ಲ ಎಂದು ಹೇಳುವುದಕ್ಕೋಸ್ಕರ ಜಗತ್ತಿನ ಸೃಷ್ಟಿಯನ್ನು ನಿರೂಪಣೆ ಮಾಡುವುದು ಅಸಂಗತವಾಗುತ್ತದೆ. ನಿಧಿಯ ಪ್ರಾಪ್ತಿಗೋಸ್ಕರವಾಗಿ ಅಂಜನವನ್ನು ಹಾಕಿಕೊಂಡು ಭೂಮಿಯನ್ನು ಖನನ ಮಾಡಿ ನಿಧಿರೂಪವಾದ ಅರ್ಥವನ್ನು ಕಾಣದಿದ್ದ ಮನುಷ್ಯನನ್ನು ನಿಧಿಯನ್ನು ನೋಡಿದವನೇ ಎಂದು ಹೇಳಬೇಕಾಗುತ್ತದೆ. ಮತ್ತು ಅಭಾವಾಭಾವವು ಭಾವರೂಪವಾಗಿರುವುದರಿಂದ ಭಾವಕಥೆಯಲ್ಲಿ ನಿಷೇಧ ಪ್ರತಿಯೋಗಿತ್ವೇನ ಅಭಾವವು ಹೇಳಲ್ಪಡುವುದರಿಂದ ರಾವಣಾಭಾವವನ್ನು ಹೇಳಲು ರಾವಣಸದ್ಭಾವವನ್ನೇ ಹೇಳುವ ಪ್ರಸಂಗ ಉಂಟಾಗಲಿ ಎಂದು ಅಭಿಪ್ರಾಯ.

ಕಿಂ ಚೈವಂ ಸರ್ವವಿಜ್ಞಾನಮೇಕಜ್ಞಾನಾದ್ಯದೀಷ್ಯತೇ ।
ತದಾ ಮಿಥ್ಯಾಭೂತಸರ್ವಜಗದೈಕ್ಯಂ ಭವೇತ್ ತತಃ || ೯೬೭ ||

**ಅರ್ಥ–** ಕಿಂಚ= ಮತ್ತು, ಏವಂ= ಈ ರೀತಿಯಲ್ಲಿ, ಏಕಜ್ಞಾನಾತ್ ಸರ್ವವಿಜ್ಞಾನಂ= ಏಕಜ್ಞಾನದಿಂದ ಸರ್ವವಿಜ್ಞಾನವು, ಯದಿ= ಒಂದು ಪಕ್ಷ ಇಷ್ಯತೇ= ಅಂಗೀಕರಿಸಲ್ಪಡುವುದಾದರೆ, ತದಾ= ಆಗ, ತತಃ= ಸತ್ಯವಾದ ಬ್ರಹ್ಮನಿಗೆ, ಮಿಥ್ಯಾಭೂತ-ಸರ್ವಜಗದೈಕ್ಯಂ= ಮಿಥ್ಯಾಭೂತ ಸರ್ವಜಗತ್ತಿನ ಐಕ್ಯವು, ಭವೇತ್= ಸಿದ್ಧವಾದೀತು.

**ಅನುವಾದ–** ಮತ್ತು ಈ ರೀತಿಯಲ್ಲಿ ಆರೋಪದೇಶೆಯಲ್ಲಿಯೇ ಬ್ರಹ್ಮಜ್ಞಾನದಲ್ಲಿ ಜಗತ್ತು ತೋರುವ ಕಾರಣದಿಂದ ಏಕಜ್ಞಾನದಿಂದ ಸರ್ವವಿಜ್ಞಾನವನ್ನು ಅಂಗೀಕರಿಸಿದರೆ

ಭ್ರಾಂತಿಯಲ್ಲಿ ತೋರುವ ಜಗತ್ತು ಮಿಥ್ಯೆಯಾದುದರಿಂದ ಸದ್ರೂಪನಾದ ಬ್ರಹ್ಮನಿಗೆ ಮಿಥ್ಯಾಭೂತವಾದ ಜಗದೈಕ್ಯವೇ ಸಿದ್ಧವಾದೀತು.

**ಭಾವವಿಲಾಸಿನೀ–** ಅಸ್ಮಿನ್ನಪಿ ಪಕ್ಷೇ ಮಿಥ್ಯಾಭೂತಜಗದೈಕ್ಯಮೇವ ಬ್ರಹ್ಮಣಃ ಸ್ಯಾದಿತ್ಯಾಹ – **ಕಿಂಚೇತಿ** ॥ ಏವಂ ನಿಷೇಧ್ಯತಯಾ । ಸತಃ ಬ್ರಹ್ಮಣಃ ॥ ೯೬೭ ॥

**ವಿವರಣೆ–** ಭ್ರಾಂತಿಯಲ್ಲಿ ತೋರುವ ಜಗತ್ತಿನ ಐಕ್ಯವನ್ನು ಹೇಳಿದರೆ ಮಿಥ್ಯಾಭೂತವಾದ ಐಕ್ಯವು ಸಿದ್ಧವಾಗುತ್ತದೆ. ಬಾಧದಲ್ಲಿ ಅಭಾವಪ್ರತಿಯೋಗಿತ್ವೇನ ತೋರುವ ಜಗದೈಕ್ಯವನ್ನು ಹೇಳಿದರೂ ಮಿಥ್ಯಾಭೂತವಾದ ಜಗತ್ತಿನ ಐಕ್ಯವೇ ಸಿದ್ಧವಾಗುತ್ತದೆ.

ತಸ್ಮಾತ್ ತದೇಕಜ್ಞಾನೇನ ಸರ್ವಜ್ಞಾನಂ ಶ್ರುತೀರಿತಂ ।
ತವ ವಾರ್ಥಾಯ ಕಸ್ಮೈಚಿದನರ್ಥಾಯಾಭವತ್ಪರಂ ।
ಜೀವೈಕ್ಯಸ್ಯಾನುಪಾಯತ್ವಾಜ್ಜಡೈಕ್ಯಸ್ಯೈವ ಜಾಗತೇಃ ॥ ೯೬೮ ॥

**ಅರ್ಥ–** ತಸ್ಮಾತ್= ಆದ್ದರಿಂದ, ಶ್ರುತೀರಿತಂ= ಶ್ರುತಿಯಲ್ಲಿ ಹೇಳಲ್ಪಟ್ಟ, ಏಕಜ್ಞಾನೇನ ಸರ್ವಜ್ಞಾನಂ= ಏಕವಿಜ್ಞಾನದಿಂದ 'ಸರ್ವವಿಜ್ಞಾನವು, ಜೀವೈಕ್ಯಸ್ಯ ಅನುಪಾಯತ್ವಾತ್= ಜೀವೈಕ್ಯಕ್ಕೆ ಸಾಧಕವಾಗದಿರುವುದರಿಂದ, ಜಡೈಕ್ಯಸ್ಯೈವ ಜಾಗತೇಃ= ಜಡದ ಐಕ್ಯವೇ ಪ್ರಾಪ್ತವಾಗುವುದರಿಂದ, ತವ= ನಿನ್ನ, ಕಸ್ಮೈಚಿದರ್ಥಾಯ= ಯಾವ ಪ್ರಯೋಜನವನ್ನು ಸಂಪಾದಿಸುವುದಕ್ಕೂ, ನ= ಸಮರ್ಥವಾಗಲಿಲ್ಲ, ಪರಂ= ಆದರೆ, ಅನರ್ಥಾಯ= ಅನರ್ಥಸಂಪಾದಕವಾಗಿ, ಅಭವತ್= ಆಯಿತು.

**ಅನುವಾದ–** ಆದ್ದರಿಂದ ಶ್ರುತಿಯಲ್ಲಿ ಹೇಳಲ್ಪಟ್ಟ ಏಕವಿಜ್ಞಾನದಿಂದ ಸರ್ವವಿಜ್ಞಾನವು ಜೀವೈಕ್ಯಕ್ಕೆ ಸಾಧಕವಾಗದಿರುವುದರಿಂದ ಜಡದ ಐಕ್ಯವೇ ಪ್ರಾಪ್ತವಾಗುವುದರಿಂದ ನಿನ್ನ ಮತವು ಯಾವ ಪ್ರಯೋಜನವನ್ನು ಸಂಪಾದಿಸುವುದಕ್ಕೂ ಸಮರ್ಥವಾಗಲಿಲ್ಲ, ಆದರೆ ಅನರ್ಥಸಂಪಾದಕವಾಗಿ ಆಯಿತು.

**ಭಾವವಿಲಾಸಿನೀ–** ಮಂದಾಶಂಕಾಪರಿಹಾರಮುಪಸಂಹರತಿ – **ತಸ್ಮಾದಿತಿ** ॥ ತತ್ ಅಧಿಷ್ಠಾನಸಾಮಾನ್ಯಜ್ಞಾನೇನಾರೋಪಿತಜ್ಞಾನರೂಪಂ ಜಗನ್ನಾಸ್ತಿತಾರೂಪಬಾಧಜ್ಞಾನೇ ನಿಷೇಧ್ಯತಯಾ ಜಗತ್‌ಜ್ಞಾನರೂಪಂ ಚ । ಅರ್ಥಾಯ ಜೀವೈಕ್ಯರೂಪಾರ್ಥಾಯ । ಅನರ್ಥಾಯ ಮಿಥ್ಯಾಭೂತಜಗದೈಕ್ಯಾಯ । ತದೇವ ವಿಶದಯತಿ – **ಜೀವೈಕ್ಯಸ್ಯೇತಿ** ॥ ೯೬೬ ॥

ಅತೋ ಜೀವೈಕ್ಯಮಾಶಾಸ್ಯಂ ಜ್ಞಾನೇ ಜ್ಞಾತಮಿದಂ ಜಗತ್ ।
ಪ್ರದೃಶ್ಯಮಾನಮಖಿಲಂ ಕಿಲ ಕಿಂ ಕೇನ ಸಂಗತಮ್ ॥ ೯೬೯ ॥

**ಅರ್ಥ–** ಅತಃ= ಆದ್ದರಿಂದ, ಜೀವೈಕ್ಯಂ= ಜೀವನಿಂಗ ಐಕ್ಯವು, ಆಶಾಸ್ಯಂ= ನಿನ್ನಿಂದ ಅಪೇಕ್ಷಿಸಲ್ಪಡುತ್ತದೆ, ಜ್ಞಾನೇ= ಬ್ರಹ್ಮಜ್ಞಾನದಲ್ಲಿ, ಪ್ರದೃಶ್ಯಮಾನಮಖಿಲಂ ಇದಂ ಜಗತ್= ದೃಶ್ಯಮಾನವಾದ ಈ ಸರ್ವಜಗತ್ತೂ, ಜ್ಞಾತಂ ಕಿಲ= ಜ್ಞಾತವಾಗುವುದಷ್ಟೇ, ಕಿಂ ಕೇನ ಸಂಗತಂ= ಯಾವುದಕ್ಕೆ ಯಾವುದರಿಂದ ಸಂಬಂಧವಿದೆ?

**ಅನುವಾದ–** ನೀನು ಜೀವೈಕ್ಯವನ್ನು ಬಯಸುತ್ತೀಯೆ. ದೃಶ್ಯಮಾನವಾದ ಈ ಸರ್ವಜಗತ್ತಿಗೆ ಬ್ರಹ್ಮಜ್ಞಾನದಿಂದ ಜ್ಞಾತತ್ವವನ್ನು ಹೇಳುತ್ತಿದ್ದೀಯೆ. ಯಾವುದು ಯಾವುದರಿಂದ ಸಂಗತವಾಗುತ್ತದೆ?

**ಭಾವವಿಲಾಸಿನೀ–** ಅತಃ ಅಪೇಕ್ಷಿತಾಪ್ರಾಪ್ತೇರನಪೇಕ್ಷಿತಪ್ರಾಪ್ತೇಶ್ಚ ಕಿಂ ಕೇನ ಸಂಗತಮಿತಿ ಸಂಬಂಧಃ ॥ ೯೬೯ ॥

**ವಿವರಣೆ–** ಜೀವನ ಐಕ್ಯವನ್ನು ಬಯಸುವುದು ಇದಂ ಪದಾರ್ಥವಾದ ಜಡಕ್ಕೆ ಬ್ರಹ್ಮಜ್ಞಾನದಿಂದ ಜ್ಞಾತತ್ವವನ್ನು ಹೇಳಿ ಅಭೇದವನ್ನು ಹೇಳುವುದು ಪರಸ್ಪರ ಅಸಂಗತ ಎಂದು ಅಭಿಪ್ರಾಯ.

**ವಿರುದ್ಧೋ ಹೇತುರುಕ್ತಃ ಸ್ಯಾನ್ಮಿಥ್ಯಾತ್ವಸ್ಯ ತು ಸಾಧನೇ ।**
**ಚರಮಬ್ರಹ್ಮವಿಜ್ಞಾನೇ ಸರ್ವಸ್ಯ ಜ್ಞಾತತಾ ಯತಃ ॥ ೯೭೦ ॥**

**ಬ್ರಹ್ಮವಜ್ಜಗದೇತಚ್ಚ ಕರೋತಿ ಪರಮಾರ್ಥಸತ್ ।**
**ಅತಃ ಶ್ರುತ್ಯರ್ಥಕಥನೇ ತವೇಷ್ಟಂ ನೈವ ಸಿದ್ಧ್ಯತಿ ॥ ೯೭೧ ॥**

**ಅರ್ಥ–** ಮಿಥ್ಯಾತ್ವಸ್ಯ ಸಾಧನೇ= ಮಿಥ್ಯಾತ್ವವನ್ನು ಸಾಧಿಸುವುದಕ್ಕೆ, ವಿರುದ್ಧೋ ಹೇತುಃ= ವಿರುದ್ಧವಾದ ಹೇತುವು, ಉಕ್ತಃ ಸ್ಯಾತ್= ಹೇಳಲ್ಪಟ್ಟಂತೆ ಆಗುತ್ತದೆ, ಚರಮ ಬ್ರಹ್ಮವಿಜ್ಞಾನೇ= ಚರಮ ಬ್ರಹ್ಮಜ್ಞಾನದಲ್ಲಿ, ಯತಃ= ಯಾವ ಕಾರಣದಿಂದ, ಸರ್ವಸ್ಯ ಜ್ಞಾತತಾ= ಎಲ್ಲದಕ್ಕೂ ಜ್ಞಾನವಿಷಯತ್ವವು ಉಂಟಾಗುತ್ತದೆಯೋ ಆದ್ದರಿಂದ, ಏತಚ್ಚ= ಈ ಬ್ರಹ್ಮಪ್ರಮಾವಿಷಯತ್ವ ರೂಪ ಹೇತುವು, ಜಗತ್= ಜಗತ್ತನ್ನು, ಬ್ರಹ್ಮವತ್= ಬ್ರಹ್ಮನಂತೆ, ಪರಮಾರ್ಥಸತ್= ಪರಮಾರ್ಥ ಸತ್ಯವನ್ನಾಗಿಯೇ, ಕರೋತಿ= ಮಾಡುತ್ತದೆ, ಅತಃ= ಆದ್ದರಿಂದ, ಶ್ರುತ್ಯರ್ಥ ಕಥನೇ= ಈ ಶ್ರುತಿಗೆ ಅರ್ಥವನ್ನು ಹೇಳಿದರೆ, ತವೇಷ್ಟಂ= ನಿನ್ನ ಇಷ್ಟವು, ನೈವ ಸಿದ್ಧ್ಯತಿ= ಸಿದ್ಧವಾಗುವುದಿಲ್ಲ.

**ಅನುವಾದ–** ಮಿಥ್ಯಾತ್ವವನ್ನು ಸಾಧನೆ ಮಾಡಲು ವಿರುದ್ಧವಾದ ಹೇತುವನ್ನೇ ಹೇಳಿದಂತಾಯಿತು. ಚರಮ ಬ್ರಹ್ಮಜ್ಞಾನದಲ್ಲಿ ಸರ್ವವೂ ಜ್ಞಾತವಾದರೆ ಚರಮಪ್ರಮಾವಿಷಯತ್ವ ರೂಪವಾದ ಈ ಹೇತುವು ಜಗತ್ತನ್ನೂ ಬ್ರಹ್ಮನಂತೆ

ಪಾರಮಾರ್ಥಿಕ ಸತ್ಯವನ್ನಾಗಿಯೇ ಮಾಡುತ್ತದೆ. ಆದ್ದರಿಂದ ಈ ಶ್ರುತ್ಯರ್ಥವನ್ನು ಹೇಳುವುದರಿಂದ ನಿನಗೆ ಯಾವ ಇಷ್ಟವೂ ಸಿದ್ಧಿಸುವುದಿಲ್ಲ.

**ಭಾವವಿಲಾಸಿನೀ–** ದೋಷಾಂತರಂ ಚಾಹ – ವಿರುದ್ಧ ಇತಿ ॥ ವಿರುದ್ಧೋ ಹೇತುಃ ಬ್ರಹ್ಮಪ್ರಮಾವಿಷಯತ್ವರೂಪಹೇತುಃ । ದೃಶ್ಯತ್ವಂ ಹಿ ಮಿಥ್ಯಾತ್ವೇ ಹೇತುರುಕ್ತಃ । ತಚ್ಚ ಜಗತಃ ಉಕ್ತರೀತ್ಯಾ ಚರಮವೃತ್ತಿವಿಷಯತ್ವೇ ಪ್ರಮಾವಿಷಯತ್ವ ರೂಪಮೇವಾಭೂತ್ । ಏವಂಚ ಬ್ರಹ್ಮವಜ್ಜಗತಃ ಸತ್ಯತ್ವಸಾಧಕತ್ವೇನ ವಿರುದ್ಧ ಇತ್ಯರ್ಥಃ । ಏತತ್ ಜಗತ್ । ಇಷ್ಟಂ ಮಿಥ್ಯಾತ್ವಜೀವೈಕ್ಯಾದಿ।

**ವಿವರಣೆ–** 'ವಿಮತಂ ಮಿಥ್ಯಾದೃಶ್ಯತ್ವಾತ್' ಎಂಬ ಅನುಮಾನದಲ್ಲಿ ಮಿಥ್ಯಾತ್ವ ಸಾಧಕವಾಗಿ ದೃಶ್ಯತ್ವವನ್ನು ಹೇತುವಾಗಿ ಹೇಳಿದ್ದಾರೆ. ಆ ದೃಶ್ಯತ್ವವು ಜಗತ್ತು ಚರಮಜ್ಞಾನಕ್ಕೆ ವಿಷಯವಾದರೆ ಬ್ರಹ್ಮಪ್ರಮಾವಿಷಯತ್ವವೇ ಆಯಿತು. ಪ್ರಮಾವಿಷಯತ್ವವು ಸತ್ಯತ್ವವನ್ನು ಸಾಧಿಸುತ್ತದೆಯೇ ಹೊರತು ಮಿಥ್ಯಾತ್ವವನ್ನು ಸಾಧಿಸುವುದಿಲ್ಲ. ಆದ್ದರಿಂದ ದೃಶ್ಯತ್ವ ಹೇತುವು ನಿನ್ನ ಸಾಧ್ಯವನ್ನು ಕುರಿತು ವಿರುದ್ಧವೇ ಆಯಿತು ಎಂದು ಒಂದು ದೋಷ ಮತ್ತು ಜಗತ್ ಪರಮಾರ್ಥಸತ್ ಚರಮಪ್ರಮಾವಿಷಯತ್ವಾತ್ ಬ್ರಹ್ಮವತ್ ಎಂಬ ಅನುಮಾನದಿಂದ ಜಗತ್ತಿಗೂ ಪಾರಮಾರ್ಥಿಕ ಸತ್ಯತ್ವವನ್ನು ಸಾಧನೆ ಮಾಡಲು ಬರುತ್ತದಾದ್ದರಿಂದ ಇದು ನಿನಗೆ ಅನಿಷ್ಟವೂ ಆಗುತ್ತದೆ. ಚರಮಪ್ರಮೆಯು ಬಂದ ಮೇಲೆ ಬ್ರಹ್ಮನಿಗೆ ಹೇಗೆ ಬಾಧವು ಬರುವುದಿಲ್ಲವೋ ಹಾಗೆಯೇ ಜಗತ್ತಿಗೂ ಬಾಧವು ಬರುವುದಿಲ್ಲ. ಆದ್ದರಿಂದ ಬ್ರಹ್ಮನಂತೆ ಅದೂ ಸತ್ಯವಾಗಬೇಕಾಗುತ್ತದೆ ಎಂದು ಅಭಿಪ್ರಾಯ.

**ಅಶ್ರುತಾರ್ಥಪರಂ ತ್ವಾಂ ತು ಶ್ರೌತಾರ್ಥೋ ಹಂತಿ ಧೀಮತಾಂ ॥ ೯೭೨ ॥**

**ಅರ್ಥ–** ಅಶ್ರುತಾರ್ಥಪರಂ= ಶ್ರುತಿಗೆ ಅನಭಿಪ್ರೇತವಾದ ಅರ್ಥವನ್ನು ಹೇಳುವ, ತ್ವಾಂ= ನಿನ್ನನ್ನು, ಧೀಮತಾಂ= ವಿವೇಕಿಗಳು ಹೇಳುವ, ಶ್ರೌತಾರ್ಥಃ= ಶ್ರುತಿ ಸಮ್ಮತವಾದ ಅರ್ಥವು, ಹಂತಿ= ಕೊಲ್ಲುತ್ತದೆ.

**ಅನುವಾದ–** ಶ್ರುತಿಗೆ ಅನಭಿಪ್ರೇತವಾದ ಅರ್ಥವನ್ನು ಹೇಳುವ ನಿನ್ನನ್ನು ವಿವೇಕಿಗಳು ಹೇಳುವ ಶ್ರೌತಾರ್ಥವು ಬಾಧಿಸುತ್ತದೆ.

**ಭಾವವಿಲಾಸಿನೀ–** ಭಾವಜ್ಞಾನಸ್ಯ ಅಭಾವಜ್ಞಾನತಾಯಾ ಅಶ್ರುತತ್ವಾತ್ ಅಶ್ರುತಾರ್ಥಪರಮ್ ॥ ೯೭೨ ॥

**ವಿವರಣೆ–** ಅದ್ವೈತಿಗಳು ಹೇಳುವ ಅರ್ಥವು ಶ್ರುತಿಗೆ ಅನಭಿಪ್ರೇತವಾದುದು. ಆದ್ದರಿಂದ ಆ ಅರ್ಥವನ್ನು ಬಿಟ್ಟು ಪ್ರಾಧಾನ್ಯಸಾದೃಶ್ಯಾದಿನಿಮಿತ್ತದಿಂದ ಏಕವಿಜ್ಞಾನದಿಂದ ಸರ್ವವಿಜ್ಞಾನವನ್ನು ಅಂಗೀಕರಿಸಬೇಕು ಎಂದು ಅಭಿಪ್ರಾಯ.

**ಅತಃ ಸತ್ಯತ್ವಚಿತ್ತ್ವಾದ್ಯೈಃ ಸದೃಶತ್ವಾಚ್ಚರಾಚರಮ್ ।**
**ತದಂಗೇಷ್ವಾಶ್ರಿತತ್ವಾದ್ವಾ ತಜ್ಜ್ಞಾನೇ ಜಾಯತೇ ಜಗತ್ ॥ ೯೭೩ ॥**

**ಅರ್ಥ–** ಅತಃ= ಆದ್ದರಿಂದ, ಚರಾಚರಂ ಜಗತ್= ಚರಾಚರವಾದ ಪ್ರಪಂಚವು, ಸತ್ಯತ್ವಚಿತ್ತ್ವಾದ್ಯೈಃ= ಸತ್ಯತ್ವಚಿತ್ತ್ವ ಮೊದಲಾದ ಗುಣಗಳಿಂದ, ಸದೃಶತ್ವಾತ್= ಸದೃಶವಾಗಿರುವುದರಿಂದ, ವಾ= ಅಥವಾ, ತದಂಗೇಷು= ಪರಮಾತ್ಮನ ಅಂಗಗಳಲ್ಲಿ, ಆಶ್ರಿತತ್ವಾತ್= ಆಶ್ರಿತವಾಗಿರುವ ಕಾರಣದಿಂದಲೂ, ತಜ್ಜ್ಞಾನೇ= ಪರಮಾತ್ಮನ ಜ್ಞಾನ ಉಂಟಾದಾಗ, ಜಾಯತೇ= ತಿಳಿಯಲ್ಪಡುತ್ತದೆ.

**ಅನುವಾದ– ಆದ್ದರಿಂದ ಚರಾಚರವಾದುದೆಲ್ಲವೂ ಸತ್ಯತ್ವ ಚೇತನತ್ವ ಮೊದಲಾದ ಧರ್ಮಗಳಿಂದ ಪರಮಾತ್ಮನಿಗೆ ಸದೃಶವಾಗಿರುವುದರಿಂದ ಅಥವಾ ಪರಮಾತ್ಮನ ಅವಯವಗಳಲ್ಲಿ ಆಶ್ರಿತವಾಗಿರುವುದರಿಂದ ಬ್ರಹ್ಮಜ್ಞಾನವು ಉಂಟಾದರೆ ಜಗಜ್ಜ್ಞಾನವು ಉಂಟಾಗುತ್ತದೆ.**

**ಭಾವವಿಲಾಸಿನೀ– ಅತಃ ಅನ್ಯಾರ್ಥಸ್ಯಾಯೋಗಾತ್ । ಆದ್ಯಪದೇನಾರ್ಥಕ್ರಿಯಾಕಾರಿತ್ವಂ ನಿತ್ಯತ್ವಮಾನಂದಾದಿಕಂ ಚ ಗೃಹ್ಯತೇ । ಸದೃಶತ್ವಾತ್ ಹರೇಃ ಸದೃಶತ್ವಾತ್ । ಚರಾಚರಪದೇನ ಚೇತನಾಚೇತನಜಗದುಚ್ಯತೇ । ತದಂಗೇಷು ತಸ್ಯ ಹರೇರವಯವೇಷು । ತತ್ಜ್ಞಾನೇ ಬ್ರಹ್ಮಜ್ಞಾನೇ ಇತ್ಯೇವಾರ್ಥ ಇತಿ ಶೇಷಃ ॥ ೯೭೩ ॥**

**ವಿವರಣೆ–** ಏಕವಿಜ್ಞಾನದಿಂದ ಸರ್ವವಿಜ್ಞಾನವನ್ನು ಬೇರೆ ರೀತಿಯಲ್ಲಿ ಕೂಡಿಸಲು ಬರುವುದಿಲ್ಲವಾದ್ದರಿಂದ ಸಾದೃಶ್ಯ ಮತ್ತು ಆಶ್ರಿತ್ವಾದಿಗಳನ್ನು ತೆಗೆದುಕೊಂಡೇ ಉಪಪಾದನೆ ಮಾಡಬೇಕು ಎಂದು ಹೇಳುತ್ತಾರೆ. ಚಿತ್ತ್ವಾದ್ಯೈಃ ಎಂಬಲ್ಲಿರುವ ಆದ್ಯ ಪದದಿಂದ ಅರ್ಥಕ್ರಿಯಾಕಾರಿತ್ವ, ನಿತ್ಯತ್ವ, ಆನಂದತ್ವ ಮೊದಲಾದ ಧರ್ಮಗಳನ್ನು ತೆಗೆದುಕೊಳ್ಳಬೇಕು.

**ದೃಷ್ಟೈಕಧೂಮಸಾದೃಶ್ಯಾದ್ ಧೂಮಮಾತ್ರಸ್ಯ ಧೀರ್ನ ಕಿಂ ।**
**ವ್ಯಾಪ್ತಿಗ್ರಹಾಯ ತಚ್ಛಬ್ದವಾಚ್ಯತ್ವಸ್ಯ ಗ್ರಹಾಯ ವಾ ॥ ೯೭೪ ॥**

**ಅರ್ಥ–** ದೃಷ್ಟೈಕಧೂಮಸಾದೃಶ್ಯಾತ್= ನೋಡಲ್ಪಟ್ಟ ಒಂದು ಧೂಮದ ಸಾದೃಶ್ಯದಿಂದ, ಧೂಮಮಾತ್ರಸ್ಯ= ಸಕಲ ಧೂಮಗಳ, ಧೀಃ= ಜ್ಞಾನವು, ವ್ಯಾಪ್ತಿಗ್ರಹಾಯ= ವ್ಯಾಪ್ತಿ ಗ್ರಹಕ್ಕೋಸ್ಕರ, ವಾ= ಅಥವಾ, ತಚ್ಛಬ್ದವಾಚ್ಯತ್ವಸ್ಯ ಗ್ರಹಾಯ= ಧೂಮಶಬ್ದದ ಶಕ್ತಿಗ್ರಹಕ್ಕೋಸ್ಕರ, ನ ಕಿಂ= ಉಂಟಾಗುವುದಿಲ್ಲವೇನು?

**ಅನುವಾದ– ವ್ಯಾಪ್ತಿ ನಿಶ್ಚಯವನ್ನು ಪಡೆಯಲು ಅಥವಾ ಶಕ್ತಿಗ್ರಹವನ್ನು ಪಡೆಯಲು ನೋಡಿದ ಒಂದು ಧೂಮದ ಸಾದೃಶ್ಯದಿಂದ ಎಲ್ಲಾ ಧೂಮಗಳ ಜ್ಞಾನವು ಬರುವುದಿಲ್ಲವೇನು?**

**ಭಾವವಿಲಾಸಿನೀ–** ಸಾದೃಶ್ಯಾದೇಕವಿಜ್ಞಾನೇನ ಸರ್ವವಿಜ್ಞಾನಂ ಸರ್ವಜನಸಂಪ್ರತಿಪನ್ನ-ದೃಷ್ಟಾಂತಮುಖೇನ ದರ್ಶಯತಿ – ದೃಷ್ಟೇತಿ ॥ ದೃಷ್ಟಸ್ಯೈಕಧೂಮಸ್ಯ ಸಾದೃಶ್ಯಾತ್ ಏತನ್ನಿಷ್ಠ-ಸಕಲಧೂಮಪ್ರತಿಯೋಗಿಕಸಾದೃಶ್ಯಾದಿತ್ಯರ್ಥಃ । ವಸ್ತುಸ್ಥಿತ್ಯಾ ಆಕಾರಾದಿನಾ ಅಸ್ಯಾತೀತಾನಾಗತಸಕಲಧೂಮಸದೃಶತ್ವಾದಿತಿ ಯಾವತ್ । ತತ್‌ಶಬ್ದೋ ಧೂಮಶಬ್ದಃ । ಏಕ-ಧೂಮದರ್ಶನೇ ಹಿ ಸ್ವಾಕಾರಸಾದೃಶಾಕಾರತ್ವರೂಪಸಾದೃಶ್ಯಪ್ರತ್ಯಾಸತ್ತ್ಯಾ ಸರ್ವೇ ಧೂಮಾಃ ವ್ಯಾಪ್ತಿಗ್ರಹಾಯ ಸಂಕೇತಗ್ರಹಾಯ ವಾ ಗೃಹ್ಯಂತ ಇತಿ ಸರ್ವೇಷಾಮವಿವಾದಮ್ । ಸಾಮಾನ್ಯ-ಪ್ರತ್ಯಾಸತ್ತ್ಯೇತಿ ವದನ್‌ತಾರ್ಕಿಕೋಽಪಿ ಏಕಜ್ಞಾನೇನ ಸರ್ವಜ್ಞಾನಮಂಗೀಕರೋತ್ಯೇವ । ಅಭಾವಸಾಧ್ಯಕವ್ಯಾಪ್ತಿಗ್ರಹಾಯ ಅಭಾವಾದಿಪದಸಂಕೇತಗ್ರಹಾಯ ಚ ಸಾದೃಶ್ಯಸ್ಯೈವ ಪ್ರತ್ಯಾಸತ್ತಿತಯಾ ತೇನಾಪಿ ವಕ್ತವ್ಯತ್ವಾತ್ । ಸರ್ವತ್ರಾಪಿ ಸೈವ ಪ್ರತ್ಯಾಸತ್ತಿರಸ್ತು । ಕಿಂಚ ವರಾಹಾದಿಪರೀಕ್ಷಾಂ ಬೋಧಯಂತೋಽಪಿ ರೂಪರೇಖಾಭಾರಾದಿನೈವ ಬೋಧಯಂತಿ । ತೇ ಪುನಃಸರ್ವತ್ರ ತಾದೃಶರೇಖಾದಿಭಿರೇವ ವರಾಹತ್ವಬುದ್ಧಿಂ ಕುರ್ವಂತಿ । ವಿಲಕ್ಷಣರೇಖಾದಿನಾ ತು ತದ್ಬುದ್ಧಿಂ ತ್ಯಜಂತೀತಿ ಆಪಣವೀಥೀಸ್ಥಾ ಅಪಿ ಜಾನಂತಿ । ರೇಖಾದಿಕಂ ವಿನಾ ಕೇವಲಂ ವರಾಹತ್ವಜಾತ್ಯಾ ನ ಕಸ್ಯಾಪಿ ಕ್ವಚಿದ್ಬೋಧಃ । ಅತೋಽನ್ವಯವ್ಯತಿರೇಕಾಭ್ಯಾಂ ಸಾದೃಶ್ಯ-ಸ್ಯೈವೋಪಸ್ಥಾಪಕತ್ವಮುಚಿತಮ್ । ಕಿಂಚ ಜಾತೇರಾಧಾರಮಾತ್ರಮಲಮ್ । ಆಧಾರ-ನಿಯಮವತೀ ಚ ಜಾತಿಃ ಕಂಚಿದಾಧಾರಮೇವ ಜ್ಞಾಪಯೇತ್ । ಆಕಾರವಿಶೇಷಬೋಧನೇ ಕಥಂ ತಸ್ಯಾಃ ಶಕ್ತಿಃ । ಯದಿ ಚ ಏಕತ್ರ ಯಾದೃಶಾಕಾರವತಿ ಸಾ ದೃಷ್ಟಾ ಅನ್ಯತ್ರಾಪಿ ತಾದೃಶಾಕಾರ-ವಾನೇವಾಧಾರೋ ಭವೇದಿತಿ ನಿಯಮಃ ಅತಸ್ತಮಪಿ ಬೋಧಯತೀತಿ ಮನ್ಯಸೇ ತರ್ಹಿ ಯಾದೃಶತಾದೃಶಶಬ್ದಾರ್ಥಸ್ಯ ಸಾದೃಶ್ಯತ್ವೇನ ಜಾತಿವಾದಿನಾಪಿ ವ್ಯಕ್ತಿಗತಸಾದೃಶ್ಯಸ್ಯೈವ ಪುರಸ್ಕರ್ತವ್ಯತ್ವಾತ್ ಸೈವ ಪ್ರತ್ಯಾಸತ್ತಿರಸ್ತು । ಲಾಘವಾತ್ ಸರ್ವಾನುಭವಸಿದ್ಧತ್ವಾಚ್ಚ । ಅಪಿ ಚ ಮುಖಪ್ರತಿಭಾಸಾಯ ದರ್ಪಣಾದಿನಾ ಪ್ರತಿಮುಖಂ ಪಶ್ಯಂಸ್ತಾರ್ಕಿಕೋಽಪಿ ಸದೃಶಸ್ಯ ಸದೃಶಾಂತರೋಪಸ್ಥಾಪಕತ್ವಂ ಕಥಂ ನ ಮನುತೇ । ನಹಿ ತದೇವ ತತ್ । ಪ್ರತಿಮುಖತ್ವಾತ್ । ನಾಪಿ ಮುಖತ್ವಜಾತಿಮತ್ । ಯೇನ ಜಾತ್ಯೈವೋಪಸ್ಥಾಪಕಂ ಸ್ಯಾತ್ । ಪ್ರತಿಮುಖತ್ವಾದೇವ । ಅತಃ ಸಾಧೂಕ್ತಂ ದೃಷ್ಟೈಕಧೂಮಸಾದೃಶ್ಯಾದಿತಿ ॥ ೯೭೪ ॥

**ವಿವರಣೆ–** ಸಾದೃಶ್ಯದಿಂದ ಏಕವಿಜ್ಞಾನದಿಂದ ಸರ್ವವಿಜ್ಞಾನವು ಉಂಟಾಗುತ್ತದೆ ಎಂದು ಇಲ್ಲಿ ಉಪಪಾದನೆ ಮಾಡುತ್ತಾರೆ. ಸಕಲಧೂಮಗಳಲ್ಲಿ ವಹ್ನಿವ್ಯಾಪ್ತಿಗ್ರಹ ವಾಗಬೇಕು ಮತ್ತು ಧೂಮಶಬ್ದವಾಚ್ಯತ್ವದ ಜ್ಞಾನವೂ ಆಗಬೇಕು. ಅದಕ್ಕೋಸ್ಕರವಾಗಿ ಒಂದು ಧೂಮವನ್ನು ನೋಡಿದಾಗ ಸಕಲ ಧೂಮಗಳೂ ಉಪಸ್ಥಿತವಾಗಬೇಕು. ಇದನ್ನು ಸಾದೃಶ್ಯದಿಂದಲೇ ಸಮರ್ಥಿಸಬೇಕು ಎಂದು ಅಭಿಪ್ರಾಯ. ದೃಷ್ಟೈಕ ಧೂಮಸಾದೃಶ್ಯಾತ್ ಎಂದರೆ ದೃಷ್ಟವಾದ ಸಕಲ ಧೂಮಪ್ರತಿಯೋಗಿಕ ಸಾದೃಶ್ಯದಿಂದ ಎಂದು ಅರ್ಥ. ಅದನ್ನು ವಸ್ತುತಃ ಪುರೋವೃತ್ತಿಯಾದ ಧೂಮದಲ್ಲಿ ಅತೀತಾನಾ-

ಗತವಾದ ಎಲ್ಲಾ ಧೂಮಗಳ ಸಾದೃಶ್ಯವಿರುವುದರಿಂದ ಎಂದು ಅರ್ಥವನ್ನು ಮಾಡಬೇಕು. ಆಗ ಪುರೋವೃತ್ತಿ ಧೂಮನಿಷ್ಠ ಸಾದೃಶ್ಯ ಪ್ರತಿಯೋಗಿತ್ವವು ಎಲ್ಲಾ ಧೂಮಗಳಲ್ಲಿಯೂ ಬರುವುದರಿಂದ ಎಲ್ಲಾ ಧೂಮಗಳ ಉಪಸ್ಥಿತಿಯೂ ಬರುತ್ತದೆ. ಒಂದು ಧೂಮವನ್ನು ನೋಡಿದಾಗ ತದಾಕಾರಸಾದೃಶ್ಯರೂಪವಾದ ಪ್ರತ್ಯಾಸತ್ತಿಯಿಂದ ಎಲ್ಲ ಧೂಮಗಳೂ ಉಪಸ್ಥಿತವಾಗುವುದರಿಂದ ವ್ಯಾಪ್ತಿಗ್ರಹವು ಮತ್ತು ಶಕ್ತಿಗ್ರಹವು ಉಂಟಾಗುವುದೆಂದು ಎಲ್ಲ ವಾದಿಗಳೂ ಒಪ್ಪಿದ್ದಾರೆ. ಸಾಮಾನ್ಯ ಪ್ರತ್ಯಾಸತ್ತಿಯಿಂದ ಸಕಲ ವ್ಯಕ್ತಿಗಳ ಜ್ಞಾನವನ್ನು ಅಂಗೀಕರಿಸುವ ತಾರ್ಕಿಕನೂ ಸಹ ಏಕವಿಜ್ಞಾನದಿಂದ ಸರ್ವವಿಜ್ಞಾನವನ್ನು ಒಪ್ಪುತ್ತಾನೆ. ಅಭಾವವು ಸಾಧ್ಯವಾದ ಅನುಮಾನ ಸ್ಥಳದಲ್ಲಿ ಅಭಾವನಿರೂಪಿತ ವ್ಯಾಪ್ತಿಯು ತಿಳಿಯಬೇಕಾದರೆ ಒಂದು ಅಭಾವದ ಜ್ಞಾನವುಂಟಾದಾಗ ಸಕಲ ಅಭಾವದ ಜ್ಞಾನವನ್ನು ಅಂಗೀಕರಿಸಬೇಕು. ಅದರಂತೆ ಒಂದು ಅಭಾವದಲ್ಲಿ ಅಭಾವಪದವಾಚ್ಯತ್ವವು ತಿಳಿಯುವಾಗ ಎಲ್ಲಾ ಅಭಾವಗಳಲ್ಲಿಯೂ ಅಭಾವಪದವಾಚ್ಯತ್ವವು ತಿಳಿಯುವುದರಿಂದ ಅಲ್ಲಿಯೂ ಎಲ್ಲಾ ಅಭಾವಗಳ ಉಪಸ್ಥಿತಿಯನ್ನು ಒಪ್ಪಬೇಕು. ಆದರೆ ಅಭಾವದಲ್ಲಿ ಸಾಮಾನ್ಯವಿಲ್ಲವೆಂದು ತಾರ್ಕಿಕರ ನಿಲುವು. ಆದ್ದರಿಂದ ಅಭಾವಸ್ಥಳದಲ್ಲಿ ಸಾದೃಶ್ಯದಿಂದಲೇ ವ್ಯಾಪ್ತಿಗ್ರಹವನ್ನು ಶಕ್ತಿಗ್ರಹವನ್ನೂ ಉಪಪಾದನೆ ಮಾಡಬೇಕು. ಒಂದು ಸ್ಥಳದಲ್ಲಿ ಹೀಗೆ ಉಪಪಾದನೆ ಮಾಡಿದ ಮೇಲೆ ಲಾಘವದಿಂದ ಎಲ್ಲ ಸ್ಥಳಗಳಲ್ಲಿಯೂ ಸಾದೃಶ್ಯದಿಂದಲೇ ಉಪಪಾದನೆ ಮಾಡುವುದು ಒಳ್ಳೆಯದು ಮತ್ತು ವರಾಹವನ್ನು (ಸುವರ್ಣ ನಾಣ್ಯಗಳನ್ನು) ಪರೀಕ್ಷೆ ಮಾಡುವವರು ರೂಪರೇಖಾಭಾರಾದಿಗಳಿಂದಲೇ ಪರೀಕ್ಷೆಯನ್ನು ಮಾಡುತ್ತಾರೆ ಮತ್ತು ಇನ್ನೊಬ್ಬರಿಗೆ ಬೋಧಿಸುತ್ತಾರೆ. ಅವರಾದರೂ ಅಂತಹ ರೇಖೆಗಳ ಸಾದೃಶ್ಯದಿಂದಲೇ ವರಾಹವೆಂದು ನಿರ್ಧರಿಸುತ್ತಾರೆ. ವಿಲಕ್ಷಣವಾದ ರೇಖೆಗಳಿದ್ದರೆ ಅದು ವರಾಹವಲ್ಲವೆಂದು ಪರಿತ್ಯಜಿಸುತ್ತಾರೆ. ರೇಖೆಗಳಿಲ್ಲದೇ ಕೇವಲ ವರಾಹತ್ವ ಜಾತಿಯಿಂದ (ಸುವರ್ಣತ್ವ ಜಾತಿಯಿಂದ?) ವರಾಹ ಬೋಧವು ಬರುವುದಿಲ್ಲ. ಆದ್ದರಿಂದ ಅನ್ವಯ ವ್ಯತಿರೇಕಗಳಿಂದ ಸಾದೃಶ್ಯವೇ ಸರ್ವವ್ಯಕ್ತಿಗಳ ಉಪಸ್ಥಾಪಕವೆಂದು ತಿಳಿಯುತ್ತದೆ ಮತ್ತು ವ್ಯಕ್ತಿಯು ಜಾತಿಗೆ ಆಧಾರವು ಮಾತ್ರ. ವ್ಯಕ್ತಿ ಇದ್ದರೆ ಸಾಕು ಜಾತಿ ಇರುತ್ತದೆ. ಆದ್ದರಿಂದ ಜಾತಿಯು ವ್ಯಕ್ತಿಯ ನಿಯಮವುಳ್ಳದ್ದಾದ್ದರಿಂದ ಒಂದು ಆಶ್ರಯವನ್ನೇ ಜ್ಞಾಪಿಸಬಹುದು. ಆ ಆಶ್ರಯದಲ್ಲಿ ಆಕಾರವಿಷಯವನ್ನು ಬೋಧಿಸುವುದಕ್ಕೆ ಅದಕ್ಕೆ ಶಕ್ತಿ ಇರುವುದಿಲ್ಲ. ಆದ್ದರಿಂದ ಧೂಮಾಂತರದ ಉಪಸ್ಥಿತಿಯಾದಾಗ ಆ ಧೂಮಾಂತರದ ಆಕಾರಜ್ಞಾನವು ಹೇಗೆ ಉಂಟಾಗುತ್ತದೆ? ಒಂದು ಪಕ್ಷ ಎಂತಹ ಆಕಾರದಲ್ಲಿ ಧೂಮದಲ್ಲಿ ಧೂಮತ್ವ ಜಾತಿಯನ್ನು ನೋಡಿದ್ದಾನೆಯೋ, ಅಂತಹ ಆಕಾರವುಳ್ಳ ಇನ್ನೊಂದೇ ಆ ಜಾತಿಗೆ ಆಶ್ರಯವಾಗುತ್ತದೆ ಎಂಬ ನಿಯಮವಿರುವುದರಿಂದ ಆ ಆಕಾರವನ್ನು ಬೋಧಿಸುತ್ತದೆ ಎಂದು ಹೇಳುವುದಾದರೆ ಯಾವುದಾದರೂ ಒಂದು ರೀತಿಯ ಸಾದೃಶ್ಯವನ್ನು ಜಾತಿವಾದಿಗಳು ಒಪ್ಪಿದಂತೆಯೇ ಆಯಿತು. ಆದ್ದರಿಂದ ಅವರಾದರೂ ಅದಕ್ಕಾಗಿ

ವ್ಯಕ್ತಿಗತವಾದ ಸಾದೃಶ್ಯವನ್ನೇ ಪುರಸ್ಕರಿಸಬೇಕಾಗುವುದರಿಂದ ಅದೇ ಎಲ್ಲ ಕಡೆಗಳಲ್ಲಿಯೂ ಎಂದರೆ ವ್ಯಾಪ್ತಿಜ್ಞಾನ, ಶಕ್ತಿಜ್ಞಾನ ಮತ್ತು ಲಕ್ಷಣಜ್ಞಾನದ ಸ್ಥಳಗಳಲ್ಲಿ ಸಾದೃಶ್ಯವೇ ಪ್ರತ್ಯಾಸತ್ತಿಯಾಗಲಿ. ಏಕೆಂದರೆ ಇವು ಸರ್ವಾನುಭವ ಸಿದ್ಧವಾಗಿವೆ. ಮತ್ತು ದರ್ಪಣಾದಿಗಳಲ್ಲಿ ತನ್ನ ಪ್ರತಿಮುಖವನ್ನು ನೋಡಿಕೊಳ್ಳುವ ತಾರ್ಕಿಕನೂ ಸಹ ಸದೃಶ ಜ್ಞಾನದಿಂದ ಸದೃಶಾಂತರಜ್ಞಾನವನ್ನು ಹೇಗೆ ನಿರಾಕರಿಸುತ್ತಾನೆ? ಕನ್ನಡಿಯಲ್ಲಿರುವ ಮುಖವೇ ತನ್ನ ಮುಖವಲ್ಲ. ಕನ್ನಡಿಯಲ್ಲಿರುವುದು ಮುಖದ ಪ್ರತಿಬಿಂಬ ಮಾತ್ರ. ಆದ್ದರಿಂದ ಅದರಲ್ಲಿ ಮುಖತ್ವ ಜಾತಿಯು ಇಲ್ಲ. ಮುಖತ್ವ ಜಾತಿ ಇದ್ದಿದ್ದರೆ ಸಾಮಾನ್ಯ ಜಾತಿ ಪ್ರತ್ಯಾಸಕ್ತಿಯಿಂದ ತನ್ನ ಮುಖದ ಜ್ಞಾನವು ಬರಬಹುದಾಗಿದ್ದಿತು. ಆದ್ದರಿಂದ ಪ್ರತಿ ಮುಖದ ಸಾದೃಶ್ಯದಿಂದಲೇ ತನ್ನ ಮುಖದ ಜ್ಞಾನವು ಉಂಟಾಗುತ್ತದೆ ಎಂದು ಒಪ್ಪಬೇಕು. ಆದ್ದರಿಂದ ಸರ್ವತ್ರ ಏಕವಿಜ್ಞಾನದಿಂದ ಸರ್ವವಿಜ್ಞಾನವು ಸಾದೃಶ್ಯ ನಿಮಿತ್ತದಿಂದ ಉಂಟಾಗುತ್ತದೆ ಎಂದು ಅಂಗೀಕರಿಸಬೇಕು ಎಂದು ಅಭಿಪ್ರಾಯ.

**ನಾನಾಲಂಕಾರಗಂಧಾದ್ಯೈರಲಂಕೃತನಿದರ್ಶನೇ ।**
**ತದಲಂಕಾರಗಂಧಾದಿದರ್ಶನಂ ಚ ನ ಕಿಂ ನೃಣಾಂ ॥ ೯೭೫ ॥**

**ಅರ್ಥ–** ನಾನಾಲಂಕಾರಗಂಧಾದ್ಯೈಃ= ಅನೇಕ ವಿಧವಾದ ಅಲಂಕಾರ ಮತ್ತು ಗಂಧಗಳಿಂದ, ಅಲಂಕೃತ ನಿದರ್ಶನೇ= ಅಲಂಕೃತವಾದ ಪ್ರತಿಮೆಯನ್ನು ನೋಡಿದಾಗ, ನೃಣಾಂ= ಮನುಷ್ಯರಿಗೆ, ತದಲಂಕಾರಗಂಧಾದಿದರ್ಶನಂ ಚ= ಆ ಪ್ರತಿಮೆಯಲ್ಲಿರುವ ಅಲಂಕಾರ ಮತ್ತು ಗಂಧಗಳ ದರ್ಶನವೂ ಸಹ, ಕಿಂ ನ= ಆಗುವುದಿಲ್ಲವೇನು?

**ಅನುವಾದ– ಅನೇಕ ವಿಧವಾದ ಅಲಂಕಾರ ಮತ್ತು ಗಂಧಗಳಿಂದ ಅಲಂಕೃತವಾದ ಪ್ರತಿಮೆಯನ್ನು ನೋಡಿದಾಗ ಮನುಷ್ಯರಿಗೆ ಆ ಅಲಂಕಾರ ಮತ್ತು ಗಂಧಾದಿಗಳ ದರ್ಶನವು ಆಗುವುದಿಲ್ಲವೇನು?**

**ಭಾವವಿಲಾಸಿನೀ– ಸರ್ವಾಧಾರಹರಿದರ್ಶನೇ ಸರ್ವಸ್ಯ ಜ್ಞಾನಮಿತ್ಯತ್ರಾಪಿ ದೃಷ್ಟಾಂತಮಾಹ – ನಾನಾಲಂಕಾರೇತಿ ॥ ೯೭೫ ॥**

**ವಿವರಣೆ–** ಎಲ್ಲವೂ ಭಗವದಾಶ್ರಿತವಾದ್ದರಿಂದಲೂ ಭಗವದ್‌ಜ್ಞಾನದಿಂದ ಜಗಜ್‌ಜ್ಞಾನವು ಬರುವುದೆಂದು ಇಲ್ಲಿ ಉಪಪಾದನೆ ಮಾಡುತ್ತಾರೆ.

**ಅದ್ಭುತಾನೀಹ ಯಾವಂತಿ ಭೂಮೌ ವಿಯತಿ ವಾ ಜಲೇ ।**
**ತ್ವಯಿ ವಿಶ್ವಾತ್ಮಕೇ ತಾನಿ ಕಿಂ ಮೇಽದೃಷ್ಟಂ ವಿಪಶ್ಯತಃ ॥ ೯೭೬ ॥**

**ಇತ್ಯಕ್ರೂರವಚಃ ಪಶ್ಯ ವಿಶ್ವರೂಪಂ ಚ ತಂ ಸ್ಮರ ।**
**ಶಿಶೋರ್ಯಸ್ಯ ಕಿಲಾಸ್ಯೇ ಪ್ರಾಕ್ ಅಪಶ್ಯದ್ ವಿಶ್ವಮಂಬಿಕಾ ॥ ೯೭೭ ॥**

**ಅರ್ಥ–** ಭೂಮೌ ವಿಯತಿ ವಾ ಜಲೇ= ಭೂಮಿಯಲ್ಲಾಗಲೀ ಆಕಾಶದಲ್ಲಾಗಲೀ ಅಥವಾ ಜಲದಲ್ಲಾಗಲೀ, ಇಹ= ಇಲ್ಲಿ, ಯಾವಂತಿ ಅದ್ಭುತಾನಿ= ಎಷ್ಟು ಅದ್ಭುತಗಳಿವೆಯೋ, ವಿಪಶ್ಯತಃ= ನಿನ್ನನ್ನು ನೋಡುವ ನನಗೆ, ವಿಶ್ವಾತ್ಮಕೇ= ಸರ್ವಾಧಾರನಾದ, ತ್ವಯಿ= ನಿನ್ನಲ್ಲಿ, ಅದೃಷ್ಟಂ= ಅದೃಷ್ಟವಾದ, ತಾನಿ= ಆ ಅದ್ಭುತಗಳು, ಕಿಂ= ಯಾವುವು ಇವೆ, ಇತಿ= ಈ ರೀತಿಯಾದ, ಅಕ್ರೂರವಚಃ= ಅಕ್ರೂರನ ವಾಕ್ಯವನ್ನು, ಪಶ್ಯ= ನೋಡು, ಯಸ್ಯ= ಯಾವ ಪರಮಾತ್ಮನ, ಶಿಶೋಃ ಆಸ್ಯೇ= ಶಿಶುರೂಪದ ಮುಖದಲ್ಲಿಯೇ, ಅಂಬಿಕಾ= ತಾಯಿಯು, ಪ್ರಾಕ್= ಹಿಂದೆ, ವಿಶ್ವಂ ಅಪಶ್ಯತ್= ಜಗತ್ತನ್ನೇ ನೋಡಿದಳೋ, ತಂ ವಿಶ್ವರೂಪಂ ಚ= ಆ ವಿಶ್ವರೂಪವನ್ನು, ಸ್ಮರ= ಸ್ಮರಿಸಿಕೋ.

**ಅನುವಾದ– ಅಕ್ರೂರನು ಕೃಷ್ಣನನ್ನು ನೋಡುತ್ತಾ ಭೂಮಿಯಲ್ಲಿ, ಆಕಾಶದಲ್ಲಿ ಅಥವಾ ಜಲದಲ್ಲಿ ಎಷ್ಟು ಅದ್ಭುತಗಳಿವೆಯೋ ಅವೆಲ್ಲವನ್ನೂ ವಿಶ್ವಾಧಾರನಾದ ನಿನ್ನನ್ನು ನೋಡುವ ನಾನು ನೋಡಿದ್ದೇನೆ (ನಾನು ನೋಡದೇ ಇರುವ ಅದ್ಭುತವು ಯಾವುದು ಇದೆ) ಎಂದು ಹೇಳುವ ಆ ಮಾತನ್ನು ಸ್ಮರಿಸಿಕೋ. ಗೀತೆಯಲ್ಲಿ ಅರ್ಜುನನಿಗೆ ಕೃಷ್ಣನು ತೋರಿಸಿದ ವಿಶ್ವರೂಪವನ್ನು ಸ್ಮರಿಸಿಕೋ. ಶಿಶುವಾದ ಕೃಷ್ಣನ ಮುಖದಲ್ಲಿ ತಾಯಿಯಾದ ಯಶೋದೆಯು ವಿಶ್ವವನ್ನೇ ನೋಡಿದಳು ಎಂಬುದನ್ನು ಸ್ಮರಿಸಿಕೋ.**

**ಭಾವವಿಲಾಸಿನೀ–** ಅಸ್ಮಿನ್ನರ್ಥೇ ಪ್ರಮಾಣಂ ಚಾಹ – **ಅದ್ಭುತಾನೀತಿ** ॥ ಇಹೇತ್ಯಸ್ಯ ವಿವರಣಂ ಭೂಮಾವಿತ್ಯಾದಿ । ಸರ್ವಾತ್ಮಕೇ ಸರ್ವಮಾತ್ಮನಿ ಯಸ್ಯ ಸಃ ಸರ್ವಾತ್ಮಾ । ಸ್ವಾರ್ಥೇ ಕಪ್ರತ್ಯಯಃ । ತಾನಿ ಅದ್ಭುತಾನಿ ಸಂತೀತ್ಯರ್ಥಃ । ಸರ್ವಾತ್ಮಕಪದಸ್ಯ ಸರ್ವಸ್ವರೂಪತ್ವಾರ್ಥಕತ್ವೇ ತ್ವಯಿ ತಾನೀತ್ಯುಕ್ತಾಧಾರಾಧೇಯ ಭಾವಾಯೋಗಾತ್ ಉಕ್ತ ಏವ ವಿಗ್ರಹಃ । ಅತಃ ಸರ್ವಾಧಾರಂ ತ್ವಾಂ ವಿಪಶ್ಯತಃ ಮೇ ಅದೃಷ್ಟಂ ಕಿಂ ನ ಕಿಮಪಿ । ತವದರ್ಶನೇ ತ್ವದಂಗಾಶ್ರಿತಸರ್ವಸ್ಯಾಪಿ ದೃಷ್ಟತ್ವಾದಿತಿ ವಾಕ್ಯಾರ್ಥಃ । ಏವಂಚ ಏಕವಿಜ್ಞಾನೇ ಸರ್ವವಿಜ್ಞಾನಸ್ಯ ಕಾನುಪಪತ್ತಿರಿತಿ ಭಾವಃ । ವಿಶ್ವರೂಪಂ ವಿಶ್ವಂ ಆಪಾತಾಲಂ ಜಗತ್ ಸ್ವಾಂಗೇ ರೂಪಯತಿ ಪ್ರಕಾಶಯತೀತಿ ವಿಶ್ವರೂಪಂ ತಂ ನಾರಾಯಣಮ್ । ಅಣುರೂಪೇ ವಿಶ್ವರೂಪಾಭಾವಶಂಕಾಂ ಪರಿಹರತಿ ॥ **ಶಿಶೋರಿತಿ** ॥ ಅಂಬಿಕಾ ಯಶೋದಾ ॥ ೯೭೬-೯೭೭ ॥

**ವಿವರಣೆ–** ಅಕ್ರೂರನು ವಿಶ್ವಾತ್ಮಕನಾದ ನಿನ್ನಲ್ಲಿ ಎಲ್ಲವನ್ನೂ ನೋಡಿದ್ದೇನೆ ಎಂದು ಹೇಳಿದ್ದಾನೆ. ವಿಶ್ವಾತ್ಮಕ ಎನ್ನುವ ಶಬ್ದಕ್ಕೆ ವಿಶ್ವದಿಂದ ಅಭಿನ್ನ ಎಂದು ಅರ್ಥವಲ್ಲ. ಹಾಗೆ ಮಾಡಿದರೆ ತ್ವಯಿ= ನಿನ್ನಲ್ಲಿ, ತಾನಿ= ಅವುಗಳನ್ನು ನೋಡಿದ್ದೇನೆ ಎಂದು ಹೇಳುವ ಆಧಾರಾಧೇಯ ಭಾವವು ವಿರುದ್ಧವಾಗುತ್ತವೆ. ಆದ್ದರಿಂದ 'ವಿಶ್ವಂ ಸರ್ವಂ ಆತ್ಮನಿ ಯಸ್ಯ' ಯಾರ ದೇಹದಲ್ಲಿ ಅಥವಾ ಸ್ವರೂಪದಲ್ಲಿ ಸಮಸ್ತ ಜಗತ್ತೇ ಇದೆಯೋ ಎಂದು ಸರ್ವಾಧಾರನೆಂದೇ ಅರ್ಥವನ್ನು ಮಾಡಬೇಕು. ಗೀತೆಯಲ್ಲಿ ಅರ್ಜುನನಂತೂ

ಸರ್ವಾಧಾರನಾದ ಕೃಷ್ಣನ ವಿಶ್ವರೂಪವನ್ನು ನೋಡಿದ್ದಾನೆ. ಚಿಕ್ಕ ಮಗುವಿನ ಬಾಯಿಯಲ್ಲಿಯೇ ತಾಯಿಯು ಸರ್ವ ಜಗತ್ತನ್ನು ನೋಡಿದ್ದಾಳೆ. ಆದ್ದರಿಂದ ಸರ್ವಾಧಾರತ್ವ ಇರುವುದರಿಂದಲೇ ಪರಮಾತ್ಮನ ಜ್ಞಾನವಾದಾಗ ಅವನಲ್ಲಿ ಆಶ್ರಿತವಾದ ಎಲ್ಲಾ ಚರಾಚರ ವಸ್ತುಗಳ ಜ್ಞಾನವು ಉಂಟಾಗುತ್ತದೆ ಎಂದು ಅರ್ಥವನ್ನು ಮಾಡಬೇಕು.

ತ್ವಯಿ ದೃಷ್ಟೇऽಖಿಲಾದೃಷ್ಟಾ ಇತಿ ಗ್ರಾಮೇಶ್ವರಂ ನರಂ ।
ಅನ್ಯದರ್ಶನಜನ್ಯಸ್ಯ ಫಲಸ್ಯಾಪ್ಯತ್ರ ಸಂಭವಾತ್ ॥ ೯೭೮ ॥

ಯಥಾ ವದಂತಿ ಸರ್ವೇಷಾಂ ಹರಿಂ ಸರ್ವೇಶ್ವರಂ ತಥಾ ।
ಮಹಾಫಲಪ್ರದಾತಾರಂ ಪ್ರಶಂಸತಿ ಮಹಾಪ್ರಭುಂ ॥ ೯೭೯ ॥

**ಅರ್ಥ–** ತ್ವಯಿ ದೃಷ್ಟೇ= ನಿನ್ನನ್ನು ನೋಡಿದರೆ, ಅಖಿಲಾದೃಷ್ಟಾಃ ಇತಿ= ಎಲ್ಲರೂ ನೋಡಲ್ಪಟ್ಟರು ಎಂದು, ಗ್ರಾಮೇಶ್ವರಂ ನರಂ= ಗ್ರಾಮಾಧಿಪತಿಯಾದ ಮನುಷ್ಯನನ್ನು ಕುರಿತು, ಅನ್ಯದರ್ಶನಜನ್ಯಸ್ಯ= ಅನ್ಯದರ್ಶನದಿಂದ ಉಂಟಾಗುವ, ಫಲಸ್ಯಾಪಿ= ಫಲವೂ ಸಹ, ಅತ್ರ= ಈ ಗ್ರಾಮಾಧಿಪತಿಯ ದರ್ಶನದಿಂದಲೇ, ಸಂಭವಾತ್= ಉಂಟಾಗುವುದರಿಂದ, ಯಥಾ ವದಂತಿ= ಹೇಗೆ ಹೇಳುತ್ತಾರೆಯೋ, ತಥಾ= ಅದರಂತೆ, ಸರ್ವೇಶ್ವರಂ= ಸರ್ವೇಶ್ವರನಾದ, ಮಹಾಪ್ರಭುಂ= ಮಹಾಪ್ರಭುವಾದ, ಹರಿಂ= ಹರಿಯನ್ನು, ಸರ್ವೇಷಾಂ= ಎಲ್ಲರಿಗೂ, ಮಹಾಫಲಪ್ರದಾತಾರಂ= ಮಹಾಫಲವನ್ನು ಕೊಡುವವನೆಂದು, ಪ್ರಶಂಸತಿ= ವೇದವಾಕ್ಯವು ಪ್ರಶಂಸಿಸುತ್ತದೆ.

**ಅನುವಾದ–** ಅನ್ಯದರ್ಶನದಿಂದ ಉಂಟಾಗುವ ಫಲವು ಗ್ರಾಮಾಧಿಪತಿಯ ದರ್ಶನದಿಂದಲೇ ಉಂಟಾಗುವುದರಿಂದ, ವಿವಿಧ ಜನರು ಗ್ರಾಮಾಧಿಪತಿಯನ್ನು ಕುರಿತು ನಿನ್ನನ್ನು ನೋಡಿದರೆ ಎಲ್ಲರನ್ನೂ ನೋಡಿದ್ದಾಯಿತು ಎಂದು ಹೇಗೆ ಹೇಳುತ್ತಾರೆಯೋ, ಅದರಂತೆ ಸರ್ವೇಶ್ವರನಾದ ಮಹಾಪ್ರಭುವಾದ ಹರಿಯನ್ನು ಶ್ರುತಿಯು ಎಲ್ಲರಿಗೂ ಮಹಾಫಲಪ್ರದನೆಂದು ಪ್ರಶಂಸಿಸುತ್ತದೆ.

**ಭಾವವಿಲಾಸಿನೀ–** ಭಗವತಃ ಸ್ವಾತಂತ್ರ್ಯಮಾದಾಯಾಪಿ ಏಕವಿಜ್ಞಾನೇನ ಸರ್ವವಿಜ್ಞಾನಂ ಘಟಯಿತುಂ ದೃಷ್ಟಾಂತಮಾಹ – **ತ್ವಯೀತಿ** ॥ ಅನ್ಯದರ್ಶನಜನ್ಯಸ್ಯ ಅಪ್ರಧಾನ-ಪುರುಷಾಂತರದರ್ಶನಜನ್ಯಸ್ಯ । ಅತ್ರ ಪ್ರಧಾನಪುರುಷದರ್ಶನೇ ಸತಿ ಯಥಾ ವದಂತೀತಿ ಪೂರ್ವೇಣಾನ್ವಯಃ । ಸರ್ವೇಷಾಂ ಮಹಾಫಲಪ್ರದಾತಾರಂ ಪ್ರಶಂಸತಿ । ಭಗವದ್ವಿಜ್ಞಾನಾದೇವ ಸರ್ವಂ ಜ್ಞಾತಂ ಭವತೀತಿ ಸ್ತೌತಿ ॥ ೯೭೮-೯೭೯ ॥

**ವಿವರಣೆ–** ಸಾದೃಶ್ಯ ಮತ್ತು ಆಶ್ರಿತತ್ವಗಳಿಂದ ಏಕವಿಜ್ಞಾನದಿಂದ ಸರ್ವವಿಜ್ಞಾನವನ್ನು ಕೂಡಿಸಿದಂತೆ, ಸ್ವಾತಂತ್ರ್ಯ ಮತ್ತು ಪ್ರಾಧಾನ್ಯದಿಂದಲೂ ಏಕವಿಜ್ಞಾನದಿಂದ

ಸರ್ವವಿಜ್ಞಾನವನ್ನು ಕೂಡಿಸಬಹುದು ಎಂದು ಇಲ್ಲಿ ಪ್ರತಿಪಾದಿಸುತ್ತಾರೆ. ಜಗತ್ತಿನಜ್ಞಾನದಿಂದ ಬರುವ ಫಲವು ಬ್ರಹ್ಮಜ್ಞಾನದಿಂದ ಸುತರಾಂ ಬರುವುದರಿಂದ ಬ್ರಹ್ಮನು ಪ್ರಧಾನನಾದವನು ಮತ್ತು ಪವಿತ್ರನಾದವನು ಎಂದು ಶ್ರುತಿಯು ಅವನನ್ನು ಈ ರೀತಿಯಿಂದ ಪ್ರಶಂಸಿಸುತ್ತದೆ ಎಂದು ಅಭಿಪ್ರಾಯ.

**ಅಮುಖ್ಯೋಽರ್ಥೋಽಪಿ ಮುಖ್ಯಾರ್ಥಗುಣಲಾಭಾಯ ಕಥ್ಯತೇ ॥ ೯೮೦ ॥**

**ಅರ್ಥ–** ಮುಖ್ಯಾರ್ಥಗುಣಲಾಭಾಯ= ಮುಖ್ಯಾರ್ಥದಲ್ಲಿರುವ ಗುಣದ ಲಾಭಕ್ಕಾಗಿ, ಅಮುಖ್ಯಾರ್ಥೋಽಪಿ= ಅಮುಖ್ಯಾರ್ಥವೂ ಸಹ, ಕಥ್ಯತೇ= ಹೇಳಲ್ಪಡುತ್ತದೆ.

**ಅನುವಾದ–** ಮುಖ್ಯಾರ್ಥದಲ್ಲಿರುವ ವಿಶೇಷ ಗುಣವನ್ನು ಹೇಳುವುದಕ್ಕಾಗಿ ಕೆಲವು ಸಲ ಅಮುಖ್ಯಾರ್ಥವೂ ಶಬ್ದದಿಂದ ಹೇಳಲ್ಪಡುತ್ತದೆ.

**ಭಾವವಿಲಾಸಿನೀ–** ನನು ತರ್ಹಿ ಸರ್ವಸ್ಯ ಜ್ಞಾನೇ ಯತ್‌ಫಲಂ ತದ್ಭವತೀತ್ಯನುಕ್ತ್ವಾ ಸರ್ವಸ್ಯ ಜ್ಞಾನಂ ಭವತೀತಿ ಶ್ರುತೌ ಲಾಕ್ಷಣಿಕ ಪ್ರಯೋಗಃ ಕಿಂನಿಮಿತ್ತ ಇತ್ಯತಃ ಸರ್ವತ್ರ ಲಾಕ್ಷಣಿಕಾದ್ಯ-ಮುಖ್ಯಪ್ರಯೋಗಸ್ಯ ಬೀಜಮಾಹ – ಅಮುಖ್ಯ ಇತಿ ॥ ಮುಖ್ಯಾರ್ಥಗುಣಲಾಭಾಯೇತ್ಯ-ಮುಖ್ಯಾರ್ಥ ಗುಣಲಾಭಸ್ಯಾಪ್ಯುಪಲಕ್ಷಣಮ್ । ಪ್ರಕೃತೇ ಮುಖ್ಯಾರ್ಥಭೂತೇ ಸರ್ವಜ್ಞಾನೇ ಭಗವತ್‌ಜ್ಞಾನಾದಪ್ರಧಾನತ್ವಾಖ್ಯಗುಣಲಾಭಾತ್ಸ ಏವೋಕ್ತಃ । ಗಂಗಾಯಾಂ ಘೋಷ ಇತ್ಯಾದೌ ಅಮುಖ್ಯಾರ್ಥೇಽಪಿ ಗುಣಲಾಭಃ ॥ ೯೮೦ ॥

**ವಿವರಣೆ–** ಹಾಗಾದರೆ ಸರ್ವಜ್ಞಾನದಿಂದ ಏನು ಫಲವೋ ಅದು ಬ್ರಹ್ಮಜ್ಞಾನದಿಂದ ಉಂಟಾಗುತ್ತದೆ ಎಂದೇ ವೇದವಾಕ್ಯವು ಹೇಳಬೇಕಾಗಿದ್ದಿತು. ಶ್ರುತಿಯು ಹಾಗಿಲ್ಲದೆ ಏಕವಿಜ್ಞಾನದಿಂದ ಸರ್ವವಿಜ್ಞಾನವನ್ನು ಹೇಳುತ್ತಿದೆ. ಇಂತಹ ಲಾಕ್ಷಣಿಕ ಪ್ರಯೋಗವು ಏಕೆ? ಎಂಬ ಶಂಕೆಗೆ ಇಲ್ಲಿ ಉತ್ತರವನ್ನು ಹೇಳುತ್ತಾರೆ. ಮುಖ್ಯಾರ್ಥದಲ್ಲಿ ವಿಶೇಷ ಲಾಭಕ್ಕಾಗಿ ಎನ್ನುವುದು ಉಪಲಕ್ಷಣ. ಕೆಲವು ಸಲ ಕೆಲವು ಕಡೆಯಲ್ಲಿ ಅಮುಖ್ಯಾರ್ಥದಲ್ಲಿಯೇ ವಿಶೇಷವಾದ ಲಾಭಕ್ಕಾಗಿಯೂ ಲಾಕ್ಷಣಿಕ ಪ್ರಯೋಗವನ್ನು ಮಾಡುತ್ತಾರೆ ಎಂದೂ ಇಟ್ಟುಕೊಳ್ಳಬೇಕು. ಪ್ರಕೃತದಲ್ಲಿ ಸರ್ವಜ್ಞಾನವು ಸರ್ವಂ ವಿಜ್ಞಾತಂ ಭವತಿ ಎಂಬ ವಾಕ್ಯದ ಮುಖ್ಯಾರ್ಥ. ಅದು ಭಗವದ್‌ಜ್ಞಾನಕ್ಕಿಂತ ಅಪ್ರಧಾನವಾದುದು ಎಂದು ತಿಳಿಸಲು ಇಂತಹ ಲಾಕ್ಷಣಿಕ ಪ್ರಯೋಗವನ್ನು ಶ್ರುತಿಯು ಮಾಡುತ್ತದೆ. ಗಂಗಾಯಾಂ ಘೋಷಃ ಎಂಬ ಕಡೆಯಲ್ಲಿ ಮಾತ್ರ ಅಮುಖ್ಯಾರ್ಥ ತೀರದಲ್ಲಿ ಪಾವಿತ್ರ್ಯಾದಿ ಗುಣಗಳ ಲಾಭಕ್ಕೋಸ್ಕರವಾಗಿ ಗಂಗಾಪದದಿಂದ ಅಮುಖ್ಯವಾದ ತೀರವು ಹೇಳಲ್ಪಡುತ್ತದೆ.

**ಗಂಗಾಪದೇನ ತೀರಸ್ಯ ಲಕ್ಷ್ಯತ್ವೇ ತಸ್ಯ ತತ್ಪದಾತ್ ।**
**ಪಾವಿತ್ರ್ಯಮಪಿ ಯತ್ಸಿದ್ಧ್ಯೇದ್ವಾಕ್ಯಂ ಚ ಲಘು ಜಾಯತೇ ॥ ೯೮೧ ॥**

**ಅರ್ಥ–** ಗಂಗಾಪದೇನ= ಗಂಗಾಪದದಿಂದ, ತೀರಸ್ಯ ಲಕ್ಷ್ಯತ್ವೇ= ತೀರವು ಲಕ್ಷ್ಯವಾದರೆ, ತಸ್ಯ= ಆ ತೀರಕ್ಕೆ, ತತ್ಪದಾತ್= ಗಂಗಾಪದದಿಂದ, ಪಾವಿತ್ರ್ಯಮಪಿ= ಪಾವಿತ್ರ್ಯವೂ ಕೂಡ, ಯತ್ಸಿದ್ಧ್ಯೇತ್= ಯಾವ ಕಾರಣದಿಂದ ಸಿದ್ಧವಾಗುತ್ತದೆಯೋ, ವಾಕ್ಯಂ ಚ= ವಾಕ್ಯವೂ ಸಹ, ಲಘು ಜಾಯತೇ= ಅಲ್ಪಪದಗಳುಳ್ಳದ್ದಾಗುತ್ತದೆಯೋ (ಆ ಕಾರಣದಿಂದ ಅಮುಖ್ಯ ಪ್ರಯೋಗವನ್ನು ಮಾಡುತ್ತಾರೆ).

**ಅನುವಾದ–** ಗಂಗಾಪದಕ್ಕೆ ತೀರದಲ್ಲಿ ಲಕ್ಷಣಾವನ್ನು ಆಶ್ರಯಿಸಿದರೆ ತೀರಕ್ಕೆ ಗಂಗಾಪದದಿಂದ ಪಾವಿತ್ರ್ಯವೂ ಸಿದ್ಧವಾಗುತ್ತದೆ, ಗಂಗಾತೀರದ ಶಬ್ದದ ಬದಲು ಗಂಗಾ ಶಬ್ದವನ್ನು ಉಪಯೋಗಿಸುವುದರಿಂದ ವಾಕ್ಯವೂ ಲಘುವಾಗುತ್ತದೆ. ( ಈ ಎರಡು ಕಾರಣಗಳಿಂದ ಅಮುಖ್ಯ ಪ್ರಯೋಗವು ಆಶ್ರಯಿಸಲ್ಪಡುತ್ತದೆ).

**ಭಾವವಿಲಾಸಿನೀ–** ತದೇವ ದರ್ಶಯತಿ – ಗಂಗಾಪದೇನೇತಿ ॥ ತಸ್ಯ ತೀರಸ್ಯ । ತತ್ಪದಾತ್ ಗಂಗಾಪದಾತ್ । ಲಕ್ಷ್ಯತ್ವೇ ಯದ್ಯಸ್ಮಾತ್ । ತರ್ಹಿ ಗಂಗಾತೀರೇ ಘೋಷ ಇತ್ಯಾದ್ಯೇವ ವಾಕ್ಯಮಸ್ತು । ಕಸ್ಮಾದಮುಖ್ಯವೃತ್ತಿರಾಶ್ರೀಯತ ಇತ್ಯತ ಆಹ – ವಾಕ್ಯಂ ಚೇತಿ ॥ ೯೮೧ ॥

**ವಿವರಣೆ–** ಶಬ್ದಲಾಘವ ಮತ್ತು ಅನೇಕ ಅರ್ಥ ಬೋಧ ಈ ಎರಡು ಉದ್ದೇಶದಿಂದ ಲೋಕದಲ್ಲಿ ಅಮುಖ್ಯ ವೃತ್ತಿಯು ಆಶ್ರಯಿಸಲ್ಪಡುತ್ತದೆ ಎಂದು ಅಭಿಪ್ರಾಯ.

**ಯದಲ್ಪಪದವಾಕ್ಯೇನ ಬಹೋರ್ಮುಖ್ಯಾರ್ಥಯೋಗಿನಃ ।**
**ಅರ್ಥಸ್ಯ ವಕ್ತ್ರೀ ತದ್ವೃತ್ತಿರಿಯಂ ಲೋಕಮತಾ ಮತಾ ॥ ೯೮೨ ॥**

**ಅರ್ಥ–** ಯತ್= ಯಾವ ಕಾರಣದಿಂದ, ಅಲ್ಪಪದವಾಕ್ಯೇನ= ಅಲ್ಪಪದವುಳ್ಳ ವಾಕ್ಯದಿಂದ, ಮುಖ್ಯಾರ್ಥಯೋಗಿನಃ= ಮುಖ್ಯಾರ್ಥ ಸಂಬಂಧವುಳ್ಳ, ಬಹೋಃ ಅರ್ಥಸ್ಯ= ಅನೇಕಾರ್ಥಗಳನ್ನು, ವಕ್ತ್ರೀ= ಹೇಳುತ್ತದೆಯೋ, ತತ್= ಆ ಕಾರಣದಿಂದ, ಲೋಕಮತಾ= ಲೋಕ ಸಮ್ಮತವಾದ, ಇಯಂ ವೃತ್ತಿಂ= ಈ ಅಮುಖ್ಯ ವೃತ್ತಿಯು, ಮತಾ= ಗೌರವಿಸಲ್ಪಡುತ್ತದೆ.

**ಅನುವಾದ–** ಯಾವ ಕಾರಣದಿಂದ ಅಲ್ಪಪದವುಳ್ಳ ವಾಕ್ಯದಿಂದಲೇ ಮುಖ್ಯಾರ್ಥ ಸಂಬಂಧಿಯಾದ (ಕೆಲವು ಕಡೆ ಮುಖ್ಯಾರ್ಥ ಸಂಬಂಧಿಯಲ್ಲಿರುವ) ಅನೇಕ ಗುಣಗಳನ್ನು ಹೇಳುತ್ತದೆಯೋ ಆದ್ದರಿಂದ ಲೋಕಸಮ್ಮತವಾದ ಈ ಅಮುಖ್ಯವೃತ್ತಿಯು ಗೌರವಿಸಲ್ಪಡುತ್ತದೆ.

**ಭಾವವಿಲಾಸಿನೀ–** ಯದ್ಯಸ್ಮಾತ್ । ಮುಖ್ಯಾರ್ಥಯೋಗಿನ ಇತಿ ಪ್ರಕೃತಾಪೇಕ್ಷಯಾ । ಅರ್ಥಸ್ಯ ಪ್ರಯೋಜನಸ್ಯ । ತತ್ತಸ್ಮಾತ್ । ಗಂಗಾತೀರೇ ಘೋಷ ಇತ್ಯತೋ ಗಂಗಾಯಾಂ ಘೋಷ ಇತ್ಯಸ್ಯ, ಸಿಂಹಸದೃಶೋ ದೇವದತ್ತ ಇತ್ಯತೋ ಸಿಂಹೋ ದೇವದತ್ತ ಇತ್ಯಸ್ಯ ಸರ್ವಜ್ಞಾನಫಲಂ ಭವತೀತ್ಯತಃ

ಸರ್ವಂ ಜ್ಞಾತಮಿತ್ಯಸ್ಯ ಚ ಲಘುತ್ವಾತ್ ವಾಕ್ಯಲಾಘವಾಯ ಗುಣಲಾಭಾಯ ಚಾಮುಖ್ಯಾ-ವೃತ್ತಿರಿತಿ ಭಾವಃ ॥ ೯೮೨ ॥

ಕಿಂಚ ಬ್ರಹ್ಮಣಿ ವಿಜ್ಞಾತೇ ಸತಿ ತಸ್ಯ ಪ್ರಸಾದತಃ ।
ಸಾರ್ವಜ್ಞ್ಯಂ ಜಾಯತೇ ನೃಣಾಮಿತಿ ಸರ್ವಸ್ಯ ಸಂಮತಮ್ ॥ ೯೮೩ ॥

**ಅರ್ಥ–** ಕಿಂಚ= ಮತ್ತು, ಬ್ರಹ್ಮಣಿ ವಿಜ್ಞಾತೇ ಸತಿ= ಬ್ರಹ್ಮನು ಜ್ಞಾತನಾದರೆ, ತಸ್ಯ ಪ್ರಸಾದತಃ= ಅವನ ಅನುಗ್ರಹದಿಂದ, ನೃಣಾಂ= ಜೀವರಿಗೆ, ಸಾರ್ವಜ್ಞ್ಯಂ ಜಾಯತೇ= ಸರ್ವಜ್ಞತ್ವವು ಉಂಟಾಗುತ್ತದೆ, ಇತಿ= ಎಂದು, ಸರ್ವಸ್ಯ ಸಮ್ಮತಂ= ಎಲ್ಲರಿಗೂ ಸಮ್ಮತವಾದುದು.

**ಅನುವಾದ–** ಬ್ರಹ್ಮಜ್ಞಾನವು ಉಂಟಾದರೆ ಅವನ ಅನುಗ್ರಹದಿಂದ ಜೀವರಿಗೆ ಸರ್ವಜ್ಞತ್ವವು ಉಂಟಾಗುತ್ತದೆ ಎಂಬುದು ಎಲ್ಲರಿಗೂ ಸಮ್ಮತವಾದುದು.

**ಭಾವವಿಲಾಸಿನೀ–** ಶ್ರುತೇರತಿಸ್ಪಷ್ಟಮರ್ಥಾಂತರಂ ಚಾಹ – ಕಿಂಚೇತಿ ॥ ನೃಣಾಂ ಸನಕ-ನಾರದಾದೀನಾಮ್ । ಇತಿ ಇದಂ ಪ್ರಮೇಯಮ್ ॥ ೯೮೩ ॥

**ವಿವರಣೆ–** ಗೀತೆಯಲ್ಲಿ 'ಯೋಮಾಮೇವಮಸಂ ಮೂಢೋ ಜಾನಾತಿ ಪುರುಷೋತ್ತಮಮ್ ಸ ಸರ್ವವಿತ್' ಎಂಬಲ್ಲಿ ಕೃಷ್ಣನೇ ಯಾವನು ನನ್ನನ್ನು ಪುರುಷೋತ್ತಮನೆಂದು ತಿಳಿಯುತ್ತಾನೆಯೋ ಅವನು ಸರ್ವಜ್ಞನಾದವನು ಎಂದು ಹೇಳಿರುವುದನ್ನು ಇಲ್ಲಿ ಸೂಚಿಸುತ್ತಾರೆ.

ಅತಃ ಶ್ರುತಿರಿಯಂ ಸಾಧ್ವೀ ಬ್ರವೀತ್ಯಖಿಲಸಂಮತಂ ।
ಇದಮೇವಾರ್ಥಮಿತ್ಯಾಸೀತ್ ಸರ್ವಂ ಶ್ರುತಿಮನೋಹರಮ್॥ ೯೮೪ ॥

**ಅರ್ಥ–** ಅತಃ= ಆದ್ದರಿಂದ, ಸಾಧ್ವೀ ಇಯಂ ಶ್ರುತಿಃ= ಸಾಧ್ವಿಯಾದ ಈ ಶ್ರುತಿಯು, ಅಖಿಲ ಸಂಮತಂ= ಎಲ್ಲರಿಗೂ ಸಮ್ಮತವಾದ, ಇಮಮೇವಾರ್ಥಂ= ಈ ಅರ್ಥವನ್ನೇ, ಬ್ರವೀತಿ= ಹೇಳುತ್ತದೆ ಎಂದು, ಶ್ರುತಿಮನೋಹರಂ= ಕೇಳುವುದಕ್ಕೂ ಇಂಪಾದ, ಸರ್ವಂ ಆಸೀತ್= ಎಲ್ಲವೂ ಆಯಿತು.

**ಅನುವಾದ–** ಆದ್ದರಿಂದ ಸಾಧ್ವಿಯಾದ ಈ ಶ್ರುತಿಯು ಅಖಿಲ ಸಮ್ಮತವಾದ ಮತ್ತು ಶ್ರೋತ್ರೇಂದ್ರಿಯಕ್ಕೆ ಸಂತೋಷದಾಯಕವಾದ ಈ ಅರ್ಥವನ್ನೇ ಹೇಳಿತು ಎಂದು ಸರ್ವಪ್ರಮೇಯವೂ ಸಿದ್ಧವಾಯಿತು.

**ಭಾವವಿಲಾಸಿನೀ–** ಅತಃ ಸರ್ವಜನಸಮ್ಮತತ್ವಾತ್ । ಇತಿ ಅನೇನ ಪ್ರಕಾರೇಣ । ಸರ್ವಂ ಪ್ರಮೇಯಮ್ ॥ ೯೮೪ ॥

ಸರ್ವಕರ್ತೃತ್ವಸಾರ್ವಜ್ಞ್ಯಸರ್ವೇಶತ್ವಾದಿಸದ್ಗುಣೈಃ ।
ಸಹಿತಸ್ಯ ಹರೇರ್ಜ್ಞಾನೇ ಸರ್ವಂ ಚ ಜ್ಞಾಯತೇ ಯತಃ ॥ ೯೮೫ ॥

ಅತೋಽಪ್ಯೇಕಸ್ಯ ವಿಜ್ಞಾನೇ ಸರ್ವಜ್ಞಾನಂ ಭವೇನ್ಮಮ ।
ನಿರ್ವಿಕಲ್ಪಕಚಿನ್ಮಾತ್ರಜ್ಞಾನೇ ತೇಽಜ್ಞ ಕುತೋಽನ್ಯದೃಕ್ ॥ ೯೮೬ ॥

**ಅರ್ಥ–** ಯತಃ= ಯಾವ ಕಾರಣದಿಂದ, ಸರ್ವಕರ್ತೃತ್ವಸಾರ್ವಜ್ಞ್ಯ ಸರ್ವೇಶತ್ವಾದಿ-ಸದ್ಗುಣೈಃ= ಸರ್ವಕರ್ತೃತ್ವ, ಸರ್ವಜ್ಞತ್ವ, ಸರ್ವೇಶ್ವರತ್ವ ಮೊದಲಾದ ಸದ್ಗುಣಗಳಿಂದ, ಸಹಿತಸ್ಯ= ಸಹಿತನಾದ, ಹರೇರ್ಜ್ಞಾನೇ= ಹರಿಯ ಜ್ಞಾನವುಂಟಾದರೆ, ಸರ್ವಂ ಚ= ಎಲ್ಲವೂ, ಜ್ಞಾಯತೇ= ತಿಳಿಯಲ್ಪಡುತ್ತದೆಯೋ, ಅತೋಪಿ= ಆ ಕಾರಣದಿಂದಲೂ, ಮಮ= ನನಗೆ, ಏಕಸ್ಯ ವಿಜ್ಞಾನೇ= ಏಕವಿಜ್ಞಾನದಿಂದ, ಸರ್ವಜ್ಞಾನಂ ಭವೇತ್= ಸರ್ವಜ್ಞಾನವು ಉಪಪನ್ನವಾಗುತ್ತದೆ, ಅಜ್ಞ= ಎಲೈ ಮೂಢನೇ, ತೇ= ನಿನಗೆ, ನಿರ್ವಿಕಲ್ಪಕಚಿನ್ಮಾತ್ರಜ್ಞಾನೇ= ಚೈತನ್ಯವಿಷಯಕವಾದ ನಿರ್ವಿಕಲ್ಪಕ ಜ್ಞಾನವು ಉಂಟಾದರೆ, ಅನ್ಯದೃಕ್= ಅನ್ಯ ವಿಷಯಕ ಜ್ಞಾನವು, ಕುತಃ= ಹೇಗೆ ಆಗುತ್ತದೆ?

**ಅನುವಾದ–** ಸರ್ವಕರ್ತೃತ್ವ, ಸರ್ವಜ್ಞತ್ವ, ಸರ್ವೇಶ್ವರತ್ವಾದಿ ಸದ್ಗುಣಗಳಿಂದ ಸಹಿತನಾದ ಹರಿಯ ಜ್ಞಾನವುಂಟಾದರೆ ಸರ್ವವೂ ಜ್ಞಾತವಾಗುವ ಕಾರಣದಿಂದ ನನ್ನ ಮತದಲ್ಲಿ ಏಕವಿಜ್ಞಾನದಿಂದ ಸರ್ವವಿಜ್ಞಾನವು ಕೂಡುತ್ತದೆ. ಎಲೈ ಮೂಢನೇ! ನಿನ್ನ ಚೈತನ್ಯ ವಿಷಯಕವಾದ ನಿರ್ವಿಕಲ್ಪಕ ಜ್ಞಾನದಲ್ಲಿ ಅನ್ಯಜ್ಞಾನವು (ಅನ್ಯ ವಿಷಯಕತ್ವವು) ಹೇಗೆ ಉಂಟಾಗುತ್ತದೆ?

**ಭಾವವಿಲಾಸಿನೀ– ಅರ್ಥಾಂತರಾಣಿ ಚಾಹ – ಸರ್ವಕರ್ತೃತ್ವೇತಿ ॥ ೯೮೫-೯೮೬ ॥**

**ವಿವರಣೆ–** ಸರ್ವಕರ್ತೃತ್ವಾದಿಗಳು ದೇವರ ಧರ್ಮಗಳು. ಆ ಧರ್ಮಗಳ ಜ್ಞಾನವು ಬರುವಾಗ ಅಲ್ಲಿಯೂ ಸಹ ವಿಶೇಷಣವಾದ ಸರ್ವಪದಾರ್ಥದ ಜ್ಞಾನವು ಬರುತ್ತದೆ. ಆದರೆ ಅದ್ವೈತಿಗಳು ಒಪ್ಪುವ ಬ್ರಹ್ಮಜ್ಞಾನವು ನಿರ್ವಿಕಲ್ಪಕವಾದ ಚರಮಸಾಕ್ಷಾತ್ಕಾರ ರೂಪವಾದುದು. ಅದಕ್ಕೆ ಚಿನ್ಮಾತ್ರವೇ ವಿಷಯ. ಬೇರೆ ಯಾವುದೂ ವಿಷಯವಲ್ಲ. ಹೀಗಿರುವಾಗ ಅಂತಹ ಚರಮ ಸಾಕ್ಷಾತ್ಕಾರ ರೂಪವಾದ ಏಕಜ್ಞಾನವು ಇರುವಾಗ ಅನ್ಯಜ್ಞಾನವು ಹೇಗೆ ಉಂಟಾಗುತ್ತದೆ ಎಂದು ಇಲ್ಲಿ ಆಕ್ಷೇಪಿಸುತ್ತಾರೆ.

ಬರ್ಹಿಷ್ಮನ್ನೇತದಾಖ್ಯಾನಂ ಪರೋಕ್ಷೇಣ ಪ್ರಕೀರ್ತಿತಮ್ ।
ಯತ್ಪರೋಕ್ಷಪ್ರಿಯೋ ದೇವೋ ಭಗವಾನ್ ವಿಶ್ವಭಾವನಃ ॥ ೯೮೭ ॥

ಇತಿಭಾಗವತೋಕ್ತ್ಯಾ ಚ ಕ್ವಚಿದ ಅ ವಾಗ್ವೃತ್ತಿರೀದೃಶೀ ।
ಶ್ರುತೀನಾಂ ಚ ಸ್ಮೃತೀನಾಂ ಚ ತತ್ವಂ ಗೂಹಯಿತುಂ ಮಹತ್ ॥ ೯೮೮ ॥

**ಅರ್ಥ–** ಬರ್ಹಿಷ್ಮನ್= ಎಲೈ ಪ್ರಾಚೀನ ಬರ್ಹಿಯೇ, ಏತದಾಖ್ಯಾನಂ= ಈ ಆಖ್ಯಾನವು ನನ್ನಿಂದ, ಪರೋಕ್ಷೇಣ= ಪರೋಕ್ಷವಾಗಿ, ಪ್ರಕೀರ್ತಿತಂ= ಹೇಳಲ್ಪಟ್ಟಿದೆ, ಯತ್= ಏಕೆಂದರೆ, ವಿಶ್ವ ಭಾವನಃ= ಜಗತ್ಕರ್ತನಾದ, ಭಗವಾನ್ ದೇವಃ= ಷಡ್ಗುಣೈಶ್ವರ್ಯ ಸಂಪನ್ನನಾದ ನಾರಾಯಣನು, ಪರೋಕ್ಷ ಪ್ರಿಯಃ= ಪರೋಕ್ಷ ಕಥನದಲ್ಲಿ ಪ್ರೀತಿಯುಳ್ಳವನು, ಇತಿ ಭಾಗವತೋಕ್ತ್ಯಾ ಚ= ಎಂಬ ಭಾಗವತದ ವಚನದಿಂದಲೂ ಸಹ, ಶ್ರುತೀನಾಂ ಚ= ಸ್ಮೃತೀನಾಂ ಚ= ಶ್ರುತಿಗಳ ಮತ್ತು ಸ್ಮೃತಿಗಳ, ಮಹತ್ ತತ್ತ್ವಂ= ಶ್ರೇಷ್ಠವಾದ ತತ್ವಗಳನ್ನು, ಗೂಹಯಿತುಂ= ಮುಚ್ಚಿಡಲು, ಕ್ವಚಿತ್= ಕೆಲವೊಮ್ಮೆ, ಈದೃಶೀ= ಇಂತಹ, ವಾಗ್ವೃತ್ತಿಃ= ಅಮುಖ್ಯವೃತ್ತಿಯು ಇರುತ್ತದೆ.

**ಅನುವಾದ– ಎಲೈ ಪ್ರಾಚೀನ ಬರ್ಹಿಯೇ! ಜಗತ್ಕರ್ತನಾದ ಷಡ್ಗುಣೈಶ್ವರ್ಯ ಸಂಪನ್ನನಾದ ನಾರಾಯಣನು ಪರೋಕ್ಷ ಪ್ರಿಯನಾದುದರಿಂದ ನಾನು ಈ ವಿಷಯವನ್ನು ಪರೋಕ್ಷವಾಗಿ ಹೇಳಿದ್ದೇನೆ ಎಂಬ ಭಾಗವತ ವಚನದಿಂದಲೂ ಶ್ರುತಿಗಳ ಮತ್ತು ಸ್ಮೃತಿಗಳ ಶ್ರೇಷ್ಠವಾದ ತತ್ವವನ್ನು ರಹಸ್ಯವಾಗಿಡಲು ಕೆಲವೊಮ್ಮೆ ಇಂತಹ ಅಮುಖ್ಯವೃತ್ತಿಯು ಆಶ್ರಯಿಸಲ್ಪಡುತ್ತದೆ ಎಂದು ಸಿದ್ಧವಾಗುತ್ತದೆ.**

**ಭಾವವಿಲಾಸಿನೀ–** ಮಮ ಮತೇ ಶ್ರುತೀನಾಂ ಸ್ಮೃತೀನಾಂ ಚ ಪ್ರಾಯೋ ನಿಗೂಹಿತಾರ್ಥತ್ವಮೇವ ಸ್ವಭಾವಃ । ಅತಃ ಸರ್ವತ್ರ ವಿರುದ್ಧಾಪಾತಾರ್ಥೇ ಭರೋ ನ ಕರ್ತವ್ಯ ಇತ್ಯತ್ರ ಪ್ರಾಗುಕ್ತಸ್ಮೃತಿಂ ಸ್ಮಾರಯತಿ ॥ ಬರ್ಹಿಷ್ಮನ್ನಿತಿ ॥ ೯೮೭-೯೮೮ ॥

**ವಿವರಣೆ–** ಇದು ಪುರಂಜನೋಪಾಖ್ಯಾನದಲ್ಲಿ ನಾರದರು ಪ್ರಾಚೀನ ಬರ್ಹಿಗೆ ಹೇಳುವ ಮಾತು. ಈ ಪುರಂಜನೋಪಾಖ್ಯಾನವನ್ನು ನಾರದರು ಒಗಟಿನ ರೀತಿಯಲ್ಲಿಯೇ ತಾವು ಹೇಳುವುದಕ್ಕೆ ಕಾರಣವನ್ನು ಹೇಳುತ್ತಿದ್ದಾರೆ. ಈ ರೀತಿಯ ಕಥನವು ಹರಿಗೆ ಪ್ರಿಯವಾದುದರಿಂದ ನಾನು ಎಲ್ಲವನ್ನೂ ಒಗಟಿನ ರೀತಿಯಲ್ಲಿಯೇ ಹೇಳಿದ್ದೇನೆ ಎಂದು ಅಭಿಪ್ರಾಯ. ಒಗಟುಗಳನ್ನು ಬಿಡಿಸಲು ಆಪಾತಪ್ರತೀತವಾದ ಅರ್ಥವನ್ನು ಬಿಟ್ಟು ಅಮುಖ್ಯವೃತ್ತಿಯನ್ನು ಆಶ್ರಯಿಸಿ ಬೇರೆ ಅರ್ಥವನ್ನೇ ಮಾಡಬೇಕು. ಆದ್ದರಿಂದಲೂ ಶ್ರುತಿ ಸ್ಮೃತಿಗಳಲ್ಲಿ ಅಮುಖ್ಯವೃತ್ತಿಯನ್ನು ಆಶ್ರಯಿಸಿದ ಇಂತಹ ಪ್ರಯೋಗಗಳು ಇರುತ್ತವೆ ಎಂದು ಅಭಿಪ್ರಾಯ.

**ತಥಾ ತತ್ತ್ವಮಸೀತ್ಯಾಹ ಶ್ರುತಿರ್ಬ್ರಹ್ಮಸದೃಕ್ಷತಾಂ ।**
**ಗುಣೈಃ ಕತಿಪಯೈರ್ವಕ್ತುಂ ಲೋಕವೇದಾನುಸಾರಿಣೇ ॥ ೯೮೯ ॥**

**ಅರ್ಥ–** ತಥಾ= ಅದರಂತೆಯೇ, ಲೋಕವೇದಾನುಸಾರಿಣೇ= ಲೋಕಕ್ಕೆ ಮತ್ತು ವೇದಕ್ಕೆ ಅನುಸಾರಿಯಾದ. ಶ್ರುತಿಃ= ಶ್ರುತಿಯು, ಕತಿಪಯೈಃ ಗುಣೈಃ= ಕೆಲವು ಗುಣಗಳಿಂದ, ಬ್ರಹ್ಮಸದೃಕ್ಷತಾಂ= ಬ್ರಹ್ಮಸಾದೃಶ್ಯವನ್ನು ವಕ್ತುಂ= ಹೇಳಲು, ತತ್ತ್ವಮಸಿ ಇತಿ= ತತ್ತ್ವಮಸಿ ಎಂದು, ಆಹ= ಹೇಳಿದೆ.

**ಅನುವಾದ–** **ಲೋಕವೇದಾನುಸಾರಿಯಾದ ಶ್ರುತಿಯು ಜೀವನಿಗೆ ಕೆಲವು ಗುಣಗಳಿಂದ ಮಾತ್ರ ಬ್ರಹ್ಮನ ಸಾದೃಶ್ಯವಿದೆ ಎಂದು ಹೇಳಲು 'ತತ್ತ್ವಮಸಿ' ನೀನೇ ಬ್ರಹ್ಮನು) ಎಂದು ಹೇಳುತ್ತದೆ.**

**ಭಾವವಿಲಾಸಿನೀ–** ತಥಾ ಸಿಂಹೋ ದೇವದತ್ತ ಇತಿ ವಾಕ್ಯವತ್ । ಬ್ರಹ್ಮಸದೃಕ್ಷತಾಂ ಜೀವಸ್ಯ ಕತಿಪಯೈರ್ಗುಣೈರ್ಬ್ರಹ್ಮಸಮಾನತಾಂ ವಕ್ತುಂ ಶ್ರುತಿಸ್ತತ್ತ್ವಮಸೀತ್ಯಾಹೇತಿ ಯೋಜನಾ । ಲೋಕ-ವೇದಾನುಸಾರಿಣೇತ್ಯನೇನ ನೇದಂ ವ್ಯಾಖ್ಯಾನಮಪೂರ್ವಮಿತಿ ಸೂಚಯತಿ ॥ ೯೮೯ ॥

**ವಿವರಣೆ–** ತತ್ತ್ವಮಸಿ ಎಂಬಲ್ಲಿಯೂ ಅಮುಖ್ಯವೃತ್ತಿಯೇ ಇದೆ. ಸಿಂಹೋ ದೇವದತ್ತಃ ಎಂಬಲ್ಲಿ ಹೇಗೆ ದೇವದತ್ತನು ಸಿಂಹ ಸದೃಶ ಎಂದು ಅರ್ಥವಾಗುತ್ತದೆಯೋ, ಅದರಂತೆ ನೀನು ಬ್ರಹ್ಮ ಎಂದು ಹೇಳಿದರೆ, ನೀನು ಬ್ರಹ್ಮಸದೃಶ ಎಂದು ಅರ್ಥವಾಗುತ್ತದೆ. ಆದ್ದರಿಂದ ಇಂತಹ ಪ್ರಯೋಗವು ಲೋಕವೇದಾನುಸಾರಿಯಾಗಿದೆ ಎಂದು ಅಭಿಪ್ರಾಯ.

**ಅತಿಶೂರಂ ನರಂ ಪ್ರಾಹುಃ ಶಾರ್ದೂಲ ಇತಿ ಯಜ್ಜನಾಃ ।**
**ಅಗ್ನಿರ್ಮಾಣವಕಶ್ಚೇತಿ ಯಸ್ಮಾದ್ ವಾಕ್‌ಚಾಸ್ತಿ ವೈದಿಕೀ ॥ ೯೯೦ ॥**

**ಅರ್ಥ–** ಯತ್= ಯಾವ ಕಾರಣದಿಂದ, ಜನಾಃ= ಜನರು, ಅತಿಶೂರಂ ನರಂ= ಅತಿಶೂರನಾದ ಮನುಷ್ಯನನ್ನು, ಶಾರ್ದೂಲ ಇತಿ ಪ್ರಾಹುಃ= ಶಾರ್ದೂಲನೆಂದು ಹೇಳುತ್ತಾರೆಯೋ, ಯಸ್ಮಾತ್= ಯಾವ ಕಾರಣದಿಂದ, ಅಗ್ನಿರ್ಮಾಣವಕಃ= ಮಾಣವಕನು ಅಗ್ನಿ ಎಂಬ, ವೈದಿಕೀ= ವೇದದ, ವಾಕ್ ಚ= ವಾಕ್ಯವೂ ಸಹ, ಅಸ್ತಿ= ಇದೆಯೋ (ಆದ್ದರಿಂದ ಸಾದೃಶ್ಯದಲ್ಲಿ ಇಂತಹ ಪ್ರಯೋಗವೆಂದು ಸಿದ್ಧವಾಗುತ್ತದೆ).

**ಅನುವಾದ–** **ಲೋಕದ ಜನರು ಅತಿಶೂರನಾದ ಮನುಷ್ಯರನ್ನು ಶಾರ್ದೂಲನೆಂದು ಕರೆಯುತ್ತಾರೆ. ವೇದದಲ್ಲಿಯೂ ಸಹ ಅಗ್ನಿಸದೃಶವಾದ ತೇಜಸ್ಸುಳ್ಳ ಬ್ರಹ್ಮಚಾರಿಯನ್ನು ಅಗ್ನಿ ಎಂದು ಹೇಳುವ ಅಗ್ನಿರ್ಮಾಣವಕಃ ಎಂಬ ವಾಕ್ಯವೂ ಇದೆ. (ಆದ್ದರಿಂದ ಲೋಕವೇದಾನುಸಾರವಾಗಿ ಸಾದೃಶ್ಯವಿದ್ದಲ್ಲಿ ಅಭೇದ ಪ್ರಯೋಗವು ಇದೆ ಎಂದು ಸಿದ್ಧವಾಗುತ್ತದೆ).**

**ಭಾವವಿಲಾಸಿನೀ–** ಯದ್ಯಸ್ಮಾತ್ ಮಾಣವಕೋ ಬ್ರಹ್ಮಚಾರೀ । ತಸ್ಮಿನ್ನಗ್ನಿವತ್ತಪಸಾ ದಾಹಕತ್ವಶಕ್ತಿ-ಬೋಧನಾಯೇತಿ ಭಾವಃ । ತಸ್ಮಾಲ್ಲೋಕವೇದಾನುಸಾರಿಣೇತಿ ಪೂರ್ವೇಣಾನ್ವಯಃ ॥೯೯೦॥

**ಅಥವಾ ಜೀವಪರಯೋರ್ಭೇದಂ ವಕ್ತುಂ ಸವಿಸ್ತರಂ ।**
**ಪ್ರಾವರ್ತತ ಶ್ರುತಿರಿಯಂ ನಾಭೇದಮಿತಿ ಮೇ ಮತಿಃ ॥ ೯೯೧ ॥**

**ಅರ್ಥ–** ಅಥವಾ= ಅಥವಾ, ಇಯಂ ಶ್ರುತಿಃ= ಈ ತತ್ತ್ವಮಸಿ ಎಂಬ ಶ್ರುತಿಯು, ಜೀವಪರಯೋಃ= ಜೀವಪರಮಾತ್ಮರಿಗೆ, ಸವಿಸ್ತರಂ= ವಿಸ್ತಾರವಾಗಿ, ಭೇದಂ ವಕ್ತುಂ=

ಭೇದವನ್ನು ಹೇಳಲು, ಪ್ರಾವರ್ತತ= ಪ್ರವೃತ್ತವಾಗಿದೆ, ಅಭೇದಂ ನ= ಅಭೇದವನ್ನು ಹೇಳಲು ಪ್ರವೃತ್ತವಾಗಿಲ್ಲ, ಇತಿ= ಎಂದು, ಮೇ ಮತಿಃ= ನನ್ನ ಅಭಿಪ್ರಾಯ.

**ಅನುವಾದ–** ಅಥವಾ 'ತತ್ತ್ವಮಸಿ' ಎಂಬ ಈ ಶ್ರುತಿಯು ವಿಸ್ತಾರವಾಗಿ ಜೀವ ಪರಮಾತ್ಮರ ಭೇದವನ್ನು ಹೇಳಲು ಪ್ರವೃತ್ತವಾಗಿದೆ. ಅಭೇದವನ್ನು ಹೇಳಲು ಪ್ರವೃತ್ತವಾಗಿಲ್ಲ ಎಂದು ನನ್ನ ಅಭಿಪ್ರಾಯ.

**ಭಾವವಿಲಾಸಿನೀ–** ಕಿಂಚ ಶ್ರುತಿಃ ಸರ್ವತ್ರ ಸ್ವಾರ್ಥಪ್ರಚ್ಯಾವನಪರಂ ಪರಂ ಬಹುಧಾಧಿಕ್ಕರ್ತುಂ ನವಭಿರ್ದೃಷ್ಟಾಂತೈರ್ಭೇದಂ ಪ್ರದರ್ಶ್ಯ ನವಧಾಽತತ್ತ್ವಮಸೀತಿ ಜೀವಬ್ರಹ್ಮಣೋರ್ಭೇದಂ ಸತಾತ್ಪರ್ಯಂ ಸಾಧಿತವತೀ । ಅತೋಽಪಿ ನೇಯಂ ಶ್ರುತಿಸ್ತವಾನುಕೂಲಾ । ತಥಾ ಹಿ । ಸ ಯಥಾ ಶಕುನಿಃ ಸೂತ್ರೇಣೇತಿ ವಾಕ್ಯೋಕ್ತಶಕುನಿಸೂತ್ರದೃಷ್ಟಾಂತೇನ ಸುಷುಪ್ತಿದಶಾಯಾಮಪಿ ಸತ್ಪದವಾಚ್ಯಪರಮಾತ್ಮನಿಯಮ್ಯಮತ ಏವ ಭಿನ್ನಂ ಜೀವಂ ಅತತ್ತ್ವಮಸೀತಿ ಪ್ರಾಗ್ಬೋಧಿತ-ವತೀ । ಪಶ್ಚಾತ್ ಯಥಾಸೋಮ್ಯ ಮಧುಮಧುಕೃತೋನಿಸ್ತಿಷ್ಠಂತೀತಿ ವಾಕ್ಯೋಕ್ತಮಧು-ಮಧುಕೃನ್ನಿದರ್ಶನೇನ ತತ್ರ ತತ್ರ ಪರಮಾತ್ಮನಾ ಸೃಷ್ಟ್ವಾ ರಕ್ಷಿತಂ ಜೀವಂ ಅತತ್ತ್ವಮಸೀತಿ ಬೋಧಿ ತವತೀ । ಪುನಃ ಇಮಾಃ ಸೋಮ್ಯ ನದ್ಯಃ ಪುರಸ್ತಾತ್ ಪ್ರಾಚ್ಯಃ ಸ್ಯಂದಂತ ಇತಿ ವಾಕ್ಯೇನ ನದೀಸಮುದ್ರದೃಷ್ಟಾಂತೇನ ಪ್ರಲಯೇ ಸರ್ವಜೀವಾನಾಮಾಧಾರಾತ್ ಸೃಷ್ಟೌ ಬಹಿರ್ನಿರ್ಗಮನೇ ಅವಧಿಭೂತಾಚ್ಚ ಹರೇರ್ಭಿನ್ನಂ ಜೀವಂ ಅತತ್ತ್ವಮಸೀತಿ ಬೋಧಿತವತೀ । ಅನಂತರಂ ಅಸ್ಯ ಸೋಮ್ಯ ಮಹತೋ ವೃಕ್ಷಸ್ಯೇತಿ ವಾಕ್ಯೇ ಜೀವನಾಮಕಪರಮಾತ್ಮಾಧೀನಶೋಷಣ-ಭಾಜನಶಾಖಾಸ್ಥಾನೀಯಂ ಜೀವಂ ದುಃಖಿತಯಾ ಪರಮಾತ್ಮನೋಽತ್ಯಂತಭಿನ್ನಂ ಜೀವಮತತ್ತ್ವಮಸೀತಿ ಬೋಧಿತವತೀ । ನ್ಯಗ್ರೋಧಫಲಮತ ಆಹರೇತಿ ವಾಕ್ಯೇ ಚ ಧಾನಾಣಿಮದೃಷ್ಟಾಂತೇನಾಣುತಯಾಽದೃಶ್ಯಾತ್ ಪರಮಾತ್ಮನೋ ದೃಶ್ಯಂ ಜೀವಂ, ಅತ ಏವ ಭಿನ್ನಂ ಅತತ್ತ್ವಮಸೀತಿ ಬೋಧಿತವತೀ । ಸರ್ವಥಾಽದೃಶ್ಯತ್ವೇಽಸತ್ತ್ವಪ್ರಸಂಗೇನ ಪುನರ್ಲವಣ-ಮೇತದುಕ್ತೇದಕೇ ವಧಾಯೇತಿ ವಾಕ್ಯೇ ಲವಣೋದಕದೃಷ್ಟಾಂತೇನ ದೃಶ್ಯಲವಣರಸೋಪೇತಾ-ದೃಶ್ಯಲವಣದ್ರವ್ಯವತ್ ದೃಶ್ಯಸ್ವಾತಂತ್ರ್ಯಾಖ್ಯಶಕ್ತಿಮತೋ ಹರೇಃ ಅಸ್ವತಂತ್ರಂ ಅತ ಏವ ಭಿನ್ನಂ ಜೀವಂ ಅತತ್ತ್ವಮಸೀತಿ ಬೋಧಿತವತೀ । ಪುನಃ ಯಥಾ ಸೋಮ್ಯ ಪುರುಷಂ ಗಂಧಾರೇಭ್ಯ ಇತಿ ವಾಕ್ಯೇ ಗಂಧಾರಪುರುಷದೃಷ್ಟಾಂತೇನ ಗುರೂಪದಿಷ್ಟಜ್ಞಾನೇನ ಲಭ್ಯಾತ್ ಪರಮಾತ್ಮನಃ ಲಬ್ಧೃಜೀವಮತ ಏವ ಭಿನ್ನಂ ಅತತ್ತ್ವಮಸೀತಿ ಬೋಧಿತವತೀ । ಪುನಃ ಪುರುಷಂ ಸೋಮ್ಯೋಪ-ತಾಪಿನಂ ಜ್ಞಾತಯಃ ಪರ್ಯುಪಾಸತ ಇತಿ ವಾಕ್ಯೇಜ್ಞಾತ್ರುಪತಾಪಿದೃಷ್ಟಾಂತೇನ ಅನುಪತಾಪಿನಃ ಪರಮಾತ್ಮನಃ ಉಪತಾಪೋಪಲಕ್ಷಿತಮರಣವಂತಂ ಜೀವಂ ಅತ ಏವ ಭಿನ್ನಮತತ್ತ್ವಮಸೀತಿ ಬೋಧಿತವತೀ । ಅಂತೇ ಪುರುಷಂ ಸೋಮ್ಯೋತ ಹಸ್ತಗೃಹೀತಮಾನಯಂತೀತಿ ವಾಕ್ಯೇ ರಾಜತಸ್ಕರಪುರುಷದೃಷ್ಟಾಂತೇನ ಅಭೇದೋಕ್ತ್ಯಾ ಸ್ವಗುಣಾಪಹಾರಕಹೀನಜೀವಾನಾಂ ಬಂಧನಹನನಾದಿಕ್ಲೇಶ ರೂಪತಮೋದಾತುರ್ಭೇದೋಕ್ತ್ಯಾ ಸ್ವಗುಣಾನ್ ಸ್ವಸ್ಮಿನ್ನೇವ ಸ್ತುವತಶ್ಚ

ಬಂಧನಹನನಾದಿವಿದೂರಮುಕ್ತಿದಾತ್ಪರಮಾತ್ಮನಃ ಸದಸದ್ಗತಿಯೋಗ್ಯಂ ಅತ ಏವ ಭಿನ್ನಜೀವಂ ಅತತ್ತ್ವಮಸೀತಿ ಬೋಧಿತವತೀ । ಗ್ರಂಥಕೃಚ್ಚ ವಿಸ್ತರಭಯಾತ್ಪರಶಂಕಾಪನೋದಾಯಕಾನಿ ಚನ್ನಿದರ್ಶನಾನಿ ವಿವೃಣ್ವನ್ ತಮೇವಾರ್ಥಂ ವಕ್ತುಮುಪಕ್ರಮತೇ ॥ **ಅಥವೇತ್ಯಾದಿನಾ** ॥ ತ್ವಂ ಅತತ್ ತಸ್ಮಾದನ್ಯದ್ವಸ್ತು ಅಸೀತಿ ಶ್ವೇತಕೇತ್ವಾಖ್ಯಜೀವಸ್ಯ ಪರಸ್ಯ ಚ ಭೇದಂ ವಕ್ತುಮಿತ್ಯರ್ಥಃ । ಅಸಮರ್ಥತ್ವದ್ಯೋತನೇನ ಗರ್ವಿಣಸ್ತಸ್ಯ ಗರ್ವಪರಿಹಾರಾಯ ನಪುಂಸಕಪ್ರಯೋಗಃ । ನವಭಿರ್ದೃಷ್ಟಾಂತೈರ್ಭೇದ ಕಥನಾತ್ ಸವಿಸ್ತರಮಿತ್ಯುಕ್ತಮ್ ॥ ೯೯೧ ॥

**ವಿವರಣೆ–** ಶ್ರುತಿಯು ಎಲ್ಲ ಕಡೆಗಳಲ್ಲಿಯೂ ತನ್ನನ್ನು ತನ್ನ ಅರ್ಥದಿಂದ ಪ್ರಚ್ಯಾವನ ಮಾಡುವ ಮಾಯಾವಾದಿಯನ್ನು ಬಹುವಿಧವಾಗಿ ಧಿಕ್ಕರಿಸಿ ಒಂಭತ್ತು ದೃಷ್ಟಾಂತಗಳಿಂದ ಭೇದವನ್ನು ಪ್ರದರ್ಶಿಸಿ, ಒಂಭತ್ತು ಬಾರಿ ಜೀವ ಬ್ರಹ್ಮರ ಭೇದವನ್ನು ತಾತ್ಪರ್ಯ ಪೂರ್ವಕವಾಗಿ ಸಾಧಿಸಿದೆ. ಆದ್ದರಿಂದಲೂ ಈ ಶ್ರುತಿಯು ಮಾಯಾವಾದಿಗಳಾದ ನಿಮಗೆ ಅನುಕೂಲವಲ್ಲ. ಅದು ಹೇಗೆಂದರೆ :- 'ಸ ಯಥಾ ಶಕುನಿಃ ಸೂತ್ರೇಣ' ಎಂಬ ವಾಕ್ಯದಲ್ಲಿ ಹೇಳಿದ ಶಕುನಿ ಸೂತ್ರ ದೃಷ್ಟಾಂತದಿಂದ ಸುಷುಪ್ತಿ ದೆಶೆಯಲ್ಲಿ ಸತ್ಪದ ವಾಚ್ಯನಾದ ಪರಮಾತ್ಮನಿಂದ ನಿಯಮ್ಯನಾದ, ಆದ್ದರಿಂದಲೇ ಭಿನ್ನನಾದ ಜೀವನನ್ನು 'ಅತತ್ತ್ವಮಸಿ' ನೀನು ಬ್ರಹ್ಮನಲ್ಲ ಎಂದು ಮೊದಲು ಬೋಧಿಸಿತು. ಅನಂತರ 'ಯಥಾ ಸೌಮ್ಯ ಮಧುಮಧುಕೃತೋ ನಿಸ್ತಿಷ್ಠಂತಿ' ಎಂಬ ವಾಕ್ಯದಲ್ಲಿ ಹೇಳಿದ ಮಧು ಮತ್ತು ಜೇನುಹುಳಗಳ ದೃಷ್ಟಾಂತದಿಂದ ಅಲ್ಲಲ್ಲಿ ಬೇರೆ ಬೇರೆ ಯೋನಿಗಳಲ್ಲಿ ಪರಮಾತ್ಮನಿಂದ ಸೃಷ್ಟನಾಗಿ ರಕ್ಷಿಸಲ್ಪಡುವ ಜೀವನನ್ನು ನೀನು ಬ್ರಹ್ಮನಲ್ಲ ಎಂದು ಬೋಧಿಸಿತು. ಅನಂತರ 'ಇಮಾಃ ಸೌಮ್ಯ ನದ್ಯಃ' ಎಂಬ ವಾಕ್ಯದಲ್ಲಿ ಹೇಳಿದ ನದೀ ಸಮುದ್ರದ ದೃಷ್ಟಾಂತದಿಂದ ಪ್ರಳಯದಲ್ಲಿ ಸರ್ವ ಜೀವರಿಗೆ ಆಧಾರವಾಗಿರುವುದರಿಂದಲೂ ಸೃಷ್ಟಿಯಲ್ಲಿ ಜೀವರು ಉದರದಿಂದ ಹೊರಗೆ ಬರುವುದಕ್ಕೆ ಅವಧಿಯಾಗಿರುವುದರಿಂದಲೂ ಹರಿಗಿಂತ ಭಿನ್ನನಾದ ಜೀವನನ್ನು ಅತತ್ತ್ವಮಸಿ ಎಂದು ಬೋಧಿಸಿತು. ಅನಂತರ 'ಅಸ್ಯ ಸೌಮ್ಯ ಮಹತೋ ವೃಕ್ಷಸ್ಯ' ಎಂಬ ವಾಕ್ಯದಲ್ಲಿ ಜೀವನಾಮಕ ಪರಮಾತ್ಮನ ಅಧೀನವಾಗಿ ಶೋಷಣಾದಿಗಳನ್ನು ಹೊಂದುವ ಶಾಖಾಸ್ಥಾನೀಯನಾದ ಜೀವನು ದುಃಖಿಯಾದ ಕಾರಣದಿಂದ ಪರಮಾತ್ಮನಿಂದ ಅತ್ಯಂತ ಭಿನ್ನನೆಂದು ಅತತ್ತ್ವಮಸಿ ಎಂದು ಬೋಧಿಸಿತು. 'ನ್ಯಗ್ರೋಧ ಫಲಮತ ಆಹರ' ಎಂಬ ವಾಕ್ಯದಲ್ಲಿ ಧಾನಾಣಿಮ ದೃಷ್ಟಾಂತದಿಂದ ಅತ್ಯಂತ ಸೂಕ್ಷ್ಮನಾಗಿ ಅದೃಶ್ಯನಾದ ಪರಮಾತ್ಮನಿಗಿಂತಲೂ ದೃಶ್ಯನಾದ ಜೀವನು ಭಿನ್ನನೆಂದು ಹೇಳಿ, ಜೀವನನ್ನು ಅತತ್ತ್ವಮಸಿ ಎಂದು ಬೋಧಿಸಿತು. ಪರಮಾತ್ಮನು ಸರ್ವಥಾ ಅದೃಶ್ಯನಾದರೆ ಅವನಿಗೆ ಅಸತ್ತ್ವ ಪ್ರಸಂಗವು ಬಂದೀತೆಂದು ಪುನಃ 'ಲವಣಮೇತದುದಕೇ ವಧಾಯ' ಎಂಬ ವಾಕ್ಯದಲ್ಲಿ ಲವಣೋದಕ ದೃಷ್ಟಾಂತವನ್ನು ಹೇಳಿ, ಲವಣರಸವು ದೃಶ್ಯವಾದರೂ ಲವಣ ದ್ರವ್ಯವು ಅದೃಶ್ಯವಾಗಿರುವಂತೆ ಜೀವನ

ಜ್ಞಾನಕ್ಕೆ ವಿಷಯವಾಗುವ ಸ್ವಾತಂತ್ರ್ಯಾದಿ ಶಕ್ತಿಯುಳ್ಳ ಹರಿಯನ್ನು ಅಸ್ವತಂತ್ರನೂ ಆದ್ದರಿಂದಲೇ ಭಿನ್ನನೂ ಆದ ಜೀವನನ್ನು ಉದ್ದೇಶಿಸಿ ಅತತ್ತ್ವಮಸಿ ಎಂದು ಬೋಧಿಸಿತು. ಅನಂತರ 'ಯಥಾ ಸೌಮ್ಯ ಪುರುಷಂ ಗಂಧಾರೇಭ್ಯಃ' ಎನ್ನುವ ವಾಕ್ಯದಲ್ಲಿ ಗಂಧಾರ ಪುರುಷ ದೃಷ್ಟಾಂತದಿಂದ ಗುರೂಪದೇಶದಿಂದ ಪಡೆದ ಜ್ಞಾನದಿಂದ ಲಭ್ಯವಾಗುವ ಪರಮಾತ್ಮನಿಗೂ ಲಬ್ಧವಾದ ಭಿನ್ನನಾದ ಜೀವನಿಗೂ ಇರುವ ಭೇದವನ್ನು ಅತತ್ತ್ವಮಸಿ ಎಂದು ಬೋಧಿಸಿತು. ಅನಂತರ 'ಪುರುಷಂ ಸೌಮ್ಯ ಉಪತಾಪಿನಂ' ಎಂಬ ವಾಕ್ಯದಲ್ಲಿ ಜ್ಞಾತಿಗಳು ಮತ್ತು ರೋಗಿಗಳ ದೃಷ್ಟಾಂತದಿಂದ ಉಪತಾಪಾದಿ ಶೂನ್ಯನಾದ ಪರಮಾತ್ಮನಿಂದ ಉಪತಾಪಾದಿ ಲಕ್ಷಣದಿಂದ ಮರಣವುಳ್ಳ ಆದ್ದರಿಂದಲೇ ಭಿನ್ನನಾದ ಜೀವನನ್ನು ಅತತ್ತ್ವಮಸಿ ಎಂದು ಬೋಧಿಸಿತು. ಕೊನೆಯಲ್ಲಿ 'ಪುರುಷಂ ಸೌಮ್ಯ ಉತ ಹಸ್ತಗೃಹೀತಂ' ಎನ್ನುವ ವಾಕ್ಯದಲ್ಲಿ ರಾಜಪುರುಷ ಮತ್ತು ಚೋರ ದೃಷ್ಟಾಂತದಿಂದ ಅಭೇದವನ್ನು ಹೇಳಿ ತನ್ನ ಗುಣಗಳನ್ನು ಅಪಹಾರ ಮಾಡುವ ಹೀನಜೀವರಿಗೆ ಬಂಧನ ಹನನಾದಿ ಕ್ಲೇಶವನ್ನು ಕೊಡುವ ಪರಮಾತ್ಮನಿಗೆ ಭೇದವನ್ನು ಹೇಳಿ ತನ್ನ ಗುಣಗಳನ್ನು ತನ್ನಲ್ಲಿಯೇ ಅನುಸಂಧಾನವನ್ನು ಮಾಡಿ ಸ್ತೋತ್ರ ಮಾಡುವ ಉತ್ತಮ ಜೀವನಿಗೆ ಬಂಧನಾದಿಗಳನ್ನು ಪರಿಹಾರ ಮಾಡಿ ಮೋಕ್ಷವನ್ನು ಕೊಡುವುದರಿಂದ, ಆದ್ದರಿಂದಲೇ ಆ ಜೀವನಿಂದಲೂ ಭಿನ್ನನಾದ ಪರಮಾತ್ಮನನ್ನು ನಿರೂಪಿಸಿ, ಜೀವನನ್ನು ಅತತ್ತ್ವಮಸಿ ಎಂದು ಬೋಧಿಸಿತು. ಗ್ರಂಥಕಾರರಾದ ವಾದಿರಾಜರು ಎಲ್ಲವನ್ನೂ ವಿಸ್ತಾರವಾಗಿ ವಿಮರ್ಶೆ ಮಾಡಿದರೆ ಗ್ರಂಥಗೌರವ ಉಂಟಾಗುತ್ತದೆ ಎಂಬ ಭಯದಿಂದ ಕೆಲವು ದೃಷ್ಟಾಂತಗಳನ್ನು ಮಾತ್ರ ವಿಮರ್ಶೆ ಮಾಡಲು ಇಲ್ಲಿ ಉಪಕ್ರಮಿಸುತ್ತಾರೆ. ಆದ್ದರಿಂದ ಈ ಶ್ರುತಿ ಎಂದರೆ ತತ್ತ್ವಮಸಿ ಎಂದು ಹೇಳುವ ಬದಲು ಅತತ್ತ್ವಮಸಿ ಶ್ರುತಿ ಎಂದೇ ಹೇಳಬೇಕು. ಇದು ವಿಸ್ತಾರವಾಗಿ ಭೇದವನ್ನೇ ಪ್ರತಿಪಾದನೆ ಮಾಡಲು ಉದ್ಯುಕ್ತವಾಗಿದೆ ಎಂದು ಅಭಿಪ್ರಾಯ.

**ಸ್ವಪ್ನಾವಸಾನಕಾಲೀನ ಸುಪ್ತ್ಯವಸ್ಥಾಂ ಪ್ರಬೋಧಯನ್ ।**
**ಸ್ವಪ್ನಾಂತಂ ಸೌಮ್ಯ ಜಾನೀಹೀತ್ಯಾಹ ಶಿಷ್ಯಂ ಗುರುಃ ಪುರಾ ॥ ೯೬೨ ॥**

**ಅರ್ಥ–** ಸ್ವಪ್ನಾವಸಾನಕಾಲೀನ ಸುಪ್ತ್ಯವಸ್ಥಾಂ= ಸ್ವಪ್ನಾವಸಾನದಲ್ಲಿ ಉಂಟಾಗುವ ಸುಷುಪ್ತ್ಯವಸ್ಥೆಯನ್ನು, ಪ್ರಭೋಧಯನ್= ತಿಳಿಸುತ್ತಾ, ಪುರಾ= ಮೊದಲು, ಗುರುಃ= ಗುರುಗಳಾದ ಉದ್ದಾಲಕರು, ಶಿಷ್ಯಂ= ಶಿಷ್ಯನೂ, ಪುತ್ರನೂ ಆದ ಶ್ವೇತಕೇತುವನ್ನು ಕುರಿತು, ಸ್ವಪ್ನಾಂತಂ ಸೌಮ್ಯ ಜಾನೀಹಿ= ಎಲೈ ಪ್ರೀತಿಪಾತ್ರನೇ ಸ್ವಪ್ನದ ಅವಸಾನವನ್ನು ತಿಳಿದುಕೋ, ಇತ್ಯಾಹ= ಎಂದು ಹೇಳಿದರು.

**ಅನುವಾದ–** ಸ್ವಪ್ನಾವಸಾನದಲ್ಲಿ ಉಂಟಾಗುವ ಸುಷುಪ್ತ್ಯವಸ್ಥೆಯನ್ನು ತಿಳಿಸುತ್ತಾ ಗುರುಗಳಾದ ಉದ್ದಾಲಕರು ಶಿಷ್ಯನಾದ ಶ್ವೇತಕೇತುವನ್ನು ಕುರಿತು ಮೊದಲು

ಪ್ರೀತಿಪಾತ್ರನೇ ಸ್ವಪ್ನಾವಸಾನದಲ್ಲಿ ಉಂಟಾಗುವ ಅವಸ್ಥೆಯನ್ನು ತಿಳಿ ಎಂದು ಹೇಳಿದರು.

**ಭಾವವಿಲಾಸಿನೀ–** ಶಿಷ್ಯಂ ಶ್ವೇತಕೇತುಮ್ । ಗುರುಃ ಉದ್ದಾಲಕಃ । ಪುರಾ ಪೂರ್ವಮ್ । ಅಕ್ಷಿಗತಸ್ಯ ಜಾಗ್ರದವಸ್ಥಾ । ಕಂಠಗತಸ್ಯ ಸ್ವಪ್ನಃ । ಹೃದಿ ಸುಪ್ತಿರಿತಿ ಕ್ರಮಾತ್ ಸ್ವಪ್ನಾವಸಾನೇ ವಿದ್ಯಮಾನಾ ಸುಪ್ತಿರಿತಿ ಭಾವಃ ॥ ೯೯೨ ॥

**ವಿವರಣೆ–** ಜೀವನು ಅಕ್ಷಿಯಲ್ಲಿದ್ದರೆ ಜಾಗೃದವಸ್ಥೆ, ಕಂಠದಲ್ಲಿದ್ದರೆ ಸ್ವಪ್ನಾವಸ್ಥೆ, ಹೃದಯದಲ್ಲಿದ್ದರೆ ಸುಪ್ತ್ಯವಸ್ಥೆ. ಹೀಗೆ ಕ್ರಮವಿರುವುದರಿಂದ ಸ್ವಪ್ನಾವಸ್ಥೆಯ ಅವಸಾನದಲ್ಲಿ ಉಂಟಾಗುವುದು ಸುಷುಪ್ತ್ಯವಸ್ಥೆ ಎಂದು ಅಭಿಪ್ರಾಯ.

ಯತ್ರ ಸ್ವಪಿತಿ ನಾಮಾಯಂ ಪುರುಷೋ ಜೀವಚೇತನಃ ।
ಸತಾ ಬ್ರಹ್ಮಚಿತಾ ಸಾಕಂ ಸಂಪನ್ನಃ ಸ್ಯಾತ್ ತದಾಪ್ಯಯಂ ।
ನ ತು ತದ್ಭಾವಮಾಪ್ನೋತಿ ಸೇಯಂ ಸುಪ್ತಿದಶಾ ಕಿಲ ॥ ೯೯೩ ॥

ಪ್ರಾಜ್ಞೇನ ಸಂಪರಿಖಿಷ್ವಕ್ತ ಇತಿ ಶಾಖಾಂತರೇ ಶ್ರುತಿಃ ।
ಪ್ರಾಜ್ಞೇನ ಸಂಪರಿಷ್ವಂಗಮೇವ ಸುಪ್ತಾವಕೀರ್ತಯತ್ ॥ ೯೯೪ ॥

ಸಮ್ಯಗಾಲಿಂಗನಂ ಹ್ಯೇವ ಸಂಪರಿಷ್ವಂಗ ಈರ್ಯತೇ ।
ಸಮ್ಯಕ್‌ಪ್ರಾಪ್ತಿಶ್ಚ ಸಂಪತ್ತಿರ್ಭಿನ್ನಯೋರೇವ ಕಿಂ ನ ತೇ ।
ಯದೇಕಸ್ಯ ನ ತೇ ದೃಷ್ಟೇ ದೃಷ್ಟೇ ಸರ್ವತ್ರ ಚ ದ್ವಯೋಃ ॥ ೯೯೫ ॥

**ಅರ್ಥ–** ಯತ್ರ= ಯಾವಾಗ, ಅಯಂ ಪುರುಷಃ= ಜೀವ ಚೇತನನು, ಸ್ವಪಿತಿ ನಾಮ= ಸ್ವಾಪವನ್ನು ಅನುಭವಿಸುತ್ತಾನೆಯೋ, ತದಾಪಿ= ಆಗಲೂ ಸಹ, ಅಯಂ= ಈ ಜೀವನು, ಸತಾ= ಬ್ರಹ್ಮಚೈತನ್ಯದ, ಸಾಕಂ= ಜೊತೆಯಲ್ಲಿ, ಸಂಪನ್ನಃ ಸ್ಯಾತ್= ಪ್ರಾಪ್ತಿಯನ್ನೇ ಹೊಂದುತ್ತಾನೆ, ನ ತು ತದ್ಭಾವಮಾಪ್ನೋತಿ= ಬ್ರಹ್ಮಭಾವವನ್ನೇ ಹೊಂದುವುದಿಲ್ಲ, ಸೇಯಂ= ಈ ಅವಸ್ಥೆಯು, ಸುಪ್ತಿದಶಾ ಕಿಲ= ಸುಪ್ತ್ಯವಸ್ಥೆಯಷ್ಟೇ, ಶಾಖಾಂತರೇ= ಇನ್ನೊಂದು ಶಾಖೆಯಲ್ಲಿ, ಶ್ರುತಿಃ= ಶ್ರುತಿಯು, ಪ್ರಾಜ್ಞೇನ ಸಂಪರಿಷ್ವಕ್ತಃ ಇತಿ= ಪ್ರಾಜ್ಞೇನ ಸಂಪರಿಷ್ವಕ್ತಃ ಎಂಬ ಪದದಿಂದ, ಸುಪ್ತೌ= ಸುಷುಪ್ತಿಯಲ್ಲಿ, ಪ್ರಾಜ್ಞೇನ= ಪ್ರಾಜ್ಞನಾಮಕ ಪರಮಾತ್ಮನಿಂದ, ಸಂಪರಿಷ್ವಂಗಮೇವ= ಒಳ್ಳೆಯ ಆಲಿಂಗನವನ್ನೇ, ಅಕೀರ್ತಯತ್= ಹೇಳಿತು. ಸಮ್ಯಗಾಲಿಂಗನಂ ಹ್ಯೇವ= ಗಾಢವಾದ ಆಲಿಂಗನವೇ, ಸಂಪರಿಷ್ವಂಗಃ= ಸಂಪರಿಷ್ವಂಗವೆಂದು, ಈರ್ಯತೇ= ಹೇಳಲ್ಪಡುತ್ತದೆ, ಸಂಪತ್ತಿಶ್ಚ= ಸಂಪತ್ತಿ ಎಂದರೆ, ಸಮ್ಯಕ್ ಪ್ರಾಪ್ತಿಃ= ಒಳ್ಳೆಯ ಪ್ರಾಪ್ತಿ (ಎಂದು ಅರ್ಥ), ಯತ್= ಯಾವ ಕಾರಣದಿಂದ, ಏಕಸ್ಯ=

ಒಬ್ಬನಿಗೇ, ತೇ= ಸಂಪ್ರಾಪ್ತಿ ಮತ್ತು ಆಲಿಂಗನಗಳು, ನ ದೃಷ್ಟೇ= ಕಂಡು ಬರುವುದಿಲ್ಲವೋ, ಚ= ಮತ್ತು, ಸರ್ವತ್ರ= ಎಲ್ಲ ಕಡೆಗಳಲ್ಲಿಯೂ, ದ್ವಯೋಃ= ಇಬ್ಬರಿಗೇ, ದೃಷ್ಟೇ= ಕಂಡುಬರುತ್ತವೆಯೋ, ಆದ್ದರಿಂದ, ತೇ= ಸಂಪ್ರಾಪ್ತಿ ಮತ್ತು ಆಲಿಂಗನಗಳು, ಭಿನ್ನಯೋರೇವ ಕಿಂ ನ= ಭಿನ್ನವಾದ ವಸ್ತುಗಳಿಗೇ ಅಲ್ಲವೇ?

**ಅನುವಾದ–** 'ಯತ್ರಾಯಂ ಪುರುಷಃ ಸ್ವಪಿತಿನಾಮ, ಸತಾ ಸೌಮ್ಯ ತದಾ ಸಂಪನ್ನೋ ಭವತಿ' ಎಂಬ ಶ್ರುತಿಯು ಸುಷುಪ್ತ್ಯವಸ್ಥೆಯಲ್ಲಿಯೂ ಈ ಜೀವನು ಬ್ರಹ್ಮಚೈತನ್ಯದಿಂದ (ಬ್ರಹ್ಮ ಚೈತನ್ಯದ) ಪ್ರಾಪ್ತಿಯನ್ನೇ ಪಡೆಯುತ್ತಾನೆ. ಆದರೆ ಬ್ರಹ್ಮಭಾವವನ್ನು ಹೊಂದುವುದಿಲ್ಲ ಎಂದು ಹೇಳಿದೆಯಷ್ಟೇ? ಇದೇ ಸುಪ್ತಿದೆಶೆಯಷ್ಟೇ? ಶಾಖಾಂತರದಲ್ಲಿರುವ 'ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತಃ' ಎಂಬ ಬೃಹದಾರಣ್ಯಕ ಶ್ರುತಿಯು ಸುಪ್ತಿಯಲ್ಲಿ ಜೀವನಿಗೆ ಪರಮಾತ್ಮನಿಂದ ಸಮೀಚೀನವಾದ ಆಲಿಂಗನವನ್ನೇ ಹೇಳಿತು. ಸಮೀಚೀನವಾದ ಆಲಿಂಗನವೇ ಸಂಪರಿಷ್ವಂಗ ಶಬ್ದದಿಂದ ಹೇಳಲ್ಪಡುತ್ತದೆಯಷ್ಟೇ? ಸಂಪತ್ತಿ ಶಬ್ದವು ಸಮೀಚೀನವಾದ ಪ್ರಾಪ್ತಿಯನ್ನೇ ಹೇಳುತ್ತದೆ. ಒಬ್ಬನಿಗೆ ತನ್ನಿಂದಲೇ ಪ್ರಾಪ್ತಿಯಾಗಲೀ, ಆಲಿಂಗನವಾಗಲೀ ಕಂಡುಬರುವುದಿಲ್ಲ. ಎಲ್ಲ ಕಡೆಗಳಲ್ಲಿಯೂ ಇಬ್ಬರಿಗೆ ಮಾತ್ರ ಪ್ರಾಪ್ತಿಯೂ ಮತ್ತು ಆಲಿಂಗನವೂ ಕಂಡುಬರುತ್ತದೆ. ಆದ್ದರಿಂದ ಈ ಶ್ರುತಿಗಳಲ್ಲಿ ಹೇಳಲ್ಪಡುವ ಸಂಪತ್ತಿ ಮತ್ತು ಸಂಪರಿಷ್ವಂಗಗಳು ಭಿನ್ನರಾದ ಜೀವಪರಮಾತ್ಮರಿಗೇ ಅಲ್ಲವೇನು?

**ಭಾವವಿಲಾಸಿನೀ–** ಯತ್ರ ಯದಾ । ಸಂಪನ್ನಃ ಸಮ್ಯಕ್ ಪ್ರಾಪ್ತಃ । ಸೇಯಂ ಜೀವಸ್ಯ ಬ್ರಹ್ಮಪ್ರಾಪ್ತಿದಶಾ ಸ್ವಪ್ನಾಂತಂ ಮೇ ಸೌಮ್ಯ ವಿಜಾನೀಹಿ । ಯತ್ರಾಯಂ ಪುರುಷಃಸ್ವಪಿತಿ ನಾಮ ಸತಾ ಸೋಮ್ಯ ತದಾ ಸಂಪನ್ನೋ ಭವತೀತಿ ಶ್ರುತಿವ್ಯಾಖ್ಯಾನಮಿದಮ್ ॥ ಶಾಖಾಂತರೇ ಬೃಹದಾರಣ್ಯಕೇ । ಪ್ರಾಜ್ಞೇನ ಸಂಪರಿಷ್ವಕ್ತ ಇತ್ಯನೇನ ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತೋ ನ ಬಾಹ್ಯಂ ಕಿಂಚನ ವೇದೇತಿ ಶ್ರುತಿಮುಪಾದತ್ತೇ ॥ ತೇ ಪ್ರಾಪ್ತ್ಯಾಲಿಂಗನೇ ॥ ೯೯೩-೯೯೫ ॥

**ವಿವರಣೆ–** ಸುಪ್ತಿದೆಶೆಯಲ್ಲಿ ಪ್ರಯೋಗಿಸುವ ಸಂಪತ್ತಿ ಮತ್ತು ಸಂಪರಿಷ್ವಂಗ ಶಬ್ದಗಳು ಜೀವಪರಮಾತ್ಮರಿಗೆ ಭೇದವನ್ನೇ ಸಾಧಿಸುತ್ತವೆ ಎಂದು ಅಭಿಪ್ರಾಯ.

ಅಂತರ್ಹಿತಸ್ಯ ಯಾ ಪ್ರಾಪ್ತಿಃ ಪ್ರವಿಷ್ಟಸ್ಯೋದರೇ ಹರೇಃ ।
ಸೈವಾಪೀತಿಃ ಶಬ್ದಶಕ್ತಿಶೋಧನೇ ನ ತ್ವಭಿನ್ನತಾ ॥ ೯೯೬ ॥

**ಅರ್ಥ–** ಹರೇಃ ಉದರೇ= ಹರಿಯ ಉದರದಲ್ಲಿ, ಪ್ರವಿಷ್ಟಸ್ಯ= ಪ್ರವಿಷ್ಟನಾದ ಜೀವನಿಗೆ, ಯಾ= ಯಾವ, ಅಂತರ್ಹಿತಸ್ಯ ಪ್ರಾಪ್ತಿಃ= ಅದೃಶ್ಯವಾಗಿ ಪ್ರಾಪ್ತಿ ಇದೆಯೋ,

ಶಬ್ದಶಕ್ತಿಶೋಧನೇ= ಶಬ್ದಶಕ್ತಿಯನ್ನು ವಿಚಾರ ಮಾಡಿದರೆ, ಸ್ವೈವಾಪೀತಿಃ= ಅದೇ ಅಪೀತಿ ಎಂದು ಕರೆಯಲ್ಪಡುತ್ತದೆ, ಅಭಿನ್ನತಾ= ಅಭೇದವು, ನ ತು= ಅಪೀತಿ ಶಬ್ದಾರ್ಥವಲ್ಲ.

**ಅನುವಾದ–** ಅಪೀತಿ ಶಬ್ದದ ಶಕ್ತಿಯನ್ನು ವಿಚಾರ ಮಾಡಿದರೆ ಅಂತರ್ಹಿತವಾಗಿ ವಸ್ತುವಿನ ಪ್ರಾಪ್ತಿ ಎಂದು ಅರ್ಥವಾಗುತ್ತದೆ. ಹರಿಯ ಉದರದಲ್ಲಿ ಪ್ರವೇಶಿಸುವ ಜೀವನು ಅಂತರ್ಹಿತನಾಗಿ ಪ್ರಾಪ್ತಿಯನ್ನು ಹೊಂದುತ್ತಾನೆ ಎಂದು ಅರ್ಥ. ಅಭೇದವು ಅಪೀತಿ ಶಬ್ದಾರ್ಥವಲ್ಲ.

**ಭಾವವಿಲಾಸಿನೀ–** ಸ್ವಂ ಹ್ಯಪೀತೋ ಭವತೀತಿ ಶ್ರುತೇರರ್ಥಮಾಹ – ಅಂತರ್ಹಿತಸ್ಯೇತಿ ॥ ಅದೃಶ್ಯಸ್ಯೇತ್ಯರ್ಥಃ । ಸಾ ಅದೃಶ್ಯತಯಾ ಪ್ರಾಪ್ತಿಃ ॥ ೯೯೬ ॥

**ವಿವರಣೆ–** ಈಗ 'ಸ್ವಂಹ್ಯಪೀತೋ ಭವತಿ' ಎಂಬ ವಾಕ್ಯದ ಅರ್ಥವನ್ನು ವಿಮರ್ಶೆ ಮಾಡುತ್ತಾರೆ. ಇಲ್ಲಿಯೂ ಸಹ ಅಪ್ಯಯ ಶಬ್ದದಿಂದ ಜೀವಪರಮಾತ್ಮರ ಭೇದವೇ ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

ತಿನ್ನಂತೋಽತ್ರ ಯದಿಣ್ಧಾತುರ್ಯತ್ ಪಿಧಾನಾರ್ಥಕೋಽಸ್ತ್ಯಪಿಃ ।
ಅತೋಽತ್ರಾನ್ಯಾರ್ಥವಿನ್ಯಾಸಚಿಂತಾ ಹಂತಾಫಲೈವ ತೇ ॥ ೯೯೭ ॥

**ಅರ್ಥ–** ಯತ್= ಯಾವ ಕಾರಣದಿಂದ, ಅತ್ರ= ಇಲ್ಲಿ, ಇಣ್ ಧಾತುಃ= ಇಣ್ ಗತೌ ಎಂಬ ಧಾತುವು, ತಿನ್ನಂತಃ= ತಿನ್ ಪ್ರತ್ಯಯಾಂತವಾಗಿದೆಯೋ, ಅಪಿಃ= ಅಪಿ ಎಂಬ ಉಪಸರ್ಗವು, ಪಿಧಾನಾರ್ಥಕಃ= ಮರೆಯಾಗಿ ಎಂಬ ಅರ್ಥವನ್ನು ಉಳ್ಳದ್ದಾಗಿದೆಯೋ, ಅತಃ= ಆ ಕಾರಣದಿಂದಲೂ, ಅತ್ರ= ಈ ವಾಕ್ಯದಲ್ಲಿ, ತೇ ಅನ್ಯಾರ್ಥವಿನ್ಯಾಸ ಚಿಂತಾ= ಬೇರೆ ಅರ್ಥವನ್ನು ಹೇಳುವ ನಿನ್ನ ಯೋಚನೆಯು, ಅಫಲೈವ= ವ್ಯರ್ಥವಾದುದೇ. ಹಂತ= ಇದು ಖೇದವಿಷಯ!

**ಅನುವಾದ–** ಅಪೀತಿ ಎಂಬಲ್ಲಿ ಗಮನಾರ್ಥಕವಾದ ಇಣ್ ಧಾತುವು ತಿನ್ ಪ್ರತ್ಯಯಾಂತವಾಗಿರುವುದರಿಂದಲೂ ಅಪಿ ಎಂಬ ಉಪಸರ್ಗವು ಮರೆಯಾಗಿ ಎಂಬ ಅರ್ಥವುಳ್ಳದ್ದಾಗಿರುವುದರಿಂದಲೂ ಈ ವಾಕ್ಯದಲ್ಲಿ ಬೇರೆ ಅರ್ಥವನ್ನು ತುರುಕುವ ನಿನ್ನ ಯೋಚನೆಯು ವ್ಯರ್ಥವಾದುದು. ಇದು ನಿನ್ನ ದುರದೃಷ್ಟ!

**ಭಾವವಿಲಾಸಿನೀ–** ಶಬ್ದಶಕ್ತಿಮೇವ ದರ್ಶಯತಿ–ತಿನ್ನಂತ ಇತಿ ॥ ತಿನ್‌ಪ್ರತ್ಯಯಾಂತಃ । ಅತ್ರ ಅಪೀತಿ-ಪದೇ । ಅಪಿಃ ಅಪೀತ್ಯುಪಸರ್ಗಃ । ಅಪೀತಿಪದಂ ತೂಕ್ತಪ್ರತ್ಯಯಾಂತಮಿತಿ ದ್ರಷ್ಟವ್ಯಮ್ । ಏವಂ ಶಬ್ದಶಕ್ತಿಶೋಧನೇ ಸಮ್ಯಕ್‌ಪ್ರಾಪ್ತಿರೇವಾಪೀತಿ ಶಬ್ದಾರ್ಥೋ ನ ತ್ವಭೇದ ಇತಿ ಭಾವಃ । ಸ್ವಪದಂ ಚ ಸ್ವಸ್ಮಿನ್ ಸ್ವಸ್ಯೈವ ಗಮ್ಯಗಮಕಭಾವಾನ್ಯಥಾನುಪಪತ್ತ್ಯಾ ಸ್ವತಂತ್ರತ್ವಾದ್ವಾ ಸ್ವಾಮಿತ್ವೇನ ಸ್ವೀಯತ್ವಾದ್ವಾ ಪ್ರಾಕ್‌ಸತ್ತೋದಿತಬ್ರಹ್ಮಪರಮ್ ॥ ೯೯೭ ॥

ಒಬ್ಬನಿಗೇ, ತೇ= ಸಂಪ್ರಾಪ್ತಿ ಮತ್ತು ಆಲಿಂಗನಗಳು, ನ ದೃಷ್ಟೇ= ಕಂಡು ಬರುವುದಿಲ್ಲವೋ, ಚ= ಮತ್ತು, ಸರ್ವತ್ರ= ಎಲ್ಲ ಕಡೆಗಳಲ್ಲಿಯೂ, ದ್ವಯೋಃ= ಇಬ್ಬರಿಗೇ, ದೃಷ್ಟೇ= ಕಂಡುಬರುತ್ತವೆಯೋ, ಆದ್ದರಿಂದ, ತೇ= ಸಂಪ್ರಾಪ್ತಿ ಮತ್ತು ಆಲಿಂಗನಗಳು, ಭಿನ್ನಯೋರೇವ ಕಿಂ ನ= ಭಿನ್ನವಾದ ವಸ್ತುಗಳಿಗೇ ಅಲ್ಲವೇ?

**ಅನುವಾದ–** 'ಯತ್ರಾಯಂ ಪುರುಷಃ ಸ್ವಪಿತಿನಾಮ, ಸತಾ ಸೌಮ್ಯ ತದಾ ಸಂಪನ್ನೋ ಭವತಿ' ಎಂಬ ಶ್ರುತಿಯು ಸುಷುಪ್ತ್ಯವಸ್ಥೆಯಲ್ಲಿಯೂ ಈ ಜೀವನು ಬ್ರಹ್ಮಚೈತನ್ಯದಿಂದ (ಬ್ರಹ್ಮ ಚೈತನ್ಯದ) ಪ್ರಾಪ್ತಿಯನ್ನೇ ಪಡೆಯುತ್ತಾನೆ. ಆದರೆ ಬ್ರಹ್ಮಭಾವವನ್ನು ಹೊಂದುವುದಿಲ್ಲ ಎಂದು ಹೇಳಿದೆಯಷ್ಟೇ? ಇದೇ ಸುಪ್ತಿದೆಶೆಯಷ್ಟೇ? ಶಾಖಾಂತರದಲ್ಲಿರುವ 'ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತಃ' ಎಂಬ ಬೃಹದಾರಣ್ಯಕ ಶ್ರುತಿಯು ಸುಪ್ತಿಯಲ್ಲಿ ಜೀವನಿಗೆ ಪರಮಾತ್ಮನಿಂದ ಸಮೀಚೀನವಾದ ಆಲಿಂಗನವನ್ನೇ ಹೇಳಿತು. ಸಮೀಚೀನವಾದ ಆಲಿಂಗನವೇ ಸಂಪರಿಷ್ವಂಗ ಶಬ್ದದಿಂದ ಹೇಳಲ್ಪಡುತ್ತದೆಯಷ್ಟೇ? ಸಂಪತ್ತಿ ಶಬ್ದವು ಸಮೀಚೀನವಾದ ಪ್ರಾಪ್ತಿಯನ್ನೇ ಹೇಳುತ್ತದೆ. ಒಬ್ಬನಿಗೆ ತನ್ನಿಂದಲೇ ಪ್ರಾಪ್ತಿಯಾಗಲೀ, ಆಲಿಂಗನವಾಗಲೀ ಕಂಡುಬರುವುದಿಲ್ಲ. ಎಲ್ಲ ಕಡೆಗಳಲ್ಲಿಯೂ ಇಬ್ಬರಿಗೆ ಮಾತ್ರ ಪ್ರಾಪ್ತಿಯೂ ಮತ್ತು ಆಲಿಂಗನವೂ ಕಂಡುಬರುತ್ತದೆ. ಆದ್ದರಿಂದ ಈ ಶ್ರುತಿಗಳಲ್ಲಿ ಹೇಳಲ್ಪಡುವ ಸಂಪತ್ತಿ ಮತ್ತು ಸಂಪರಿಷ್ವಂಗಗಳು ಭಿನ್ನರಾದ ಜೀವಪರಮಾತ್ಮರಿಗೇ ಅಲ್ಲವೇನು?

**ಭಾವವಿಲಾಸಿನೀ–** ಯತ್ರ ಯದಾ । ಸಂಪನ್ನಃ ಸಮ್ಯಕ್ ಪ್ರಾಪ್ತಃ । ಸೇಯಂ ಜೀವಸ್ಯ ಬ್ರಹ್ಮಪ್ರಾಪ್ತಿದಶಾ ಸ್ವಪ್ನಾಂತಂ ಮೇ ಸೌಮ್ಯ ವಿಜಾನೀಹಿ । ಯತ್ರಾಯಂ ಪುರುಷಃಸ್ವಪಿತಿ ನಾಮ ಸತಾ ಸೋಮ್ಯ ತದಾ ಸಂಪನ್ನೋ ಭವತೀತಿ ಶ್ರುತಿವ್ಯಾಖ್ಯಾನಮಿದಮ್ ॥ ಶಾಖಾಂತರೇ ಬೃಹದಾರಣ್ಯಕೇ । ಪ್ರಾಜ್ಞೇನ ಸಂಪರಿಷ್ವಕ್ತ ಇತ್ಯನೇನ ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತೋ ನ ಬಾಹ್ಯಂ ಕಿಂಚನ ವೇದೇತಿ ಶ್ರುತಿಮುಪಾದತ್ತೇ ॥ ತೇ ಪ್ರಾಪ್ತ್ಯಾಲಿಂಗನೇ ॥ ೯೯೩-೯೯೫ ॥

**ವಿವರಣೆ–** ಸುಪ್ತಿದೆಶೆಯಲ್ಲಿ ಪ್ರಯೋಗಿಸುವ ಸಂಪತ್ತಿ ಮತ್ತು ಸಂಪರಿಷ್ವಂಗ ಶಬ್ದಗಳು ಜೀವಪರಮಾತ್ಮರಿಗೆ ಭೇದವನ್ನೇ ಸಾಧಿಸುತ್ತವೆ ಎಂದು ಅಭಿಪ್ರಾಯ.

ಅಂತರ್ಹಿತಸ್ಯ ಯಾ ಪ್ರಾಪ್ತಿಃ ಪ್ರವಿಷ್ಟಸ್ಯೋದರೇ ಹರೇಃ ।
ಸೈವಾಪೀತಿಃ ಶಬ್ದಶಕ್ತಿಶೋಧನೇ ನ ತ್ವಭಿನ್ನತಾ ॥ ೯೯೬ ॥

**ಅರ್ಥ–** ಹರೇಃ ಉದರೇ= ಹರಿಯ ಉದರದಲ್ಲಿ, ಪ್ರವಿಷ್ಟಸ್ಯ= ಪ್ರವಿಷ್ಟನಾದ ಜೀವನಿಗೆ, ಯಾ= ಯಾವ, ಅಂತರ್ಹಿತಸ್ಯ ಪ್ರಾಪ್ತಿಃ= ಅದೃಶ್ಯವಾಗಿ ಪ್ರಾಪ್ತಿ ಇದೆಯೋ,

ಶಬ್ದಶಕ್ತಿಶೋಧನೇ= ಶಬ್ದಶಕ್ತಿಯನ್ನು ವಿಚಾರ ಮಾಡಿದರೆ, ಸ್ವೈವಾಪೀತಿಃ= ಅದೇ ಅಪೀತಿ ಎಂದು ಕರೆಯಲ್ಪಡುತ್ತದೆ, ಅಭಿನ್ನತಾ= ಅಭೇದವು, ನ ತು= ಅಪೀತಿ ಶಬ್ದಾರ್ಥವಲ್ಲ.

**ಅನುವಾದ–** ಅಪೀತಿ ಶಬ್ದದ ಶಕ್ತಿಯನ್ನು ವಿಚಾರ ಮಾಡಿದರೆ ಅಂತರ್ಹಿತವಾಗಿ ವಸ್ತುವಿನ ಪ್ರಾಪ್ತಿ ಎಂದು ಅರ್ಥವಾಗುತ್ತದೆ. ಹರಿಯ ಉದರದಲ್ಲಿ ಪ್ರವೇಶಿಸುವ ಜೀವನು ಅಂತರ್ಹಿತನಾಗಿ ಪ್ರಾಪ್ತಿಯನ್ನು ಹೊಂದುತ್ತಾನೆ ಎಂದು ಅರ್ಥ. ಅಭೇದವು ಅಪೀತಿ ಶಬ್ದಾರ್ಥವಲ್ಲ.

**ಭಾವವಿಲಾಸಿನೀ–** ಸ್ವಂ ಹ್ಯಪೀತೋ ಭವತೀತಿ ಶ್ರುತೇರರ್ಥಮಾಹ – ಅಂತರ್ಹಿತಸ್ಯೇತಿ ॥ ಅದೃಶ್ಯಸ್ಯೇತ್ಯರ್ಥಃ । ಸಾ ಅದೃಶ್ಯತಯಾ ಪ್ರಾಪ್ತಿಃ ॥ ೯೯೬ ॥

**ವಿವರಣೆ–** ಈಗ 'ಸ್ವಂಹ್ಯಪೀತೋ ಭವತಿ' ಎಂಬ ವಾಕ್ಯದ ಅರ್ಥವನ್ನು ವಿಮರ್ಶೆ ಮಾಡುತ್ತಾರೆ. ಇಲ್ಲಿಯೂ ಸಹ ಅಪ್ಯಯ ಶಬ್ದದಿಂದ ಜೀವಪರಮಾತ್ಮರ ಭೇದವೇ ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

ತಿನ್ನಂತೋಽತ್ರ ಯದಿಣ್ಧಾತುರ್ಯತ್ ಪಿಧಾನಾರ್ಥಕೋಽಸ್ಯ್ಯಪಿಃ ।
ಅತೋಽತ್ರಾನ್ಯಾರ್ಥವಿನ್ಯಾಸಚಿಂತಾ ಹಂತಾಫಲೈವ ತೇ ॥ ೯೯೭ ॥

**ಅರ್ಥ–** ಯತ್= ಯಾವ ಕಾರಣದಿಂದ, ಅತ್ರ= ಇಲ್ಲಿ, ಇಣ್ ಧಾತುಃ= ಇಣ್ ಗತೌ ಎಂಬ ಧಾತುವು, ತಿನ್ನಂತಃ= ತಿನ್ ಪ್ರತ್ಯಯಾಂತವಾಗಿದೆಯೋ, ಅಪಿಃ= ಅಪಿ ಎಂಬ ಉಪಸರ್ಗವು, ಪಿಧಾನಾರ್ಥಕಃ= ಮರೆಯಾಗಿ ಎಂಬ ಅರ್ಥವನ್ನು ಉಳ್ಳದ್ದಾಗಿದೆಯೋ, ಅತಃ= ಆ ಕಾರಣದಿಂದಲೂ, ಅತ್ರ= ಈ ವಾಕ್ಯದಲ್ಲಿ, ತೇ ಅನ್ಯಾರ್ಥವಿನ್ಯಾಸ ಚಿಂತಾ= ಬೇರೆ ಅರ್ಥವನ್ನು ಹೇಳುವ ನಿನ್ನ ಯೋಚನೆಯು, ಅಫಲೈವ= ವ್ಯರ್ಥವಾದುದೇ. ಹಂತ= ಇದು ಖೇದವಿಷಯ!

**ಅನುವಾದ–** ಅಪೀತಿ ಎಂಬಲ್ಲಿ ಗಮನಾರ್ಥಕವಾದ ಇಣ್ ಧಾತುವು ತಿನ್ ಪ್ರತ್ಯಯಾಂತವಾಗಿರುವುದರಿಂದಲೂ ಅಪಿ ಎಂಬ ಉಪಸರ್ಗವು ಮರೆಯಾಗಿ ಎಂಬ ಅರ್ಥವುಳ್ಳದ್ದಾಗಿರುವುದರಿಂದಲೂ ಈ ವಾಕ್ಯದಲ್ಲಿ ಬೇರೆ ಅರ್ಥವನ್ನು ತುರುಕುವ ನಿನ್ನ ಯೋಚನೆಯು ವ್ಯರ್ಥವಾದುದು. ಇದು ನಿನ್ನ ದುರದೃಷ್ಟ!

**ಭಾವವಿಲಾಸಿನೀ–** ಶಬ್ದಶಕ್ತಿಮೇವ ದರ್ಶಯತಿ–ತಿನ್ನಂತ ಇತಿ ॥ ತಿನ್‌ಪ್ರತ್ಯಯಾಂತಃ । ಅತ್ರ ಅಪೀತಿ-ಪದೇ । ಅಪಿಃ ಅಪೀತ್ಯುಪಸರ್ಗಃ । ಅಪೀತಿಪದಂ ತೂಕ್ತಪ್ರತ್ಯಯಾಂತಮಿತಿ ದ್ರಷ್ಟವ್ಯಮ್ । ಏವಂ ಶಬ್ದಶಕ್ತಿಶೋಧನೇ ಸಮ್ಯಕ್‌ಪ್ರಾಪ್ತಿರೇವಾಪೀತಿ ಶಬ್ದಾರ್ಥೋ ನ ತ್ವಭೇದ ಇತಿ ಭಾವಃ । ಸ್ವಪದಂ ಚ ಸ್ವಸ್ಮಿನ್ ಸ್ವಸ್ಯೈವ ಗಮ್ಯಗಮಕಭಾವಾನ್ಯಥಾನುಪಪತ್ತ್ಯಾ ಸ್ವತಂತ್ರತ್ವಾದ್ವಾ ಸ್ವಾಮಿತ್ವೇನ ಸ್ವೀಯತ್ವಾದ್ವಾ ಪ್ರಾಕ್‌ಸತ್ತ್ವೋದೋದಿತಬ್ರಹ್ಮಪರಮ್ ॥ ೯೯೭ ॥

ಸುಪ್ತುತ್ಕ್ರಾಂತ್ಯೋಶ್ಚ ಭೇದೇನೇತ್ಯಾಹ ನಿರ್ಣಯಸೂತ್ರಕೃತ್ ।
ಯತಃ ಸುಪ್ತೌ ಚ ಮುಕ್ತೌ ಚ ಭಿದಾ ಶಾಸ್ತ್ರವಿದೋದಿತಾ ।
ಅತೋದ್ವಿರ್ಬದ್ಧಭೇದೋಽಯಂ ಸುಬದ್ಧೋಽಭೂಚ್ಛ್ರುತೇರ್ಗಲೇ॥ ೯೯೮ ॥

ಸುಪ್ತಿಶ್ಚಾವಾಂತರಾ ಮುಕ್ತಿರ್ದೇಹಾದೇರಪ್ಯಯಾತ್ ತವ ।
ಸುಪ್ತೌ ಚ ಮುಕ್ತೌ ಯನ್ನಾಸ್ತಿ ತದೈಕ್ಯಂ ಸ್ಯಾತ್ ಕದಾ ವದ ॥ ೯೯೯ ॥

**ಅರ್ಥ–** ನಿರ್ಣಯಸೂತ್ರಕೃತ್= ವೇದಾರ್ಥ ನಿರ್ಣಾಯಕರಾದ ಸೂತ್ರಕಾರರು, ಯತಃ= ಯಾವ ಕಾರಣದಿಂದ, ಸುಪ್ತ್ಯುತ್ಕ್ರಾಂತ್ಯೋಶ್ಚ ಭೇದೇನ= ಸುಷುಪ್ತ್ಯುತ್ಕ್ರಾಂತ್ಯೋಃ ಭೇದೇನ ಎಂಬ ಸೂತ್ರದಲ್ಲಿ, ಆಹ= ಹೇಳಿದ್ದಾರೆ, ಯತಃ= ಯಾವ ಕಾರಣದಿಂದ, ಸುಪ್ತೌ ಮುಕ್ತೌ ಚ= ಸುಪ್ತಿಯಲ್ಲಿಯೂ ಮತ್ತು ಮುಕ್ತಿಯಲ್ಲಿಯೂ, ಭಿದಾ= ಭೇದವೇ, ಶಾಸ್ತ್ರವಿದೋದಿತಾ= ಶಾಸ್ತ್ರಜ್ಞರಾದ ಅವರಿಂದ ಹೇಳಲ್ಪಟ್ಟಿದೆಯೋ, ಅತಃ= ಆ ಕಾರಣದಿಂದ, ಅಯಂ ದ್ವಿರ್ಬದ್ಧಭೇದಃ= ಹೀಗೆ ಎರಡು ಸಲ ಕಟ್ಟಲ್ಪಟ್ಟ ಭೇದವು, ಶ್ರುತೇರ್ಗಲೇ= ಶ್ರುತಿವನಿತೆಯ ಕಂಠದಲ್ಲಿ, ಸುಬದ್ಧೋ ಭೂತ್= ಚೆನ್ನಾಗಿಯೇ ಬದ್ಧವಾಯಿತು, ತವ= ನಿನಗೆ ಸುಪ್ತಿಯಲ್ಲಿ, ದೇಹಾದೇರಪ್ಯಯಾತ್- ದೇಹಾದಿಗಳು ನಾಶಹೊಂದುವುದರಿಂದ, ಸುಪ್ತಿಶ್ಚ= ಸುಪ್ತಿಯೂ ಸಹ, ಅವಾಂತರ ಮುಕ್ತಿಃ= ಅವಾಂತರ ಮುಕ್ತಿಯೇ. ಯತ್ ಐಕ್ಯಂ= ಯಾವ ಐಕ್ಯವು, ಸುಪ್ತೌ ಮುಕ್ತೌ ಚ ನಾಸ್ತಿ= ಸುಪ್ತಿಯಲ್ಲಿಯೂ, ಮುಕ್ತಿಯಲ್ಲಿಯೂ ಇಲ್ಲವೋ, ತತ್= ಆ ಐಕ್ಯವು, ಕದಾ ಸ್ಯಾತ್= ಯಾವಾಗ ಉಂಟಾಗುತ್ತದೆ ಎಂದು, ವದ= ಹೇಳು.

**ಅನುವಾದ–** ಶ್ರುತ್ಯರ್ಥ ನಿರ್ಣಾಯಕವಾದ ಸೂತ್ರಗಳನ್ನು ರಚಿಸಿರುವ ವೇದವ್ಯಾಸರು 'ಸುಪ್ತ್ಯುತ್ಕ್ರಾಂತ್ಯೋಃ ಭೇದೇನ' ಎಂದು ಹೇಳಿದ್ದಾರೆ. ಶಾಸ್ತ್ರಜ್ಞರಾದ ಅವರು ಸುಪ್ತಿಯಲ್ಲಿಯೂ ಮತ್ತು ಮೋಕ್ಷದಲ್ಲಿಯೂ ಭೇದವನ್ನೇ ಹೇಳಿರುವುದರಿಂದ ಎರಡು ಪ್ರಕರಣಗಳಲ್ಲಿ ಪ್ರತಿಪಾದಿಸಲ್ಪಟ್ಟ ಈ ಭೇದವು ಎರಡು ಸಲ ಹಾಕಿದ ಗಂಟಿನಂತೆ ಶ್ರುತಿ ವನಿತೆಯ ಕಂಠದಲ್ಲಿ ಸುಭದ್ರವೇ ಆಯಿತು. ನಿನ್ನ ಮತದ ರೀತಿಯಲ್ಲಿ ಸುಷುಪ್ತಿಯಲ್ಲಿ ದೇಹಾದಿಗಳು ನಾಶವನ್ನು ಹೊಂದುವುದರಿಂದ, ಸುಷುಪ್ತಿಯೂ ಸಹ ಅವಾಂತರ ಮುಕ್ತಿಯೇ. ಯಾವ ಜೀವಬ್ರಹ್ಮೈಕ್ಯವು ಸುಪ್ತಿಯಲ್ಲೂ ಮತ್ತು ಮೋಕ್ಷದಲ್ಲಿಯೂ ಇರುವುದಿಲ್ಲವೋ ಅದು ಯಾವಾಗ ಉಂಟಾಗುತ್ತದೆ ಎಂದು ಹೇಳು.

**ಭಾವವಿಲಾಸಿನೀ–** ಸೂತ್ರಾನುಸಾರಿ ಚೇದಂ ವ್ಯಾಖ್ಯಾನಮಿತಿ ಭಾವೇನಾಹ – ಸುಪ್ತೀತಿ ॥ ಅನೇನ ಸುಷುಪ್ತ್ಯುತ್ಕ್ರಾಂತ್ಯೋರ್ಭೇದೇನೇತಿ ಸೂತ್ರಂ ಗೃಹ್ಣಾತಿ । ಶಾಸ್ತ್ರವಿದಾ ವೇದವ್ಯಾಸೇನ ।

ರ್ದ್ವಿರ್ಬದ್ಧಃ ಸುಪ್ತೌ ಮುಕ್ತೌ ಚ ಬದ್ಧಃ । ವ್ಯಾಸಾನುಶಾಸನಶಬ್ದಾನುಶಾಸನಾಭ್ಯಾಂ ಬದ್ಧ ಇತಿ ವಾ ॥ ೯೯೮-೯೯೯ ॥

**ವಿವರಣೆ–** 'ಸುಷುಪ್ತ್ಯುತ್ಕ್ರಾಂತ್ಯೋರ್ಭೇದೇನ' ಎಂಬುದು ಬ್ರಹ್ಮಸೂತ್ರ. ಅಲ್ಲಿ ವಿಷಯ ವಾಕ್ಯಗಳು ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತಃ ಎಂಬುದು ಸುಪ್ತಿ ಪ್ರಕರಣದ ವಿಷಯವಾಕ್ಯ. ಪ್ರಾಜ್ಞೇನಾತ್ಮನಾ ಅನ್ವಾರೂಢಃ .......... ಎಂಬುದು ಉತ್ಕ್ರಾಂತಿ ಪ್ರಕರಣದ ವಾಕ್ಯ. ಸುಪ್ತಿ ಪ್ರಕರಣದಲ್ಲಿ ಜೀವನು ಪ್ರಾಜ್ಞನಾಮಕ ಪರಮಾತ್ಮನಿಂದ ಆಲಿಂಗಸಲ್ಪಡುತ್ತಾನೆ ಎಂದು ಹೇಳಿದ್ದಾರೆ. ಉತ್ಕ್ರಾಂತಿ ಪ್ರಕರಣದಲ್ಲಿಯೂ ಸಹ ಸಂಪರಿಷ್ವಕ್ತ ಶಬ್ದದಿಂದ ಜೀವನು ಪರಮಾತ್ಮನಿಂದ ಆರೂಢವಾಗುತ್ತಾನೆ ಎಂದು ಹೇಳಿದ್ದಾರೆ. ಅಂದರೆ ಎರಡು ಕಡೆಗಳಲ್ಲಿಯೂ ಸೂತ್ರಕಾರರು ಭೇದವನ್ನು ಪ್ರತಿಪಾದಿಸಿದ್ದಾರೆ ಎಂದು ಅಭಿಪ್ರಾಯ.

**ಸದೃಷ್ಟಾಂತಮಿಮಾಮೇವ ದಶಾಂ ವೇದಃ ಪ್ರಬೋಧಯನ್ ।**
**ಯತಃ ಶಕುನಿಸೂತ್ರಾಖ್ಯನಿದರ್ಶನಮದರ್ಶಯತ್ ॥ ೧೦೦೦ ॥**

**ಅರ್ಥ–** ವೇದಃ= ವೇದವು, ಇಮಾಮೇವ ದಶಾಂ= ಈ ಸುಪ್ತಿ ದೆಶೆಯನ್ನೇ, ಸದೃಷ್ಟಾಂತಂ= ದೃಷ್ಟಾಂತ ಪುರಸ್ಸರವಾಗಿ, ಪ್ರಬೋಧಯತ್= ತಿಳಿಸುತ್ತಾ, ಯತಃ= ಯಾವ ಕಾರಣದಿಂದ, ಅದು, ಶಕುನಿಸೂತ್ರಾಖ್ಯನಿದರ್ಶನಂ= ಶಕುನಿ ಮತ್ತು ಸೂತ್ರಗಳ ದೃಷ್ಟಾಂತವನ್ನು, ಆದರ್ಶಯತ್= ತೋರಿಸಿದೆಯೋ (ಅದರಿಂದ ಭೇದವೇ ಸಿದ್ಧವಾಗುತ್ತದೆ).

**ಅನುವಾದ–** ವೇದವು ಇದೇ ಸುಪ್ತ್ಯವಸ್ಥೆಯನ್ನು ಶಕುನಿ ಸೂತ್ರಗಳ ಸ್ಪಷ್ಟವಾಗಿ ನಿದರ್ಶನವನ್ನು ನಿರೂಪಣೆಯನ್ನು ಮಾಡಿ ದೃಷ್ಟಾಂತ ಪುರಸ್ಸರವಾಗಿ ಪ್ರತಿಪಾದನೆಯನ್ನು ಮಾಡಿದೆ.

**ಭಾವವಿಲಾಸಿನೀ–** ಸದೃಷ್ಟಾಂತಮ್ । ಸ ಯಥಾ ಶಕುನಿಃಸೂತ್ರೇಣ ಪ್ರತಿಬದ್ಧೋ ದಿಶಂದಿಶಂ ಪತಿತ್ವಾಽನ್ಯತ್ರಾಯತನಮಲಬ್ಧ್ವಾ ಬಂಧನಮೇವೋಪಾಶ್ರಯತ ಇತಿ ದೃಷ್ಟಾಂತ-ಪೂರ್ವಕಮ್ । ಇಮಾಂ ಸುಪ್ತಿಮ್ ॥ ೧೦೦೦ ॥

**ವಿವರಣೆ–** 'ಯಥಾ ಶಕುನಿಃ ಸೂತ್ರೇನ ಪ್ರಬದ್ಧೋ ದಿಶಂ ದಿಶಂ ಪತಿತ್ವಾ ಅನ್ಯತ್ರಾಯತನಮ ಲಬ್ಧ್ವಾ ಬಂಧನಮೇವ ಉಪಾಶ್ರಯತೇ ಏವ ಮೇವ ಖಲು ಸೌಮ್ಯ ಏತನ್ಮನಃ ದಿಶಂ ದಿಶಂ ಪತಿತ್ವಾ ಅನ್ಯತ್ರಾಯತನಂ ಅಲಬ್ಧ್ವಾ ಪ್ರಾಣಮೇವ ಉಪಾಶ್ರಯತೇ' ಎಂಬುದು ದೃಷ್ಟಾಂತ ಮತ್ತು ದಾರ್ಷ್ಟಾಂತಿಕ ಸಹಿತವಾದ ಈ ಸಂದರ್ಭದ ಉಪನಿಷದ್ವಾಕ್ಯ. ಇದನ್ನು ಮುಂದಿನ ಶ್ಲೋಕಗಳಲ್ಲಿ ಇನ್ನೂ ವಿಮರ್ಶೆ ಮಾಡುತ್ತಾರೆ.

**ದಾರ್ಷ್ಟಾಂತಿಕೇ ತತ್ರ ಮನೋ ಮಂತೃತ್ವಾಜ್ಜೀವ ಏವ ತತ್ ।**
**ನ ಚೇದುಪಕ್ರಮೋಽನ್ಯಸ್ಯ ಸ್ಯಾಚ್ಚಾನ್ಯಸ್ಯೋಪಸಂಹೃತಿಃ ॥ ೧೦೦೧ ॥**

**ಅರ್ಥ–** ತತ್ರ= ಆ ವಿಷಯವಾಕ್ಯದಲ್ಲಿ, ದಾರ್ಷ್ಟಾಂತಿಕೇ= ದಾರ್ಷ್ಟಾಂತಿಕದಲ್ಲಿ, ತತ್ ಮನಃ= ಆ ಮನಸ್ಸು, ಮಂತೃತ್ವಾತ್= ಜ್ಞಾತೃತ್ವವು ಇರುವ ಕಾರಣದಿಂದ, ಜೀವ ಏವ= ಜೀವನೇ, ನ ಚೇತ್= ಮನಃ ಶಬ್ದಕ್ಕೆ ಜೀವ ಎಂಬ ಅರ್ಥವನ್ನು ಒಪ್ಪದಿದ್ದರೆ, ಅನ್ಯಸ್ಯ ಉಪಕ್ರಮಃ= ಬೇರೆ ವಸ್ತುವಿನ ಉಪಕ್ರಮ, ಅನ್ಯಸ್ಯ ಉಪಸಂಹೃತಿಃ= ಇನ್ನೊಂದು ವಸ್ತುವಿನ ಉಪಸಂಹಾರ ಎಂದು, ಸ್ಯಾತ್= ಆಗುತ್ತದೆ.

**ಅನುವಾದ–** ಆ ವಾಕ್ಯದಲ್ಲಿ ದಾರ್ಷ್ಟಾಂತಿಕದಲ್ಲಿ ಮನಃ ಶಬ್ದವು ಜ್ಞಾತೃತ್ವ ಇರುವ ಜೀವನನ್ನೇ ಹೇಳುತ್ತದೆ. ಹಾಗೆ ಅಂಗೀಕರಿಸದಿದ್ದರೆ ಉಪಕ್ರಮವೇ ಅನ್ಯವಿಷಯಕ-ವಾದುದು ಮತ್ತು ಉಪಸಂಹಾರವೇ ಅನ್ಯವಿಷಯಕವಾದುದು ಎಂಬ ಪ್ರಸಂಗವು ಉಂಟಾಗುತ್ತದೆ.

**ಭಾವವಿಲಾಸಿನೀ–** ಏವಮೇವ ಖಲು ಸೌಮ್ಯೈತನ್ಮನೋ ದಿಶಂ ದಿಶಂ ಪತಿತ್ವಾ ಅನ್ಯತ್ರಾಯತನ-ಮಲಬ್ಧ್ವಾ ಪ್ರಾಣಮೇವೋಪಾಶ್ರಯತ ಇತಿ ದಾರ್ಷ್ಟಾಂತಿಕವಾಕ್ಯೇ । ತತ್ತಸ್ಮಾತ್ । ನಚೇನ್ಮನಃಶಬ್ದೋ ಜೀವವಾಚಕೋ ನಚೇತ್ । ಉಪಕ್ರಮಃ ಯತ್ರಾಯಂ ಪುರುಷಃ ಸ್ವಪಿತಿ ನಾಮೇತ್ಯುಪಕ್ರಮಃ । ಅನ್ಯಸ್ಯ ಪುರುಷಪದೋದಿತಜೀವಸ್ಯ ॥ ೧೦೦೧ ॥

**ವಿವರಣೆ–** ಈ ಪ್ರಕರಣದ ಉಪಕ್ರಮದಲ್ಲಿ 'ಯತ್ರಾಯಂ ಪುರುಷಃ ಸ್ವಪಿತಿ ನಾಮ' ಎಂಬ ವಾಕ್ಯವಿದೆ. ಅಲ್ಲಿ ಪುರುಷ ಶಬ್ದದಿಂದ ಜೀವನನ್ನು ಹೇಳಿ, ಅವನ ಸುಪ್ತ್ಯವಸ್ಥೆಯನ್ನು ವಿವರಿಸಲು ಪ್ರಕ್ರಾಂತವಾಗಿದೆ. ಇಲ್ಲಿ ಉಪಸಂಹಾರದಲ್ಲಿರುವ ಮನಃ ಶಬ್ದವು ಜೀವನನ್ನು ಹೇಳದೆ ಮನಸ್ಸನ್ನು ಹೇಳಿದರೆ ಉಪಕ್ರಮೋಪಸಂಹಾರಗಳಿಗೆ ಏಕವಾಕ್ಯತ್ವವು ಬರುವುದಿಲ್ಲ. ಮನಃ ಶಬ್ದಜೀವನಲ್ಲಿ ಮನುತೇ ಇತಿ ಮನಃ ಎಂದು ಯೋಗದಿಂದ ಕೂಡಿಸಬಹುದು. ಆದ್ದರಿಂದ ಇಲ್ಲಿ ಮನಃ ಶಬ್ದವಾಚ್ಯನಾದ ಜೀವನು ಸುಷುಪ್ತಿಯಲ್ಲಿ ಪ್ರಾಣಶಬ್ದವಾಚ್ಯನಾದ ಹರಿಯನ್ನು ಆಶ್ರಯಿಸಿದ್ದಾನೆಂದು ಹೇಳುವುದರಿಂದ ಅವನಿಗೆ ಭೇದವೇ ಸಿದ್ಧವಾಗುತ್ತದೆ.

**ಶಕುನೇಃ ಶಕುನಾಚ್ಚಾಯಂ ಜೀವಸ್ತತ್ರಾಪಿ ಜೀವತಿ ।**
**ಯಚ್ಚೇತನೋಪಮಾ ಪ್ರಾಯಶ್ಚೇತನಸ್ಯೈವ ಶೋಭತೇ ॥ ೧೦೦೨ ॥**

**ಅರ್ಥ–** ಯತ್= ಯಾವ ಕಾರಣದಿಂದ, ಚೇತನೋಪಮಾ= ಚೇತನ ದೃಷ್ಟಾಂತವು, ಪ್ರಾಯಃ= ಹೆಚ್ಚಾಗಿ, ಚೇತನಸ್ಯೈವ= ಚೇತನನಿಗೇ, ಶೋಭತೇ= ಶೋಭಿಸುತ್ತದೆಯೋ, ಆದ್ದರಿಂದ, ಶಕುನೇಃ= ಶುಭ ಪಕ್ಷಿಯ, ಶಕುನಾತ್= ಶಕುನದಿಂದಲೂ ಸಹ, ಅಯಂ ಜೀವಃ= ಈ ಜೀವನು, ತತ್ರಾಪಿ= ಆ ದಾರ್ಷ್ಟಾಂತಿಕದಲ್ಲಿಯೂ, ಜೀವತಿ= ಬದುಕಿದ್ದಾನೆ.

**ಅನುವಾದ–** ಚೇತನ ದೃಷ್ಟಾಂತವು ಚೇತನನಿಗೇ ಹೆಚ್ಚಾಗಿ ಉಪಪನ್ನವಾಗುವ ಕಾರಣದಿಂದ, ಶಕುನ ಪಕ್ಷಿಯ ಶುಭ ಶಕುನದಿಂದ ಈ ಜೀವನು ದಾರ್ಷ್ಟಾಂತಿಕವಾಕ್ಯದಲ್ಲಿಯೂ ಬದುಕಿದ್ದಾನೆ.

**ಭಾವವಿಲಾಸಿನೀ–** ಶಕುನಾತ್ ದೃಷ್ಟಾಂತತಯೋಕ್ತ್ಯಾಖ್ಯಶಕುನಾತ್ । ಯಥಾ ಗಂತುಃ ಪುರುಷಸ್ಯ ಸಮೀಚೀನಪಕ್ಷಿಣಃ ಶಕುನೇ ಜಾತೇ ಸತಿ ಜೀವಭಯಂ ನಾಸ್ತಿ ತಥಾಽತ್ರಾಪಿ ದೃಷ್ಟಾಂತೇ ಶಕುನೇಃ ಪ್ರಸ್ತಾವಾತ್ ದಾರ್ಷ್ಟಾಂತಿಕೇಽಪಿ ಜೀವಸ್ಯ ನಾಪಗಮ ಇತಿ ಭಾವಃ ॥ ೧೦೦೨ ॥

**ವಿವರಣೆ–** ಈ ವಾಕ್ಯದಲ್ಲಿ ಮನಸ್ಸಿಗೆ ಶಕುನಿ ಪಕ್ಷಿಯ ದೃಷ್ಟಾಂತವನ್ನು ಕೊಡುತ್ತಿದ್ದಾರೆ. ಶಕುನ ಪಕ್ಷಿಯು ಚೇತನ. ಮನಃ ಶಬ್ದದಿಂದ ಜಡವನ್ನು ತೆಗೆದುಕೊಂಡರೆ, ಆಗ ಜಡಕ್ಕೆ ಚೇತನ ದೃಷ್ಟಾಂತವನ್ನು ಕೊಡುವುದು ಸರಿಯಾಗುವುದಿಲ್ಲ. ಮನಃ ಶಬ್ದದಿಂದ ಜೀವನನ್ನು ತೆಗೆದುಕೊಂಡರೆ ಮಾತ್ರ ಚೇತನನಾದ ಜೀವನಿಗೆ ಚೇತನವಾದ ಶಕುನ ಪಕ್ಷಿಯ ದೃಷ್ಟಾಂತವು ಶ್ಲಿಷ್ಟವಾಗುತ್ತವೆ. ಆದರೆ ದಾರ್ಷ್ಟಾಂತಿಕದಲ್ಲಿ ಜೀವನು ಹೇಳಲ್ಪಡುವುದರಿಂದ ಜೀವಬ್ರಹ್ಮರ ಭೇದವು ಸಿದ್ಧವಾಗುತ್ತದೆ. ಯಾರಾದರೂ ರೋಗಗ್ರಸ್ತರಾಗಿರುವಾಗ ಶುಭ ಪಕ್ಷಿಯ ಶಕುನ ಉಂಟಾದರೆ ಹೇಗೆ ಅವನು ಬದುಕುತ್ತಾನೆ ಎಂದು ತಿಳಿಯುತ್ತಾರೆಯೋ, ಅದರಂತೆ ಶಕುನಿ ಶಬ್ದ ಘಟಿತವಾದ ದೃಷ್ಟಾಂತವನ್ನು ಕೊಟ್ಟಿರುವುದರಿಂದ, ದಾರ್ಷ್ಟಾಂತಿಕದಲ್ಲಿಯೂ ಜೀವನು ಪ್ರತಿಪಾದಕನಾಗಿ ಜೀವಿಸಿ ಎಂದು ಸಾಹಿತ್ಯ ಮುದ್ರೆಯಿಂದ ಇಲ್ಲಿ ಪ್ರತಿಪಾದಿಸುತ್ತಿದ್ದಾರೆ.

**ಕಿಂ ಚಾಂತಃಕರಣಾಖ್ಯಂ ತೇ ಮನೋ ಲೀನಂ ತದಾ ತವ ।**
**ಪ್ರಾಣಸಂಶ್ರಯತಾ ತಸ್ಯ ಕಥಂ ಲೀನಸ್ಯ ಕಥ್ಯತೇ ॥ ೧೦೦೩ ॥**

**ಅರ್ಥ–** ಕಿಂಚ= ಮತ್ತು, ತದಾ= ಸುಷುಪ್ತಿಯಲ್ಲಿ, ತವ= ನಿನ್ನ, ಅಂತಃಕರಣಾಖ್ಯಂ ಮನಃ= ಅಂತಃಕರಣ ರೂಪವಾದ ಮನಸ್ಸು, ಲೀನಂ= ಲಯವನ್ನು ಹೊಂದಿದೆ, ಲೀನಸ್ಯ ತಸ್ಯ= ಲಯವನ್ನು ಹೊಂದಿದ ಅದಕ್ಕೆ, ಪ್ರಾಣಸಂಶ್ರಯತಾ= ಪ್ರಾಣಾಶ್ರಿತತ್ವವು, ಕಥಂ= ಹೇಗೆ, ಕಥ್ಯತೇ= ಹೇಳಲ್ಪಡುತ್ತದೆ.

**ಅನುವಾದ–** ಮತ್ತು ನಿನ್ನ ಮತದಂತೆ (ನಮ್ಮ ಮತದಂತೆಯೂ) ಸುಷುಪ್ತ್ಯವಸ್ಥೆಯಲ್ಲಿ ಅಂತಃಕರಣರೂಪವಾದ ಮನಸ್ಸು ಲಯವನ್ನು ಹೊಂದಿದೆ. ಲಯವನ್ನು ಹೊಂದಿದ ಮನಸ್ಸಿಗೆ ಪ್ರಾಣಾಧಾರತ್ವವನ್ನು ಹೇಗೆ ಹೇಳುತ್ತೀಯೆ?

**ಭಾವವಿಲಾಸಿನೀ–** ತೇ ಮನಃ । ತವ ಮತೇ ತವದುರಾಗ್ರಹಾತ್ ತ್ವನ್ಮನಸ ಏವ ನಾಶೋಽಸ್ತು ನತು ಮನ್ಮನಸ ಇತಿ ಭಾವೇನೋಕ್ತಂ ತೇ ಮನ ಇತಿ । ಕಿಂಚ ಮನಸೋ ಜೀವತ್ವಾಭಾವೇ ಜೀವಪರಯೋರೈಕ್ಯಸ್ಯಾಪಿ ನ ಪ್ರಸ್ತಾವಃ ಸ್ಯಾತ್ । ಅತಸ್ತ್ವಯಾಪಿ ಮನಃಪದೇನ ಜೀವ ಏವ ವಾಚ್ಯಃ ॥ ೧೦೦೩ ॥

ಯತಶ್ಚೋಪರಿ ತತ್ಸ್ಥಾನೇ ಪ್ರಜಾಶಬ್ದಂ ಹಿ ಜೀವಗಂ ।
ಸನ್ಮೂಲಾ ಏವ ಸೌಮ್ಯೇಮಾಃ ಪ್ರಜಾ ಇತಿ ವದಿಷ್ಯತಿ ।
ಅತೋ ಮನಃಪ್ರಾಣಶಬ್ದೌ ಜೀವಬ್ರಹ್ಮಪರಾವಿಮೌ ॥ ೧೦೦೪ ॥

ಇತಿ ಭೇದಂ ಸದೃಷ್ಟಾಂತಂ ಪ್ರಾಕ್ ಪ್ರಸ್ತಾವ್ಯ ಪುನರ್ಗುರುಃ ।
ತತ್ತ್ವಮಸ್ಯಾದಿವಾಕ್ಯೇನ ಕಥಮೈಕ್ಯಂ ವದೇದ್ ವದ ॥ ೧೦೦೫ ॥

**ಅರ್ಥ–** ಯತಃ= ಯಾವ ಕಾರಣದಿಂದ, ಉಪರಿ= ಮುಂದಿನ ವಾಕ್ಯದಲ್ಲಿ, ತತ್ಸ್ಥಾನೇ= ಮನಸ್ಸಿನ ಸ್ಥಾನದಲ್ಲಿ, ಜೀವಗಂ ಪ್ರಜಾಶಬ್ದಂ= ಜೀವವಾಚಿಯಾದ ಪ್ರಜಾಶಬ್ದವನ್ನು, ಶ್ರುತಿಯು, ಸನ್ಮೂಲಾ ಏವ ಸೌಮ್ಯೇಮಾಃ ಪ್ರಜಾಃ= ಎಲೈ ಪ್ರೀತಿಪಾತ್ರನೇ! ಎಲ್ಲ ಪ್ರಜೆಗಳು ಸನ್ಮೂಲರಾದವರು, ಇತಿ= ಎಂದು, ವದಿಷ್ಯತಿ= ಹೇಳುವುದೋ, ಅತಃ= ಆ ಕಾರಣದಿಂದ, ಇಮೌ= ಈ, ಮನಃ ಪ್ರಾಣಶಬ್ದೌ= ಮನಸ್ಸು ಮತ್ತು ಪ್ರಾಣಶಬ್ದಗಳು, ಜೀವಬ್ರಹ್ಮ ಪರೌ= ಕ್ರಮವಾಗಿ ಜೀವ ಮತ್ತು ಬ್ರಹ್ಮರನ್ನು ಹೇಳುತ್ತವೆ, ಇತಿ= ಈ ರೀತಿಯಲ್ಲಿ, ಗುರುಃ= ಗುರುಗಳಾದ ಉದ್ದಾಲಕರು, ಪ್ರಾಕ್= ಮೊದಲು, ಸದೃಷ್ಟಾಂತಂ= ದೃಷ್ಟಾಂತ ಸಹಿತವಾಗಿ, ಭೇದಂ ಪ್ರಸ್ತಾವ್ಯ= ಭೇದವನ್ನು ಪ್ರಸ್ತಾಪಿಸಿ, ತತ್ತ್ವಮಸ್ಯಾದಿ ವಾಕ್ಯೇನ= ಅನಂತರ ತತ್ತ್ವಮಸಿ ಮೊದಲಾದ ವಾಕ್ಯದಿಂದ, ಐಕ್ಯಂ= ಐಕ್ಯವನ್ನು, ಕಥಂ ವದೇತ್= ಹೇಗೆ ಹೇಳುತ್ತಾರೆ ಎಂದು, ವದ= ಹೇಳು.

**ಅನುವಾದ–** ಇದೇ ಶ್ರುತಿಯು ಮುಂದೆ ಮನಃ ಶಬ್ದ ಸ್ಥಾನದಲ್ಲಿ ಜೀವವಾಚಕವಾದ ಪ್ರಜಾ ಶಬ್ದವನ್ನು ಇಟ್ಟು 'ಸನ್ಮೂಲಾಃ ಸೌಮ್ಯೇಮಾಃ ಸರ್ವಾಃ ಪ್ರಜಾಃ' ಎಂದು ಎಲ್ಲ ಪ್ರಜೆಗಳಿಗೂ ಸನ್ಮೂಲತ್ವವನ್ನೇ ಹೇಳುತ್ತದೆ. ಆ ಕಾರಣದಿಂದಲೂ ಈ ಮನಃ ಪ್ರಾಣಶಬ್ದಗಳು ಜೀವಪರಮಾತ್ಮ ಪರವೆಂದು ಸಿದ್ಧವಾಗುತ್ತವೆ. ಗುರುಗಳಾದ ಉದ್ದಾಲಕರು ಹೀಗೆ ಮೊದಲು ದೃಷ್ಟಾಂತ ಸಹಿತವಾಗಿ ಭೇದವನ್ನು ಪ್ರಸ್ತಾಪಿಸಿ ಅನಂತರ ತತ್ತ್ವಮಸಿ ವಾಕ್ಯದಿಂದ ಹೇಗೆ ಐಕ್ಯವನ್ನು ಹೇಳುತ್ತಾರೆ ಎಂದು ಹೇಳು.

**ಭಾವವಿಲಾಸಿನೀ–** ತತ್ಸ್ಥಾನೇ ಮನಃಸ್ಥಾನೇ । ಏತತ್ಸಮಾಖ್ಯಯಾ ಪ್ರಾಗುಕ್ತಪ್ರಾಣ-ಪದಸ್ಯ ಬ್ರಹ್ಮಪರತಾ ಮನಃಪದಸ್ಯ ಜೀವಪರತಾ ಚೇತಿ ದ್ವಯಮಪಿ ಸಿದ್ಧಮಿತಿ ಭಾವಃ ॥ ೧೦೦೪- ೧೦೦೫ ॥

**ವಿವರಣೆ–** ದಾರ್ಷ್ಟಾಂತಿಕದಲ್ಲಿ 'ಸನ್ಮೂಲಾಃ ಸೌಮ್ಯೇಮಾಃ ಸರ್ವಾಃ ಪ್ರಜಾಃ ಸದಾಯತನಾಃ ಸತ್ಪ್ರತಿಷ್ಠಾಃ' ಎಂದು ಮನಃ ಶಬ್ದಕ್ಕೆ ಬದಲಾಗಿ ಪ್ರಜಾ ಶಬ್ದವನ್ನು ಉಪಯೋಗಿಸಿ ಮೂರು ಪ್ರಕಾರದಿಂದ ಜೀವನಿಗೂ ಮತ್ತು ಪರಮಾತ್ಮನಿಗೂ ಭೇದವನ್ನೇ ಹೇಳಿದೆ. ಆದ್ದರಿಂದ ಐಕ್ಯವು ಅಯುಕ್ತವಾದುದು ಎಂದು ಅಭಿಪ್ರಾಯ.

**ಯಸ್ತ್ವಾರಬ್ಧಾರ್ಥಮುತ್ಸೃಜ್ಯ ದ್ವಿರೂಪಾಯಾ ಗಿರೋ ಭರಾತ್ ।**
**ಮಧ್ಯೇऽನ್ಯಾರ್ಥಮಪಿ ವ್ಯರ್ಥಮಾಶಾಸ್ತೇ ಮದ್ಯಪಾಯ್ಯಸೌ ॥ ೧೦೦೬ ॥**

**ಅರ್ಥ–** ಯಸ್ತು= ಯಾವನು, ದ್ವಿರೂಪಾಯಾಃ ಗಿರೋಭರಾತ್= ಎರಡು ರೀತಿಯಲ್ಲಿಯೂ ಇರುವ ವಾಕ್ಯದ ಮೇಲಿನ ನಂಬಿಕೆಯಿಂದ, ಆರಬ್ಧಾರ್ಥಂ= ಉಪಕ್ರಮದಲ್ಲಿ ಹೇಳಿದ ಅರ್ಥವನ್ನು, ಉತ್ಸೃಜ್ಯ= ಪರಿತ್ಯಾಗ ಮಾಡಿ, ಮಧ್ಯೇ= ಮಧ್ಯದಲ್ಲಿ, ವ್ಯರ್ಥಂ= ವ್ಯರ್ಥವಾಗಿ, ಅನ್ಯಾರ್ಥಮಪಿ= ಬೇರೆ ಅರ್ಥವನ್ನು, ಆಶಾಸ್ತೇ= ಆಶಿಸುತ್ತಾನೆಯೋ (ಹೇಳುತ್ತಾನೆಯೋ), ಅಸೌ= ಅವನು, ಮದ್ಯಪಾಯೀ= ಮದ್ಯಪಾನವನ್ನು ಮಾಡಿದವನೇ ಸರಿ.

**ಅನುವಾದ–** ಯಾವನು ಎರಡು ರೂಪವುಳ್ಳ ವಾಕ್ಯದ ಮೇಲಿನ ವಿಶ್ವಾಸದಿಂದ ಉಪಕ್ರಮದಲ್ಲಿ ಹೇಳಿದ ಅರ್ಥವನ್ನು ಬಿಟ್ಟು ಮಧ್ಯದಲ್ಲಿ ಬೇರೆ ಅರ್ಥವನ್ನು ಹೇಳುತ್ತಾನೆಯೋ, ಅವನು ಮದ್ಯಪಾಯಿಯೇ ಸರಿ.

**ಭಾವವಿಲಾಸಿನೀ–** ಉಪಕ್ರಮವಿರುದ್ಧಮಪ್ಯರ್ಥಂ ವದಂತಮುಪಹಸತಿ ॥ **ಯಸ್ತ್ವಿತಿ** ॥ ದ್ವಿರೂಪಾಯಾಃ ತದಿತಿ ಅತದಿತಿ ಚ ದ್ವೇ ರೂಪೇ ಯಸ್ಯಾಃ ತಸ್ಯಾಃ । ಗಿರಃ ಸ ಆತ್ಮಾತತ್ತ್ವಮಸೀತಿ ಗಿರಃ । ಕ್ವಚಿತ್ ಪತಿವ್ರತಾರೂಪಂ ಕ್ವಚಿತ್ಸ್ವೈರಿಣೀರೂಪಂ ಚ ಯಸ್ಯಾನಾರ್ಯಾಸ್ತಸ್ಯಾ ಗಿರ ಇತಿ ಧ್ವನಿಃ । ಅನ್ಯಾರ್ಥಂ ಉಪಕ್ರಮವಿರುದ್ಧಾರ್ಥಂ ವ್ಯರ್ಥಂ ಪ್ರಯೋಜನಂ ವಿನಾಪಿ ಪ್ರಾಕ್ ಯಜ್ಞಾದಿ ಪುಣ್ಯಕರ್ಮಾರಭ್ಯ ಮಧ್ಯೇ ಸ್ವೈರಿಣೀವಾಕ್ಯಾತ್ ತಾಮಾಲಿಂಗನ್ಯಥಾ ಮದ್ಯಪಾಯೀ ತಥಾ ಸಾವಕಾಶವಾಕ್ಯಸ್ಯ ಉಪಕ್ರವಿರುದ್ಧಾರ್ಥಂ ವದನ್ನಪಿ ಮದ್ಯಪಾಯ್ಯೇವ ನ ವಿವೇಕೀತಿ ಭಾವಃ ॥ ೧೦೦೬ ॥

**ವಿವರಣೆ–** ಉಪಕ್ರಮದಲ್ಲಿ ಭೇದದೇ ಪ್ರಸ್ತುತವಾಗಿದೆ ಎಂದು ಹಿಂದೆಯೇ ಹೇಳಿದ್ದಾಗಿದೆ. ಮಧ್ಯದಲ್ಲಿ ತತ್ತ್ವಮಸಿ ಎಂದು ಅಭೇದವನ್ನು ಹೇಳಿದರೆ, ಅವನಿಗೆ ಹಿಂದಿನ ವಾಕ್ಯದ ಸ್ಮರಣೆಯಿಲ್ಲ ಎಂದು ಅರ್ಥ. ಆದ್ದರಿಂದ ಅವನನ್ನು ಮದ್ಯಪಾಯಿ ಎಂದು ಅಪಹಾಸ ಮಾಡುತ್ತಾರೆ. ಎರಡು ಪ್ರಕಾರವಾದ ವಾಕ್ಯ ಎಂದರೆ ತತ್ತ್ವಮಸಿ ಎಂದು ಅತತ್ತ್ವಮಸಿ ಎಂದು ಭೇದ ಮಾಡಲು ಯೋಗ್ಯವಾದ ವಾಕ್ಯ ಎಂದು ಅರ್ಥ. ಉಪಕ್ರಮಕ್ಕೆ ಅನುಗುಣವಾಗಿ ಅತತ್ತ್ವಮಸಿ ಎಂದು ಭೇದ ಮಾಡಿ, ಉಪಕ್ರಮದಲ್ಲಿ ಹೇಳಿದ ಭೇದವನ್ನೇ ಸ್ವೀಕರಿಸಬೇಕು ಎಂದು ಇಲ್ಲಿನ ಅಭಿಪ್ರಾಯ. ಒಂದೇ ಅರ್ಥವನ್ನು ಹೇಳುವ ಉಪಕ್ರಮವು ಪತಿವ್ರತೆ ಇದ್ದಂತೆ. ಎರಡು ರೀತಿಯ ಭೇದದಿಂದ ಎರಡು ಅರ್ಥಗಳನ್ನು ಕೊಡುವ ತತ್ತ್ವಮಸಿ ವಾಕ್ಯವು ವ್ಯಭಿಚಾರಿಣಿ ಇದ್ದಂತೆ. ವ್ಯಭಿಚಾರಿಣಿ ಸ್ತ್ರೀಯನ್ನು ಅವಲಂಬಿಸಿ ಪತಿವ್ರತೆಯನ್ನು ಪರಿತ್ಯಾಗ ಮಾಡುವವನು ಹೇಗೆ ನಿಂದ್ಯನೋ, ಹಾಗೆ ಸಾವಕಾಶ ವಾಕ್ಯವನ್ನು ಅವಲಂಬಿಸಿ ನಿರವಕಾಶ ವಾಕ್ಯವನ್ನು ಪರಿತ್ಯಾಗ ಮಾಡುವವನು ನಿಂದನೀಯನಾಗುತ್ತಾನೆ ಎಂದು ಅಭಿಪ್ರಾಯ.

**ಸತ್ಯತತ್ ತ್ವಮಸೀತ್ಯಸ್ಮದರ್ಥೇ ಮುಖ್ಯೇ ನ ಲಕ್ಷಣಾ ।**
**ನ ತೇ ಶ್ಲೋಕ್ಯಂ ನಾಪಿ ಶಕ್ಯಂ ಶಕ್ಯೈಕ್ಯಂ ತೇನ ಶೋಕ್ಯಸಿ ॥ ೧೦೦೭ ॥**

**ಅರ್ಥ–** ಅತತ್ತ್ವಮಸಿ ಇತಿ= ಅತತ್ತ್ವಮಸಿ ಎಂದು ಪದಚ್ಛೇದ ಮಾಡಿ, ಮುಖ್ಯೇ= ಮುಖ್ಯವಾದ ಭೇದರೂಪವಾದ, ಅಸ್ಮದರ್ಥೇ= ನಮ್ಮ ಅರ್ಥವು, ಸತಿ= ಇರುತ್ತಿರಲು, ಲಕ್ಷಣಾ ನ= ಲಕ್ಷಣಾವೃತ್ತಿಯೇ ಇಲ್ಲ, ತೇ= ನಿನಗೆ, ಶಕ್ಯೈಕ್ಯಂ= ಶಕ್ಯರಾದ ಅಲ್ಪಜ್ಞ ವಿಶಿಷ್ಟ ಜೀವ ಮತ್ತು ಸರ್ವಜ್ಞತ್ವ ವಿಶಿಷ್ಟ ಬ್ರಹ್ಮರ ಐಕ್ಯವು, ನ ಶ್ಲೋಕ್ಯಂ= ಹೇಳಲು ಸಹ ಅರ್ಹವಾದುದಲ್ಲ, ನಾಪಿ ಶಕ್ಯಂ= ಮತ್ತು ವಚನವೃತ್ತಿಯಿಂದ ಲಭ್ಯವಾಗುವ ಅರ್ಥವೂ ಅಲ್ಲ, ತೇನ= ಆದ್ದರಿಂದ, ಶೋಕ್ಯಸಿ= ನೀನು ಸಂಕಟವನ್ನು ಪಡುತ್ತೀಯೆ.

**ಅನುವಾದ– ಅತತ್ತ್ವಮಸಿ ಎಂದು ಪದಚ್ಛೇದ ಮಾಡಿ ಮುಖ್ಯವಾದ ಭೇದರೂಪವಾದ ಅರ್ಥವನ್ನು ಹೇಳುವ ನಮ್ಮ ಪಕ್ಷದಲ್ಲಿ ಲಕ್ಷಣಾವೃತ್ತಿಯನ್ನೇ ಆಶ್ರಯಿಸುವುದಿಲ್ಲ. ನಿನಗಾದರೂ ಶಕ್ಯವಾದ ಎಂದರೆ ವಾಚ್ಯವಾದ ಅಲ್ಪಜ್ಞತ್ವ ವಿಶಿಷ್ಟ ಜೀವನಿಗೂ ಮತ್ತು ಸರ್ವಜ್ಞತ್ವ ವಿಶಿಷ್ಟ ಬ್ರಹ್ಮನಿಗೂ ಐಕ್ಯವು ವಿರುದ್ಧ ಧರ್ಮಾಧಿಕರಣತ್ವವಿರುವುದರಿಂದ ಹೇಳಲು ಯೋಗ್ಯವೇ ಅಲ್ಲ. ಮತ್ತು ವಿಶಿಷ್ಟೈಕ್ಯವು ನಿನಗೆ ವಾಚ್ಯಾರ್ಥವೂ ಅಲ್ಲ. ಆದ್ದರಿಂದ ನೀನು ಸಂಕಟಕ್ಕೆ ಒಳಗಾಗುತ್ತೀಯೆ.**

**ಭಾವವಿಲಾಸಿನೀ– ಪ್ರಬಲಂ ದೂಷಣಾಂತರಂ ಚಾಹ – ಸತೀತಿ ॥ ಶಕ್ಯೈಕ್ಯಂ ತತ್ತ್ವಂಪದಮುಖ್ಯಾರ್ಥಯೋರೈಕ್ಯಮ್ । ತೇ ಮತೇ । ಶ್ಲೋಕ್ಯಂ ಚ ನ ವಿರುದ್ಧತ್ವಾಚ್ಛಕ್ಯಮಪಿ ನ । ತೇನ ತತ್ತ್ವವಾದಿನೋಕ್ತಮುಖ್ಯಾರ್ಥೇ ಸತಿ ಲಕ್ಷಣಾಽಯೋಗೇನ ಜಹದಜಹಲ್ಲಕ್ಷಣಯಾ ಐಕ್ಯಂ ವದತಸ್ತವ ಮುಖ್ಯಾರ್ಥಾಸಂಭವೇನ ಚ ಶೋಕೀ ದುಃಖವಾನ್ । ಮುಖ್ಯಾರ್ಥಸ್ತು ಮಾಯಿನ್ನೈವ ನಾಂಗೀಕ್ರೀಯತೇ । ಮುಖ್ಯೇ ಸಂಭವತ್ಯಮುಖ್ಯಾಯೋಗಾದಿತಿ ನ್ಯಾಯೇನ ಉಪಕ್ರಮಾನುಕೂಲಮುಖ್ಯಾರ್ಥೇ ಸತಿ ಲಕ್ಷಣಾಯಾಶ್ಚ ನಾತ್ರಾವಕಾಶಃ । ಅತಃ ಪರಸ್ಯ ಮಹಾಸಂಕಟಮಭೂದಿತಿ ಭಾವಃ ॥ ೧೦೦೭ ॥**

**ವಿವರಣೆ–** ತತ್ತ್ವಮಸಿ ಎಂಬಲ್ಲಿ ಮಾಯಾವಾದಿಗಳು ಜಹದಜಹಲ್ಲಕ್ಷಣವನ್ನು ಮಾಡಿ ಕೇವಲ ಚೈತನ್ಯಗಳಿಗೆ ಅಭೇದವನ್ನು ಹೇಳುತ್ತಾರೆ. ಆದ್ದರಿಂದ ಅವರೇ ಮುಖ್ಯಾರ್ಥವನ್ನು ಪರಿತ್ಯಾಗ ಮಾಡಿದವರು. ನಾವು ಎಂದೂ ಮುಖ್ಯಾರ್ಥವನ್ನು ಪರಿತ್ಯಾಗ ಮಾಡುವುದಿಲ್ಲ ಎಂದು ಅಭಿಪ್ರಾಯ.

**ತತ್ತ್ವಜ್ಞೋ ನ ಶ್ರುತೌ ತಸ್ಮಾತ್ ತತ್ತ್ವಜ್ಞೋ ಮತ್ತ ಏವ ಸಃ ॥ ೧೦೦೮ ॥**

**ಅರ್ಥ–** ತಸ್ಮಾತ್= ಆ ಕಾರಣದಿಂದ, ತತ್ತ್ವಜ್ಞಃ= ತತ್ ಪದಾರ್ಥಕ್ಕೆ ತ್ವಂ ಪದಾರ್ಥದ ಅಭೇದದ ಅರ್ಥವನ್ನು ತಿಳಿದವನು, ಶ್ರುತೌ= ಶ್ರುತಿಯ ವಿಷಯದಲ್ಲಿ, ತತ್ತ್ವಜ್ಞೋ ನ= ತತ್ತ್ವವನ್ನು ತಿಳಿದವನಲ್ಲ, ಸಃ= ಅವನು, ಮತ್ತ ಏವ= ಮತ್ತನಾದವನೇ ಸರಿ.

**ಅನುವಾದ–** ಆದ್ದರಿಂದ ಶ್ರುತಿಯಲ್ಲಿ ತತ್ತ್ವಮಸಿ ಎಂಬ ಪದಚ್ಛೇದವನ್ನು ಮಾಡಿ ಯಾರು ತತ್-ತ್ವಂ ಪದಾರ್ಥಗಳಿಗೆ ಅಭೇದವನ್ನು ತಿಳಿಯುತ್ತಾನೆಯೋ ಅವನು ಶ್ರುತಿಯ ತತ್ತ್ವವನ್ನು ತಿಳಿದವನೇ ಅಲ್ಲ. ಅವನು ಮತ್ತನಾದವನೇ ಸರಿ.

**ಭಾವವಿಲಾಸಿನೀ–** ತತ್ತ್ವಜ್ಞಃ ತದ್ವಾವಾಖ್ಯಾರ್ಥಜ್ಞಃ । ಶ್ರುತೌ ತತ್ತ್ವಜ್ಞೋ ನ ಕಿಂತು ಮತ್ತ ಏವೇತಿ ಸಂಬಂಧಃ। ಪೂರ್ವಶ್ಲೋಕೇಽನುಪ್ರಾಸೋಽಲಂಕಾರಃ । ಅಸ್ಮಿನ್ಲೋಕೇ ತತ್ತ್ವಜ್ಞೋ ಮತ್ತ ಏವ ನತು ತತ್ತ್ವಜ್ಞಃ ಕಿಂತು ಅತತ್ತ್ವಜ್ಞ ಏವ ತತ್ತ್ವಜ್ಞ ಇತಿ ಫಲಿತಾರ್ಥಂ ಚಾದಾಯ ದ್ವೇಧಾ ವಿರೋಧಾಲಂಕಾರಃ ॥ ೧೦೦೮ ॥

ಯತ್ ಸತ್ಪ್ರತಿಷ್ಠಸನ್ಮೂಲಸದಾಯತನತಾಂ ಶ್ರುತಿಃ ।
ಪ್ರಜಾಶಬ್ದೋಕ್ತಜೀವಾನಾಂ ವಕ್ತಿ ತತ್ರೈವ ಸಾದರಂ ।
ಅತಸ್ತ್ರಿಧಾ ಪ್ರಜಾನಾಂ ಚ ಸತಶ್ಚೋಕ್ತೈವ ಭಿನ್ನತಾ ॥ ೧೦೦೯ ॥

**ಅರ್ಥ–** ಯತ್= ಯಾವ ಕಾರಣದಿಂದ, ತತ್ರೈವ= ಅಲ್ಲಿಯೇ, ಶ್ರುತಿಃ= ಶ್ರುತಿಯು, ಪ್ರಜಾಶಬ್ದೋಕ್ತಜೀವಾನಾಂ= ಪ್ರಜಾ ಶಬ್ದದಿಂದ ಹೇಳಲ್ಪಟ್ಟ ಜೀವರಿಗೆ, ಸಾದರಂ= ಆದರ ಪೂರ್ವಕವಾಗಿ, ಸತ್ಪ್ರತಿಷ್ಠಸನ್ಮೂಲಸದಾಯತನತಾಂ= ಸತ್ಪ್ರತಿಷ್ಠತ್ವವನ್ನು ಸನ್ಮೂಲತ್ವವನ್ನು ಸದಾಯತನತ್ವವನ್ನು, ವಕ್ತಿ= ಹೇಳುತ್ತದೆಯೋ, ಅತಃ= ಆ ಕಾರಣದಿಂದ, ಪ್ರಜಾನಾಂ= ಪ್ರಜೆಗಳಿಗೂ, ಸತಶ್ಚ= ಮತ್ತು ಬ್ರಹ್ಮನಿಗೂ, ಭಿನ್ನತಾ= ಭೇದವು, ತ್ರಿಧಾ= ಮೂರು ರೀತಿಯಾಗಿ, ಉಕ್ತೈವ= ನಿಶ್ಚಯವಾಗಿ ಹೇಳಲ್ಪಟ್ಟಿದೆ.

**ಅನುವಾದ–** ಯಾವ ಕಾರಣದಿಂದ ಶ್ರುತಿಯು ಅಲ್ಲಿಯೇ ಪ್ರಜಾಶಬ್ದೋಕ್ತರಾದ ಜೀವರಿಗೆ ಆದರ ಪೂರ್ವಕವಾಗಿ ಸತ್ಪ್ರತಿಷ್ಠತ್ವವನ್ನೂ, ಸನ್ಮೂಲತ್ವವನ್ನೂ, ಸದಾಲಯತ್ವವನ್ನೂ ಹೇಳುತ್ತದೆಯೋ ಆ ಕಾರಣದಿಂದ ಮೂರು ರೀತಿಯಲ್ಲಿಯೂ ಪ್ರಜೆಗಳಿಗೂ ಮತ್ತು ಸತ್ಪದಾರ್ಥನಾದ ಬ್ರಹ್ಮನಿಗೂ ಭೇದವು ನಿಶ್ಚಯವಾಗಿ ಹೇಳಲ್ಪಟ್ಟಿದೆ.

**ಭಾವವಿಲಾಸಿನೀ–** ಪರಕೀಯಾರ್ಥೇ ಉಪಕ್ರಮದೃಷ್ಟಾಂತನ್ಯಾಯವಿರೋಧಾನುಕ್ತ್ವಾ ಸ್ವವಾಕ್ಯವಿರೋಧಂ ಚಾಹ – **ಯದಿತಿ** ॥ ಯತ್ ಯಸ್ಮಾತ್ । ತತ್ರ ಏವಮೇವ ಸೋಮ್ಯೇಮಾಃ ಸರ್ವಾಃ ಪ್ರಜಾಃ ಸನ್ಮೂಲಾಃ ಸದಾಯತನಾಃ ಸತ್ಪ್ರತಿಷ್ಠಾ ಇತಿ ದಾರ್ಷ್ಟಾಂತಿಕವಾಕ್ಯೇ ಬಹುಶೋ ಭೇದಕಥನಾತ್ ಸಾದರಮಿತ್ಯುಕ್ತಮ್ । ತ್ರಿಧಾ ಸನ್ಮೂಲಂ ಯಾಸಾಮಿತಿ ಸದಾಯತನಂ ಯಾಸಾಮಿತಿ ಪ್ರಕರ್ಷೇಣ ತಿಷ್ಠತ್ಯಸ್ಯಾಮಿತಿ ಪ್ರತಿಷ್ಠಾ ಸದೇವ ಪ್ರತಿಷ್ಠಾ ಯಾಸಾಮಿತಿ ಚ ಸೃಷ್ಟೇಃ ಪ್ರಾಕ್‌ಸೃಷ್ಟಿಮಧ್ಯೇ ಸೃಷ್ಟೇರುಪರಿತನಮೋಕ್ಷಕಾಲೇ ಚೇತ್ಯರ್ಥಃ। ಏವಂಚ ಏಕಸ್ಮಿನ್ನೇವ ವಾಕ್ಯೇ ಸ್ಪಷ್ಟಂ ಭೇದಮುಕ್ತ್ವಾ ಪುನಸ್ತತ್ತ್ವಮಸೀತ್ಯಭೇದಂ ಚ ಕಥಂ ಬ್ರೂಯಾದಿತಿ ಭಾವಃ । ಅಥವಾ ಉಕ್ತದಾರ್ಷ್ಟಾಂತಿಕವಾಕ್ಯೇ ಸ್ಪಷ್ಟಂ ಭೇದಕಥನಾತ್ ತದ್

ದೃಷ್ಟಾಂತವಾಕ್ಯೋಕ್ತನದೀಸಮುದ್ರಾದೀನಾಮಪಿ ಭೇದ ಏವ ವಿವೇಕಿನಾ ವಕ್ತವ್ಯ ಇತಿ ಭಾವಃ ॥ ೧೦೦೯ ॥

**ವಿವರಣೆ–** 'ಸನ್ಮೂಲಾಃ ಸೌಮ್ಯೇಮಾಃ ಸರ್ವಾಃ ಪ್ರಜಾಃ ಸದಾಯತನಾಃ ಸತ್ಪ್ರತಿಷ್ಠಾಃ' ಎಂಬುದು ಆ ಪ್ರಕರಣದಲ್ಲಿಯೇ ಇರುವ ವಾಕ್ಯ. ಅಲ್ಲಿ ಸನ್ಮೂಲ ಎಂಬ ಪದದಿಂದ ಸೃಷ್ಟಿಗಿಂತಲೂ ಮೊದಲು ಜೀವರು ಬ್ರಹ್ಮನನ್ನು ಆಶ್ರಯಿಸಿಕೊಂಡಿದ್ದಾರೆ ಎಂದೂ ಸದಾಯತನಾಃ ಎಂಬ ಪದದಿಂದ ಸ್ಥಿತಿಕಾಲದಲ್ಲಿ ಜೀವರು ಬ್ರಹ್ಮನನ್ನು ಆಶ್ರಯಿಸಿಕೊಂಡಿದ್ದಾರೆ ಎಂದೂ ಸತ್ ಪ್ರತಿಷ್ಠಾಃ ಮುಕ್ತಿಕಾಲದಲ್ಲಿ ಜೀವರು ಬ್ರಹ್ಮನನ್ನು ಆಶ್ರಯಿಸಿಕೊಂಡಿದ್ದಾರೆಂದೂ ಸ್ಪಷ್ಟವಾಗಿ ಮೂರು ಕಾಲದಲ್ಲಿಯೂ ಭೇದವನ್ನೇ ಹೇಳಿರುವುದರಿಂದ ಅಭೇದವು ಅಪ್ರಾಮಾಣಿಕವಾದುದು ಎಂದು ಅಭಿಪ್ರಾಯ.

**ಲವಣೋದಕದೃಷ್ಟಾಂತೇ ಸ್ಪಷ್ಟಂ ಭೇದೋ ನಿದರ್ಶಿತಃ ।**
**ಯನ್ನೈಕ್ಯಂ ಭಿನ್ನರಸಯೋರ್ಯೋಗೇಪ್ಯಾಲೋಡನಂ ಪರಮ್ ॥ ೧೦೧೦ ॥**

**ಅರ್ಥ–** ಲವಣೋದಕದೃಷ್ಟಾಂತೇ= ಲವಣೋದಕ ದೃಷ್ಟಾಂತದಲ್ಲಿ, ಸ್ಪಷ್ಟಂ= ಸ್ಪಷ್ಟವಾಗಿ, ಭೇದಃ ನಿದರ್ಶಿತಃ= ಭೇದವು ನಿದರ್ಶಿಸಲ್ಪಟ್ಟಿದೆ, ಯತ್= ಏಕೆಂದರೆ, ಭಿನ್ನರಸಯೋಃ= ಭಿನ್ನರಸಗಳುಳ್ಳ ಲವಣ ಮತ್ತು ಉದಕಗಳಿಗೆ, ಐಕ್ಯಂ ನ= ಅಭೇದವಿಲ್ಲ, ಯೋಗೇಪಿ= ಪರಸ್ಪರ ಸಂಬಂಧವುಂಟಾದರೂ, ಪರಂ ಆಲೋಡನಂ= ಅದು ಕೇವಲ ಮಿಶ್ರಣ ಮಾತ್ರ.

**ಅನುವಾದ–** ಲವಣೋದಕ ದೃಷ್ಟಾಂತದಲ್ಲಿಯೂ ಸಹ ಸ್ಪಷ್ಟವಾಗಿ ಭೇದವು ಹೇಳಲ್ಪಟ್ಟಿದೆ. ಏಕೆಂದರೆ ಭಿನ್ನ ರಸವುಳ್ಳ ಲವಣ ಮತ್ತು ಉದಕಗಳಿಗೆ ಐಕ್ಯವಿಲ್ಲ. ಪರಸ್ಪರ ಸಂಬಂಧವಿದ್ದರೂ ಅದು ಕೇವಲ ಮಿಶ್ರಣರೂಪವಾದುದು.

**ಭಾವವಿಲಾಸಿನೀ–** ಲವಣೋದಕದೃಷ್ಟಾಂತೇ ಭೇದಮನುಭಾವಯತಿ ॥ ಯನ್ನೈಕ್ಯಮಿತಿ ॥ ಯತ್ ಯಸ್ಮಾತ್ । ಭಿನ್ನರಸಯೋಃ ಮಧುರಲವಣಾಖ್ಯರಸಯುಕ್ತಯೋರ್ಲವಣೋದಕಯೋಃ । ಹೇತುಗರ್ಭಮಿದಂ ವಿಶೇಷಣಮ್ । ಭಿನ್ನರಸತ್ವೇನ ವಿರುದ್ಧಧರ್ಮಾಕ್ರಾಂತತ್ವಾದೇವ ನೈಕ್ಯಮಿತ್ಯರ್ಥಃ । ಯೋಗೇ ಲವಣಸ್ಯ ಜಲಸಂಬಂಧೇ । ಜಲಾಂತಃಪ್ರವೇಶನ ಇತ್ಯರ್ಥಃ । ಪರಂ ಕೇವಲಮ್ । ಮೃತ್ತಿಕಾಯಾ ಜಲೇನೇವಾಲೋಡನಮೇವ ನ ತ್ವೈಕ್ಯಮಿತ್ಯರ್ಥಃ ॥ ೧೦೧೦ ॥

**ವಿವರಣೆ–** ಉದಕಕ್ಕೆ ಮಧುರ ರಸ, ಲವಣಕ್ಕೆ ಲವಣ ರಸ. ಆದ್ದರಿಂದ ಅವೆರಡಕ್ಕೂ ಭಿನ್ನ ಭಿನ್ನ ರಸಗಳಿವೆ. ಭಿನ್ನ ರಸಗಳು ಇರುವ ಕಾರಣದಿಂದ ವಿರುದ್ಧ ಧರ್ಮಾದಿಕರಣಗಳಾದ ಅವುಗಳಿಗೆ ಐಕ್ಯವಿಲ್ಲ. ಮಣ್ಣನ್ನು ನೀರಿನಲ್ಲಿ ಕದಲಿದರೆ ಹೇಗೆ ಮಿಶ್ರಣವೋ, ಅದರಂತೆ ಇಲ್ಲಿಯೂ ಮಿಶ್ರಣ ಮಾತ್ರ ಎಂದು ಅಭಿಪ್ರಾಯ.

ಯಥಾ ತಪ್ತೋದಕೇ ರೂಪಸ್ಪರ್ಶಾಭ್ಯಾಮಭಿಭೂತಯೋಃ ।
ಅಬಗ್ನ್ಯೋರುಭಯೋರ್ಯೋಗಸ್ತಥೈವ ಲವಣೋದಕೇ ।
ರೂಪಾಭಿಭೂತಲವಣೇ ರಸಸ್ಯಾಭಿಭವೋ ಜಲೇ ॥ ೧೦೧೧ ॥

**ಅರ್ಥ–** ಯಥಾ= ಹೇಗೆ, ತಪ್ತೋದಕೇ= ಬಿಸಿ ನೀರಿನಲ್ಲಿ, ರೂಪಸ್ಪರ್ಶಾಭ್ಯಾಂ= ರೂಪ ಮತ್ತು ಸ್ಪರ್ಶಗಳಿಂದ, ಅಭಿಭೂತಯೋಃ= ಅಭಿಭೂತವಾದ, ಉಭಯೋಃ ಅಬಗ್ನ್ಯೋಃ= ಜಲ ಮತ್ತು ಉದಕ ಇವೆರಡಕ್ಕೂ, ಯೋಗಃ= ಮಿಶ್ರಣವೋ, ತಥೈವ= ಹಾಗೆಯೇ, ಲವಣೋದಕೇ= ಲವಣೋದಕದಲ್ಲಿ, ರೂಪಾಭಿಭೂತಲವಣೇ= ರೂಪಾಭಿಭವವನ್ನು ಹೊಂದಿರುವ ಲವಣದಲ್ಲಿ (ಜಲದ ಮಿಶ್ರಣ ಮಾತ್ರ), ಜಲೇ= ಜಲದಲ್ಲಿ, ರಸಸ್ಯಾಭಿಭವಃ= ರಸದ ಅಭಿಭವವಿದೆ.

**ಅನುವಾದ–** ಹೇಗೆ ಬಿಸಿನೀರಿನಲ್ಲಿ ರೂಪಸ್ಪರ್ಶಗಳ ಅಭಿಭವವುಳ್ಳ ಅಗ್ನಿ ಮತ್ತು ಉದಕಗಳಿಗೆ ಮಿಶ್ರಣ ಮಾತ್ರವೋ, ಅದರಂತೆ ಲವಣೋದಕದಲ್ಲಿ ರೂಪಾಭಿಭವವನ್ನು ಹೊಂದಿದ ಲವಣದೊಂದಿಗೆ ರಸಾಭಿಭವವನ್ನು ಹೊಂದಿದ ಜಲದ ಮಿಶ್ರಣ ಮಾತ್ರ ಇದೆ.

**ಭಾವವಿಲಾಸಿನೀ–** ತರ್ಹಿ ಜಲಮಾಧುರ್ಯಸ್ಯ ಕಸ್ಮಾದನನುಭವ ಇತ್ಯಾಶಂಕಾಂ ದೃಷ್ಟಾಂತ-ಮುಖೇನ ಪರಿಹರತಿ – **ಯಥೇತಿ** ॥ ಯದ್ಯಪಿ ತಪ್ತೋದಕೇ ಜಲಸ್ಯ ಶೀತಸ್ಪರ್ಶಾಭಿಭವಃ। ಅಗ್ನೇಶ್ಚ ಶುಕ್ಲಭಾಸ್ವರರೂಪಾಭಿಭವಃ । ತಥಾಪಿ ಉಷ್ಣಸ್ಪರ್ಶಶಕ್ತ್ಯಾ ಜಲಾದ್ಭಿನ್ನೋಽಗ್ನಿರಪ್ಯಸ್ತ್ಯೇವ । ಜಲರೂಪಮಹಿಮ್ನಾ ಅಗ್ನೇರ್ಭಿನ್ನಂ ಜಲಮಪ್ಯಸ್ತಿ । ಏವಂ ಲವಣೋದಕೇಽಪಿ ಉದಕಸ್ಯ ಮಾಧುರ್ಯರಸಾಭಿಭವಃ। ಲವಣಸ್ಯ ಚ ರೂಪಾಭಿಭವಃ । ತಥಾಪಿ ರಸಶಕ್ತ್ಯಾ ಜಲಾದ್ಭಿನ್ನಂ ಲವಣಮಪ್ಯಸ್ತಿ । ರೂಪಶಕ್ತ್ಯಾ ಸಾಂಸಿದ್ಧಿಕದ್ರವತ್ವಶಕ್ತ್ಯಾ ಚ ಲವಣಾದ್ಭಿನ್ನಂ ಜಲಮಪ್ಯಸ್ತಿ । ಸ್ವನಿಷ್ಠಗುಣಯೋರೇವಾಭಿಭವಃ । ಸ್ವರೂಪೈಕ್ಯಂ ತು ನೋಭಯತ್ರಾಪಿ । ಅನ್ಯಥಾ ಅಭಿಭೂತರೂಪಸ್ಯ ಗ್ರಹಸ್ಯ ಗ್ರಸ್ತಪುರುಷೈಕ್ಯಂ ಚ ಸ್ಯಾದಿತಿ ಭಾವಃ ॥ ೧೦೧೧ ॥

**ವಿವರಣೆ–** ಅಗ್ನಿಯ ರೂಪ ಶುಕ್ಲಭಾಸ್ವರ ರೂಪ. ಜಲದ ಸ್ಪರ್ಶ ಶೀತಸ್ಪರ್ಶ. ತಪ್ತೋದಕದಲ್ಲಿ ಅಗ್ನಿಯ ಶುಕ್ಲಭಾಸ್ವರ ರೂಪವೂ ಕಾಣುವುದಿಲ್ಲ, ಜಲದ ಶೀತಸ್ಪರ್ಶವೂ ಕಾಣುವುದಿಲ್ಲ. ಆದರೂ ಉಷ್ಣಸ್ಪರ್ಶದ ಸಾಮರ್ಥ್ಯದಿಂದ ಜಲಕ್ಕಿಂತ ಭಿನ್ನವಾದ ಅಗ್ನಿಯು ಇಲ್ಲಿ ಇದ್ದೇ ಇದೆ. ಹಾಗೆಯೇ, ಜಲರೂಪದ ಸಾಮರ್ಥ್ಯದಿಂದ ಅಗ್ನಿಗಿಂತ ಭಿನ್ನವಾದ ಜಲವು ಅಲ್ಲಿ ಇದ್ದೇ ಇದೆ. ಅದರಂತೆ ಲವಣೋದಕದಲ್ಲಿ ಲವಣದ ರೂಪವು ಅಭಿಭೂತವಾಗಿದೆ. ಉದಕದ ಮಧುರ ರಸವೂ ಅಭಿಭೂತವಾಗಿದೆ. ಆದರೆ ಲವಣ ರಸದ ಮಹಿಮೆಯಿಂದ ಅಲ್ಲಿ ಲವಣವು ಇದ್ದೇ ಇದೆ. ಹಾಗೆಯೇ, ಜಲದ ರೂಪದ ಮಹಿಮೆಯಿಂದ ಜಲವು ಇದ್ದೇ ಇದೆ. ಮತ್ತು ಎರಡು ಕಡೆಗಳಲ್ಲಿಯೂ ಧರ್ಮಿಗೆ

ಅಭಿಭವವಿಲ್ಲ. ಧರ್ಮಿಗಳು ಇದ್ದೇ ಇವೆ. ಧರ್ಮಿಗಳಲ್ಲಿರುವ ಗುಣಗಳಿಗೆ ಮಾತ್ರ ಅಭಿಭವ. ರೂಪೈಕ್ಯವು ಎಲ್ಲಿಯೂ ಇಲ್ಲ. ಹಾಗೆ ಐಕ್ಯವನ್ನು ಒಪ್ಪಿದರೆ ಪಿಶಾಚಿಗ್ರಸ್ತ ಶರೀರದಲ್ಲಿ ರೂಪಾಭಿಭವವನ್ನು ಹೊಂದಿದ ಪಿಶಾಚಿಗೂ, ಮತ್ತು ಪಿಶಾಚಗ್ರಸ್ತ ಪುರುಷನಿಗೂ ಐಕ್ಯವನ್ನು ಹೇಳಬೇಕಾದೀತು ಎಂದು ಅಭಿಪ್ರಾಯ.

**ನದೀಸಮುದ್ರಾವಪ್ಯೇವಂ ಗಂಗಾಸಾಗರಸಂಗಮಃ ।**
**ಇತಿ ಶಾಸ್ತ್ರಪ್ರಸಿದ್ಧೇಶ್ಚ ವೃದ್ಧಾನಾಂ ಚ ಪ್ರಸಿದ್ಧಿತಃ ।**
**ನದೀಶುದ್ಧೋದಸಂಯೋಗೋ ವಾರ್ಧೇಃ ಸ್ಯಾಲ್ಲವಣೋದಕೇ ॥ ೧೦೧೨ ॥**

**ಅರ್ಥ–** ಗಂಗಾಸಾಗರ ಸಂಗಮಃ ಇತಿ = ಗಂಗಾ ಸಾಗರ ಸಂಗಮ ಎಂದು, ಶಾಸ್ತ್ರಪ್ರಸಿದ್ಧೇಶ್ಚ= ಶಾಸ್ತ್ರ ಪ್ರಸಿದ್ಧಿ ಇರುವುದರಿಂದಲೂ, ವೃದ್ಧಾನಾಂ ಚ= ಮತ್ತು ಹಿರಿಯರ ಪ್ರಸಿದ್ಧಿ ಇರುವುದರಿಂದಲೂ, ನದೀಸಮುದ್ರಾವಪಿ= ನದೀ ಸಮುದ್ರಗಳೂ ಸಹ, ಏವಂ= ಈ ರೀತಿಯಲ್ಲಿಯೇ. ನದೀ ಶುದ್ಧೋದಸಂಯೋಗಃ= ನದಿಯ ಶುದ್ಧವಾದ ನೀರಿನ ಸಂಯೋಗವು, ವಾರ್ಧೇಃ ಲವಣೋದಕೇ= ಸಮುದ್ರದ ಉಪ್ಪು ನೀರಿನಲ್ಲಿ, ಸ್ಯಾತ್= ಇರುತ್ತದೆ.

**ಅನುವಾದ– ಗಂಗಾಸಾಗರದ ಸಂಗಮ ಎಂಬ ಶಾಸ್ತ್ರ ಪ್ರಸಿದ್ಧಿಯಿಂದಲೂ ಮತ್ತು ಗಂಗಾಸಾಗರ ಸಂಗಮ ಎಂಬ ಲೋಕದ ವೃದ್ಧರ ಪ್ರಸಿದ್ಧಿಯಿಂದಲೂ ನದೀ ಸಮುದ್ರ ದೃಷ್ಟಾಂತದಲ್ಲಿಯೂ ಹೀಗೆಯೇ ಅರ್ಥವನ್ನು ಮಾಡಬೇಕು. ಅಲ್ಲಿಯೂ ನದಿಯ ಶುದ್ಧವಾದ ಜಲದ ಸಂಯೋಗವು, ಸಮುದ್ರದ ಲವಣ ಜಲದ ಜೊತೆಯಲ್ಲಿ ಉಂಟಾಗುವುದಷ್ಟೇ.**

**ಭಾವವಿಲಾಸಿನೀ– ದೃಷ್ಟಾಂತಾಂತರೇऽಪಿ ಭೇದಮುಪಪಾದಯತಿ ॥ ನದೀಸಮುದ್ರಾವಿತಿ ॥ ಏವಂ ಲವಣೋದಕವತ್ । ತತ್ರಾಪಿ ನದೀಜಲಸ್ಯ ರಸಾಭಿಭವಮಾತ್ರಂ ನ ತ್ವೈಕ್ಯಮ್ । ಈಷತ್ ಸಮುದ್ರಜಲಯೋಗೇ ಉಭಯಸ್ವಭಾವಸ್ಯಾಪ್ಯನುಭವೇನ ಐಕ್ಯಾದರ್ಶನಾತ್ । ಇಯಾಂಸ್ತು ವಿಶೇಷಃ । ಸಮುದ್ರಜಲಂ ಸರ್ವದಾ ಲವಣೇನಾಭಿಭೂತರಸಂ ನದೀಜಲಂ ತು ಕದಾಚಿತ್ ಸಮುದ್ರಲವಣಜಲೇನೈವಾಭಿಭೂತರಸಮಿತಿ । ಯುಕ್ತ್ಯಂತರಂ ಚಾಹ – ಗಂಗೇತಿ ॥ ನದೀಸಮುದ್ರಜಲಯೋರೈಕ್ಯೇ ಶಾಸ್ತ್ರೇ ಲೋಕೇ ಚ ಪ್ರಯುಜ್ಯಮಾನಸಂಬಂಧಾರ್ಥಕ ಸಂಗಮ-ಪದವಿರೋಧೇ ಇತಿ ಭಾವಃ । ವಾರ್ಧೇರ್ಲವಣೋದಕ ಇತಿ ಸಂಬಂಧಃ ॥ ೧೦೧೨ ॥**

**ವಿವರಣೆ–** 'ಸಿತಾಸಿತೇ ಸರಿತೇ ಯತ್ರ ಸಂಗತೇ' ಎಂದು ನದಿಗಳಿಗೆ ಪರಸ್ಪರ ಸಂಗಮವನ್ನು ಹೇಳುವ ವೇದವಾಕ್ಯವಿದೆ ಮತ್ತು ಪುರಾಣಗಳಲ್ಲಿ ಗಂಗಾಸಾಗರಸಂಗಮ ಎಂದೇ ಆ ಪುಣ್ಯಕ್ಷೇತ್ರವು ಪ್ರಸಿದ್ಧವಾಗಿದೆ. ಲೋಕ ಪ್ರಸಿದ್ಧಿಯಂತೂ ಈಗಲೂ ಇದ್ದೇ

ಇದೆ. ಸಂಗಮವು ಎರಡು ವಸ್ತುಗಳಿಗೇ ಆಗಬೇಕು. ಆದ್ದರಿಂದ ಸಂಗಮವನ್ನು ಹೊಂದುವ ವಸ್ತುಗಳಿಗೆ ಐಕ್ಯವಿಲ್ಲ ಎಂದು ಅಭಿಪ್ರಾಯ.

**ಶುದ್ಧೇ ಶುದ್ಧೋದಕಂ ಸಿಕ್ತಂ ತಾದೃಗೇವ ಭವೇತ್ ಪರಂ ।**
**ಏಕಪ್ರಕಾರೋದಕಯೋರಪ್ಯೈಕ್ಯಂ ನ ತಯೋಃ ಕಿಲ ॥ ೧೧೧೩ ॥**

**ಅರ್ಥ–** ಶುದ್ಧೇ= ಶುದ್ಧವಾದ ನೀರಿನಲ್ಲಿ, ಸಿಕ್ತಂ= ಬೆರೆಸಲ್ಪಟ್ಟ, ಶುದ್ಧೋದಕಂ= ಶುದ್ಧೋದಕವು, ಪರಂ= ಕೇವಲ, ತಾದೃಗೇವ= ಅದರಂತೆಯೇ, ಭವೇತ್= ಆಗುತ್ತದೆ, ಏಕಪ್ರಕಾರೋದಕಯೋರಪಿ ತಯೋಃ= ಒಂದೇ ರೀತಿಯ ಆ ಎರಡು ಜಲಗಳಿಗೆ ಸಹ, ಐಕ್ಯಂ ನ ಕಿಲ= ಐಕ್ಯವಿಲ್ಲವಷ್ಟೇ.

**ಅನುವಾದ– ಶುದ್ಧೋದಕಕ್ಕೆ ಶುದ್ಧೋದಕವನ್ನು ಬೆರೆಸಿದಾಗ ಶುದ್ಧೋದಕವು ಮೊದಲಿನ ನೀರಿಗೆ ಸದೃಶವಾಗುತ್ತದೆಯೇ ಹೊರತು, ಒಂದೇ ರೀತಿಯಲ್ಲಿರುವ ಆ ಎರಡು ನೀರುಗಳಿಗೆ ಐಕ್ಯವಿಲ್ಲವಷ್ಟೇ?**

**ಭಾವವಿಲಾಸಿನೀ– ಕಿಂಚ ಶ್ರುತೌ ಶುದ್ಧೋದಕಯೋರೇವ ಯೋಗೇ ಐಕ್ಯಸ್ಯ ನಿಷೇಧಾತ್ ಶುದ್ಧೋದಕ ಲವಣೋದಕಯೋಗೇ ನತರಾಮೈಕ್ಯಮಿತ್ಯಾಹ – ಶುದ್ಧ ಇತಿ ॥ ೧೧೧೩ ॥**

**ವಿವರಣೆ–** ಮಿಶ್ರಿತವಾದ ಶುದ್ಧೋದಕಗಳಿಗೇ ಐಕ್ಯವಿಲ್ಲದಿರುವಾಗ ಶುದ್ಧೋದಕ ಲವಣೋದಕಗಳಿಗೆ ಮಿಶ್ರಿತವಾದಾಗ ಹೇಗೆ ಐಕ್ಯವುಂಟಾಗುತ್ತದೆ ಎಂದು ಅಭಿಪ್ರಾಯ.

**ಸ್ವೋಕ್ತತಾದೃಕ್ತ್ವದಾರ್ಢ್ಯಾರ್ಥಮೇವೇತ್ಯೈಕ್ಯಂ ವ್ಯವಚ್ಛಿನತ್ ।**
**ಯತಃ ಶ್ರುತಿಸ್ತತಸ್ತತ್ರ ತಯೋರೈಕ್ಯಂ ನ ಸರ್ವಥಾ ॥ ೧೧೧೪ ॥**

**ಅರ್ಥ–** ಯತಃ= ಯಾವ ಕಾರಣದಿಂದ, ಸ್ವೋಕ್ತತಾದೃಕ್ತ್ವದಾರ್ಢ್ಯಾರ್ಥಂ= ತನ್ನಿಂದ ಹೇಳಲ್ಪಟ್ಟ ಸಾದೃಶ್ಯದ ದೃಢೀಕರಣಕ್ಕೋಸ್ಕರವಾಗಿ, ಶ್ರುತಿಃ= ಶ್ರುತಿಯು, ಏವ ಇತಿ= ಏವ ಎಂಬ ಅವಧಾರಣದಿಂದ, ಐಕ್ಯಂ ವ್ಯವಚ್ಛಿನತ್= ಐಕ್ಯವನ್ನು ನಿರಾಕರಿಸಿತೋ, ತತಃ= ಆ ಕಾರಣದಿಂದ, ತಯೋಃ= ಆ ಎರಡು ಶುದ್ಧ ಜಲಗಳಿಗೆ, ಸರ್ವಥಾ ನ ಐಕ್ಯಂ= ಯಾವ ರೀತಿಯಿಂದಲೂ ಐಕ್ಯವಿರುವುದಿಲ್ಲ.

**ಅನುವಾದ– ಶ್ರುತಿಯು ತಾನು ತಾದೃಕ್ ಎಂಬ ಪದದಿಂದ ಹೇಳಿದ ಸಾದೃಶ್ಯವನ್ನು ದೃಢೀಕರಿಸುವುದಕ್ಕಾಗಿ ಏವಕಾರದಿಂದ ಐಕ್ಯದ ವ್ಯವಚ್ಛೇದವನ್ನು ಮಾಡಿತು. ಆದ್ದರಿಂದ ಅಲ್ಲಿ ಆ ಶುದ್ಧವಾದ ಎರಡು ಜಲಗಳಿಗೂ ಯಾವ ರೀತಿಯಿಂದಲೂ ಐಕ್ಯವಿಲ್ಲ.**

**ಭಾವವಿಲಾಸಿನೀ– ಶ್ರುತಿಃ ಯಥೋದಕಂ ಶುದ್ಧೇ ಶುದ್ಧಮಾಸಿಕ್ತಂ ತಾದೃಗೇವ ಭವತೀತಿ ಶ್ರುತಿಃ ॥ ೧೧೧೪ ॥**

**ಏವಂ ಚೇತ್ ಕಥಮೈಕ್ಯಂ ಸ್ಯಾತ್ ಶುದ್ಧೋದಲವಣೋದಯೋಃ ।**
**ವೃದ್ಧೇಃ ಪ್ರತ್ಯಕ್ಷಸಿದ್ಧತ್ವಾದಪ್ಯೈಕ್ಯಂ ನೋಭಯತ್ರ ಚ ॥ ೧೦೧೫ ॥**

**ಅರ್ಥ–** ಏವಂ ಚೇತ್= ಹೀಗಿರುವಾಗ, ಶುದ್ಧೋದಲವಣೋದಯೋಃ= ಶುದ್ಧೋದಕ ಮತ್ತು ಲವಣೋದಕಗಳಿಗೆ, ಐಕ್ಯಂ= ಐಕ್ಯವು, ಕಥಂ ಸ್ಯಾತ್= ಹೇಗೆ ಉಂಟಾಗುತ್ತದೆ, ವೃದ್ಧೇಃ= ವೃದ್ಧಿಯು, ಪ್ರತ್ಯಕ್ಷಸಿದ್ಧತ್ವಾತ್ ಅಪಿ= ಪ್ರತ್ಯಕ್ಷಸಿದ್ಧವಾಗಿರುವುದರಿಂದಲೂ ಸಹ, ಉಭಯತ್ರ= ಶುದ್ಧೋದಕ ಲವಣೋದಕ ಮಿಶ್ರಣಸ್ಥಳದಲ್ಲಿಯೂ ಮತ್ತು ಶುದ್ಧೋದಕ ಶುದ್ಧೋದಕ ಮಿಶ್ರಣ ಸ್ಥಳದಲ್ಲಿಯೂ, ಐಕ್ಯಂ ನ= ಐಕ್ಯವಿಲ್ಲ.

**ಅನುವಾದ– ಹೀಗಿರುವುದರಿಂದ ಶುದ್ಧೋದಕ ಮತ್ತು ಲವಣೋದಕಗಳಿಗೆ ಹೇಗೆ ಐಕ್ಯವು ಉಂಟಾಗುತ್ತದೆ? ಪ್ರತ್ಯಕ್ಷವಾಗಿ ವೃದ್ಧಿಯು ಕಾಣುವುದರಿಂದ ಶುದ್ಧೋದಕ ಲವಣೋದಕಗಳಿಗೂ, ಶುದ್ಧೋದಕ ಶುದ್ಧೋದಕಗಳಿಗೂ ಐಕ್ಯವಿಲ್ಲ.**

**ಭಾವವಿಲಾಸಿನೀ–** ಯುಕ್ತ್ಯಂತರಂ ಚಾಹ – **ಬುದ್ಧೇರಿತಿ** ॥ ಉಭಯತ್ರ ಶುದ್ಧೋದಕಯೋರೇವ ಸಂಗಮೇ ಶುದ್ಧೋದಕಲವಣೋದಕಸಂಗಮೇ ಚ ॥ ೧೦೧೫ ॥

ನ ಹಿ ರಾಸೋತ್ಸವಸ್ಯಾಂತೇ ಬಹುಮೂರ್ತ್ಯೇಕತಾಂ ಗತೇ ।
ಕೃಷ್ಣೇ ವಿಶತಿ ನಂದಸ್ಯ ಗೃಹದ್ವಾರಮವರ್ಧತ ॥ ೧೦೧೬ ॥

**ಅರ್ಥ–** ರಾಸೋತ್ಸವಸ್ಯಾಂತೇ= ರಾಸೋತ್ಸವ ಮುಗಿದ ಮೇಲೆ, ಬಹುಮೂರ್ತ್ಯಾ= ಅನೇಕ ಮೂರ್ತಿಗಳಿಂದ, ಏಕತಾಂ ಗತೇ= ಏಕತ್ವವನ್ನು ಹೊಂದಿದ, ಕೃಷ್ಣೇ= ಕೃಷ್ಣನು, ವಿಶತಿ= ಪ್ರವೇಶಿಸುವಾಗ, ನಂದಸ್ಯ ಗೃಹದ್ವಾರಂ= ನಂದನ ಮನೆಯ ಬಾಗಿಲು, ನ ಹಿ ಅವರ್ಧತ= ದೊಡ್ಡದಾಗಲಿಲ್ಲ.

**ಅನುವಾದ–** ರಾಸೋತ್ಸವದ ಅವಸಾನದಲ್ಲಿ ತನ್ನ ಅನೇಕ ಮೂರ್ತಿಗಳಿಂದ ಏಕತ್ವವನ್ನು ಹೊಂದಿದ ಕೃಷ್ಣನು ನಂದನ ಗೃಹವನ್ನು ಪ್ರವೇಶಿಸಿದಾಗ ನಂದನ ಗೃಹದ್ವಾರವು ದೊಡ್ಡದಾಗಿಲ್ಲವಷ್ಟೇ?

**ಭಾವವಿಲಾಸಿನೀ–** ಪ್ರಾಗ್ಬಹುತಯಾ ದೃಷ್ಟಾನಾಮಪಿ ಪುನಃ ಸರ್ವಥೈಕ್ಯೇ ವೃದ್ಧ್ಯಭಾವಂ ದೃಷ್ಟಾಂತಮುಖೇನೋಪಪಾದಯತಿ ॥ **ನ ಹೀತಿ** ॥ ಬಹುಮೂರ್ತಿಭಿರೇಕತಾಮೈಕ್ಯಮ್ । ತಸ್ಮಾದೇಕೋದಕಸ್ಯ ಉದಕಾಂತರೇಣ ಸರ್ವಥೈಕ್ಯೇ ವೃದ್ಧಿರಯುಕ್ತೈವೇತಿ ಭಾವಃ ॥ ೧೦೧೬ ॥

**ವಿವರಣೆ–** ಮೊದಲು ಬಹುತ್ವದಿಂದ ಕೂಡಿದುದಾಗಿ ಕಂಡರೂ ಸ್ವರೂಪೈಕ್ಯವಿದ್ದರೆ ಅವುಗಳು ಒಂದುಗೂಡಿದರೆ ವೃದ್ಧಿ ಇರುವುದಿಲ್ಲವೆಂಬುದನ್ನು ಇಲ್ಲಿ ಕೃಷ್ಣನ ದೃಷ್ಟಾಂತದಿಂದ ಉಪಪಾದನೆ ಮಾಡುತ್ತಿದ್ದಾರೆ.

**ನದ್ಯಂಬುಯೋಗೇ ವರ್ಷಾಸು ವಾರ್ಧಿರಪ್ಯಭಿವರ್ಧತೇ ॥ ೧೦೧೭ ॥**

**ಅರ್ಥ–** ವರ್ಷಾಸು= ಮಳೆಗಾಲದಲ್ಲಿ, ನದ್ಯಂಬುಯೋಗೇ= ನದಿಗಳ ನೀರಿನ ಸಂಯೋಗ ಉಂಟಾದಾಗ, ವಾರ್ಧಿರಪಿ= ಸಮುದ್ರವೂ ಸಹ, ಅಭಿವರ್ಧತೇ= ವೃದ್ಧಿಯನ್ನು ಹೊಂದುತ್ತದೆ.

**ಅನುವಾದ– ಮಳೆಗಾಲದಲ್ಲಿ ನದಿಗಳ ನೀರು ಸಮುದ್ರವನ್ನು ಸೇರಿದಾಗ ಸಮುದ್ರವೂ ವೃದ್ಧಿಯನ್ನು ಹೊಂದುತ್ತದೆ.**

**ಭಾವವಿಲಾಸಿನೀ– ಅಸ್ತಿ ಚ ವಾರ್ಧಾವಪಿ ವೃದ್ಧಿರಿತ್ಯಾಹ – ನದ್ಯಂಬ್ವಿತಿ ॥ ೧೦೧೭ ॥**

**ಯತಶ್ಚೋಕ್ತಂ ಪುರಾಣೇಷು ಸಂಗಮೇ ದ್ವಿಗುಣಂ ಫಲಂ ।**
**ಅತಶ್ಚ ನ ತಯೋರೈಕ್ಯಮೈಕ್ಯೇ ಯತ್ ಸ್ಯಾತ್ ಫಲೈಕತಾ ॥ ೧೦೧೮ ॥**

**ಅರ್ಥ–** ಯತಃ= ಯಾವ ಕಾರಣದಿಂದ, ಪುರಾಣೇಷು= ಪುರಾಣಗಳಲ್ಲಿ, ಸಂಗಮೇ= ಸಂಗಮಗಳಲ್ಲಿ(ಮಾಡಿದ ಸ್ನಾನಗಳಿಗೆ), ದ್ವಿಗುಣಂ ಫಲಂ= ಎರಡು ಪಟ್ಟು ಫಲವು, ಉಕ್ತಂ= ಹೇಳಲ್ಪಟ್ಟಿದೆಯೋ, ಅತಶ್ಚ= ಆ ಕಾರಣದಿಂದಲೂ, ತಯೋಃ= ಆ ಜಲಗಳಿಗೆ, ಐಕ್ಯಂ ನ= ಐಕ್ಯವಿಲ್ಲ, ಯತ್= ಏಕೆಂದರೆ, ಐಕ್ಯೇ= ಐಕ್ಯವು ಇದ್ದರೆ, ಫಲೈಕತಾ= ಒಂದೇ ಫಲವು, ಸ್ಯಾತ್= ದೊರೆಯಬೇಕಾಗಿದ್ದಿತು.

**ಅನುವಾದ– ಪುರಾಣಗಳಲ್ಲಿ ಸಂಗಮಗಳಲ್ಲಿ ಮಾಡಿದ ಸ್ನಾನಗಳಿಗೆ ದ್ವಿಗುಣ ಫಲ ಎಂದು ಹೇಳಿರುವುದರಿಂದಲೂ ಆ ಜಲಗಳಿಗೆ ಐಕ್ಯವಿಲ್ಲ. ಐಕ್ಯವಿದ್ದಿದ್ದರೆ ಒಂದೇ ಫಲವು ದೊರೆಯಬೇಕಾಗಿದ್ದಿತು.**

**ಭಾವವಿಲಾಸಿನೀ– ಯುಕ್ತ್ಯಂತರಂ ಚಾಹ – ಯತ ಇತಿ ॥ ಯತ್ ಯಸ್ಮಾತ್ । ಫಲೈಕತಾ ಏಕಫಲತ್ವಮ್ । ಉಭಯೋರೈಕ್ಯೇ ಸ್ಥಲಾಂತರೇ ಏಕಸ್ಮಾದೇಕಫಲವತ್ ಸಂಗಮೇಽಪಿ ಏಕಮೇವ ಫಲಂ ಸ್ಯಾತ್ । ಫಲದ್ವೈಗುಣ್ಯೇ ನ ಕಿಂಚಿತ್ಕಾರಣಮಿತಿ ಭಾವಃ ॥ ೧೦೧೮ ॥**

**ಸಮುದ್ರೋದೇಪಿ ಲವಣದ್ರವ್ಯಸ್ಯ ಚ ಜಲಸ್ಯ ಚ ।**
**ಸಂಯೋಗ ಏವೇಶಕೃತಃ ಸರಿದಬ್ಧ್ಯೋಸ್ತು ಕಿಂ ಪುನಃ ॥ ೧೦೧೯ ॥**

**ಅರ್ಥ–** ಸಮುದ್ರೋದೇಪಿ= ಸಮುದ್ರದ ನೀರಿನಲ್ಲಿಯೂ, ಲವಣದ್ರವ್ಯಸ್ಯ ಚ ಜಲಸ್ಯ ಚ= ಲವಣ ದ್ರವ್ಯಕ್ಕೂ ಮತ್ತು ಜಲಕ್ಕೂ, ಈಶಕೃತಃ= ಈಶ್ವರನಿಂದ ಮಾಡಲ್ಪಟ್ಟ, ಸಂಯೋಗ ಏವ= ಸಂಯೋಗ ಮಾತ್ರವೇ ಇದೆ, ಸರಿದಬ್ಧ್ಯೋಸ್ತು= ನದಿ ಮತ್ತು ಸಮುದ್ರಗಳ ನೀರಿನ ವಿಷಯದಲ್ಲಿ, ಕಿಂ ಪುನಃ= ಸಂಯೋಗ ಎಂದು ಪುನಃ ಹೇಳಬೇಕಾದ ಅವಶ್ಯಕತೆ ಇದೆಯೇ?

**ಅನುವಾದ–** ಸಮುದ್ರೋದಕದಲ್ಲಿಯೂ ಈಶ್ವರನಿಂದ ಮಾಡಲ್ಪಟ್ಟ ಲವಣದ್ರವ್ಯ ಮತ್ತು ಜಲಗಳ ಸಂಯೋಗವೇ ಇದೆ (ಹೊರತು ಐಕ್ಯವಿಲ್ಲ). ಇನ್ನು ನದಿ ಮತ್ತು ಸಮುದ್ರಗಳ ವಿಷಯದಲ್ಲಿ ಸಂಯೋಗವಿದೆ ಎಂದು ಪುನಃ ಹೇಳಬೇಕಾದ ಅವಶ್ಯಕತೆ ಇಲ್ಲ.

**ಭಾವವಿಲಾಸಿನೀ–** ನದೀಜಲಸಮುದ್ರಜಲಯೋರೈಕ್ಯಾಭಾವೇ ಕೈಮುತ್ಯಮಾಹ–**ಸಮುದ್ರೇತಿ** ॥ ಏಕದೇವತಾಕೇ ಸಮುದ್ರಜಲೇಽಪಿ ಲವಣಜಲಯೋಃ ಸಂಯೋಗ ಏವ ನ ತ್ವೈಕ್ಯಂ ತದಾ ಕಿಂ ವಕ್ತವ್ಯಃ ನದೀಶುದ್ಧಜಲಸ್ಯ ಸಮುದ್ರಲವಣಜಲಸ್ಯ ಚೈಕ್ಯಾಭಾವ ಇತಿ ಭಾವಃ ॥ ೧೦೧೯ ॥

ಪತ್ನ್ಯಸ್ತು ಸರಿತಃ ಸರ್ವಾಃ ಪತಿಸ್ತು ಸರಿತಾಂ ಪತಿಃ ।
ತದ್ಭೇದೋ ನೇಕ್ಷ್ಯತೇಃ ಪುಂಭಿರ್ಗಾಢಾಲಿಂಗನತಃ ಪರಮ್ ॥ ೧೦೨೦ ॥

**ಅರ್ಥ–** ಸರ್ವಾ ಸರಿತಃ= ಎಲ್ಲ ನದಿಗಳು, ಪತ್ನ್ಯಃ= ಪತ್ನಿಯರು, ಸರಿತಾಂ ಪತಿಃ= ಸಮುದ್ರನು (ಎಂದರೆ ವರುಣನು), ಪತಿಃ= ಅವರ ಪತಿ, ಪರಂ= ಕೇವಲ, ಗಾಢಾಲಿಂಗನತಃ= ಪತಿಪತ್ನಿಯರ ಗಾಢಾಲಿಂಗನದಿಂದ, ಪುಂಭಿಃ= ಪುರುಷರಿಂದ, ತದ್ಭೇದಃ= ಅಲ್ಲಿರುವ ಭೇದವು, ನೇಕ್ಷ್ಯತೇ= ಕಾಣುವುದಿಲ್ಲ.

**ಅನುವಾದ–** ಎಲ್ಲ ನದಿಗಳೂ ವರುಣನ ಪತ್ನಿಯರು. ಸಮುದ್ರರಾಜನಾದ ವರುಣನು ಪತಿ. ಪತಿಪತ್ನಿಯರಿಗೆ ಗಾಢ ಆಲಿಂಗನವಿರುವ ಕಾರಣದಿಂದಲೇ ಅವರ ದೇಹ ರೂಪವಾದ ಜಲಗಳಿಗೆ ಪುರುಷರಿಂದ ಭೇದವು ಗೃಹೀತವಾಗುವುದಿಲ್ಲ.

**ಭಾವವಿಲಾಸಿನೀ–** ತರ್ಹಿ ಜಲದ್ವಯವಿವೇಕಃ ಕುತೋ ನ ದೃಶ್ಯತ ಇತ್ಯತಃ ಸಾಹಿತ್ಯಮುದ್ರಯಾ ತತ್ರ ಹೇತುಂ ವದನ್ನಭಿಮನ್ಯಮಾನಯೋರೈಕ್ಯೇ ಅಭಿಮಾನಿನೋರಪ್ಯೈಕ್ಯಂ ಸ್ಯಾತ್ । ತಚ್ಚ ಯುಕ್ತಿವಿರುದ್ಧಮಿತ್ಯಾಹ – **ಪತ್ನ್ಯಸ್ತ್ವಿತಿ** ॥ ಯಥಾ ಗಾಢಾಲಿಂಗೇನ ದಂಪತ್ಯೋರ್ದೇಹಯೋರ್ವಿವೇಕೋ ನ ದೃಶ್ಯತೇ । ತಥಾ ನದೀಜಲಸ್ಯಾಪಿ ಸಮಾನಾಭಿಘಾತಾಖ್ಯದೋಷಾತ್ ಕ್ಷೀರಸನೀರಸ್ಯೇವ ವಿವೇಕೋ ನ ದೃಶ್ಯತ ಇತ್ಯರ್ಥಃ ॥ ೧೦೨೦ ॥

**ವಿವರಣೆ–** ಗಾಢಾಲಿಂಗನವಿರುವಾಗ ದಂಪತಿಗಳ ದೇಹಕ್ಕೆ ಭೇದವು ತೋರದಿರುವಂತೆ ನದೀ ಜಲ ಸಮುದ್ರಜಲಗಳಿಗೂ ಸಮಾನದ್ರವ್ಯಾಭಿಘಾತರೂಪವಾದ ದೋಷದಿಂದ ನೀರಿನಲ್ಲಿ ಬೆರೆತ ಹಾಲಿನಂತೆ ಭೇದವು ಕಾಣುವುದಿಲ್ಲ ಎಂದು ಅಭಿಪ್ರಾಯ.

ನ ಹಿ ಪ್ರಧಾನದಿಕ್ಪಾಲೋ ವರುಣೋಽಸೌ ನಿಜಾಲಯೇ ।
ಪಿತಾಮುನೀನಾಮೇಕಾಕೀ ಶೇತೇ ತಾರಾಪತೇಃ ಸಖಾ ॥ ೧೦೨೧ ॥

**ಅರ್ಥ–** ಪ್ರಧಾನದಿಕ್ಪಾಲಂ= ಪ್ರಧಾನ ದಿಕ್ಪಾಲಕನೂ, ತಾರಾಪತೇಃ ಸಖಾ= ತಾರಾಪತಿಯಾದ ಚಂದ್ರನ ಸ್ನೇಹಿತನಾದವನೂ, ಮುನೀನಾಂ ಪಿತಾ= ಮುನಿಗಳಿಗೆ ತಂದೆಯೂ ಆದ, ಅಸೌ ವರುಣಃ= ಈ ವರುಣನು, ನಿಜಾಲಯೇ= ತನ್ನ ಮನೆಯಲ್ಲಿ, ಏಕಾಕೀ= ಒಬ್ಬನೇ, ನ ಹಿ ಶೇತೇ= ಮಲಗುವುದಿಲ್ಲವಷ್ಟೇ?

**ಅನುವಾದ–** ಪ್ರಧಾನ ದಿಕ್ಪಾಲಕನೂ, ತಾರಾಪತಿಯಾದ ಚಂದ್ರನ ಸಖನೂ, ಭೃಗು ಮೊದಲಾದ ಋಷಿಗಳಿಗೆ ತಂದೆಯೂ ಆದ ವರುಣನು ತನ್ನ ಮನೆಯಲ್ಲಿ ಒಬ್ಬನೇ ಮಲಗುವುದಿಲ್ಲವಷ್ಟೇ.

**ಭಾವವಿಲಾಸಿನೀ–** ಮುನೀನಾಂ ಪಿತಾ ತಾರಾಪತೇಃ ಸಖೇತಿ ಚ ಏಕಾಕಿತ್ವಾಭಾವೇ ಹೇತುಗರ್ಭಂ ವಿಶೇಷಣದ್ವಯಮ್ ॥ ೧೦೨೦ ॥

**ವಿವರಣೆ–** ಇಲ್ಲಿ ಒಂದೊಂದು ವಿಶೇಷಣದಿಂದಲೂ ದಂಪತಿಗಳಿಗೆ ಆಲಿಂಗನವೇ ಇದೆ ಎಂದು ಸಾಹಿತ್ಯಮುದ್ರೆಯಿಂದ ಸಮರ್ಥಿಸುತ್ತಾರೆ.

**ನ ಚೇದ್ವರ್ಷಾಸು ವಾರ್ಧ್ಯಂಬುಮಧ್ಯಾನ್ನದ್ಯಂಬುವಾರ್ಧರಾಃ ।**
**ಆನಯಂತಿ ಕಥಂ ಶುದ್ಧಂ ವರ್ಷಂತಿ ಚ ತತಸ್ತತಃ ॥ ೧೦೨೨ ॥**

**ಅರ್ಥ–** ನ ಚೇತ್= ಮಿಶ್ರಣವಿಲ್ಲದಿದ್ದರೆ, ವರ್ಷಾಸು= ಮಳೆಗಾಲದಲ್ಲಿ, ವಾರ್ಧ್ಯಂಬುಮಧ್ಯಾತ್= ಸಮುದ್ರದ ನೀರಿನ ಮಧ್ಯದಿಂದ, ನದ್ಯಂಬುವಾರ್ಧರಾಃ= ನದಿಯ ನೀರಿನ ಮೋಡಗಳು, ಕಥಂ= ಹೇಗೆ, ಶುದ್ಧಂ= ಶುದ್ಧವಾದ ಜಲವನ್ನು, ಆನಯಂತಿ= ತೆಗೆದುಕೊಂಡು ಬರುತ್ತವೆ, ಚ= ಮತ್ತು, ತತಸ್ತತಃ= ಅಲ್ಲಲ್ಲಿ, ವರ್ಷಂತಿ= ಸುರಿಸುತ್ತವೆ?

**ಅನುವಾದ–** ಮಿಶ್ರಣವನ್ನು ಒಪ್ಪದಿದ್ದರೆ ಮಳೆಗಾಲದಲ್ಲಿ ಸಮುದ್ರದ ನೀರಿನ ಮಧ್ಯದಿಂದ ನದಿಯ ನೀರಿನ ಮೋಡಗಳು ಹೇಗೆ ಶುದ್ಧ ಜಲವನ್ನು ತೆಗೆದುಕೊಳ್ಳುತ್ತವೆ ಮತ್ತು ಅಲ್ಲಲ್ಲಿ ಅದನ್ನು ಸುರಿಸುತ್ತವೆ?

**ಭಾವವಿಲಾಸಿನೀ–** ವಿಪಕ್ಷೇ ಬಾಧಕಯುಕ್ತಿಂ ಚಾಹ – **ನ ಚೇದಿತಿ** ॥ ಐಕ್ಯಾಭಾವೋ ನ ಚೇದಿತ್ಯರ್ಥಃ ॥ ೧೦೨೨ ॥

**ವಿವರಣೆ–** ಮಿಶ್ರಣವನ್ನು ಒಪ್ಪದಿದ್ದರೆ ಈ ಶ್ಲೋಕದಲ್ಲಿ ಬಾಧಕವನ್ನು ಹೇಳುತ್ತಾರೆ. ಸಮುದ್ರದ ನೀರಿನಲ್ಲಿ ಅನೇಕ ಜಲಗಳು ಸೇರಿವೆ. ವಾಯುದೇವರು ಆ ಜಲಗಳನ್ನು ಪ್ರತ್ಯೇಕಿಸಿ ಅವುಗಳನ್ನು ಆವಿಯಾಗಿ ಮಾಡಿ ಮೇಲೆ ತೆಗೆದುಕೊಂಡು ಹೋಗಿ ಮೇಘವನ್ನಾಗಿ ಮಾಡಿ, ಆಯಾ ನದಿಗಳ ನೀರನ್ನು ಆಯಾ ನದಿಗಳ ಮೇಲೆಯೇ

ಸುರಿಸುತ್ತಾರೆ ಎಂದು ಸ್ಮೃತಿಯಿದೆ. ಮಿಶ್ರಣವಾಗಿದ್ದರೆ ಮಾತ್ರ ಬೇರ್ಪಡಿಸಬಹುದು. ಆದ್ದರಿಂದ ವಾಯುದೇವರು ಬೇರ್ಪಡಿಸುತ್ತಾರೆ. ಐಕ್ಯವಿದ್ದಿದ್ದರೆ ಇಂತಹ ವಿಭಾಗವು ಸಾಧ್ಯವಿಲ್ಲವಾದ್ದರಿಂದ ಇಲ್ಲಿ ಜಲಗಳ ಸಂಯೋಗವನ್ನೇ ಒಪ್ಪಬೇಕು ಎಂದು ತಾತ್ಪರ್ಯ.

**ಶ್ವೇತಂ ಗಂಗೋದಕಂ ಸ್ವಾದು ತುಂಗಾಂಬು ಯಮುನಾಜಲಂ ।**
**ನೀಲಮಿತ್ಯಾದಿಭೋದೋಽಸ್ತಿ ಪ್ರತ್ಯಬ್ದಮಪಿ ತಜ್ಜಲೇ ॥ ೧೦೨೩ ॥**

**ಅರ್ಥ–** ಗಂಗೋದಕಂ= ಗಂಗೆಯ ಜಲವು, ಶ್ವೇತಂ= ಬಿಳಿ, ತುಂಗಾಂಬು= ತುಂಗೆಯ ಜಲವು, ಸ್ವಾದು= ಮಧುರ, ಯಮುನಾ ಜಲಂ= ಯಮುನೆಯ ಜಲವು, ನೀಲಂ= ಕಪ್ಪು, ಇತ್ಯಾದಿ ಭೇದಃ= ಈ ಮುಂತಾದ ಭೇದವು, ತಜ್ಜಲೇ= ಆಯಾ ನದಿಗಳ ನೀರಿನಲ್ಲಿ, ಪ್ರತ್ಯಬ್ದಮಪಿ= ಪ್ರತಿವರ್ಷವೂ, ಅಸ್ತಿ= ಇರುತ್ತದೆಯಷ್ಟೇ.

**ಅನುವಾದ– ಗಂಗೆಯ ಜಲವು ಬಿಳಿ. ತುಂಗೆಯ ಜಲವು ಸಿಹಿ. ಯಮುನೆಯ ಜಲವು ಕಪ್ಪು. ಈ ಮುಂತಾದ ಭೇದಗಳು ಪ್ರತಿವರ್ಷವೂ (ಯಾವಾಗಲೂ) ಆ ನದಿಗಳ ಜಲದಲ್ಲಿ ಇರುವುದಷ್ಟೇ?**

**ಭಾವವಿಲಾಸಿನೀ– ಸಮುದ್ರಮಧ್ಯಸ್ಥನದೀಜಲಾನಾಮಪಿ ಪರಸ್ಪರಮೈಕ್ಯಾಭಾವೇ ಯುಕ್ತಿಮಾಹ – ಶ್ವೇತ ಇತಿ ॥** ತಜ್ಜಲೇ ತಾಸಾಂ ಗಂಗಾದೀನಾಂ ಜಲೇ ॥ ೧೦೨೩ ॥

**ವಿವರಣೆ–** ಸಮುದ್ರ ಮಧ್ಯದಲ್ಲಿರುವ ನದಿಯ ಜಲಗಳಿಗೂ ಪರಸ್ಪರ ಐಕ್ಯವಿಲ್ಲ ಎಂಬ ವಿಷಯದಲ್ಲಿ ಇಲ್ಲಿ ಯುಕ್ತಿಯನ್ನು ಹೇಳುತ್ತಿದ್ದಾರೆ.

**ಸೋಽಬ್ಧೌ ಚ ಭಿನ್ನಭಿನ್ನಾಂಬುಸದ್ಭಾವೇನ ವಿನಾ ಕಥಂ ।**
**ನಹ್ಯಪೂರ್ವಂ ಸ ವಾರ್ವಾಹಃ ಕುರ್ವೀತಾಂಬು ಸ್ಥಲೇಸ್ಥಲೇ ॥ ೧೦೨೪ ॥**

**ಅರ್ಥ–** ಅಬ್ಧೌ= ಸಮುದ್ರದಲ್ಲಿ, ಭಿನ್ನಭಿನ್ನಾಂಬುಸದ್ಭಾವೇನ ವಿನಾ= ಭಿನ್ನ ಭಿನ್ನ ಜಲಗಳಿಗೆ ಸತ್ವವು ಇಲ್ಲದಿದ್ದರೆ, ಸಃ= ಆ ಭೇದವು, ಕಥಂ= ಹೇಗೆ ಕೂಡುತ್ತದೆ, ಸವಾರ್ವಾಹಃ= ಆ ಮೋಡವು, ಸ್ಥಲೇಸ್ಥಲೇ= ಪ್ರತಿಯೊಂದು ಸ್ಥಳದಲ್ಲಿಯೂ, ಅಪೂರ್ವಂ ಅಂಬು= ಹೊಸ ಹೊಸ ನೀರನ್ನೇ, ನ ಕುರ್ವೀತ ಹಿ= ಸೃಷ್ಟಿಸುವುದಿಲ್ಲವಷ್ಟೇ.

**ಅನುವಾದ– ಸಮುದ್ರದಲ್ಲಿ ಭಿನ್ನ ಭಿನ್ನ ಜಲಗಳು ಇಲ್ಲದಿದ್ದರೆ ಆ ಭೇದವು ಹೇಗೆ ಉಪಪನ್ನವಾಗುತ್ತದೆ? ಮೋಡವು ಪ್ರತಿಯೊಂದು ಸ್ಥಳದಲ್ಲಿಯೂ ಹೊಸ ಹೊಸ ನೀರನ್ನು ಸೃಷ್ಟಿಸುವುದಿಲ್ಲವಷ್ಟೇ?**

**ಭಾವವಿಲಾಸಿನೀ– ಸಃ ಭೇದಃ । ವಾರ್ವಾಹ ಇತಿ ಹೇತುಗರ್ಭಂ ವಿಶೇಷಣಮ್ । ಪ್ರಾಗ್ ವಿದ್ಯಮಾನೋದಕಸ್ಯ ಪ್ರಾಪಕ ಏವ ನತು ಕರ್ತಾ । ತಸ್ಮಾದುದಕವೈಚಿತ್ರ್ಯಂ ನ ತನ್ನಿಮಿತ್ತಕಮಿತಿ ಭಾವಃ ॥ ೧೦೨೪ ॥**

**ವಿವರಣೆ–** ವಾರ್ವಾಹ ಎಂಬ ಮೋಡವನ್ನು ಹೇಳುವ ಶಬ್ದವೇ ನೀರನ್ನು ಹೊರುವಂತಹದು ಎಂಬ ಅರ್ಥವನ್ನು ಹೇಳುತ್ತದೆ. ಅಂದರೆ ಮೋಡವು ನೀರನ್ನು ಹೊರುತ್ತದೆಯೇ ಹೊರತು ಸೃಷ್ಟಿಸುವುದಿಲ್ಲ. ಆದ್ದರಿಂದ ಸಮುದ್ರದ ಮಧ್ಯದಲ್ಲಿರುವ ನದೀ ಜಲಗಳಲ್ಲಿಯೂ ಭೇದವು ಇದ್ದೇ ಇದೆ ಎಂದು ಸಿದ್ಧವಾಗುತ್ತದೆ.

**ಸರ್ವೇ ಚ ಸಂಗಮಂ ಬ್ರೂಯುಸ್ತ್ವಂ ಬ್ರೂಷೇ ಕಥಮೇಕತಾಮ್ ।**
**ಹಂತಾಜ್ಞಾಶ್ಚ ಹಸೇಯುಸ್ತ್ವಾಂ ಪೂರ್ಣಪ್ರಜ್ಞಭಟಾಸ್ತು ಕಿಮ್ ॥ ೧೦೨೫ ॥**

**ಅರ್ಥ–** ಸರ್ವೇ ಚ= ಮತ್ತು ಎಲ್ಲರೂ, ಸಂಗಮಂ ಬ್ರೂಯುಃ= ಸಂಗಮವೆಂದು ಹೇಳುತ್ತಾರೆ, ತ್ವಂ= ನೀನು, ಏಕತಾಂ= ಅಭೇದವನ್ನು, ಕಥಂ ಬ್ರೂಷೇ= ಹೇಗೆ ಹೇಳುತ್ತೀಯೇ, ಹಂತ= ಆಶ್ಚರ್ಯ, ತ್ವಾಂ= ನಿನ್ನನ್ನು, ಅಜ್ಞಾಶ್ಚ= ಅಜ್ಞರೂ, ಹಸೇಯುಃ= ಅಪಹಾಸವನ್ನು ಮಾಡುತ್ತಾರೆ, ಪೂರ್ಣಪ್ರಜ್ಞಭಟಾಸ್ತು= ಪೂರ್ಣಪ್ರಜ್ಞಾಚಾರ್ಯರ ಸೈನಿಕರಾದರೂ, ಕಿಂ= ಇನ್ನು ಹೇಳುವುದೇನು.

**ಅನುವಾದ–** ಎಲ್ಲರೂ ಸಂಗಮವೆಂದು ಕರೆಯುತ್ತಾರೆ. ನೀನು ಮಾತ್ರ ಅಭೇದವೆಂದು ಹೇಳುತ್ತೀಯೆ. ಆಶ್ಚರ್ಯ! ಅಜ್ಞರೂ ನಿನ್ನನ್ನು ಅಪಹಾಸ ಮಾಡುತ್ತಾರೆ. ಇನ್ನು ಪೂರ್ಣಪ್ರಜ್ಞಾಚಾರ್ಯರ ಭಟರು ಹಾಸ್ಯಮಾಡುತ್ತಾರೆಂದು ಹೇಳುವುದೇನು?

**ಭಾವವಿಲಾಸಿನೀ–** ಕಿಂಚ ಶ್ರೌತಸ್ಮಾರ್ತಲೌಕಿಕಪ್ರವಾದಬಲಾತ್ ಶುದ್ಧಜಲಾನಾಮಪಿ ಮೇಲನೇ ಸತಿ ಸಂಗಮ ಏವ ನ ತ್ವೈಕ್ಯಮ್ । ಕಿಂ ಪುನರ್ಲವಣೋದಕಶುದ್ಧೋದಕಯೋರಿತಿ ಭಾವೇನಾಹ – **ಸರ್ವೇ ಚೇತಿ** ॥ ೧೦೨೫ ॥

**ಸಿತಾಸಿತೇ ಚ ನದ್ಯೌ ದ್ವೇ ಪ್ರಯಾಗೇ ಸಂಗತೇ ಕಿಲ ।**
**ಮಿಶ್ರತೀರ್ಥಂ ಕಿಲೈಕತ್ರ ಚಿತ್ರತೀರ್ಥೋದಸಂಗ್ರಹಃ ॥ ೧೦೨೬ ॥**

**ಅರ್ಥ–** ಪ್ರಯಾಗೇ= ಪ್ರಯಾಗದಲ್ಲಿ, ಸಿತಾಸಿತೇ= ಬಿಳಿಯಾದ ಮತ್ತು ಕಪ್ಪಾದ, ದ್ವೇ ನದ್ಯೌ= ಎರಡು ನದಿಗಳು, ಸಂಗತೇ ಕಿಲ= ಸಂಗಮವನ್ನು ಹೊಂದುವೆಯಷ್ಟೇ, ಏಕತ್ರ= ನೈಮಿಶಾರಣ್ಯದಲ್ಲಿ ಒಂದು ಕಡೆ, ಚಿತ್ರತೀರ್ಥೋದಸಂಗ್ರಹಃ= ಅನೇಕ ತೀರ್ಥಗಳ ಜಲಗಳ ಮೇಲನ ರೂಪವಾದ, ಮಿಶ್ರತೀರ್ಥಂ ಕಿಲ= ಮಿಶ್ರತೀರ್ಥವೂ ಇದೆಯಷ್ಟೇ.

**ಅನುವಾದ–** ಪ್ರಯಾಗದಲ್ಲಿ ಬಿಳಿಯಾದ ಮತ್ತು ಕಪ್ಪಾದ ಎರಡು ನದಿಗಳು ಸಂಗಮವನ್ನು ಹೊಂದಿವೆಯಷ್ಟೇ? ನೈಮಿಶಾರಣ್ಯದಲ್ಲಿ ಒಂದು ಕಡೆ ನಾನಾ ತೀರ್ಥ ಜಲಗಳ ಮಿಶ್ರಣ ರೂಪವಾದ ಮಿಶ್ರತೀರ್ಥವೂ ಇದೆಯಷ್ಟೇ?

**ಭಾವವಿಲಾಸಿನೀ–** ಸಿತಾಸಿತೇ ಇತ್ಯನೇನ ಸಿತಾಸಿತೇ ಸರಿತೌ ಯತ್ರ ಸಂಗತೇ ತತ್ರಾಪ್ಲುತಾಸೋ ದಿವಮುತ್ಪತಂತೀತಿ ಶ್ರುತಿಂ ಸೂಚಯತಿ । ಏಕತ್ರ ಸರೋವರೇ । ಚಿತ್ರತೀರ್ಥೋದಸಂಗ್ರಹಃ ।

ನಾನಾತೀರ್ಥಜಲಮೇಲನಂ ಮಿಶ್ರತೀರ್ಥನಾಮಕತೀರ್ಥಂ ಕಿಲ । ಅಸ್ಥಿಪ್ರದಾನಾತ್ ಪೂರ್ವಂ ಸರ್ವತೀರ್ಥೇಷು ಸ್ನಾನಂ ಕರ್ತವ್ಯಮಿತಿ ದಧೀಚಿಪ್ರಾರ್ಥಿತೇನೇಂದ್ರೇಣ ಬ್ರಹ್ಮಾಂಡೋದರಗತತೀರ್ಥೇಭ್ಯಃ ಕಿಂಚಿತ್ ಕಿಂಚಿತ್ತೀರ್ಥಜಲಮಾನೀಯ ನೈಮಿಷಾರಣ್ಯಪ್ರಾಂತಸ್ಥಿತತದಾಶ್ರಮಸ್ಥಸರೋವರೇ ಮೇಲನಂ ಕೃತಮ್ । ತತ್ರ ಸ್ನಾತ್ವಾ ತೇನ ಮುನಿನಾ ಸ್ವದೇಹಾಸ್ಥಿ ಶಕ್ರಾಯ ದತ್ತಮ್ । ಯಸ್ಯ ತೀರ್ಥಸ್ಯ ಅದ್ಯಾಪಿ ಲೋಕೇ ವೇದೇ ಚ ಮಿಶ್ರತೀರ್ಥಮಿತ್ಯೇವ ನಾಮ । ಇಮಾಂ ಪೌರಾಣಿಕಪ್ರಸಿದ್ಧಿಂ ಕಿಲೇತ್ಯನೇನ ಸೂಚಯತಿ । ತಸ್ಮಾದ್ಬಹುಜಲಸಮಾಗಮೇಽಪಿ ಮಿಶ್ರಣಮೇವ ನ ತ್ವೈಕ್ಯಮಿತಿ ಭಾವಃ ॥ ೧೦೨೬ ॥

**ವಿವರಣೆ–** 'ಸಿತಾಸಿತೇ' ಎಂಬುದು ವೇದಮಂತ್ರದ ಅರ್ಥದ ಅನುವಾದ. ಮಿಶ್ರತೀರ್ಥದ ವಿಷಯದಲ್ಲಿ ಪುರಾಣಗಳಲ್ಲಿ ಹೀಗೆ ಕಥೆ ಇದೆ :- ದಧೀಚಿ ಋಷಿಗಳನ್ನು ದೇವತೆಗಳು ಸಮೀಪಿಸಿ ಅವರ ಅಸ್ಥಿಯನ್ನು ಪ್ರಾರ್ಥಿಸಿದಾಗ ದಧೀಚಿ ಋಷಿಗಳು ಎಲ್ಲ ತೀರ್ಥದಲ್ಲೂ ಸ್ನಾನ ಮಾಡಿ ಅನಂತರ ದೇಹತ್ಯಾಗವನ್ನು ಮಾಡುವುದೆಂದು ಆಶ್ರಮದಿಂದ ಹೊರಟರು. ಆಗ ದೇವತೆಗಳು ಹಾಗೆ ಮಾಡಿದರೆ ಬಹಳ ವಿಳಂಬವಾಗುವುದರಿಂದ ವೃತ್ರಾಸುರನು ಬಹಳ ಬಾಧೆಯನ್ನು ಕೊಡುತ್ತಾನೆ ಎಂದು ತಿಳಿದು, ಅವರ ಆಶ್ರಮದ ಸಮೀಪದಲ್ಲಿಯೇ ಒಂದು ದೊಡ್ಡ ಹಳ್ಳವನ್ನು ನಿರ್ಮಾಣ ಮಾಡಿ, ಅಲ್ಲಿ ಎಲ್ಲಾ ತೀರ್ಥಗಳ ನೀರನ್ನು ತಂದು ಹಾಕಿ ಇಲ್ಲಿಯೇ ಸ್ನಾನ ಮಾಡಿ, ದೇಹವನ್ನು ತ್ಯಾಗ ಮಾಡಿ ಎಂದು ಹೇಳಿದರು. ದಧೀಚಿ ಋಷಿಗಳು ಹಾಗೆಯೇ ಮಾಡಿದರು. ಆ ತೀರ್ಥಕ್ಕೆ ಈಗಲೂ ಮಿಶ್ರತೀರ್ಥ ಎಂದೇ ಹೆಸರಿದೆ. ಐಕ್ಯತೀರ್ಥವೆಂಬ ಹೆಸರಿಲ್ಲ. ವೇದದಲ್ಲಿಯೂ ಈ ಮಿಶ್ರತೀರ್ಥದ ಉಲ್ಲೇಖವಿದೆ.

ನಿವೃತ್ತಿಸಂಗಮಃ ಸಪ್ತನದೀನಾಂ ಸಂಗಮಃ ಕಿಲ ।
ಕೃಷ್ಣಾ ಭೀಮರಥೀ ಸಂಗಂ ಪ್ರಾಹುರದ್ಯಾಪಿ ಸಂಗಮಂ ॥ ೧೦೨೭ ॥

**ಅರ್ಥ–** ನಿವೃತ್ತಿಸಂಗಮಃ= ನಿವೃತ್ತಿ ಸಂಗಮ ಎಂಬ ಕ್ಷೇತ್ರವು, ಸಪ್ತನದೀನಾಂ= ಏಳು ನದಿಗಳ, ಸಂಗಮಃ ಕಿಲ= ಸಂಗಮವಷ್ಟೇ, ಅದ್ಯಾಪಿ= ಈಗಲೂ ಸಹ, ಕೃಷ್ಣಾ ಭೀಮರಥೀ ಸಂಗಂ= ಕೃಷ್ಣಾ ಮತ್ತು ಭೀಮರಥೀ ನದಿಗಳು ಕೂಡುವ ಸ್ಥಳವನ್ನು, ಸಂಗಮಂ= ಸಂಗಮವೆಂದೇ, ಪ್ರಾಹುಃ= ಹೇಳುತ್ತಾರೆ.

**ಅನುವಾದ–** ನಿವೃತ್ತಿಸಂಗಮ ಎಂಬ ಕ್ಷೇತ್ರವು ಕೃಷ್ಣಾ, ವೇಣೀ, ತುಂಗಾ, ಭದ್ರಾ, ಭೀಮರಥೀ, ಮಲಾಪಹಾರಿಣೀ, ಭವನಾಶಿನೀ ಈ ಏಳು ನದಿಗಳ ಸಂಗಮವಷ್ಟೇ? ಕೃಷ್ಣಾಭೀಮರಥಿ ನದಿಗಳು ಕೂಡುವ ಸ್ಥಳವನ್ನು ಈಗಲೂ ಸಂಗಮವೆಂದೇ ಕರೆಯುತ್ತಾರೆ.

**ಭಾವವಿಲಾಸಿನೀ–** ಸಪ್ತನದೀನಾಂ ಕೃಷ್ಣವೇಣೀತುರಂಗಾಭದ್ರಾಭಿಮರಥೀಮಲಾಪಹಾರಿಣೀ ಭವನಾಶಿನೀತಿ ಸಪ್ತನದೀನಾಂ ಸಂಗಮಃ ನಿವೃತ್ತಿಸಂಗಮಃ ಕಿಲ । ಜನಾಃ ಕಾಡಲೂರಸಂಗಮ ಇತಿ ಪ್ರಾಹುಃ ॥ ೧೦೨೭ ॥

**ವಿವರಣೆ–** ಕಾಡಲೂರುಸಂಗಮ ಎಂದು ಕರೆಯುತ್ತಾರೆ ಎಂದು ಸುರೋತ್ತಮ ತೀರ್ಥರ ವ್ಯಾಖ್ಯಾನವಿದೆ.

ನಾನಾರಸಸಮಾಹಾರೋ ಮಧುನ್ಯಪ್ಯೇಕತಾ ಕಿಲ ।
ವೃದ್ಧಿಶ್ಚ ರಸವೈಚಿತ್ರ್ಯಂ ನೋ ಚೇತ್ ತತ್ರ ಕುತೋ ವದ ॥ ೧೦೨೮ ॥

**ಅರ್ಥ–** ಮಧುನ್ಯಪಿ= ಮಧುವಿನಲ್ಲಿಯೂ ಸಹ, ಏಕತಾ= ಏಕತ್ವವೆಂದರೆ, ನಾನಾರಸ ಸಮಾಹಾರಃ ಕಿಲ= ಅನೇಕ ಪುಷ್ಪರಸಗಳ ಮಿಶ್ರಣವಷ್ಟೇ, ನೋ ಚೇತ್= ಇಲ್ಲದಿದ್ದರೆ, ತತ್ರ= ಆ ಮಧುವಿನಲ್ಲಿ, ವೃದ್ಧಿಶ್ಚ= ವೃದ್ಧಿಯೂ, ರಸವೈಚಿತ್ರ್ಯಂ= ಭಿನ್ನ ರಸವೂ, ಕುತಃ= ಎಲ್ಲಿಂದ ಬರುತ್ತದೆ ಎಂದು, ವದ= ಹೇಳು.

**ಅನುವಾದ–** ಜೇನುತುಪ್ಪದಲ್ಲಿಯೂ ಸಹ ನಾನಾಪುಷ್ಪ ರಸಗಳ ಮಿಶ್ರಣವೇ ಇರುವುದಷ್ಟೇ? ಹಾಗಿಲ್ಲದಿದ್ದರೆ ಜೇನುಗೂಡಿನಲ್ಲಿ ದಿನ ದಿನದಲ್ಲಿ ಕ್ರಮೇಣ ಜೇನುತುಪ್ಪದ ಅಭಿವೃದ್ಧಿಯು ಮತ್ತು ಆ ಜೇನುತುಪ್ಪದಲ್ಲಿ ಆಯಾ ಪುಷ್ಪ ರಸಗಳಿಗಿಂತ ವಿಭಿನ್ನ ರಸವು ಹೇಗೆ ಉಂಟಾಗುತ್ತದೆ ಎಂದು ಹೇಳು.

**ಭಾವವಿಲಾಸಿನೀ–** ಯಥಾ ಸೋಮ್ಯ ಮಧುಮಧುಕೃತೋ ನಿಸ್ತಿಷ್ಠಂತೀತಿ ದೃಷ್ಟಾಂತೇಽಪಿ ನಾನಾತ್ಯಯಾನಾಂ ವೃಕ್ಷಾಣಾಂ ಸಮವಹಾರಮೇಕತಾಂಗಮಯಂತೀತಿ ಶ್ರುತೌ ಸ್ಪಷ್ಟಂ ರಸಾನಾಂ ನಾನಾರಸಸಮಾಹಾರಸ್ಯೈವೈಕತ್ವೇನ ವ್ಯವಹಾರಾತ್ ತ್ವದಭಿಲಷಿತಸ್ವರೂಪೈಕ್ಯಸ್ಯ ನಾವಕಾಶ ಇತ್ಯಾಹ – **ನಾನೇತಿ** ॥ ಮಧುನಿ ಯೋ ನಾನಾರಸಾನಾಂ ಸಮಾಹಾರೋ ಮೇಲನಂ ಸ ಏವೈಕತಾ ಕಿಲೇತಿ ಸಂಬಂಧಃ। ಯುಕ್ತಿಂ ಚಾಹ – **ವೃದ್ಧಿರಿತಿ** ॥ ವೃದ್ಧಿಃ ದಿನೇ ದಿನೇ ಕ್ರಮೇಣಾಭಿವೃದ್ಧಿಃ। ರಸವೈಚಿತ್ರ್ಯಂ ಮಧುರಾಮ್ಲಾಲಾದಿಸವೈಚಿತ್ರ್ಯಮ್ । ನೋ ಚೇತ್ ಸಮಾಹಾರೈಕ್ಯಂ ನೋ ಚೇತ್ । ಸ್ವರೂಪೈಕ್ಯಮೇವ ಭವತಿ ಚೇದಿತ್ಯರ್ಥಃ। ತತ್ರ ಮಧುನಿ ॥ ೧೦೨೮ ॥

ಸತಿ ಸಂಪದ್ಯ ನ ವಿದುರಿತಿ ಸರ್ವತ್ರ ಯಚ್ಛ್ರುತಿಃ ।
ದಾರ್ಷ್ಟಾಂತಿಕೋಪಸಂಹಾರಂ ಕುರುತೇಽತೋ ನ ತತ್ಕಥಾ ॥ ೧೦೨೯ ॥

**ಅರ್ಥ–** ಯತ್= ಯಾವ ಕಾರಣದಿಂದ, ಶ್ರುತಿಃ= ಆ ಶ್ರುತಿಯು, ಸರ್ವತ್ರ= ಅನೇಕ ಸ್ಥಳಗಳಲ್ಲಿ, ಸತಿ ಸಂಪದ್ಯ ನ ವಿದುಃ ಇತಿ= ಸದ್ರೂಪನಾದ ಬ್ರಹ್ಮನಲ್ಲಿ ಸಂಪತ್ತಿಯನ್ನು ಹೊಂದಿ ತಿಳಿಯುವುದಿಲ್ಲ ಎಂದು, ದಾರ್ಷ್ಟಾಂತಿಕೋಪಸಂಹಾರಂ= ದಾರ್ಷ್ಟಾಂತಿಕದ

ಉಪಸಂಹಾರವನ್ನು, ಕುರುತೇ= ಮಾಡುತ್ತದೆಯೋ, ಅತಃ= ಆದ್ದರಿಂದಲೂ, ತತ್ಕಥಾ= ಐಕ್ಯ ಕಥೆಯು, ನ= ಇಲ್ಲಿ ಇಲ್ಲ.

**ಅನುವಾದ–** ಯಾವ ಕಾರಣದಿಂದ ಆ ಶ್ರುತಿಯು ಅನೇಕ ಸ್ಥಳಗಳಲ್ಲಿ ಸತಿಸಂಪದ್ಯ ನ ವಿದುಃ= ಸದ್ರೂಪನಾದ ಬ್ರಹ್ಮನಲ್ಲಿ ಸಂಪತ್ತಿಯನ್ನು ಹೊಂದಿದರೂ ಅದನ್ನು ತಿಳಿಯುವುದಿಲ್ಲ ಎಂದು ದಾರ್ಷ್ಟಾಂತಿಕದಲ್ಲಿ ಉಪಸಂಹಾರವನ್ನು ಮಾಡುತ್ತದೆಯೋ, ಆ ಕಾರಣದಿಂದಲೂ ಈ ಶ್ರುತಿಯಲ್ಲಿ ಐಕ್ಯವಾರ್ತೆಯು ಇಲ್ಲ.

**ಭಾವವಿಲಾಸಿನೀ–** ಸತಿ ಸಂಪದ್ಯ ನವಿದುರಿತ್ಯನೇನ ಪ್ರಕಾರೇಣ । ಇತಿಶಬ್ದಃ ಪ್ರಕಾರವಚನಃ । ಸತಿ ಸಂಪದ್ಯನವಿದುಃ ಸತ ಆಗಮ್ಯ ನವಿದುಃ ಸನ್ಮೂಲಾಃ ಸೋಮ್ಯೇಮಾಃ ಸರ್ವಾಃ ಪ್ರಜಾಃ ಸತಾ ಸೋಮ್ಯ ತದಾಸಂಪನ್ನೋ ಭವತೀತಿ ವಾಕ್ಯೇಷ್ವಿತ್ಯರ್ಥಃ । ಸರ್ವತ್ರ ಬಹುಷು ದೃಷ್ಟಾಂತೇಷು । ಅತಃ ದಾರ್ಷ್ಟಾಂತಿಕವಿರೋಧಾತ್ । ಏಕಸ್ಮಿನ್ನಪಿ ದೃಷ್ಟಾಂತೇ ಐಕ್ಯಕಥಾ ನ ॥ ೧೦೨೯ ॥

> ಯಸ್ಮಾತ್ ಪ್ರಾಗ್ಭಿನ್ನಯೋರೈಕ್ಯಂ ನ ಸ್ಯಾದ್ ಯತ್ನಶತೈರಪಿ ।
> ತಸ್ಮಾತ್ ಸರ್ವೇಽಪಿ ದೃಷ್ಟಾಂತಾ ಭೇದಸ್ಯೈವ ಪ್ರಸಾಧಕಾಃ ॥ ೧೦೩೦ ॥

**ಅರ್ಥ–** ಯಸ್ಮಾತ್= ಯಾವ ಕಾರಣದಿಂದ, ಪ್ರಾಗ್ಭಿನ್ನಯೋಃ= ಮೊದಲು ಭಿನ್ನವಾದ ಎರಡು ವಸ್ತುಗಳಿಗೆ, ಯತ್ನಶತೈರಪಿ= ನೂರು ಪ್ರಯತ್ನಗಳಿಂದಲೂ, ಐಕ್ಯಂ ನ ಸ್ಯಾತ್= ಐಕ್ಯವು ಉಂಟಾಗುವುದಿಲ್ಲವೋ, ತಸ್ಮಾತ್= ಆ ಕಾರಣದಿಂದ, ಸರ್ವೇ ದೃಷ್ಟಾಂತಾ ಅಪಿ= ಎಲ್ಲ ದೃಷ್ಟಾಂತಗಳೂ ಸಹ, ಭೇದಸ್ಯೈವ= ಭೇದವನ್ನೇ, ಪ್ರಸಾಧಕಾಃ= ಚೆನ್ನಾಗಿ ಸಾಧಿಸುತ್ತವೆ.

**ಅನುವಾದ–** ಮೊದಲು ಭಿನ್ನವಾಗಿರುವ ಎರಡು ಪದಾರ್ಥಗಳಿಗೆ ನೂರು ಪ್ರಯತ್ನಗಳಿಂದಲೂ ಐಕ್ಯವು ಉಂಟಾಗುವುದಿಲ್ಲವಾದ ಕಾರಣ ಎಲ್ಲ ದೃಷ್ಟಾಂತಗಳೂ ಭೇದವನ್ನೇ ಚೆನ್ನಾಗಿ ಸಾಧಿಸುತ್ತವೆ.

**ಭಾವವಿಲಾಸಿನೀ–** ಯುಕ್ತ್ಯಂತರಂ ಸೂಚಯನ್ನೇತದೇವ ವಿಶದಯತಿ – **ಯಸ್ಮಾದಿತ್ಯಾದಿನಾ** ॥ ೧೦೩೦ ॥

> ಸತ ಆಗಮ್ಯ ನ ವಿದುಃ ಸತಿ ಸಂಪದ್ಯ ಚೇತಿ ಸಾ ।
> ಮುಕ್ತೌ ಸಂಪತ್ತಿಮೇವಾಹ ಸೃಷ್ಟೌ ಚಾಗಮನಂ ತತಃ ॥ ೧೦೩೧ ॥

**ಅರ್ಥ–** ಸತ ಆಗಮ್ಯ ನ ವಿದುಃ= ಸದ್ರೂಪನಾದ ಬ್ರಹ್ಮನಿಂದ ಹೊರಗೆ ಬಂದು ಅದನ್ನು ತಿಳಿಯುವುದಿಲ್ಲ, ಸತಿ ಸಂಪದ್ಯ ನ ವಿದುಃ= ಸದ್ರೂಪನಾದ ಬ್ರಹ್ಮನನ್ನು ಹೊಂದಿ ಅದನ್ನು ತಿಳಿಯುವುದಿಲ್ಲ, ಇತಿ= ಎಂದು, ಸಾ= ಆ ಶ್ರುತಿಯು, ಮುಕ್ತೌ= ಮೋಕ್ಷದಲ್ಲಿ,

ಸಂಪತ್ತಿಮೇವ= ಸಂಪ್ರಾಪ್ತಿಯನ್ನೇ, ಆಹ= ಹೇಳುತ್ತದೆ, ಸೃಷ್ಟೌ ಚ= ಮತ್ತು ಸೃಷ್ಟಿಯಲ್ಲಿಯೂ ಸಹ, ತತಃ= ಆ ಬ್ರಹ್ಮನಿಂದ, ಆಗಮನಂ= ನಿಷ್ಕ್ರಮಣವನ್ನೇ, ಆಹ= ಹೇಳುತ್ತದೆ.

**ಅನುವಾದ–** ಆ ಶ್ರುತಿಯು ಸದ್ರೂಪನಾದ ಬ್ರಹ್ಮನಿಂದ ಹೊರಗೆ ಬಂದು ಅದನ್ನು ತಿಳಿಯುವುದಿಲ್ಲ ಎಂದೂ, ಸೃಷ್ಟಿಯಲ್ಲಿ ಬ್ರಹ್ಮನಿಂದ ನಿಷ್ಕ್ರಮಣವನ್ನು 'ಸತಿ ಸಂಪದ್ಯ ನ ವಿದುಃ' ಸದ್ರೂಪನಾದ ಬ್ರಹ್ಮನ ಸಂಪತ್ತಿಯನ್ನು ಹೊಂದಿ ಅದನ್ನು ತಿಳಿಯುವುದಿಲ್ಲ ಎಂದೂ, ಮುಕ್ತಿಯಲ್ಲಿ ಸಂಪ್ರಾಪ್ತಿಯನ್ನೂ ಸೃಷ್ಟಿಯಲ್ಲಿ ನಿಷ್ಕ್ರಮಣವನ್ನೂ ಹೇಳುತ್ತದೆ.

**ಭಾವವಿಲಾಸಿನೀ–** ಸಾ ಉಪನಿಷತ್ । ತತಃ ಸನ್ನಾಮಕಪರಮಾತ್ಮನಃ ॥ ೧೦೩೧ ॥

**ಗಮಕಸ್ಯ ಚ ಗಮ್ಯಾರ್ಥಾದಾಗಂತುಶ್ಚಾಗಮಾವಧೇಃ ।**
**ಅವಶ್ಯಂ ಭಿನ್ನತಾ ವಾಚ್ಯಾ ಮಧ್ಯೇ ವಾಚ್ಯಾ ಕಥಂ ನ ಸಾ ॥ ೧೦೩೨ ॥**

**ಅರ್ಥ–** ಗಮಕಸ್ಯ= ಪ್ರಾಪ್ತಿಯನ್ನು ಹೊಂದುವವನಿಗೆ, ಗಮ್ಯಾರ್ಥಾತ್= ಪ್ರಾಪ್ತಿ ಹೊಂದಲ್ಪಡುವ ಪದಾರ್ಥದಿಂದ, ಮತ್ತು, ಆಗಂತುಃ= ಹೊರಬರುವ ಪುರುಷನಿಗೆ, ಆಗಮಾವಧೇಃ= ಹೊರಗೆ ಬರುವುದಕ್ಕೆ ಅವಧಿಯಾದ ವಸ್ತುವಿನಿಂದ, ಅವಶ್ಯಂ= ಅವಶ್ಯವಾಗಿ, ಭಿನ್ನತಾ ವಾಚ್ಯಾ= ಭೇದವನ್ನೇ ಹೇಳಬೇಕು, ಮಧ್ಯೇ= ಮಧ್ಯದ ಸ್ಥಿತಿಕಾಲದಲ್ಲಿ, ಸಾ= ಆ ಭೇದವು, ಕಥಂ ನ ವಾಚ್ಯಃ= ಹೇಗೆ ಹೇಳಲ್ಪಡಬಾರದು.

**ಅನುವಾದ–** ಪ್ರಾಪ್ತಿಯನ್ನು ಹೊಂದುವ ಪುರುಷನಿಗೆ ಪ್ರಾಪ್ಯವಾದ ವಸ್ತುವಿನಿಂದಲೂ ನಿಷ್ಕ್ರಮಣವನ್ನು ಹೊಂದುವ ಪುರುಷನಿಗೆ ನಿಷ್ಕ್ರಮಣದ ಅವಧಿಯಿಂದಲೂ ಅವಶ್ಯವಾಗಿ ಭೇದವನ್ನೇ ಹೇಳಬೇಕು. ಅಂತಹ ಭೇದವು ಮಧ್ಯವಾದ ಸ್ಥಿತಿಕಾಲದಲ್ಲಿ ಹೇಗೆ ಇರುವುದಿಲ್ಲ?

**ಭಾವವಿಲಾಸಿನೀ–** ಸಾ ಭಿನ್ನತಾ ॥ ೧೦೩೨ ॥

**ವಿವರಣೆ–** ಸೃಷ್ಟಿ ಕಾಲದಲ್ಲೂ ಮತ್ತು ಲಯಕಾಲದಲ್ಲೂ ಇರುವ ಭೇದವು ಮಧ್ಯದ ಸ್ಥಿತಿಕಾಲದಲ್ಲಿ ಎಲ್ಲಿ ಹೋಗುತ್ತದೆ? ಅವಶ್ಯವಾಗಿ ಆಗಲೂ ಭೇದವನ್ನು ಅಂಗೀಕರಿಸಬೇಕು ಎಂದು ತಾತ್ಪರ್ಯ.

**ಅನಾದ್ಯನಂತಕಾಲೀನಾಮೇವಂ ಜೀವೇಶಯೋರ್ಭಿದಾಂ ।**
**ನ ವಿದುರ್ಯೇ ತೇ ಭವಂತಿ ಸಿಂಹವ್ಯಾಘ್ರಾದಯಃ ಕಿಲ ॥ ೧೦೩೩ ॥**

**ಅರ್ಥ–** ಏವಂ= ಈ ರೀತಿಯಾಗಿ, ಅನಾದ್ಯನಂತಕಾಲೀನಾಂ= ಅನಾದಿ ಅನಂತ ಕಾಲದಲ್ಲಿರುವ, ಜೀವೇಶಯೋರ್ಭಿದಾಂ= ಜೀವೇಶ್ವರ ಭೇದವನ್ನು, ಯೇ ನ ವಿದುಃ=

ಯಾರು ತಿಳಿಯುವುದಿಲ್ಲವೋ, ತೇ= ಅವರು, ಸಿಂಹವ್ಯಾಘ್ರಾದಯಃ= ಸಿಂಹ ವ್ಯಾಘ್ರ ಮೊದಲಾದವುಗಳಾಗಿ, ಭವಂತಿ ಕಿಲ= ಜನ್ಮವನ್ನು ಪಡೆಯುತ್ತಾರಷ್ಟೇ.

**ಅನುವಾದ–** ಹೀಗೆ ಅನಾದ್ಯನಂತಕಾಲದಲ್ಲಿ ಇರುವ ಜೀವೇಶ್ವರರ ಭೇದವನ್ನು ಯಾರು ತಿಳಿಯುವುದಿಲ್ಲವೋ ಅವರು ಸಿಂಹವ್ಯಾಘ್ರಾದಿ ಜನ್ಮಗಳನ್ನು ಪಡೆಯುವರಷ್ಟೇ?

ಇತಿ ಭೇದಾಜ್ಞಾನಿನಿಂದಾಂ ಭೂಯೋಭೂಯಃ ಕರೋತಿ ಯಾ ।
ಅಭ್ಯಾಸಾದರ್ಥವಾದಾಚ್ಚ ಸಾ ಸಮ್ಯಗ್ಭೇದತತ್ಪರಾ ।
ಅತದಿತ್ಯೇವ ಗದಿತುಂ ಯತತೇ ನ ತತೋಽನ್ಯಥಾ ॥ ೧೦೩೪ ॥

ಸದಾಯತನಸನ್ಮೂಲಸತ್ಪ್ರತಿಷ್ಠತ್ವಕೀರ್ತನಾತ್ ।
ಸ್ಥಿತೌ ಸೃಷ್ಟೌ ಚ ಮುಕ್ತೌ ಚ ಭೇದಃ ಸ್ಪಷ್ಟಂ ನಿಗದ್ಯತೇ ॥ ೧೦೩೫ ॥

**ಅರ್ಥ–** ಇತಿ= ಈ ರೀತಿಯಲ್ಲಿ, ಭೇದಾಜ್ಞಾನಿನಿಂದಾಂ= ಭೇದಾಜ್ಞಾನಿಯ ನಿಂದೆಯನ್ನು, ಯಾ= ಯಾವ ಶ್ರುತಿಯು, ಭೂಯೋಭೂಯಃ= ಪುನಃ ಪುನಃ, ಕರೋತಿ= ಮಾಡುತ್ತದೆಯೋ, ಅಂತಹ, ಅಭ್ಯಾಸಾದರ್ಥವಾದಾಚ್ಚ= ಅಭ್ಯಾಸದಿಂದಲೂ ಮತ್ತು ಅರ್ಥವಾದದಿಂದಲೂ, ಸಮ್ಯಗ್ಭೇದತತ್ಪರಾ= ಭೇದದಲ್ಲಿ ಚೆನ್ನಾಗಿ ತಾತ್ಪರ್ಯವುಳ್ಳ, ಸಾ= ಆ ಶ್ರುತಿಯು, ಅತದಿತ್ಯೇವ= ಅತತ್ ಎಂದೇ, ಗದಿತುಂ= ಹೇಳಲು, ಯತತೇ= ಪ್ರಯತ್ನಿಸುತ್ತದೆ, ತತಃ= ಅದಕ್ಕಿಂತ, ಅನ್ಯಥಾ= ಬೇರೆ ರೀತಿಯಲ್ಲಿ (ತತ್ ಎಂದು ಹೇಳಲು), ನ= ಪ್ರಯತ್ನಿಸುವುದಿಲ್ಲ, ಸದಾಯತನಸನ್ಮೂಲಸತ್ಪ್ರತಿಷ್ಠತ್ವಕೀರ್ತನಾತ್= ಸದಾಯತನತ್ವವನ್ನು, ಸನ್ಮೂಲತ್ವವನ್ನು, ಸತ್ಪ್ರತಿಷ್ಠತ್ವವನ್ನು ಹೇಳುವುದರಿಂದ, ಸ್ಥಿತೌ= ಸ್ಥಿತಿಕಾಲದಲ್ಲಿಯೂ, ಸೃಷ್ಟೌ ಚ= ಸೃಷ್ಟಿಕಾಲದಲ್ಲಿಯೂ, ಮುಕ್ತೌ ಚ= ಮತ್ತು ಮುಕ್ತಿಕಾಲದಲ್ಲಿಯೂ, ಸ್ಪಷ್ಟಂ= ಸ್ಪಷ್ಟವಾಗಿ, ಭೇದಃ= ಭೇದವು, ನಿಗದ್ಯತೇ= ಹೇಳಲ್ಪಡುತ್ತದೆ.

**ಅನುವಾದ–** ಈ ರೀತಿಯಲ್ಲಿ ಪುನಃ ಪುನಃ ಯಾವ ಶ್ರುತಿಯು ಭೇದಾಜ್ಞಾನಿ ನಿಂದೆಯನ್ನೇ ಮಾಡುತ್ತದೆಯೋ ಅಂತಹ ಅಭ್ಯಾಸದಿಂದಲೂ ಮತ್ತು ಅರ್ಥವಾದದಿಂದಲೂ ಭೇದದಲ್ಲಿಯೇ ಚೆನ್ನಾಗಿ ತಾತ್ಪರ್ಯವುಳ್ಳ ಆ ಶ್ರುತಿಯು ಅತತ್ ಎಂದೇ ಹೇಳಲು ಪ್ರಯತ್ನಿಸುತ್ತದೆ. ಅದಕ್ಕಿಂತ ಭಿನ್ನವಾಗಿ ತತ್ ಎಂದು ಹೇಳಲು ಪ್ರಯತ್ನಿಸುವುದಿಲ್ಲ. ಸದಾಯತನತ್ವವನ್ನು, ಸನ್ಮೂಲತ್ವವನ್ನು, ಸತ್ಪ್ರತಿಷ್ಠತತ್ವವನ್ನು ಹೇಳಿ ಸ್ಥಿತಿಕಾಲದಲ್ಲಿಯೂ, ಸೃಷ್ಟಿಕಾಲದಲ್ಲಿಯೂ ಮತ್ತು ಮುಕ್ತಿಕಾಲದಲ್ಲಿಯೂ ಸ್ಪಷ್ಟವಾಗಿ ಭೇದವನ್ನೇ ಹೇಳುತ್ತದೆ.

**ಭಾವವಿಲಾಸಿನೀ–** ಭೂಯೋಭೂಯಃ ಬಹುವಾರಮ್ । ಯಾ ತ ಇಹ ವ್ಯಾಘ್ರಾ ಏವೇತ್ಯಾದಿಕಾ । ಅರ್ಥವಾದಾತ್ ನಿಂದಾಸ್ವರೂಪಾರ್ಥವಾದಾತ್ । ಸಾ ಉಪನಿಷತ್ । ಮುಕ್ತಾವಪಿ

ಭೇದಪ್ರತಿಪಾದನಾತ್ ಸತಿ ಸಂಪದ್ಯ ಸತ ಆಗಮ್ಯೇತಿ ಭೇದಾಭ್ಯಾಸಾತ್ ಅರ್ಥವಾದಾಚ್ಚ ಸಮ್ಯಗಿತ್ಯುಕ್ತಮ್ । ತತೋಽನ್ಯಥಾ ತತ್ತ್ವಮಿತಿ ॥ ೧೦೩೩-೧೦೩೫ ॥

**ವಿವರಣೆ–** 'ತ ಇಹ ವ್ಯಾಘ್ರೋಃ ವರಾಹೋ ವಾ..... ಯದ್ಯದ್ಭವಂತಿ ತತ್ತದಾ ಭವಂತಿ' ಎಂದು ಅನೇಕ ಬಾರಿ ಭೇದಾಜ್ಞಾನಿಯನ್ನು ನಿಂದಿಸುವುದರಿಂದ ಅನೇಕ ಬಾರಿ ಹೇಳಿರುವುದರಿಂದ ಅಭ್ಯಾಸ ರೂಪ ತಾತ್ಪರ್ಯಲಿಂಗವೂ ನಿಂದಾರೂಪವಾದುದರಿಂದ ಅರ್ಥವಾದ ರೂಪವಾದ ತಾತ್ಪರ್ಯಲಿಂಗವೂ ಸಿದ್ಧವಾಗುತ್ತದೆ. ಒಂದೊಂದು ತಾತ್ಪರ್ಯಲಿಂಗದಿಂದಲೇ ಭೇದವು ಸಿದ್ಧವಾಗುವಾಗ ಎರಡು ತಾತ್ಪರ್ಯಲಿಂಗದಿಂದ ಸಿದ್ಧವಾಗುವ ಭೇದದಲ್ಲಿ ಶ್ರುತಿಗೆ ಚೆನ್ನಾಗಿ ತಾತ್ಪರ್ಯವಿದೆ ಎಂದು ಅಭಿಪ್ರಾಯ.

ದಾರ್ಷ್ಟಾಂತಿಕಪ್ರಕರಣಮೇವಂ ಸರ್ವಂ ಹಿ ಶೋಧನೇ ।
ಅಭೂದ್ ಭೇದಪ್ರಕರಣಂ ತದ್ವೈಕ್ಯಸ್ಯ ನ ಭೂರಿಯಂ ॥ ೧೦೩೬ ॥

**ಅರ್ಥ–** ಏವಂ ಹಿ= ಈ ರೀತಿಯಲ್ಲಿ, ಶೋಧನೇ= ಶೋಧನೆಯನ್ನು ಮಾಡಿದರೆ, ಸರ್ವಂ ದಾರ್ಷ್ಟಾಂತಿಕ ಪ್ರಕರಣಂ= ಎಲ್ಲಾ ದಾರ್ಷ್ಟಾಂತಿಕ ಪ್ರಕರಣವು, ಭೇದಪ್ರಕರಣಂ= ಭೇದಪ್ರಕರಣವೇ ಆಯಿತು, ತತ್= ಆದ್ದರಿಂದ, ಇಯಂ= ಈ ಉಪನಿಷತ್ತು, ಐಕ್ಯಸ್ಯ= ಐಕ್ಯಕ್ಕೆ, ನ ಭೂಃ= ಪ್ರತಿಪಾದಕವಾದುದಲ್ಲ.

**ಅನುವಾದ–** ಈ ರೀತಿಯಲ್ಲಿ ಶೋಧನೆಯನ್ನು ಮಾಡಿದರೆ ಎಲ್ಲಾ ದಾರ್ಷ್ಟಾಂತಿಕ ಪ್ರಕರಣವೂ ಭೇದ ಪ್ರಕರಣವೆಂದೇ ಸಿದ್ಧವಾಯಿತು. ಆದ್ದರಿಂದ ಈ ಉಪನಿಷತ್ತು ಐಕ್ಯವನ್ನು ಪ್ರತಿಪಾದಿಸುವುದಿಲ್ಲ.

**ಭಾವವಿಲಾಸಿನೀ–** ಇಯಮುಪನಿಷತ್ ॥ ೧೦೩೬ ॥

ತಾವದೇವ ಚಿರಂ ತಸ್ಯ ಯಾವನ್ಮೋಕ್ಷ್ಯೇತ ಕರ್ಮಭಿಃ ।
ಪ್ರಾರಬ್ಧೈರಖಿಲೈಃ ಪಶ್ಚಾತ್ ಸತಿ ಸಂಪದ್ಯತೇ ಕಿಲ ॥ ೧೦೩೭ ॥

ಇತಿ ಪ್ರಾರಬ್ಧನಾಶಾಚ್ಚ ಪಶ್ಚಾದ್ಭಾವಿನಿ ಯಾ ಶ್ರುತಾ ।
ಭಿದಾ ಪರಮಮೋಕ್ಷೇ ತೇ ಕದಾ ವಾ ನಾಸ್ತಿ ಸಾ ವದ ॥ ೧೦೩೮ ॥

**ಅರ್ಥ–** ಅಖಿಲೈಃ ಪ್ರಾರಬ್ಧೈಃ ಕರ್ಮಭಿಃ= ಎಲ್ಲಾ ಪ್ರಾರಬ್ಧ ಕರ್ಮಗಳಿಂದಲೂ, ಯಾವತ್= ಎಷ್ಟು ಕಾಲದಲ್ಲಿ, ಮೋಕ್ಷ್ಯೇತ= ಬಿಡುಗಡೆಯನ್ನು ಹೊಂದುತ್ತಾನೆಯೋ, ತಸ್ಯ= ಅಪರೋಕ್ಷ ಜ್ಞಾನಿಗೆ, ತಾವದೇವ= ಅಷ್ಟು ಕಾಲ ಮಾತ್ರ, ಚಿರಂ= ವಿಳಂಬವಾಗುತ್ತದೆ, ಪಶ್ಚಾತ್= ಅನಂತರ, ಸತಿ= ಸದ್ರೂಪನಾದ ಬ್ರಹ್ಮನಲ್ಲಿ, ಸಂಪದ್ಯತೇ ಕಿಲ= ಸಂಪತ್ತಿಯನ್ನು ಹೊಂದುವನಷ್ಟೇ, ಇತಿ= ಈ ರೀತಿಯಾಗಿ, ಪ್ರಾರಬ್ಧನಾಶಾಚ್ಚ ಪಶ್ಚಾದ್ಭಾವಿನಿ= ಪ್ರಾರಬ್ಧನಾಶದ

ನಂತರದಲ್ಲಿ ಉಂಟಾಗುವ, ಪರಮಮೋಕ್ಷೇ= ಪರಮ ಮೋಕ್ಷದಲ್ಲಿ, ಯಾ ಭಿದಾ= ಯಾವ ಭೇದವು, ಶ್ರುತಾ= ಶ್ರುತವಾಗಿದೆಯೋ, ಸಾ= ಆ ಭೇದವು, ತೇ= ನಿನಗೆ, ಕದಾ ವಾ ನಾಸ್ತಿ= ಯಾವ ಕಾಲದಲ್ಲಿ ಇಲ್ಲ ಎಂದು, ವದ= ಹೇಳು.

**ಅನುವಾದ–** ಎಷ್ಟು ಕಾಲದಲ್ಲಿ ಅಪರೋಕ್ಷ ಜ್ಞಾನಿಯಾದವನು ಎಲ್ಲಾ ಪ್ರಾರಬ್ಧ ಕರ್ಮಗಳಿಂದಲೂ ಬಿಡುಗಡೆಯನ್ನು ಹೊಂದುತ್ತಾನೆಯೋ, ಅವನಿಗೆ ಅಷ್ಟೇ ಕಾಲವು ವಿಲಂಬವಾಗುತ್ತದೆ. ಅನಂತರ ಬ್ರಹ್ಮಪ್ರಾಪ್ತಿಯನ್ನು ಪಡೆಯುತ್ತಾನೆ ಎಂದು ಪ್ರಾರಬ್ಧ ನಾಶಾನಂತರದಲ್ಲಿ ಉಂಟಾಗುವ ಪರಮ ಮೋಕ್ಷದಲ್ಲಿಯೂ ಯಾವ ಭೇದವು ಶ್ರುತವಾಗಿದೆಯೋ ಅಂತಹ ಭೇದವು ನಿನಗೆ ಯಾವ ಕಾಲದಲ್ಲಿ ಇಲ್ಲವೆಂದು ಹೇಳು.

**ಭಾವವಿಲಾಸಿನೀ–** ತಸ್ಯ ತಾವದೇವ ಚಿರಂ ಯಾವನ್ನ ವಿಮೋಕ್ಷ್ಯೇಽಥ ಸಂಪತ್ಸ್ಯತ ಇತಿ ಶ್ರುತೇರಭಿಪ್ರಾಯಮಾಹ–**ತಾವದೇವೇತಿ** ॥ ತಸ್ಯ ಜ್ಞಾನಿನಃ। ಪ್ರಾರಬ್ಧೈಃ ಕರ್ಮಭಿರಿತಿ ಸಂಬಂಧಃ। ವಿಮೋಕ್ಷ್ಯೇ ಇತ್ಯಸ್ಯ ಪುರುಷವ್ಯತ್ಯಾಸಾತ್ ವಿಮೋಕ್ಷ್ಯೇತೇತ್ಯರ್ಥಕಥನಮ್ । ಅಥವಾ ವಿಮೋಕ್ಷ್ಯೇ ವಿಮೋಕ್ಷ್ಯ ಇತ್ಯಾಶಾಂ ಕುರ್ವನ್ ಯಾವನ್ನವಿಮೋಕ್ಷ್ಯೇತೇತಿ ಯೋಗ್ಯಪದಾಧ್ಯಾಹಾರೇಣಾನ್ವಯಃ । ಅಥೇತ್ಯಸ್ಯಾರ್ಥಕಥನಂ ಪಶ್ಚಾದಿತಿ । ಭೋಗೇನ ಪ್ರಾರಬ್ಧಕರ್ಮವಿಮೋಚನಾನಂತರಮಿತ್ಯರ್ಥಃ । ಪ್ರಾರಬ್ಧಕರ್ಮನಾಶಾನಂತರಕಾಲೀನಬ್ರಹ್ಮಸಂಪತ್ತೇರ್ಮಾಯಿಮತೇಽಪಿ ಪರಮಮೋಕ್ಷತ್ವಾತ್ ತೇ ಪರಮಮೋಕ್ಷ ಇತ್ಯುಕ್ತಮ್ । ಸಾ ಜೀವೇಶ್ವರಭಿದಾ ॥ ೧೦೩೭-೧೦೩೮ ॥

**ವಿವರಣೆ–** 'ತಸ್ಯ ತಾವದೇವ ಚಿರಂ ಯಾವನ್ ನ ವಿಮೋಕ್ಷ್ಯೇ ಅಥ ಸಂಪತ್ಸ್ಯತೇ' ಎನ್ನುವುದು ಉಪನಿಷದ್ವಾಕ್ಯ. ವಿಮೋಕ್ಷ್ಯೇ ಎಂಬ ಉತ್ತಮ ಪುರುಷದ ಪ್ರಯೋಗವನ್ನು ಪುರುಷ ವ್ಯತ್ಯಾಸದಿಂದ ವಿಮೋಕ್ಷ್ಯೇತ ಎಂದು ಪ್ರಥಮಪುರುಷದಲ್ಲಿ ಅನುವಾದವನ್ನು ಮಾಡಿದ್ದಾರೆ. ಅಥವಾ ವಿಮೋಕ್ಷ್ಯೇ ಎಂಬ ಉತ್ತಮ ಪುರುಷ ಪ್ರಯೋಗಕ್ಕೆ ವಿಮೋಕ್ಷ್ಯತೇ ಎಂದೇ ಅರ್ಥ. ಅಪರೋಕ್ಷ ಜ್ಞಾನಿಗೆ ಪ್ರಾರಬ್ಧ ಕರ್ಮದಿಂದ ಬಿಡುಗಡೆ ಹೊಂದುವ ಮಹದಾಸೆ ಇದೆ ಎಂದು ತಿಳಿಸಲು ವೇದವಾಕ್ಯವೇ ವಿಮೋಕ್ಷ್ಯತೇ ಎಂದು ಹೇಳುವ ಬದಲು ವಿಮೋಕ್ಷ್ಯೇ ಎಂಬ ಉತ್ತಮ ಪುರುಷ ಪ್ರಯೋಗವನ್ನು ಮಾಡಿದೆ ಎಂದೂ ವಾದಿರಾಜರ ಅಭಿಪ್ರಾಯ. ಯಾದವಾರ್ಯರು ತಮ್ಮ ವ್ಯಾಖ್ಯಾನಗಳಲ್ಲಿ ಈ ಎರಡನೆಯ ಅರ್ಥವನ್ನೇ ಹೇಳುತ್ತಾರೆ.

ಗಮ್ಯಗಂತೃತಯಾಽನ್ಯೋಽನ್ಯಂ ಕಿಂ ನ ತತ್ರಾಪಿ ಭಿನ್ನತಾ ।
ತನ್ನ ತಾಮುನ್ನತಾವಾಕ್ ತೇ ನಿಹ್ನುವೀತ ಸತಾಂ ಮತಾಮ್ ॥ ೧೦೩೯ ॥

**ಅರ್ಥ–** ಗಮ್ಯಗಂತೃತಯಾ= ಗಮ್ಯತ್ವ ಮತ್ತು ಗಂತೃತ್ವವು ಇರುವುದರಿಂದ, ತತ್ರಾಪಿ= ಪರಮ ಮೋಕ್ಷದಲ್ಲಿಯೂ, ಅನ್ಯೋನ್ಯಂ= ಪರಸ್ಪರವಾಗಿ, ಭಿನ್ನತಾ ಕಿಂ ನ= ಭೇದವೇ

ಇಲ್ಲವೇ? ತಸ್ಮಾತ್= ಆದ್ದರಿಂದ, ಸತಾಂ ಮತಾಂ= ಸಜ್ಜನರಿಂದ ಅಂಗೀಕೃತವಾದ, ತಾಂ= ಆ ಭೇದವನ್ನು, ತೇ ಉನ್ನತಾ ವಾಕ್= ನಿನ್ನ ಗಟ್ಟಿಯಾದ ಮಾತು, ನ ನಿಹ್ನುವೀತ= ನಿರಾಕರಣೆ ಮಾಡುವುದಿಲ್ಲ.

**ಅನುವಾದ–** ಗಮ್ಯಗಂತೃ ಭಾವವಿರುವುದರಿಂದ ಪರಮ ಮೋಕ್ಷದಲ್ಲಿಯೂ ಇರುವ ಸಜ್ಜನರಿಂದ ಸ್ವೀಕರಿಸಲ್ಪಟ್ಟ ಆ ಭೇದವನ್ನು ನಿನ್ನ ಗಟ್ಟಿಯಾದ ಮಾತು ನಿರಾಕರಿಸಲು ಸಾಧ್ಯವಿಲ್ಲ.

**ಭಾವವಿಲಾಸಿನೀ–** ತತ್ರಾಪಿ ಮುಕ್ತಾವಪಿ । ತತ್ತಸ್ಮಾತ್ । ತಾಂ ಭಿನ್ನತಾಮ್ । ನ ನಿಹ್ನುವೀತ ನ ದೂಷಯೇತ್ । ಉಚ್ಚೈಃ ಸ್ವರಕರಣೇಽಪಿ ಭೇದದೂಷಣಂ ತವಾಸಾಧ್ಯಮಿತಿ ಭಾವಃ ॥೧೦೩೯॥

**ವಿವರಣೆ–** ಯುಕ್ತಿಯ ಬಲದಿಂದ ಸಿದ್ಧವಾದ ವೇದದ ಅರ್ಥವನ್ನು ಕೇವಲ ಗಟ್ಟಿಯಾಗಿ ಕಿರುಚುವುದರಿಂದ ನಿರಾಕರಿಸಲು ಸಾಧ್ಯವಿಲ್ಲವೆಂದು ಅಭಿಪ್ರಾಯ.

**ಅತತ್ತ್ವವಾದಿನಾಮೇವ ತಚ್ಚಿತ್ರಂ ತತ್ವವಾದಿತಾ ॥ ೧೦೪೦ ॥**

**ಅರ್ಥ–** ಅತತ್ತ್ವವಾದಿನಾಮೇವ= ಅತತ್ ಎಂದು ಪದಚ್ಛೇದ ಮಾಡುವವರಿಗೇ, ತತ್ತ್ವವಾದಿತಾ= ತತ್ತ್ವವಾದಿತ್ವವು ಉಂಟಾಯಿತು, ತತ್= ಅದು, ಚಿತ್ರಂ= ಆಶ್ಚರ್ಯಕರವು!

**ಅನುವಾದ–** ಅತತ್ ಎಂದು ಪದಚ್ಛೇದ ಮಾಡಿ ಅರ್ಥವನ್ನು ಹೇಳುವವರಿಗೆ ತತ್ತ್ವವಾದಿತ್ವವು (ಅಬಾಧಿತಾರ್ಥ ವಾದಿತ್ವವು) ಉಂಟಾಯಿತು. ಇದು ಆಶ್ಚರ್ಯದ ಸಂಗತಿ!

**ಭಾವವಿಲಾಸಿನೀ–** ನ ತತ್ ಅತತ್ ತಸ್ಯ ಭಾವಃ ಅತತ್ತ್ವಂ ತದ್ವಾದಿನಾಂ ಜೀವಬ್ರಹ್ಮ-ಭಿನ್ನತ್ವವಾದಿನಾಮಿತ್ಯರ್ಥಃ । ತತ್ತಸ್ಮಾತ್ । ಶಬ್ದತೋ ವಿರೋಧಪ್ರತಿಭಾನಾತ್ ಚಿತ್ರಮಿತ್ಯುಕ್ತಮ್ ॥ ೧೦೪೦ ॥

**ತತೋ ವರ್ಣಾದಿನಾ ಛಿನ್ನಂ ಪದಂ ಸಂಧಾಯ ಸಾ ಶ್ರುತಿಃ ।**
**ಚರೇದ್ ಭೇದಾರ್ಥಲಾಭಾಯ ಯಾ ಬ್ರಾಹ್ಮಣಜನಪ್ರಿಯಾ॥ ೧೦೪೧ ॥**

**ಅರ್ಥ–** ತತಃ= ಆದ್ದರಿಂದ, ಛಿನ್ನಂ ಪದಂ= ತತ್ತ್ವಮಸಿ ಎಂದು ಪದಚ್ಛೇದವನ್ನು ಹೊಂದಿದ (ಪಾದವು ಛೇದಿಸಲ್ಪಟ್ಟ), ಬ್ರಾಹ್ಮಣಜನಪ್ರಿಯಾ= ಬ್ರಾಹ್ಮಣ ಜನರಿಗೆ ಪ್ರಿಯವಾದ, ಸಾ ಶ್ರುತಿಃ= ಆ ವೇದವು, ವರ್ಣಾದಿನಾ= ವರ್ಣಾದಿಯಾದ ಅಕಾರದಿಂದ, ಛಿನ್ನಂ ಪದಂ= ಮೊದಲು ಛಿನ್ನವಾದ ಪದವನ್ನು, ಸಂಧಾಯ= ಜೋಡಿಸಿಕೊಂಡು, ಭೇದಾರ್ಥ ಲಾಭಾಯ= ಭೇದವೆಂಬ ಅರ್ಥವನ್ನು ಪಡೆಯುವುದಕ್ಕಾಗಿ, ಚಲೇತ್= ಚಲಿಸುತ್ತದೆ.

**ಅನುವಾದ–** ಬ್ರಾಹ್ಮಣ ಜನರಿಗೆ ಪ್ರಿಯವಾದ ಆ ಶ್ರುತಿಯು ತತ್ತ್ವಮಸಿ ಎಂದು ಮೊದಲು ಭಿನ್ನವಾದ ತನ್ನ ಪದವನ್ನು (ಪಾದವನ್ನು) ವರ್ಣಾದಿಯಾದ ಅಕಾರದಿಂದ ಜೋಡಿಸಿಕೊಂಡು ಭೇದರೂಪ ಅರ್ಥವನ್ನು ಪಡೆಯಲು ಸಂಚರಿಸುತ್ತದೆ.

**ಭಾವವಿಲಾಸಿನೀ–** ತತಃ ಯುಕ್ತಿಯುಕ್ತತ್ವಾತ್ । ವರ್ಣಾದಿನಾ ಅಕ್ಷರಾಣಾಮಾದಿನಾ ಅಕಾರೇಣ ಕ್ಷತ್ರಿಯಾದಿ ವರ್ಣಾನಾಮಾದಿನಾ ಬ್ರಾಹ್ಮಣೇನೇತಿ ಧ್ವನಿಃ । ಭಿನ್ನಪದಂ ಅಕಾರಚ್ಛೇದಂ ಕೃತ್ವಾ ಪರೇಣ ಪ್ರದರ್ಶಿತಂ ತದಿತಿ ಪದಮ್ । ಸಂಧಾಯ ವರ್ಣಾದಿನಾ ಸಂಧಾಯೇತಿ ಸಂಬಂಧಃ । ಚರೇತ್ ವಿದುಷಾಂ ಸಂಸದಿ ಸಂಚರೇತ್ । ಅಕಾರಸಂಧಾನೇ ಸತಿ ವಿದ್ವತ್‌ಸಭಾಯೋಗ್ಯಾ ತದಭಾವೇ ಭಿನ್ನಪದವತ್ ಯುಕ್ತಿಬಾಧಿತಾಯಾಸ್ತಸ್ಯಾಃ ವಿದುಷಾಂ ಸಂಸದಿ ಸಂಚರಣಮೇವ ನ ಭವೇದಿತಿ ಭಾವಃ। ಅಕಾರೇಣೈವ ಸ್ವಪದಸಂಧಾನೇ ಕಿಂ ಕಾರಣಮಿತ್ಯತ ಆಹ – ಯಾ ಬ್ರಾಹ್ಮಣಜನಪ್ರಿಯೇತಿ ॥ ಬ್ರಾಹ್ಮಣವದ್ವರ್ಣಾದಿತ್ವಾತ್ ಅಕಾರ ಏವ ಪ್ರೀತಿರಿತಿ ಭಾವಃ ॥ ೧೦೪೧ ॥

**ವಿವರಣೆ–** ವೇದವು ಬ್ರಾಹ್ಮಣ ಜನರಿಗೆ ಪ್ರಿಯವಾದುದು. ಬ್ರಾಹ್ಮಣಜನರು ನಾಲ್ಕು ವರ್ಣಗಳಲ್ಲಿ ಆದಿವರ್ಣಕ್ಕೆ ಸೇರಿದವರು. ಆದ್ದರಿಂದ ವೇದವು ವರ್ಣಾದಿಯಾದಿ ಅಕಾರವನ್ನು ಸೇರಿಸಿಕೊಂಡು ಅತತ್ತ್ವಮಸಿ ಎಂದೇ ಆಗುತ್ತದೆ. ಅಕಾರವನ್ನು ಜೋಡಿಸಿದರೆ ಅದು ವಿದ್ವದ್ಸಭೆಯಲ್ಲಿ ಸಂಚರಿಸಲು ಯೋಗ್ಯವಾಗುತ್ತದೆ. ಇಲ್ಲದಿದ್ದರೆ ಯುಕ್ತಿಬಾಧಿತವಾಗುವುದರಿಂದ ಕಾಲು ಮುರಿದ ವ್ಯಕ್ತಿಯಂತೆ ತತ್ತ್ವಮಸಿ ಎಂಬ ಪದಚ್ಛೇದವನ್ನು ಹೊಂದಿದರೆ ವಿದ್ವತ್ ಸಭೆಯಲ್ಲಿ ಸಂಚರಿಸಲು ಯೋಗ್ಯವಾಗುವುದಿಲ್ಲ ಎಂದು ಅಭಿಪ್ರಾಯ.

ಕಿಂಚ ಶಬ್ದೋ ನಿತ್ಯ ಇತಿ ವಾಕ್ಯೇ ಘಟನಿದರ್ಶನೇ ।
ಅನಿತ್ಯ ಇತ್ಯೇವ ಯದಾ ಪದಚ್ಛೇದಂ ವಿದೋ ವಿದುಃ ॥ ೧೦೪೨ ॥

ಏವಂ ಶಕುನಿಸೂತ್ರಾಖ್ಯಸ್ಪಷ್ಟದೃಷ್ಟಾಂತಶಕ್ತಿತಃ ।
ಆತ್ಮಾತತ್ತ್ವಮಸೀತ್ಯತ್ರಾಪ್ಯತದ್ಬ್ರಹ್ಮೇತಿ ಗಮ್ಯತೇ ॥ ೧೦೪೩ ॥

**ಅರ್ಥ–** ಕಿಂಚ= ಮತ್ತು, ಶಬ್ದೋ ನಿತ್ಯಃ ಇತಿ= ಶಬ್ದೋ ನಿತ್ಯಃ ಎಂಬ, ವಾಕ್ಯೇ= ವಾಕ್ಯದಲ್ಲಿ, ಘಟನಿದರ್ಶನೇ= ಘಟದ ದೃಷ್ಟಾಂತವಿದ್ದರೆ, ಯಥಾ= ಹೇಗೆ, ಅನಿತ್ಯ ಇತ್ಯೇವ= ಅನಿತ್ಯವೆಂದೇ, ಪದಚ್ಛೇದಂ= ಪದಚ್ಛೇದವನ್ನು, ವಿದಃ= ಜ್ಞಾನಿಗಳು, ವಿದುಃ= ತಿಳಿಯುತ್ತಾರೆಯೋ, ಏವಂ= ಅದೇ ರೀತಿಯಲ್ಲಿ, ಶಕುನಿಸೂತ್ರಾಖ್ಯಸ್ಪಷ್ಟದೃಷ್ಟಾಂತ ಶಕ್ತಿತಃ= ಶಕುನಿ ಸೂತ್ರ ಮೊದಲಾದ ಸ್ಪಷ್ಟ ದೃಷ್ಟಾಂತದ ಸಾಮರ್ಥ್ಯದಿಂದ, ಆತ್ಮಾತತ್ತ್ವಮಸೀತ್ಯ= ಆತ್ಮಾತತ್ತ್ವಮಸಿ ಎಂಬಲ್ಲಿ, ಅತತ್= ಅತತ್ ಎಂದೇ ಪದಚ್ಛೇದವನ್ನು ಮಾಡಿ, ಅತದ್ಬ್ರಹ್ಮೇತಿ= ನೀನು ಆ ಬ್ರಹ್ಮನಲ್ಲ ಎಂಬ ಅರ್ಥವು, ಗಮ್ಯತೇ= ತಿಳಿಯಲ್ಪಡುತ್ತದೆ.

**ಅನುವಾದ–** 'ಶಬ್ದೋ ನಿತ್ಯಃ' ಎಂಬ ವಾಕ್ಯದಲ್ಲಿ ಘಟದ ನಿದರ್ಶನವಿದ್ದರೆ ಹೇಗೆ ವಿದ್ವಾಂಸರು ಅನಿತ್ಯಃ ಎಂಬ ಪದಚ್ಛೇದವನ್ನು ಮಾಡುತ್ತಾರೆಯೋ, ಅದರಂತೆ ಸ್ಪಷ್ಟವಾದ ಶಕುನಿ ಸೂತ್ರ ಮೊದಲಾದ ಒಂಭತ್ತು ದೃಷ್ಟಾಂತಗಳ ಸಾಮರ್ಥ್ಯದಿಂದ 'ಸ ಆತ್ಮಾತತ್ತ್ವಮಸಿ' ಎಂಬ ವಾಕ್ಯದಲ್ಲಿಯೂ ಅತತ್ ಎಂದೇ ಪದಚ್ಛೇದವನ್ನು ಮಾಡಿ ನೀನು ಬ್ರಹ್ಮನಲ್ಲ ಎಂಬ ಅರ್ಥವನ್ನೇ ಹೇಳಬೇಕು.

**ಭಾವವಿಲಾಸಿನೀ–** ಲೌಕಿಕದೃಷ್ಟಾಂತೇನಾಪ್ಯತದಿತ್ಯೇವ ಪದಚ್ಛೇದಮುಪಪಾದಯತಿ– **ಕಿಂಚೇತಿ** ।

ತಸ್ಮಾಜ್ಜೀವೇಶಭೇದಸ್ಯ ಸಾಧಿಕಾ ಭೇದವಾಗಿಯಂ ।
ನ ಹ್ಯತಿಸ್ತಬ್ಧಬುದ್ಧೇಃ ಸ ಗುರುರ್ಬ್ರಹ್ಮೈಕ್ಯಮಾದಿಶೇತ್ ॥ ೧೦೪೪ ॥

**ಅರ್ಥ–** ತಸ್ಮಾತ್= ಆದ್ದರಿಂದ, ಇಯಂ ವಾಕ್= ಈ ವಾಕ್ಯವು, ಜೀವೇಶ ಭೇದಸ್ಯ= ಜೀವೇಶ್ವರ ಭೇದವನ್ನು, ಸಾಧಿಕಾ ಭೇದವಾಕ್= ಸಾಧಕವಾದ ಭೇದವಾಕ್ಯವೇ ಆಯಿತು, ಅತಿಸ್ತಬ್ಧ ಬುದ್ಧೇಃ= ಬಹಳ ಗರ್ವದಿಂದ ಕೂಡಿದ ಬುದ್ಧಿಯುಳ್ಳ ಶ್ವೇತಕೇತುವಿಗೆ, ಸ ಗುರುಃ= ಆ ಗುರುವಾದ ಉದ್ದಾಲಕರು, ಬ್ರಹ್ಮೈಕ್ಯಂ= ಬ್ರಹ್ಮೈಕ್ಯವನ್ನು, ನ ಹಿ ಆದಿಶೇತ್= ಉಪದೇಶಿಸುವುದಿಲ್ಲವಷ್ಟೇ!

**ಅನುವಾದ–** ಆದ್ದರಿಂದ ಈ ವಾಕ್ಯವು ಜೀವೇಶ್ವರಭೇದವನ್ನು ಸಮರ್ಥಿಸುವ ಭೇದವಾಕ್ಯವೇ ಆಯಿತು. ಅತ್ಯಂತ ಗರ್ವಿಷ್ಠನಾದ ಶ್ವೇತಕೇತುವಿಗೆ ಗುರುವಾದ ಅವನ ತಂದೆಯು ಬ್ರಹ್ಮೈಕ್ಯವನ್ನು ಉಪದೇಶ ಮಾಡುವುದಿಲ್ಲವಷ್ಟೇ!

**ಭಾವವಿಲಾಸಿನೀ–** ಪ್ರಕರಣವಿರುದ್ಧೋಽತ್ರಾಭೇದೋಪದೇಶ ಇತ್ಯಾಹ – **ನಹೀತಿ** ॥೧೦೪೪॥

**ವಿವರಣೆ–** ಮೊದಲೇ ಗರ್ವಿಷ್ಠನಾದ ಶ್ವೇತಕೇತುವಿಗೆ ಬ್ರಹ್ಮೈಕ್ಯವನ್ನು ಹೇಳಿದರೆ ಗರ್ವವು ಇನ್ನೂ ಹೆಚ್ಚಾಗುವುದರಿಂದ ಗರ್ವವನ್ನು ಪರಿಹಾರ ಮಾಡಲು ಉಪದೇಶ ಮಾಡುತ್ತಿರುವ ತಂದೆಯು ಎಂದೂ ಬ್ರಹ್ಮೈಕ್ಯವನ್ನು ಉಪದೇಶ ಮಾಡುವುದಿಲ್ಲ ಎಂದು ಅಭಿಪ್ರಾಯ.

ಅತಃ ಶ್ರುತಿಃ ಕೇರಲಾನಾಂ ಕರವಾಲಮಭೂದಿಯಂ ।
ಧಾರಾ ತ್ವತ್ಪಾರ್ಶ್ವಗೈವಾತಿಕ್ರೂರಾ ಕಿಂ ಸ್ಯಾತ್ ತವಾನಯಾ ॥ ೧೦೪೫ ॥

**ಅರ್ಥ–** ಅತಃ= ಆದ್ದರಿಂದ, ಇಯಂ ಶ್ರುತಿಃ= ಈ ವೇದವಾಕ್ಯವು, ಕೇರಲಾನಾಂ= ಕೇರಳ ದೇಶದವರ, ಕರವಾಲಮಭೂತ್= ಕತ್ತಿಯಾಯಿತು, ತ್ವತ್ಪಾರ್ಶ್ವಗೈವ= ನಿನ್ನ ಪಾರ್ಶ್ವದಲ್ಲಿ ಇರುವ, ಧಾರಾ= ಧಾರೆಯೇ (ಅಂಚೇ), ಅತಿಕ್ರೂರಾ= ಬಹಳ ಕ್ರೂರವಾಗಿದೆ, ಅನಯಾ= ಈ ಶ್ರುತಿಯಿಂದ, ತವ= ನಿನಗೆ, ಕಿಂ ಸ್ಯಾತ್= ಏನು ಪ್ರಯೋಜನವಾಗುತ್ತದೆ.

**ಅನುವಾದ–** ಎರಡು ರೀತಿಯಲ್ಲಿಯೂ ಪದಚ್ಛೇದವು ಸಂಭಾವಿತವಾದುದರಿಂದ ಈ ವಾಕ್ಯವು ಕೇರಳದ ಕತ್ತಿಯಂತೆ ಆಯಿತು. ನಿನ್ನ ಕಡೆಗಿರುವ ಕತ್ತಿಯ ಅಂಚೇ ಬಹಳ ಕ್ರೂರವಾಗಿದೆ. ಈ ಶ್ರುತಿಯಿಂದ ನಿನಗೆ ಏನು ಪ್ರಯೋಜನವಾಗುತ್ತದೆ?

**ಭಾವವಿಲಾಸಿನೀ–** ಅತಃ ಉಭಯಥಾಪಿ ಪದಚ್ಛೇದಸಂಭವಾತ್ । ಇಯಂ ಶ್ರುತಿಃ ಕೇರಲಾನಾಂ ಕರವಾಲಮಭೂತ್ । ಯಥಾ ಕೇರಲಶಸ್ತ್ರಸ್ಯ ಶತ್ರೋರಾಭಿಮುಖ್ಯೇನ ಧಾರಾ ಸ್ವಾಭಿಮುಖ್ಯೇನಾಪಿ ಧಾರಾ । ಅತಃ ತಮಪಿ ಹನ್ಯಾತ್ । ಕದಾಚಿತ್ ಸ್ವಾತ್ಮಾನಮಪಿ ಹನ್ಯಾತ್ । ತಥಾ ಇಯಂ ಶ್ರುತಿರಪಿ ಪರಹನನಾಯ ತ್ವಯಾ ಪ್ರಯುಕ್ತಾ ತ್ವಾಮೇವ ಹಂತೀತಿ ಭಾವಃ । ತತ್ರ ಹೇತುಮಾಹ – ಧಾರೇತಿ ॥ ತ್ವತ್ಪಾರ್ಶ್ವಗಾ ಧಾರೈವಾತಿಕ್ರೂರಾ । ಪರೋಕ್ತಯುಕ್ತಿಶಿಲಾತಾಡನೇನ ತತ್ಪಾರ್ಶ್ವೇ ಮಂದೀಭೂತಾ । ತ್ವತ್ಪಾರ್ಶ್ವೇ ತು ಯುಕ್ತ್ಯಭಾವಾದತಿಕ್ರೂರಾ । ತಸ್ಮಾದತದಿತಿ ಪದಚ್ಛೇದಂ ಕೃತ್ವಾ ತ್ವಾಮೇವ ಹಂತೀತಿ ಭಾವಃ ॥ ೧೦೪೫ ॥

**ವಿವರಣೆ–** ಕೇರಳದ ಕತ್ತಿಗೆ ಎರಡು ಕಡೆಯೂ ಅಂಚು (ಧಾರೆಯು) ಇರುತ್ತದೆ. ಹಾಗೆ ಈ ವಾಕ್ಯಕ್ಕೆ ತತ್ತ್ವಮಸಿ, ಅತತ್ತ್ವಮಸಿ ಎಂಬ ಎರಡು ಧಾರೆಗಳು. ಅದರಲ್ಲಿ ತತ್ತ್ವಮಸಿ ಎಂಬ ಅಂಚನ್ನು ನೀನು ನಮ್ಮ ಮೇಲೆ ಪ್ರಯೋಗಿಸಿದ್ದೀಯೆ. ಯುಕ್ತಿಯಿಂದ ಖಂಡನೆಯನ್ನು ಮಾಡಿ ನಾವು ಆ ಅಂಚನ್ನು ಮೊಂಡುಗೊಳಿಸಿದ್ದೇವೆ. ನಿನ್ನ ಕಡೆಗಿರುವ ಅಂಚು ಎಂದರೆ ಅತತ್ತ್ವಮಸಿ ಎಂಬ ನಾವು ಪ್ರಯೋಗ ಮಾಡಿದ ಅಂಚು. ಅದನ್ನು ಪರಿಹರಿಸಲು ನಿನ್ನ ಬಳಿ ಯುಕ್ತಿ ಇಲ್ಲದಿರುವುದರಿಂದ ಈ ಕತ್ತಿಯ ನಿನ್ನ ಕಡೆಯ ಅಂಚೇ ಅತಿಕ್ರೂರವಾಗಿದೆ. ಆದ್ದರಿಂದ ಈ ವಾಕ್ಯದಿಂದ ನಿನಗೆ ಏನೂ ಪ್ರಯೋಜನವಾಗುವುದಿಲ್ಲ ಎಂದು ಅಭಿಪ್ರಾಯ.

ಕಿಂಚ ದೃಷ್ಟ್ವೈವತಂ ಮುಚ್ಯೇತೇತ್ಯಾದ್ಯಾಗಮರಾಶಿಷು ।
ಜ್ಞಾನಮಜ್ಞಾನಮಾತ್ರಸ್ಯ ವಿರೋಧೀತಿ ಸ್ವಕಲ್ಪಿತಾತ್ ।
ಯುಕ್ತಿಮಾತ್ರಾಚ್ಚ ಭೀತೇನ ಶ್ರೌತೋಽರ್ಥೋ ಯೇನ ಧಿಕ್ಕೃತಃ ॥ ೧೦೪೬ ॥

ತಸ್ಯ ಪ್ರತ್ಯಕ್ಷಸಹಿತವಿರುದ್ಧ ಗುಣವತ್ತ್ವತಃ ।
ಮಹಾಯುಕ್ತೇರ್ವಿರೋಧೇಽಪಿ ಮುಖ್ಯೇಽರ್ಥೇಽದ್ಯ ಕುತೋ ಭರಃ ॥ ೧೦೪೭॥

**ಅರ್ಥ–** ಕಿಂಚ= ಮತ್ತು, ಜ್ಞಾನಮಜ್ಞಾನಮಾತ್ರಸ್ಯ ವಿರೋಧಿ ಇತಿ= ಜ್ಞಾನವು ಕೇವಲ ಅಜ್ಞಾನಕ್ಕೆ ಮಾತ್ರ ವಿರೋಧಿ ಎಂದು, ಸ್ವಕಲ್ಪಿತಾತ್= ನಿನ್ನಿಂದಲೇ ಕಲ್ಪಿತವಾದ, ಯುಕ್ತಿಮಾತ್ರಾತ್= ಕೇವಲ ಯುಕ್ತಿಯಿಂದ, ಭೀತೇನ= ಭೀತನಾದ, ಯೇನ= ಯಾವ ನಿನ್ನಿಂದ, ದೃಷ್ಟ್ವೈವತಂ ಮುಚ್ಯೇತ= ದೃಷ್ಟ್ವೈವ ತಂ ಮುಚ್ಯತೇ ಮೊದಲಾದ, ಆಗಮರಾಶಿಷು= ಆಗಮ ರಾಶಿಗಳಲ್ಲಿ, ಶ್ರೌತಾರ್ಥಃ= ಶ್ರುತವಾದ ಅರ್ಥವು, ಧಿಕ್ಕೃತಃ=

ನಿರಾಕರಿಸಲ್ಪಟ್ಟಿದೆಯೋ, ತಸ್ಯ= ಅಂತಹ ನಿನಗೆ, ಪ್ರತ್ಯಕ್ಷಸಹಿತವಿರುದ್ಧಗುಣವತ್ತ್ವತಃ= ಪ್ರತ್ಯಕ್ಷ ಸಹಕೃತವಾದ ವಿರುದ್ಧ ಧರ್ಮಾಧಿಕರಣತ್ವ ರೂಪವಾದ, ಮಹಾಯುಕ್ತೇಃ ವಿರೋಧೇಪಿ= ಮಹಾಯುಕ್ತಿಯ ವಿರೋಧವಿದ್ದರೂ, ಅದ್ಯ= ಈ ದಿನ, ಮುಖ್ಯೇಽರ್ಥೇ= ಮುಖ್ಯಾರ್ಥದಲ್ಲಿ, ಕುತೋ ಭರಃ= ಏಕೆ ಆಗ್ರಹ.

**ಅನುವಾದ–** ಜ್ಞಾನವು ಅಜ್ಞಾನಕ್ಕೆ ಮಾತ್ರ ನಿವರ್ತಕ ಎಂಬ ಸ್ವಕಲ್ಪಿತವಾದ ಕೇವಲ ಯುಕ್ತಿಯಿಂದ ಭೀತನಾದ ನೀನು 'ದೃಷ್ಟ್ವೈವ ತಂ ಮುಚ್ಯತೇ ನಾ ಪರೇಣ' ಮೊದಲಾದ ಆಗಮ ರಾಶಿಗಳಲ್ಲಿ ಶ್ರುತವಾದ ಅರ್ಥವನ್ನು ನಿರಾಕರಿಸಿದ್ದೀಯೆ. ಅಂತಹ ನಿನಗೆ ಪ್ರತ್ಯಕ್ಷ ಸಹಕೃತವಾದ ವಿರುದ್ಧಧರ್ಮಾದಿಕರಣತ್ವರೂಪವಾದ ಮಹಾಯುಕ್ತಿಯ ವಿರೋಧವಿದ್ದರೂ ಈಗ ಮುಖ್ಯಾರ್ಥದಲ್ಲಿ ಏಕೆ ಆಗ್ರಹ?

**ಭಾವವಿಲಾಸಿನೀ–** ಅಪಿ ಚ ಬಂಧಸ್ಯಾಜ್ಞಾನೋಪಾದಾನಕತ್ವರೂಪಮಿಥ್ಯಾತ್ವಲಾಭಾಯ ಜ್ಞಾನಮಜ್ಞಾನಸ್ಯೈವ ನಿವರ್ತಕಮಿತ್ಯಸಂಭಾವಿತಾಂ ಕಾಂಚಿದ್ವ್ಯಾಪ್ತಿಂ ಪರಿಕಲ್ಪ್ಯ ತದ್ವಿರೋಧೇನ ದೃಷ್ಟ್ವೈವ ತಂ ಮುಚ್ಯತೇ ನಾಪರೇಣೇತ್ಯಾದಿ ಸಾವಧಾರಣತಯಾ ನಿರವಕಾಶಾನಾಂ ಶ್ರುತೀನಾಂ ಜ್ಞಾನಾದ್ಬಂಧ- ನಿವೃತ್ತಿರ್ಭವತೀತಿ ಶ್ರೌತಾರ್ಥಂ ಪರಿತ್ಯಜ್ಯ ಜ್ಞಾನಾದಜ್ಞಾನನಿವೃತ್ತಿರೇವ ಭವತಿ ಅಜ್ಞಾನನಿವೃತ್ತೌ ಚ ಉಪಾದಾನಾಭಾವಾದ್ಬಂಧನಿವೃತ್ತಿರ್ಭವತೀತಿ ಶ್ರೌತಾರ್ಥಸ್ಯಾತಿ ವಿರುದ್ಧ- ಮಶ್ರೌತಮೇವಾರ್ಥಮಂಗೀಕುರ್ವತಾ ಪರೇಣ ತತ್ತ್ವಮಸ್ಯಾದಿವಾಕ್ಯೇ ಪ್ರತ್ಯಕ್ಷೇಣ ದ್ವಾ ಸುಪರ್ಣೇತಿ ಶ್ರುತ್ಯಾ ವಿರುದ್ಧಧರ್ಮಾಕ್ರಾಂತತ್ವಯುಕ್ತ್ಯಾ ಉಕ್ತವಿಧಯಾ ನವವಿಧದೃಷ್ಟಾಂತೈಶ್ಚ ವಿರುದ್ಧೇ ಆಪಾತತಃ ಶ್ರೌತಾರ್ಥೇ ಮಹಾನ್ ಭರಃ ಕ್ರಿಯತೇ । ಅತಃ ಸ್ವಪ್ರಕ್ರಿಯಯೈವ ವಿರುದ್ಧಃ ಪರಕೀಯರಾದ್ಧಾಂತ ಇತ್ಯಾಹ – **ಕಿಂಚೇತಿ** ॥ ಬದ್ಧೋ ಮುಚ್ಯೇತ ಬಂಧನಾದಿತ್ಯಾದಿ ಫಲವಿಧಾಯಕಪ್ರಬಲವಾಕ್ಯಾನ್ಯಪಿ ಸ್ಮಾರಯಿತುಂ ಲಿಙಂತಪದಪ್ರಯೋಗಃ । ಶ್ರೌತಾರ್ಥಃ ಜ್ಞಾನಸ್ಯ ಬಂಧವಿನಾಶಕತ್ವರೂಪಃ । ಯೇನ ಮಾಯಾವಾದಿನಾ । ಪ್ರತ್ಯಕ್ಷಸಹಿತಾತ್ ವಿರುದ್ಧಗುಣವತ್ತ್ವಾತ್ । ಅತ ಏವ ಮಹಾಯುಕ್ತೇರಿತ್ಯುಕ್ತಮ್ ॥ ೧೦೪೬-೧೦೪೭ ॥

**ವಿವರಣೆ–** ಬಂಧಕ್ಕೆ ಅಜ್ಞಾನೋಪಾದಾನಕತ್ವರೂಪವಾದ ಮಿಥ್ಯಾತ್ವವನ್ನು ಸಂಪಾದಿಸಲು ಜ್ಞಾನವು ಅಜ್ಞಾನಕ್ಕೆ ಮಾತ್ರ ನಿವರ್ತಕ ಎಂಬ ಒಂದು ಅಸಂಭಾವಿತ ವ್ಯಾಪ್ತಿಯನ್ನು ಕಲ್ಪನೆ ಮಾಡಿ, ಆ ಯುಕ್ತಿಯ ವಿರೋಧವು ಬರುವುದರಿಂದ 'ದೃಷ್ಟ್ವೈವ ತಂ ಮುಚ್ಯತೇ ನಾ ಪರೇಣ' ಅವನ ದರ್ಶನದಿಂದಲೇ ಮುಕ್ತನಾಗುತ್ತಾನೆ, ಬೇರೆಯದರಿಂದಲ್ಲ ಎಂಬ ಏವ ಶಬ್ದಘಟಿತವಾದುದರಿಂದ ಸಾವಧಾರಣವಾದ ಮತ್ತು ನಿರವಕಾಶವಾದ ಶ್ರುತಿಗಳಿಗೆ ಬ್ರಹ್ಮಜ್ಞಾನದಿಂದ ಬಂಧವು ನಿವೃತ್ತವಾಗುತ್ತದೆ ಎಂಬ ಶ್ರೌತಾರ್ಥವನ್ನು ಪರಿತ್ಯಜಿಸಿ, ಜ್ಞಾನದಿಂದ ಅಜ್ಞಾನದ ನಿವೃತ್ತಿಯು ಮಾತ್ರ ಆಗುತ್ತದೆ, ಅಜ್ಞಾನನಿವೃತ್ತಿಯಾದರೆ ಉಪಾದಾನವು ನಾಶವಾಗುವುದರಿಂದ ಬಂಧನಿವೃತ್ತಿಯಾಗುತ್ತದೆ ಎಂದು ಶ್ರೌತಾರ್ಥಕ್ಕೆ ಅತ್ಯಂತ ವಿರುದ್ಧವಾದ ಅರ್ಥವನ್ನು ಅಂಗೀಕರಿಸುವ ನೀನು

ತತ್ತ್ವಮಸ್ಯಾದಿ ವಾಕ್ಯದಲ್ಲಿ ಪ್ರತ್ಯಕ್ಷ ವಿರೋಧವಿದ್ದರೂ, ದ್ವಾಸುಪರ್ಣಾ ಮೊದಲಾದ ಶ್ರುತಿಗಳ ವಿರೋಧವಿದ್ದರೂ, ವಿರುದ್ಧ ಧರ್ಮಾಧಿಕರಣತ್ವ ರೂಪ ಯುಕ್ತಿಯ ವಿರೋಧವಿದ್ದರೂ, ಹಿಂದೆ ಹೇಳಿದಂತೆ ನವವಿಧ ದೃಷ್ಟಾಂತದ ವಿರೋಧವಿದ್ದರೂ, ಆಪಾತತಃ ತೋರುವ ಶ್ರೌತಾರ್ಥದಲ್ಲಿಯೇ ಬಹಳ ಆಗ್ರಹವನ್ನು ಹೊಂದಿದ್ದೀಯೆ. ಇದು ನಿನ್ನ ಪ್ರಕ್ರಿಯೆಗೆ ವಿರುದ್ಧವಾದುದು ಎಂದು ಈ ಶ್ಲೋಕಗಳಲ್ಲಿ ತಿಳಿಸುತ್ತಾರೆ.

**ಅಕ್ಷಸ್ಯ ಯುಕ್ತಿಶ್ರುತ್ಯಾದೇರಮಾನತ್ವಂ ಯದೀಷ್ಯತೇ ।**
**ಯುಕ್ತಿಮಾತ್ರಾಮಾನತಾಯಾಂ ಹೀನತಾ ಕಾ ತವೋಚ್ಯತಾಮ್ ॥ ೧೦೪೮ ॥**

**ಅರ್ಥ–** ಅಕ್ಷಸ್ಯ= ಪ್ರತ್ಯಕ್ಷಕ್ಕೂ, ಯುಕ್ತಿಶ್ರುತ್ಯಾದೇಃ= ಯುಕ್ತಿ ಮತ್ತು ಶ್ರುತಿಗಳಿಗೂ, ಯದಿ= ಒಂದು ಪಕ್ಷ, ಅಮಾನತ್ವಂ= ಅಪ್ರಾಮಾಣ್ಯವು, ಇಷ್ಯತೇ= ನಿನ್ನಿಂದ ಬಯಸಲ್ಪಡುವುದಾದರೆ, ಯುಕ್ತಿಮಾತ್ರಾಮಾನತಾಯಾಂ= ಕೇವಲ ಯುಕ್ತಿಗೆ ಅಪ್ರಾಮಾಣ್ಯವನ್ನು ಒಪ್ಪಿದರೆ, ತವ= ನಿನಗೆ, ಕಾ ಹೀನತಾ= ಏನು ಹಾನಿಯಾಗುತ್ತದೆ ಎಂದು, ಉಚ್ಯತಾಂ= ಹೇಳು (ಹೇಳಲ್ಪಡಲಿ).

**ಅನುವಾದ–** ನಾವು ಹೇಳಿದ ಪ್ರತ್ಯಕ್ಷ ಯುಕ್ತಿ ಮತ್ತು ಶ್ರುತಿಗಳಿಗೆ ನೀನು ಅಪ್ರಾಮಾಣ್ಯವನ್ನು ಅಂಗೀಕರಿಸುವುದಾದರೆ ನೀನೇ ಕಲ್ಪಿಸಿದ ಯುಕ್ತಿಗೂ ಅಪ್ರಾಮಾಣ್ಯವನ್ನು ಅಂಗೀಕರಿಸಿದರೆ ನಿನಗೆ ಏನು ಹಾನಿಯಾಗುತ್ತದೆ ಎಂದು ಹೇಳು.

**ಭಾವವಿಲಾಸಿನೀ–** ಯುಕ್ತಿಮಾತ್ರಾಮಾನತಾಯಾಂ ಜ್ಞಾನಮಜ್ಞಾನಸ್ಯೈವ ನಿವರ್ತಕಮಿತಿ ಸ್ವಕಪೋಲಕಲ್ಪಿತಯುಕ್ತೇರಮಾನತಾಯಾಮಿತ್ಯರ್ಥಃ ॥ ೧೦೪೮ ॥

**ವಿವರಣೆ–** ನಾವು ಹೇಳುವ ಮೂರು ಪ್ರಮಾಣಗಳಿಗೂ ಅಪ್ರಾಮಾಣ್ಯವನ್ನು ಒಪ್ಪಿ, ತನ್ನ ಅನುಮಾನಕ್ಕೆ ಮಾತ್ರ ಅಪ್ರಾಮಾಣ್ಯವನ್ನು ಹೇಳದಿರುವುದು ಸ್ವಪ್ರಕ್ರಿಯಾ ವಿರುದ್ಧವಾದುದು ಎಂದು ಅಭಿಪ್ರಾಯ.

**ಯದ್ಯಕ್ಷಾದೇರಮಾನತ್ವಂ ವಿರುದ್ಧೈಕ್ಯಮಪೀಷ್ಯತಾಮ್ ।**
**ಮಾನತ್ವೇ ತು ಗುಣತ್ಯಾಗಃ ಪ್ರಾಣತ್ಯಾಗೋ ಭವೇತ್ ತವ ॥ ೧೦೪೯ ॥**

**ಅರ್ಥ–** ಯದಿ= ಒಂದು ಪಕ್ಷ, ಅಕ್ಷಾದೇಃ= ಪ್ರತ್ಯಕ್ಷಾದಿಗಳಿಗೆ, ಅಮಾನತ್ವಂ= ಅಪ್ರಾಮಾಣ್ಯವಿದ್ದರೆ, ವಿರುದ್ಧೈಕ್ಯಮಪಿ= ವಿರುದ್ಧೈಕ್ಯವೂ ಕೂಡ, ಇಷ್ಯತಾಂ= ಅಂಗೀಕರಿಸಲ್ಪಡಲಿ, ಮಾನತ್ವೇ ತು= ಪ್ರತ್ಯಕ್ಷಾದಿಗಳು ಪ್ರಮಾಣವಾದರೆ ಮಾತ್ರ, ಗುಣತ್ಯಾಗಃ= ವಿರುದ್ಧ ಧರ್ಮಗಳ ತ್ಯಾಗವು, ತವ= ನಿನ್ನ ಪ್ರಾಣತ್ಯಾಗಃ ಭವೇತ್= ಪ್ರಾಣತ್ಯಾಗವೇ ಆಗುತ್ತದೆ.

**ಅನುವಾದ–** ಮತ್ತು ನಾವು ಹೇಳಿದ ಪ್ರತ್ಯಕ್ಷಾದಿಗಳು ಅಪ್ರಮಾಣವಾದರೆ ವಿರುದ್ಧೈಕ್ಯವನ್ನೂ ಅಂಗೀಕರಿಸು. ಅವುಗಳು ಪ್ರಮಾಣವಾದರೆ ಸರ್ವಜ್ಞತ್ವ ಅಲ್ಪಜ್ಞತ್ವಾದಿ ಗುಣಗಳ ತ್ಯಾಗವು ನಿನ್ನ ಪ್ರಾಣತ್ಯಾಗವೇ ಆಗುತ್ತದೆ.

**ಭಾವವಿಲಾಸಿನೀ–** ಕಿಂಚ ವಿರುದ್ಧಗುಣವತ್ತ್ವರೂಪಯುಕ್ತಿರಪ್ರಮಾಣಂ ಚೇತ್ ತದ್ಭಯಾಭಾವಾತ್ । ಬಾಷ್ಪಾರೋಪಿತಧೂಮತ್ವಭ್ರಮಕಾಲ ಏವ ಬಾಷ್ಪಬಾಷ್ಪೈಕ್ಯ ಸದ್ಭಾವೇನ । ವಿರುದ್ಧಗುಣವತೋರೇವೈಕ್ಯಮಂಗೀಕ್ರಿಯತಾಮ್ । ಪ್ರಮಾಣಂ ಚೇತ್ ತದ್ವಿಷಯಭೂತವಿರುದ್ಧಗುಣಯೋರಪಿ ಪ್ರಾಮಾಣಿಕತ್ವಾವಶ್ಯಂಭಾವಾತ್ ಪ್ರಾಣತ್ಯಾಗೇಽಪಿ ಬ್ರಹ್ಮವನ್ನ ತತ್ತ್ಯಾಗ ಇತ್ಯುಭಯತಃ ಪಾಶಾರಜ್ಜುರಿತ್ಯಾಹ – ಯದಿತಿ ॥ ೧೦೪೭ ॥

**ವಿವರಣೆ–** ನಮ್ಮ ಯುಕ್ತ್ಯಾದಿಗಳು ಅಪ್ರಮಾಣವಾದರೆ ಅವುಗಳ ಭಯ ವಿಲ್ಲವಾದ್ದರಿಂದ, ತತ್ತ್ವಮಸಿ ವಾಕ್ಯದಿಂದ ವಿರುದ್ಧೈಕ್ಯವನ್ನೇ ಹೇಳು. ಪ್ರಮಾಣವಾದರೆ ಮಾತ್ರ ಬ್ರಹ್ಮನನ್ನು ಹೇಗೆ ತ್ಯಾಗ ಮಾಡಲು ಸಾಧ್ಯವಿಲ್ಲವೋ ಸರ್ವಜ್ಞತ್ವ ಅಲ್ಪಜ್ಞತ್ವಾದಿ ಗುಣಗಳನ್ನು ಹಾಗೆ ಪ್ರಾಣಹೋದರೂ ತ್ಯಾಗ ಮಾಡಲು ಸಾಧ್ಯವಿಲ್ಲ. ಆದ್ದರಿಂದ ಈ ಉಭಯ ಪಾಶಾರಜ್ಜುವು ನಿನಗೆ ಉಂಟಾಗುತ್ತದೆ ಎಂದು ಅಭಿಪ್ರಾಯ.

ವಿರುದ್ಧೈಕ್ಯಸ್ಯ ಚಾಯುಕ್ತಿರ್ವಾಚ್ಯಾ ಕುತ್ರಾಪ್ಯದರ್ಶನಾತ್ ।
ತರ್ಹ್ಯಕ್ಷಮಾನತಾಽವಶ್ಯಂ ನ ಚೇದೈಕ್ಯಂ ವಿರುದ್ಧಯೋಃ ॥ ೧೦೫೦ ॥

**ಅರ್ಥ–** ವಿರುದ್ಧೈಕ್ಯಸ್ಯ= ವಿರುದ್ಧೈಕ್ಯವು, ಕುತ್ರಾಪಿ ಅದರ್ಶನಾತ್= ಎಲ್ಲೂ ಕಂಡು ಬರುವುದಿಲ್ಲವಾದ್ದರಿಂದ, ಅಯುಕ್ತಿಃ= ಅದು ಅಯುಕ್ತವಾದುದೆಂದು, ವಾಚ್ಯಾ= ಹೇಳಬೇಕು ಎಂದು ಅಂಗೀಕರಿಸುವುದಾದರೆ, ತರ್ಹಿ= ಆಗ, ಅಕ್ಷಮಾನತಾ= ಪ್ರತ್ಯಕ್ಷ ಪ್ರಾಮಾಣ್ಯವು, ಅವಶ್ಯಂ ವಾಚ್ಯಂ= ಅವಶ್ಯವಾಗಿ ಹೇಳಲ್ಪಡಬೇಕು, ನ ಚೇತ್= ಇಲ್ಲದಿದ್ದರೆ, ವಿರುದ್ಧಯೋಃ= ವಿರುದ್ಧವಾದ ವಸ್ತುಗಳಿಗೆ, ಐಕ್ಯಂ= ಐಕ್ಯವನ್ನು ಹೇಳಬೇಕು.

**ಅನುವಾದ–** ವಿರುದ್ಧೈಕ್ಯವು ಎಲ್ಲೂ ಕಂಡುಬರುವುದಿಲ್ಲವಾದ್ದರಿಂದ ಅದು ಅಯುಕ್ತವಾದುದೆಂದು ಹೇಳಿದರೆ, ಹಾಗಾದರೆ ಪ್ರತ್ಯಕ್ಷ ಪ್ರಾಮಾಣ್ಯವನ್ನು ಅವಶ್ಯವಾಗಿ ಅಂಗೀಕರಿಸಬೇಕು. ಪ್ರತ್ಯಕ್ಷವು ಪ್ರಮಾಣವಲ್ಲದಿದ್ದರೆ ವಿರುದ್ಧವಾದ ವಸ್ತುಗಳಿಗೇ ಐಕ್ಯವನ್ನು ಹೇಳು.

**ಭಾವವಿಲಾಸಿನೀ–** ಪ್ರಕಾರಾಂತರೇಣಾಪಿ ಪ್ರತ್ಯಕ್ಷಪ್ರಮಾಣ್ಯಸ್ಯಾವಶ್ಯಕತ್ವಂ ಪ್ರಸಾಧ್ಯ ತದ್ವಿರುದ್ಧೈಕ್ಯಸ್ಯೈವ ಹೇಯತ್ವಮುಪಪಾದಯತಿ ॥ **ವಿರುದ್ಧೈಕ್ಯಸ್ಯೇತಿ** ॥ ಅಯುಕ್ತಿಃ ಅಯುಕ್ತತಾ । ತರ್ಹಿ ಅದೃಷ್ಟಸ್ಯಾಯುಕ್ತಂ ಚೇತ್ ಅರ್ಥಾದ್ದೃಷ್ಟಮೇವ ಯುಕ್ತಮಿತ್ಯಸ್ಯಾಪಿ ಲಾಭಾತ್ ಅವಶ್ಯಂ ಅಮಾನತಾ ವಾಚ್ಯಾ । ನಚೇತ್ ಅಕ್ಷಪ್ರಾಮಾಣ್ಯಂ ನಚೇತ್ । ಅದೃಷ್ಟಸ್ಯಾಪ್ಯಂಗೀಕರ್ತುಂ ಶಕ್ಯತ್ವಾದ್ವಿರುದ್ಧೈಕ್ಯಮೇವ ಸ್ಯಾದಿತ್ಯರ್ಥಃ ॥ ೧೦೫೦ ॥

**ವಿವರಣೆ–** ವಿರುದ್ಧವಾದ ವಸ್ತುಗಳಿಗೆ ಐಕ್ಯವನ್ನು ಹೇಳಿದರೆ ಪ್ರತ್ಯಕ್ಷಾದಿ ವಿರೋಧವು ಬರುತ್ತದೆ ಎಂದು ಅದು ಅಯುಕ್ತವೆಂದು ಹೇಳುತ್ತಿದ್ದೀಯೆ. ಪ್ರತ್ಯಕ್ಷಾದಿಗಳು ಅಪ್ರಮಾಣವಾದರೆ ಅದರ ವಿರೋಧದ ಭಯವಿಲ್ಲದಿರುವುದರಿಂದ ಎಲ್ಲಿಯೂ ಕಂಡುಬರದಿದ್ದರೂ ವಿರುದ್ಧೈಕ್ಯವನ್ನು ಅಂಗೀಕರಿಸು ಎಂದು ಅಭಿಪ್ರಾಯ.

**ಆದಿತ್ಯೇ ಪುರುಷೋ ಯೋಽಸೌ ಸೋಽಹಮಸ್ಮೀತಿ ಚ ಶ್ರುತಿಃ ।**
**ಸ ಯಶ್ಚಾಯಂ ಪುರುಷೇಽಸ್ತಿ ಯಶ್ಚಾದಿತ್ಯೇಽಸ್ತಿ ಸರ್ವದಾ ॥ ೧೦೫೧ ॥**

**ಸ ಏಕ ಇತಿ ವಿಸ್ಪಷ್ಟಸಮಾಖ್ಯಾಶ್ರುತಿಸಖ್ಯತಃ ।**
**ಅರ್ಥಂ ಲಕ್ಷಣಯಾ ಬ್ರೂತೇ ಸುಸ್ಥಂ ಸೂತ್ರೋಕ್ತವರ್ತ್ಮನಾ ॥ ೧೦೫೨ ॥**

**ಅರ್ಥ–** ಆದಿತ್ಯೇ= ಸೂರ್ಯನಲ್ಲಿ, ಯಃ ಪುರುಷಃ= ಯಾವ ಪುರುಷನು ಇದ್ದಾನೆಯೋ, ಅಸೌ= ಅವನು, ಸೋಹಮಸ್ಮಿ= ನಾನಾಗಿದ್ದೇನೆ, ಇತಿ ಚ ಶ್ರುತಿಃ= ಎಂಬ ಆಪಾತಾರ್ಥವುಳ್ಳ ಶ್ರುತಿಯು, ಸ ಯಶ್ಚಾಯಂ ಪುರುಷೇ ಅಸ್ತಿ= ಯಾವ ಪುರುಷನು ನನ್ನಲ್ಲಿದ್ದಾನೆಯೋ, ಯಶ್ಚಾದಿತ್ಯೇ ಅಸ್ತಿ= ಮತ್ತು ಯಾವನು ಆದಿತ್ಯನಲ್ಲಿದ್ದಾನೆಯೋ, ಸರ್ವದಾ ಸ ಏಕಃ= ಯಾವಾಗಲೂ ಅವನು ಒಬ್ಬನೇ, ಇತಿ= ಎಂದು, ವಿಸ್ಪಷ್ಟಸಮಾಖ್ಯಾಶ್ರುತಿಸಖ್ಯತಃ= ಅತ್ಯಂತ ಸ್ಪಷ್ಟವಾದ ಸಮಾಖ್ಯಾಶ್ರುತಿಯ ಸಂವಾದದಿಂದ, ಸುಸ್ಥ ಸೂತ್ರೋಕ್ತವರ್ತ್ಮನಾ= ಸಮೀಚೀನವಾದ ಬ್ರಹ್ಮಸೂತ್ರವು ಹೇಳಿದ ದಾರಿಯಲ್ಲಿ, ಲಕ್ಷಣಯಾ= ಲಕ್ಷಣಾವೃತ್ತಿಯಿಂದ, ಅರ್ಥಂ ಬ್ರೂತೇ= ಅರ್ಥವನ್ನು ಹೇಳುತ್ತದೆ.

**ಅನುವಾದ–** 'ಯೋಽಸಾವಾದಿತ್ಯೇ ಪುರುಷಃ ಸೋಹಮಸ್ಮಿ' ಎಂಬ ಶ್ರುತಿಯು 'ಸ ಯಶ್ಚಾಯಂ ಪುರುಷೇ ಯಶ್ಚಾಸಾವಾದಿತ್ಯೇ ಸ ಏಕಃ' ಯಾವನು ಪುರುಷನಲ್ಲಿದ್ದಾನೆಯೋ ಮತ್ತು ಯಾವನು ಆದಿತ್ಯನಲ್ಲಿದ್ದಾನೆಯೋ ಅವನು ಒಬ್ಬನೇ ಎಂಬ ಅತಿಸ್ಪಷ್ಟವಾದ ಸಮಾಖ್ಯಾಶ್ರುತಿಯ ಸಖ್ಯದಿಂದಲೂ (ಬಲದಿಂದ) ಮತ್ತು ಸುಭದ್ರವಾದ ನ ವಕ್ತು ರಾತ್ಮೋಪದೇಶಾತ್' ಎಂಬ ಬ್ರಹ್ಮಸೂತ್ರವು ತೋರಿಸಿದ ದಾರಿಯಲ್ಲಿ ಲಕ್ಷಣಾವೃತ್ತಿಯಿಂದ ಅರ್ಥವನ್ನು ಹೇಳುತ್ತದೆ.

**ಭಾವವಿಲಾಸಿನೀ–** ಯೋಽಸಾವಾದಿತ್ಯೇ ಪುರುಷಸ್ಸೋಽಹಮಸ್ಮೀತಿ ವಾಕ್ಯಸ್ಯಾರ್ಥಮಾಹ – **ಆದಿತ್ಯ ಇತಿ ॥** ಸ ಯಶ್ಚಾಯಮಿತ್ಯನೇನ ಸ ಯಶ್ಚಾಯಂ ಪುರುಷೇ ಯಶ್ಚಾಸಾವಾದಿತ್ಯೇ ಸ ಏಕ ಇತಿ ವಾಕ್ಯಂ ಗೃಹ್ಣಾತಿ । ಅತ್ರ ಹಿ ಉಭಯತ್ರಾಪ್ಯಾಧಾರಸಪ್ತಮ್ಯಾ ಆದಿತ್ಯಾಂತರ್ಯಾಮಿಣಃ ಪುರುಷಾಂತರ್ಯಾಮಿಣಶ್ಚೈಕ್ಯಕಥನಾತ್ ವಿಸ್ಪಷ್ಟೇತ್ಯುಕ್ತಮ್ । ಅತ ಏವಾಸ್ಯಾಃ ಶ್ರುತೇರ್ನಿರವಕಾಶತ್ವಂ ಚೇತ್ಯಪಿ ದ್ರಷ್ಟವ್ಯಮ್ । ಲಕ್ಷಣಯಾ ಅಹಂಪದಸ್ಯಾಂತರ್ಯಾಮಿಪರತ್ವೇತ್ಯರ್ಥಃ । ಸೂತ್ರೋಕ್ತವರ್ತ್ಮನಾ ನ ವಕ್ತುರಾತ್ಮೋಪದೇಶಾದಿತಿ ಚೇದಧ್ಯಾತ್ಮಸಂಬಂಧಭೂಮಾ ಹ್ಯಸ್ಮಿನ್ನಿತಿ ಸೂತ್ರೋಕ್ತಮಾರ್ಗೇಣ ॥ ೧೦೫೧-೧೦೫೨ ॥

**ವಿವರಣೆ–** 'ಯೋಸಾವಾದಿತ್ಯೇ ಪುರುಷಃ ಸೋಹಮಸ್ಮಿ' ಎಂಬ ವಾಕ್ಯದ ಅರ್ಥವನ್ನು ನಿರ್ಣಯಿಸಬೇಕಾಗಿದೆ. ಆದಿತ್ಯನಲ್ಲಿ ಯಾವ ಈ ಪುರುಷನು ಇದ್ದಾನೆಯೋ ಅವನು ನಾನೇ ಆಗಿದ್ದೇನೆ ಎಂದು ಈ ವಾಕ್ಯದ ಆಪಾತತಃ ಅರ್ಥ. ಆದರೆ ಅದು ಸರಿಯಿಲ್ಲ. ಏಕೆಂದರೆ 'ಸ ಯಶ್ಚಾಯಂ ಪುರುಷೇ ಯಶ್ಚಾಸಾವಾದಿತ್ಯೇ ಸ ಏಕಃ' ಎಂಬ ಇನ್ನೊಂದು ವಾಕ್ಯವು ಇದೇ ಅರ್ಥವನ್ನು ಇನ್ನೂ ಸ್ಪಷ್ಟವಾಗಿ ಹೇಳುತ್ತಿದೆ. ಅದರಲ್ಲಿ ಆದಿತ್ಯನಲ್ಲಿ ಇರುವವನು ಮತ್ತು ಪುರುಷನಲ್ಲಿರುವವನು ಒಬ್ಬನೇ ಎಂದು, ಆದಿತ್ಯ ಮತ್ತು ಪುರುಷರಿಗೆ ಆಧಾರತ್ವವನ್ನು, ಅಲ್ಲಿರುವ ಬ್ರಹ್ಮನಿಗೆ ಅಂತರ್ಯಾಮಿತ್ವವನ್ನು ಮತ್ತು ಅಭೇದವನ್ನು ಹೇಳುತ್ತದೆ. ಈ ಶ್ರುತಿಯು ನಿರವಕಾಶವಾದ್ದರಿಂದ, ನಿರವಕಾಶವಾದ ಈ ಶ್ರುತಿಗೆ ಅನುಸಾರವಾಗಿ ಯೋಸಾವಾದಿತ್ಯೇ ಎಂಬ ಶ್ರುತಿಗೆ ಅರ್ಥವನ್ನು ಹೇಳಬೇಕು. ಆದ್ದರಿಂದ ಅಹಮಸ್ಮಿ ಎಂಬುದಕ್ಕೆ ನನ್ನ ಅಂತರ್ಯಾಮಿಯಾಗಿದ್ದಾನೆ ಎಂದು ಲಕ್ಷಣಾವೃತ್ತಿಯಿಂದ ಅರ್ಥವನ್ನು ಮಾಡಬೇಕು. ಇದು ಸೂತ್ರಸಮ್ಮತವಾದುದು. ಇಂದ್ರನ ನಾನು ಪ್ರಾಣನಾಗಿದ್ದೇನೆ ಎಂಬ ಮಾತನ್ನು ಸೂತ್ರಕಾರರು 'ಅಧ್ಯಾತ್ಮಸಂಬಂಧಭೂಮಾಹ್ಯಸ್ಮಿನ್' ಮತ್ತು 'ಶಾಸ್ತ್ರದೃಷ್ಟ್ಯಾತೂಪದೇಶಃ' ಎಂಬ ಸೂತ್ರಗಳಿಂದ ನನ್ನ ಅಂತರ್ಯಾಮಿಯು ಪ್ರಾಣನಾಗಿದ್ದಾನೆ ಎಂಬ ಅರ್ಥವನ್ನು ಹೇಳಿದ್ದಾರೆ. ಆದ್ದರಿಂದ ಸಂವಾದಿಯಾದ ಶ್ರುತಿಗೂ ಮತ್ತು ಬ್ರಹ್ಮಸೂತ್ರಕ್ಕೂ . ಅನುಗುಣವಾದ ಅರ್ಥವನ್ನು ಮಾಡಿ ಆದಿತ್ಯಾಂತರ್ಯಾಮಿಯಾದವನು ನನ್ನ ಅಂತರ್ಯಾಮಿ ಎಂಬ ಅರ್ಥವನ್ನು ಹೇಳಬೇಕು ಎಂದು ಅಭಿಪ್ರಾಯ.

**ಏಕವಾಕ್ಯೇಪಿ ಚಾದಿತ್ಯ ಇತ್ಯಾಧಾರತ್ವಕೀರ್ತನಾತ್ ।**
**ಸ್ವಸ್ಯಾಪ್ಯಾಧಾರತೈವೋಕ್ತಾ ಕಿಮರ್ಕೇಶೋಽರ್ಕಪೂಜಕಃ ॥ ೧೦೫೩ ॥**

**ಅರ್ಥ–** ಏಕವಾಕ್ಯೇಪಿ= 'ಯೋಸಾವಾದಿತ್ಯೇ' ಎಂಬ ಒಂದು ವಾಕ್ಯದಲ್ಲಿಯೂ ಕೂಡ, ಆದಿತ್ಯೇ ಇತಿ= ಆದಿತ್ಯನಲ್ಲಿ ಎಂದು, ಆಧಾರತ್ವಕೀರ್ತನಾತ್= ಆಧಾರತ್ವವನ್ನು ಹೇಳಿರುವುದರಿಂದ, ಸ್ವಸ್ಯಾಪಿ= ಅಹಂ ಶಬ್ದಾರ್ಥವಾದ ತನಗೂ, ಆಧಾರತೈವ ಉಕ್ತ= ಆಧಾರತ್ವವೇ ಹೇಳಲ್ಪಟ್ಟಿದೆ, ಅರ್ಕಪೂಜಕಃ= ಸೂರ್ಯನನ್ನು ಆರಾಧಿಸುವವನು, ಕಿಂ ಅರ್ಕೇಶಃ= ಸೂರ್ಯನ ಅಂತರ್ಯಾಮಿಯಾಗುತ್ತಾನೆಯೇ!

**ಅನುವಾದ– 'ಯೋಸಾವಾದಿತ್ಯೇ' ಎಂಬ ಈ ಒಂದು ವಾಕ್ಯದಲ್ಲಿಯೂ ಸಹ ಆದಿತ್ಯೇ ಎಂದು ಸೂರ್ಯನಿಗೆ ಆಧಾರತ್ವವನ್ನು ಹೇಳಿರುವುದರಿಂದ ಅಹಂ ಎಂಬಲ್ಲಿಯೂ ಆಧಾರತ್ವವನ್ನು ಹೇಳಬೇಕು. ಸೂರ್ಯನ ಪೂಜೆಯನ್ನು ಮಾಡುವವನು ಸೂರ್ಯನ ಅಂತರ್ಯಾಮಿಯಾಗುತ್ತಾನೆಯೇ!**

**ಭಾವವಿಲಾಸಿನೀ–** ಏಕವಾಕ್ಯೇ ಅಸ್ಮಿನ್ನೇವ ವಾಕ್ಯ ಇತ್ಯರ್ಥಃ ॥ **ಆದಿತ್ಯ ಇತಿ ॥** ಯೋಽಸಾವಾದಿತ್ಯ ಇತಿ ಸಪ್ತಮ್ಯಾ ಆದಿತ್ಯಾಶ್ರಿತಪುರುಷಸ್ಯೈವ ಗ್ರಹಣಾದಿತ್ಯರ್ಥಃ । ಸ್ವಸ್ಯಾಪಿ ಸೋಹಮಸ್ಮೀತಿ

ಪ್ರೋಕ್ತಸ್ಯ ಸ್ವಸ್ಯಾಪಿ। ಆಧಾರತಾ ಲಕ್ಷಣಯಾ ಸ್ವಾಂತರ್ಯಾಮಿಪುರುಷಂ ಪ್ರತ್ಯಾಧಾರತೇತ್ಯರ್ಥಃ। ವಿಪಕ್ಷೇ ಬಾಧಕಮಾಹ – **ಕಿಮಿತಿ** ॥ ಅರ್ಕಪೂಜಕಃ ಸಂಧ್ಯಾವಂದನಾದಿನಾ ಅರ್ಕಪೂಜಕಃ ಋಷಿಮನುಷ್ಯಾದಿಜೀವಃ। ಅರ್ಕೇಶಃ ಯೋಽಸಾವಾದಿತ್ಯೇ ಪುರುಷ ಇತ್ಯುಕ್ತಾರ್ಕಸ್ವಾಮೀ ಕಿಂ। ನೈವೇತ್ಯರ್ಥಃ। ಆದಿತ್ಯೇ ಪುರುಷ ಇತ್ಯುಕ್ತಾದಿತ್ಯಾಂತರ್ಯಾಮಿಪುರುಷಸ್ಯ ಸೋಹಮಿತ್ಯುಕ್ತ-ಮನುಷ್ಯಾದಿ ಜೀವಸ್ವರೂಪತ್ವೇಽರ್ಕಪೂಜಕಸ್ಯೈವಾರ್ಕಸ್ವಾಮಿತ್ವಂ ಸ್ಯಾದಿತಿ ಭಾವಃ ॥೧೦೫೩॥

**ವಿವರಣೆ**– ಆದಿತ್ಯೇ ಎಂಬಲ್ಲಿ ಆಧಾರತ್ವವನ್ನು ಹೇಳುವುದರಿಂದ ಅಹಂ ಎಂಬ ಶಬ್ದದಲ್ಲಿಯೂ ಆಧಾರತ್ವವನ್ನೇ ಹೇಳಬೇಕು. ಸಪ್ತಸು ಪ್ರಥಮಾ ಎಂದು ಹಿಂದೆ ಹೇಳಿದ್ದಾಗಿದೆ. ಅದನ್ನು ಬಿಟ್ಟು ನಾನೇ ಆದಿತ್ಯಾಂತರ್ಯಾಮಿ ಎಂಬ ಅರ್ಥವನ್ನು ಹೇಳಿದರೆ ಗಾಯತ್ರ್ಯಾದಿ ಮಂತ್ರಗಳಿಂದ ಸೂರ್ಯನನ್ನು ಉಪಾಸನೆಯನ್ನು ಮಾಡುವ ಜೀವನು ಸೂರ್ಯನ ಅಂತರ್ಯಾಮಿಯಾಗಿರುವುದು ಅಸಂಭಾವಿತವಾದುದರಿಂದ ಶ್ರುತಿಗೆ ಬಾಧಿತವಾದ ಅರ್ಥವನ್ನು ಹೇಳಿದಂತಾಗುತ್ತದೆ ಎಂದು ಅಭಿಪ್ರಾಯ.

**ತತ್ ಸ್ಪಷ್ಟಭೇದಶ್ರುತ್ಯಕ್ಷಬಾಧೇ ಸತಿ ಸತಾಂ ಮತೇ ।**
**ವೃತ್ತಿತ್ರಯೇ ಚ ಸತ್ಯೈಕ್ಯವಾಕ್ಯಂ ಸ್ಯಾತ್ ಕ್ವ ವಿರುದ್ಧಯೋಃ ॥ ೧೦೫೪ ॥**

**ಅರ್ಥ**– ತತ್= ಆದ್ದರಿಂದ, ಸ್ಪಷ್ಟಭೇದಶ್ರುತ್ಯಕ್ಷಬಾಧೇ ಸತಿ= ಸ್ಪಷ್ಟವಾದ ಭೇದಶ್ರುತಿ ಮತ್ತು ಪ್ರತ್ಯಕ್ಷದಿಂದ ಬಾಧವು ಬರುವಾಗ, ಸತಾಂ ಮತೇ= ಸಜ್ಜನರ ಮತದಲ್ಲಿ, ವೃತ್ತಿತ್ರಯೇ ಚ ಸತಿ= ಮೂರು ವೃತ್ತಿಗಳು ಇರುವಾಗ, ವಿರುದ್ಧಯೋಃ= ವಿರುದ್ಧವಾದ ವಸ್ತುಗಳಿಗೆ, ಐಕ್ಯವಾಕ್ಯಂ= ಐಕ್ಯವನ್ನು ಹೇಳುವ ವಾಕ್ಯವು, ಕ್ವ ಸ್ಯಾತ್= ಎಲ್ಲಿ ಇರುತ್ತದೆ?

**ಅನುವಾದ**– ಆದ್ದರಿಂದ ಸ್ಪಷ್ಟವಾದ ಶ್ರುತಿ ಮತ್ತು ಪ್ರತ್ಯಕ್ಷದ ಬಾಧವು ಇರುವಾಗ ಮತ್ತು ಸಜ್ಜನರ ಮತದಲ್ಲಿ ಮೂರು ವೃತ್ತಿಗಳು ಇರುವಾಗ ವಿರುದ್ಧ ವಸ್ತುಗಳಿಗೆ ಐಕ್ಯವನ್ನು ಹೇಳುವ ವಾಕ್ಯವು ಎಲ್ಲಿ ಇರುತ್ತದೆ?

**ಭಾವವಿಲಾಸಿನೀ**– ಕಿಂಚೈಕ್ಯಾಖ್ಯಮುಖ್ಯಾರ್ಥಸ್ಯ ಪ್ರತ್ಯಕ್ಷಾದಿಬಾಧಿತತ್ವಸ್ಯಾವರ್ಜನೀಯತ್ವಾತ್ ಮುಖ್ಯಾರ್ಥಬಾಧೇ ಚ ವೃತ್ತ್ಯಂತರಸ್ಯ ಸರ್ವಸಮ್ಮತತ್ವಾತ್ ನ ಕ್ವಾಪ್ಯೈಕ್ಯಸ್ಯಾವಕಾಶ ಇತ್ಯಾಹ – **ತದಿತಿ**॥ ತತ್ತಸ್ಮಾತ್ಕಾರಣಾತ್ ॥ ೧೦೫೪ ॥

**ವಿವರಣೆ**– 'ಯೋಽಸಾವಾದಿತ್ಯೇ' ಎಂಬ ಶ್ರುತಿಗೆ ಪ್ರತ್ಯಕ್ಷಾದಿ ಪ್ರಮಾಣದ ವಿರೋಧವನ್ನು ಹೇಳಿದ್ದೇವೆ. ಶಬ್ದಗಳಿಗೆ ಮುಖ್ಯಾ, ಗೌಣೀ ಮತ್ತು ಲಕ್ಷಣಾ ಎಂಬ ಮೂರು ವೃತ್ತಿಗಳಿವೆ. ಆದ್ದರಿಂದ ಮುಖ್ಯವೃತ್ತಿಯಿಂದ ಲಭ್ಯವಾಗುವ ಅರ್ಥವು ಬಾಧಿತವಾದರೆ ಬೇರೆ ವೃತ್ತಿಯಿಂದ ಅರ್ಥವನ್ನು ಹೇಳಬಹುದು. ಆದ್ದರಿಂದ ಮುಖ್ಯಾರ್ಥವು ಬಾಧಿತವಾಗಿ ಮತ್ತು ಬೇರೆ ಅಬಾಧಿತವಾದ ಅರ್ಥವನ್ನು ಹೇಳುವ ಅವಕಾಶ

ವಿರುವುದರಿಂದ ಲಕ್ಷಣಾವೃತ್ತಿಯಿಂದ ಅಹಂ ಶಬ್ದಕ್ಕೆ ನನ್ನ ಅಂತರ್ಯಾಮಿ ಎಂದೇ ಅರ್ಥವನ್ನು ಮಾಡಬೇಕು ಎಂದು ಅಭಿಪ್ರಾಯ.

**ಕಿಂ ಚೈಕಜೀವಬ್ರಹ್ಮೈಕ್ಯಂ ವಾಕ್ಯೇನಾನೇನ ಸೇತ್ಸ್ಯತಿ ।**
**ಸರ್ವೈಕ್ಯೇ ಕಿಂ ಪ್ರಮಾಣಂ ತೇ ಶ್ರುತ್ಯರ್ಥೋ ನ ಕಿಲಾರ್ಥಿಕಃ ॥ ೧೦೫೫ ॥**

**ಅರ್ಥ–** ಕಿಂಚ= ಮತ್ತು, ಅನೇನ ವಾಕ್ಯೇನ= ತತ್ತ್ವಮಸಿ ಎಂಬ ಈ ವಾಕ್ಯದಿಂದ, ಏಕಜೀವ ಬ್ರಹ್ಮೈಕ್ಯಂ= ಶ್ವೇತಕೇತು ರೂಪನಾದ ಒಬ್ಬ ಜೀವನಿಗೂ ಮತ್ತು ಬ್ರಹ್ಮನಿಗೂ ಐಕ್ಯವು, ಸೇತ್ಸ್ಯತಿ= ಕೂಡಬಹುದು, ಸರ್ವೈಕ್ಯೇ= ಸರ್ವ ಜೀವರ ಐಕ್ಯ ವಿಷಯದಲ್ಲಿ, ತೇ= ನಿನಗೆ, ಕಿಂ ಪ್ರಮಾಣಂ= ಏನು ಪ್ರಮಾಣವಿದೆ? ಶ್ರುತ್ಯರ್ಥಃ= ಶ್ರುತಿಯ ಅರ್ಥವು, ಆರ್ಥಿಕಃ ನ ಕಿಲ= ಅರ್ಥಾತ್ ಸಿದ್ಧವಾದ ಅರ್ಥವಲ್ಲವಷ್ಟೇ?

**ಅನುವಾದ–** ಮತ್ತು ತತ್ತ್ವಮಸಿ ಎಂಬ ಈ ವಾಕ್ಯದಿಂದ ಒಬ್ಬ ಜೀವನಾದ ಶ್ವೇತಕೇತುವಿಗೂ ಮತ್ತು ಬ್ರಹ್ಮನಿಗೂ ಐಕ್ಯವು ಸಿದ್ಧವಾಗಬಹುದು. ಎಲ್ಲ ಜೀವರಿಗೂ ಮತ್ತು ಬ್ರಹ್ಮನಿಗೂ ಐಕ್ಯವನ್ನು ಹೇಳಲು ನಿನಗೆ ಏನು ಪ್ರಮಾಣವಿದೆ? ಆರ್ಥಿಕವಾದ ಅರ್ಥವು ವೇದದ ಅರ್ಥವಾಗುವುದಿಲ್ಲವಷ್ಟೇ?

**ಭಾವವಿಲಾಸಿನೀ– ಯುಕ್ತ್ಯಂತರಂ ಚಾಹ – ಕಿಂಚೇತಿ ॥** ಏಕಜೀವಃ ಶ್ವೇತಕೇತುಃ । ಅನೇನ ತತ್ತ್ವಮಸೀತ್ಯನೇನ। ಸರ್ವೈಕ್ಯೇ ಸಕಲಜೀವೈಕ್ಯೇ । ಏಕಸ್ಯೈಕ್ಯೇ ಅರ್ಥಾತ್ ಸರ್ವಸ್ಯಾಪ್ಯೈಕ್ಯಸಿದ್ಧಿರಿತ್ಯತ ಆಹ – **ಶ್ರುತ್ಯರ್ಥ ಇತಿ ॥ ಆರ್ಥಿಕಃ ಅರ್ಥಾತ್ ಸಿದ್ಧೋಽರ್ಥಃ । ಯಶ್ಚಾರ್ಥಾದರ್ಥೋ ನ ಸ ಚೋದನಾರ್ಥ ಇತಿ ಪೂರ್ವಾಚಾರ್ಯವಚನಾದಿತಿ ಭಾವಃ ॥ ೧೦೫೫ ॥**

**ವಿವರಣೆ–** ಒಬ್ಬ ಜೀವನಿಗೆ ಬ್ರಹ್ಮೈಕ್ಯವನ್ನು ಹೇಳಿದರೆ ಅರ್ಥಾತ್ ಎಲ್ಲ ಜೀವರಿಗೂ ಬ್ರಹ್ಮೈಕ್ಯವು ಸಿದ್ಧವಾಗುತ್ತದೆ ಎಂದು ಹೇಳಿದರೆ ಇದು ಶಬ್ದ ಶಕ್ತಿಯಿಂದ ಸಿದ್ಧವಾಗುವ ಅರ್ಥವಲ್ಲ. ಇದು ಆರ್ಥಿಕವಾದ ಅರ್ಥ. 'ಯಶ್ಚ ಅರ್ಥಾದರ್ಥೋ ನ ಸ ಚೋದನಾರ್ಥಃ' ಎಂದು ಪೂರ್ವಾಚಾರ್ಯರು ಆರ್ಥಿಕವಾದ ಅರ್ಥವು ವೇದದ ಅರ್ಥವಲ್ಲ ಎಂದು ಹೇಳಿದ್ದಾರೆ. ಆದ್ದರಿಂದ ಸರ್ವ ಜೀವರಿಗೆ ಬ್ರಹ್ಮೈಕ್ಯವನ್ನು ಹೇಳಲು ಯಾವ ಪ್ರಮಾಣವೂ ಇಲ್ಲ ಎಂದು ಅಭಿಪ್ರಾಯ.

**ತತ್ತತ್ಪದೋಕ್ತಯೋರೈಕ್ಯೇ ಸುಪ್ರಸಿದ್ಧಾ ವಿರುದ್ಧತಾ ।**
**ಪದದ್ವಯಸ್ಯ ಲಕ್ಷ್ಯತ್ವಾಲ್ಲಕ್ಷ್ಮ್ಯೇಕಪದಲಕ್ಷಣಾ ।**
**ತತ್ಸಂಬಂಧಾತ್ ತತ್ಪದೇನ ಜೀವೋಕ್ತೌ ಕಿಂ ಗತಂ ತವ ॥ ೧೦೫೬ ॥**

**ಅರ್ಥ–** ತತ್ತತ್ಪದೋಕ್ತಯೋಃ= ಆಯಾ ಪದಗಳಿಂದ ಹೇಳಲ್ಪಟ್ಟವರಿಗೆ, ಐಕ್ಯೇ= ಐಕ್ಯವನ್ನು ಅಂಗೀಕರಿಸಿದರೆ, ವಿರುದ್ಧತಾ= ವಿರೋಧವು, ಸುಪ್ರಸಿದ್ಧಾ= ಸುಪ್ರಸಿದ್ಧವಾಗಿದೆ, ಪದದ್ವಯಸ್ಯ

ಲಕ್ಷ್ಯತ್ವಾತ್= ಎರಡು ಪದಗಳಿಗೆ ಲಕ್ಷಣಾವೃತ್ತಿಯನ್ನು ಆಶ್ರಯಿಸುವುದಕ್ಕಿಂತಲೂ, ಏಕಪದಲಕ್ಷಣಾ= ಒಂದು ಪದಕ್ಕೆ ಲಕ್ಷಣಾವೃತ್ತಿಯನ್ನು ಆಶ್ರಯಿಸುವುದು, ಲಘ್ವೀ= ಲಘುವಾದುದು, ತತ್ಪದೇನ= ತತ್ ಶಬ್ದದಿಂದ, ತತ್ಸಂಬಂಧಾತ್= ಆ ಬ್ರಹ್ಮನ ಸಂಬಂಧವಿರುವ ಕಾರಣ, ಜೀವೋಕ್ತೌ= ಜೀವನನ್ನು ಹೇಳಿದರೆ, ಕಿಂ ಗತಂ ತವ= ನಿನಗೆ ಏನು ಹಾನಿಯಾಗುತ್ತದೆ?

**ಅನುವಾದ–** ಆಯಾ ಪದಗಳಿಂದ ಹೇಳಿದ ವಸ್ತುಗಳಿಗೆ ಐಕ್ಯವನ್ನು ಹೇಳಿದರೆ ವಿರೋಧವು ಸುಪ್ರಸಿದ್ಧವಾದುದು. ಎರಡು ಪದಗಳಿಗೂ ಲಕ್ಷಣಾ ಮಾಡುವುದಕ್ಕಿಂತಲೂ ಒಂದು ಪದಕ್ಕೆ ಲಕ್ಷಣಾ ಮಾಡುವುದು ಲಘುಭೂತ ವಾದುದು. ತತ್ಸಂಬಂಧವಿರುವುದರಿಂದ ಜೀವನು ತತ್ಪದವಾಚ್ಯ (ಬ್ರಹ್ಮಸಂಬಂಧ ವಿರುವುದರಿಂದ ಜೀವನು ಬ್ರಹ್ಮ ಶಬ್ದದಿಂದ ಹೇಳಲ್ಪಡುತ್ತಾನೆ) ಎಂದು ಅಂಗೀಕರಿಸಿದರೆ ನಿನಗೆ ಏನು ಹಾನಿಯಾಗುತ್ತದೆ?

**ಭಾವವಿಲಾಸಿನೀ–** ಕಿಂಚ ಪರರೀತ್ಯೈವ ಪರಾರ್ಥೇ ಗೌರವಂ ಸ್ವಾರ್ಥೇ ಲಾಘವಂ ಚಾಹ – **ತತ್ತದಿತಿ** ॥ ಏಕಪದಲಕ್ಷಣಾ ತ್ವಂ ತತ್ ತದಧೀನೋಽಸೀತಿ ತತ್‌ಪದಮಾತ್ರಲಕ್ಷಣಾ । ಮಾಯಾ-ವಾದಿನಾ ಹಿ ತತ್ತ್ವಂ ಪದಯೋರುಭಯೋರಪಿ ಲಕ್ಷಣಯಾ ಚಿನ್ಮಾತ್ರಪರತಾ ವಕ್ತವ್ಯಾ । ಅಸ್ಮಾಕಂ ತು ತದಿತಿ ಪದಚ್ಛೇದೇಽಪಿ ಏಕಪದಮಾತ್ರಲಕ್ಷಣಾಂಗೀಕಾರಾದಸ್ಮದರ್ಥ ಏವ ಲಾಘವಾದ್ ವಕ್ತುಮುಚಿತಃ ಪರಕೀಯಾರ್ಥಸ್ತು ಗೌರವಾನ್ನಾಂಗೀಕಾರಾರ್ಹ ಇತ್ಯಾಹ–**ತತ್‌ಸಂಬಂಧಾದಿತಿ** ॥ ತತ್‌ಪದೇನ ತದಿತಿ ಪದೇನ ॥ ೧೦೫೬ ॥

**ವಿವರಣೆ–** ತತ್ತ್ವಮಸಿ ಎಂಬಲ್ಲಿ ಮಾಯಾವಾದಿಗಳು ತತ್ ಪದಕ್ಕೂ ಮತ್ತು ತ್ವಂ ಪದಕ್ಕೂ ಲಕ್ಷಣಾವೃತ್ತಿಯನ್ನು ಆಶ್ರಯಿಸಿ ವಿರುದ್ಧ ಧರ್ಮವನ್ನು ತ್ಯಜಿಸಿ ಚೈತನ್ಯ ಎಂದು ಅರ್ಥ ಮಾಡುತ್ತಾರೆ. ಅವರು ಎರಡು ಪದಗಳಿಗೆ ಲಕ್ಷಣಾವೃತ್ತಿಯನ್ನು ಆಶ್ರಯಿಸಬೇಕು. ನಾವು ತತ್ಪದಕ್ಕೆ ತತ್ಸಂಬಂಧಿ ಎಂದರೆ ತದದೀನ ಎಂದು ಅರ್ಥವನ್ನು ಮಾಡಿ ಒಂದೇ ಪದಕ್ಕೆ ಲಕ್ಷಣಾವೃತ್ತಿಯನ್ನು ಆಶ್ರಯಿಸುತ್ತೇವೆ. ಎರಡು ಪದದ ಲಕ್ಷಣಾಕ್ಕಿಂತಲೂ ಒಂದೇ ಪದದ ಲಕ್ಷಣೆಯು ಶ್ರೇಷ್ಠವಾದುದು. ಆದರೆ ಲಕ್ಷಣಾವನ್ನು ಮಾಡಿದರೂ ಪರ ರೀತಿಯಿಂದಲೇ ನಮ್ಮ ಲಕ್ಷಣಾವೃತ್ತಿಯೇ ಶ್ರೇಷ್ಠವಾದುದೆಂದು ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

**ಪಂಚಮ್ಯರ್ಥೇ ಯತ್ತದಿತಿ ಪದಂ ಪ್ರಾಹುರ್ಯತೋಽವ್ಯಯಮ್ ।**
**ತದಿತ್ಯಸ್ಯೈವ ತಸ್ಮಾದಿತ್ಯರ್ಥೋ ವಾ ತೇನ ಕಥ್ಯತಾಮ್ ।**
**ಋಜುಷ್ವನೇಕಮಾರ್ಗೇಷು ಸತ್ಸು ಕಿಂ ಕುಟಿಲಾಧ್ವನಾ ॥ ೧೦೫೭ ॥**

**ಅರ್ಥ–** ಯತಃ= ಯಾವ ಕಾರಣದಿಂದ, ಯತ್ತದಿತಿ ಪದಂ= ಯತ್ ತತ್ ಎಂಬ ಪದಗಳನ್ನು, ಪಂಚಮ್ಯರ್ಥೇ ಅವ್ಯಯಂ= ಪಂಚಮಿ ವಿಭಕ್ತಿ ಅರ್ಥದಲ್ಲಿ ಇರುವ ಅವ್ಯಯ

ಎಂದು, ಪ್ರಾಹುಃ= ಹೇಳುತ್ತಾರೆಯೋ, ತೇನ= ಆ ಕಾರಣದಿಂದ, ತದಿತ್ಯಸ್ಯೈವ= ತತ್ ಎಂಬ ಪದಕ್ಕೇ, ತಸ್ಮಾದಿತ್ಯರ್ಥಃ= ತಸ್ಮಾತ್ ಎಂಬ ಅರ್ಥವನ್ನು, ಕಥ್ಯತಾಂ= ಹೇಳು, ಋಜುಷು= ನೇರವಾದ, ಅನೇಕಮಾರ್ಗೇಷು ಸತ್ಸು= ಅನೇಕ ಮಾರ್ಗಗಳು ಇರುವಾಗ, ಕುಟಿಲಾಧ್ವನಾ= ವಕ್ರಮಾರ್ಗದಿಂದ, ಕಿಂ= ಏನು ಪ್ರಯೋಜನ?

**ಅನುವಾದ–** **ಯತ್ ತದ್ ಎಂಬ ಪದಗಳು ಪಂಚಮೀ ವಿಭಕ್ತಿಯ ಅರ್ಥದಲ್ಲಿರುವ ಅವ್ಯಯಗಳೆಂದು ಹೇಳುತ್ತಾರೆ. ಆದ್ದರಿಂದ ತತ್ ಎಂಬ ಪದಕ್ಕೆ ತಸ್ಮಾತ್= ಅವನಿಂದ ಎಂಬ ಅರ್ಥವನ್ನು ಹೇಳು. ಅನೇಕ ಋಜು ಮಾರ್ಗಗಳಿರುವಾಗ ವಕ್ರಮಾರ್ಗವನ್ನು ಏಕೆ ಅನುಸರಿಸುತ್ತೀಯೆ?**

**ಭಾವವಿಲಾಸಿನೀ– ಅರ್ಥಾಂತರಂ ಚಾಹ – ಪಂಚಮ್ಯರ್ಥ ಇತಿ ॥ ೧೦೫೭ ॥**

**ವಿವರಣೆ–** ಈಗ ತತ್ ಪದಕ್ಕೆ ಲಕ್ಷಣಾ ಮಾಡುವುದೂ ಬೇಡ. ವ್ಯಾಕರಣ ಕೋಶಾದಿ ಬಲದಿಂದಲೇ ತತ್ ಪದಕ್ಕೆ ತಸ್ಮಾತ್ ಎಂದು ಅರ್ಥವಾಗುತ್ತದೆ. ಆದ್ದರಿಂದ ನಮ್ಮ ಮತದಲ್ಲಿ ಯಾವ ಪದಕ್ಕೂ ಲಕ್ಷಣಾವೃತ್ತಿ ಇಲ್ಲ ಎಂದು ಹೇಳುತ್ತಾರೆ.

**ಕಿಂಚ ಬ್ರಹ್ಮೇಂದ್ರರುದ್ರಾದಿಶಬ್ದಾಃ ಸರ್ವೇಽಪಿ ಸರ್ವದಾ ।**
**ತತ್ತದ್ವಿಶಿಷ್ಟಾರ್ಥಪರಾ ವಿಶಿಷ್ಟೈಕ್ಯಂ ಚ ತೇ ಮತೇ ।**
**ನ ವಿದ್ಯತೇ ಚಿತೋರೈಕ್ಯಂ ಯತೋ ಲಕ್ಷಣಯಾ ತವ ॥ ೧೦೫೮ ॥**

**ತದ್ ದೇವಾಸುರದೇವೈಕ್ಯಂ ವಾಕ್ಯಂ ನಾಖ್ಯಾತಿ ತೇ ಕ್ವಚಿತ್ ।**
**ಅತ್ರಾಪ್ಯತ್ರಾಪಿ ಯತ್ತೇನ ದ್ವಿದೇವಪದನಾಶನಾತ್ ॥ ೧೦೫೯ ॥**

**ಅರ್ಥ–** ಕಿಂಚ= ಮತ್ತು, ತೇ ಮತೇ= ನಿನ್ನ ಮತದಲ್ಲಿ, ಸರ್ವೇ ಬ್ರಹ್ಮೇಂದ್ರರುದ್ರಾದಿಶಬ್ದಾಃ ಅಪಿ= ಎಲ್ಲಾ ಬ್ರಹ್ಮರುದ್ರಾದಿ ಶಬ್ದಗಳೂ ಕೂಡ, ಸರ್ವದಾ= ಯಾವಾಗಲೂ, ತತ್ತದ್ವಿಶಿಷ್ಟಾರ್ಥಪರಾಃ= ಬೇರೆ ಬೇರೆ ವಿಶೇಷಣಗಳಿಂದ ವಿಶಿಷ್ಟರಾದ ಚೈತನ್ಯ ಪರವಾಗಿವೆ, ತೇ ಮತೇ= ನಿನ್ನ ಮತದಲ್ಲಿ, ವಿಶಿಷ್ಟೈಕ್ಯಂ= ವಿಶಿಷ್ಟೈಕ್ಯವು, ನ ವಿದ್ಯತೇ= ಇಲ್ಲ, ಇಲ್ಲಿ ನಿನಗೆ ಲಕ್ಷಣಾವೃತ್ತಿಯಿಂದ ಚಿತ್‌ಗಳಿಗೆ ಐಕ್ಯವನ್ನು ಹೇಳುವುದಕ್ಕೂ ಸಾಧ್ಯವಿಲ್ಲ, ತತ್= ಆದ್ದರಿಂದ, ತೇ= ನಿನಗೆ, ದೇವಾಸುರದೇವೈಕ್ಯಂ= ದೇವಾಸುರರಿಗೂ ಮತ್ತು ಬ್ರಹ್ಮನಿಗೆ ಐಕ್ಯವನ್ನು, ವಾಕ್ಯಂ= ವಾಕ್ಯವು, ನಾಖ್ಯಾತಿ= ಹೇಳುವುದಿಲ್ಲ, ಅತ್ರಾಪಿ= ಇಲ್ಲಿಯೂ ಸಹ, ದ್ವಿದೇವಪದನಾಶನಾತ್= ದೇವವಾಚಕವಾದ ಎರಡು ಪದಗಳಿಗೆ ನಾಶವುಂಟಾಗುವ ಕಾರಣದಿಂದ, ತೇನ= ಆ ಐಕ್ಯವನ್ನು ಹೇಳುವುದರಿಂದ (ಹೇಳುವುದಕ್ಕೆ), ಅತ್ರಾಪಿ= ನಾಚಿಕೆಗೊಂಡಿತು.

**ಅನುವಾದ–** ಮತ್ತು ನಿನ್ನ ಮತದಲ್ಲಿ ಬ್ರಹ್ಮರುದ್ರ ಇಂದ್ರ ಮೊದಲಾದ ಎಲ್ಲ ಶಬ್ದಗಳು ಚತುರ್ಮುಖತ್ವಾದಿ ವಿಶಿಷ್ಟ ತತ್ತಚ್ಚೈತನ್ಯವನ್ನು ಹೇಳುತ್ತದೆ. ಆ ವಿಶಿಷ್ಟ ಚೈತನ್ಯಕ್ಕೆ ನಿನ್ನ ಮತದಲ್ಲಿ ಐಕ್ಯವಿಲ್ಲ. ಲಕ್ಷಣಾವೃತ್ತಿಯಿಂದ ಎರಡು ಚಿತ್‌ಗಳಿಗೆ ಐಕ್ಯವನ್ನು ಹೇಳುತ್ತೇನೆ ಎಂದು ಹೇಳಿದರೆ ಲಕ್ಷಣಾ ಸೂಚಕವಾದ ಯಾವ ಪದವೂ ಇಲ್ಲ. ಆದ್ದರಿಂದ ಲಕ್ಷಣಾವೃತ್ತಿಯೂ ಇಲ್ಲ. ಆದ್ದರಿಂದ ನಿನ್ನ ಯಾವ ವಾಕ್ಯವೂ ದೇವಾಸುರರಿಗೂ ಮತ್ತು ಬ್ರಹ್ಮನಿಗೂ ಐಕ್ಯವನ್ನು ಹೇಳುವುದಿಲ್ಲ. ಸಬ್ರಹ್ಮಾ ಸಶಿವಃ ಎಂಬ ವಾಕ್ಯದಲ್ಲಿಯೂ ಎರಡು ದೇವತಾವಾಚಕ ಪದಗಳಿಗೆ ನಾಶವುಂಟಾಗುವ ಕಾರಣದಿಂದ ಶ್ರುತಿಯು ನಾಚಿಕೆಗೊಂಡು ದೇವತ್ಯೈಕ್ಯವನ್ನು ಹೇಳುವುದಿಲ್ಲ.

**ಭಾವವಿಲಾಸಿನೀ–** ತ್ರಿದೇವತೈಕ್ಯಪ್ರತಿಪಾದಕತಯಾ ಹರಿಹರಾದ್ಯೈಕ್ಯಪ್ರತಿಪಾದಕತಯಾ ಚ ಪ್ರತೀತವಾಕ್ಯಾನಾಂ ಅನಯೈವ ದಿಶಾ ಅರ್ಥೋ ವಾಚ್ಯ ಇತ್ಯಾಹ – **ಕಿಂಚೇತಿ** ॥ ತವ ಮತೇ । ತತ್ ತಸ್ಮಾತ್ ವಿಶಿಷ್ಟೈಕ್ಯಸ್ಯ ತ್ವಯಾಽನಂಗೀಕಾರಾತ್ ಚಿನ್ಮಾತ್ರೈಕ್ಯಪ್ರತಿಪಾದಕಪದಾಭಾವಾತ್ । ದೇವವಾಸುದೇವೈಕ್ಯಂ ಬ್ರಹ್ಮಾದಿದೇವಾನಾಂ ವಾಸುದೇವೇನೈಕ್ಯಮ್ । ಅತ್ರಾಪಿ ಲಜ್ಜಾ ಅಕಾರಿ । ತ್ರಪುಲಜ್ಜಾಯಾಮಿತಿ ಧಾತೋಃ ಕರ್ಮಣಿ ಲುಙ್ । ಯದ್ಯಸ್ಮಾತ್ । ತೇನ ದೇವೈಕ್ಯಪರತಯಾ ಪ್ರತೀಯಮಾನವಾಕ್ಯೇನ । ದ್ವಿದೇವಪದನಾಶನಾತ್ ದ್ವಯೋರ್ದೇವಯೋರ್ವಾಚಕಪದಯೋರ್ಮುಖ್ಯಾರ್ಥ ತ್ಯಾಗಾಖ್ಯ ನಾಶಾತ್। ಅತ್ರಾಪಿ ದೇವತೈಕ್ಯೇಽಪಿ ಅತ್ರಾಪೀತಿ ಸಂಬಂಧಃ । ದೇವತೈಕ್ಯೇ ಮಯಾ ಕಥಿತೇ ಪದದ್ವಯಮುಖ್ಯಾರ್ಥತ್ಯಾಗಃ ಕರ್ತವ್ಯ ಇತಿ ವಾಕ್ಯಸ್ಯ ಲಜ್ಜಾ ಭವತಿ । ತಸ್ಮಾದೇಕಪದಮಾತ್ರಲಕ್ಷಣಯಾ ದೇವಾಂತರ್ಯಾಮಿಣೋ ಹರೇಶ್ಚೈಕ್ಯಂ ವಕ್ತೀತಿ ಭಾವಃ । ದೇವಸ್ಥಾನದ್ವಯನಾಶಾದಿತಿ ಧ್ವನಿನಾ ಬಹುಜುಗುಪ್ಸಾಸೂಚಯತಿ ॥ ೧೦೫೮-೧೦೫೯॥

**ವಿವರಣೆ–** ಪರರು ತ್ರಿದೇವತೈಕ್ಯವನ್ನಾಗಲೀ, ದ್ವಿದೇವತೈಕ್ಯವನ್ನಾಗಲೀ ಹೇಳುತ್ತಾರೆ. ಐಕ್ಯವನ್ನು ಹೇಳುವಾಗ ಎರಡು ವಸ್ತುಗಳಿಗೆ ಐಕ್ಯವನ್ನು ಹೇಳಬೇಕಷ್ಟೇ. ಚೇತನೈಕ್ಯವನ್ನು ಹೇಳುವಾಗ ಎರಡು ಚೇತನಗಳನ್ನು ತೆಗೆದುಕೊಳ್ಳಬೇಕು. ದೇವಚೈತನ್ಯಕ್ಕೂ ಮತ್ತು ಬ್ರಹ್ಮಚೈತನ್ಯಕ್ಕೂ ಅಭೇದವನ್ನು ಹೇಳಬೇಕು. ಇಲ್ಲದಿದ್ದರೆ ಅಸುರ ಚೈತನ್ಯಕ್ಕೂ ಮತ್ತು ಬ್ರಹ್ಮಚೈತನ್ಯಕ್ಕೂ ಅಭೇದವನ್ನು ಹೇಳಬೇಕು. ಆದರೆ ದೇವಾದಿ ಚೈತನ್ಯವನ್ನು ಹೇಳುವ ಪದಗಳೆಲ್ಲವೂ ವಿಶಿಷ್ಟವನ್ನೇ ಹೇಳುತ್ತವೆ. ಆದ್ದರಿಂದ ದೇವಚೈತನ್ಯವನ್ನು ಹೇಳುವ ಪದಕ್ಕೂ, ಬ್ರಹ್ಮಚೈತನ್ಯವನ್ನು ಹೇಳುವ ಪದಕ್ಕೂ ಲಕ್ಷಣಾವೃತ್ತಿಯನ್ನು ಅಂಗೀಕರಿಸಿ ದೇವತ್ವವನ್ನೂ, ಸರ್ವಜ್ಞತ್ವವನ್ನೂ ಬಿಟ್ಟು ಚೈತನ್ಯ ಎಂದು ಅರ್ಥವನ್ನು ಮಾಡಿ ಎರಡು ಚೈತನ್ಯಗಳಿಗೆ ಅಭೇದವನ್ನು ಹೇಳಬೇಕು. ಹೀಗೆ ಮಾಡಿದರೆ ಪದಗಳಿಗೆ ಮುಖ್ಯಾರ್ಥ ಪರಿತ್ಯಾಗದ ದೋಷವು ಬರುತ್ತದೆ. ಮುಖ್ಯಾರ್ಥ ಪರಿತ್ಯಾಗವನ್ನು ಮಾಡಿದರೆ ಆ ಪದಗಳನ್ನು ನಾಶಮಾಡಿದಂತೆಯೇ ಸರಿ. ಶ್ರುತಿಯು ಮುಖ್ಯಾರ್ಥ ಪರಿತ್ಯಾಗವನ್ನು ಮಾಡುವುದಕ್ಕೆ ನಾಚಿಕೆಗೊಳ್ಳುತ್ತದೆ. ಆದ್ದರಿಂದ ದೇವಬ್ರಹ್ಮೈಕ್ಯವನ್ನು ಹೇಳುವ ವಾಕ್ಯದಲ್ಲಾಗಲೀ, ಅಸುರ

ಬ್ರಹ್ಮೈಕ್ಯವನ್ನು ಹೇಳುವ ವಾಕ್ಯದಲ್ಲಾಗಲೀ ಶ್ರುತಿಯು ಆ ಐಕ್ಯದಲ್ಲಿ ತಾತ್ಪರ್ಯವನ್ನು ಹೊಂದಿಲ್ಲ. ಮುಖ್ಯಾರ್ಥವನ್ನು ಪರಿತ್ಯಾಗ ಮಾಡುವುದಕ್ಕೆ ನಾಚಿಕೆಗೊಂಡ ಶ್ರುತಿಯು ಆದರಂತೆ ಸಬ್ರಹ್ಮಾ ಸಶಿವಃ ಎಂಬ ವಾಕ್ಯದಲ್ಲಿಯೂ ಮುಖ್ಯಾರ್ಥವನ್ನು ಪರಿತ್ಯಾಗ ಮಾಡುವುದಿಲ್ಲ ಎಂದು ಅಭಿಪ್ರಾಯ.

**ಕಿಂಚಾವಾಂತರವಾಕ್ಯಂ ಚ ಮಹಾವಾಕ್ಯಂ ಚ ತೇ ಮತೇ ।**
**ಸರ್ವಂ ಲಕ್ಷಣಯಾ ಬ್ರಹ್ಮರೂಪಮಾತ್ರಪರಂ ಕಿಲ ।**
**ಅತಸ್ತವ ಪ್ರಕ್ರಿಯಯಾಪ್ಯೈಕ್ಯೇ ಮಾನಂ ನ ಕಿಂಚನ ॥ ೧೦೬೦ ॥**

**ಅರ್ಥ–** ಕಿಂಚ= ಮತ್ತು, ತೇ ಮತೇ= ನಿನ್ನ ಮತದಲ್ಲಿ, ಸರ್ವಂ= ಎಲ್ಲಾ, ಅವಾಂತರವಾಕ್ಯಂ ಚ= ಅವಾಂತರ ವಾಕ್ಯವೂ, ಮಹಾವಾಕ್ಯಂ ಚ= ಮತ್ತು ಮಹಾವಾಕ್ಯವೂ, ಲಕ್ಷಣಯಾ= ಲಕ್ಷಣಾವೃತ್ತಿಯಿಂದ, ಬ್ರಹ್ಮರೂಪಮಾತ್ರಪರಂ ಕಿಲ= ಚೈತನ್ಯಸ್ವರೂಪ ಮಾತ್ರಪರವಷ್ಟೇ, ಅತಃ= ಆದ್ದರಿಂದ, ತವ ಪ್ರಕ್ರಿಯಯಾಪಿ= ನಿನ್ನ ಪ್ರಕ್ರಿಯೆಯಿಂದಲೂ, ಐಕ್ಯೇ= ಐಕ್ಯದಲ್ಲಿ, ಕಿಂಚನ ಮಾನಂ= ಯಾವ ಪ್ರಮಾಣವೂ, ನ= ಇಲ್ಲ.

**ಅನುವಾದ–** ಮತ್ತು ನಿನ್ನ ಮತದಲ್ಲಿ ಎಲ್ಲಾ ಅವಾಂತರವಾಕ್ಯಗಳೂ ಮತ್ತು ಮಹಾವಾಕ್ಯಗಳೂ ಲಕ್ಷಣಾವೃತ್ತಿಯಿಂದ ಚೈತನ್ಯವನ್ನು ಮಾತ್ರ ಬೋಧಿಸುತ್ತವೆ. ಆದ್ದರಿಂದ ನಿನ್ನ ಪ್ರಕ್ರಿಯೆಯಿಂದಲೂ ಐಕ್ಯದಲ್ಲಿ ಯಾವ ಪ್ರಮಾಣವೂ ಇಲ್ಲ.

**ಭಾವವಿಲಾಸಿನೀ–** ಅಪಿ ಚ ನಿಷ್ಪ್ರಕಾರಕಚರಮಾಪರೋಕ್ಷಪ್ರತೀತಿಜನಕತಯಾಽಂಗೀಕೃತ ಮಹಾವಾಕ್ಯಾನಾಂ ಬ್ರಹ್ಮಸ್ವರೂಪಮಾತ್ರಪರತ್ವರೂಪಾಖಂಡನಾರ್ಥನಿಷ್ಠತ್ವಂ ಮಾಯಾವಾದಿನಾಂ ಸಿದ್ಧಾಂತರಹಸ್ಯಮ್ । ಏವಂಚ ತತ್ತ್ವಮಸ್ಯಾದಿವಾಕ್ಯಾನಾಮೈಕ್ಯಾದಿಪರತ್ವಾಂಗೀಕಾರೇ ಅಪಸಿದ್ಧಾಂತಶ್ಚ ಸ್ಯಾದಿತ್ಯಾಹ – **ಕಿಂಚೇತಿ ॥** ಅವಾಂತರವಾಕ್ಯಂ ತತ್‌ಪದಾರ್ಥಭೂತ-ಬ್ರಹ್ಮಪ್ರತಿಪಾದಕಸತ್ಯಾದಿವಾಕ್ಯಮ್ । ತ್ವಂ ಪದಾರ್ಥರೂಪಜೀವಪ್ರತಿಪಾದಕಂ ಚ ವಾಕ್ಯಮ್ । ಮಹಾವಾಕ್ಯಂ ತತ್ತ್ವಂಪದಾರ್ಥಯೋರ್ಜೀವಬ್ರಹ್ಮಣೋರದ್ವೈತಪ್ರತಿಪಾದಕತಯೋಭಯ-ಪರಂ ವಾಕ್ಯಮ್ । ತೇ ಅಖಂಡಾರ್ಥವಾದಿನಸ್ತವ । ಬ್ರಹ್ಮರೂಪಮಾತ್ರಪರಂ ಬ್ರಹ್ಮ-ಸ್ವರೂಪಮಾತ್ರಪರಮ್ । ಅತಃ ಸಕಲಮಹಾವಾಕ್ಯಾನಾಂ ಬ್ರಹ್ಮಸ್ವರೂಪಮಾತ್ರ-ಪರತ್ವಾಂಗೀಕಾರಾತ್ ॥ ೧೦೬೦ ॥

**ವಿವರಣೆ–** ಮಹಾವಾಕ್ಯಗಳು ಬ್ರಹ್ಮಾಪರೋಕ್ಷಜ್ಞಾನವನ್ನು ಉಂಟು ಮಾಡಬೇಕು. ಬ್ರಹ್ಮಾಪರೋಕ್ಷ ಜ್ಞಾನವಾದರೋ ಅದ್ವೈತಿಗಳು ಒಪ್ಪುವಂತೆ ನಿಷ್ಪ್ರಕಾರಕ ಜ್ಞಾನ. ಆದ್ದರಿಂದ ಮಹಾವಾಕ್ಯಗಳು ಚೈತನ್ಯವನ್ನು ಬಿಟ್ಟು ಬೇರೆ ಏನನ್ನಾದರೂ ಹೇಳಿದರೆ ಆ ಜ್ಞಾನಕ್ಕೆ ನಿಷ್ಪ್ರಕಾರತ್ವವು ಹೊರಟು ಹೋಗುತ್ತದೆ. ಆದ್ದರಿಂದ ಕೇವಲ ಚೈತನ್ಯವನ್ನು ಮಾತ್ರ ಅವು ಹೇಳುತ್ತವೆ. ಅದರಂತೆ ತತ್ ಪದಾರ್ಥವನ್ನು ಮತ್ತು ತ್ವಂ ಪದಾರ್ಥವನ್ನು ನಿರೂಪಿಸುವ

ಅವಾಂತರವಾಕ್ಯಗಳೂ ಸಹ ಕೇವಲ ಚೈತನ್ಯ ಪರವಾಗಿವೆ. ಏಕೆಂದರೆ ಅವು ಅಖಂಡಾರ್ಥ ನಿಷ್ಠವಾಗಿವೆ. ಆದ್ದರಿಂದ ಐಕ್ಯವಾದರೂ ಮಹಾವಾಕ್ಯದಿಂದಾಗಲೀ, ಅವಾಂತರವಾಕ್ಯದಿಂದಾಗಲೀ ಹೇಳಲ್ಪಡುವುದಿಲ್ಲ. ಆದ್ದರಿಂದ ಐಕ್ಯದಲ್ಲಿ ಯಾವ ಪ್ರಮಾಣವೂ ಇಲ್ಲವಾದ್ದರಿಂದ ಐಕ್ಯವು ಅಪ್ರಮಾಣಕ ಎಂದು ಅಭಿಪ್ರಾಯ.

**ಅಖಂಡಾರ್ಥತ್ವಸಂತ್ಯಾಗೇ ನಾಭೂದೈಕ್ಯಂ ಭವನ್ಮತೇ ।**
**ಅಖಂಡಾರ್ಥಪರತ್ವೇಽಪಿ ನಾಭೂದೈಕ್ಯಂ ಭವನ್ಮತೇ ॥ ೧೦೬೧ ॥**

**ಅರ್ಥ–** ಅಖಂಡಾರ್ಥತ್ವಸಂತ್ಯಾಗೇ= ಅಖಂಡಾರ್ಥ ಪರತ್ವವನ್ನು ತ್ಯಾಗ ಮಾಡಿದರೆ, ಭವನ್ಮತೇ= ನಿನ್ನ ಮತದಲ್ಲಿ, ಐಕ್ಯಂ ನಾಭೂತ್= ಐಕ್ಯವು ಸಿದ್ಧವಾಗುವುದಿಲ್ಲ, ಅಖಂಡಾರ್ಥ ಪರತ್ವೇಽಪಿ= ಅಖಂಡಾರ್ಥ ಪರತ್ವವನ್ನು ಅಂಗೀಕರಿಸಿದರೂ, ಭವನ್ಮತೇ= ನಿನ್ನ ಮತದಲ್ಲಿ, ಐಕ್ಯಂ ನಾ ಭೂತ್= ಐಕ್ಯವು ಸಿದ್ಧವಾಗುವುದಿಲ್ಲ.

**ಅನುವಾದ–** ಅಖಂಡಾರ್ಥವನ್ನು ಪರಿತ್ಯಾಗ ಮಾಡಿದರೆ ನಿನ್ನ ಮತದಲ್ಲಿ ಐಕ್ಯವು ಸಿದ್ಧವಾಗುವುದಿಲ್ಲ. ಅಖಂಡಾರ್ಥವನ್ನು ಸ್ವೀಕಾರ ಮಾಡಿದರೂ ನಿನ್ನ ಮತದಲ್ಲಿ ಐಕ್ಯವು ಸಿದ್ಧವಾಗುವುದಿಲ್ಲ.

**ಭಾವವಿಲಾಸಿನೀ–** ಏವಂಚ ಪರಸ್ಯೋಭಯತಃ ಪಾಶಾರಜ್ಜುರಿತ್ಯಾಹ – **ಅಖಂಡಾರ್ಥತ್ವೇತಿ ॥** ಅಖಂಡಾರ್ಥತ್ವಸಂತ್ಯಾಗೇ ಸಖಂಡಾರ್ಥತ್ವೇ । ವಿಶಿಷ್ಟಾರ್ಥಪರತ್ವ ಇತಿ ಯಾವತ್ ॥೧೦೬೧॥

**ವಿವರಣೆ–** ಅಖಂಡಾರ್ಥವನ್ನು ಪರಿತ್ಯಾಗ ಮಾಡಿದರೆ ತತ್ ತ್ವಂ ಪದಗಳು ವಿಶಿಷ್ಟಾರ್ಥವನ್ನೇ ಹೇಳುವುದರಿಂದ ಮತ್ತು ವಿಶಿಷ್ಟಗಳಿಗೆ ಐಕ್ಯವಿಲ್ಲವಾದ್ದರಿಂದ, ಐಕ್ಯವು ಸಿದ್ಧವಾಗುವುದಿಲ್ಲ. ಅಖಂಡಾರ್ಥವನ್ನು ಒಪ್ಪಿದರೆ ಭೇದವು ಚೈತನ್ಯ ಸ್ವರೂಪವನ್ನು ಬಿಟ್ಟು ಬೇರೆ ಏನನ್ನೂ ಹೇಳುವುದಿಲ್ಲವಾದ್ದರಿಂದ ಐಕ್ಯವು ಸಿದ್ಧವಾಗುವುದಿಲ್ಲ ಎಂದು ಇಲ್ಲಿ ಉಭಯ ಪಾಶಾರಜ್ಜುವನ್ನು ಹೇಳುತ್ತಾರೆ.

—o—



## ರಾಜಸುಭಾಷಿತ

**ನಾನ್ಯಂ ಭಜಾಮಿ ನ ಸ್ತೌಮಿ ನಾನುಯಾಮಿ ಕದಾಚನ ।**
**ಹರಿಂ ಚ ಹರಿಪತ್ನೀಂ ಚ ಸುರಾ್ದೀಂಶ್ಚ ಗುರೂನ್ ವಿನಾ ॥**

ಹರಿಯನ್ನು, ಹರಿಪತ್ನಿಯಾದ ಲಕ್ಷ್ಮಿಯನ್ನು, ಹರಿದಾಸರಾದ ದೇವತೆಗಳನ್ನು ಮತ್ತು ಗುರುಗಳನ್ನು ಬಿಟ್ಟು ಇನ್ನೊಬ್ಬನನ್ನು ಎಂದೂ ಭಜಿಸುವುದಿಲ್ಲ, ಎಂದೂ ಸ್ತೋತ್ರಮಾಡುವುದಿಲ್ಲ ಮತ್ತು ಎಂದೂ ಹಿಂಬಾಲಿಸುವುದಿಲ್ಲ.

